ಶ್ರೀದ್ವಾರಕಾಶಾರದಾಪೀಠಾಧೀಶ್ವರ ಶ್ರೀಜಗದ್ಗುರು ಶ್ರೀಶಂಕರಾಚಾರ್ಯ
ಸ್ವಾಮೀ ಶ್ರೀಭಾರತೀಕೃಷ್ಣತೀರ್ಥರವರ
ಆಶೀರ್ವಾದಾತ್ಮಕಭೂಮಿಕೆಯಿಂದಲಂಕೃತವಾದ

# ಆರ್ಯಧರ್ಮಪ್ರದೀಪ.

ಲೇಖಕ:-

**ಹೊಸಕೆರೆ ಚಿದಂಬರಯ್ಯ**

( ಭಕ್ತಬಂಧುಕಾರ್ಯಾಲಯ, ಬಸವನಗುಡಿ, ಬೆಂಗಳೂರು ಸಿಟಿ. )
ಪರಮಾರ್ಥಗ್ರಂಥಮಾಲೆ, ಭಕ್ತಬಂಧುಗ್ರಂಥಮಾಲೆ, ಗೀತಾರ್ಥವಿವರಣೆ, ಭಗವದ್ಗೀತಾ
ಸಾರವಿಚಾರ, ಭರತಖಂಡದ ಜೀವಜ್ಯೋತಿಗಳು, ಆತ್ಮಶಕ್ತಿಯ ತೇಜಸ್ಸು,
ಶ್ರೀವಿದ್ಯಾರಣ್ಯಕಾವ್ಯ-ಮೊದಲಾದವುಗಳ ಗ್ರಂಥಕರ್ತ
ಮತ್ತು
ಧಾರವಾಡದ ಕರ್ನಾಟಕಮಹಾವಿದ್ಯಾಲಯದ ಮುಖ್ಯಾಧ್ಯಾಪಕ.

ಪ್ರಕಾಶಕ:-

**ಸುರೇಂದ್ರ ಶಿವರಾವ ದೇಸಾಯಿ**, ಎಂ. ಎ.,
ಧಾರವಾಡದ ಕರ್ನಾಟಕರಾಷ್ಟ್ರೀಯಶಿಕ್ಷಣಸಮಿತಿಯ ಕಾರ್ಯದರ್ಶಿ.

ಮೊದಲನೇ ಮುದ್ರಣ ೧೦೦೦ ಪ್ರತಿಗಳು.

ಶಾ. ೧೮೫೭ | **ಧಾರವಾಡ.** [ ಕ್ರಿ. ೧೯೩೫

**ಬೆಲೆ ೩ ರೂ.**

ಧಾರವಾಡ

ಶ್ರೀಕೃಷ್ಣ ಮುದ್ರಾಲಯದಲ್ಲಿ

ಬಿಂದು ನಾರಾಯಣ ಮುತಾಲಿಕ ದೇಸಾಯಿ

ಇವರಿಂದ

ಮುದ್ರಿಸಲ್ಪಟ್ಟು

ಸುರೇಂದ್ರ ಶಿವರಾವ ದೇಸಾಯಿ, ಎಮ್. ಎ.

ಇವರಿಂದ

ಧಾರವಾಡ ಕರ್ನಾಟಕರಾಷ್ಟ್ರೀಯಶಿಕ್ಷಣಸಮಿತಿಯ ಆಫೀಸಿನಲ್ಲಿ

ಪ್ರಕಾಶಿತವಾಯಿತು.




ಕರ್ನಾಟಕಮಾತಾ—ಶ್ರೀಭುವನೇಶ್ವರಿ.

S. K. P. D.



॥ ಶ್ರೀ ॥

# ಈ ಆರ್ಯಧರ್ಮಪ್ರದೀಪವು

ಕರ್ಣಾಟಕ ಮಾತೆಯಾದ

**ಶ್ರೀಭುವನೇಶ್ವರೀ ದೇವಿಯ ದಿವ್ಯಪಾದಪದ್ಮಗಳಿಗೂ**

ಆಕೆಯ ಉಪಾಸನಾರೂಪವಾದ ಧರ್ಮದಿಂದ

**ಸ್ವಾನಂದವನ್ನು ಸಂಪಾದಿಸಿದ್ದಲ್ಲದೆ**

ಲೋಕಾನುಗ್ರಹಾರ್ಥವಾಗಿ ಧರ್ಮದ ಬಲದಿಂದಲೇ

**ಆದರ್ಶಭೂತ ಸ್ವರಾಜ್ಯವನ್ನು ಸ್ಥಾಪಿಸಿ**

ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯರೆಂಬ

ಬಿರುದನ್ನು ಪಡೆದು

ಕನ್ನಡಿಗರ ಸರ್ವಕಲ್ಯಾಣಕಾರಕರಾದ

**ಶ್ರೀ ವಿದ್ಯಾರಣ್ಯಮಹಾಮುನೀಂದ್ರರಡಿದಾವರೆಗಳಿಗೂ**

ಶ್ರದ್ಧಾಭಕ್ತಿಪೂರ್ವಕವಾದ

**ಆರತಿಯಾಗಲಿ.**



ಶ್ರೀದ್ವಾರಕಾಶಾರದಾಪೀಠಾಧೀಶ್ವರ ಶ್ರೀಜಗದ್ಗುರು ಶ್ರೀಶಂಕರಾಚಾರ್ಯ



ಶ್ರೀಭಾರತೀಕೃಷ್ಣತೀರ್ಥಸ್ವಾಮಿಗಳು.

॥ ॐ श्रीः ॥

## ಶ್ರೀದ್ವಾರಕಾಶಾರದಾಪೀಠಾಧೀಶ್ವರ ಶ್ರೀಜಗದ್ಗುರು ಶ್ರೀಶಂಕರಾಚಾರ್ಯ ಸ್ವಾಮಿ ಶ್ರೀಭಾರತೀಕೃಷ್ಣ ಜೀಯವರ ಆಶೀರ್ವಾದಾತ್ಮಕಭೂಮಿಕಾ.



ಯೋಽಮುಂ ಮನ್ತ್ರ್ಯಜಗದ್ ವ್ಯಚಾಷ್ಟ್ರಃ
ಕರ್ಮನ್ಯಸ್ತಭಕ್ತಿಸಿದ್ಧಿನಾಶಃ ॥
ಗೀತಾಂ ಉತ್ತಮತ್ವದಯಕಾಭ್ಯಾಂ
ನಮೋ ನಮಃ ಶ್ರೀಗುರುಪಾದುಕಾಭ್ಯಾಂ ॥೧॥

ಪ್ರಪಂಚದಲ್ಲಿರುವ ಸಮಸ್ತಜೀವರಾಶಿಗಳೂ ದುಃಖದಿಂದ ಶೋಕಿಸುವುದೂ ಸುಖದಿಂದ ಆನಂದಿಸುವುದೂ ಸರ್ವಾನುಭವಸಿದ್ಧಗಳಾದ ವಿಷಯಗಳಾಗಿವೆ. ಆದುದರಿಂದಲೇ ಸರ್ವಪ್ರಾಣಿಗಳೂ ದುಃಖವರ್ಜನೆಗೋಸ್ಕರವಾಗಿಯೂ ಸುಖಪ್ರಾಪ್ತಿಗೋಸ್ಕರವಾಗಿಯೂ ನಿರಂತರವಾಗಿ ನಾನಾವಿಧಪ್ರಯತ್ನಗಳಲ್ಲಿ ಉದ್ಯುಕ್ತಗಳಾಗಲು ಸ್ವಾಭಾವಿಕವಾಗಿದೆ. ಆದರೆ ದೂರದೃಷ್ಟಿಯಿಂದ ವಿವೇಚನೆಯನ್ನು ಮಾಡುವ ಶಕ್ತಿಯನ್ನು ಹೆಚ್ಚಾಗಿ ಹೊಂದದಿರುವ ಕೆಳಗಿನ ಜಂತುಗಳಿಗೆ ತಾತ್ಕಾಲಿಕಸುಖದುಃಖಾನುಭವಗಳೇ ಕರ್ತವ್ಯಾಕರ್ತವ್ಯನಿಶ್ಚಯಕ್ಕೆ ಕಾರಣವಾಗುತ್ತಿರಲಾಗಿ "ಶ್ರೇಯಶ್ಚ ಪ್ರೇಯಶ್ಚ" ಇತ್ಯಾದಿ ಕಠೋಪನಿಷನ್ಮಂತ್ರಾದಿಗಳಿಂದ ವಿಂಗಡಿಸಲ್ಪಟ್ಟಿರುವ ರೀತಿಯಿಂದ ಪೂರ್ವಾಪರವಿಚಾರವಂ ಮಾಡಿ ಶಾಶ್ವತಕ್ಷಣಿಕಭೇದದಿಂದ ಸುಖಗಳ ತಾರತಮ್ಯವನ್ನು ಪುರುಷಾರ್ಥಪಾರಮ್ಯವನ್ನು ನಿಶ್ಚಯಿಸಿ ದುಃಖನಾಶಕ ಮತ್ತು ಸುಖಪ್ರಾಪಕವಾದ ಮಾರ್ಗವನ್ನು ಹಿಡಿಯುವ ವಿವೇಕಶಕ್ತಿಯೇ ತದನ್ಯಗಳಾದ ನಿಖಿಲಜೀವಕೋಟಿಗಳಿಂದ ಮನುಷ್ಯಜಾತಿಯನ್ನು ವ್ಯಾವರ್ತಿಸುವ ಪ್ರಧಾನಲಕ್ಷಣವಾಗಿರುವ ಕಾರಣದಿಂದಲೇ, ಸಕಲಶಾಸ್ತ್ರಗಳಲ್ಲಿಯೂ ಪ್ರತಿಪಾದಿಸಲ್ಪಟ್ಟು ಮನುಷ್ಯರುಗಳಿಂದ ಸ್ವತಃಸಿದ್ಧವಾದ ಸಿದ್ಧಾಂತವೆಂದು ಸ್ವೀಕರಿಸಲ್ಪಟ್ಟಿರುವ ಮನುಷ್ಯಜಾತಿಶ್ರೇಷ್ಠತೆಯು ವಾಸ್ತವವೂ ಸಾರ್ಥಕವೂ

ಧರ್ಮವನ್ನೇ ಆಚರಿಸಬೇಕೆಂಬ ಇಚ್ಛೆಯೇ ಅಧಃಪತನವು ಬೇಡವೆಂತಲೂ ಉತ್ತರೋತ್ತರ ಉನ್ನತಿಯು ಬೇಕೆಂತಲೂ ಕಾಂಕ್ಷಿಸುತ್ತಾ ಶ್ರೇಯೋಮಾರ್ಗವನ್ನು ಹತ್ತಿರುವಂಥವರ ಪ್ರಥಮಚಿಹ್ನವು. ಕ್ರಿಯಾರಹಿತವಾದ ಕೇವಲ ಇಚ್ಛೆಯಿಂದಲೇ ಅಭೀಷ್ಟಸಿದ್ಧಿಯಾಗಲಾರದಾದರೂ, ಮೊದಲು ಇಚ್ಛೆಯುಂಟಾದರೆ ತದನಂತರ ಅನುಷ್ಠಾನಪ್ರಯತ್ನಕ್ಕೆ ಅವಕಾಶವಾಗುವ ಕಾರಣ, ಧರ್ಮಾನುಷ್ಠಾನಕ್ಕೆ ಅವಶ್ಯಕವಾದ ಧರ್ಮಸ್ವರೂಪವಿಜ್ಞಾನಕ್ಕೋಸ್ಕರವಾದ ಪ್ರವೃತ್ತಿಗೆ ಅಂಥ ಇಚ್ಛೆಯು ಪರಂಪರೆಯಿಂದ ಹೇತುವಾಗುವುದು.

ಆದರೆ ಧರ್ಮಸ್ವರೂಪವಿಜ್ಞಾನವು ಸುಲಭವಾದ ವಸ್ತುವಲ್ಲವೆನ್ನು–

“ ಕರ್ಮಣೋಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ॥
ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥ ”

ಎಂಬ ಶ್ರೀಕೃಷ್ಣಭಗವಂತನ ವಚನದಿಂದ ಸ್ಪಷ್ಟವಾಗಿರುವ ಕಾರಣ, ಕರ್ಮ, ವಿಕರ್ಮ, ಅಕರ್ಮ– ಇವುಗಳ ಯಥಾರ್ಥಸ್ವರೂಪವನ್ನು ಹೇಗೆ ತಿಳಿಯಬೇಕೆಂಬ ಜಿಜ್ಞಾಸೆಯು ಸ್ವಾಭಾವಿಕವಾಗಿ ಹುಟ್ಟುವಾಗ ಶ್ರೀಭಗವಂತನೆ

“ ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ॥
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ ”

ಎಂದು ಉತ್ತರವನ್ನು ದಯಪಾಲಿಸಿರುವುದರಿಂದ, ಇದೇ ತಾತ್ಪರ್ಯದಿಂದ ನಮ್ಮಗಳ ಶ್ರೇಯಸ್ಸಿಗೋಸ್ಕರವೆ ಸರ್ವಜ್ಞರಾದ ಮಹರ್ಷಿಶ್ರೇಷ್ಠರುಗಳಿಂದ ಅನುಗ್ರಹಿಸಿ ಕೊಡಲ್ಪಟ್ಟಿರುವ ಶಾಸ್ತ್ರಗಳ ಸಹಾಯವಿಲ್ಲದೆ ಬೇರೆ ಯಾವ ಯುಕ್ತಿಯಿಂದಲೂ ನಿರ್ಣಯಿಸಲು ಯಾರಿಂದಲೂ ಸಾಧ್ಯವಲ್ಲವೆಂದು ತೀರ್ಮಾನಿಸಬೇಕಾಗಿದೆ.

ಆದರೆ– “ಇಷ್ಟು ಜಟಿಲವಾದ ಶಾಸ್ತ್ರನಿರ್ಣಯಲ್ಲಿಯೂ ತದುದಿತಧರ್ಮಾನುಷ್ಠಾನದಲ್ಲಿಯೂ ನಮ್ಮ ಅಮೂಲ್ಯವಾದ ಜೀವನವನ್ನು ಪರೋಕ್ಷವಾದ ಸುಖಕ್ಕೋಸ್ಕರ ಕಳೆದು ಅಪರೋಕ್ಷದಲ್ಲಿ ಕಷ್ಟವಂ ಅನುಭವಿಸುವ ಆವಶ್ಯಕತೆಯೇನು? ಇಂಥ ಧರ್ಮದ ಜಗಳದಲ್ಲಿ ಬೀಳದೇನೇಯೇ ಪಾಶ್ಚಾತ್ಯರು ನಿರುಪಮವಾದ ಐಹಿಕಸುಖವನ್ನು ಹೊಂದುತ್ತಿರ

ಆಗುವುದು. ಈ ಲಕ್ಷಣವು ಎಷ್ಟರ ಮಟ್ಟಿಗೆ ನಮ್ಮಗಳಲ್ಲಿ ಸಮಸ್ತವಾಗಿಸು ತ್ತದೆಂಬೋ ಅಷ್ಟರ ಮಟ್ಟಿಗೇನೆಂಬೋ ನಮ್ಮಗಳ ಮನುಷ್ಯತ್ವವು ಸಫಲವಾ ಗುವುದೆಂತಲೂ, ಈ ಲಕ್ಷಣವು ತಗ್ಗಿದಷ್ಟು ನಾವುಗಳು ಪಶುವರ್ಗಕ್ಕೆ ಸಮೀಪಿಸುತ್ತೇವೆಂತಲೂ ನಿಶ್ಚಯಿಸಲು ಯುಕ್ತವಾಗಿರುತ್ತದೆ.

ಅನುಷ್ಠಾನಕಾಲದಲ್ಲಿ ಆನಂದಕರಗಳಾಗಿದ್ದು ಪರಿಣಾಮದಲ್ಲಿ ದುಃಖಕರಗಳಾಗಿರುವ ವೈಷಯಿಕಸುಖಂಗಳಂ ತ್ಯಜಿಸಿ

" ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ "

ಎಂದು ಶ್ರೀಭಗವದುಕ್ತರೀತಿಯಾಗಿ ಕ್ರಿಯಾಕರಣ ಕಾಲದಲ್ಲಿ ವಿಷಸದೃಶ ವಾಗಿದ್ದರೂ ಪರಿಣಾಮದಲ್ಲಿ ಪರಮಸುಖಾಸ್ಪದವಾಗುವ ಕಾರ್ಯಗಳನ್ನೆ ಅನುಷ್ಠಿಸುವುದು ಶ್ರೇಯಸ್ಕರವೆಂಬ ಈ ಸಿದ್ಧಾಂತವಿಷಯದಲ್ಲಿ ಯಾವ ಮತಭೇದಕ್ಕೂ ಅವಕಾಶವೇ ಇರುವುದಿಲ್ಲ.

ಈ ಪ್ರಕಾರವಾಗಿ, ಸರ್ವಶ್ರೇಯೋದಾಯಕವಾದ ಕಾರ್ಯ ಸಮೂಹಕ್ಕೆ ನಮ್ಮಗಳ ಶಾಸ್ತ್ರಪರಿಭಾಷೆಯಲ್ಲಿ " ಧರ್ಮ " ವೆಂಬ ಹೆಸರು ಇಡಲ್ಪಟ್ಟಿರುತ್ತದೆ. ಈ ಧರ್ಮೋಪದೇಶದ ನಮ್ಮಗಳ ಹಿತವನ್ನೆ ಶಾಸನಮಾಡುವ ಕಾರಣದಿಂದಲೇ ನಮ್ಮಗಳಲ್ಲಿ ಶಾಸ್ತ್ರಗಳಿಗೆ ಶಾಸ್ತ್ರಗ ಳೆಂಬ ಅನ್ವರ್ಥವಾದ ನಾಮಧೇಯವು ಬಂದಿರುತ್ತದೆ. ಈ ಪರಮಾರ್ಥ ಸಿದ್ಧಾಂತವನ್ನೇ ಹೃದಯದಲ್ಲಿಟ್ಟು ಶ್ರೀಕೃಷ್ಣಚಂದ್ರಭಗವಂತನೂ ಕೂಡ ತನ್ನ ಮುಖಾರವಿಂದದಿಂದಲಿ

" ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ "

( ಅರ್ಥಾತ್— ಹೇ ಅರ್ಜುನ, ಧರ್ಮಕ್ಕೆ ವಿರುದ್ಧವಲ್ಲದ ಕಾಮನೆಯು ನನ್ನ ಸ್ವರೂಪವಾಗಿರುವುದು ) ಎಂದು ಸರ್ವಸಿದ್ಧಾಂತಸಂಗ್ರಹವನ್ನು ಉಪದೇಶಿಸಿದನು. ಹೀಗೆ " ಯನ್ಮನುರಬ್ರವೀತ್ತದ್ಭೇಷಜಂ " ಎಂದು ಭಗವತೀಶ್ರುತಿಯಿಂದಲೇ ಸ್ಮೃತಿಕಾರಶಿರೋಮಣಿಸ್ಥಾನದಲ್ಲಿ ಅಭಿಷಿಕ್ತ ನಾದ ಮನುಭಗವಂತನಿಂದಲೂ ಕೂಡ " ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ " ( ಧರ್ಮವು ನಾಶಿಸಲ್ಪಟ್ಟರೆ ನಾಶಿಸುವುದು, ರಕ್ಷಿಸಲ್ಪಟ್ಟರೆ ರಕ್ಷಿಸುವುದು ) ಎಂದು ವಿಶದಪಡಿಸಲ್ಪಟ್ಟಿರುತ್ತದೆ.

ಲಾಗಿ ನಮಗೆ ಮಾತ್ರ ಧರ್ಮವಲ್ಲದೆ ಬೇರೆ ಗತಿಯಿಲ್ಲವೆಂಬ ಮಾತನ್ನು ಹೇಗೆ ತಾನೆ ನಂಬಲಿ?" ಎಂದು ಕೆಲವರು ಆಶಂಕಿಸಬಹುದು. ಈ ವಿಷಯದ ನಿರ್ಧಾರಣೆಗೋಸ್ಕರ, ನಮ್ಮ ದೇಶದ ಇತಿಹಾಸದೊಡನೆ ದೇಶಾಂತರಗಳ ಇತಿಹಾಸವನ್ನು ತುಲನೆಮಾಡಿ ನೋಡುವಲ್ಲಿ, ಶರೀರಬಲ, ಸೇನಾಬಲ, ದ್ರವ್ಯಬಲ-ಮೊದಲಾದ ಸಮಸ್ತಸಂಪತ್ತಿವಿಶಿಷ್ಟಗಳಾಗಿ ಲೋಕಭಯಂಕರಗಳಾಗಿದ್ದ ಅಸಿರಿಯಾ, ಬಾಬಿಲೋನಿಯಾ, ಕಾಲ್ಡಿಯಾ, ಫಿನಿಷಿಯಾ, ಕಾರ್ಥೇಜ್, ಗ್ರೀಸ್, ರೋಮ್– ಮೊದಲಾದ ದೊಡ್ಡ ದೊಡ್ಡ ಸಾಮ್ರಾಜ್ಯಗಳೆಲ್ಲವೂ ತಮ್ಮಗಳ ಶಾಶ್ವತವಾದ ಪೃಥಕ್ತ್ವಕ್ಕೋಸ್ಕರ ಬೇಕಾದಷ್ಟು ಲೌಕಿಕಸಾಮಗ್ರೀಸಂಗ್ರಹದಲ್ಲಿ ನಿರಂತರಜಾಗರೂಕರುಗಳೂ ನಿತ್ಯತತ್ಪರಗಳೂ ಆಗಿದ್ದರೂ, ಅಲ್ಲಿನ ಪ್ರಜೆಗಳ ಸ್ಮೃತಿ ನಾಮಮಾತ್ರಕ್ಕೂ ಒಬ್ಬನೂ ಉಳಿಯದೆ ನಿಃಶೇಷನಿರ್ಮೂಲವಾಗಿರುವ ವಿಷಯವನ್ನೂ, ಅಂಥ ಲೌಕಿಕಬಲದಲ್ಲಿ ವಿಶೇಷವಾದ ದೃಷ್ಟಿಯನ್ನಿಡದೆ ಪಾರಮಾರ್ಥಿಕದೃಷ್ಟಿಯಿಂದ ಧರ್ಮವನ್ನೇ ಮುಂದಿಟ್ಟುಕೊಂಡು ಬಂದಿರುವ ನಮ್ಮಗಳ ಪವಿತ್ರಭಾರತದೇಶವು ಅನೇಕಸಹಸ್ರವರ್ಷಗಳಿಂದ ನಾನಾವಿಧವಾದ ಹೊರಗಿನ ಕಷ್ಟಗಳಿಗೆ ಒಳಪಟ್ಟರೂ, ಈಗಲೂ ಕೂಡ ಜೀವಿತಾವಸ್ಥೆಯಲ್ಲಿರುವುದು ಮಾತ್ರವಲ್ಲದೆ. ಈಗಿನ ಕಾಲದಲ್ಲಿ ಲೌಕಿಕದೃಷ್ಟಿಯಿಂದ ಅತಿದೊಡ್ಡವುಗಳೆಂದು ಭಾವಿಸಲ್ಪಡುವ ಪಾಶ್ಚಾತ್ಯರಾಷ್ಟ್ರಗಳಿಂದಲೂ ತನ್ನ ಈಗಿನ ಅತಿಕ್ಷೀಣಾದಶೆಯಲ್ಲಿಯೂ ಕೂಡ ಅಸೂಯೆಯಿಂದಲೂ ಪರಸ್ಪರಸ್ಪರ್ಧೆಯಿಂದಲೂ ಲೋಭದೃಷ್ಟಿಯಿಂದ ನಿರೀಕ್ಷಿಸಲ್ಪಡುವಂತೆ ತಾರತಮ್ಯದಿಂದ ಇಷ್ಟು ಉನ್ನತಸ್ಥಿತಿಯಲ್ಲಿರುವ ವಿಷಯವನ್ನೂ, ನಾವುಗಳು ಚೆನ್ನಾಗಿ ವಿಮರ್ಶಿಸಿ ಈ ಲೋಕೋತ್ತರವಾದ ಮಾಹಾತ್ಮ್ಯದ ಮರ್ಮವನ್ನು ಹುಡುಕಿದರೆ, ಪೂರ್ವೋಕ್ತವಾದ ಮನುವಚನವೇ ಸಿದ್ಧಾಂತವೆಂತಲೂ,

"ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ||
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ||"

ಎಂಬ ಶ್ರೀಮದ್ಭಗವದ್ಗೀತಾವಾಕ್ಯದಲ್ಲಿ, ಪರಗತಿಶಬ್ದದಿಂದ ಪರಾಮರ್ಶಿಸಲ್ಪಟ್ಟ ಪಾರಲೌಕಿಕಸದ್ಗತಿ ಮಾತ್ರವಲ್ಲದೆ, ಸುಖಶಬ್ದದಿಂದ ನಿರ್ದಿಷ್ಟವಾದ ಐಹಿಕಸುಖವೂ ಕೂಡ ಧರ್ಮದಿಂದಲೇ ಹೊರತಾಗಿ ಬೇರೆ ಯಾವ

ಉಪಾಯದಿಂದಲೂ ದೊರೆಯುವುದಿಲ್ಲವೆಂದು ಹೇಳಲ್ಪಟ್ಟಿರುವುದು ಅಯ
ಥಾರ್ಥವಲ್ಲವೆಂತಲೂ, ನಮ್ಮಗಳ ದೇಶದ ಈಗಿನ ಕ್ಷೀಣಪರಿಸ್ಥಿತಿಯೂ
ಕೂಡ ಧರ್ಮಕ್ಷೀಣತೆಯಿಂದಲೇ ಆಗಿರುವದೆಂತಲೂ,

"ತತ್ಸತ್ವೇ ತತ್ಸತ್ವಂ ತದಭಾವೇ ತದಭಾವಃ ||"

ಎಂಬ ಅನ್ವಯವ್ಯತಿರೇಕವಿಚಾರಸಿದ್ಧವಾದ ಈ ದೊಡ್ಡ ಬಹಿರಂಗರಹಸ್ಯ
ವನ್ನು ಕಂಡುಹಿಡಿದು, ದೇಶದ ಪುನರುದ್ಧಾರಕ್ಕೋಸ್ಕರವಾಗಿ ಧರ್ಮದ
ಪುನರುಜ್ಜೀವನವನ್ನೇ ಏಕೋಪಾಯವನ್ನಾಗಿ ನಿಶ್ಚಯಿಸಲು ಅನಿವಾರ್ಯ
ವಾಗಿರುತ್ತದೆ.

ಅಲ್ಲದೆ ಎಷ್ಟು ಲೌಕಿಕಸಂಪತ್ತುಗಳಿದ್ದರೂ ಮನಃಸಂತೋಷವಿಲ್ಲ
ದಿದ್ದಲ್ಲಿ ಅವುಗಳೆಲ್ಲವೂ ವ್ಯರ್ಥಗಳಾಗುವುದು ನಿರಂತರಾನುಭವಗೋಚರ
ವಾಗುವ ಕಾರಣ, ಅವುಗಳಿಗಿಂತಲೂ ಮನಃಶಾಂತಿಯೇ ಪ್ರಧಾನವಾದ
ಆನಂದಕಾರಣವೆಂಬ ಮಹಾತತ್ತ್ವವನ್ನು ಪರ್ಯಾಲೋಚಿಸಿದರೂ, ಚಿತ್ತ
ಶಾಂತಿಗೂ ಮೂಲಕಾರಣವಾಗಿರುವ ಧರ್ಮದ ಮಾಹಾತ್ಮ್ಯವನ್ನು ಅವ
ಶ್ಯವಾಗಿಯೂ ಒಪ್ಪಲೇ ಬೇಕಾಗುವುದು. ಧರ್ಮವೇ ಸಮಸ್ತಶ್ರೇಯ
ಸ್ಸುಗಳಿಗೂ ಮೂಲಕಾರಣವೆಂದ ಮೇಲೆ ಎಲ್ಲಾ ವಿಷಯವಿಭಾಗಗಳ
ಲ್ಲಿಯೂ ಧರ್ಮದ ವ್ಯಾಪಕತೆಯು ಸ್ವತಃಸಿದ್ಧವಾಗಿರುವುದು. ಆದುದ
ರಿಂದಲೇ ನಮ್ಮ ಧರ್ಮಶಾಸ್ತ್ರಗಳಲ್ಲಿ ಆರೋಗ್ಯ, ಶರೀರದಾರ್ಢ್ಯ, ಬುದ್ಧಿ
ಕೌಶಲ, ವಿದ್ಯಾಭ್ಯಾಸ, ರಾಜನೀತಿ, ಸಮಾಜವ್ಯವಸ್ಥೆ, ವಿವಾಹಾದಿ
ಸಾಂಸಾರಿಕಸಂಬಂಧನೆ, ದಾಯಭಾಗ-ಮೊದಲಾದ ಸಮಸ್ತವಿಷಯಗಳೂ
ವಿಸ್ತಾರದಿಂದ ವಿಚಾರಿಸಿ ವಿಧಿಸಲ್ಪಟ್ಟಿರುತ್ತವೆ. ಮನುಷ್ಯರು ಶರೀರಬುದ್ಧ್ಯಾ
ದಿಶಕ್ತಿತಾರತಮ್ಯದಿಂದ ಬೇರೆ ಬೇರೆ ಅಧಿಕಾರಿಗಳಿಗೆ ಯೋಗ್ಯರಾಗುವ
ಕಾರಣ ಅವರವರುಗಳ ಅಧಿಕಾರಭೇದವನ್ನನುಸರಿಸಿ ಕರ್ಮ, ಭಕ್ತಿ,
ಜ್ಞಾನಗಳೆಂಬ ಮೂರು ದೊಡ್ಡ ಮಾರ್ಗಗಳೂ ಇವುಗಳೊಳಗೆಯೂ
ಶಾಖೋಪಶಾಖೆಗಳಾಗಿ ಅನೇಕ ಅವಾಂತರಪ್ರಭೇದಗಳೂ ವಿವರಿಸಲ್ಪ
ಟ್ಟಿರುತ್ತವೆ. ಇವುಗಳ ಪೈಕಿ ತಮ್ಮ ತಮ್ಮ ಅಧಿಕಾರಕ್ಕೆ ಅನುಗುಣವಾದ
ಮಾರ್ಗವಂ ಹತ್ತಿ ಪ್ರತಿಯೊಬ್ಬರೂ ಶ್ರೇಯಸ್ಸನ್ನು ಹೊಂದಬಹುದೆಂಬ
ಸಿದ್ಧಾಂತವೆ ನಮ್ಮ ಸನಾತನಧರ್ಮದ ವೈಶಿಷ್ಟ್ಯವಾಗಿರುತ್ತದೆ. ಇತರ

ಸಮಸ್ತಧರ್ಮಗಳೂ ಈ ಅನೇಕಮಾರ್ಗಗಳ ಪೈಕಿ ಒಂದೊಂದನ್ನೇ ಸ್ವೀಕರಿಸಿ ಉಳಿದವುಗಳನ್ನೆಲ್ಲ ನಿಷೇಧಿಸುವ ಕಾರಣ, ಅವುಗಳೆಲ್ಲ ನಮ್ಮ ಧರ್ಮದ ಏಕದೇಶಮತಗಳೆಂತಲೂ ಕೆಲವು ಕೆಲವು ಪರಿಚ್ಛಿನ್ನಪ್ರಕಾರ ವಿಶಿಷ್ಟವಿಶಿಷ್ಟಾಧಿಕಾರಿಸಮುದಾಯಗಳಿಗೆ ಮಾತ್ರವೆ ಉಪಯುಕ್ತಗಳೆಂತಲೂ ನಮ್ಮ ಸನಾತನಧರ್ಮವು ಮಾತ್ರವೇ ಸರ್ವಪ್ರಕಾರ ಅಧಿಕಾರಿಗಳಿಗೂ ಶ್ರೇಯೋಮಾರ್ಗವಂ ತೋರಿಸುವದೆಂತಲೂ ಭಾವಿಸಲು ಯೋಗ್ಯವಾಗಿರುತ್ತದೆ. ಆದುದರಿಂದಲೇ ಪರಸ್ಪರಸಮನ್ವಯಿಸಲು ಅಸಾಧ್ಯಗಳಾಗಿರುವ ಸಮಸ್ತಧರ್ಮಗಳೂ ಮತಗಳೂ ಸಂಪ್ರದಾಯಭೇದಗಳೂ ನಮ್ಮಗಳ ಸನಾತನಧರ್ಮದಲ್ಲಿ ಸಮನ್ವಯವಂ ಹೊಂದಿ, ಒಂದೇ ಮಾತೃಶರೀರೋತ್ಪನ್ನರುಗಳಾಗಿ ಭಿನ್ನ ಭಿನ್ನ ಲಕ್ಷಣಗಳುಳ್ಳ ಮಕ್ಕಳೋಪಾದಿಯಲ್ಲಿರುತ್ತವೆ.

ಈ ರೀತಿಯಾಗಿ ಸರ್ವಜನಕಾಂಕ್ಷಿತಗಳಾದ ಇಹಪರಸುಖಶಾಂತ್ಯಾದಿಸಮಸ್ತಪದಾರ್ಥಗಳೂ ಧರ್ಮದಿಂದಲ್ಲದೆ ಮತ್ತಾವುದರಿಂದಲೂ ದೊರೆಯಲಾರದೆಂದು ಸಿದ್ಧವಾಗಿರುವದರಿಂದಲೇ, ನಮ್ಮಲ್ಲಿ ಧರ್ಮಕ್ಕೆ ಇಷ್ಟು ಪ್ರಾಶಸ್ತ್ಯವನ್ನು ಕೊಟ್ಟಿರುತ್ತಾರೆ.

"ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ ||
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ||"
"ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ |
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ||"
"ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ||"

ಇತ್ಯಾದಿಸ್ಥಲಗಳಲ್ಲಿ ಶ್ರೀಭಗವಂತನಿಂದ ಪ್ರದರ್ಶಿಸಲ್ಪಟ್ಟ ರೀತಿಯಿಂದ, ಸಮಸ್ತರೂ ಸ್ವಸ್ವಧರ್ಮವನ್ನು ಭ್ರಮಸಂಶಯವಿಕಲ್ಪಾದಿರಹಿತವಾಗಿ ತಿಳಿದು, ಭಗವದ್ಭಕ್ತಿಪುರಃಸರವಾಗಿ ಅದರ ಅನುಷ್ಠಾನದಿಂದ ಚಿತ್ತಶುದ್ಧಿಯನ್ನು ಹೊಂದಿ, ಅದರಿಂದಲೇ ಜ್ಞಾನವನ್ನು ಪಡೆದು, ತನ್ಮೂಲಕ ದುಃಖಮಾತ್ರಾಭಾವ ಮತ್ತು ಸಾಕ್ಷಾತ್ ಸಚ್ಚಿದಾನಂದಸ್ವರೂಪವಾದ ಮುಕ್ತಿಯನ್ನು ಸಹ ಹೊಂದಬಹುದೆಂದು ನಮ್ಮಗಳ ಶಾಸ್ತ್ರಗಳಲ್ಲಿ ವಿಸ್ತೃತವಾಗಿ ವಿವರಿಸಲ್ಪಟ್ಟಿರುವ ಪರಮಸಿದ್ಧಾಂತವನ್ನವಲಂಬಿಸಿ, ಇಹದಲ್ಲಿ ಸೌಖ್ಯವನ್ನೂ, ಪರದಲ್ಲಿ ಸದ್ಗತಿಯನ್ನೂ ಮತ್ತು ಮೋಕ್ಷವನ್ನೂ ಕೂಡ ಹೊಂದ

ಶ್ರೇಯಸ್ಸಿಗೆ ಅನುಷ್ಠಿಸಲ್ಪಡಬೇಕಾದ ಧರ್ಮದ ಜ್ಞಾನಾರ್ಥವಾಗಿ, ಪ್ರಮಾಣಭೂತಗಳಾದ ವೇದ, ಉಪನಿಷತ್, ಸ್ಮೃತಿ, ಪುರಾಣ, ಇತಿಹಾಸ, ತದರ್ಥನಿರ್ಣಯಕಶಾಸ್ತ್ರಗಳೇ ಮೊದಲಾದವುಗಳು, ನಮ್ಮ ಮುಂದಿರುವವು. ಮೊದಲು ಮೊದಲು ಶರೀರಬುದ್ಧ್ಯಾದಿಸಮಸ್ತಶಕ್ತಿಗಳಲ್ಲಿಯೂ ಅಪ್ರತಿಮರಾಗಿದ್ದ ನಮ್ಮ ಪೂರ್ವಿಕರುಗಳು ವೇದಶಾಸ್ತ್ರಗಳ ಮೂಲವನ್ನು ಮಾತ್ರವೇ ಓದಿ ಅವುಗಳ ಯಥಾರ್ಥವಾದ ಅರ್ಥವನ್ನು ತಿಳಿದು ಅನುಷ್ಠಿಸುತ್ತಿದ್ದರು. ಅನಂತರದಲ್ಲಿ, ಬ್ರಹ್ಮಚರ್ಯನಿಯಮಶೈಥಿಲ್ಯ ಮೊದಲಾದ ಅನೇಕಕಾರಣಗಳಿಂದ ಕ್ರಮವಾಗಿ ಬುದ್ಧ್ಯಾದಿಶಕ್ತಿಗಳು ಕ್ಷೀಣಿಸುತ್ತಾ, ಕ್ಷೀಣಿಸುತ್ತಾ, ಭಾಷ್ಯಾದಿಸಹಾಯಾಪೇಕ್ಷೆಯೂ ತದನಂತರದಲ್ಲಿ ಭಾಷ್ಯಕ್ಕೂ ವ್ಯಾಖ್ಯಾನಟೀಕಾಟಿಪ್ಪಣ್ಯಾದ್ಯಾವಶ್ಯಕತೆಯೂ ಉಂಟಾಗಿ, ಈಗಲೋ ಸಂಸ್ಕೃತಭಾಷಾಗ್ರಂಥಗಳ ಕ್ರಮವಾದ ಅಧ್ಯಯನವು ಅಭಾವಪ್ರಾಯವಾದ ಕ್ಷೀಣತೆಯನ್ನು ಹೊಂದಿರುವ ಈ ಅತಿಶೋಚನೀಯವಾದ ದುರವಸ್ಥೆಯಲ್ಲಿ, ಮೂಲಗ್ರಂಥಗಳನ್ನು ಓದಲು ಸರ್ವಥಾ ಅಸಮರ್ಥರಾಗಿರುವ ಜನರುಗಳಿಗೆ ಧರ್ಮಬೋಧನಾರ್ಥವಾಗಿ ತತ್ತತ್ಪ್ರಾಕೃತಭಾಷೆಯಲ್ಲಿ ಸರಲವಾದ ಶೈಲಿಯಿಂದ ರಚಿಸಲ್ಪಟ್ಟ ಗ್ರಂಥಗಳು ಅತ್ಯಂತ ಆವಶ್ಯಕಗಳಾಗಿವೆ. ವಿಶೇಷವಾಗಿ ನಾನಾವಿಧಧರ್ಮಗಳು ನಮ್ಮಗಳ ದೇಶದಲ್ಲಿ ಬಂದು ವಾಸಮಾಡುತ್ತಿರಲಾಗಿ, ಆ ಮತಪ್ರಚಾರಕರುಗಳು ತಮ್ಮತಮ್ಮ ಮತಪ್ರಚಾರವನ್ನು ಮಾಡುವಾಗ ನಮ್ಮಗಳ ಬಾಲಕರುಗಳೂ ದೊಡ್ಡವರುಗಳೂ ಕೂಡ ಸ್ವಮತಗ್ರಂಥಗಳ ಜ್ಞಾನವಿಲ್ಲದೆ ಇರುವ ಪ್ರಯುಕ್ತ ಮೋಸಹೋಗಿ ಬುದ್ಧಿಭ್ರಂಶಕ್ಕೂ ಸ್ವಧರ್ಮಭ್ರಂಶಕ್ಕೂ ಗುರಿಯಾಗಿ ಇಹದಲ್ಲಿಯೂ ಪರದಲ್ಲಿಯೂ ಕೆಡುವ ಸಂದರ್ಭವು ಹೆಚ್ಚಾಗಿ ತೋರಿಬರುವ ಕಾರಣದಿಂದಲೂ, ಇಂಥ ಪ್ರಾಕೃತಭಾಷಾಗ್ರಂಥಗಳ ಆವಶ್ಯಕತೆಯು ಅತ್ಯಧಿಕವಾಗಿರುವುದು. ಕರ್ಣಾಟಕ ಭಾಷೆಯಲ್ಲಿ, ಬಾಲಕರುಗಳಿಗೂ ಅಧ್ಯಾಪಕರುಗಳಿಗೂ ಮಾತ್ರವಲ್ಲದೆ ಧರ್ಮಜಿಜ್ಞಾಸುಗಳೆಲ್ಲರಿಗೂ ಕೂಡ ಉಪಯುಕ್ತಗಳಾದ ಈ ನಮೂನೆಯ ಗ್ರಂಥಗಳೇ ಇಲ್ಲದೆ ಇರುವದನ್ನು ಆಲೋಚಿಸಿ, ಕರ್ಣಾಟಕರಾಷ್ಟ್ರೀಯಶಿಕ್ಷಣಸಮಿತಿಯು ಪರವಾಗಿ ಧರ್ಮಪ್ರಿಯ ಶ್ರೀಸುರೇಂದ್ರದೇವಾಯ

ಇವರು, ಬಾಲಕರುಗಳಿಗೆ ಧರ್ಮವನ್ನು ಬೋಧಿಸುವ ಕೆಲಸದಲ್ಲಿ ಅನುಭವಶಾಲಿಗಳೂ ಧರ್ಮಸಂಬದ್ಧವಾದ ಪತ್ರಿಕೆಗಳ ಸಂಪಾದಕರೂ ಆದ ಶ್ರೀ ಚಿದಂಬರಯ್ಯನವರ ದ್ವಾರಾ ಬರೆಸಿ ಪ್ರಕಾಶಪಡಿಸಿರುವ "**ಆರ್ಯಧರ್ಮಪ್ರದೀಪ**" ವೆಂಬ ಈ ಕರ್ಣಾಟಕಭಾಷಾಗ್ರಂಥವು ಈ ಮೇಲ್ಕಂಡ ಕಾರಣದಿಂದ ನಮ್ಮಗಳ ಮನಸ್ಸಿನಲ್ಲಿ ಬಹಳವಾದ ಆನಂದವನ್ನುಂಟುಮಾಡುತ್ತಿರುತ್ತದೆ. ಪೂರ್ವೋಕ್ತಗಳಾದ ಕರ್ಮಭಕ್ತಿಜ್ಞಾನಾದಿ ಸಮಸ್ತವಿಭಾಗಗಳನ್ನೂ ಕುರಿತು ಈ ಗ್ರಂಥದಲ್ಲಿ ಕ್ರಮವಾಗಿಯೂ ಪೂರ್ವಾಪರಸಂಬಂಧದಿಂದಲೂ ಅನೇಕ ಉಪಯುಕ್ತ ಲೌಕಿಕದೃಷ್ಟಾಂತಗಳೊಡನೆಯೂ ಪ್ರಸಿದ್ಧ ಪದ್ಯಗಳೊಡನೆಯೂ ಆರಂಭಾವಸ್ಥೆಯಲ್ಲಿರುವ ಜಿಜ್ಞಾಸುಗಳಿಗೆ ಅನುಕೂಲವಾಗುವಂತೆ ಸರಳವಾದ ಕರ್ಣಾಟಕಶಬ್ದಗಳಿಂದ ಸಂಕ್ಷಿಪ್ತವಾದ ಪ್ರತಿಪಾದನೆಯು ಕಂಡುಬರುವ ಕಾರಣ, ಅಂಥ ಜಿಜ್ಞಾಸುಗಳಿಗೆ ಈ ಗ್ರಂಥವು ಅವಶ್ಯವಾಗಿಯೂ ಅತ್ಯಂತೋಪಕಾರಿಯಾಗುವುದಕ್ಕೆ ಯಾವ ಸಂದೇಹವೂ ಇಲ್ಲ. ಆದುದರಿಂದ ಧರ್ಮಪ್ರಿಯರಾದ ಕರ್ಣಾಟಕಭಾಷಾಭಿಜ್ಞರೆಲ್ಲರೂ ಈ ರೀತಿಯಾದ ಗ್ರಂಥವಂ ಓದಿ ಇನ್ನೂ ವಿಸ್ತೃತಗಳಾದ ಧರ್ಮಗ್ರಂಥಗಳನ್ನು ಅನುಸ್ಯೂತವಾಗಿ ಇಂಥ ಗ್ರಂಥಕರ್ತೃಗಳಿಂದ ಸಂಗ್ರಹಿಸಿ ದೇಶೋಪಕಾರವಂ ಮಾಡುವಂತೆ ಈ ಶಿಕ್ಷಣಸಮುದಾಯದವರಿಗೆ ಅಧಿಕವಾದ ಪ್ರೋತ್ಸಾಹವಂ ಕೊಟ್ಟು ತಾವುಗಳೂ ಧರ್ಮಸ್ವರೂಪವಂ ತಿಳಿದು ಸಂತತ ತದನುಷ್ಠಾನದಿಂದ ಉತ್ತರೋತ್ತರವಾಗಿ ಸಮಸ್ತಕಾಲಗಳಲ್ಲಿಯೂ ಸಮಸ್ತಸ್ಥಲಗಳಲ್ಲಿಯೂ ಸಮಸ್ತರೀತಿಗಳಿಂದಲೂ ಐಹಿಕ ಆಮುಷ್ಮಿಕ ಮತ್ತು ಮೋಕ್ಷಪರ್ಯಂತವಾದ ಪಾರಮಾರ್ಥಿಕಶ್ರೇಯಸ್ಸಿಗೆ ಪಾತ್ರರಾಗಲಿ ಎಂದು ಶ್ರೀದ್ವಾರಕಾಧೀಶ್ವರ ಲಕ್ಷ್ಮೀನಾರಾಯಣ ಶ್ರೀಶಾರದಾಂಬಾ ಚಂದ್ರಮೌಳೀಶ್ವರಾದ್ಯನಂತ ಲೀಲಾರೂಪಧಾರಕನೂ ಸರ್ವಜಗನ್ನಾಥನೂ ಆದ ಶ್ರೀಭಗವಂತನನ್ನು ಪ್ರಾರ್ಥಿಸುತ್ತೇವೆ.

ರಕ್ತಾಕ್ಷಿ ಸಂವತ್ಸರದ ಕಾರ್ತಿಕ ಕೃಷ್ಣನವಮೀ
ಗುರುವಾರ ತಾ|| ೨೦-೧೧-೧೯೨೪.

ಕರ್ಣಾಟಕ ಕವಿರತ್ನರೂ ಸುಪ್ರಸಿದ್ಧ ಕನ್ನಡ ಗ್ರಂಥಕರ್ತರೂ
ಧರ್ಮನಿಷ್ಠರೂ ಆದ



ಹೊಸಕೆರೆ ಚಿದಂಬರಯ್ಯ.

# ವಿಷಯಕ್ರಮ.



## ಪರಿಶಿಷ್ಟ.

# ಪ್ರಕಾಶಕರ ಬಿನ್ನಹ.



ಕರ್ನಾಟಕರಾಷ್ಟ್ರೀಯಶಿಕ್ಷಣಸಮಿತಿಯವರು ಈ ಧರ್ಮಗ್ರಂಥವನ್ನು ಬರೆಯಿಸಿ ಪ್ರಸಿದ್ಧಮಾಡಲಿಕ್ಕೆ ಅವಶ್ಯಕತೆ ಏಕೆ ಉಂಟಾಯಿತೆಂಬದನ್ನು ನಾಲ್ಕುಶಬ್ದಗಳಲ್ಲಿ ಹೇಳುವದು ಅವಶ್ಯವಿದೆ. ರಾಷ್ಟ್ರೀಯಶಿಕ್ಷಣದ ಮುಖ್ಯಲಕ್ಷಣಗಳು ಮೂರು- (೧) ತಾಯಿಯ ಮೊಲೆಹಾಲಿನ ಕೂಡ ಕುಡಿದು ಬೆಳೆಯಿಸಿದ ಪ್ರೀತಿಯ ತಾಯ್ನುಡಿಯ ದ್ವಾರದಿಂದ ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ಒದಗಿಸಿ ಕೊಡುವದು. (೨) ಸ್ವಧರ್ಮ ಸ್ವಸಂಸ್ಕೃತಿಗಳಿಗನುರೂಪವಾದಂಥ ಯೋಗ್ಯಪಠ್ಯಪುಸ್ತಕಗಳನ್ನು ಒದಗಿಸುವದು. (೩) ನೈತಿಕಶಿಕ್ಷಣವನ್ನೂ ಮತ್ತು ಧಾರ್ಮಿಕಶಿಕ್ಷಣವನ್ನೂ ಕೊಟ್ಟು ಭಾವನಾತ್ಮಕವಾದ ಅಂತಃಕರಣವನ್ನು ವಿಕಾಸಗೊಳಿಸುವದು. ಈಗ ಹಿಂದುಸ್ಥಾನದಲ್ಲಿ ಪ್ರಚಾರಗೊಂಡ ಆಂಗ್ಲಶಿಕ್ಷಣದ ಮುಖ್ಯದೋಷಗಳೆಂದರೆ ಮೇಲೆ ಕಾಣಿಸಿದ ಲಕ್ಷಣಗಳ ಅಭಾವವೇ ಸರಿ. ಇಂಗ್ಲೀಷ ಭಾಷೆಗೆ ಕಟ್ಟತಕ್ಕ ಬೆಲೆಯನ್ನು ಕೊಟ್ಟು, ವ್ಯವಹಾರದ ಮಟ್ಟಿಗೆ ಬೇಕಾಗುವಷ್ಟು ನಿಸ್ಸಂಶಯವಾಗಿ ಕಲಿಯಬಹುದು; ಆದರೆ ಅದನ್ನು ಅಟ್ಟಕ್ಕೇರಿಸಿ ಮಾತ್ರ ಕೂಡಿಸಬಾರದು. ಇಲ್ಲದ ಸಲ್ಲದ ಪ್ರಾಶಸ್ತ್ಯವನ್ನು ಅದಕ್ಕೇ ಕೊಟ್ಟು ಅದರ ದ್ವಾರದಿಂದಲೇ ಎಲ್ಲ ಶಿಕ್ಷಣವನ್ನೂ ಒದಗಿಸಿ ನಮ್ಮ ಸಂಸಾರವನ್ನೆಲ್ಲ ಇಂಗ್ಲೀಷಮಯವಾಗಿ ಮಾಡುವದು ಸರ್ವಥಾ ಯೋಗ್ಯವಲ್ಲ. ಸರಕಾರೀ ಶಾಲೆ ಕಾಲೇಜುಗಳಲ್ಲಿ ಇಂಗ್ಲೀಷ ಭಾಷೆಗೆ ಕೊಟ್ಟ ಮಹತ್ತ್ವದ ಸ್ಥಾನವನ್ನೂ ಮಾತೃಭಾಷೆಗೆ ಕೊಟ್ಟ ಗೌಣಸ್ಥಾನವನ್ನೂ ರಾಷ್ಟ್ರೀಯಶಿಕ್ಷಣಪ್ರಿಯರೆಂದೂ ಕೊಡಲಾರರು. ಮಾತೃಭಾಷೆಯಾದ ಕನ್ನಡದ ದ್ವಾರದಿಂದಲೇ ಎಲ್ಲ ಶಿಕ್ಷಣವನ್ನು ಕೊಡುವದೂ, ಅದಕ್ಕೂ ದೇವಭಾಷೆಯಾದ ಸಂಸ್ಕೃತಕ್ಕೂ ರಾಷ್ಟ್ರಭಾಷೆಯಾದ ಹಿಂದೀ ಭಾಷೆಗೂ ಮಹತ್ತ್ವದ ಸ್ಥಾನವನ್ನು ಕೊಡುವದೂ ಯೋಗ್ಯವೇ ಸರಿ.

ಶಿಕ್ಷಣವು ವಿದ್ಯೆಗಾಗಿ, ಸಂಸ್ಕೃತಿಗಾಗಿ, ಆತ್ಮೋನ್ನತಿಗಾಗಿ, ಜ್ಞಾನಾರ್ಜನೆಗಾಗಿ. ನಾವೆಂದರೆ ಆತ್ಮವೆಂದೂ ಶರೀರವು ಆತ್ಮನ ಹೊದಿಕೆಯೆಂದೂ ಆತ್ಮನು ಶರೀರದಿಂದ ಭಿನ್ನನಾಗಿರುವನೆಂದೂ ನಮ್ಮ ಪೂರ್ವದ ಋಷಿವರ್ಯರು ಉಪದೇಶಿಸಿದ್ದನ್ನು ನಾವು ಪೂರ್ಣವಾಗಿ ನಂಬುತ್ತೇವೆ. ದೇಹವು ಕ್ಷಣಿಕವಾದದ್ದು, ನಶ್ವರವಾದದ್ದು; ಆತ್ಮನು ಅಜರಾಮನೂ ನಾಶರಹಿತನು- ಹೀಗೆಂದು ನಮ್ಮ ದೃಢವಾದ ವಿಶ್ವಾಸ. ಮಳೆಯ ನೀರನ್ನು ಬಿಟ್ಟು ಮಂಜಿನ ನೀರಿಗೆ ಕೈಯೊಡ್ಡಿದರೆಂಬಂತೆ ಶಾಶ್ವತವೂ ನಿರ್ಮಲಾನಂದದಾಯಕವೂ ಆದ ಆತ್ಮನನ್ನು ಬಿಟ್ಟು ದುಃಖಪರಂಪರೆಗಳಿಗೆ ಬೀಡಾದ ಕ್ಷಣಿಕದೇಹವನ್ನು ವ್ಯಾಮೋಹಿಸಿ ಪರಿಸಿಕೊಂಡು ಕುಣಿಯುವದು ಸರ್ವಥಾ ಯೋಗ್ಯವಲ್ಲ. ಈಗಿನ ಜನರಿಗೆ ಹೊಟ್ಟೆಯೇ ಬಹಳ ಮುಂದೆ ಬರಹತ್ತಿದೆ. ಆದ್ದರಿಂದ ಹೊಟ್ಟೆಯ ಹೊರತು ಅವರಿಗೇನೂ ಕಾಣದಂತಾಗಿದೆ. ಒಳಗಿರುವ ಅಂತಃಕರಣದ ಅಂತರಾತ್ಮನ ಕೂಗು ಕೇಳದಂತಾಗಿದೆ. ಮನುಷ್ಯನಿಗೆ ನೀತಿಶೀಲಗಳೇ ಮಹತ್ತ್ವವಾದವುಗಳು. ಅವು ಇಲ್ಲದ ಮನುಷ್ಯನ ಬಾಳು ಹಾಳೇ ಸರಿ. ತುಣುಕು ರೊಟ್ಟಿಗಾಗಿ ಆತ್ಮನನ್ನು ಮಾರಿಕೊಳ್ಳುವ ಮಾನವನ ಸಂಸಾರಕ್ಕೆ ಧಿಕ್ಕಾರವಿರಲಿ. ಭಕ್ತಶಿರೋಮಣಿಯಾದ ಪ್ರಹ್ಲಾದನು ಸಕಲೈಶ್ವರ್ಯಯುಕ್ತನಾಗಿ ರಾಜ್ಯವನ್ನಾಳುತ್ತಿರುವಾಗ ಅವನ ವೈರಿಯು ಸಹಿಸುವದಕ್ಕಾಗದೆ ಬಂದು ದಾನಕ್ಕಾಗಿ ಕೈಯೊಡ್ಡಿದನು. ಪ್ರಹ್ಲಾದನು “ ಬೇಕಾದ್ದನ್ನು ಕೇಳಿಕೋ ” ಎಂದು ನುಡಿದಾಗ ಅವನು ಶೀಲಗುಣವನ್ನು ಕೇಳಿಕೊಂಡನು. ಪ್ರಹ್ಲಾದನು ಶೀಲಗುಣವನ್ನು ಕೊಟ್ಟ ಕೂಡಲೇ ಅವನಲ್ಲಿ ನೆಲೆಸಿದ್ದ ಸಕಲ ಸದ್ಗುಣಗಳೂ ಐಶ್ವರ್ಯವೂ ರಾಜ್ಯಲಕ್ಷ್ಮಿಯೂ ಒಂದೊಂದೇ ತೊಲಗಿ ಹೋದವೆಂದು ಮಹಾಭಾರತದಲ್ಲಿ ಆಖ್ಯಾಯಿಕೆಯಿದೆ. ಶೀಲವೊಂದಿದ್ದರೆ ಸಕಲವೂ ಇದ್ದಂತೆ. ಕೈ ಹಿಡಿದೆಳೆದರೆ ಬೆನ್ನು ತಾನೇ ಬರುವಂತೆ ಶೀಲವೊಂದನ್ನು ಸಂಪಾದಿಸಿದರೆ ಅಷ್ಟೈಶ್ವರ್ಯಗಳೂ ಸಿದ್ಧಿಯಾಗುವವು. ಈ ಶೀಲವನ್ನು ವಿದ್ಯಾರ್ಥಿಗಳಲ್ಲಿ ನೈದುಂಬಿಸಿಕೊಡುವದೇ ರಾಷ್ಟ್ರೀಯ ಶಿಕ್ಷಣದ ಮುಖ್ಯ ಉದ್ದೇಶ. ಆಧಿಭೌತಿಕತತ್ತ್ವದ ಮತ್ತು ವಿಷಯೋಪಭೋಗಗಳ ನಿಸ್ಸಾರತ್ವವನ್ನು ಕಂಡು ಹಿಡಿದು ಆಧ್ಯಾತ್ಮಿಕತತ್ತ್ವದ ಮತ್ತು

ಇಂದ್ರಿಯನಿಗ್ರಹಗಳ ಮಹತ್ತ್ವವನ್ನು ಪ್ಯೆಗೂಡಿಸಿಕೊಂಡು ನಿರ್ಮ
ವಾದ ಶಾಂತಿಯನ್ನು ದೊರಕಿಸಿಕೊಳ್ಳುವದೇ ಮನುಷ್ಯನ ಆದ್ಯಕರ್ತ
ವ್ಯವಾದ್ದರಿಂದ ಇದಕ್ಕೆ ಸೋಪಾನದಂತಿರುವ ಧರ್ಮವೇ ನಮ್ಮ ಜೀವ
ಸರ್ವಸ್ವವು ಧರ್ಮಕ್ಕಾಗಿ ನಮ್ಮ ದೇಹಮನಸ್ಸುಗಳು; ಧರ್ಮಕ್ಕಾಗಿ
ಅನ್ನವಸ್ತ್ರಗಳು; ಧರ್ಮಕ್ಕಾಗಿಯೇ ನಮ್ಮ ಜೀವನ; ಧರ್ಮಕ್ಕೆ ಅನು
ಕೂಲವಾದದ್ದೇ ಪುಣ್ಯ; ಧರ್ಮಕ್ಕೆ ಪ್ರತಿಕೂಲವಾದದ್ದೇ ಪಾಪ. ಆದ್ದ
ರಿಂದ ಇದನ್ನು ಕಡೆಗಂಡು ನಾನಾವಿಧದ ಮಾನಸೋಲ್ಲಾಸಗಳಿಗೂ ಆಡಂ
ಬರದ ಜೀವನಕ್ಕೂ ವ್ಯಸನಗಳಿಗೂ ಬೀಡಾಗದೆ ಯುಕ್ತವೇಷ, ಯುಕ್ತ
ಜೀವನ, ಉಚ್ಚವಿಚಾರ, ಸತತೋದ್ಯೋಗ, ಬ್ರಹ್ಮಚರ್ಯ, ಆಟನೋಟ
ಗಳಲ್ಲಿಯೂ ಆಹಾರವಿಹಾರಗಳಲ್ಲಿಯೂ ಮಲಗೇಳುವದರಲ್ಲಿಯೂ ನಿಯ
ಮಿತತನ– ಇವುಗಳನ್ನೇ ಹೆಜ್ಜೆಹೆಜ್ಜೆಗೂ ಸ್ಫುಟಗೊಳಿಸುತ್ತಿರಬೇಕು.
ಸ್ವಧರ್ಮಸ್ವಸಂಸ್ಕೃತಿಗಳ ಅಭಿಮಾನ, ಸ್ವದೇಶಾಭಿಮಾನ, ಸ್ವಭಾಷಾಭಿ
ಮಾನ—ಇವುಗಳಿಂದ ತುಂಬಿ ತುಳುಕುವ ವಾತಾವರಣದಲ್ಲಿ ವಿದ್ಯಾರ್ಥಿ
ಗಳು ಬೆಳೆಯಬೇಕು. ಕೋಮಲವಾದ ಮನಸ್ಸಿನ ಮೇಲೆ ಇದರಿಂದಾ
ಗುವ ಸಂಸ್ಕಾರಗಳು ದೃಢವಾಗಿ ಬೇರೂರಿ ಒಮ್ಮೆಲ್ಲೇ ಚಿಗಿತು
ಬೆಳೆದು ಫಲಗಳನ್ನು ಕೊಡುವವೆಂಬುದರಲ್ಲಿ ಸಂದೇಹವಿಲ್ಲ. ಈ ಕೆಲಸವು
ನಾಲ್ಕೇ ದಿವಸ ನಡೆದರೂ ವ್ಯರ್ಥವಾಗದು. ಇದರ ಪರಿಣಾಮವು
ಸ್ಥೂಲದೃಷ್ಟಿಗೆ ಕಾಣದ್ದರಿಂದ ಅದರ ಅರಿವು ಜನರಿಗೆ ಆಗದು. ಆದರೆ
ತಿಳಿದವರು ಒಳಗಣ್ಣಿನಿಂದ ಕಾಣಬಹುದು. ಇದು ಅಂತಃಕರಣಕ್ಕೆ ಅನಿ
ಸುವ ಮಾತು; ಬಲ್ಲವರಿಗೆ ಇದರ ಬೆಲೆಯು ತಿಳಿಯುವದು. ಕೇವಲ
ಬೌದ್ಧಿಕಶಿಕ್ಷಣಕ್ಕೇ ಮಿತಿಮೀರಿದ ಮಹತ್ತ್ವವನ್ನು ಕೊಟ್ಟು ಅನವಶ್ಯಕ
ವಾಗಿ ಬುದ್ಧಿಯನ್ನು ಮಸೆದು ಮಸೆದು ಚೂಪಾಗಿ ಮಾಡಿ ಸುತ್ತುಮು
ತ್ತಲೂ ನೆರೆಹೊರೆಯಲ್ಲಿಯೂ ಇದ್ದವರ ಕರುಳನ್ನು ಕತ್ತರಿಸಲಿಕ್ಕೂ ಅನ್ಯ
ರಿಗೆ ತಿಳಿಯದಂತೆ ಮೋಸಮಾಡಲಿಕ್ಕೂ ಅನ್ಯರ ಗೋಣನ್ನು ಮುರಿದು
ತಮ್ಮ ಮನೆಯನ್ನು ತುಂಬಿಕೊಳ್ಳಲಿಕ್ಕೂ ಅನುಕೂಲವಾಗುವಂತೆ ಮಾಡು
ವದು ಈಗಿನ ಆಂಗ್ಲಶಿಕ್ಷಣದ ಮುಖ್ಯಲಕ್ಷಣವಾಗಿದೆ. ಈ ದೋಷವನ್ನು
ಕಿತ್ತುಹಾಕಿ ನೈತಿಕಶಿಕ್ಷಣಕ್ಕೂ ಮತ್ತು ಧಾರ್ಮಿಕಶಿಕ್ಷಣಕ್ಕೂ ಪ್ರಾಶ

ಸ್ತ್ಯವನ್ನುಕೊಟ್ಟು ಅಂತಃಕರಣದ ವಿಕಾಸಕ್ಕೆ ಸಾಕಷ್ಟು ಇಂಬನ್ನುಂಟು ಮಾಡಿಕೊಡುವದು ರಾಷ್ಟ್ರೀಯಶಿಕ್ಷಣಕ್ಕೆ ಒಪ್ಪುವ ಮಾತು. ಇಂಥ ವಿಕಾಸವು ನಿತ್ಯಭಜನೆ, ಈಶಪ್ರಾರ್ಥನೆ, ಪುರಾಣ, ಹರಿಕೀರ್ತನೆ, ಪ್ರವಚನ, ನಗರಸಂಕೀರ್ತನೆ, ಮಹಾವಿಭೂತಿಗಳ ಜಯಂತ್ಯುತ್ಸವ, ನಿತ್ಯ ಧರ್ಮವಿಧಿಯ ಪರಿಪಾಲನೆ, ಆತ್ಮಪರೀಕ್ಷೆ— ಮುಂತಾದ ಸಾಧನವಿಶೇಷಗಳಿಂದ ಆದರೂ ಇವಕ್ಕೆಲ್ಲ ಆಧಾರಭೂತವಾಗಿ ಧಾರ್ಮಿಕಶಿಕ್ಷಣವು ಇರಬೇಕು. ಪ್ರತಿಯೊಬ್ಬ ಹಿಂದುವೂ ತನ್ನ ಆ ಧರ್ಮದ ಮೂಲತತ್ವಗಳನ್ನು ದೃಷ್ಟಾಂತ ಸಹಿತವಾಗಿ ತಿಳಿದುಕೊಳ್ಳುವದು ಅತ್ಯವಶ್ಯ.

ಇಂಥ ಧಾರ್ಮಿಕಶಿಕ್ಷಣವನ್ನು ಪೂರೈಸಲಿಕ್ಕೆ ಕನ್ನಡದಲ್ಲಿ ಯೋಗ್ಯವಾದ ಪಠ್ಯಪುಸ್ತಕದ ಕೊರತೆಯು ಬಹುದಿವಸದಿಂದಿತ್ತು. ಈ ಕೊರತೆಯನ್ನು ದೂರಮಾಡಬೇಕೆಂದು ಕರ್ನಾಟಕಶಿಕ್ಷಣಸಮಿತಿಯವರು ನಿಶ್ಚಯಿಸಿ ಧಾರವಾಡದ ಕರ್ನಾಟಕಮಹಾವಿದ್ಯಾಲಯದಲ್ಲಿ ಧಾರ್ಮಿಕಶಿಕ್ಷಣವನ್ನು ಕೊಟ್ಟು ಅನುಭವವನ್ನು ಪಡೆದಂಥವರೂ ಅನೇಕವರ್ಷಗಳಿಂದ ಸಂಸಾರವನ್ನು ತ್ಯಜಿಸಿ ವೈರಾಗ್ಯಯುತರಾಗಿ ಧರ್ಮಗ್ರಂಥಗಳನ್ನು ಬರೆಯುವದರಲ್ಲಿಯೂ ಧರ್ಮಾಚರಣೆಯಲ್ಲಿಯೂ ಆಯುಷ್ಯವನ್ನು ಕಳೆದಂಥ ಸುರಿತ ಲೇಖಕರೂ ಆದ ಶ್ರೀ ಹೊಸಕೆರೆ ಚಿದಂಬರಯ್ಯನವರಿಗೆ ಈಮಹತ್ತ್ವದ ಕಾರ್ಯವನ್ನು ಒಪ್ಪಿಸಿದ್ದು ಸಂತೋಷದ ಮಾತಾಗಿದೆ. ಈ ಮಹನೀಯರು ನಮ್ಮ ವಿನಂತಿಯನ್ನು ಮನ್ನಿಸಿ ಅತಿಶ್ರಮಬಟ್ಟು ಈ ಗ್ರಂಥವನ್ನು ಮನೋಹರವಾಗಿಯೂ ಸುಲಭವಾಗಿಯೂ ಆಬಾಲವೃದ್ಧರಿಗೂ ಮುದ್ದಾಗುವಂತೆಯೂ ಬರೆದು ಕೊಟ್ಟದ್ದಕ್ಕಾಗಿ ಅವರ ಉಪಕಾರವು ಚಿರಸ್ಮರಣೀಯವಾಗಿದೆ. ಈ ಸದ್ಗ್ರಂಥವನ್ನು ಆಶೀರ್ವಾದಪರಭೂಮಿಕೆಯಿಂದ ಅಲಂಕರಿಸಿದ ಶ್ರೀದ್ವಾರಕಾಶಾರದಾಪೀಠದ ಶ್ರೀಮಜ್ಜಗದ್ಗುರುಶಂಕರಾಚಾರ್ಯ ಶ್ರೀ ಭಾರತೀಕೃಷ್ಣತೀರ್ಥಸ್ವಾಮಿಗಳಿಗಂತೂ ನಾವು ತುಂಬಾ ಋಣಿಗಳಾಗಿದ್ದೇವೆ.

ಭರತಭೂಮಿಯು ಧರ್ಮಪ್ರಧಾನವಾದದ್ದು. ಧರ್ಮವಿಚಾರದಲ್ಲಿ ವೆಚ್ಚಮಾಡಿದಷ್ಟು ವೇಳೆಯನ್ನೂ ಶಕ್ತಿಯನ್ನೂ ನಮ್ಮ ಆರ್ಯಋಷಿ

ಗಳು ಮತ್ತಾವ ಕಾರ್ಯದಲ್ಲಿಯೂ ವಿನಿಯೋಗಿಸಿಲ್ಲೆಂಬ ಮಾತನ್ನು ತದ್ವಿಷಯಕವಾದ ಗ್ರಂಥವಿಸ್ತಾರದಿಂದ ಕಂಡುಹಿಡಿಯಬಹುದು. ಅರ್ವಾಚೀನವಾಚಕರಲ್ಲನೇಕರಿಗೆ ಅದರ ಅರಿವು ಕೂಡ ಇರಲಿಕ್ಕಿಲ್ಲ. ಅದನ್ನವರು ಕಂಡರೆ ಆಶ್ಚರ್ಯದಿಂದ ದಿಗ್ಭ್ರಾಂತರಾಗಿ ನಿಲ್ಲುವರೆಂಬುದು ನಮಗೆ ಗೊತ್ತುಂಟು. ಅದನ್ನೊಂದಾವರ್ತಿಯಾದರೂ ಅವಲೋಕಿಸಿದರೆ ನಮ್ಮ ಪೂರ್ವಜರ ವಿಷಯಕ್ಕೆ ಅಭಿಮಾನವೂ ಪೂಜ್ಯಬುದ್ಧಿಯೂ ಹುಟ್ಟುವದಲ್ಲದೆ ಧರ್ಮಗ್ರಂಥಗಳ ದೀರ್ಘಪರಿಶೀಲನೆಯನ್ನು ಮಾಡಬೇಕೆನ್ನುವರಿಗೆ ಅನುವಾಗುವದೆಂದು ನಂಬಿ ಪರಿಶಿಷ್ಟದಲ್ಲಿ ಎಲ್ಲ ಧರ್ಮಗ್ರಂಥಗಳ ಒಂದು ಪಟ್ಟಿಯನ್ನು ಕೊಟ್ಟಿರುತ್ತೇವೆ.

ಹಿಂದೂಧರ್ಮದ ಮೂಲತತ್ತ್ವಗಳನ್ನು ವಿವರಿಸುವ ಈ ಗ್ರಂಥದ ಕೊನೆಗೆ ಜಗತ್ತಿನೊಳಗಿನ ಎಲ್ಲ ಮುಖ್ಯಧರ್ಮಗಳ ಸಾರಭೂತತತ್ತ್ವಗಳನ್ನು ಸಂಕ್ಷೇಪದಿಂದ ವಾಚಕರೆದುರಿಗೆ ಇಟ್ಟರೆ ಒಂದಕ್ಕೊಂದನ್ನು ಅನಾಯಾಸವಾಗಿ ಹೋಲಿಸಿ ನೋಡಲಿಕ್ಕೆ ಅನುಕೂಲವಾಗುವದೆಂದೂ, ಪರಧರ್ಮಗಳ ತತ್ತ್ವಗಳ ಅಧ್ಯಯನದಿಂದ ಎಲ್ಲ ಧರ್ಮಗಳೂ ಒಂದೇ ಧ್ಯೇಯಕ್ಕೆ ಒಯ್ದು ಮುಟ್ಟಿಸುವ ಭಿನ್ನ ಭಿನ್ನ ದಾರಿಗಳೆಂದೂ, ತೋರಿಕೆಗೆ ಬಾಹ್ಯರೂಪದಲ್ಲಿ ಬೇರೆ ಬೇರೆಯಾಗಿ ಕಂಡರೂ ಅಂತರಂಗದಲ್ಲಿ ಒಂದೇ ಇರುವವೆಂದೂ ಅರಿವು ಆಗಿ ಪರಧರ್ಮಸಹಿಷ್ಣುತೆಯು ಹೆಚ್ಚಿ ಪಂಥಪಂಥಗಳಲ್ಲಿ ಪರಸ್ಪರಮೈತ್ರಿಯೂ ಸಹಾನುಭೂತಿಯೂ ನೆಲೆಗೊಂಡು ಲೋಕಕಲ್ಯಾಣಕ್ಕೂ ಜಗತ್ತಿನ ಶಾಂತಿಗೂ ತುಂಬಾ ಅನುವು ಉಂಟಾಗಬಹುದೆಂಬ ಆಶೆಯಿಂದಲೂ ಆಯಾಧರ್ಮಗಳ ಸುಪ್ರಸಿದ್ಧ ವಿದ್ವಾನ ಮುಂದಾಳುಗಳಿಗೆ ಪ್ರಾರ್ಥಿಸಿಕೊಂಡೆವು. ನಮ್ಮ ಪ್ರಾರ್ಥನೆಯನ್ನು ಆ ಮಹನೀಯರು ಪ್ರೀತಿಯಿಂದ ಪೂರ್ಣವಾಡಿದ್ದಕ್ಕಾಗಿ ಅವರ ಉಪಕಾರವನ್ನು ಸ್ಮರಿಸುತ್ತೇವೆ. ವೇಳೆವೇಳೆಗೆ ಸರಿಯಾಗಿ ಅಚ್ಚುಕಟ್ಟಾಗಿಯೂ ಮುದ್ದಾಗಿಯೂ ಪ್ರೇಮದಿಂದಲೂ ಮುದ್ರಣಕಾರ್ಯವನ್ನು ಪೂರೈಸಿಕೊಟ್ಟ ಶ್ರೀಕೃಷ್ಣಮುದ್ರಣಾಲಯದ ವ್ಯವಸ್ಥಾಪಕರಾದ ಶ್ರೀ. ಮುತಾಲೀಕ ದೇಸಾಯಿ ಹಣಮಂತರಾಯರ ಆಭಾರವನ್ನು ಇಲ್ಲಿ ಮನ್ನಿಸದೆ ಇರಲಾರೆವು.

ಯಾವ ದಿವ್ಯವಿಭೂತಿಗಳ ಚರಣಾರವಿಂದಗಳಿಗೆ ಈ ಗ್ರಂಥವು ಸಮರ್ಪಿತವಾಗಿರುವದೋ ಅಂಥ ಶ್ರೀಭುವನೇಶ್ವರಿಯು ಮತ್ತು ಶ್ರೀ ವಿದ್ಯಾರಣ್ಯಸ್ವಾಮಿಗಳ ಭಾವ ಚಿತ್ರಗಳಿಂದ ಈ ಗ್ರಂಥವನ್ನು ಭವ್ಯವಾಗಿ ಅಲಂಕಾರಗೊಳಿಸಿರುವೆವು. ಇವುಗಳ ದರ್ಶನ ಮಾತ್ರದಿಂದಲೇ ಪ್ರೇಕ್ಷಕರು ಇವುಗಳ ಅಗಾಧವಾದ ಸೌಂದರ್ಯರಸದಲ್ಲಿ ಮಗ್ನರಾಗಬಹುದು. ಇವುಗಳು ಇಷ್ಟು ಚಿತ್ತಾಕರ್ಷಕವಾಗುವಂತೆ ನಮ್ಮ ಕಲ್ಪನೆಗಳಿಗೆಲ್ಲ ಜೀವಕಳೆಯನ್ನು ತುಂಬಿ ಇವೆರಡನ್ನೂ ಅತ್ಯಾದರದಿಂದ ಹೊಸದಾಗಿ ಬರೆದುಕೊಟ್ಟ ನಮ್ಮ ಮಿತ್ರರಾದ ಶ್ರೀಯುತ ಮಾಗಳ ರಂಗರಾಯರ ಉಪಕಾರವು, ಬರೀ ನಮಗೆ ಮಾತ್ರವೇ ಅಲ್ಲ; ಇಡೀ ಕರ್ಣಾಟಕಕ್ಕೇ ಚಿರಸ್ಮರಣೀಯವೆಂದು ನಾವು ಭಾವಿಸುತ್ತೇವೆ.

ಕನ್ನಡ ಭಾಷಾಭಿಮಾನಿಗಳಾದ ಕರ್ನಾಟಕಸ್ಥರೆಲ್ಲರೂ ಇದಕ್ಕೆ ಉದಾರಾಶ್ರಯವನ್ನು ಕೊಟ್ಟು ಇದನ್ನು ಎಲ್ಲೆಡೆಗಳಲ್ಲಿಯೂ ಹಬ್ಬಿಸಿ ಕರ್ನಾಟಕದ ಏಳಿಗೆಗೆ ನೆರವಾಗಬೇಕೆಂದು ಪ್ರಾರ್ಥಿಸುವ,

ತಮ್ಮ ನಮ್ರ ಸೇವಕ,
**ಸುರೇಂದ್ರ ಶಿವರಾವ ದೇಸಾಯಿ,**
ಕರ್ನಾಟಕರಾಷ್ಟ್ರೀಯಶಿಕ್ಷಣಸಮಿತಿಯ
ಕಾರ್ಯದರ್ಶಿ.

**ಧಾರವಾಡ**
ಮಾರ್ಗಶಿರ ೧ ಶಕೆ ೧೮೪೬.

# ಗ್ರಂಥಕರ್ತನ ಮುನ್ನುಡಿ.

ಕರ್ನಾಟಕರಾಷ್ಟ್ರೀಯಶಿಕ್ಷಣಸಮಿತಿಯ ಕಾರ್ಯದರ್ಶಿಗಳಾದ ಶ್ರೀಯುತ ಸುರೇಂದ್ರ ಶಿವರಾವ ದೇಸಾಯಿ, ಎಂ. ಎ-ಇವರು ಕನ್ನಡ ನಾಡಿನಲ್ಲಿರುವ ಶಾಲೆಗಳಲ್ಲಿ ಧಾರ್ಮಿಕಶಿಕ್ಷಣವನ್ನು ಕೊಡುವದಕ್ಕೆ ಉಪಕರಣವಾಗಿ ಆರ್ಯಧರ್ಮದ ವಿಚಾರಗಳನ್ನೊಳಗೊಂಡ ಒಂದುಗ್ರಂಥವನ್ನು ಬರೆಯುವ ಕೆಲಸವನ್ನು ನನಗೆ ಒಪ್ಪಿಸಿದರು. ಕನ್ನಡದಲ್ಲಿ ಇದುವರೆಗೆ ಧರ್ಮಶಿಕ್ಷಣಸಂಬಂಧವಾದ ಗ್ರಂಥಗಳೆಲ್ಲಿಯೂ ನನ್ನ ಕಣ್ಣಿಗೆ ಬೀಳಲಿಲ್ಲ. ಆದ್ದರಿಂದ ನನ್ನ ಗ್ರಂಥದಲ್ಲಿ ನಾನು ಯಾವ ದಾರಿಯನ್ನು ಹಿಡಿಯಬೇಕೆಂಬ ಯೋಚನೆಯುಂಟಾಯಿತು. ಇಂಗ್ಲೀಷಿನಲ್ಲಿರುವ ಸೆಂಟ್ರಲ್ ಹಿಂದೂಕಾಲೇಜಿನ ಸನಾತನಧರ್ಮಪುಸ್ತಕದ ಮತ್ತು ಮಹಾರಾಷ್ಟ್ರದಲ್ಲಿರುವ "ಧರ್ಮಶಿಕ್ಷಣಾಚಾ ಓನಾಮಾ" ಎಂಬ ಪುಸ್ತಕದ ಹಾಳೆಗಳನ್ನು ಒಮ್ಮೆ ಮಗುಚಿಹಾಕಿದೆನು. ಇವುಗಳ ಅವಲೋಕನದ ಜೊತೆಗೆ ಧಾರವಾಡದ ಕರ್ನಾಟಕಮಹಾವಿದ್ಯಾಲಯದಲ್ಲಿ ಧಾರ್ಮಿಕಶಿಕ್ಷಣದ ಭಾಗವು ನನ್ನ ಪಾಲಿಗೆ ಬಂದದ್ದು ಬಹಳ ಸಹಕಾರಿಯಾಯಿತು. ಹುಡುಗರ ಮನಸ್ಸಿಗೆ ಕೂಡ ಹಿಡಿಯುವ ಹಾಗೆ ಧಾರ್ಮಿಕವಿಚಾರಗಳಿಗೆ ಕೊಡಬೇಕಾದಸ್ವರೂಪವನ್ನು ನಿರ್ಣಯಿಸಿಕೊಳ್ಳುವದಕ್ಕೆ ಇಲ್ಲಿ ನನಗೆ ಒಳ್ಳೇ ಅವಕಾಶವು ದೊರೆಯಿತು. ನಾನು ನನ್ನ ಮನಸ್ಸಿನಲ್ಲಿಯೇ ಒಂದುಪದ್ಧತಿಯ ಕಲ್ಪನೆಯನ್ನು ಮಾಡಿಕೊಂಡು ಅದರ ದಾರಿಯನ್ನು ಹಿಡಿದು ಪ್ರತಿದಿನವೂ ಟಿಪ್ಪಣಿಯನ್ನು ಬರೆದುಕೊಂಡು ಬಂದು ಪಾಠವನ್ನು ಹೇಳಿದೆನು. ಕೆಲವು ದಿವಸ ಹೀಗೆ ಮಾಡುವದರಲ್ಲಿ ಹುಡುಗರ ನಾಡಿಯು ಗತಿಯು ನನಗೆ ಸಿಕ್ಕಿದಂತೆ ತೋರಿತು. ಆಮೇಲೆ ನನ್ನ ಅನುಭವದ ಹಾದಿಯನ್ನೇ ಮುಂದುವರಿಸಿ ಈ ಗ್ರಂಥವನ್ನು ಸಿದ್ಧಮಾಡಿದೆನು.

ಕನ್ನಡಿಗರಿಗೆ ವಿಶೇಷವಾಗಿ ಓದುವ ಅಭಿರುಚಿಯೇ ಕಡಿಮೆಯಾಗಿದ್ದು—ಅಷ್ಟಿಷ್ಟು ಇದ್ದರೂ—ಅದು ಕಾದಂಬರಿಗಳ ಕಡೆಗೇ ಇರುವ ಪರಿಸ್ಥಿತಿಯನ್ನು ನೋಡಿ ಧಾರ್ಮಿಕವಿಚಾರಕ್ಕಾಗಿ ಹೊರಟ ಈ ಗ್ರಂಥದಲ್ಲಿ

ಕಥಾವಿಶೇಷಗಳ ಸಮಾವೇಶವನ್ನು ಮಾಡಬೇಕೆಂದು ನನಗೆ ತೋರಿತು. ಉಪನಿಷತ್ತುಗಳಲ್ಲಿ ಕೂಡ ಕಥೆಗಳ ಮೂಲಕವೇ ಉಪದೇಶವನ್ನು ಮಾಡಿರುವದು ನನಗೆ ಒಳ್ಳೇ ಉದಾಹರಣೆಯಾಗಿ ಕಂಡಿತು. ಆದ್ದರಿಂದ ಈ ಗ್ರಂಥದಲ್ಲಿ ಶ್ರುತಿಸ್ಮೃತಿಗಳನ್ನೂ ವಿಶೇಷವಾಗಿ ಭಗವದ್ಗೀತೆಯನ್ನೂ ಯೋಗಸೂತ್ರಗಳನ್ನೂ ಭಕ್ತಿಸೂತ್ರಗಳನ್ನೂ ಆಧಾರವಾಗಿ ಕೊಟ್ಟು ವಿಷಯಗಳನ್ನು ವಿವರಿಸುವಾಗ ಸಂದರ್ಭಾನುಸಾರವಾಗಿ ಭಾರತಭಾಗವತ ರಾಮಾಯಣಗಳ ಕಥೆಗಳನ್ನೂ ಕೆಲವು ಕಲ್ಪಿತಕಥೆಗಳನ್ನೂ ಅಲ್ಲಲ್ಲಿ ಉದಾಹರಣೆಯಾಗಿ ಕೊಡುತ್ತ ಹೋಗಿರುವೆನಲ್ಲದೆ ನಡುನಡುವೆ ಕನ್ನಡ ನುಡಿಯ ಮುದ್ದುಮಕ್ಕಳಾದ ಬೇರೆಬೇರೆ ಕವಿಗಳ ಉದ್ಗಾರಗಳನ್ನೂ ಶ್ರೀರಾಮಕೃಷ್ಣಪರಮಹಂಸರ ಮತ್ತು ವೀರಶೈವವಚನಶಾಸ್ತ್ರಕಾರರ ಸೂಕ್ತಿಗಳನ್ನೂ ಶ್ರೀಪುರಂದರದಾಸರ ಮತ್ತು ಶ್ರೀ ಸರ್ಪಭೂಷಣ ಶಿವಯೋಗಿಗಳ ಮನೋಹರವಾದ ಪದಗಳನ್ನೂ ಜೋಡಿಸಿರುವೆನು. ಇವುಗಳ ಮೂಲಕವಾಗಿ ದೃಷ್ಟಿಯನ್ನು ಪಸರಿಸಿದರೆ ಆರ್ಯಧರ್ಮವೆಂಬ ಸಮುದ್ರವು ಎತ್ತೆತ್ತಲೂ ಕಾಣುತ್ತಿರುವದು. ನಾನು ಈಗ್ರಂಥದಲ್ಲಿ ವಾಚಕರನ್ನು ಆ ಸಮುದ್ರದೊಳಕ್ಕೆ ಕರೆದುಕೊಂಡು ಹೋಗಿಲ್ಲ. ಏಕೆಂದರೆ ಅಲ್ಲಿ ಬಗೆಬಗೆಯ ಸಿದ್ಧಾಂತಗಳ ರೂಪವಾದ ಮೊಸಳೆಗಳ ಹಾವಳಿ ಬಹಳ. ಆದರೂ ಆ ಮೊಸಳೆಗಳು ಎದ್ದು ಬರುವ ಅಪಾಯದ ಸ್ಥಲಗಳನ್ನು ಸ್ವಲ್ಪ ಮರೆಮಾಡಿ ಆ ಸಮುದ್ರದ ತಲದಲ್ಲಿರುವ ಮುತ್ತು, ರತ್ನ –ಮೊದಲಾದವುಗಳನ್ನು ದೂರದಿಂದಲೇ ತೋರಿಸಿದ್ದೇನೆ. ಅವುಗಳನ್ನು ಪಡೆದುಕೊಂಡು ಶ್ರೀಮಂತರಾಗಬೇಕೆನ್ನುವವರು ತಮ್ಮ ತಮ್ಮ ಗುರುಗಳನ್ನು ಮುಂದುಮಾಡಿಕೊಂಡು ಆ ಸಮುದ್ರದಲ್ಲಿ ಮುಳುಗಬಹುದು.

ಧರ್ಮದ ಪುಸ್ತಕವೆಂದೊಡನೆ ಅದು ವೈರಾಗ್ಯದಿಂದ ಕೌಪೀನವನ್ನು ಹಾಕಿಸಿ ಮೂಗುಹಿಡಿಸಿ ಮೂಲೆಗೆ ಕೂಡಿಸುವದೆಂದು ಯಾರೂ ಬೆಚ್ಚಿಬೀಳಬಾರದು. ಒಂದು ಪಕ್ಷ ಹಾಗಾದರೆ ಅದು ನಮ್ಮ ಸುದೈವವೆ.

"ಕೌಪೀನವಂತಃ ಖಲು ಭಾಗ್ಯವಂತಃ"

ಎಂಬಂತೆ ನಮ್ಮ ದೇಶದಲ್ಲಿ ಕೌಪೀನವಂತರೇ ಭಾಗ್ಯವಂತರು. ಆದರೆ ನಮ್ಮ ಧರ್ಮವು ದುಡಿಯಲಾರದ ಹೇಡಿತನದಿಂದ ವೈರಾಗ್ಯವನ್ನು

ವೈಮೇಲೆ ಹಾಕಿಕೊಳ್ಳುವಂತೆ ಮಾಡುವದಿಲ್ಲ; ಉತ್ತರಕುಮಾರನಂಥವನನ್ನಾದರೂ ಜುಟ್ಟು ಹಿಡಿದೆಳೆತಂದು ಕಂಬಕ್ಕೆ ಕಟ್ಟಿ ಅವನ ಎದೆಯನ್ನು ಕಲ್ಲುಮಾಡಿ ದುಡಿಸಿ ಸ್ವಾರ್ಥದ ಮೇಲೆ ಮಾತ್ರ ವೈರಾಗ್ಯವನ್ನು ವಹಿಸುವಂತೆ ಮಾಡುವದು. ಅಷ್ಟೇ ಅಲ್ಲ; ಜಗತ್ತಿನಲ್ಲಿ ವ್ಯವಹಾರವನ್ನು ಮಾಡುವಾಗ ಸುಖದುಃಖಗಳನ್ನುಂಟಿಸಿಕೊಂಡು ಬಿಸಿಬಿಸಿಯಾದ ಕಣ್ಣೀರ ಕಾಲುವೆಯನ್ನು ಹರಿಸುವದನ್ನು ತಪ್ಪಿಸಿ, ಆಕಾಶವು ಕಡಿದುಕೊಂಡು ಬಿದ್ದರೂ ಗಾಬರಿಯಾಗದೆ ತನಗಿರುವ ಪರಮಾತ್ಮನ ಬೆಂಬಲದ ಆನಂದದಿಂದ ಸುರಿಯುವ ಸುಖಾಶ್ರುಗಳ ಪ್ರವಾಹದ ತಣ್ಪೇ ಇಡೀ ಜಗತ್ತನ್ನೇ ಆವರಿಸುವಂತೆ ಮಾಡುವ ಯುಕ್ತಿಯು ಇದರಲ್ಲಿ ಒಡೆದು ಕಾಣುತ್ತದೆ.

ನಮ್ಮ ದೇಶವು ಅಖಂಡಭೂಮಂಡಲದ ರಾಜ್ಯದ ಯೋಗಕ್ಷೇಮವನ್ನು ಹೊತ್ತಿರುವಂಥದ್ದು. "ಸರ್ವೇ ಲೋಕಾಃ ಸುಖಿನೋ ಭವಂತು" ಎನ್ನುವದು ನಮ್ಮ ಮೂಲಮಂತ್ರ. ಹೀಗಿರುವಾಗ ಪಶ್ಚಿಮದೇಶದ ಜನರು ಕೊಲ್ಲುವ ಚತುರತೆಯಿಂದ ತಮ್ಮ ಮೀಸೆಯನ್ನು ಹೊಸಹೊಸ ಬಗೆಯಲ್ಲಿ ಹುರಿಮಾಡುತ್ತ ಪವಿತ್ರಳಾದ ಭೂದೇವಿಗೆ ಅಪವಿತ್ರವಾದ ರಕ್ತಪಾನವನ್ನು ಮಾಡಿಸುತ್ತಿರುವರು. ಇದನ್ನು ನಿರ್ಮೂಲಮಾಡುವವರೆಗೂ ನಮ್ಮ ಜನ್ಮವು ಅಸಾರ್ಥಕವೆನಿಸಿರುವದು. ನಾವು ಈಗ ಧರ್ಮದಿಂದ ನಮ್ಮನ್ನು ಉದ್ಧಾರಮಾಡಿಕೊಂಡು ಆಮೇಲೆ ಪಾಶ್ಚಾತ್ಯರ ಕಣ್ಣಿಗೆ ಕೂಡ ಚುರುಕಾದ ಅಂಜನವನ್ನು ಹಾಕಿದ ಹೊರತು ಗತ್ಯಂತರವಿಲ್ಲ. ಜಗತ್ತಿನ ಸುರಕ್ಷಿತಸ್ಥಿತಿಯು ಧರ್ಮದಿಂದ. ನಮ್ಮದು ಧರ್ಮಭೂಮಿ; ಆದ್ದರಿಂದ ಧರ್ಮವನ್ನು ಅಲ್ಲಿಯತನಕ ವ್ಯಾಪಿಸುವಂತೆ ಮಾಡುವದು ನಮ್ಮ ಕೆಲಸ. ನಾವು ಈಗ ನಮ್ಮ ಕರ್ತವ್ಯವನ್ನು ಮರೆತು ಪಶ್ಚಿಮದ ಸಂಸ್ಕೃತಿಗೆ ಮೋಹಿಸಿ ಪಶ್ಚಿಮದ ಕಡೆಗೆ ಮುಖವನ್ನು ತಿರುಗಿಸಿದ್ದೇವೆ. ಪಶ್ಚಿಮವು ಅಸ್ತವಾಗುವ ದಿಕ್ಕು. ನಾವು ಪಶ್ಚಿಮವನ್ನೇ ನೋಡುತ್ತ ಕುಳಿತರೆ ದೇಶವು ಅಸ್ತವಾಗುವದನ್ನೇ ನೋಡಬೇಕಾದೀತು. ಆ ಅಮಂಗಲವನ್ನು ತಂದುಕೊಳ್ಳಬಾರದು. ಪಶ್ಚಿಮಕ್ಕೆ ಮುಖವನ್ನು ಮಾಡುವದು ನಮ್ಮ ಧರ್ಮಕ್ಕೆ ವಿರೋಧ. ಆದ್ದರಿಂದ ನಾವು ಪೂರ್ವಾಭಿಮುಖರಾಗಿಯೇ ನಮ್ಮ ಧರ್ಮವನ್ನು ಮುಂದುವರಿಸಬೇಕು. ನಾವು ಪಶ್ಚಿಮದ ಮೆರುಗಿಗೆ ಬೆರಗಾಗಿ

ನಮ್ಮ ಧರ್ಮವನ್ನು ಕಡೆಗಣಿಸಿದಂದಿನಿಂದ ನಮ್ಮ ಪೂರ್ವಿಕರ ವಿಷಯದಲ್ಲಿ ನಮಗೆ ತುಚ್ಛಬುದ್ಧಿಯುಂಟಾಗುತ್ತ ಬಂದಿದೆ. ನಾವು ಹೇಡಿಗಳ ಮಕ್ಕಳೆಂದುಕೊಂಡಿರುವವರೆಗೂ ಹೇಡಿತನವು ಹಣೆಯಲ್ಲಿ ಬರೆದದ್ದೆ. ಪೂರ್ವಿಕರ ಮುಖಕ್ಕೆ ಮಸಿಯನ್ನು ಬಳಿದು ತನ್ನ ಹೆಮ್ಮೆಯನ್ನು ಹೇಳಿಕೊಳ್ಳುವ ಪತಿತನಿಂದ ಒಂದು ಕೂದಲೆಳೆಯಷ್ಟು ಕೆಲಸವೂ ಆಗಲಾರದು. ನಾವು ಧರ್ಮದಲ್ಲಿ ಮುಂದುವರಿದ ಹೊರತು ನಮ್ಮ ಪೂರ್ವಿಕರ ಮಹತ್ತ್ವವು ನಮಗೆ ತಿಳಿಯುವದಿಲ್ಲ; ಮತ್ತು ನಮ್ಮಲ್ಲಿ ಯಾವ ಸಾಮರ್ಥ್ಯವೂ ಉಂಟಾಗುವದಿಲ್ಲ.

ಸ್ವರಾಜ್ಯದ ಚಾಂಚಲ್ಯ [?] ಬಲವಾಗಿರುವ ಈ ಕಾಲದಲ್ಲಿ ರಾಜನೀತಿವಿಶೇಷಗಳ ವಿಚಾರಗಳ ಕಡೆಗೆ ಲಕ್ಷ್ಯವನ್ನು ಕೊಡಬೇಕಾಗಿರುವಾಗ ಧರ್ಮಶಿಕ್ಷಣದ ಗಡಿಬಿಡಿಯೇಕೆಂದು ಕೆಲವರಿಗೆ ತೋರಬಹುದು. ಭೌತಿಕಸಾಮರ್ಥ್ಯದಿಂದ ರಾಜ್ಯವನ್ನು ಜಯಿಸುವದು ಈಗಲಂತು ನಮ್ಮ ಪಾಲಿಗೆ ದಕ್ಕುವ ಮಾತಲ್ಲ. ಹಿಂದೆ ದೊಡ್ಡದೊಡ್ಡ ರಾಜ್ಯಕ್ರಾಂತಿಗಳಾಗಿರುವಾಗಲೆಲ್ಲ ವಸಿಷ್ಠವಿಶ್ವಾಮಿತ್ರರಂಥ ಬ್ರಹ್ಮತೇಜೋಧನರೇ ಪ್ರಮುಖರಾಗಿದ್ದದ್ದನ್ನು ಅನುಕರಿಸಿದ ಹೊರತು ಈಗ ಗತ್ಯಂತರವಿಲ್ಲ. ಶ್ರೀರಾಮನು ರಾವಣನನ್ನು ಗೆಲ್ಲುವಾಗ ಸೂರ್ಯನನ್ನು ಉಪಾಸನೆಮಾಡಿ ಸಾಮರ್ಥ್ಯವನ್ನು ಪಡೆದ ವಿಚಾರವು ಆದಿತ್ಯಹೃದಯದಲ್ಲಿರುವದು. ಧರ್ಮರಾಜನು ಶ್ರೀಸಿದ್ಧಿವಿನಾಯಕನನ್ನು ಉಪಾಸನೆಮಾಡಿ ಸ್ವರಾಜ್ಯವನ್ನು ಪಡೆದುಕೊಂಡದ್ದು ಪ್ರಸಿದ್ಧವಾಗಿಯೇ ಇದೆ. ಈ ಪುರಾಣದ ಮಾತೊಂದು ಕಡೆ ಇರಲಿ. ಶ್ರೀವಿದ್ಯಾರಣ್ಯರು ತಮ್ಮ ತಪಃಪ್ರಭಾವದಿಂದಲೇ ಹಂಪೆಯಲ್ಲಿ ಕರ್ಣಾಟಕಸಿಂಹಾಸನವನ್ನು ಪ್ರತಿಷ್ಠೆಮಾಡಿದರು. ಶ್ರೀಶಿವಾಜಿಯೂ ಶ್ರೀಸಮರ್ಥರಾಮದಾಸರ ಬೆಂಬಲದಿಂದಲೇ ಮಹಾರಾಷ್ಟ್ರರಾಜ್ಯವನ್ನು ನೆಲೆಗೊಳಿಸಿದನು- ಹೀಗಿದ್ದರೂ ನಮ್ಮ ದೇಶದ ಜನರಲ್ಲಿ ದೇಶಾಭಿಮಾನವೆಂಬುದಿಲ್ಲವೆಂದು ಎಷ್ಟೋ ಜನರು ಕೂಗುತ್ತಿರುವರು. ನಮ್ಮ ದೇಶಾಭಿಮಾನವು ಧರ್ಮಾಭಿಮಾನದಲ್ಲಿ ಅಂತರ್ಗತವಾಗಿದ್ದು ಎದ್ದು ಕಾಣದಿರುವದೇ ಇದಕ್ಕೆ ಕಾರಣ. ನಮ್ಮ ಮುಖ್ಯಧ್ಯೇಯವು ಧರ್ಮ. ನಲರಾಮಯುಧಿಷ್ಠಿರರು ಧರ್ಮಕ್ಕಾಗಿ ದೇಶವನ್ನು ಕೂಡ ತೊರೆದಿದ್ದಾರೆ. ಆದ್ದ

ರಿಂದ ನಮಗೆ ಮೊದಲು ಧರ್ಮ; ಆಮೇಲೆ ದೇಶ. ದೇಶವು ಆ ಧರ್ಮದ ಸುಸ್ಥಿತಿಗೆ ಉಪಕರಣವು. ಆದ್ದರಿಂದ ನಮಗೆ ದೇಶವು ಧರ್ಮದಲ್ಲಿ ಅಂತರ್ಗತವು. ಧರ್ಮಾಭಿಮಾನದ ವಿಷಯವನ್ನು ತೆಗೆದುಕೊಂಡರೆ ನಮ್ಮ ಹೆಸರನ್ನು ಹೇಳಿ ಮೊದಲನೆಯ ಬಿಟ್ಟನ್ನು ಮಡಿಸಬೇಕು. ನಮ್ಮದರ ಜೊತೆಗೆ ಮಡಿಸುವದಕ್ಕೆ ಎರಡನೆಯದನ್ನು ಸಿಕ್ಕಲಾರದು. ಆ ಧರ್ಮಕ್ಕೆ ಉಪಹತಿ ಬಂದಾಗ ಬ್ರಹ್ಮತೇಜಸ್ಸಿನವರು ತಮ್ಮ ದರ್ಪದಿಂದ ಅರಸರನ್ನು ತಲಕ್ಕೆ ತುಳಿದು ಧರ್ಮಕ್ಕೆ ಉತ್ತೇಜನವನ್ನು ಕೊಡುವಂಥವರನ್ನು ಸಿಂಹಾಸನದ ಮೇಲಕ್ಕೆ ಹತ್ತಿಸುತ್ತಿದ್ದರು. ಇಂಥ ಸಂದರ್ಭಗಳಲ್ಲಿ ಕ್ಷಾತ್ರತೆಜಸ್ಸೂ ವೈಶ್ಯತೇಜಸ್ಸೂ ತನ್ನ ನೆರವನ್ನು ಕೊಟ್ಟಿರಬಹುದು. ಮುಖ್ಯಕಾರ್ಯವೆಲ್ಲಾ ಬ್ರಹ್ಮತೇಜಸ್ಸಿನದೇ ಹೀಗೆ ದೇಶಾಭಿಮಾನವು ಧರ್ಮಾಭಿಮಾನದ ಅಂತರ್ಗತವಾಗಿರುವದು. ಶ್ರೀಸಮರ್ಥರಾಮದಾಸರ ಉಪದೇಶವನ್ನು ನೋಡಿರಿ—

"ಹರಿಭಕ್ತಿಗೆಯ್ವುದೇ ಮೊದಲನೆಯ ಕೆಲಸ ।
ನೆರೆ ದೇಶಸೇವೆ ತಾನೆರಡನೆಯ ಕೆಲಸ ॥"

ದಾಸಬೋಧ ೧೧—೫ ೪

ಇದೇ ಗ್ರಂಥದಲ್ಲಿಯೇ ಕೊನೆಯಲ್ಲಿ ಮನುಷ್ಯತ್ವದ ಸಾಫಲ್ಯವೆಂಬ ವಿಷಯದ ಕೆಳಗೆ ಕೊಟ್ಟಿರುವ ಶ್ರೀಸರ್ಪಭೂಷಣಶಿವಯೋಗಿಗಳ ಎರಡನೇ ನುಡಿಯಲ್ಲಿಯೂ ಈ ಅಭಿಪ್ರಾಯವು ವ್ಯಕ್ತವಾಗಿದೆ. ಆದ್ದರಿಂದ ಧರ್ಮದಿಂದ ಲಭ್ಯವಾಗುವಂಥ ಬ್ರಹ್ಮತೇಜಸ್ಸನ್ನು ಮೆಯ್ಗೂಡಿಸಿಕೊಳ್ಳಬೇಕು. ಅದಕ್ಕೆ ಉಪಕ್ರಾಂತ್ತಕವಾಗಿ ಕ್ಷಾತ್ರತೇಜಸ್ಸೂ ಅಥವಾ ಅದರ ಅಭಾವದಲ್ಲಿ ವೈಶ್ಯತೇಜಸ್ಸೂ ನೆರವಾಗಬಹುದು. ಹಾಗಲ್ಲದೆ ಕ್ಷಾತ್ರತೇಜಸ್ಸನ್ನೋ, ವೈಶ್ಯತೇಜಸ್ಸನ್ನೋ ಅಥವಾ ಇನ್ನೊಂದನ್ನೋ ಮುಖ್ಯವಾಗಿಟ್ಟುಕೊಂಡು ಹೋರಾಡುವದಕ್ಕೆ ಹೋದರೆ ನಮಗೆ ಜಯದ ಆಸೆಯೇ ಇಲ್ಲ. ಏಕೆಂದರೆ ಇತರಜನಾಂಗದವರು ಆ ವಿಷಯಗಳಲ್ಲಿ ದಿನದಿನಕ್ಕೆ ನಾಗಾಲೋಟದಿಂದ ಓಡುತ್ತಿದ್ದಾರೆ. ಅವರನ್ನು ನೋಡಿ ನಾವು 'ನರಿಯನ್ನು ನೋಡಿ ಕೆಂಬಣ್ಣತವು ಪುಕ್ಕವನ್ನು ತರಕೊಂಡಂತೆ.' ಬ್ರಹ್ಮತೇಜಸ್ಸನ್ನು ಬಿಟ್ಟು ಉಳಿದ ತೇಜಸ್ಸುಗಳಿಂದ ಕುಂಟಕತ್ತೆಯಂತೆ ಹಿಂಬಾಲಿಸಿ

ಅವರನ್ನು ಹಿಂದಕ್ಕೆ ಹಾಕುವದು ಎಂದಿಗೆ ಸಾಧ್ಯವಾದೀತು! ಒಂದುಪಕ್ಷೆ ಸಾಧ್ಯವಾದರೂ ಅದರಿಂದ ಲೋಕದ ಶಾಂತಿಯಾಗುವದಿಲ್ಲವಾದ್ದರಿಂದ ಆ ಜಯವು ಹಿಂದುಸ್ಥಾನಕ್ಕೆ ಆದ ಜಯವೇ ಆಗುವದಿಲ್ಲ. ಧರ್ಮದಿಂದ ಪಡೆದ ಜಯವೇ ಹಿಂದುಸ್ಥಾನದ ಜಯವು. ಮೂರುಲೋಕವೂ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವಂಥ ಧರ್ಮದಿಂದ ಜಯಿಸದೆ ಬರೀ ವ್ಯಾವಹಾರಿಕವಾದ ಉಪಾಯಕ್ಕೆ ಶರಣೆನ್ನುವದರಲ್ಲೇನು ಹುರುಳಿದೆ! ಬರೀ ಪ್ರಯತ್ನಗಳು ಸೊನ್ನೆಗಳಂತೆ ಯಾವ ಬೆಲೆಯೂ ಇಲ್ಲದೆ ಹೊರೆಗಳಾಗಿರುವವು. ದೈವಬಲವು ಒಂದು ಸಂಖ್ಯೆಯಂತೆ ಬೆಲೆಯುಳ್ಳದ್ದಾಗಿರುವದು. ಅದರ ಬಲದಿಂದ ಮಾಡುವ ಪ್ರಯತ್ನಗಳು ಒಂದು ಸಂಖ್ಯೆಯ ಮುಂದಿನ ಸೊನ್ನೆಗಳಂತೆ ಹೆಚ್ಚಿನ ಬೆಲೆಯನ್ನು ಪಡೆದು ಕಾಣುವವು. ಅಥವಾ

" ಸಾಮರ್ಥ್ಯ ಆಹೆ ಚಳವಳೀಚೆ
ಜೋ ಜೇ ಕರೀಲ ತಯಾಚೆ "

ಎಂದು ಶ್ರೀಸಮರ್ಥರು ಹೇಳಿರುವ ಪೂರ್ವಾರ್ಧದಂತೆ ಪ್ರತಿಯೊಬ್ಬನ ಪ್ರಯತ್ನಕ್ಕೂ ಸಾಮರ್ಥ್ಯವಿರುವದೆಂದೇ ಒಪ್ಪಿಕೊಳ್ಳೋಣ. ಆ ಸಾಮರ್ಥ್ಯವು ಫಲಕಾರಿಯಾಗುವದು ಯಾವಾಗ? ಅದನ್ನು ಉತ್ತರಾರ್ಧವು ಹೇಳುತ್ತದೆ ನೋಡಿರಿ—

" ಪರಂತು ತೇಥೇ ಭಗವಂತಾಚೆ ಅಧಿಷ್ಠಾನ ಪಾಹಿಜೇ "

ಎಂದರೆ ಆ ಪ್ರಯತ್ನಕ್ಕೆ ಪರಮಾತ್ಮನ ಬೆಂಬಲವು ಬೇಕು. ಪ್ರಯತ್ನವೆಂಬ ಶರೀರಕ್ಕೆ ಅದು ಜೀವಕಲೆ. ಜೀವಕಲೆಯಿಲ್ಲದ ಜೀವವೇನು ಮಾಡೀತು!

" ಶ್ರಮಸ್ತಸ್ಯ ಶ್ರಮಫಲಃ "

ಎಂಬಂತೆ ಅವನ ಶ್ರಮೆಗೆ ಶ್ರಮೆಯು ಮಾತ್ರವೇ ಫಲವಾಗುವದು. ವ್ಯಾವಹಾರಿಕವಾದ ಉಪಾಯವು ಪ್ರಬಲವಾಗಿದ್ದರೂ ಕೂಡ ಎಷ್ಟೋ ವೇಳೆ ಜಯವು ತಲೆಕೆಳಗಾಗುವದು. ಇನ್ನು ಅದು ಎಷ್ಟೇ ದುರ್ಬಲವಾಗಿದ್ದರೂ ದೈವಬಲವೊಂದು ದೊರೆಯಿತೆಂದರೆ ಅದಕ್ಕೆ ಜಯವು ದೊರೆಯುವದು ಮಾತ್ರ ತಪ್ಪಿದ್ದಲ್ಲ. ಆದ್ದರಿಂದ ದೈವಬಲಕ್ಕೆ ಶರಣುಹೋಗಬೇಕು. ತನ್ನ ಮೊಟ್ಟೆಗಳನ್ನು ಕೊಚ್ಚಿಕೊಂಡು ಹೋದ ಸಮುದ್ರವನ್ನು ಬತ್ತಿಸಿಬಿಡತ್ತೇನು

ನೆಂದು ಸಂಕಲ್ಪವನ್ನು ಮಾಡಿದ ಟಿಟ್ಟಿಭದ ಉಪಾಯವು ಎಷ್ಟೋ ದುರ್ಬಲವಾಗಿದ್ದರೂ ಅದಕ್ಕೆ ಗರುಡನ ಸಹಾಯವು ದೊರೆತದ್ದರಿಂದ ಅದಕ್ಕೆ ಜಯವು ದೊರೆಯಿತು. ಗರುಡನ ಸಹಾಯದಂಥ ದೇವರ ಒಲಿಮೆಯನ್ನು ಪಡೆಯುವ ಸಾಧನವು ಧರ್ಮ. ಧರ್ಮದಿಂದ ಪಡೆಯುವ ಆ ಜಯವಾದರೂ ಧರ್ಮದ ಸುಸ್ಥಿತಿಗಾಗಿ ಪಡೆದದ್ದಾಗಬೇಕೇ ಹೊರತು ಪ್ರಾಪಂಚಿಕಸುಖಕ್ಕಾಗಿ ಪಡೆದದ್ದಾಗಬಾರದು. ಪ್ರಾಪಂಚಿಕಸುಖವು ಬಾಳೆಯ ಎಲೆಯಂತೆ; ಧರ್ಮವು ಬಾಳೆಯ ಹಣ್ಣಿನಂತೆ; ಬಾಳೆಯ ಹಣ್ಣಿಗಾಗಿ ಬಾಳೇಮರವನ್ನು ಬೆಳೆಸಿದರೆ ಬಾಳೆಯ ಎಲೆಯು ದೊರತೇ ದೊರೆಯುವಂತೆ ಧರ್ಮಕ್ಕಾಗಿ ಸ್ವರಾಜ್ಯವನ್ನು ಪಡೆದರೆ ಅದರಲ್ಲಿ ಪ್ರಾಪಂಚಿಕಸುಖವು ಅಂತರ್ಗರ್ಭಿತವಾಗಿದ್ದೇ ಇರುವದು. ಎಲೆಯನ್ನೇ ಮುಖ್ಯಪ್ರಯೋಜನವಾಗಿ ಭಾವಿಸುವದು ಹೇಗೆ ಅವಿವೇಕವೋ ಒಣದೇಶವನ್ನೇ ಮುಖ್ಯಪ್ರಯೋಜನವಾಗಿ ಭಾವಿಸುವದು ಹಾಗೆಯೇ ಅವಿವೇಕವು. ದೇಶಾಭಿಮಾನವನ್ನು ಹೊಂದೋಣ; ಆದರೆ ಅದು ಧರ್ಮಾಭಿಮಾನಕ್ಕೆ ಅಂಗವಾಗಿರಲಿ. ಧ್ಯೇಯವನ್ನು ಹೆಚ್ಚಿಸಬೇಕೇ ಹೊರತು ಇಳಿಸಬಾರದು. ಮನುಷ್ಯನು ಪಡೆಯಬೇಕಾದ ಅಖಂಡಶಾಂತಿಯು ಬರೀ ಸ್ವರಾಜ್ಯದಿಂದ ಸಿಕ್ಕುವದಿಲ್ಲ. ಈಗ ಸ್ವರಾಜ್ಯವನ್ನನುಭವಿಸುತ್ತಿದ್ದರೂ ತಳಮಳದಿಂದ ಹೊಯ್ದಾಡುತ್ತಿರುವ ಪಶ್ಚಿಮದೇಶಗಳೇ ಇದಕ್ಕೆ ಸಾಕ್ಷಿ. ಆ ಶಾಂತಿಯು ಸ್ವರಾಜ್ಯದಿಂದ ಕೂಡಿದ ಧರ್ಮದಿಂದ ಮಾತ್ರ ದೊರೆಯುವದು. ಆದ್ದರಿಂದಲೂ ಧರ್ಮಶಿಕ್ಷಣವು ಅಗತ್ಯವು.

ಆರ್ಯಧರ್ಮದಲ್ಲಿ ದ್ವೈತಾದ್ವೈತ ಮೊದಲಾದ ಅನೇಕ ಭೇದಗಳಿದ್ದರೂ ಇಲ್ಲಿ ಅವುಗಳ ಯಾವ ವಿಶೇಷಲಕ್ಷಣಕ್ಕೂ ಅವಕಾಶವನ್ನು ಕೊಡದೆ ಅವುಗಳನ್ನು ಆದರದರ ಅಭಿರುಚಿಯುಳ್ಳವರು ಒಳಹೊಕ್ಕು ನೋಡುವಂತೆ ಮೀಸಲಾಗಿಟ್ಟು ಇಲ್ಲಿ ಸರ್ವಸಾಧಾರಣವಾದ ವಿಚಾರಗಳನ್ನೇ ನನಗೆ ತಿಳಿದ ಮಟ್ಟಿಗೆ ಆರಿಸಿ ಬರೆದಿದ್ದೇನೆ. ಎಲ್ಲಿಯಾದರೂ ಅಂಥ ಒಂದುಪಂಥದ ವಿಶೇಷಲಕ್ಷಣದ ವಾಸನೆಯು ಯಾವದಾದರೊಂದು ಮೂಲೆಯಲ್ಲಿ ಬಂದರೆ ಅದು ನನ್ನ ಮಾನುಷಸ್ವಭಾವದ ನ್ಯೂನತೆಯೆಂದು ತಿಳಿದು ವಾಚಕರು ದಯವಿಟ್ಟು ಸಹಿಸಬೇಕು. ಇದಲ್ಲದೆ ಯಾವದೊಂದು

ವರ್ಣಕ್ಕೆ ಸಂಬಂಧಪಟ್ಟ ವಿಶೇಷಧರ್ಮಕ್ಕೂ ಇಲ್ಲಿ ಕೈ ಹಾಕಿಲ್ಲ ಎಲ್ಲ ವರ್ಣಾಶ್ರಮದವರಿಗೂ ಸಾಮಾನ್ಯವಾದ ವಿಚಾರಗಳನ್ನೇ ಆರಿಸಿಟ್ಟಿದ್ದೇನೆ. ಬೇರೆ ಬೇರೆ ವರ್ಣದವರು ತಮ್ಮ ತಮ್ಮ ವರ್ಣದ ಧರ್ಮಗಳನ್ನು ತಿಳಿದುಕೊಳ್ಳುವದಕ್ಕೆ ಬೇರೆ ಪ್ರಯತ್ನಮಾಡಿಕೊಳ್ಳಬೇಕು. ಈ ಗ್ರಂಥವು ಅದರಲ್ಲಿ ಆಸಕ್ತಿಯನ್ನು ಮಾತ್ರ ಉಂಟುಮಾಡಲೆಂದೇ ನನ್ನ ಇಚ್ಛೆ. ಆರ್ಯಧರ್ಮವು ಸರ್ವಧರ್ಮಗಳನ್ನೂ ಅಂತರ್ಭೂತವಾಗಿ ಮಾಡಿಕೊಳ್ಳುವಂಥ ಉದಾರಹೃದಯದ್ದೆಂದು ಶ್ರೀಸ್ವಾಮಿ ವಿವೇಕಾನಂದರು ಚಿಕಾಗೋ ಧರ್ಮಪರಿಷತ್ತಿನಲ್ಲಿ ಡಂಗುರವನ್ನು ಹೊಡೆದ ಅರ್ಥವು ಇದರಲ್ಲಿ ರೂಪುಗೊಂಡಿರುವಂತೆ ಈ ಗ್ರಂಥದಲ್ಲಿರುವ ವಿಚಾರಗಳು ಸರ್ವಧರ್ಮಗಳಿಗೂ ಅನುಕರಣೀಯಗಳಾಗಬಹುದಾಗಿರುವ ಸ್ವರೂಪವನ್ನು ಪಡೆದಿರುವವೆನಿಸಿದರೆ ಆಗ ನನ್ನ ಶ್ರಮೆಯು ಸಾರ್ಥಕವಾಯಿತೆಂದು ತಿಳಿಯುತ್ತೇನೆ,

ಇದು ವಿದ್ಯಾರ್ಥಿಗಳಿಗಾಗಿ ಬರೆದದ್ದೆಂಬ ಮಾತಿನಿಂದ ಶಾಲೆಗೆ ಹೋಗಿಬರತಕ್ಕವರೇ ಇದಕ್ಕೆ ಅಧಿಕಾರಿಗಳೆಂದು ತಿಳಿಯಬಾರದು; ಶಾಲೆಗೆ ಹೋಗುವ ಅಥವಾ ಹೋಗದಿರುವ ಗಂಡಸರು, ಹೆಂಗಸರು, ಹುಡುಗರು, ಹುಡುಗಿಯರು ಎಲ್ಲರೂ ಓದತಕ್ಕದ್ದಾಗಿದೆ. ಧರ್ಮಸ್ವರೂಪವನ್ನು ನಿಜವಾಗಿ ತಿಳಿದಿರುವವರೂ ಕೂಡ ಇದನ್ನು ಓದಿದರೆ ತಮ್ಮ ಪೂರ್ವದ ಅನುಭವಗಳೆಲ್ಲಾ ನೆನಪಾಗಿ ತಮ್ಮ ಧರ್ಮಜ್ಞಾನವು ಮತ್ತಷ್ಟು ಹುರಿಗೂಡುವದು. ಹೀಗೆ ಧಾರ್ಮಿಕವಿಚಾರಗಳನ್ನು ಬೆಳೆಸಿಕೊಳ್ಳಬೇಕಲ್ಲದೆ ನಮ್ಮಲ್ಲಿ ಬರೀ ವಿಚಾರಕ್ಕಿಂತ ಆಚಾರಕ್ಕೆ ಪ್ರಾಶಸ್ತ್ಯವು ಹೆಚ್ಚಾದ್ದರಿಂದ ಆದಷ್ಟು ಇದರ ಅಭಿಪ್ರಾಯಗಳನ್ನೆಲ್ಲಾ ಕೃತಿರೂಪಕ್ಕೆ ತರಬೇಕೆಂಬದನ್ನು ಮರೆಯಬಾರದೆಂದು ಬೇಡುತ್ತೇನೆ. ಬರೀ ಇದೊಂದು ಗ್ರಂಥದಿಂದಲೇ ಆರ್ಯಧರ್ಮವೆಲ್ಲ ಮುಗಿಯಿತೆಂದೂ ತಿಳಿಯಬಾರದು. ಇದೊಂದು ದೀಪ ಅಥವಾ ಪ್ರದೀಪ–ಎಂದರೆ ದೊಡ್ಡದೀಪ. ಆದ್ದರಿಂದ ಇದು ಈಗ ಧರ್ಮದ ವಿಚಾರದಲ್ಲಿ ಕತ್ತಲೆಯಾಗಿರುವ ಹೃದಯದ ಪರಿಸ್ಥಿತಿಗೆ ಮಾತ್ರ ಹೆಚ್ಚು ಸಹಕಾರಿಯು. ರಾತ್ರಿಗಿಂತಲೂ ಹಗಲು ಊರಿನ ವಿದ್ಯಮಾನಗಳು ಹೆಚ್ಚು ಸ್ಪಷ್ಟವಾಗಿ ಕಾಣುವಂತೆ ಈ ಗ್ರಂಥದ ಸಹಾಯದಿಂದ ರಾತ್ರಿಯು

ಕತ್ತಲೆಯನ್ನು ಹೋಗಲಾಡಿಸಿಕೊಂಡರೆ ಆಮೇಲೆ ಜ್ಞಾನಸೂರ್ಯನು ಉದಿಸಿ ಆರ್ಯಧರ್ಮದ ವಿಸ್ತೃತವೈಭವವನ್ನು ಬೆಳಗುವನು.

ಈ ಗ್ರಂಥವನ್ನು ಬರೆಯುವಾಗ ಅನೇಕಧರ್ಮವಿಚಾರಗಳು ನನ್ನ ಒಳಹೊಕ್ಕು ಹೊಟ್ಟೆ ತುಂಬಿ ಮೇಲಕ್ಕೆ ಹಾಕಿದಂತಾಗಿ ನನಗೊಂದು ಬಗೆಯ ಅಪೂರ್ವಶಾಂತಿಯುಂಟಾಗಿರುವದನ್ನು ನೋಡಿದರೆ ಇದರ ಪರಿಣಾಮವು ವಾಚಕರ ಮೇಲೆಯೂ ಇದೇ ರೀತಿಯಲ್ಲಿ ಆಗಬಹುದೆಂಬ ನಂಬಿಕೆಯುಂಟಾಗುತ್ತದೆ. ಹೀಗೆ ನನಗೆ ತೃಪ್ತಿಯಾಯಿತೆಂಬ ಸ್ವಾರ್ಥದಿಂದ ನಾನು ಶ್ರೀಯುತ ದೇಸಾಯರಿಗೆ ಕೃತಜ್ಞನಾಗಿರಬೇಕೆನಿಸುವದಾದರೂ ಈ ಗ್ರಂಥಲೇಖನವು ನನಗಿಂತ ಹೆಚ್ಚು ತಿರುಳುಳ್ಳವರ ಲೇಖನಿಯಿಂದ ಸಾಗಿದ್ದರೆ ಹೆಚ್ಚು ಪರಿಣಾಮಕಾರಕವಾಗುತ್ತಿತ್ತಾದ್ದರಿಂದ ಅದಕ್ಕೆ ಅವಕಾಶವಿಲ್ಲದಂತೆ ನಾನು ಇದಕ್ಕೆ ಒಪ್ಪಿದ್ದಕ್ಕೆ ನನಗೆ ಸಂಕೋಚವಾಗುತ್ತದೆ. ಆದರೆ ಇದು ಯಾವ ಗ್ರಂಥವೂ ಇಲ್ಲದ ಕಾಲದಲ್ಲಿ ಸೇವಾರೂಪವಾಗಿ ಬರೆದದ್ದೆಂಬ ದೃಷ್ಟಿಯಿಂದ ತಾವೆಲ್ಲರೂ ಇದಕ್ಕೆ ಆದರಪೂರ್ವಕವಾಗಿ ಆಶ್ರಯನ್ನು ಕೊಡುವಿರೆಂದು ನಿರೀಕ್ಷಿಸುತ್ತೇನೆ.

ಈ ಗ್ರಂಥವನ್ನು ಬರೆಯುವಾಗ ನಾನು ವೇ|| ಶಾ|| ಸಂ|| ತರ್ಕವಿದ್ವಾನ್, ವಿದ್ಯಾಲಂಕಾರ ನಾಗೇಶಶಾಸ್ತ್ರಿಗಳು, ಉಪ್ಪಿನಬೆಟಗೇರಿ--ಇವರಿಂದ ಅನೇಕವೇಳೆ ಅನೇಕವಿಚಾರಗಳ ಸಹಾಯವನ್ನು ಪಡೆದಿರುತ್ತೇನೆ. ವೇ|| ಶಾ|| ಸಂ|| ಕೂರ್ಮಾಚಾರ್ಯ, ಗಲಗಲಿ-ಇವರಿಂದ ಅನೇಕ ಕಥೆಗಳನ್ನು ಸಂಗ್ರಹಿಸಿದ್ದೇನೆ. ರಾಜಯೋಗದಲ್ಲಿ ಶ್ರೀಸ್ವಾಮಿ ವಿವೇಕಾನಂದರ ಅಭಿಪ್ರಾಯಮ್ನು ಹೇಳುವಾಗ ನನ್ನ ಮಿತ್ರರಾದ ಮ|| ವೈ. ಸುಬ್ಬರಾಯರ ಭಾಷಾಂತರದ ಭಾಷೆಯನ್ನೇ ಬಹುಮಟ್ಟಿಗೆ ಅಲ್ಲಲ್ಲಿ ಇಳಿಸಿಕೊಂಡಿದ್ದೇನೆ. ನನ್ನ ಮಿತ್ರರಾದ ಶ್ರೀಯುತ ಸುರೇಂದ್ರ ಶಿವರಾವ ದೇಸಾಯಿ, ಎಂ. ಎ-ಇವರಂತೂ ನನ್ನ ಈ ಪೂರ್ಣಗ್ರಂಥದ ಕೈಬರಹದ ಪ್ರತಿಯನ್ನು ಆಮೂಲಾಗ್ರವಾಗಿ ಓದಿ ನೋಡಿ ಅಲ್ಲಲ್ಲಿಗೆ ಉಪಯುಕ್ತವಾದ ಅನೇಕಸೂಚನೆಗಳನ್ನು ಕೊಟ್ಟಿರುತ್ತಾರೆ. ಇವರೆಲ್ಲರಿಗೆ ಮಾತ್ರವಲ್ಲದೆ ಈ ಗ್ರಂಥದಲ್ಲಿ ನಾನು ಕೊಟ್ಟಿರುವ ಆಧಾರವಾಕ್ಯಗಳ ಉತ್ಪಾದ

ಕರಾದ ಸರ್ವರಿಗೂ ನಾನು ಕೃತಜ್ಞನಾಗಿದ್ದೇನೆ. ಇನ್ನು ನಡೆಯುವವನು ಎಡವುವನೆಂಬಂತೆ ಪ್ರಮಾದದಿಂದ ಏನಾದರೂ ತಪ್ಪುಗಳು ಬಿದ್ದಿರಬಹುದು. ಅಭಿಜ್ಞರು ದಯವಿಟ್ಟು ತಿಳಿಸಿದರೆ ಕೃತಜ್ಞತೆಯೊಡನೆ ತಿದ್ದಿಕೊಳ್ಳುತ್ತೇನೆ. ಈ ಧಾರ್ಮಿಕವಿಚಾರಗಳ ಸಂಬಂಧದಿಂದಾದ ನಮ್ಮ ನಿಮ್ಮ ಮೈತ್ರಿಯು ನಮ್ಮುಭಯರಿಗೂ ಶ್ರೇಯಸ್ಕರವಾಗಿ ಶಾಂತಿದಾಯಕವಾಗಿ ಚಿರಜೀವಿಯಾಗಲೆಂದು ದೇವರನ್ನು ಪ್ರಾರ್ಥಿಸಿ ಇಲ್ಲಿಗೆ ವಿರಮಿಸುತ್ತೇನೆ.

ರಕ್ತಾಕ್ಷಿ.
ಭಾದ್ರಪದ ಶು ೯, ಶನಿವಾರ

ಹೊಸಕೆರೆ ಚಿದಂಬರಯ್ಯ.

# ಶುದ್ಧಿ ಪತ್ರ.



ಓದುವ ಭರದಲ್ಲಿಯೇ ವಾಚಕರು ತಾವೇ ಅಲ್ಲಲ್ಲಿಗೆ ಸಮಯಾನುಸಾರವಾಗಿ ತಿದ್ದಿಕೊಳ್ಳಬಹುದಾದ ಸಣ್ಣಪುಟ್ಟ ತಪ್ಪುಗಳನ್ನು ಬಿಟ್ಟು ಅರ್ಥಕ್ಕೆ ಹೊಂದದಂತೆ ಆಗಿರುವ ಕೆಲವು ಸಂದರ್ಭಗಳನ್ನು ಆರಿಸಿ ಇಲ್ಲಿ ಅವುಗಳನ್ನು ಶುದ್ಧಿಗೊಳಿಸಿರುವೆವು. ಓದುವವರು ಈ ಭಾಗಗಳನ್ನು ಮುಂದಾಗಿ ಸರಿಮಾಡಿಕೊಳ್ಳಬೇಕೆಂದು ಬೇಡುತ್ತೇವೆ.

| ಪುಟ. | ಸಾಲು. | ಅಶುದ್ಧ. | ಶುದ್ಧ. |
|---|---|---|---|
| ೩೦೨ | ೫ | ಅಪರಿಗ್ರಹ ಎಂಬ ಶಬ್ದದ ಮುಂದೆ–"ಈ ಶಬ್ದ | |
| .... | .... | ಗಳಿಂದ ಸೂಚಿತವಾಗುವ ಹಿಂಸೆ, ಸುಳ್ಳು, ಕಳವು, | |
| .... | .... | ವಿಷಯಾಸಕ್ತಿ, ಪರಿಗ್ರಹ ಎಂಬಿವುಗಳನ್ನು ನಿರ್ಮೂ | |
| .... | .... | ಲಮಾಡುವ ಅಹಿಂಸೆ ಮೊದಲಾದ"ಎಂದು ಸೇರಿ | |
| .... | .... | ಸಿಕೊಳ್ಳಬೇಕು. | |
| ೩೨೧ | ೯-೧೦ | ತೆಗೆದುಕೊಳ್ಳದಿರುವದೇ | ತೆಗೆದುಕೊಳ್ಳುವದೇ |
| ೪೦೮ | ೧೨ | ಯುಂತೆ | ಯುಲ್ಲ. |
| ೪೦೮ | ೧೩ | ಯುಲ್ಲ. | ಯುಂತೆ |
| ೪೧೨ | ೧೩ | ಆಭ್ಯಾಸವೈರಾಗ್ಯ | ಅಭ್ಯಾಸವೈರಾಗ್ಯ |
| ೪೪೪ | ೧೨ | ಮಹಾಕವಿಭವಭೂತಿಯು— ಎಂಬ ಮಾತನ್ನು ಬಿಟ್ಟುಬಿಡಬೇಕು. | |
| ೪೪೪ | ೧೨-೧೩ | ಉತ್ತರರಾಮಚರಿತ್ರೆಯು | ವಿಕ್ರಮೋರ್ವಶೀಯದ |
| ೫೦೫ | ೮ | ಅನಭಿಷ್ವಂಗ ಎಂಬ ಶಬ್ದದ ಮುಂದೆ– 'ಅಭಿ | |
| .... | .... | ಷ್ವಂಗವಿಲ್ಲದಿರುವದು. ಅಭಿಷ್ವಂಗವೆಂದರೆ'ಎಂದು | |
| .... | .... | ಸೇರಿಸಿಕೊಳ್ಳಬೇಕು. | |
| ೫೦೮ | ೩. | ಮುಚ್ಚಿಲ್ಲ | ಮುಚ್ಚಿ |

## ಈ ಗ್ರಂಥಕರ್ತರ ಇತರ ಗ್ರಂಥಗಳು.

### ಶಾಲೋಪಯೋಗಿಪುಸ್ತಕಗಳು.

ಗಣಿತಾಬ್ಧಿಭಾಸ್ಕರ, ಚರಿತ್ರಚಿಂತಾಮಣಿ, ಉಪಾಧ್ಯಾಯರ ಯೋಗ್ಯತೆಗಳು, ಮನಶ್ಶಿಕ್ಷಣ, ಬೋಧನಕ್ರಮ, ಬೋಧನೆಯ ಸ್ವಭಾವ.

### ಪದ್ಯಕಾವ್ಯಗಳು.

ನೀತಿಸಾರ, ಸ್ತ್ರೀಧರ್ಮಸಂಗ್ರಹ, ಭಕ್ತಿದೀಪಿಕೆ, ಶಂಕರಸ್ತೋತ್ರಮಾಲೆ, ಪರಮಾತ್ಮಸ್ತುತಿ, ಗುರುಸ್ತುತಿಕುಸುಮಾಂಜಲಿ, ಭಕ್ತಿಗೀತಾವಳಿ, ಮನಸ್ಸಿಗುಪದೇಶ, ಮಾರುತಿಯ ಚರಿತ್ರೆ, ಶ್ರೀವಿದ್ಯಾರಣ್ಯಕಾವ್ಯ.

### ನಾಟಕಗಳು.

ಸುಶೀಲಾಪರಿಣಯ, ಕೃಷ್ಣಮಹಿಮ್ನರಿ, ಸುಧರ್ಮಪ್ರಭಾವ, ಕಲಿಸಂತರಣ, ನವೀನಕಲ್ಪ.

### ಕೀರ್ತನಗಳು.

ಗಣಪತಿಸ್ವಯಂವರ, ಅನಸೂಯಾಖ್ಯಾನ, ಧ್ರುವಾಖ್ಯಾನ, ಉತ್ತರಗೋಗ್ರಹಣ, ವಿದ್ಯಾರಣ್ಯಾಖ್ಯಾನ.

### ಕಾದಂಬರಿಗಳು.

ಕಾಲಾಂತಕ, ಮೈತ್ರೇಯಿ, ವಾಲ್ಮೀಕಿಜಯ.

### ಇತರವಚನಗ್ರಂಥಗಳು.

ಗುಣನಿರೂಪಣೆ, ಶಾರದಾನಾಥ, ಮಾಧವರಾವ ಸಿಂಧ್ಯ, ವಸ್ತುಪ್ರದರ್ಶನ, ಶಿಂಕಲ ಕಥಾಮೃತ, ರಾಜಭಕ್ತಿ, ಅಧ್ಯಾತ್ಮಸಾರ, ಸೂಕ್ತಿಮಾಲೆ, ಭಗವದ್ಗೀತಾಸಾರವಿಚಾರ, ಗೀತಾರ್ಥವಿವರಣೆ, ಜೀವನ್ಮುಕ್ತಿವಿವೇಕ, ಈಶಸಾರ, ವೇದಾಂತವಿಚಾರದ ಗುಟ್ಟು, ಬ್ರಹ್ಮಾನಂದರು, ರಾಮನಾಮದ ಮಹಿಮೆ, ಭರತನ ಬಂಧುಪ್ರೇಮ, ರಾಸಕ್ರೀಡೆ, ಭರತಖಂಡದ ಜೀವಜ್ಯೋತಿಗಳು, ಝಾಂಸಿ ಲಕ್ಷ್ಮೀಬಾಯಿ, ಆತ್ಮಶಕ್ತಿಯ ತೇಜಸ್ಸು.

ಕರ್ಣಾಟಕ ಸಿಂಹಾಸನಪ್ರತಿಷ್ಠಾಪನಾಚಾರ್ಯರಾದ



ಜಗದ್ಗುರು ಶ್ರೀವಿದ್ಯಾರಣ್ಯಸ್ವಾಮಿಗಳು.

ಣಾಚಾರ್ಯರು ] [ ವಿಜಯನಗರದ ರಾಜ

S. K. P. D.

॥ ಶ್ರೀಗುರುಭ್ಯೋ ನಮಃ ॥

# ಆರ್ಯಧರ್ಮಪ್ರದೀಪ.

“ धर्मो विश्वस्य जगतः प्रतिष्ठा ”

## ಮೊದಲನೇ ಕಿರಣ.

## ದೇವರು.

### ಮನುಷ್ಯತ್ವದ ಮುಖ್ಯಲಕ್ಷಣ.

ಮನುಷ್ಯನಾಗಿ ಹುಟ್ಟಿದರೂ ವಿದ್ಯೆಯನ್ನು ಕಲಿಯದೆ ಹೋದರೆ ಅವನು ಪಶುವಿಗೆ ಸಮಾನನೆಂದು ನೀತಿಶಾಸ್ತ್ರಕಾರರು “ವಿದ್ಯಾವಿಹೀನಃ ಪಶುಃ” ಎಂಬ ವಾಕ್ಯದಿಂದ ಹೇಳಿರುತ್ತಾರೆ. ವಿದ್ಯೆಯ ವಿಚಾರವನ್ನು ಬಿಟ್ಟರೆ ಮನುಷ್ಯನಿಗೂ ಪಶುಗಳಿಗೂ ಭೇದವೇನೂ ತೋರುವದಿಲ್ಲ. ಏಕೆಂದರೆ ಉಣ್ಣುವುದು, ಮಲಗುವುದು, ಸಂತತಿಯನ್ನು ಬೆಳೆಸುವುದು, ಮುಂತಾದ್ದು ಮನುಷ್ಯರಲ್ಲಿಯೂ ಕಾಣುತ್ತದೆ; ಪಶುಗಳಲ್ಲಿಯೂ ಕಾಣುತ್ತದೆ. ಎಷ್ಟೋ ಸಂದರ್ಭಗಳಲ್ಲಿ ಪಶುಗಳಲ್ಲಿ ಮನುಷ್ಯನಿಗಿಂತ ಒಂದೊಂದು ಬಗೆಯ ಹೆಚ್ಚುಗಾರಿಕೆ ಕಂಡರೂ—ಉದಾಹರಣೆಗೆ ಸಾಮರ್ಥ್ಯದಲ್ಲಿ ಸಿಂಹವೂ, ವೇಗದಲ್ಲಿ ಮೊಲವೂ, ವಾಸನಾಗ್ರಹಣಶಕ್ತಿಯಲ್ಲಿ ನಾಯಿಯೂ, ಶಬ್ದಗ್ರಹಣಶಕ್ತಿಯಲ್ಲಿ ಹಾವೂ, ಸೌಂದರ್ಯದಲ್ಲಿ ನವಿಲೂ, ಧ್ವನಿಯಲ್ಲಿ ಕೋಗಿಲೆಯೂ ಮನುಷ್ಯನನ್ನು ಮೀರಿಸಿದ್ದರೂ—ಈ ಪ್ರಾಣಿಗಳೆಲ್ಲಾ ಮನುಷ್ಯನ ಭೋಗಕ್ಕೆ ಉಪಕರಣಗಳಾಗಿರುವುದನ್ನು ನೋಡಿದರೆ ಸೃಷ್ಟಿಯಲ್ಲೆಲ್ಲಾ ಮನುಷ್ಯಜನ್ಮವೇ ಮೇಲಿನದೆಂದು ನಮ್ಮ ಮನಸ್ಸಿಗೆ ಹೊಳೆಯುವುದು. ಹುಟ್ಟುಗಳಲ್ಲೆಲ್ಲಾ ಮನುಷ್ಯರ ಹುಟ್ಟೇ ಮೇಲಾದುದೆಂದು

ಶಾಸ್ತ್ರಗಳೂ ಹೇಳುವವು. ಮನುಷ್ಯನಿಗೆ ಈ ಹೆಚ್ಚುಗಾರಿಕೆಯುಂಟಾಗಿರುವುದೇತರಿಂದ? ವಿದ್ಯೆಯಿಂದ. ವಿದ್ಯೆಯೆಂದರೆ ತಿಳಿವಳಿಕೆ. ಅದೇನೂ ಸರ್ವಸಾಮಾನ್ಯವಾದ ತಿಳಿವಳಿಕೆಯಲ್ಲ. ಸಾಮಾನ್ಯವಾದ ತಿಳಿವಳಿಕೆ ಪಶುಗಳಿಗೂ ಉಂಟು. ಹೇಗೆಂದರೆ ಪಶುಗಳಿಗೂ ಹೊರಗೆ ಪದಾರ್ಥಗಳಿರುವವೆಂದು ತಿಳಿಯುತ್ತದೆ; ಹೊರಗಿನಿಂದ ತನಗೆ ಬಾಧೆತಟ್ಟೀತೆಂಬುದೂ ಅಥವಾ ಹಿತವಾದೀತೆಂಬುದೂ ತಿಳಿಯುತ್ತದೆ; ಹೊರಗಣ ವಸ್ತುಗಳು ತನ್ನ ನಾಲಿಗೆಗೆ ಸವಿಯಾಗಿರುವವೆಂದೂ ಅಥವಾ ಇಲ್ಲವೆಂದೂ ತಿಳಿಯುತ್ತದೆ; ತನ್ನ ಕರುವೆಂದು ತಿಳಿಯುತ್ತದೆ; ತನಗೆ ಸುಖವಾಯಿತೆಂದು ತಿಳಿಯುತ್ತದೆ; ದುಃಖವಾಯಿತೆಂದೂ ತಿಳಿಯುತ್ತದೆ. ಆದರೆ ಈ ತಿಳಿವಳಿಕೆಯನ್ನೆಲ್ಲಾ ನಾವು ವಿದ್ಯೆಯೆನ್ನುವುದಿಲ್ಲ. ಪ್ರಾಣಿಮಾತ್ರಕ್ಕೆಲ್ಲಾ ಸಾಮಾನ್ಯವಾದ ಈ ಬಗೆಯ ತಿಳಿವಳಿಕೆಯ ಮೇಲಿನ ಮೆಟ್ಟಿಲುಗಳನ್ನು ಹತ್ತಿ ವಿವೇಕದಿಂದ ಹೆಚ್ಚಿನ ತಿಳಿವಳಿಕೆಯನ್ನು ಪಡೆಯುವುದೇ ಮನುಷ್ಯತ್ವದ ಮುಖ್ಯಲಕ್ಷಣ. ಮನುಷ್ಯನ ಇಂದ್ರಿಯಗಳಿಗೆ, ಮನಸ್ಸಿಗೆ ಮತ್ತು ಬುದ್ಧಿಗೆ ಈ ಮೇಲಿನ ಮೆಟ್ಟಿಲು ಯಾವವೆಂಬುದನ್ನು ನಮ್ಮ ಭಕ್ತಿಗೀತಾವಳಿಯ ಈ ಕೆಳಗಿನ ಪದ್ಯವು ಸೂಚಿಸುತ್ತದೆ—

ರಾಗ—ಧನಾಸರಿ. ತಾಳ—ಛಾಪು.

ಮನುಜಜನ್ಮದಲಿ ಬಾಳಿದ ಮಾತ್ರಕೇ । ಘನತೆಯೇನೊ ಕಾಣೆ ॥ ಪ ॥
ರುಚಿತಿನ್ನೆಲ್ಲಾ ನರನಯನನೆ ನೀ ।
ಮನದೊಳಗಿದ ವಿವೇಚನೆ ಮಾಡಿ ನೋಡೋ ॥ ಅ. ಪ. ॥
ಕರಚರಣಾದೀಂದ್ರಿಯವಿಷಯದ ರುಚಿಯು ? ।
ಧರಣಿಯೊಳಿಲ್ಲಿಲ್ಲಿಯೂ ನಿನ್ನ ॥
ಇರುವಿಕೆಯನುಭವವನೆ ಕೊಡುವದ ।
ಕರಚರಣಗಳಿಂದೇನು ಪ್ರಯೋಜನ ? ॥ ೧ ॥
ಮನಸನು ಕೊಟ್ಟವನೆಂದು ಕೇಳ್ವೆಯ ? ।
ಅನಿಶವು ಮನಸಿಜನಿಗೆ ತಾನು ॥
ಮನೆಯಾಗಿ ನಿನ್ನನು ನೆನೆಯದೆ ಇರುವದ ।
ಮನಸನಿಟ್ಟುಕೊಂಡೇನು ಪ್ರಯೋಜನ ? ॥ ೨ ॥

ಬುದ್ಧಿಯುಪುದೆ ಒಂದು ಹೆಚ್ಚಿನದೆಂಬುದು !
ಬುದ್ಧಿಗೂ ನೀನೇಕೆ ದೂರನಾದೆ ? ॥
ಶುದ್ಧಚಿದ್ರೂಪವ ಗ್ರಹಿಸಲಾರದಂಧ ।
ಬುದ್ಧಿಯುನಿನಗಿತ್ತೇನು ಪ್ರಯೋಜನ ? ॥ ೩ ॥

## ಭೌತಿಕವಿದ್ಯೆಯ ಕೊರತೆ.

ಮನುಷ್ಯನ ತಿಳಿವಳಿಕೆ ಎಂಥದ್ದಿರಬೇಕೆಂದು ನಮ್ಮ ಸಾಮಾನ್ಯ ಬುದ್ಧಿಯಿಂದ ವಿಚಾರಮಾಡಿದರೆ ಹೊರಗಿರುವ ಭೌತಿಕವಸ್ತುಗಳ ರಚನೆಯ ಬೆಡಗು, ಅದರ ಬೆಳವಳಿಗೆಯ ವಿನ್ಯಾಸ, ಅದರ ಉಪಯೋಗದ ಪ್ರಭಾವ-ಮೊದಲಾದ ಅನೇಕ ಸಂಗತಿಗಳನ್ನು ಹುಡುಕಿ ಹುಡುಕಿ ಕಂಡುಕೊಂಡು ಅವುಗಳನ್ನು ತನ್ನ ಸುಖಸಾಧನವಾಗಿ ಮಾಡಿಕೊಳ್ಳುವ ಪ್ರತಿಭೆಯನ್ನು ತೋರಿಸುವದೆಂದು ಕಾಣುವದು. ಈ ಪ್ರತಿಭೆಯು ಪಶುಗಳ ಸಾಮಾನ್ಯವಾದ ತಿಳಿವಳಿಕೆಗಿಂತ ಮೇಲಿನದೇ ಸರಿ. ಏಕೆಂದರೆ ಇದು ಪಶುಗಳಲ್ಲೆಂದಿಗೂ ಕಾಣಬರುವದಿಲ್ಲ. ಈ ವಿಧವಾದ ಹೆಚ್ಚಿನ ಜ್ಞಾನವನ್ನೇ ಲೋಕದಲ್ಲಿ ಜನರು ವಿದ್ಯೆಯೆಂದು ಕರೆಯುವರು. ಈ ವಿದ್ಯೆಯ ಶಿಕ್ಷಣವು ಈಗ ಬೇಕಾದಷ್ಟು ನಡೆದಿರುವದು. ಈ ವಿದ್ಯೆಯಲ್ಲಿ ಜನರು ನಾನು ಮುಂದು ತಾನು ಮುಂದೆಂದು ತಮ್ಮ ತಮ್ಮ ವಿಜಯಧ್ವಜವನ್ನೆತ್ತಿ ಹಿಡಿಯುತ್ತಿರುವರು. ಈ ವಿದ್ಯೆಯನ್ನು ಪಡೆಯುವದೇ ಮನುಷ್ಯತ್ವದ ಮುಖ್ಯಲಕ್ಷಣವಾಗಿದ್ದರೆ ಈಗ ಜನರೆಲ್ಲರೂ ಮನುಷ್ಯತ್ವವನ್ನು ಪೂರ್ಣ ಮಾಡಿಕೊಂಡು ಕೃತಕೃತ್ಯರಾಗಿ, ತೃಪ್ತರಾಗಿ, ಆನಂದಸಾಗರದಲ್ಲಿ ಈಸಾಡುತ್ತಿರುವರೆನ್ನಬೇಕಾಗುವದು. ಲೋಕದಲ್ಲಿ ಎಲ್ಲರೂ ಈ ವಿದ್ಯೆಯನ್ನು ಕಲಿತಿರದಿದ್ದರೂ ಕಲಿತಿರತಕ್ಕ ಕೆಲವರಾದರೂ ಈ ಪರಿಸ್ಥಿತಿಯನ್ನು ಪ್ರದರ್ಶನ ಮಾಡಬೇಕಾಗಿತ್ತು. ಎಲ್ಲಕಡೆಗೂ ಕಣ್ಣು ಹಾಕಿ ನೋಡಿದರೆ ಎಲ್ಲಿಯೂ ಈ ಪರಿಸ್ಥಿತಿಯು ಸೆಲೆಯೇ ಕಾಣುವದಿಲ್ಲ. ಭೌತಿಕಶಾಸ್ತ್ರದಲ್ಲಿ ಮಹಾಮಹಾದಿಗ್ದಂತಿಗಳಾಗಿ ಪಂಚಭೂತಗಳಿಂದಲೂ ಸೇವೆಯನ್ನು ಪಡೆಯುತ್ತಿರುವವರಿಗೂ ಕೂಡ ತೃಪ್ತಿಯೆಂಬುದು ಇನ್ನೂ ಕನವರಿಕೆಯ ಮಾತಾಗಿಯೇ ಇರುವದು.

## ಭೌತಿಕವಸ್ತುಗಳ ಪರಿಣಾಮ

ಮುಂದಾದರೂ ತೃಪ್ತಿಯನ್ನು ಕೊಟ್ಟಾವೆಂದು ಆ ಭೌತಿಕವಸ್ತುಗಳ ಮೇಲೆ ಭರವಸವನ್ನಿಡುವುದಕ್ಕೆ ಕೂಡ ನಾವು ಹಿಂದುಮುಂದು ನೋಡ ಬೇಕಾಗುತ್ತದೆ. ಏಕೆಂದರೆ ಈದಿನ ಒಂದು ರೀತಿಯಲ್ಲಿರುವ ವಸ್ತು ನಾಳೆ ಹೀಗೆಯೇ ಇದ್ದೀತೆಂದು ಹೇಳಲಿಕ್ಕೆ ಆಗುವದಿಲ್ಲ. ಭೌತಿಕ ಭಾಗ್ಯವನ್ನು ಪಡೆದು ಜಪಾನ್ ದೇಶವು ಪೂರ್ವದೇಶಕ್ಕೆಲ್ಲಾ ಕಲಶ ಪ್ರಾಯವಾಗಿತ್ತಷ್ಟೆ. ಮೊನ್ನೆ ಮೊನ್ನೆ ಆದ ಭೂಕಂಪ ಮೊದಲಾದವು ಗಳಿಂದ ಲೆಕ್ಕವಿಲ್ಲದಷ್ಟು ಅನರ್ಥಗಳಾಗಿ ಅದು ತನ್ನ ಸುಂದರಸ್ವರೂಪ ವನ್ನು ಕಳೆದುಕೊಂಡು ಕ್ಷಣಮಾತ್ರದಲ್ಲಿ ಬೆಂಗಾಡಾಗಿ ಪರಿಣಮಿಸಿತು. ಆದರೆ ಈ ಬಗೆಯ ವಿಪತ್ತು ಯಾವಾಗಲೋ ಒಮ್ಮೆ ಕಾಣಿಸಿಕೊಳ್ಳು ವದೆಂದು ಮನಸ್ಸಿಗೆ ತೋರಬಹುದು. ಇಷ್ಟು ಸ್ಥೂಲರೂಪದಲ್ಲಿ ಕಾಣಿಸಿ ಕೊಳ್ಳುವದು ಯಾವಾಗಲೋ ಒಮ್ಮೆ ಆಗಬಹುದೇ ಹೊರತು ಸೂಕ್ಷ್ಮ ರೂಪದಲ್ಲಿ ಇದು ನಡೆದೇ ಇರುವದು. ಜಗತ್ತೇ ಪರಿಣಾಮವನ್ನು ಹೊಂದುತ್ತಿರುವ ಸ್ವಭಾವದ್ದು. ಅದ್ದರಿಂದ ಗೋಸುಂಬೆಯಂತಿರುವ ಇದು ಹೀಗೆಂದು ಇದನ್ನು ತಿಳಿಯುವದೇ ಕಠಿನವಾಗುವದು. ಒಂದು ತಾಳೆಯ ಮರದ ಮೇಲೆ ಒಂದು ಗೋಸುಂಬೆಯಿತ್ತು. ಒಬ್ಬ ದಾರಿಹೋಕನು ಬಂದು ನೋಡಿದಾಗ ಅದು ಕೆಂಪಗೆ ಕಂಡಿತು. ಅದನ್ನು ಅವನು ದಿಟ್ಟಿಸು ತ್ತಿರುವಾಗ ಅಲ್ಲಿಗೆ ಇನ್ನೊಬ್ಬ ದಾರಿಹೋಕನು ಬಂದನು. ಮೊದಲನೆ ಯವನು ಎರಡನೆಯವನ ಮುಂದೆ ಗೋಸುಂಬೆಯ ಕೆಂಪನ್ನು ಹೊಗಳಿ ದನು. ಎರಡನೆಯವನು ಅದರ ಕಡೆಗೆ ಕಣ್ಣುಹಾಕಿ ನೋಡಿದಾಗ ಅದು ನೀಲಿಯ ವರ್ಣವಾಗಿ ಕಂಡಿತು. ಕೆಂಪೆಂದು ಮೊದಲನೆಯವನೂ ನೀಲಿ ಯೆಂದು ಎರಡನೆಯವನೂ ತನ್ನ ತನ್ನ ಪಟ್ಟು ಹಿಡಿದು ಬಾಯಿಮಾಡುತ್ತಿ ರುವಾಗ ಗೋಸುಂಬೆಯನ್ನು ಅನೇಕಸಲ ಪರೀಕ್ಷಿಸಿ ಮನಗಂಡಿದ್ದ ಮೂರ ನೆಯವನು ಬಂದು ಮೊದಲಿನ ಇಬ್ಬರನ್ನೂ ತಡೆದು ಗೋಸುಂಬೆಯು ಕ್ಷಣ ಕ್ಷಣಕ್ಕೊಂದು ಬಣ್ಣವಾಗುವಂಥದ್ದೆಂದು ಸಮಾಧಾನಮಾಡಿದನು. ಜಗತ್ತು ಹೀಗೆ ಬದಲಾಗುವ ಸ್ವಭಾವದ್ದು. ಇಂಥದ್ದರಿಂದ ತೃಪ್ತಿ ಹೇಗಾದೀತು? ವಿಚಾರಮಾಡಿದರೆ ತೃಪ್ತಿಯನ್ನು ಕೊಡುವ ಗುಣವೇ ಇದರಲ್ಲಿಲ್ಲ. ತೃಪ್ತಿ

ಯಾಗಲೆಂದು ವಿಷಯಗಳನ್ನು ಭೋಗಿಸುವದು ಬೆಂಕಿಯು ಆರಲೆಂದು ತುಪ್ಪವನ್ನು ಸುರಿದಂತೆಯೇ ಸರಿ. ಯಯಾತಿಯ ಕಥೆಯು ಇದಕ್ಕೆ ಒಳ್ಳೇ ಉದಾಹರಣೆಯಾಗಿದೆ. ಯಯಾತಿಯು ಪ್ರಸಿದ್ಧನಾದ ರಾಜನಾಗಿದ್ದನು. ಅವನಿಗೆ ಮಧ್ಯಪ್ರಾಯವು ಇತ್ತು. ಹೀಗಿರುವಾಗ ಒಮ್ಮೆಗೇ ಅವನಿಗೆ ಶುಕ್ರಾಚಾರ್ಯರ ಶಾಪದಿಂದ ಪ್ರಾಯವು ಹೋಗಿ ಮುಪ್ಪು ಬಂತು. ಬಗೆ ಬಗೆಯ ಸುಖಗಳನ್ನನುಭವಿಸುವ ಸೌಖ್ಯವು ತಪ್ಪಿತೆಂದು ನೊಂದು ಕೊಂಡು ಯಯಾತಿಯು ಶುಕ್ರಾಚಾರ್ಯರಿಗೇ ಮರೆಬಿದ್ದನು. ಕ್ಷಮಾ ಶೀಲರಾದ ಅವರು ಅವನಿಗೊಂದು ವಿಶಾಪವನ್ನು ಕೊಟ್ಟರು. ಇದ ರಿಂದ ಅವನು ತನ್ನ ಯಾವನಾದರೊಬ್ಬ ಮಗನ ಪ್ರಾಯವನ್ನು ತನ್ನ ಮುಪ್ಪಿಗೆ ಬದಲು ಮಾಡಿಕೊಂಡು ತನ್ನ ಮನಸ್ಸಿಗೆ ಬಂದಷ್ಟು ಕಾಲ ತನ್ನ ಆಶೆಗಳನ್ನು ತೀರಿಸಿಕೊಳ್ಳಬಹುದಾದ ಅವಕಾಶವು ಉಂಟಾಯಿತು. ಆಗ ಅವನು ತನ್ನ ಪ್ರತಿಯೊಬ್ಬ ಮಗನ ಮುಂದೆಯೂ ಪ್ರಾಯಕ್ಕಾಗಿ ಬಾಯಿ ನೀರು ಸುರಿಸಿದನು. ಮುಪ್ಪನ್ನು ತೆಗೆದುಕೊಂಡು ಪ್ರಾಯವನ್ನು ಕೊಡುವದು ಹಿರೀ ಮಕ್ಕಳ ಮನಸ್ಸಿಗೆ ಬರಲಿಲ್ಲ. ಕಿರಿಯವನಿಗೆ ಮಾತ್ರ ತಂದೆಯ ಮೇಲೆ ಮರುಕವುಂಟಾಯಿತು. ತನ್ನ ದೇಹೇಂದ್ರಿಯಗಳನ್ನು ಸುಖಗೊಳಿಸುವದರ ಬೆಲೆಯನ್ನೂ ಅದನ್ನು ತನ್ನ ತಂದೆಗೆ ಉಂಟು ಮಾಡುವದರ ಬೆಲೆಯನ್ನೂ ಅವನು ತಕ್ಕಡಿಯಲ್ಲಿ ಹಾಕಿ ತೂಗಿ ನೋಡಿ ದಾಗ ತಂದೆಯ ಹಿತಚಿಂತನೆಯು ಅವನಿಗೆ ಹೆಚ್ಚಿನದಾಗಿ ಕಂಡಿತು. ಆದ್ದರಿಂದ ಅವನು ಅದಕ್ಕೆ ಒಪ್ಪಿದನು. ಶುಕ್ರಾಚಾರ್ಯರ ಅನುಗ್ರಹ ದಿಂದ ಮಗನಿಗೆ ತಂದೆಯ ಮುಪ್ಪು ಬಂತು; ತಂದೆಗೆ ಮಗನ ಯೌವನವು ಬಂತು. ಆಗ ಯಯಾತಿಯು ಇದೇ ಸಮಯವೆಂದು ಕಂಡ ಕಂಡ ಸುಖ ಗಳನ್ನೆಲ್ಲಾ ಸೂರೆಗೊಳ್ಳುವದಕ್ಕೆ ಮೊದಲು ಮಾಡಿದನು. ಈ ಸುಗ್ಗಿಯು ಬಹು ವರ್ಷಗಳವರೆಗೂ ನಡೆಯಿತು. ಆದರೂ ಯಯಾತಿಗೆ ತೃಪ್ತಿತೋರ ಲಿಲ್ಲ. ಒಂದು ದಿನ ಅವನು ಏಕಾಂತದಲ್ಲಿ ಕುಳಿತು ವಿಚಾರಮಾಡಿ ವಿಷಯ ಸುಖದಲ್ಲಿ ಹುರುಳಿಲ್ಲವೆಂದು ನಿಶ್ಚಯಿಸಿ ತಾನು ಕಡವಾಗಿ ತೆಗೆದು ಕೊಂಡಿದ್ದ ಯೌವನವನ್ನು ಮಗನಿಗೇ ತಿರುಗಿ ಕೊಟ್ಟು ಮಗನಲ್ಲಿಟ್ಟಿದ್ದ ಮುಪ್ಪನ್ನು ಮತ್ತೆ ತಾನು ತೆಗೆದುಕೊಂಡು ಮಗನಿಗೇ ಪಟ್ಟವನ್ನು ಕಟ್ಟಿ

ಉಳಿದ ಆಯುಷ್ಯವನ್ನು ಭಗವಚ್ಚಿಂತನದಲ್ಲಿ ಕಳೆದು ಸಾರ್ಥಕಮಾಡಿ ಕೊಳ್ಳಬೇಕೆಂದು ಅಡವಿಯ ದಾರಿಯನ್ನು ಹಿಡಿದನು.

ಹೀಗೆ ಜಗತ್ತಿನಲ್ಲಿ ಹೊರಗಣ ವಸ್ತುಗಳ ಸಂಬಂಧದಿಂದ ಜನರಿಗೆ ತೃಪ್ತಿದೊರಕಿಲ್ಲವೆಂಬದಿಷ್ಟೇ ಅಲ್ಲ; ಇವುಗಳನ್ನು ಕನಸಿನಲ್ಲಿಯೂ ಕಾಣದ ಎಷ್ಟೋ ಜನರಲ್ಲಿ ತೃಪ್ತಿ ಇರುವದು ನಮಗೆ ಕಣ್ಣಿಗೆ ಕಟ್ಟಿದ ಹಾಗೆ ಕಾಣುತ್ತದೆ. ನಮ್ಮ ದೇಶದಲ್ಲಿ ಎಷ್ಟೋ ಜನ ಸಾಧುಸಂತರು ಹೊರಗಣ ವಿಷಯಗಳ ವಿಚಾರದ ಗಂಧವೇ ಇಲ್ಲದೆ ಇದ್ದರೂ ತೃಪ್ತಿಯಲ್ಲಿ ಅಖಂಡ ಭೂಮಂಡಲಾಧಿಪತಿಗಳನ್ನು ಮೀರಿಸಿದವರಾಗಿದ್ದರೆಂದು ಇತಿಹಾಸದ ಲ್ಲಿಯೂ ಇದೆ; ಇರುವರೆಂದು ಈಗಲೂ ಅನುಭವಕ್ಕೆ ಬರಬಹುದು. ಭೂಮಂಡಲದಲ್ಲೆಲ್ಲಾ ತನ್ನ ಪ್ರತಿಷ್ಠೆಯನ್ನು ನೆಲೆಗೊಳಿಸುವದಕ್ಕೆ ಹೊರಟ ಮಹಾಯೋಧನಾದ ಅಲೆಗ್ಝಾಂಡರ್ ದಿ ಗ್ರೇಟನು ನಮ್ಮ ದೇಶಕ್ಕೆ ಬಂದಾಗ ಇಲ್ಲಿಯ ಸಾಧುಸಂತರ ಮಹಿಮೆಯನ್ನು ಕೇಳಿ ಬೆರಗಾಗಿ ಅದನ್ನು ತಾನು ನೋಡಬೇಕೆಂದು ಒಬ್ಬ ತಪಸ್ವಿಯ ಮುಂದೆ ಬಂದು ನಿಂತು ತನ್ನ ಪ್ರವರವನ್ನು ಹೇಳಿಕೊಂಡು ಬೇಕಾದ್ದನ್ನು ಯಾಚಿಸೆಂದು ಬಹಳ ಕೇಳಿಕೊಂಡನಂತೆ. ಆಗ ಆ ತಪಸ್ವಿಯು ತನ್ನ ಮೇಲೆ ಬೀಳುತ್ತಿರುವ ಬಿಸಿಲಿಗೆ ಅಡ್ಡನಾಗದೆ ನೀನು ಓರೆಯಾದರೆ ಅದೇ ನನ್ನ ಇಷ್ಟಾರ್ಥ ವೆಂದು ಹೇಳಿದನಂತೆ. ಮೂರ್ತಿಮಂತತೃಪ್ತಿಯೇ ಆಗಿದ್ದ ಆ ತಪಸ್ವಿಗೆ ಎಷ್ಟೋ ರಾಜ್ಯವು ಸಿಕ್ಕಿದ್ದರೂ ತೃಪ್ತನಾಗದೆ ಬಾಯಾರಿ ಬಿಸಿಲ್ಗುದು ರೆಯ ಮೇಲೆ ಹಾಯುತ್ತಿದ್ದ ಆ ಅಲೆಗ್ಝಾಂಡರನಿಂದ ಆಗಬೇಕಾದ್ದೇನು? ಹೀಗೆ ಭೌತಿಕಸಂಪತ್ತು ಭೌತಿಕಜ್ಞಾನವೂ ಎಷ್ಟುಮಾತ್ರವೂ ಇಲ್ಲದವರ ಲ್ಲಿಯೂ ಕೂಡ ಶಾಶ್ವತವಾದ ತೃಪ್ತಿಯು ತಾಂಡವಮಾಡುತ್ತಿರುವುದೆಂದ ಮೇಲೆ ತೃಪ್ತಿಗೆ ಅವುಗಳೇನೂ ಕಾರಣಗಳಲ್ಲವೆಂದು ಹೇಳಬೇಕಾಗು ವದು. ಈ ಮರ್ಮವನ್ನರಿತೇ ನಮ್ಮ ಪೂರ್ವಿಕರು ಭೌತಿಕಜ್ಞಾನವನ್ನು ವಿದ್ಯೆ ಯೆನ್ನದೆ ಅವಿದ್ಯೆಯೆಂದೇ ಕರೆಯುವರು.

## ಭೌತಿಕವಿದ್ಯೆಯ ಬೆಲೆ.

ಹೀಗೆಂದು ಭೌತಿಕಜ್ಞಾನವನ್ನು ನಾವು ಬೇರುಕಿತ್ತು ಬಿಸಾಡ ಲಿಚ್ಛಿಸುವದಿಲ್ಲ. ಭೌತಿಕಜ್ಞಾನವು ಅಷ್ಟು ನಿರುಪಯೋಗಿಯಲ್ಲ. ವ್ಯವ

ಹಾರಕ್ಕೆ ಆದರಿಂದ ಪೂರ್ಣ ಪ್ರಯೋಜನವುಂಟು. ಅದಕ್ಕಾಗಿ ಅದು ಬೇಕೇ ಬೇಕು. ಅದನ್ನು ಉಪೇಕ್ಷೆ ಮಾಡಿದರೆ ಹೊಟ್ಟೆಗಿಲ್ಲದೆ ಸಾಯ ಬೇಕಾದೀತು. ಬದುಕಿದ್ದರಲ್ಲವೆ ನಿಜವಾದ ತೃಪ್ತಿಯ ಸಾಧನವೇನೆಂದು ಹುಡುಕುವುದು? 'ಅಟ್ಟಕ್ಕೆ ಹಾರದವನು ಬೆಟ್ಟಕ್ಕೆ ಹಾರ್ಯಾನೆ?' ಎಂಬದೊಂದು ಗಾದೆಯುಂಟು. ಅಯಾ ದಿನದ ಹೊಟ್ಟೆ ಬಟ್ಟೆಗಳನ್ನು ಸಂಪಾದಿಸುವ ಯೋಗ್ಯತೆಯನ್ನೇ ಪಡೆಯಲಾರದವನು ಎಂದಿಗೂ ಕರಗದ ತೃಪ್ತಿಯನ್ನು ಮಡಿಲಲ್ಲಿ ಹಾಕಿಕೊಳ್ಳುವದಕ್ಕೆ ಹೇಗೆ ಪಾತ್ರನಾದಾನು? ಆದ್ದರಿಂದ ನಮ್ಮ ಶಾಸ್ತ್ರಕಾರರು ಭೌತಿಕವಿದ್ಯೆಯನ್ನು ಅವಿದ್ಯೆಯೆಂದು ಎಷ್ಟೇ ತುಚ್ಛಮಾಡಿದರೂ ಅದಕ್ಕೆ ಲೌಕಿಕಪ್ರಯೋಜನವೇನೂ ತಪ್ಪ ಲಾರದು. ಲೌಕಿಕಪ್ರಯೋಜನವು ಮಾತ್ರವೇ ಅದರ ಬೆಲೆಯೆಂಬುದನ್ನು ಮಾತ್ರ ಯಾರೂ ಮರೆಯಬಾರದು.

## ಧರ್ಮಜ್ಞಾನವೇ ನಿಜವಾದ ವಿದ್ಯೆ.

ನಮಗೆ ಬೇಕಾದ ವಿದ್ಯೆ ನಮ್ಮ ವ್ಯವಹಾರಕ್ಕೆ ಉಪಯೋಗವಾಗ ಬೇಕು. ಆದರೆ ಬರೀ ಅಷ್ಟರಲ್ಲಿಯೇ ಮುಗಿಯದೆ ತನ್ನ ಪ್ರಭಾವ ದಿಂದಲೇ ನಮ್ಮಲ್ಲಿ ತೃಪ್ತಿಯು ತನಗೆ ತಾನೇ ವ್ಯೆದೋರುವಂತೆ ಮಾಡಿ ರುವಂಥದ್ದೂ ಆಗಿರಬೇಕು. ವ್ಯವಹಾರಕ್ಕುಪಯೋಗವಾಗಬೇಕಾದ ರಂತೂ ಭೌತಿಕವಿದ್ಯೆ ಬೇಕಷ್ಟೆ. ಅದು ನಮಗೆ ತೃಪ್ತಿಯೆಂಬ ಮಹಾ ಫಲವನ್ನು ತಂದುಕೊಡಬೇಕಾದರೆ ಅದಕ್ಕೆ ಧಾರ್ಮಿಕವಿದ್ಯೆಯ ಬೆಂಬಲವು ಬೇಕು. ಬರೀ ಭೌತಿಕವಿದ್ಯೆಯು ಹಿತ್ತಾಳೆಯನ್ನು ಹೋಲುತ್ತದೆ. ಧಾರ್ಮಿಕವಿದ್ಯೆಯ ಬೆಂಬಲವನ್ನು ಪಡೆದ ಭೌತಿಕವಿದ್ಯೆಯು ಒಪ್ಪವಿಟ್ಟ ಚಿನ್ನದಂತೆ ಶೋಭಿಸುತ್ತದೆ. ಧಾರ್ಮಿಕವಿದ್ಯೆಯೆಂದರೆ ಸಾಮಾನ್ಯವಾಗಿ ದೇವರ ಸಂಬಂಧವಾದ ತಿಳಿವಳಿಕೆ ಅದೊಂದೇ ಸರ್ವಪ್ರಯೋಜನ ಗಳನ್ನು ಸಾಧಿಸಿ ಕೊಡಬಲ್ಲದು. ಸಾಧುಸಜ್ಜನರು ಮಹಾಮಹಾ ಚಕ್ರವರ್ತಿಗಳ ಮೇಲೆ ಕೂಡ ತಮ್ಮ ಅಧಿಕಾರವನ್ನು ನಡೆಸುವದು ಅದೊಂದರ ಬೆಂಬಲದಿಂದಲೇ.

'ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್' ॥

ಎಂದು ಭಗವದ್ಗೀತೆಯಲ್ಲಿ ಒಂದು ಶ್ಲೋಕವಿದೆ. ಅದರ ಅರ್ಥವೇನೆಂದರೆ 'ಮತ್ತೊಂದರ ಅವಲಂಬನವನ್ನು ಬಿಟ್ಟು ನನಗೇ ಶರಣು ಬಂದರೆ ಅವರ ಯೋಗಕ್ಷೇಮವನ್ನು ನೋಡಿಕೊಳ್ಳುವಭಾರವು ನನ್ನದಾಗಿರುವುದು' ಎಂದು ಕೃಷ್ಣನ ಅಭಿಪ್ರಾಯ. ಮದಾಂಧನಾದ ದುಶ್ಶಾಸನನು ಮಹಾಪತಿವ್ರತೆಯಾದ ದ್ರೌಪದಿಯ ಮಾನಭಂಗವನ್ನು ಮಾಡಬೇಕೆಂದು ಸಭಾಮಧ್ಯದಲ್ಲಿ ಆಕೆಯ ಸೀರೆಯನ್ನು ಸೆಳೆದನಷ್ಟೆ. ಮಾನಧನಳಾದ ಆಕೆ ತನ್ನ ರಕ್ಷಣೆಗಾಗಿ ದೇವರನ್ನು ಎಷ್ಟು ದೈನ್ಯದಿಂದ ಬೇಡಿಕೊಂಡರೂ ದೇವರು ಕಣ್ಣು ಬಿಟ್ಟು ನೋಡಲಿಲ್ಲ. ಏಕೆಂದರೆ ಆಕೆ ತನ್ನ ಎಡಗೈಯಿಂದ ಸೀರೆಯ ಗಂಟನ್ನು ಹಿಡಿದುಕೊಂಡು ಸ್ವಸಾಮರ್ಥ್ಯದ ಮೇಲೆಯೂ ತನ್ನ ಭರವಸವನ್ನಿಟ್ಟುಕೊಂಡಿದ್ದಳು. ಕೊನೆಗೆ ದೇವರೇ ಗತಿಯೆಂದು ದೇವರ ಮೇಲೆಯೇ ಸಂಪೂರ್ಣಭಾರವನ್ನು ಹಾಕಿ ಕೈಬಿಡುತ್ತಲೇ ಆಕೆಯ ವಸ್ತ್ರಗಳು ಅಕ್ಷಯವಾಗುವಂತೆ ದೇವರು ಅನುಗ್ರಹ ಮಾಡಿದನು. ಅದರಂತೆ ಗಜೇಂದ್ರನು ತನ್ನನ್ನು ಮೊಸಳೆಯು ಹಿಡಿದಾಗ ಅದರ ಸೆಳೆತಕ್ಕೆ ಸೋಲಬಾರದೆಂದು ಆ ಸರೋವರದ ತೀರದಲ್ಲಿದ್ದ ಒಂದು ಹುಲ್ಲಿಬೇರನ್ನು ಸೊಂಡಿಲಿಂದ ಹಿಡಿದು ಅದರ ಬೆಂಬಲವನ್ನವಲಂಬಿಸಿಕೊಂಡಿದ್ದಷ್ಟು ಕಾಲದ ವರಿಗೂ ದೇವರ ಮನಸ್ಸು ಕರಗಲಿಲ್ಲ. ಆ ಹುಲ್ಲಿಬೇರನ್ನು ಬಿಟ್ಟು ಒಮ್ಮೆ ಕೃಷ್ಣಾ ಎನ್ನುತ್ತಲೇ ಕೃಷ್ಣನು ಬಂದು ಅದರ ಬಾಧೆಯನ್ನು ಪರಿಹಾರ ಮಾಡಿದನು. ಈ ಅನನ್ಯಭಕ್ತಿಯ ಪ್ರಭಾವವನ್ನು ಮತ್ತೊಂದು ಕಥೆಯು ಇನ್ನೂ ಚೆನ್ನಾಗಿ ತಿಳಿಸುತ್ತದೆ. ಶ್ರೀಕೃಷ್ಣನೂ ಧರ್ಮರಾಯನೂ ಒಂದು ದಿನ ಪಗಡೆಯಾಡುತ್ತ ಕುಳಿತಿದ್ದರಂತೆ. ಆಗ ಇಬ್ಬರೂ ಬಹು ವಿಚಾರಮಾಡತಕ್ಕ ಪರಿಸ್ಥಿತಿಯುಂಟಾಯಿತಂತೆ. ಗಾಳಿ ಗಟ್ಟಿಯಾಗಿ ಬೀಸಿದರೂ ಕೂಡ ಮನಸ್ಸು ಚಲಿಸಿ ಆಟದ ಬಿಗಿ ತಪ್ಪುವದೆಂದು ಭಾವಿಸುವಷ್ಟು ಬಿಕ್ಕಟ್ಟಾದ ಆ ಸಮಯದಲ್ಲಿ ಕೃಷ್ಣನು ಚಟಕ್ಕನೆ ಎದ್ದು ಗಾಬರಿಯಿಂದ ನಾಲ್ಕು ಹೆಜ್ಜೆ ಬಾಗಿಲಕಡೆಗೆ ಹೋಗಿ ಅಲ್ಲಿ ಏನನ್ನೋ ಯೋಚಿಸಿದವನಾಗಿ ಒಡನೆ ತಿರುಗಿ ಬಂದು ಕುಳಿತನಂತೆ. ಹೀಗೆ ನಡುವೆ ಎದ್ದು ಆಟವನ್ನು ಹಸಗೆಡಿಸಿದ್ದನ್ನು ಕಂಡು ಧರ್ಮರಾಯನು ಬೆರಗಾಗಿ ಇದಕ್ಕೆ ಕಾರಣವೇನೆಂದು ಕೇಳಿದನಂತೆ. ಚಂಪಾರಣ್ಯದಲ್ಲಿ ಒಬ್ಬ ತಪಸ್ವಿಯು ಧ್ಯಾನದಲ್ಲಿ ಮೈಮರೆತು ಕುಳಿತಿದ್ದನೆಂತಲೂ

ಒಬ್ಬ ದುರಾತ್ಮನು ಕುಚೇಷ್ಟೆಗಾಗಿ ಅವನ ಮೇಲೆ ಅತ್ಯಾಚಾರವನ್ನು ಮಾಡುವದರಲ್ಲಿ ತೊಡಗಿದ್ದನೆಂತಲೂ ಆ ತಪಸ್ವಿಯು ಅದೊಂದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ಧ್ಯೇಯಮೂರ್ತಿಯ ಪಾದದಲ್ಲಿಟ್ಟ ಮನಸ್ಸನ್ನು ಕದಲಿಸಲಿಲ್ಲವೆಂತಲೂ ಹೀಗೆ ಅವನು ತನಗೆ ಸಂಪೂರ್ಣವಾಗಿ ಶರಣು ಬಂದವನಾದ್ದರಿಂದ ಅವನನ್ನು ರಕ್ಷಿಸುವದಕ್ಕಾಗಿ ತಾನು ಹೋಗುತ್ತಿದ್ದೆನೆಂತಲೂ ಅಷ್ಟರಲ್ಲಿ ಆ ಯೋಗಿಯು ತನ್ನ ಸಮಾಧಾನವನ್ನು ಕಳೆದುಕೊಂಡು ಹೊರಮುಖನಾಗಿ ತನ್ನ ವಿರೋಧಿಯ ಮೇಲೆ ತಾನೇ ಕೈಮಾಡುವದರ ಮೂಲಕ ತನ್ನ ಭರವಸವನ್ನು ಸ್ವಸಾಮರ್ಥ್ಯದ ಮೇಲಕ್ಕೆ ಸಾಗಿಸಿದ್ದರಿಂದ ಅಲ್ಲಿ ಇನ್ನು ನನ್ನ ಕೆಲಸವೇನೂ ಇಲ್ಲದ ಕಾರಣ ಹಿಂದಿರುಗಿ ಬಂದೆನೆಂತಲೂ ಶ್ರೀಕೃಷ್ಣನು ಹೇಳಿದನಂತೆ. ಹೀಗೆ ಏಕಭಕ್ತಿಯುಳ್ಳವರ ಯೋಗಕ್ಷೇಮವನ್ನು ದೇವರೇ ನೋಡಿಕೊಳ್ಳುವನೆಂಬ ಉದಾಹರಣೆಗಳು ಪುರಾಣಗಳಲ್ಲಿ ಸಮೃದ್ಧಿಯಾಗಿರುವವು. ಇತ್ತೀಚೆಗೂ ಕೆಲವು ಸಂಗತಿಗಳು ನಡೆದಿರುವವೆಂದು ಹೇಳುವರು. ದೇವರು ಕಬೀರನಿಗಾಗಿ ಬಟ್ಟೆಯನ್ನು ನೆಯ್ಯುತ್ತಿದ್ದನೆಂದೂ ಏಕನಾಥರ ಮನೆಗೆ ನೀರು ಹಾಕುತ್ತಿದ್ದನೆಂದೂ ಭಕ್ತಿವಿಜಯವು ಹೇಳುವುದು. ಹೀಗಿದ್ದರೂ ಕೂಡ ಜನರು ದೇವರ ವಿಚಾರಕ್ಕೆ ಮಹತ್ತ್ವವನ್ನು ಕೊಡದಿರುವದು ಆಶ್ಚರ್ಯವಾಗಿದೆ. ಈ ಸ್ಥಿತಿಯನ್ನುನೋಡಿ ಭಗವಾನ್ ವ್ಯಾಸರು ಕೂಡ ಒಮ್ಮೆ ನಿಟ್ಟುಸಿರು ಬಿಟ್ಟಿರುತ್ತಾರೆ.

" ಊರ್ಧ್ವಬಾಹುರ್ವಿರೌಮ್ಯೇಷ ನ ಚ ಕಶ್ಚಿಚ್ಛೃಣೋತಿ ಮೇ ।
ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ " ॥

ಎಂದರೆ " ನಾನು ಎರಡು ಕೈಗಳನ್ನೂ ಎತ್ತಿ ಸಾರಿಸಾರಿ ಹೇಳುತ್ತಿದ್ದೇನೆ. ಒಬ್ಬನಾದರೂ ಕೇಳುವವನು ದಿಕ್ಕಿಲ್ಲ. ಧರ್ಮವನ್ನು ಹಿಡಿದರೆ ಅರ್ಥವೂ ಕಾಮವೂ ಬಂದೇ ಒರುವವು. ಏಕೆ ಆ ಧರ್ಮವನ್ನು ಹಿಡಿಯಲೊಲ್ಲಿರಿ ?" ಇದನ್ನೆಲ್ಲ ವಿಚಾರಮಾಡಿ ನೋಡಿದರೆ ಧರ್ಮವೇ ನಿಜವಾದ ವಿದ್ಯೆ.

ಧರ್ಮಜ್ಞಾನವನ್ನು ಪಡೆಯದೆ ಉಳಿದ ವಿಷಯಗಳ ಜ್ಞಾನವನ್ನು ಎಷ್ಟು ಪೂರ್ಣವಾಗಿ ಪಡೆದುಕೊಂಡರೂ ಪ್ರಯೋಜನವಿಲ್ಲ. ಧರ್ಮಜ್ಞಾನವಿಲ್ಲದ ವಿದ್ಯೆಯಿಂದ ವಿದ್ಯೆಯ ಪ್ರಯೋಜನವೇ ಆಗುವದಿಲ್ಲ. ವಿದ್ಯೆಯ ಪ್ರಯೋಜನವೇನು? 'ವಿದ್ಯಾ ದದಾತಿ ವಿನಯಂ' ಎಂಬ ವಾಕ್ಯದಂತೆ

ವಿದ್ಯೆಯು ವಿನಯವನ್ನುಂಟು ಮಾಡುತ್ತದೆ. ಆದ್ದರಿಂದ ವಿನಯವನ್ನುಂಟು ಮಾಡುವ ವಿದ್ಯೆಯೇ ವಿದ್ಯೆ. ಧರ್ಮಜ್ಞಾನದ ಹೊರತು ಉಳಿದ ಯಾವ ವಿದ್ಯೆಯೂ ವಿನಯವನ್ನುಂಟು ಮಾಡುವದಿಲ್ಲ. ಭೌತಿಕ ವಿದ್ಯೆಯು ತನ್ನನ್ನು ಪಡೆದವನ ತಲೆತಿರುಗುವಂತೆ ಮಾಡುವದನ್ನು ನಾವು ಕಣ್ಣಾರೆ ನೋಡುತ್ತಿದ್ದೇವೆ. ತಮ್ಮ ತಮ್ಮ ವಿದ್ಯೆಗೆ ತಾವು ತಾವೇ ಹೆಚ್ಚಿನ ಬೆಲೆಯನ್ನು ಕಟ್ಟಿಕೊಂಡು ಉಳಿದವರನ್ನೆಲ್ಲ ಕಡೆಗಾಣುವ ಚಟವನ್ನು ಈಗಿನ ತರುಣರಲ್ಲಿ ನಾವು ನೋಡುತ್ತೇವೆ. ಇದು ಅವರ ತಾರುಣ್ಯದ ತಪ್ಪೇನೂ ಅಲ್ಲ ಮತ್ತು ಅದಕ್ಕಾಗಿ ಈಗಿನ ಕಾಲವನ್ನು ದೂರಬೇಕಾಗಿಯೂ ಇಲ್ಲ. ಏಕೆಂದರೆ ಎಷ್ಟೋ ಹಿಂದಿನ ಉಪನಿಷತ್ಕಾಲದಲ್ಲಿಕೂಡ ಧರ್ಮಜ್ಞಾನರಹಿತರಲ್ಲಿ ಈ ನೋಕ್ಕು ಕಂಡುಬಂದಿದೆ. ಛಾಂದೋಗ್ಯೋಪನಿಷತ್ತಿನಲ್ಲಿ ಒಂದು ಕಥೆಯಿದೆ ಉದ್ದಾಲಕನೆಂಬುವನಿಗೆ ಶ್ವೇತಕೇತುವೆಂಬ ಮಗನಿರುತ್ತಾನೆ. ಅವನು ಹನ್ನೆರಡನೆಯ ವರ್ಷದಲ್ಲಿ ಮನೆಯನ್ನು ಬಿಟ್ಟು ಹೊರಟು ಗುರುಕುಲದಲ್ಲಿ ಕ್ಲೇಶವನ್ನು ತಾನು ಅನುಭವಿಸಿ ವಿವಿಧಶಾಸ್ತ್ರಗಳಲ್ಲಿ ಪಾಂಡಿತ್ಯವನ್ನು ಪಡೆದು ತಾಯಿಯ ಬಳಿಗೆ ಬರುತ್ತಾನೆ. ಯಾವ ಶಾಸ್ತ್ರಗಳಲ್ಲಿಯೂ ತನಗೆದುರಿಲ್ಲವೆಂದು ಅವನ ಕಣ್ಣುಗಳು ತಿರುಗಿ ಹೋಗಿರುತ್ತವೆ. ಅವನ ಅವಿನಯವನ್ನು ನೋಡಿಯೇ ಉದ್ದಾಲಕನು ಅವನಿಗೆ ಭಗವತ್ತತ್ತ್ವವಿನನ್ನು ತಿಳಿದಿಲ್ಲವೆಂದು ಊಹಿಸಿ ಆ ವಿಷಯವಾಗಿ ಅವನನ್ನು ಕೇಳುತ್ತಾನೆ. ಅವನಲ್ಲಿ ಅದರ ಗಂಧವೇ ಇರುವದಿಲ್ಲ ಆ ಮೇಲೆ ತನ್ನ ಪುತ್ರನನ್ನು ಉದ್ಧಾರಮಾಡಬೇಕೆಂದು ತಾನೇ ಅವನಿಗೆ ಭಗವತ್ಸ್ವರೂಪ ವಿಚಾರವನ್ನು ತಿಳಿಸುತ್ತಾನೆ.

## ಧರ್ಮದ ಹೆಚ್ಚುಗಾರಿಕೆ

ಭೌತಿಕವಿದ್ಯೆಯ ಯೋಗ್ಯತೆಗಿಂತ ಧಾರ್ಮಿಕವಿದ್ಯೆಯ ಯೋಗ್ಯತೆಯು ಹೆಚ್ಚಿನದೆಂಬುದನ್ನು ಕೆಲವು ವಿಚಾರಗಳಿಂದ ತೋರಿಸಬಹುದು.

**ಒಂದನೇದು**:— ಬಗೆಬಗೆಯ ಪ್ರಯತ್ನಗಳನ್ನು ಮಾಡುವ ಆಯಾಸಗಳನ್ನು ಸಹಿಸಿಕೊಂಡು ತಾತ್ಕಾಲಿಕಸುಖವನ್ನು ಪಡೆಯುವಂತೆ ಮಾಡುವದು ಭೌತಿಕವಿದ್ಯೆ. ದೇವರ ಮೇಲೆ ಭರವಸವನ್ನಿಡುವದೆಂಬ

ಒಂದೇ ಪ್ರಯತ್ನದಿಂದ ನಿರಾಯಾಸವಾಗಿ ಶಾಶ್ವತಸುಖವನ್ನೇ ಪಡೆಯುವಂತೆ ಮಾಡುವದು ಧಾರ್ಮಿಕವಿದ್ಯೆ.

**ಎರಡನೇದು:—** ಭೌತಿಕವಿದ್ಯೆಯಿಂದ ಬರುವ ಭಾಗ್ಯವು ಒಬ್ಬರಿಂದೊಬ್ಬರನ್ನು ಅಗಲಿಸುವಂಥದ್ದಾಗಿರುತ್ತದೆ. ಲೋಕದಲ್ಲಿ ಧಾರ್ಮಿಕ ವಿದ್ಯೆಯ ಬಲವಿಲ್ಲದೆ ಸುದೈವದಿಂದ ಲೌಕಿಕಸಂಪತ್ತನ್ನು ಅನುಭವಿಸುತ್ತಿರುವ ಜನಗಳು ಆ ಸಂಪತ್ತಿನಿಂದ ತಮಗೊಂದು ಹೆಚ್ಚಿನ ಬೆಲೆಯನ್ನು ತಾವೇ ಕಟ್ಟಿಕೊಂಡು ಉಳಿದವರನ್ನು ಕಡೆಗಣ್ಣಿಂದ ನೋಡುತ್ತಿರುವ ಉದಾಹರಣೆಗಳು ನಮ್ಮ ಕಣ್ಣೆದುರಿಗೆ ಇವೆ. ಹೀಗಾಗಿ ಜನರಲ್ಲಿ ಭೇದಬುದ್ಧಿ ಬೆಳೆಯುತ್ತಿದೆ. ಧಾರ್ಮಿಕವಿದ್ಯೆಯ ಪರಿಣಾಮವು ಹೀಗಾಗುವುದಿಲ್ಲ. ಅದರಿಂದ ಬರುವ ಭಾಗ್ಯವು ಎಲ್ಲರನ್ನೂ ಒಟ್ಟುಗೂಡಿಸುತ್ತದೆ. ಧಾರ್ಮಿಕ ವಿದ್ಯೆಯಿಂದ ಬರುವ ಭಾಗ್ಯವೆಂದರೆ,

“ ಈಶ್ವರಸ್ಸರ್ವಭೂತಾನಾಂ ಹೃದ್ದೇಶೇऽರ್ಜುನ ತಿಷ್ಠತಿ ”

ಎಂದು ಗೀತೆಯಲ್ಲಿರುವಂತೆ ನಾವೆಲ್ಲರೂ ದೇವರೆಂಬ ಒಬ್ಬ ಸೂತ್ರಧಾರನ ಆಟದ ಬೇರೆ ಬೇರೆ ಬೊಂಬೆಗಳೆಂದು ತಿಳಿದು ಎಲ್ಲರೂ ಸೇರಿ ಆ ಯಜಮಾನನ ಸೇವೆಯಿಂದ ಒಬ್ಬರಿಗೊಬ್ಬರು ನೆರವಾಗುವುದು; ಅಥವಾ ಒಬ್ಬ ತಂದೆಯ ಮಕ್ಕಳಂತೆ ನಾವೆಲ್ಲರೂ ಒಬ್ಬ ಸರ್ವೇಶ್ವರನ ಪ್ರಜೆಗಳೆಂದು ಪರಸ್ಪರ ಸಹಾನುಭೂತಿಯುಳ್ಳವರಾಗಿರುವದು ಅಥವಾ ಎಲ್ಲರ ಹೃದಯದಲ್ಲಿಯೂ ಒಬ್ಬನೇ ಪರಮಾತ್ಮನಿರುವನೆಂದು ಎಲ್ಲರನ್ನೂ ಸಮತ್ವಬುದ್ಧಿಯಿಂದ ನೋಡುವುದು. ಹೀಗೆ ಒಂದಿಲ್ಲೊಂದು ರೀತಿಯಲ್ಲಿ ಧಾರ್ಮಿಕ ವಿದ್ಯೆಯು ಐಕ್ಯಮತ್ಯಕ್ಕೆ ಕಾರಣವಾಗುವದು. ಮಹಾರಾಷ್ಟ್ರದಲ್ಲಿ ಹಿಂದೆ ಮಹಮ್ಮದೀಯರ ದಂಡಿನ ದಾಳಿಯಿಂದ ಜನರಲ್ಲಿ ಒಬ್ಬರಿಗೊಬ್ಬರ ಹಂಗು ಹರಿದು ಹೋಗಿದ್ದಾಗ ಶ್ರೀಸಮರ್ಥ ರಾಮದಾಸರ ಉಪದೇಶದ ಮೂಲಕವಾಗಿ ಧಾರ್ಮಿಕವಿದ್ಯೆಯು ಪ್ರಸಾರವಾಗದಿದ್ದರೆ ಹಿಂದೂಜನರು ಒಕ್ಕಟ್ಟಾಗುವ ನಿರೀಕ್ಷಣೆಯೇ ಇರುತ್ತಿರಲಿಲ್ಲ. ಹೀಗೆ ಐಕ್ಯಮತ್ಯವನ್ನುಂಟು ಮಾಡುವದು ಧಾರ್ಮಿಕವಿದ್ಯೆಯ ಎರಡನೇ ಹೆಚ್ಚುಗಾರಿಕೆ.

**ಮೂರನೇದು:—** ಭೌತಿಕವಿದ್ಯೆಯು ಮನುಷ್ಯನ ಇಂದ್ರಿಯಗಳನ್ನೂ ಮನಸ್ಸನ್ನೂ ಹೊರಮುಖವಾಗಿ ಸಾಗಿಸುವದು. ಇದರಲ್ಲೇನು

ಹೆಚ್ಚುಗಾರಿಕೆ ? ಪಶುಗಳ ಇಂದ್ರಿಯಗಳೂ ಹೊರಮುಖವಾಗಿ ಹರಿಯುತ್ತಲೇ ಇವೆ.

'ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಸ್ತಸ್ಮಾತ್ಪರಾಙ್ಪಶ್ಯತಿ ನಾನ್ತರಾತ್ಮನ್'

ಎಂಬ ಕಾಠಕಶ್ರುತಿಯಂತೆ ಇಂದ್ರಿಯಗಳನ್ನು ದೇವರು ಹೊರಮುಖವಾಗಿ ಮಾಡಿಯೇ ಇದ್ದಾನೆ. ಆ ಕಡೆಗೆ ಅವು ಓಡುವದು ಸ್ವಭಾವವೇ ಆಗಿದೆ. ಆದರಲ್ಲಿ ನಮ್ಮ ಪ್ರಯತ್ನವೇನು? ಅದೇ ಶ್ರುತಿಯಲ್ಲಿ ಮುಂದೆ

'ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುರಮೃತತ್ವಮಿಚ್ಛನ್'

ಎಂದು ಹೇಳಿರುವಂತೆ ಯಾವನೋ ಒಬ್ಬ ಧೀರನು ಮಾತ್ರ ಮೋಕ್ಷವನ್ನು ಬಯಸಿ ಒಳಮುಖನಾಗಿ ಒಳಗಿರುವ ಅಂತರ್ಯಾಮಿಯನ್ನು ಕಾಣುವನು. ದೇವರು ಮನುಷ್ಯನ ವ್ಯವಹಾರಕ್ಕನುಕೂಲವಾಗಿರಲೆಂದು ಇಂದ್ರಿಯಗಳನ್ನು ಹೊರಮುಖವಾಗಿ ಮಾಡಿರುವನು. ಆದರೆ ವ್ಯವಹಾರವೇ ಸರ್ವಸ್ವವಲ್ಲ. ಸೂತ್ರಧಾರನಾಗಿ ನಮ್ಮ ಹೃದಯದೊಳಗಿರುವ ಆತ್ಮನ ಸ್ವರೂಪದ ತಿಳಿವಳಿಕೆಯೇ ಮನುಷ್ಯನ ಮುಖ್ಯಪುರುಷಾರ್ಥ. ಸ್ವರೂಪವು ಹೊರಗಣ್ಣಿಗೆಂದಿಗೂ ಕಾಣುವದಿಲ್ಲ. ಅದನ್ನು ನೋಡುವದಕ್ಕೆ ಒಳಗಣ್ಣಾಗಬೇಕು. ಇಂದ್ರಿಯಗಳು ಒಳಗಿನವುಗಳನ್ನು ತಿಳಿಯಲೇ ಅರವೆನ್ನುವ ಹಾಗಿಲ್ಲ. ತಣ್ಣಗಿರುವ ನೀರನ್ನು ಕುಡಿದರೆ ಒಳಗೆ ಅದು ಎಲ್ಲೆಲ್ಲಿಗೆ ಹೋಗಿ ಮುಟ್ಟುತ್ತದೆಂಬುದು ನಮಗೆ ತಿಳಿಯುತ್ತದೆ. ಹೊಟ್ಟೆಯಲ್ಲೇನಾದರೂ ಶಬ್ದವಾದರೆ ಅದು ನಮಗೆ ಕೇಳಿಸುತ್ತದೆ. ಸ್ಪರ್ಶೇಂದ್ರಿಯವೂ ಶ್ರವಣೇಂದ್ರಿಯವೂ ಹೀಗೆ ಒಳಮುಖದಲ್ಲಿಯೂ ಜಾಗರೂಕವಾಗಿರುವಂತೆ ಉಳಿದ ಇಂದ್ರಿಯಗಳೂ ಮನಸ್ಸೂ ಕೂಡ ಒಳಮುಖವಾಗುವುದು ಶಕ್ಯವಾಗಿರುವುದು. ನಾವು ಇಂದ್ರಿಯಗಳನ್ನು ಒಳಮುಖವಾಗಿ ಮಾಡುವ ಅಭ್ಯಾಸವನ್ನೇ ಬಿಡುತ್ತ ಬಂದಿರುವುದರಿಂದ ಅದು ನಮಗೆ ಅಸಾಧ್ಯವಾಗಿ ತೋರುತ್ತ ಬಂದಿದೆ. ಮನುಷ್ಯನು ಮನಸ್ಸನ್ನು ಮಾಡಿದರೆ ಯಾವ ಇಂದ್ರಿಯದ ಮೇಲೆ ಬೇಕಾದರೂ ತನ್ನ ಅಧಿಕಾರವನ್ನು ನಡೆಸುವದಕ್ಕಾಗುತ್ತದೆ. ಒಬ್ಬ ಯೋಗಿಯು ಕಿವಿಯ ಮೇಲೆ ತನ್ನ ಮನಸ್ಸಿನ ಅಧಿಕಾರವನ್ನು ನಡೆಸಿ ಅದನ್ನು ಅಲ್ಲಾಡಿಸುತ್ತಿದ್ದನೆಂದು ಶ್ರೀಸ್ವಾಮಿ ವಿವೇಕಾನಂದರು ಒಂದು ಕಡೆ

ಯಲ್ಲಿ ಹೇಳಿದ್ದಾರೆ. ಪಶುಗಳು ಈಗಲೂ ಕಿವಿಯನ್ನು ಅಲ್ಲಾಡಿಸಬಲ್ಲವು. ಈಗ ಅದು ನಮ್ಮಿಂದ ಸಾಧ್ಯವಿಲ್ಲ. ಏಕೆಂದರೆ ನಾವು ಬಹುಕಾಲದಿಂದ ಅದರ ಅಭ್ಯಾಸವನ್ನು ಬಿಟ್ಟಿದ್ದೇವೆ. ಇದರಿಂದ ತೋರುವದೇನೆಂದರೆ ಇಂದ್ರಿಯಗಳನ್ನೂ ಮನಸ್ಸನ್ನೂ ಒಳಮುಖವಾಗಿ ಮಾಡುವ ಅಭ್ಯಾಸವು ನಮಗೆ ಕಡಿಮೆಯಾಗಿರುವದರಿಂದ ಅದು ನಮಗೆ ಕಷ್ಟವಾಗಿದೆ. ಇಷ್ಟೇ ಹೊರತು ಅದು ಅಶಕ್ಯವಲ್ಲ. ನಿಜವಾಗಿ ಪ್ರಯತ್ನವನ್ನು ಮಾಡಿ ನಾವು ಒಳಮುಖರಾಗುವದೇ ಮನುಷ್ಯತ್ವ. ಇಂದ್ರಿಯಗಳನ್ನೂ ಮನಸ್ಸನ್ನೂ ಒಳಮುಖವಾಗಿ ಮಾಡುವ ಬಲವು ಭೌತಿಕವಿದ್ಯೆಗೆ ಇಲ್ಲ. ಧಾರ್ಮಿಕ ವಿದ್ಯೆಯು ಈ ಮಹತ್ಕಾರ್ಯವನ್ನು ಸಾಧಿಸಿ ಒಳಗಣ್ಣಿನ ಪರೆಯನ್ನು ತೆಗೆದು ಅಂತರಾತ್ಮನನ್ನು ಕಣ್ಣೆದುರಿಗೆ ಕಟ್ಟುವದು. ಇದೇ ಇದರ ಮೂರನೇ ಹೆಚ್ಚುಗಾರಿಕೆ.

**ನಾಲ್ಕನೇದು**— ಭೌತಿಕವಿದ್ಯೆಯು ಬರೀ ಮೆದುಳಿನ ಶಕ್ತಿಯನ್ನು ಹೆಚ್ಚಿಸುವದು. ಸಾಮಾನ್ಯವಾಗಿ ನೋಡಿದರೆ ಈ ಬುದ್ಧಿಶಕ್ತಿಯಿಂದ ಅನೇಕರು ಬೇಕುಬೇಕಾದ ಸೌಕರ್ಯಗಳನ್ನು ಸ್ವಸಾಮರ್ಥ್ಯದಿಂದ ಸಂಪಾದನೆಯನ್ನು ಮಾಡಿ ಎಲ್ಲರ ತಲೆಯನ್ನೂ ಮೆಟ್ಟಿ ಹಾರುವಂಥವರಾಗ ಬಹುದು. ಸೂಕ್ಷ್ಮದೃಷ್ಟಿಯಿಂದ ನೋಡಿದರೆ ಹೀಗಾಗುವದು ಲೋಕಕ್ಕೆ ಹಿತವಲ್ಲ. ಇಂಥ ಒಬ್ಬಿಬ್ಬರ ಅಭ್ಯುದಯವನ್ನು ದೇಶದ ಸುಸ್ಥಿತಿಯ ಲಕ್ಷಣವಾಗಿ ಭಾವಿಸುವದು ತಪ್ಪು. ದೇಶದ ಸುಸ್ಥಿತಿಗೆ ಬಹುಜನರ ಅಭ್ಯುದಯವೇ ಮುಖ್ಯಲಕ್ಷಣ. ಒಂದು ದೇಶದ ಪಾಲಿಗೆ ಬಂದಿರುವ ಅಭ್ಯುದಯವು ಯಾವದೋ ಒಂದು ಪರಿಮಾಣದಲ್ಲಿರುವದೆಂದಿಟ್ಟು ಕೊಳ್ಳೋಣ. ಆ ಅಭ್ಯುದಯದಲ್ಲಿ ಬುದ್ಧಿಶಾಲಿಗಳಾದ ಕೆಲವರು ತಮ್ಮ ಕೈಗೆ ಸಿಕ್ಕಿಸಿಕ್ಕಿದಷ್ಟನ್ನು ಬಾಚಿಕೊಂಡು ಬಿಟ್ಟರೆ ಉಳಿದವರ ಪಾಲಿಗೆ ಅದು ಕಡಿಮೆಯೇ ಆಗುವದು. ಪಶ್ಚಿಮದೇಶದಲ್ಲಿ ಹೀಗಾಗಿಯೇ ಕೆಲ ವರು ಅಜೀರ್ಣದಿಂದ ಸಾಯುತ್ತಿರುವರು; ಕೆಲವರು ಹೊಟ್ಟೆಗಿಲ್ಲದೆ ಹೊರಳುತ್ತಿರುವರು. ಅಂತು ಹಾಸಿ. ಧರ್ಮಬುದ್ಧಿಯಿಲ್ಲದ ಬುದ್ಧಿಶಾಲಿಗ ಳಿಂದೇನು ಪ್ರಯೋಜನ? ಅವರ ಮನೆಯ ಮುಂದೆ ನಾವು ಜೋಳಿಗೆ ಯನ್ನಗಲಿಸಿದರೆ ಒಂದು ಹಿಡಿ ಹಿಟ್ಟು ಕೂಡ ಸಿಕ್ಕುವದಿಲ್ಲವಷ್ಟೇ ಅಲ್ಲ;

ಹೊಟ್ಟೆ ಕೂಡ ಸಿಕ್ಕುವದಿಲ್ಲ. ನಾಲಿಗೆಯನ್ನು ನಾಲ್ಕುಕಡೆಗೂ ಸರಿ ಮಾಡಿಸುತ್ತ ಬಗೆಬಗೆಯ ಸವಿಯನ್ನು ಚಪ್ಪರಿಸುವ ಭರದಲ್ಲಿ ಅವರ ಕಿವಿಗೆ ಬಡಬಗ್ಗರ ಗೋಳು ಕೇಳಿಸುವದೇ ಇಲ್ಲ. ಕೇಳಿಸಿದರೂ ಅವರವರ ಯೋಗಕ್ಷೇಮವು ಅವರವರದೆಂದು ಬುದ್ಧಿಶಕ್ತಿಯಿಂದ ನಿಶ್ಚಯಿಸಿ ಆ ಪ್ರಬುದ್ಧರು ತಿರುಕರನ್ನು ದುಡಿಯ ಹೇಳುವರು. ಪ್ರತಿಯೊಬ್ಬನೂ ದುಡಿದುಣ್ಣಬೇಕೆಂಬ ಮಾತು ಒಪ್ಪತಕ್ಕದ್ದೇ. ಮನೆಯ ಮುಂದೆ ಬಂದು ಹಸಿವಿನಿಂದ ಕಂಗೆಟ್ಟು ಬೇಡುವಾಗ ಕೂಲಿಗೆ ಹೋಗೆಂದು ಘಂಟಾಘೋಷದಿಂದ ಹೇಳುವದು ವಿಚಾರಶಕ್ತಿಗೆ ರಮಣೀಯವಾದರೂ ಜನಕ್ಕೆ ಹಿತಕರವಲ್ಲ. ತನಗಾಗಿ ಇತರರೆಂದು ಸಾಮಾನ್ಯವಾಗಿ ಸರ್ವರನ್ನೂ ತನ್ನ ಸುಖಕ್ಕೆ ಉಪಕರಣವನ್ನಾಗಿ ಮಾಡಿಕೊಳ್ಳುವದೇ ಬುದ್ಧಿಶಕ್ತಿಯ ಸ್ವಭಾವ. ಹೀಗಾದಷ್ಟು ದೇಶಕ್ಕೆ ದುರ್ದಶೆಯೇ ಸರಿ. ಬುದ್ಧಿಶಕ್ತಿಯು ದೇಶವನ್ನಾಳುವದು ದೇವರ ಮನಸ್ಸಿಗೆ ಬರುವದಿಲ್ಲ. ದೇವರು ತಾನೂ ಈ ಬ್ರಹ್ಮಾಂಡವನ್ನು ಬುದ್ಧಿಶಕ್ತಿಯಿಂದ ಆಳುವದಿಲ್ಲ. ದೇವರು ಜಗತ್ತನ್ನು ಆಳುವನು ಹೃದಯಶಕ್ತಿಯಿಂದ. ದೇವರು ಜಗತ್ತಿನ ಸ್ಥಿತಿಗತಿಗೆ ಆಗತ್ಯವಾದ ಧರ್ಮವನ್ನು ವೇದದಲ್ಲಿ ಉಪದೇಶಮಾಡಿ ಅದರಂತೆ ನಡೆಯಬೇಕೆಂದು ಜನರಿಗೆಲ್ಲಾ ಆಜ್ಞೆಯನ್ನು ಮಾಡಿರುವದೆಲ್ಲಾ ಬುದ್ಧಿಯ ಮಾತಾಗಿರಬಹುದು. ಆದರೆ ಯಾವನಾದರೂ ಈ ನಿಯಮಗಳನ್ನು ಮೀರಿದರೆ ಒಡನೆ ದೇವರು ಅವನ ತಲೆಯನ್ನು ಒಡೆಯುವದಿಲ್ಲ. ಪಂಚಮಹಾಪಾತಕಗಳನ್ನು ಮಾಡಿದ್ದರೂ ದೇವ! ಎಂದು ಶರಣು ಬಂದೊಡನೆಯೆ ಅವನನ್ನು ಕ್ಷಮಿಸಿ ಉದ್ಧರಮಾಡುತ್ತೇನೆಂದು ಶ್ರೀಕೃಷ್ಣನು

'ಅಪಿಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸಮಂತವ್ಯಃ ಸಮ್ಯಗ್ವ್ಯವಸಿತೋಹಿ ಸಃ' ॥

ಎಂಬ ಗೀತಾಶ್ಲೋಕದಿಂದ ಹೇಳಿದ ಇದು ಹೃದಯದಿಂದ ಹೊರಟಮಾತು. ಮನುಷ್ಯರೆಲ್ಲರೂ ತಮ್ಮ ತಮ್ಮ ಉದ್ಯೋಗದಿಂದ ತಮ್ಮ ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳಲೆಂದು ಕೈಕಾಲು ಮೊದಲಾದವುಗಳನ್ನು ಕೊಟ್ಟದ್ದು ದೇವರ ಬುದ್ಧಿಯ ಪ್ರಭಾವ. ತನಗೆ ಶರಣೆಂದೊಡನೆ ಅವನು ನಿರುದ್ಯೋಗಿಯಾಗಿದ್ದರೂ ಅವನ ಸರ್ವಯೋಗಕ್ಷೇಮವನ್ನೂ ತಾನೇ ವಹಿಸುವದು

ದೇವರ ಹೃದಯಪ್ರಭಾವ. ಸಾಮಾನ್ಯವಾಗಿ ಜನರಿಗೆ ದೇವರಲ್ಲಿ ಆದರವಿರುವದಕ್ಕೆ ಅವನ ಹೃದಯಶಕ್ತಿಯು ಕಾರಣವೇ ಹೊರತು ಬುದ್ಧಿಶಕ್ತಿಯಲ್ಲ.

ಲೋಕದಲ್ಲಿ ನೀನು ರಾಜಶಾಸನವನ್ನನುಸರಿಸಿ ಇಂಥ ಕೆಲಸವನ್ನು ಮಾಡತಕ್ಕದ್ದೆಂದರೆ ಜನರು ಮುಖವನ್ನು ಸೊಟ್ಟ ಮಾಡುತ್ತಾರೆ; ಪ್ರೇಮದಿಂದ ಹೇಳಿದರೆ ಒಂದಕ್ಕೆ ಹತ್ತರಷ್ಟನ್ನು ಮಾಡುವದಕ್ಕೂ ಹಿಂದೆಗೆಯುವದಿಲ್ಲ. ಶಾಸನವು ಬುದ್ಧಿಶಕ್ತಿಯ ಸಂಬಂಧವಾದದ್ದು. ಪ್ರೇಮವು ಹೃದಯಶಕ್ತಿ. ಬುದ್ಧಿಶಕ್ತಿಯು ತಂದೆಯಂತೆ; ಹೃದಯಶಕ್ತಿಯು ತಾಯಿಯಂತೆ. ಮಕ್ಕಳಿಗೆ ತಂದೆಯ ಶಿಕ್ಷಣದಿಂದ ವಿವೇಕವುಂಟಾಗುವದು ನಿಜ; ಆದರೆ ಅವರ ಯೋಗಕ್ಷೇಮವು ತಾಯಿಯಿಂದ ಚೆನ್ನಾಗಿ ಸಾಗುವದು. ನಮ್ಮ ದೇವರು ನಮ್ಮನ್ನು ತಾಯಿಯಾಗಿ ರಕ್ಷಣೆ ಮಾಡುತ್ತಿರುವನು. ದೇವರಿಗೆ ಸ್ತ್ರೀತ್ವವನ್ನು ಬೇರೆ ಯಾವ ದೇಶದಲ್ಲಿಯೂ ಕೊಟ್ಟಿಲ್ಲ. ಉಳಿದ ಜನಾಂಗಗಳ ದೇವರೆಲ್ಲಾ ಗಂಡೇ ಆಗಿರುವದರಿಂದ ಅವರನ್ನು ತಾಯಿಯಿಲ್ಲದ ತಬ್ಬಲಿಗಳೆನ್ನಬಹುದು. ಇದನ್ನು ನೋಡಿದರೆ ಉಳಿದ ಜನಾಂಗದವರಿಗೆ ಸಿಕ್ಕಿರುವದೆಲ್ಲಾ ಬುದ್ಧಿಬಲದ ತಂದೆಯ ಶಿಕ್ಷಣೆ. ಅದರಿಂದಲೇ ತಮ್ಮ ತಮ್ಮ ಪಂಥದವರ ಹೊರತು ಉಳಿದವರಿಗೆ ಸದ್ಗತಿಯೇ ಇಲ್ಲವೆಂಬ ನಿರ್ದಯಸೂಚಕವಾದ ತಿಳಿವಳಿಕೆಯು ಅವರಲ್ಲಿ ಮನೆ ಮಾಡಿಕೊಂಡಿರುವದು. ಕೆಲವು ವಿಚಾರಗಳ ಸಂದಿಯಿಂದ ನುಸಿದುಕೊಂಡು ಮುಂದೆ ಬಂದ ಬಂದರ್ಥವನ್ನು ಕಪಿಮುಷ್ಟಿಯಂತೆ ಪಟ್ಟು ಹಿಡಿಯುವದಕ್ಕಾಗಿ ಕೈಗಳನ್ನು ಕುಗ್ಗಿಸಿ ಕೊಳ್ಳುವದೇ ಬುದ್ಧಿಯ ಫಲ. ವಿಚಾರಗಳನ್ನೆಲ್ಲಾ ಮೂಲೆಯಲ್ಲಿ ಮುದರಿಟ್ಟು ಹಿತವನ್ನು ಬಯಸಿ ಆಲಿಂಗಿಸುವದಕ್ಕೆ ಕೈಗಳನ್ನು ಅಗಲಿಸುವದು ಹೃದಯದ ಫಲ. ಶಾಲೆಯಿಂದ ಹುಡುಗನು ಮನೆಗೆ ಬಂದಾಗ ಅಭ್ಯಾಸವೆಷ್ಟಾಯಿತೆಂದು ತಂದೆ ಕೇಳುವದು ವಿಚಾರದಿಂದ ಬಂದ ಮಾತು; ಹಸಿವೆಬಾಯಾರಿಕೆಗಳನ್ನು ತಾಯಿ ಕೇಳುವದು ಅಂತಃಕರಣದಿಂದ ಬಂದ ಮಾತು. ನಮ್ಮ ದೇವರು ಇತರದೇಶದ ದೇವರುಗಳಂತೆ ತಂದೆಯಾಗಿಯೂ ಇರುವನು. ಆದರೆ ನಮ್ಮನ್ನು ತಬ್ಬಲಿಗಳನ್ನಾಗಿ ಮಾಡದೆ ಆದಿಶಕ್ತಿಯ ರೂಪದಲ್ಲಿ ತಾಯಿಯಾಗಿಯೂ ಇರುವನು. ಅದ್ದ

ರಿಂದಲೇ ಅವನು ಎಲ್ಲ ಪಂಥದವರ ಯೋಗಕ್ಷೇಮವನ್ನು ನೋಡಿ ಕೊಳ್ಳುತ್ತೇನೆನ್ನುವನು. ಮಗನು ಮುನಿಸಿಕೊಂಡರೂ ತಾಯಿ ಮರುಗು ವಂತೆ ನಮ್ಮ ದೇವರ ಕಡೆಗೆ ಬರದೆ ಇದ್ದವರ ಮೇಲೆಯೂ ಅವನ ಕನಿ ಕರವಿದ್ದೇ ಇರುವದು. ಅವನು ತಾಯಿಯಾಗಿರುವದರಿಂದಲೇ ನಮಗೆ ಅವನ ಮೇಲೆ ಅಷ್ಟು ಪ್ರೀತಿ. ಲೋಕದಲ್ಲಿ ತಂದೆಯು ಆಟದ ವಸ್ತುಗ ಳನ್ನು ಮಾತ್ರ ಕೊಡಬಲ್ಲನು; ಮನಸ್ಸನ್ನು ಉಲ್ಲಾಸಗೊಳಿಸುವದು ತಾಯಿಗೆ ಮಾತ್ರ ಸಾಧ್ಯ. ನಮ್ಮ ದೇಶದಲ್ಲಿ ತಾಯಿಯೇ ಪರದೈವ. ವೇದವು 'ಪಿತೃದೇವೋ ಭವ' ಎಂದರೆ 'ತಂದೆಯನ್ನು ದೇವರಂತೆ ಭಾವಿಸು' ಎಂದು ಹೇಳುವದಕ್ಕೆ ಮುಂಚೆ 'ಮಾತೃದೇವೋ ಭವ' ಎಂದರೆ 'ತಾಯಿ ಯನ್ನು ದೇವರಂತೆ ಭಾವಿಸು' ಎಂದು ಹೇಳಿದೆ. ಸಂನ್ಯಾಸಿಗಳಿಗೆ ತಂದೆಯ ಋಣವು ತೀರಿದರೂ ತಾಯಿಯ ಋಣವು ತೀರುವದಿಲ್ಲ. ಸಂನ್ಯಾಸಿಯು ತಂದೆಯಿಂದ ತಾನು ನಮಸ್ಕಾರ ಮಾಡಿಸಿಕೊಳ್ಳುವದುಂಟು; ತಾಯಿಗೆ ಮಾತ್ರ ತಾನೇ ಅಡ್ಡಬೀಳಬೇಕು. ಹೀಗೆ ತಾಯಿಯೇ ಹೆಚ್ಚಿನ ದೇವರು. ಇಂಥ ತಾಯಿ ರೂಪದಲ್ಲಿ ದೇವರು ಲೋಕಕ್ಕೆ ನಿದರ್ಶನವಾಗಿ ತೋರಿಸಿ ರುವ ಹೃದಯಶಕ್ತಿಯು ಧಾರ್ಮಿಕವಿದ್ಯೆಯಿಂದ ಮಾತ್ರ ನಮಗೆ ದೊರೆ ಯುವದು. ವಿದ್ಯೆಯಿಂದ ಹೃದಯಶಕ್ತಿಯು ವಿಕಾಸವಾಗಿ ಇತರರಿಗಾಗಿ ತಾನೆಂಬ ಕಲ್ಪನೆ ಬಂದು ಸಾಮಾನ್ಯವಾಗಿ ತಾನು ಇತರರ ಸುಖಕ್ಕೆ ಉಪಕರಣನಾಗುವಂತಾಗುವುದು. ಈಗ ನಾವು ಹೇಳಹೋಗುವಂಥ ಧಾರ್ಮಿಕವಿದ್ಯೆಯ ಅಭ್ಯಾಸವಿಲ್ಲದವರಲ್ಲಾದರೂ ಸುದೈವದಿಂದ ಹೃದಯ ಶಕ್ತಿಯ ವಿಕಾಸವು ತೋರಬಹುದು. ಅದು ಭೌತಿಕವಿದ್ಯೆಯನ್ನು ತಿಳಿ ಯದಿರುವವರಲ್ಲಿಯೂ ಭೌತಿಕಭಾಗ್ಯವು ಸಮೃದ್ಧಿಯಾಗಿರುವಿಕೆಯನ್ನು ಹೋಲುವದು. ಭೌತಿಕವಿದ್ಯೆಯು ಭೌತಿಕಭಾಗ್ಯದ ಬೆಳವಣಿಗೆಗೆ ಹೆಚ್ಚು ಸಹಾಯಕವಾಗುವಂತೆ ಧಾರ್ಮಿಕವಿದ್ಯೆಯು ಅಂತಃಕರಣದ ವಿಕಾಸಕ್ಕೆ ತುಂಬ ನೆರವಾಗುವದು.

## ಧಾರ್ಮಿಕವಿದ್ಯೆಯ ಅಗತ್ಯ.

ಧಾರ್ಮಿಕವಿದ್ಯೆ ಇಲ್ಲದಿರುವದು ಭೌತಿಕಭಾಗ್ಯದ ಉಪಭೋಗಕ್ಕೇನೂ ಅಡ್ಡಿಯಾಗುವದಿಲ್ಲ. ಆದರೆ ಹಾಗೆ ಮಾಡುವದು ವಿವೇಕಿಗಳಿಗೆ ಯೋಗ್ಯ

ವಲ್ಲಿ. ಒಬ್ಬ ಗೃಹಸ್ಥನು ಒಂದೆಡೆಯಲ್ಲಿ ಅನ್ನಸತ್ರವನ್ನಿಟ್ಟಿರುವನೆಂದು ತಿಳಿಯೋಣ. ನಾವು ದಾರಿಯನ್ನು ನಡೆನಡೆದು ಆಯಾಸಗೊಂಡು ಆ ಸತ್ರಕ್ಕೆ ಹೋಗುತ್ತೇವೆ. ಅಲ್ಲಿ ನಮಗೆ ಸವಿಸವಿಯಾದ ಊಟವು ದೊರೆಯುತ್ತದೆ. ಇಷ್ಟಾಗುತ್ತಲೇ ನಾವು ನಮ್ಮ ನಾಲಿಗೆಯನ್ನು ನಾಲ್ಕುಕಡೆಗೂ ಸರಿದಾಡಿಸಿಕೊಳ್ಳುತ್ತ ನಮ್ಮ ದಾರಿಯನ್ನು ಹಿಡಿಯಬಹುದೋ? ನಾವು ಹಾಗೆ ಮಾಡುವದಾದರೆ ಪಶುಗಳಿಗೂ ನಮಗೂ ಭೇದವೇನು? ಪಶುಗಳೂ ಹೊಟ್ಟೆತುಂಬ ಮೇದು ಮೆಲಕುಹಾಕುತ್ತ ಹೋಗುತ್ತವಲ್ಲ! ಆದ್ದರಿಂದ ನಮ್ಮ ಕೆಲಸವು ಅಲ್ಲಿಗೆ ಮುಗಿಯಲಿಲ್ಲ. ನಾವು ಆ ಸತ್ರದ ಯಜಮಾನನು ಯಾರೆಂದು ತಿಳಿದುಕೊಳ್ಳಬೇಕು. ಅವನಿಂದ ನಮಗಾದ ಉಪಕಾರಕ್ಕಾಗಿ ಅವನಿಗೆ ನಮ್ಮ ಕೃತಜ್ಞತೆಯನ್ನು ತೋರಿಸಬೇಕು. ಸತ್ರದ ಯಜಮಾನನು ಉಪಕಾರಸ್ಮರಣೆಯನ್ನು ನಿರೀಕ್ಷಿಸದಿರಬಹುದು. ಅದು ಅವನ ಧರ್ಮ. ಅವನಿಗೆ ಕೃತಜ್ಞತೆಯನ್ನು ತೋರಿಸುವದು ನಮ್ಮ ಧರ್ಮ. ಇದರಿಂದ ನಮ್ಮ ಮತ್ತು ಅವನ ಪರಿಚಯವು ಬೆಳೆದು ನಮಗೆ ಸತ್ರದ ಅನುಕೂಲತೆಯು ಇನ್ನೂ ಹೆಚ್ಚಾಗಿಯೇ ದೊರೆಯಬಹುದು. ಈ ಜಗತ್ತೆಂಬುವದೊಂದು ಸತ್ರ. ಇದರ ಯಜಮಾನನು ದೇವರು. ನಾವೆಲ್ಲಾ ದಾರಿಹೋಕರಾಗಿ ಇದಕ್ಕೆ ಬಂದಿದ್ದೇವೆ. ನಮ್ಮ ಉಪಭೋಗಕ್ಕಾಗಿ ದೇವರು ಅನೇಕಪದಾರ್ಥಗಳನ್ನು ನಿರ್ಮಿಸಿದ್ದಾನೆ ಮತ್ತು ಅವುಗಳಿಂದ ಆನಂದವನ್ನು ಪಡೆಯುವದಕ್ಕೆ ತಕ್ಕ ಇಂದ್ರಿಯಗಳನ್ನೂ ನಮಗೆ ದಯಮಾಡಿ ಕೊಟ್ಟಿದ್ದಾನೆ. ನಾವೂ ಅವನ ಸೃಷ್ಟಿಯ ವಸ್ತುಗಳಿಂದ ಪ್ರತಿಕ್ಷಣದಲ್ಲಿಯೂ ಆನಂದವನ್ನು ಪಡೆಯುತ್ತಿದ್ದೇವೆ. ಅವುಗಳ ಉಪಭೋಗದಿಂದಲೇ ನಮ್ಮ ಜೀವನ. ಹೀಗಿದ್ದ ಮೇಲೆ ನಾವು ಈ ಜಗತ್ತೆಂಬ ಸತ್ರದ ಯಜಮಾನನಾದ ದೇವರನ್ನು ಪರಿಚಯ ಮಾಡಿಕೊಳ್ಳುವದು ಅಗತ್ಯವಲ್ಲವೊ? ಅವನಿಗೆ ನಮ್ಮ ಕೃತಜ್ಞತೆಯನ್ನು ತೋರಿಸಬೇಕಾದ್ದು ಅವಶ್ಯಕವಲ್ಲವೊ? ಈ ಕೆಲಸವನ್ನು ಮಾಡದಿದ್ದರೆ ನಾವು ದ್ವಿಪಾದಪಶುಗಳೇ ಸರಿ. ದೇವರ ಸೃಷ್ಟಿಯ ಸೌಖ್ಯವನ್ನು ಉಂಡಷ್ಟಕ್ಕಾಗಿ ನಾವು ದೇವರಿಗೆ ಕೃತಜ್ಞತೆಯನ್ನು ತೋರಿಸುವ ಪದ್ಧತಿಯನ್ನಾರಂಭಿಸಿದೆವೆಂದರೆ ದೇವರ ಮತ್ತು ನಮ್ಮ ಪರಿಚಯವು ಬೆಳೆದು ದೇವರು ನಮಗೆ ತನ್ನ ಅನ್ನಸತ್ರವಾದ ಈ ಜಗತ್ತಿನಲ್ಲಿ ಇನ್ನೂ ಹೆಚ್ಚಿನ

ಸೌಕರ್ಯಗಳನ್ನೇ ಉಂಟುಮಾಡುವನು. ನಮ್ಮ ಊರೂರುಗಳ ಸತ್ರದ ಯಜಮಾನರು ಸಾಮಾನ್ಯಲೌಕಿಕರು. ಅವರ ಪರಿಚಯವಾದರೆ ಮೂರು ದಿನಗಳಾಗುತ್ತಲೇ ನಮ್ಮನ್ನು ಸತ್ರದಿಂದ ಹೊರಗೆಡವುವರೆಂಬ ಭಯವು ಬರಬಹುದು. ನಮ್ಮ ಜಗತ್ತೆಂಬ ಸತ್ರದ ಯಜಮಾನನ ಮಾತು ಬೇರೆ. ಅವನ ಪರಿಚಯವನ್ನು ಮಾಡಿಕೊಂಡಷ್ಟು ಅವನು ನಮಗೆ ಹೆಚ್ಚಿನ ಸೌಕರ್ಯಗಳನ್ನು ಕಲ್ಪಿಸುವನು. ಆದರೆ ಆ ಆಶೆಯಿಂದ ಮಾತ್ರ ನಾವು ಅವನ ಪರಿಚಯಕ್ಕೆ ಬಾಯಿನೀರು ಸುರಿಸಬಾರದು. ಅವನಿಂದ ನಮಗು ಪಕಾರವಾಗಿರುವದು; ಆದ್ದರಿಂದ ಅವನಿಗೆ ಕೃತಜ್ಞತೆಯನ್ನು ತೋರಿಸು ವದು ನಮ್ಮ ಕರ್ತವ್ಯವು. ಅದಕ್ಕಾಗಿ ನಾವು ಅವನ ಪರಿಚಯವನ್ನು ಮಾಡಿಕೊಳ್ಳಬೇಕು. ಆ ಉದ್ದೇಶವು ಧಾರ್ಮಿಕವಿದ್ಯೆಯ ಅಭ್ಯಾಸದಿಂದ ಮಾತ್ರ ಸಿದ್ಧಿಸುವದು. ಆದ್ದರಿಂದ ಧಾರ್ಮಿಕವಿದ್ಯೆಯು ಪ್ರತಿಯೊಬ್ಬನಿಗೂ ಅಗತ್ಯವಾದದ್ದಾಯಿತು.

## ಹಿಂದುಸ್ಥಾನವು ಧರ್ಮದ ಜನ್ಮಭೂಮಿ.

ಈ ಧರ್ಮವು ನಮ್ಮ ದೇಶಕ್ಕೆ ಮಾತ್ರವೇ ಅವಶ್ಯವೆಂತಲ್ಲ; ಇದು ಜಗತ್ತಿಗೆಲ್ಲ ಬೇಕಾಗುವದು. ಜಗತ್ತಿನಲ್ಲಿ ಎಲ್ಲೆಲ್ಲಿ ಧರ್ಮವಿಚಾರವು ಎಷ್ಟೆಷ್ಟು ಜಾಗರೂಕವಾಗಿರುವದೊ ಅಲ್ಲಲ್ಲಿ ಅಷ್ಟಷ್ಟು ಸುಸ್ಥಿತಿಯು ನೆಲೆಗೊಂಡಿರುವದು. ಜಗತ್ತಿನ ಸುಸ್ಥಿತಿಯು ಧರ್ಮವಿಚಾರವನ್ನು ಇಷ್ಟು ಪೂರ್ಣವಾಗಿ ಅವಲಂಬಿಸಿಕೊಂಡಿದ್ದರೂ ಕೂಡ ಉಳಿದ ಯಾವ ದೇಶಗಳಿಗೂ ಇದರ ಜನ್ಮಭೂಮಿಯಾಗುವ ಸುಯೋಗವು ದೊರೆಯಲಿಲ್ಲ. ಜಗತ್ತಿನಲ್ಲಿ ಎಷ್ಟೋ ಕಡೆಗಳಲ್ಲಿ ಎಷ್ಟೋ ರತ್ನಗಳು ದೊರೆತಿದ್ದರೂ ಕೋಹಿನೂರಂಥ ಸರ್ವೋತ್ಕೃಷ್ಟರತ್ನವು ಉಳಿದ ಕಡೆಗಳಲ್ಲಿ ಕಾಣಿಸಿಕೊಳ್ಳಲಿಲ್ಲ. ಅದರಂತೆ ಜಗತ್ತಿನಲ್ಲಿ ಎಷ್ಟೋ ಕಡೆಗಳಲ್ಲಿ ಎಷ್ಟೋ ಗಹನವಿಚಾರಗಳ ಗಡಿಬಿಡಿಯು ಹುಟ್ಟಿದ್ದರೂ ಧರ್ಮವಿಚಾರದಂಥ ಪವಿತ್ರಧ್ವನಿಯು ಉಳಿದ ಕಡೆಗಳಲ್ಲಿ ಹುಟ್ಟಲಿಲ್ಲ. ಧರ್ಮವಿಚಾರಕ್ಕೆ ನಮ್ಮ ಭರತಭೂಮಿಯೇ ತವರೂರು. ಜಗತ್ತಿನಲ್ಲಿ ಎಷ್ಟೆಷ್ಟು ಬಗೆಯ ಧರ್ಮಪಂಥಗಳಿವೆಯೊ ಅವುಗಳ ತತ್ತ್ವಗಳೆಲ್ಲಾ ಬಹುಮಟ್ಟಿಗೆ ಹಿಂದುಸ್ಥಾನದಲ್ಲಿ ಹುಟ್ಟಿದವುಗಳೇ ಆಗಿರುತ್ತವೆ. ಚೈನಾ, ಪ್ರಷ್ಯಾ, ಗ್ರೀಸ್ ಮೊದಲಾದ

ಎಲ್ಲ ದೇಶಗಳಲ್ಲಿರುವ ಧರ್ಮಧ್ವನಿಯು ಇಲ್ಲಿಂದ ಹೊರಟು ಹರಿದದ್ದಾಗಿದೆ. ಆದ್ದರಿಂದ ಅಖಂಡಭೂಮಂಡಲವೂ ಈ ದೃಷ್ಟಿಯಿಂದ ನಮ್ಮ ದೇಶಕ್ಕೆ ಋಣಿಯಾಗಿದೆ. ನಮ್ಮ ದೇಶವು ಇತರದೇಶಕ್ಕೆ ಹಾಕಿರುವ ಧರ್ಮಭಿಕ್ಷೆಗೆ ಕೃತಜ್ಞತಾಸೂಚಕವಾಗಿ ಪ್ರತಿಯೊಂದುಜನಾಂಗವೂ ಈ ದೇಶಕ್ಕೆ ಎಷ್ಟು ಉಪಕಾರವನ್ನು ಮಾಡಿದರೂ ತೀರದಂತಿರುವದು. ಈ ಧರ್ಮಾಮೃತದ ಸೂರೆಯು ಬರೀ ಹಿಂದಿನ ಕಾಲದ ಮಾತಲ್ಲ. ಅವಿಚ್ಛಿನ್ನವಾಗಿ ಈ ಉದ್ಯೋಗವು ನಡೆದೇ ಇರುವದು. ಸ್ವಾಮಿ ರಾಮತೀರ್ಥರು ಮತ್ತು ಸ್ವಾಮಿ ವಿವೇಕಾನಂದರು ಮೊದಲಾದವರು ಮೊನ್ನೆಮೊನ್ನೆ ಪಶ್ಚಿಮದಲ್ಲೆಲ್ಲಾ ಸುಡುಗಾಡಿ ಹಿಂದುಧರ್ಮದ ಜಯಧ್ವನಿಯನ್ನು ಜಗತ್ತಿನಲ್ಲೆಲ್ಲಾ ತುಂಬಿ ತೂರಿರುವರು. ಹೀಗೆ ಹಿಂದುಸ್ಥಾನವು ಈಗಲೂ ಧರ್ಮದ ಅರವಟ್ಟಿಗೆ ಯನ್ನಿಟ್ಟಿರುವಂಥದ್ದಾಗಿದೆ. ಇನ್ನೂ ವಿಚಾರಮಾಡಿದರೆ ಈಚೆಗೆ ಪರದೇಶದವರು ನಮ್ಮ ದೇಶಕ್ಕೂ ಧರ್ಮೋಪದೇಶಕರಾಗಿ ಬಂದ ಉದಾಹರಣೆಗಳು ಈಗ ಸಂಭವಿಸಿವೆ. ಪಶ್ಚಿಮದೇಶದವರು ನಮಗೆ ಜ್ಞಾನಸ್ನಾನವನ್ನು ಮಾಡಿಸಿ ಕ್ರಿಸ್ತಧರ್ಮದಾನವನ್ನು ಮಾಡಬೇಕೆಂದು ಉಪದೇಶಕರನ್ನು ಕಳುಹಿಸಿದ್ದಾರೆ. ಆದರೆ ಸೂರ್ಯನ ಮುಂದಿನ ಮಿಣುಕುಹುಳದಂತೆ ಅವರ ಬೆಳಕು ನಮ್ಮ ದೇಶದಲ್ಲಿ ಚೆನ್ನಾಗಿ ಬೀಳಲಿಲ್ಲ. ಅವರ ಕ್ರೈಸ್ತನು ಪೂರ್ವ ದೇಶದಲ್ಲಿಯೇ ಹುಟ್ಟಿದವನು; ಪೂರ್ವದೇಶದಲ್ಲಿಯೇ ಬೆಳೆದವನು. ಅವನಿಗಾದ ಧರ್ಮಶಿಕ್ಷಣವು ಪೂರ್ವದೇಶದ್ದು. ಅವನ ಶಿಷ್ಯರು ಇದನ್ನು ಮತ್ತೆ ನಮಗೆ ಹೇಳುವದಕ್ಕೆ ಬಂದದ್ದು ಶಿವನಿಗೆ ಪಂಚಾಕ್ಷರಿಯನ್ನುಪದೇಶಿಸುವದಕ್ಕೆ ಬಂದಂತಿದೆ. ಹೀಗೆ ಯಾರು ಎಲ್ಲಿ ಧರ್ಮರಹಸ್ಯವನ್ನು ಕಂಡುಹಿಡಿದೆವೆನಸರೂ ಆದರ ಮೂಲವನ್ನು ಹುಡುಕಿದರೆ ಅದು ನಮ್ಮ ದೇಶದ ಒಂದು ಮೂಲೆಯಲ್ಲಿರುವದು.

## ಧರ್ಮಶ್ರದ್ಧೆಯು ಹಿಂದುಸ್ಥಾನದವರ ಹುಟ್ಟುಗುಣ.

ಧರ್ಮವು ತನ್ನ ಜನ್ಮದೇಶದ ಪ್ರತಿಯೊಂದುಕಣದಲ್ಲಿಯೂ ವ್ಯಾಪಿಸಿಕೊಂಡಿರುವದೆಂದು ತೋರುತ್ತದೆ. ಆದ್ದರಿಂದ ಇಲ್ಲಿ ಹುಟ್ಟಿದ ಜನರಿಗೆಲ್ಲಾ ಧರ್ಮಶ್ರದ್ಧೆಯು ಹುಟ್ಟುಗುಣವಾಗಿ ಬಂದಿರುವದೆಂದು ಹೇಳಬಹುದು. ಉಳಿದ ದೇಶದಲ್ಲಿ ಲೌಕಿಕಸಂಪತ್ತಿಗೆ ಬೆಲೆ ಹೆಚ್ಚು. ನಮ್ಮಲ್ಲಿ ಧಾರ್ಮಿಕ

ಸಂಪತ್ತಿಗೆ ಬೆಲೆ ಹೆಚ್ಚು. ಧರ್ಮವೊಂದಿದ್ದರೆ ಸರ್ವವೂ ಇದ್ದಂತೆಯೆಂದೂ ಧರ್ಮವೊಂದು ಹೋದರೆ ಸರ್ವನಾಶವಾಯಿತೆಂದೂ–ಅಷ್ಟೇ ಏಕೆ?–ಆತ್ಮನಾಶವೇ ಆದಂತೆಯೇ ಎಂದೂ ನಮ್ಮ ದೇಶದವರ ಭಾವನೆಯಿರುವದು. ಆದ್ದರಿಂದ ಇಲ್ಲಿಯ ಜನರಿಗೆ ಧರ್ಮವನ್ನು ಕಳೆದುಕೊಳ್ಳುವುದೆಂದರೆ ಆಗದ ಮಾತು. ಜಗತ್ತಿನ ಮುಂದೆ ನಮ್ಮ ದೇಶಕ್ಕೇನಾದರೂ ಹೆಚ್ಚಿನ ಬೆಲೆಯಿದ್ದರೆ ಅದು ಧರ್ಮದಿಂದಲೇ. ಪ್ರಾಚೀನರಿಗೂ ಈಗಿನವರಿಗೂ ಹೋಲಿಸಿದರೆ ನಮ್ಮ ಧರ್ಮಶ್ರದ್ಧೆಯು ಎಷ್ಟೋ ಬಡವಾಗಿರಬಹುದು. ಆದರೆ ಪರದೇಶೀಯರೊಡನೆ ಹೋಲಿಸಿದರೆ ಈಗಲೂ ನಮ್ಮ ದೇಶದವರ ಧರ್ಮಶ್ರದ್ಧೆಯು ನಿಸ್ಸಂದೇಹವಾಗಿ ಮೇಲುಗೈಯಾಗಿರುವದು. ಹಿಂದಿನ ಇತಿಹಾಸವನ್ನು ನೋಡಿದರಂತು ಧರ್ಮಶ್ರದ್ಧೆಯದೇ ಸೂರೆ. ಹದಿನಾಲ್ಕು ಲೋಕವನ್ನಾದರೂ ಹುಲ್ಲಿಗಿಂತ ಕಡಿಮೆಯಾಗಿ ಕಂಡು ಧರ್ಮವೊಂದನ್ನು ಉಳಿಸಿಕೊಂಡು ಬಾಳಿದವರ ಚರಿತ್ರೆಗಳು ಮಹಾಭಾರತರಾಮಾಯಣಾದಿ ಗ್ರಂಥಗಳಲ್ಲಿ ತುಂಬಿ ತುಳುಕುತ್ತವೆ. ದಿಕ್ಪ್ರದರ್ಶನಾರ್ಥವಾಗಿ ಹರಿಶ್ಚಂದ್ರನನ್ನು ತೆಗೆದುಕೊಳ್ಳೋಣ. ರಾಜ್ಯವನ್ನಾದರೂ ಬಿಟ್ಟೇನೇ ಹೊರತು ಧರ್ಮವನ್ನು ಬಿಡಲಾರೆನೆಂದು ಹರಿಶ್ಚಂದ್ರನು ಒಮ್ಮೆ ವಿಶ್ವಾಮಿತ್ರರೆದುರಿಗೆ ಲೋಕಾಭಿರಾಮವಾಗಿ ಆಡಿದನು. ಆ ಮಾತಿಗೇ ಸಿಕ್ಕಿಸಿಕೊಂಡು ವಿಶ್ವಾಮಿತ್ರರು ಅವನ ದೇಶವನ್ನು ಬೇಡಿದರು. 'ಮಾತಾಡಿದರೆ ಹೋಯಿತು; ಮುತ್ತೊಡೆದರೆ ಹೋಯಿತು' ಎಂಬ ಗಾದೆಯಂತೆ ಅವನು ತಾನು ಆಡಿದಂತೆ ನಡೆಸುವದಕ್ಕೆ ಸಿದ್ಧನಾದನು. ನಿಜವಾಗಿ ಅವನು ಆ ಅರ್ಥವನ್ನಿಟ್ಟು ಮಾತಾಡಿರಲಿಲ್ಲ. ಹೀಗೆಂದು ಅವನು ಹೇಳಿಕೊಂಡಿದ್ದರೆ ವಿಶ್ವಾಮಿತ್ರರು ಸುಮ್ಮನಾಗುತ್ತಿದ್ದರು. ಆದರೆ ಅವನ ಮಾತು ಹುಸಿಯಾಗುತ್ತಿತ್ತು. ಬಾಯಿಂದ ಹೊರಟ ಮಾತುಗಳನ್ನು ಉಳಿಸಿಕೊಳ್ಳುವ ಧರ್ಮಶ್ರದ್ಧೆಯಿಂದ ಅವನು ತನ್ನ ರಾಜ್ಯವನ್ನೇ ತ್ಯಾಗ ಮಾಡಿದನು. ಅವನಿಗೆ ತನ್ನ ಒಂದುಮಾತಿನ ತೂಕವು ತನ್ನ ಸಮಸ್ತ ಭೂಮಂಡಲಾಧಿಪತ್ಯದ ತೂಕಕ್ಕಿಂತ ಹೆಚ್ಚಿನದೆನಿಸಿತು. ಆ ಮೇಲೆ ಅವನು ಮತ್ತಿಷ್ಟು ಆ ವಿಶ್ವಾಮಿತ್ರರಿಗೇನೇ ಅಪಾರವಾದ ದಕ್ಷಿಣಾದ್ರವ್ಯವನ್ನು ಕೊಡುವ ಕಟ್ಟಿಗೆ ಸಿಕ್ಕುಬಿದ್ದನು. ಈ ದಕ್ಷಿಣಾದ್ರವ್ಯವನ್ನು

ಸಂಪಾದಿಸುವದಕ್ಕಾಗಿ ಅವನು ತನ್ನ ಧರ್ಮಪತ್ನಿಯನ್ನೂ ಸತ್ಪುತ್ರನನ್ನೂ ಮಾರಿದ್ದಲ್ಲದೆ ಸಾಲದ್ದಕ್ಕೆ ತಾನು ಹೊಲೆಯನ ಆಳುತನಕ್ಕೆ ಸಿಲ್ಕುವದಕ್ಕೂ ಹಿಂದೆಗೆಯಲಿಲ್ಲ. ಇಷ್ಟೇ ಅಲ್ಲ. ತಾನೇ ತನ್ನ ಹೆಂಡತಿಯನ್ನು ಕೈಯಾರೆ ಕತ್ತಿಯಿಂದ ಕತ್ತರಿಸುವ ಭಯಂಕರಪ್ರಸಂಗವನ್ನು ಅವನು ಮೈಮೇಲೆ ತಂದುಕೊಳ್ಳಬೇಕಾಯಿತು. ಇಷ್ಟಾದರೂ ಅವನು ತನ್ನ ಧರ್ಮಶ್ರದ್ಧೆಯ ಒಂದು ಕೂದಲನ್ನು ಕೂಡ ಕೊಂಕಿಸಲಿಲ್ಲ. ಒಂದುಮಾತನ್ನು ವ್ಯರ್ಥವಾಗಗೊಟ್ಟಿದ್ದರೆ ಅವನಿಗೆ ಯಾವ ಕಷ್ಟವೂ ಒದಗುತ್ತಲೇ ಇರಲಿಲ್ಲ. ಇದು ಅವನಿಗೆ ಗೊತ್ತಿದ್ದರೂ ಚಿಂತಾಮಣಿಯಂಥ ತನ್ನ ಧರ್ಮವನ್ನು ಮಾರಗೊಟ್ಟು ಲೌಕಿಕಸಂಪತ್ತೆಂಬ ಕಾಜಿನ ಚೂರನ್ನುಳಿಸಿಕೊಳ್ಳುವ ಕಲ್ಪನೆ ಕೂಡ ಅವನ ಮನಸ್ಸಿನಲ್ಲಿ ತಲೆಯೆತ್ತಲಿಲ್ಲ. ಇದನ್ನು ಪುರಾಣಕಾಲದ ಶ್ರದ್ಧೆಯೆಂದರೂ ಈಗಿನ ಕಾಲದಲ್ಲಿಯೂ ಕೂಡ–ಅದರ ಹೊಳಪು ಎಷ್ಟೇ ಮಾಸಿದ್ದರೂ–ಅದು ಇತರ ಎಲ್ಲಾ ಜನಾಂಗದವರ ಕಣ್ಣು ಕುಕ್ಕುವಷ್ಟು ಮಿರುಗುತ್ತಿರುವ ವಿಷಯದಲ್ಲೇನೂ ಕಡಿಮೆ ಇಲ್ಲ.

ಈ ನಮ್ಮ ಇತಿಹಾಸಕಾಲದಲ್ಲಿ ಘೋರಿಮಹಮ್ಮದನು ಒಮ್ಮೆ ದಂಡೆತ್ತಿ ಬಂದಾಗ ರಾಜಪುತ್ರರ ತೋಳ್ಬಲವನ್ನು ನೋಡಿ ಅವರೊಡನೆ ಹೋರಾಡಲಾರದೆ ಉಪಾಯದಿಂದ ಅವರನ್ನು ಗೆಲ್ಲಬೇಕೆಂದು ತನ್ನ ಸೇನೆಯ ಸುತ್ತಲೂ ಆಕಳುಗಳನ್ನು ನಿಲ್ಲಿಸಿಕೊಂಡನಂತೆ. ಮಹಮ್ಮದನಿಗೆ ತಗಲಲೆಂದು ಹೊಡೆಯಹೋದರೆ ಅದು ಗೋವುಗಳಿಗೆ ತಗಲಿ ಅವುಗಳ ವಧೆಯಾಗುತ್ತದೆಂಬ ಭೀತಿಯಿಂದ ರಾಜಪುತ್ರರು ಪಾಪಭೀತರಾಗಿ ಕೈಮುದುರಿಕೊಂಡು ಕುಳಿತರಂತೆ. ಇದರಿಂದ ಅನಾಯಾಸವಾಗಿ ಮಹಮ್ಮದನು ಕೈವಾಟಿ ಜಯಿಸಿದನಂತೆ. ಆಗ ರಾಜಪುತ್ರರು ತಮ್ಮ ರಾಜ್ಯಸಂಪತ್ತಿನ ಮಹತ್ವದ ಕಡೆಗೆ ಲಕ್ಷ್ಯವನ್ನು ಕೊಟ್ಟು ಕೆಲವು ಗೋವುಗಳನ್ನು ಕೊಂದಿದ್ದರೆ ಮಹಮ್ಮದನಿಗೆ ಜಯವಾಗದೆ ತಮ್ಮ ರಾಜ್ಯವು ತಮ್ಮದಾಗಿ ಉಳಿದುಕೊಳ್ಳುತ್ತಿತ್ತೆಂದು ಕೆಲವರು ಅವರ ತಲೆಯ ಮೇಲೆ ಗೂಗೆಯನ್ನು ಕೂಡಿಸುತ್ತಾರೆ. ರಾಜ್ಯಕ್ಕೆ ಮಹತ್ವವನ್ನು ಕೊಟ್ಟು ವಿಚಾರಮಾಡಿದರೆ ಅದು ಯೋಗ್ಯವೇ ಎನಿಸುತ್ತದೆ. ಹೀಗೆಂದು ರಾಜಪುತ್ರರದು ತಪ್ಪೇ ಸರಿಯೆಂದು ಹೇಳಲಿಕ್ಕೆ ಬರುವದಿಲ್ಲ. ಅದಕ್ಕೂ

ಕಾರಣವಿದೆ. ಧರ್ಮದೃಷ್ಟಿಯಿಂದ ನೋಡಿದರೆ ಗೋವಧೆಯು ಬಹು ಹೀನವಾದದ್ದೆನಿಸುತ್ತದೆ. ಕೆಲವುಗೋಗಳನ್ನು ಕೊಂದರೆ ತಮ್ಮ ರಾಜ್ಯವು ತಮಗೆ ಉಳಿಯುವದೆಂದು ಅವರಿಗೆ ತಿಳಿಯದೆ ಇರಲಿಲ್ಲ; ಆದರೆ ನಮ್ಮ ಜನರಿಗೆ ಧರ್ಮಶ್ರದ್ಧೆ ಬಹಳ. ಆದ್ದರಿಂದ ಗೋವಧೆ ಅವರಿಗೆ ಒಗ್ಗಲಿಲ್ಲ. ಗೋವಧೆಯನ್ನು ಮಾಡಿಯಾದರೂ ರಾಜ್ಯವನ್ನುಳಿಸಿಕೊಂಡರೆ ಅದಾದರೂ ಚಿರಕಾಲವಿರುವದೆಂಬ ನಂಬಿಕೆ ಏತರಿಂದ? ಇದಲ್ಲದೆ ಒಮ್ಮೆ ಗೋವಧೆಯನ್ನು ಮನಸ್ಸಿಗೆ ಒಗ್ಗಿಸಿಕೊಂಡಿದ್ದರೆ ಜಾರಿದ ಮನಸ್ಸು ಏರಲಾರದೆ ಮತ್ತೆ ಮತ್ತೆ ಜಾರುವಂತೆ ಹಿಂದುಗಳೇ ಮುಂದೆ ಗೋವಧೆಯನ್ನು ಮಾಡುವ ಸ್ಥಿತಿಗೆ ಬರುತ್ತಿದ್ದರೆಂದು ಹೇಳಬಹುದಾಗಿರುವದು. ಆಗ ಅವರು ಧರ್ಮಶ್ರದ್ಧೆಯನ್ನುಳಿಸಿಕೊಂಡದ್ದರಿಂದ ಆ ದುರ್ದಶೆ ಇದುವರೆಗೂ ಬಂದಿಲ್ಲ. ಇಷ್ಟೇ ಅಲ್ಲ. ಅವರ ತಪಃಪ್ರಭಾವದಿಂದ ಇತರರೂ ಗೋವಧೆಗೆ ಹಿಂದೆಗೆಯುವ ಪರಿಸ್ಥಿತಿಯೊದಗಿದೆ. ಇದನ್ನು ಯೋಚನೆಮಾಡಿ ರಾಜಪುತ್ರರು “ರಾಜ್ಯವು ಹೋದರೂ ಚಿಂತೆ ಇಲ್ಲ; ಗೋವಧೆಯನ್ನು ಮಾಡುವದಿಲ್ಲ”ವೆಂದು ಧರ್ಮವನ್ನುಳಿಸಿಕೊಂಡು ರಾಜ್ಯವನ್ನು ಸೂರೆಗೊಟ್ಟರು.

## ಧರ್ಮಶ್ರದ್ಧೆಯ ಮಹಿಮೆ.

ಮೇಲೆ ಹೇಳಿದಂತೆ ರಾಜಪುತ್ರರು ಗೋವಧೆಗೆ ಅಂಜಿದ್ದರ ಪರಿಣಾಮವಾಗಿ ನಮ್ಮ ರಾಜ್ಯವು ನಮ್ಮ ಕೈಬಿಟ್ಟು ಹೋಗಿದ್ದರೂ ಆಗ ನಾವು ಉಳಿಸಿಕೊಂಡ ಧರ್ಮವೇ ಇನ್ನೂ ನಮ್ಮನ್ನು ಉಳಿಸಿರುವದೆಂದರೆ ಅತ್ಯುಕ್ತಿಯಾಗಲಾರದು. ಆಗ ನಾವು ಧರ್ಮವನ್ನು ಮಾರಗೊಟ್ಟು ರಾಜ್ಯವನ್ನು ಉಳಿಸಿಕೊಂಡಿದ್ದರೆ ಅದು ನಮ್ಮನ್ನು ಉಳಿಸುತ್ತಿತ್ತೆಂದು ಹೇಳಲಿಕ್ಕೆ ಬರುವದಿಲ್ಲ. ಏಕೆಂದರೆ ರಾಜ್ಯವೈಭವದ ಪರಮಾವಧಿಯನ್ನನುಭವಿಸುತ್ತಿದ್ದ ಪರ್ಷ್ಯ, ಗ್ರೀಸ್ ಮೊದಲಾದ ರಾಜ್ಯಗಳೆಲ್ಲಾ ಧರ್ಮದ ಬೆಂಬಲವಿಲ್ಲದ್ದರಿಂದ ಮಣ್ಣುಮುಕ್ಕಿ ಹೋಗಿವೆ. ಹೀಗೆ ಎಲ್ಲಾ ಕಡೆಯಲ್ಲಿಯೂ ಮುಗಿಲು ಮುಟ್ಟುವಂತೆ ಏರುವದೂ ಆಮೇಲೆ ಮೂಳೆಗಳೆಲ್ಲಾ ಮುರಿಯುವಂತೆ ಬೀಳುವದೂ–ಹೀಗೆ ಉಳಿದ ರಾಷ್ಟ್ರಗಳು

ಹೊಯ್ದಾಡುತ್ತಿರುವಾಗ ಹಿಂದುಸ್ಥಾನವು ಸ್ವಲ್ಪ ಹೆಚ್ಚುಕಡಿಮೆ ಏಕ ರೀತಿಯಲ್ಲಿ ಉಳಿದುಕೊಂಡಿರುವದಕ್ಕೆ ಅದರ ಧರ್ಮಶ್ರದ್ಧೆಯು ಬೆಂಬಲವೇ ಕಾರಣ. ಧರ್ಮಶ್ರದ್ಧೆಯನ್ನು ಬಿಟ್ಟರೆ ನಮ್ಮ ಯೋಗಕ್ಷೇಮವನ್ನು ನಾವು ನೋಡಿಕೊಳ್ಳಬೇಕಾಗುವದು. ಮನುಷ್ಯನ ಪ್ರಯತ್ನವು ಒಂದುವೇಳೆ ಆಗಬಹುದು; ಮತ್ತೊಂದುವೇಳೆ ಹೋಗಬಹುದು. ಧರ್ಮಶ್ರದ್ಧೆಯುವರ ಮಾತು ಹಾಗಲ್ಲ. ಅವರನ್ನು ರಕ್ಷಿಸುವ ಭಾರವು ದೇವರನ್ನು ಕೂಡಿರುವದು. ದೇವರು ಸರ್ವಶಕ್ತನು. ಅವನು ಹಿಡಿದದ್ದಕ್ಕೆ ನಾಶವಾಗಲಾರದು. ಮತ್ತೊಂದೇನೆಂದರೆ ಧರ್ಮದ ಶ್ರದ್ಧೆಯಿಲ್ಲದವರಿಗೆ ಯಾವಾಗ ಯಾರಿಂದ ಏನು ಹಾನಿತಪ್ಪಿ ಎಂಥ ದುರ್ದಶೆಯೊದಗುವದೋ ಎಂದೂ ಅದಕ್ಕೇನುಪಾಯವನ್ನು ಹುಡುಕಬೇಕೋ ಎಂದೂ ಮನಸ್ಸು ಯಾವಾಗಲೂ ತಳಮಳಿಸುತ್ತಲೇ ಇರುವದು. ಧರ್ಮಶ್ರದ್ಧೆಯವರ ಮಾತು ಹಾಗಲ್ಲ. ಅವರು ಎಲ್ಲಾ ಭಾರವನ್ನೂ ದೇವರ ಮೇಲೆ ಹಾಕಿ ನಿರಾತಂಕರಾಗಿರುವರು. ಇದುವರೆಗೆ ಜಗತ್ತಿನಲ್ಲಿ ಮನುಷ್ಯಪ್ರಯತ್ನದಿಂದ ಮೇಲ್ಮೆಯನ್ನು ಕಾಪಾಡಿಕೊಂಡಿರುವ ದೇಶವು ಒಂದೂ ಇಲ್ಲ. ಧರ್ಮಶ್ರದ್ಧೆಯುಳ್ಳ ಹಿಂದುಸ್ಥಾನದವರು ಮಾತ್ರ ಅನಾದಿಕಾಲದಿಂದ ತಮ್ಮ ಹೆಸರನ್ನುಳಿಸಿಕೊಂಡೇ ಇರುವರು. ಧರ್ಮಶ್ರದ್ಧೆಯುಳ್ಳ ಯಾವ ಜನಾಂಗವನ್ನೂ ದೇವರು ಅಳಿಯಗೊಡುವದಿಲ್ಲ. ಧರ್ಮಶ್ರದ್ಧೆಯುಳ್ಳ ಹಿಂದುಸ್ಥಾನದವರಿಗೆ ಸ್ವರಾಜ್ಯಹಾನಿಯು ರೂಪವಾದ ದುರ್ದಶೆಯೇಕಾಯಿತೆಂದರೆ ಅದು ಒಂದುಬಗೆಯ ಧರ್ಮಭ್ರಷ್ಟತೆಯೇ ಎಂದು ಹೇಳಬೇಕಾಗುವದು. ಕುತ್ಸಿತವಾದ ಸ್ವಾರ್ಥಕ್ಕಾಗಿ ಅಂತಃಕಲಹಗಳನ್ನು ಬೆಳೆಸೋಣ, ತನಗೆ ಮುಂದಾಗುವ ಕೇಡನ್ನು ಬಗೆಯದೆ ತತ್ಕಾಲದಲ್ಲಿ ಪರರಿಗೆರಡು ಬಗೆಯೋಣ—ಮುಂತಾದ ಕೆಲವು ಅಧರ್ಮಗಳ ಫಲವಾಗಿ ಹಿಂದುಸ್ಥಾನದವರಿಗೆ ಎಷ್ಟೋ ದುರ್ಗತಿ ಬಂದಿದ್ದರೂ ಉಳಿದ ಎಷ್ಟೋ ಜನಾಂಗಗಳಂತೆ ಅವರ ಹೆಸರಳಿದು ಹೋಗುವ ಪರಿಸ್ಥಿತಿಯೊದಗಿಲ್ಲ. ಹಿಂದುಸ್ಥಾನದವರಿಗೆ ದೈವಬಲವೊಂದಿಲ್ಲದಿದ್ದರೆ ಇದುವರೆಗೆ ಅವರು ಪರದೇಶೀಯರ ಪದಹತಿಯಿಂದ ಧೂಳಿದ್ದು ಹೋಗದೆ ಇರುತ್ತಿರಲಿಲ್ಲ. ಅವರಲ್ಲಿನ್ನೂ ಕುಟುಕುಜೀವವಾದರೂ ಇದೆ. ಆದ್ದರಿಂದಲೇ

ಹಿಂದುಸ್ಥಾನವು ತನ್ನ ಕುಂಟಕಾಲನ್ನು ನೀವಿಕೊಳ್ಳುತ್ತ ಕಣ್ಣನ್ನು ಪಿಳಿಪಿಳಿ ಬಿಟ್ಟು ಸುತ್ತಲೂ ನೋಡುತ್ತ ಈಗ ತಾನೂ ಎಲ್ಲರಂತೆ ತನ್ನ ಕಾಲಮೇಲೆ ತಾನು ನಿಂತುಕೊಳ್ಳಬೇಕೆಂದು ಕೈಯೂರಿಕೊಂಡು ಏಳುವುದಕ್ಕೆ ಹೋಗುತ್ತಿದೆ. ಹಿಂದುಗಳಂತೆ ಯೆಹೋದ್ಯರೆಂಬ ಜನಾಂಗದವರಲ್ಲಿಯೂ ಧರ್ಮಶ್ರದ್ಧೆಯು ತಂಪು ಉಳಿದುಕೊಂಡಿರುವದರಿಂದ ಇತರಜನಾಂಗದವರ ತಾಪದಿಂದ ಅವರು ಸೀದು ಹೋಗದೆ ತಮ್ಮ ಹಸಿಯನ್ನು ತಾವು ಉಳಿಸಿಕೊಂಡಿದ್ದಾರೆ. ಧರ್ಮಶ್ರದ್ಧೆಗೂ ಮನುಷ್ಯನ ಊರ್ಜಿತಾವಸ್ಥೆಗೂ ನಿಕಟಸಂಬಂಧವಿದೆ. ಹಿರಣ್ಯಕಶಿಪು ಬೆಟ್ಟದಿಂದ ತಳ್ಳಿಸಿದರೂ ಹಾವುಗಳಿಂದ ಕಚ್ಚಿಸಿದರೂ ಸಮುದ್ರದಲ್ಲಿ ನೂಕಿದರೂ ಪ್ರಹ್ಲಾದನಿಗೆ ಎಳ್ಳಷ್ಟು ಹಾನಿಯಾಗಲಿಲ್ಲ. ಕಾದ ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿದರೂ ಸುಧನ್ವನಿಗೆ ಬಿಸಿ ತಟ್ಟಲಿಲ್ಲ. ನಿಟ್ಟಿಸಿದ ಮಾತ್ರದಿಂದ ಹಕ್ಕಿಗಳು ಸೀದು ಬೀಳುವಷ್ಟು ತಪಸ್ಸಾಮರ್ಥ್ಯವುಳ್ಳವನು ತನ್ನನ್ನು ಕಾಯಿಸಿದ ಒಬ್ಬ ಪತಿವ್ರತೆಯನ್ನು ನುಂಗಿ ನೀರುಕುಡಿಯಬೇಕೆಂದು ಕಣ್ಣು ಕೆಂಪಗೆ ಮಾಡಿಕೊಂಡಾಗ ಆಕೆಯ ಒಂದು ಕೂದಲೆಳೆಗೂ ಧಕ್ಕೆ ಹತ್ತಲಿಲ್ಲ. ಈ ರೀತಿಯಲ್ಲಿ ಧರ್ಮಶ್ರದ್ಧೆಯ ಪ್ರಭಾವವನ್ನು ತೋರಿಸುವ ಉದಾಹರಣೆಗಳು ನಮ್ಮ ಪುರಾಣಗಳಲ್ಲಿ ಬೇಕಾದಷ್ಟಿರುವವು.

## ಹಿಂದುಸ್ಥಾನಕ್ಕೆ ಧರ್ಮದ ಬರಗಾಲವಿಲ್ಲ.

ಹಿಂದುಸ್ಥಾನವು ಧರ್ಮಶ್ರದ್ಧೆಯ ಭೂಮಿಯಾದ್ದರಿಂದ ಇಲ್ಲಿಯವರ ಪ್ರವೃತ್ತಿಯೆಲ್ಲಾ ವಿಶೇಷವಾಗಿ ಧರ್ಮಾಂತರಣೆಯ ಕಡೆಗೆ ಇರುವದನ್ನು ಲಕ್ಷ್ಯಕ್ಕೆ ತಂದುಕೊಂಡೇ ಏನೋ ಇಲ್ಲಿಯ ಜನರು ಹೊಟ್ಟೆಗಾಗಿ ಇತರದೇಶದವರಷ್ಟು ಹೆಚ್ಚಾಗಿ ದುಡಿಯುವದಗತ್ಯವಿಲ್ಲದಂತೆ ದೇವರು ಭೂಮಿಯನ್ನು ಫಲವತ್ತಾಗಿ ಮಾಡಿ ಅನುಕೂಲವಾತಾವರಣದಲ್ಲಿಟ್ಟಿದ್ದಾನೆ. ಉಳಿದ ದೇಶಗಳಲ್ಲಿ ಭೂಮಿಯನ್ನು ಎಷ್ಟು ಆಳವಾಗಿ ಉತ್ತರೂ ಸಾಲದು. ಇಲ್ಲಿ ಸುಮ್ಮನೆ ಮೇಲೆಮೇಲೆ ಗೀರಿದರೂ ನಾಕು. ಮಳೆಯ ವಿಷಯವನ್ನು ತೆಗೆದುಕೊಂಡರೆ ಹಿಂದುಸ್ಥಾನದಲ್ಲಿ ಬೀಳುವಷ್ಟು ಮಳೆ ಭೂಮಿಯ ಮೇಲಿನ್ನೆಲ್ಲಿಯೂ ಬೀಳುವದಿಲ್ಲ. ಉಳಿದ ದೇಶದ ಭೂಗರ್ಭ

ದಲ್ಲಿ ಕಲ್ಲಿದ್ದಲಿ ಮೊದಲಾದ ಕ್ಷುದ್ರಪದಾರ್ಥಗಳಿರುವಾಗ ಹಿಂದುಸ್ಥಾನದ ಭೂಗರ್ಭದಲ್ಲಿ ನವರತ್ನಗಳ ಖನಿಗಳು ತುಂಬಿವೆ. ಹೀಗೆ ತನಗೆ ಸ್ವಭಾವ ಸಿದ್ಧವಾಗಿರುವ ಭಾಗ್ಯದಿಂದ ಹಿಂದುಸ್ಥಾನವು ಇಡೀ ಭೂಮಂಡಲಕ್ಕೆ ಎಷ್ಟೋ ಮಟ್ಟಿಗೆ ಅನ್ನಬಟ್ಟೆಗಳನ್ನೊದಗಿಸಿಕೊಡುತ್ತದೆಂದರೂ ತಪ್ಪಾಗ ಲಾರದು. ಆದರೂ ಇದಕ್ಕೆ ಅದರಿಂದ ಮಹತ್ತ್ವವಿಲ್ಲ. ಏಕೆಂದರೆ ಎಷ್ಟು ಅನ್ನಬಟ್ಟೆಗಳನ್ನು ಕೊಟ್ಟರೂ ಮರಣದ ಭಯವನ್ನು ತಪ್ಪಿಸಿದಂತೆ ಆಗುವದಿಲ್ಲ. ಹಿಂದುಸ್ಥಾನವು ನಾಲ್ಕುದಿಕ್ಕಿಗೂ ತನ್ನ ಧರ್ಮವನು ಹಬ್ಬಿಸಿ ಎಲ್ಲರಿಗೂ ಅಮೃತತತ್ತ್ವವನ್ನು ಸೂರೆಮಾಡುವದು. ಈ ಧರ್ಮ ಪ್ರಭಾವದ ಉಗಮಸ್ಥಾನವಾಗಿರುವದೇ ಈ ದೇಶದ ಹೆಚ್ಚುಗಾರಿಕೆ. ಈ ಹಿಂದುಸ್ಥಾನವು ಹಿಂದೆ ಧರ್ಮದಿಂದಲೇ ಏಳಿಗೆಯನ್ನು ಪಡೆಯಿತು. ಈಗಲೂ ಧರ್ಮದ ಬಲದಿಂದಲೇ ಎಡಗೈಯಲ್ಲಿ ಜೀವವನ್ನು ಹಿಡಿದು ಕೊಂಡಾದರೂ ಇದೆ. ಮುಂದೆಯೂ ಇದಕ್ಕೆ ಉನ್ನತಿಯಾಗಬೇಕಾದರೆ ಧರ್ಮದಿಂದಲೇ ಸರಿ.

ಈ ಹಿಂದುಸ್ಥಾನದಲ್ಲಿ ಜನರು ಜೀವಿಕೆಗಾಗಿ ರಾಜಕೀಯಾಧಿ ಕಾರಕ್ಕೆ ಬಾಯಿಬಿಡುವ ಕರೆಯೋಣ ಮತ್ತು ಕ್ರೈಸ್ತಧರ್ಮೋಪದೇಶಕರು ಇಲ್ಲಿನವರನ್ನು ಉದ್ಧಾರಮಾಡುತ್ತೀವೆಂದು ಬರೋಣ-ಇವೆರಡೂ ತೆಕ್ಕೆ ಯನ್ನು ಹಾಕಿಕೊಂಡು ನಮ್ಮವರ ಧರ್ಮಶ್ರದ್ಧಾಸ್ತಂಭಕ್ಕೆ ಗೆದ್ದಲಹುಳು ಗಳಾಗಿ ಪರಿಣಮಿಸಿವೆ. ಕ್ರೈಸ್ತಧರ್ಮೋಪದೇಶಕರಿಂದ ನಮಗೆ ಹೊಸ ತತ್ತ್ವವೇನೂ ತಿಳಿಯದಿದ್ದರೂ ನಮ್ಮ ಹಳೇ ಶ್ರದ್ಧೆಯು ಕಳಚಿಕೊಂಡು ಹೋಯನ್ನಾಟಕ್ಕೆ ಕಾರಣವಾಯಿತು. ಈ ಪ್ರಕಾರ ನಮ್ಮ ಶ್ರದ್ಧೆಯು ವನ ವಾಸಕ್ಕೆ ಹೋಗುತ್ತಲೇ ಆ ಸ್ಥಾನದಲ್ಲಿ ಪರಸಂಸ್ಕೃತಿಯು ಕಾಲು ಹಾಕಿತು. ಈಗ ನಮ್ಮ ಮೇಲೆ ಪರಸಂಸ್ಕೃತಿಯ ಅಧಿಕಾರವೇ ವಿಶೇಷ ವಾಗಿ ನಡೆಯುತ್ತಿದೆ. ನಮ್ಮ ಸಂಸ್ಕೃತಿಯು ಈಗೆ ಎಲ್ಲಿಯಾದರೂ ಅಜ್ಞಾತವಾಸಮಾಡಿಕೊಂಡಿದ್ದರೆ ಧರ್ಮಶ್ರದ್ಧೆಯ ಜನರಿರುವ ಹಳ್ಳಿಗಾಡಿ ನಲ್ಲಿಯೇ ಸರಿ. ನವನಾಗರಿಕತೆಯ ನರ್ತನಶಾಲೆಯಾಗಿರುವ ಪಟ್ಟಣ ಗಳಲ್ಲಿ ಅದಕ್ಕೆಲ್ಲಿಯೂ ನಿಲವಿಲ್ಲ. ಇದೇ ಕ್ರೈಸ್ತಧರ್ಮೋಪದೇಶಕರಿಂದ ನಮಗಾಗಿರುವ ಉದ್ಧಾರ. ನಿಜವಾಗಿ ಅವರಿಗೆ ನಮ್ಮ ಮೇಲೇನಾದರೂ

ಕನಿಕರವಿದ್ದರೆ ಅವರು ಈಗ ನಮ್ಮ ಧರ್ಮದ ಗೋಜಿಗೆ ಬರದೆ ಇದ್ದರೆ ಸಾಕು. ನಮ್ಮ ಧರ್ಮವು ತನಗೆ ತಾನೇ ಎಚ್ಚತ್ತುಕೊಳ್ಳುವದು. ನಮ್ಮ ಧರ್ಮವನ್ನು ನಾವು ಪೈಗೂಡಿಸಿಕೊಳ್ಳುತ್ತಲೇ-ಅಂದರೆ ನಮ್ಮ ಸಂಸ್ಕೃತಿಗೆ ನಾವು ಹಿಂದಿರುಗುತ್ತಲೇ-ನಮ್ಮ ಲೌಕಿಕಸಂಪತ್ತೂ ನಮ್ಮ ಮುಂದೆ ಉರುಳಾಡುವದೆಂಬ ಸೂಚಿಕೆಯುಂಟು. ಅಷ್ಟಾಗುವದಕ್ಕೆ ಮುಂಚೆ ಈಗ ಅವರು ನಮ್ಮನ್ನು ನಿಜವಾಗಿ ಉದ್ಧರಿಸಬೇಕೆಂದಿದ್ದರೆ ಹೀಗೆ ನಮ್ಮ ಧರ್ಮವನ್ನು ಸೂರೆಮಾಡುವದಕ್ಕೆ ಪಡುವ ಸರ್ವಸಾಹಸವನ್ನೂ ನಮಗೆ ಲೌಕಿಕಸಂಪತ್ತನ್ನು ಗಳಿಸಿಕೊಡುವ ವಿಷಯಕ್ಕೆ ಉಪಯೋಗ ಮಾಡಬೇಕು. ಏಕೆಂದರೆ ಈಗ ನಮಗೆ ಬಡಿಗ್ಯವಾಗಿರುವದು ಲೌಕಿಕ ಸಂಪತ್ತಿನಲ್ಲಿಯೇ ಹೊರತು ಧರ್ಮದಲ್ಲಲ್ಲ. ಹಿಂದುಸ್ಥಾನದಲ್ಲಿ ಧರ್ಮವು ಎಷ್ಟೇ ಕಡಿಮೆಯಾಗಿದ್ದರೂ ಅದು ಇತರದೇಶದಲ್ಲಿರುವ ಪ್ರಮಾಣ ಕ್ಕಿಂತ ಹೆಚ್ಚಾಗಿಯೇ ಇರುವದು. ಏಕೆಂದರೆ ಹಿಂದುಸ್ಥಾನವು ಧರ್ಮ ಭೂಮಿ. ಕೆರೆಯಲ್ಲಿ ನೀರು ಎಷ್ಟೇ ಕಡಿಮೆಯಾದರೂ ಅದರಿಂದ ಹರಿ ಯುವ ಕಾಲುವೆಯ ನೀರಿಗಿಂತ ಹೆಚ್ಚಾಗಿರುವದಷ್ಟೇ. ಹಿಂದುಸ್ಥಾನಕ್ಕೆ ಧರ್ಮದ ಬರಗಾಲವು ಕಾಲುಹಾಕಿತೆಂದರೆ ಉಳಿದ ದೇಶಗಳಲ್ಲೆಲ್ಲಾ ಮನು ಷ್ಯರು ಪಶುವೃತ್ತಿಗಿಳಿದ ಸೂಚನೆಯೆಂದು ಅದನ್ನು ತಿಳಿಯಬೇಕಾದೀತು.

## ದೇವರ ಕಲ್ಪನೆ ಏಕೆ ?

ಹಿಂದುಸ್ಥಾನವಾದರೂ ಆಗಲಿ, ಬೇರೆ ಯಾವ ದೇಶವಾದರೂ ಆಗಲಿ ಇಂದಿಲ್ಲದಿದ್ದರೆ ನಾಳೆಯಾದರೂ ಧರ್ಮಕ್ಕೆ ಶರಣು ಹೋಗಲೇ ಬೇಕಾಗುವದು. ಬಗೆಬಗೆಯ ಸೌಕಾರ್ಯಗಳಲ್ಲಿ ಸುಖಸ್ವರೂಪವನ್ನು ಹುಡುಕಿ ಹುಡುಕಿ ತೆಗೆಯುವ ನಡಗರದಲ್ಲಿ ಚೆನ್ನಾಗಿ ತಲೆ ತಾಕಿದ ಮೇಲೆ ಪ್ರತಿಯೊಬ್ಬ ವ್ಯಕ್ತಿಯೂ ಪ್ರತಿಯೊಂದು ದೇಶವೂ ದೇವರ ಕಲ್ಪನೆ ಯನ್ನು ತಂದುಕೊಂಡೇ ಸಮಾಧಾನಪಡಬೇಕಾಗುವದು.

ಸುಖಸ್ವರೂಪವನ್ನು ಹುಡುಕಿ ತೆಗೆಯುವ ಮಾತು ಒಂದುಕಡೆ ಇರಲಿ; ಪ್ರಪಂಚದ ಸ್ವರೂಪವನ್ನೇ ಚೆನ್ನಾಗಿ ವಿಚಾರಮಾಡಿದರೂ ಅದು ಅವನನ್ನು ದೇವರ ಕಡೆಗೇ ಕೊಂಡೊಯ್ಯುತ್ತದೆ. ಪ್ರಪಂಚದ ರಚ

ನೆಯ ವ್ಯವಸ್ಥೆಯಲ್ಲಿ ಕಾರ್ಯಕಾರಣಭಾವವನ್ನು ಬಿಡದೆ ಹುಡುಕುತ್ತ ಹೋದರೆ ದೇವರ ಕಲ್ಪನೆಯನ್ನು ತಂದುಕೊಂಡ ಹೊರತು ಅವನಿಗೆ ನಿಲ್ಲುವದಕ್ಕೆ ಎಲ್ಲೆಲ್ಲಿಯೂ ನೆಲೆಯೇ ಸಿಕ್ಕುವದಿಲ್ಲ. ಜಗತ್ತಿನ ಸ್ವಭಾವವನ್ನು ನೋಡಿರಿ. ಒಳ್ಳೇ ಕಪ್ಪುನೆಲದಲ್ಲಿ ಕಡಲೆ, ಗೋಧಿ ಮತ್ತು ಹತ್ತಿ ಮುಂತಾದ ಕೆಲವು ಬೆಳೆಗಳೇ ನಿಯಮದಿಂದ ಚೆನ್ನಾಗಿ ಬೆಳೆಯುತ್ತವೆ; ಈ ಬೆಳೆಗಳು ಕೆಂಪುನೆಲದಲ್ಲಿ ಹುಲುಸಾಗಿ ಬೆಳೆಯುವದಿಲ್ಲ. ಒಳ್ಳೇ ಕೆಂಪುನೆಲದಲ್ಲಿ ಹೆಸರು, ಅಲಸಂದಿ ಮೊದಲಾದವುಗಳು ನಿಯಮದಿಂದ ಚೆನ್ನಾಗಿ ಬೆಳೆಯುತ್ತವೆ; ಈ ಬೆಳೆಗಳು ಕರೀನೆಲದಲ್ಲಿ ಕಡಿಮೆ. ಕೆಲಕೆಲವು ದೇಶಗಳಲ್ಲಿ ಕೆಲಕೆಲವು ಬೆಳೆಗಳೇ ನಿಯಮದಿಂದ ಹೆಚ್ಚಾಗಿರುವವು. ಈ ರೀತಿಯಲ್ಲಿ ಭೂಗುಣದಲ್ಲೇನೋ ನಿಯಮವಿರುವಂತೆ ತೋರುವದು. ಇನ್ನು ಮಳೆಗಾಲದಲ್ಲಿ ಎಲ್ಲಾ ಬೆಳೆಗಳೂ ಬೆಳೆಯಲಾರಂಭಿಸುವವು; ಆದರೆ ಆಗ ಹತ್ತಿಯೂ ಗೋಧಿಯೂ ತಲೇ ಎತ್ತುವದಿಲ್ಲ. ಹುಣಸೆಯಫಲವು ಬೇಸಿಗೆಗೆಮೊದಲೇ ಹಣ್ಣಾಗಿ ಉದುರುವದು. ಮಾವು ಹಲಸುಗಳು ನಿಯಮದಿಂದ ಬೇಸಿಗೆಯಲ್ಲಿಯೇ ಹಣ್ಣಾಗುವವೇ ಹೊರತು ಆ ಕಾಲವನ್ನು ಬಿಟ್ಟು ಬೇರೆ ಯಾವ ಕಾಲದಲ್ಲಿಯೂ ಆಗುವದೇ ಇಲ್ಲ. ಬಾಳೆ, ಲಿಂಬೆ, ಮೊದಲಾದ ಕೆಲವು ಫಲಗಳು ಎಲ್ಲಾ ಕಾಲದಲ್ಲಿಯೂ ಹಣ್ಣಾಗುವವು. ವಸಂತಾದಿಋತುಗಳು ಒಂದರ ಹಿಂದೊಂದು ನಿಯಮವನ್ನು ಹಿಡಿದೇ ಬರುತ್ತಿರುವವು. ಹಗಲಿರುಳುಗಳು ನಿಯಮಕ್ಕೊಳಪಟ್ಟಂತೆಯೇ ಸಾಗುತ್ತಿರುವವು. ಹೀಗೆ ಕಾಲದಲ್ಲಿಯೂ ಏನೋ ನಿಯಮವಿರುವಂತೆ ಕಾಣುವದು. ಬೆಂಕಿಯು ನಿಯಮದಿಂದ ಬಿಸಿಯಾಗಿಯೇ ಇರುವದು; ನೀರು ನಿಯಮದಿಂದ ತಣ್ಣಗೇ ಇರುವದು. ಹೀಗೆ ವಸ್ತುಗಳಲ್ಲಿಯೂ ಒಂದು ನಿಯಮವು ಕಾಣುವದು.

ಹೀಗೆಲ್ಲಾ ಜಗತ್ತಿನಲ್ಲಿ ಎಲ್ಲಿ ನೋಡಿದರೂ ಎಡೆಬಿಡದೆ ಒಂದು ನಿಯಮವಿರುವಂತೆ ಕಾಣುವದರಿಂದ ಇದಕ್ಕೊಬ್ಬ ನಿಯಾಮಕನಿರಬೇಕೆಂದು ಊಹಿಸದಿದ್ದರೆ ಗತ್ಯಂತರವೇ ಇಲ್ಲ. ನಿಯಾಮಕನಿಲ್ಲದೆ ನಿಯಮಗಳು ತಮಗೆ ತಾವೇ ಇರುವವೆಂದು ತಿಳಿಯುವದು ಸಯುಕ್ತಿಕವಲ್ಲ. ನಿಯಾಮಕನಿಲ್ಲದೆ ನಿಯಮಗಳು ನಡೆಯುವದನ್ನು

ನಾವೆಲ್ಲಿಯೂ ಕಂಡಿಲ್ಲ. ಜಗತ್ತಿನಲ್ಲಿ ಕಾಣಬರುವ ಸರ್ವನಿಯಮಗಳಿಗೂ ನಿಯಾಮಕನಾದವನಿಗೇ ದೇವರೆಂದು ಹೆಸರು. ಆ ದೇವರ ಕಲ್ಪನೆಯನ್ನು ತಂದುಕೊಳ್ಳದಿದ್ದರೆ ಜಗದ್ರಚನೆಯ ವೈಚಿತ್ರ್ಯದ ವಿಚಾರಕ್ಕೆ ನಿಲುಗಡೆಯೇ ಸಿಕ್ಕುವದಿಲ್ಲ. ಇಷ್ಟೇ ಅಲ್ಲ; ಮನುಷ್ಯನ ಬುದ್ಧಿಶಕ್ತಿಯನ್ನೆಲ್ಲ ಸೋಲಿಸಿ ಕೊನೆಗೆ ದೇವರ ಕಡೆಗೆ ಬೆಟ್ಟುಮಾಡಿ ತೋರಿಸುವ ಸಾಧನವಾಗಿ ಪರಿಣಮಿಸುವದೇ ಜಗತ್ತಿನ ನಿಜವಾದ ಉಪಯೋಗ. ಈ ಅಭಿಪ್ರಾಯವು ಭಗವಾನ್ ಬಾದರಾಯಣರಿಗೆ ಕೂಡ ಸಮ್ಮತವಾದದ್ದೆಂದು ಅವರ ಶಾರೀರಿಕಮೀಮಾಂಸಾಶಾಸ್ತ್ರದ “ಜನ್ಮಾದ್ಯಸ್ಯ ಯತಃ” ಎಂಬ ಮೊದಲನೇ ಸೂತ್ರವೇ ಹೇಳುತ್ತದೆ. ದೇವರ ಲಕ್ಷಣಗಳನ್ನು ಹೇಳುವದಕ್ಕೆ ಹೊರಟ ಈ ಸೂತ್ರವು ಜಗತ್ತಿನ ಹುಟ್ಟುವಿಕೆಗೂ ಇರುವಿಕೆಗೂ ಹೋಗುವಿಕೆಗೂ ಕಾರಣವಾಗಿರುವದೇ ದೇವರ ಲಕ್ಷಣವೆಂದು ಹೇಳುತ್ತದೆ. ಆದ್ದರಿಂದ ಈ ಜಗತ್ತಿನ ರಚನೆಯ ವಿಶೇಷದಿಂದಲೇ ನಾವು ದೇವರ ಕಲ್ಪನೆಯನ್ನು ತಂದುಕೊಳ್ಳಬೇಕು. ಮನಸ್ಸಿಗೆ ಕೂಡ ನಿಲುಕದಂಥ ವೈಚಿತ್ರ್ಯವಿಶೇಷವುಳ್ಳ ಜಗತ್ತಿನ ಉತ್ಪತ್ತಿಗೆ ಅದಕ್ಕೆ ತಕ್ಕಂಥ ಅಚಿಂತ್ಯಾವ್ಯಕ್ತರೂಪನಾದ ಒಬ್ಬ ದೇವರನ್ನು ಕಲ್ಪಿಸಿಕೊಳ್ಳುವದು ಸರ್ವೋತ್ತಮ.

## ದೇವರ ಕಲ್ಪನೆಯ ಪ್ರಯೋಜನ.

ಜಗದ್ರಚನೆಯ ವೈಚಿತ್ರ್ಯವನ್ನು ನೋಡಿ ವಿಚಾರಮಾಡಿದವರು ಅದರ ಮೂಲಕಾರಣದ ವಿಷಯವಾಗಿ ಬಗೆಬಗೆಯಾದ ಅಭಿಪ್ರಾಯವನ್ನು ಪಡುವವರಿದ್ದಾರೆ. ಸತ್ತ್ವ, ರಜ, ತಮ- ಎಂಬ ಮೂರು ಗುಣಗಳ ಸೇರಿಕೆಯಿಂದ ಜಗತ್ತಾಯಿತೆಂದು ಕೆಲವರೆನ್ನುತ್ತಾರೆ. ಅಣುಗಳೆಲ್ಲಾ ಒಂದಕ್ಕೊಂದು ಕೂಡಿ ಆಯಿತೆಂದು ಕೆಲವರ ಅಭಿಪ್ರಾಯ. ಆಧಾರವೇನೂ ಇಲ್ಲದೆ ಜಗತ್ತು ತಾನೇ ಹೊರಬಿತ್ತೆಂದು ಕೆಲವರ ಮತ. ಇಂಥ ಈ ಕಲ್ಪನೆಗಳೆಲ್ಲಾ ವಿಚಾರದ ಅಪೂರ್ಣಸ್ಥಿತಿಯಲ್ಲಿ ಹೊರಬಿದ್ದವುಗಳಾಗಿರುವವು. ಹೇಗೆಂದರೆ ಗುಣಗಳು ಸೇರಿ ಜಗತ್ತಾಗುವದಾದರೆ ಅವುಗಳನ್ನು ಸೇರಿಸುವದಕ್ಕೆ ಒಬ್ಬನು ಬೇಕೋ ಬೇಡವೋ? ಜಡವಾದವುಗಳು ತಾವು ತಾವೇ ಹೇಗೆ ಸೇರಿಕೊಂಡಾವು? ಅಣುಗಳ ಸೇರಿಕೆಗೂ

ಇದೇ ಉತ್ತರ. ಇನ್ನು ಆಧಾರವೇನೂ ಇಲ್ಲದೆ ಜಗತ್ತು ಹುಟ್ಟಿತೆಂಬ ಮಾತು ತಾಯಿ ಇಲ್ಲದೆ ಮಗು ಹುಟ್ಟಿತೆಂಬಷ್ಟು ಅಸಮಂಜಸವಾಗಿದೆ. ಇದನ್ನೆಲ್ಲಾ ಯೋಚನೆಮಾಡಿದರೆ ಜಗತ್ತಿಗೆ ಒಂದು ಚೇತನಕಾರಣವು ಬೇಕೇಬೇಕು. ಈ ಮೂಲಕಾರಣವನ್ನು ನಾವು ಬರೀ ಊಹೆಯಿಂದ ತಿಳಿಯಬೇಕಾಗಿದೆಯೇ ಹೊರತು ಪ್ರತ್ಯಕ್ಷವಾಗಿ ಕಂಡದ್ದೆಂದು ಹೇಳುವ ಹಾಗಿಲ್ಲ. ನಾವು ಗುಣಗಳನ್ನೂ ನೋಡಿಲ್ಲ; ಅಣುಗಳನ್ನೂ ನೋಡಿಲ್ಲ; ಚೈತನ್ಯಸ್ವರೂಪವನ್ನೂ ನೋಡಿಲ್ಲ. ಯಾವದಾದರೊಂದನ್ನು ಕಲ್ಪಿಸಬೇಕಾಗಿದೆ. ಜಡವಾದ ಗುಣಗಳನ್ನೂ ಅಣುಗಳನ್ನೂ ಕಲ್ಪಿಸುವದು ದುರ್ಬಲವಾದ್ದರಿಂದ ಚೈತನ್ಯವನ್ನು ಕಲ್ಪಿಸುವದೇ ಮೇಲೆನಿಸುವದು. ನಾವು ಮನಸ್ಸಿನಲ್ಲಿ ಯಾವದರ ಕಲ್ಪನೆಯನ್ನು ಬೆಳೆಸಿಕೊಳ್ಳುವೆವೊ ಅದರ ಗುಣವನ್ನು ಮೈಗೂಡಿಸಿಕೊಳ್ಳುತ್ತ ಹೋಗುವೆವು. ಇದು ಸೃಷ್ಟಿಯ ನಿಯಮವು. ಇದು ಎಷ್ಟೋ ಜನರ ಅನುಭವದಲ್ಲಿಯೂ ಇರುವದು. ಮನಸ್ಸಿನಲ್ಲಿ ಗುರುವಿನ ಕಲ್ಪನೆಯನ್ನು ಬೆಳೆಸುವವರು ಬಹಳ ಬುದ್ಧಿಶಾಲಿಗಳಾಗುವರು; ವಾಯುವಿನ, ಮಾರುತಿಯ ಅಥವಾ ಭೀಮನ ಕಲ್ಪನೆಯನ್ನು ಬೆಳೆಸುವವರು ಬಹಳ ಬಲಶಾಲಿಗಳಾಗುವರು; ಲಕ್ಷ್ಮಿಯ ಕಲ್ಪನೆಯನ್ನು ಬೆಳೆಸುವವರು ಬಹಳ ಭಾಗ್ಯಶಾಲಿಗಳಾಗುವರು; ಪರಮೇಶ್ವರನ ಕಲ್ಪನೆಯನ್ನು ಬೆಳೆಸುವವರು ಬಹಳ ವೈರಾಗ್ಯಶಾಲಿಗಳಾಗುವರು. ಈ ನಿಯಮದಂತೆ ನೋಡಿದರೆ ನಾವು ನಮ್ಮ ಮನಸ್ಸಿನಲ್ಲಿ ಜಡವಾದ ಅಣುಗಳ ಅಥವಾ ಗುಣಗಳ ಕಲ್ಪನೆಯನ್ನು ಹೆಚ್ಚಿಸಿಕೊಂಡರೆ ನಾವೂ ಜಡರೇ ಆಗಬೇಕಾಗುವದು. ಅದು ನಮಗೆ ಅನಿಷ್ಟ. ವಿವೇಕಿಯಾದ ಯಾವನೂ ತಾನು ಜಡವಾಗಬೇಕೆಂದು ಬಯಸಲಾರನು. ಮನುಷ್ಯನು ತಾನು ಚೇತನನಾಗಿಯೇ ಇದ್ದಾನೆ. ಅದನ್ನೇ ಅವನು ಬಲಪಡಿಸಿಕೊಳ್ಳಬೇಕು. ಆದ್ದರಿಂದ ಜಗತ್ಕರ್ತನನ್ನು ತನಗೊಂದಾದರ್ಶವಾಗಿ ಕಲ್ಪಿಸಿಕೊಳ್ಳಬೇಕು.

ಈ ಜಗತ್ಕರ್ತನ ಕಲ್ಪನೆಯು ಬರೀ ನಮ್ಮ ವಿಚಾರಶಕ್ತಿಯ ಆಧಾರದ ಮೇಲೆಯೇ ನಿಂತುಕೊಂಡಿರುವಂಥದ್ದಲ್ಲ. ನಮ್ಮ ಜನಾಂಗವು ಬರೀ ಮನುಷ್ಯಮಾತ್ರದವರ ವಿಚಾರಶಕ್ತಿಯನ್ನೇ ಪ್ರಮಾಣವಾಗಿ ಭಾವಿ

ಸುವದಿಲ್ಲ. ಏಕಂದರೆ ಒಬ್ಬನು ತನ್ನ ವಿಚಾರಶಕ್ತಿಯಿಂದ ಸಿದ್ಧಮಾಡಿದ ಒಂದು ಮಾತನ್ನು ಅವನಿಗಿಂತ ಬಲಿಷ್ಠನಾದ ಇನ್ನೊಬ್ಬನು ತನ್ನ ವಿಚಾರಶಕ್ತಿಯಿಂದ ಅಸಿದ್ಧವಾಗಿ ಮಾಡಬಹುದು. ವಿಚಾರಶಕ್ತಿಗೊಂದು ನೆಲೆಯಿಲ್ಲ. ನಮಗೆ ಮುಖ್ಯಪ್ರಮಾಣವು ನಮ್ಮ ವೇದ. ಆ ವೇದದ ಮಾತು ನಮ್ಮ ಮನಸ್ಸಿನಲ್ಲಿ ಬಿಂಬಿಸುವದಕ್ಕೆ ಸಾಧಕವಾಗಿ ಮಾತ್ರ ನಾವು ನಮ್ಮ ವಿಚಾರಶಕ್ತಿಯನ್ನು ಉಪಯೋಗಿಸಬೇಕು. ವಿಚಾರ ಶಕ್ತಿಯ ಉಪಯೋಗವು ಇಷ್ಟೆ. ವೇದವು ಜಗತ್ಕರ್ತನನ್ನು ನಮಗೆ ಆದರ್ಶವಾದ ಚೈತನ್ಯಸ್ವರೂಪವೆಂದು ಹೇಳಿರುವದು. ಜಗತ್ಕಾರಣ ವಾದ ಚೈತನ್ಯವು ಆದರ್ಶಸ್ವರೂಪವಾಗಿರುವದರಿಂದ ಅದರ ಕಲ್ಪನೆ ಯನ್ನು ನಾವು ಮನಸ್ಸಿನಲ್ಲಿ ಬೆಳೆಸಿಕೊಂಡಷ್ಟು ನಮ್ಮ ಹಿತವಾಗುವದು. ಜಗತ್ತಿನ ವ್ಯವಹಾರವು ಕ್ವಿನ್ಯೆನು ಕೂಡಿದ ನೀರಿನ ರುಚಿಯಂತೆ ನಮಗೆ ಎಷ್ಟು ಕಹಿಯಾಗುತ್ತಿದ್ದರೂ ಅದರೊಳಗೆ ಆ ಜಗತ್ಕರ್ತನ ಕಲ್ಪನೆ ಯೆಂಬ ಸ್ಪಿರಿಟ್ ಕ್ಲೋರೋಫಾರಮನ್ನು ಒಂದು ತೊಟ್ಟು ಸೇರಿಸಿದರೂ ಸಾಕು. ಅದು ಬೇಕಾದಷ್ಟು ಮಧುರವಾಗುವದು. ಈ ರೀತಿಯಲ್ಲಿ ಜಗದ್ವ್ಯವಹಾರದ ಭಯವನ್ನು ತಪ್ಪಿಸುವದೇ ದೇವರ ಕಲ್ಪನೆಯಿಂದಾಗ ಬೇಕಾದ ಪ್ರಯೋಜನ.

## ದೇವರ ಕಲ್ಪನೆಯನ್ನು ಉಪೇಕ್ಷಿಸುವದರ ಅಪಾಯ.

ವಿವೇಕಿಗಳು ವೇದವನ್ನು ಗೌರವಿಸಿ ದೇವರೇ ಜಗತ್ಕರ್ತನೆಂದು ನಂಬಿ ವ್ಯವಹರಿಸುತ್ತ ಶ್ರೇಯಸ್ಸನ್ನು ಪಡೆಯುವರು. ಅಷ್ಟು ವಿವೇಕ ವಿಲ್ಲದವರು ಜಗತ್ತಿನ ಸೃಷ್ಟಿಗೆ ವೇದದಲ್ಲಿ ಹೇಳಿರುವಂಥ ಜಗತ್ಕರ್ತ ನೊಬ್ಬನಿಲ್ಲವೆಂದು ನಿರಾಕರಿಸಿ ಜಗತ್ತನ್ನು ನಿರಾಧಾರವಾದ ತ್ರಿಶಂಕು ಸ್ವರ್ಗವಾಗಿ ಮಾಡುವರು. ಅಥವಾ ಹಾಗೂ ಹೇಳುವದಕ್ಕಿಲ್ಲ ತ್ರಿಶಂಕು ಸ್ವರ್ಗಕ್ಕೆ ವಿಶ್ವಾಮಿತ್ರರ ತಪಃಪ್ರಭಾವವೇ ಆಧಾರ. ಈ ಜಗತ್ತಿಗೆ ಅದೂ ಇಲ್ಲವಾಗುವದು. "ಯೋಯಚ್ಛ್ರದ್ಧಃಸ ಏವ ಸಃ" ಎಂಬ ಗೀತೋ ಕ್ತಿಯಂತೆ ನಾವು ಏನನ್ನು ಭಾವಿಸುವೆವೋ ಅದೇ ಆಗುವೆವಷ್ಟೆ. ಯಾರು ಏನು ಹೇಳಿದರೂ ದೇವರಿಲ್ಲವೆಂಬ ಮಾತು ಹೊಂದುವದೇ ಇಲ್ಲ.

ಏಕೆಂದರೆ ಅವರು ಯಾರನ್ನು ಇಲ್ಲವೆಂದು ಹೇಳುತ್ತಾರೆ? ದೇವರನ್ನು ಎಂದು ಹೇಳುವದಾದರೆ ಅವನನ್ನು ಇಲ್ಲವೆಂಬ ಕ್ರಿಯೆಗೆ ಕರ್ತೃವಾಗಿ ಒಪ್ಪಿದಹಾಗಾಯಿತು. ದೇವರನ್ನು ಆಸ್ತಿಕರು ಇರುವನೆಂಬ ಕ್ರಿಯೆಗೆ ಕರ್ತೃವಾಗಿ ಹೇಳಿದರೆ ನಾಸ್ತಿಕರು ಇಲ್ಲವೆಂಬ ಕ್ರಿಯೆಗೆ ಕರ್ತೃವಾಗಿ ಹೇಳಿದಂತಾಯಿತು. ಇಷ್ಟೇ ಭೇದ. ಇರುವನೆಂಬುದೂ ಇಲ್ಲವೆಂಬುದೂ ದೇವರನ್ನೇ ಅಷ್ಟೆ? ದೇವರ ವಿಷಯವಾಗಿಯೇ ಮಾತಾಡುತ್ತ ದೇವರೇ ಇಲ್ಲವೆನ್ನುವದು, ತಾನೇ ಮಾತಾಡುತ್ತ ತಾನಿಲ್ಲವೆಂದು ಹೇಳುವಷ್ಟು ನಗೆಗೀಡಾಗುವದು. ಬರೀ ಇಷ್ಟೇ ಅಲ್ಲ. ದೇವರಿಲ್ಲವೆನ್ನುವದರಲ್ಲಿ ಒಂದಪಾಯವೇ ಉಂಟು.

"ನಾಸ್ತಿ ಚೇನ್ನಾಸ್ತಿ ನೋ ಹಾನಿರಸ್ತಿ ಚೇನ್ನಾಸ್ತಿಕೋ ಹತಃ"

ಎಂದು ಒಂದು ಉಕ್ತಿ ಇದೆ. ದೇವರಿಲ್ಲದೆ ಇದ್ದು ದೇವರಿರುವನೆಂದು ನಾವು ಹೇಳಿದರೆ ಅದರಿಂದ ನಮಗೆ ಹಾನಿಯೇನೂ ಇಲ್ಲ. ದೇವರಿದ್ದರೆ ಮಾತ್ರ ದೇವರಿಲ್ಲವೆನ್ನುವವರಿಗೆ ಹಾನಿ ತಪ್ಪುವದಿಲ್ಲ. ಇರುವವನನ್ನು ಇಲ್ಲವೆಂದು ಹೇಳಿದರೆ ಅವನು ಆ ನಾಸ್ತಿಕನ ಮೇಲೆ ತನ್ನ ಸೇಡನ್ನು ತೀರಿಸಿಕೊಳ್ಳದೆ ಬಿಡುವದಿಲ್ಲ. ಇದಕ್ಕೆ ಹಿರಣ್ಯಕಶಿಪುವೇ ಉದಾಹರಣೆ. ದೇವರಿಲ್ಲವೆಂದು ಸಾರಿ ಹಿರಣ್ಯಕಶಿಪು ತನ್ನನ್ನೇ ದೇವರೆಂದು ತಿಳಿದು ತನಗೆ ಸರ್ವಸ್ವವನ್ನೂ ಅರ್ಪಿಸಬೇಕೆಂದು ಜನರನ್ನು ನಿರ್ಬಂಧಪಡಿಸಿದನು. ಅವನ ಮಗನಾದ ಪ್ರಹ್ಲಾದನೇ ಅವನಿಗೆ ಎದುರುಬಿದ್ದನು. ದೇವರಿಲ್ಲವೆಂದ ತಪ್ಪಿಗಾಗಿ ಪ್ರಹ್ಲಾದನ ಮೂಲಕವೇ ಹಿರಣ್ಯಕಶಿಪುವಿಗೆ ಮೃತ್ಯುಪ್ರಾಪ್ತಿಯಾಯಿತು. ಅಸ್ತಿಕಾಭಿಮಾನಿಯಾದ ದೇವರು ಭಯಂಕರವಾದ ನೃಸಿಂಹರೂಪವನ್ನು ತಾಳಿ ಬಂದು ತನ್ನ ಇರುವಿಕೆಯನ್ನು ಸಿದ್ಧಮಾಡಿ ನಾಸ್ತಿಕನಾದ ಹಿರಣ್ಯಕಶಿಪುವನ್ನು ನಿರ್ಮೂಲಮಾಡಿದನು. ಜಗತ್ತು ಸ್ತ್ರೀಪುರುಷರ ಸಮ್ಮೇಲನದಿಂದ ಆದದ್ದೇ ಹೊರತು ಜಗತ್ತಿಗೊಬ್ಬ ದೇವರಿಲ್ಲವೆಂದು ಮುಂತಾಗಿ ಹೇಳುವವರನ್ನೆಲ್ಲಾ ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಆಸುರೀಸಂಪತ್ತಿನವರೆಂದು ಬಯ್ದು ಕೊನೆಗೆ

"ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು"

ಎಂಬ ಮಾತಿನಿಂದ ಅವರನ್ನೆಲ್ಲಾ ಯಾವಾಗಲೂ ಆಸುರೀಯೋನಿಯ

ಲ್ಲಿಯೇ ಹಾಕುತ್ತೇನೆಂದು ಮುಂತಾಗಿ ಅವರ ವಿಷಯಕವಾದ ಧಿಕ್ಕಾರವನ್ನೂ ತೋರಿಸಿರುತ್ತಾನೆ.

## ದೇವರು ಇದ್ದಾನೆ.

ದೇವರ ಕಲ್ಪನೆಯನ್ನು ಉಪೇಕ್ಷಿಸುವದರಿಂದ ಅಪಾಯವುಂಟೆಂದಾಯಿತಷ್ಟೆ. ದೇವರೊಬ್ಬನಿರುವನೆಂದು ಒಪ್ಪಿಕೊಳ್ಳುವದು ಕೇವಲ ಈ ಅಪಾಯಕ್ಕೆ ಹೆದರಿದ ದಾಕ್ಷಿಣ್ಯಕ್ಕಾಗಿ ಅಲ್ಲ. ದೇವರು ನಮಗ ಸರ್ವಸಾಮಾನ್ಯವಾಗಿ ಕಾಣುತ್ತ ಇಲ್ಲವಾದ್ದರಿಂದ ಅಂಥದ್ದೊಂದು ಕಲ್ಪನೆಯನ್ನು ಮಾಡಿಕೊಳ್ಳಬೇಕೆಂದು ಮೇಲೆ ಹೇಳಿದ್ದಾಗಿದೆ. ಈ ಕಲ್ಪನೆಯು ಇಲ್ಲದ ಇದ್ದದ್ದನ್ನು ಇದ್ದಂತೆ ಮಾಡಿಕೊಳ್ಳುವ ಕಲ್ಪನೆಯಲ್ಲ. ಇದ್ದದ್ದನ್ನೇ—ನಾವು ಕಾಣದಿಲ್ಲವಾದ್ದರಿಂದ—ಕಲ್ಪನೆಮಾಡಿಕೊಳ್ಳಬೇಕಾಗಿದೆ. ದೇವರು ಇದ್ದೇ ಇದ್ದಾನೆ. ದೇವರನ್ನು ಕಣ್ಣಾರೆ ಕಂಡವರಿದ್ದಾರೆ. ನಮ್ಮ ಶಾಸ್ತ್ರದಲ್ಲೆಲ್ಲಾ ದೇವರನ್ನು ಕಾಣುವದಕ್ಕಾಗಿ ಹೇಳಿರುವ ಭಾಗವೇ ಬಹಳವಾಗಿದೆ. ದೇವರೊಬ್ಬನಿಲ್ಲದಿದ್ದರೆ ಅವನನ್ನು ಕಾಣುವ ಪ್ರಯತ್ನದಿಂದ ಫಲವೇನು ? ನಮ್ಮ ಶಾಸ್ತ್ರವು ವ್ಯರ್ಥವಾದ ಸಾಧನವನ್ನು ಹೇಳುವದಕ್ಕೆ ಹೊರಟಿಲ್ಲ. ನಮ್ಮ ಪೂರ್ವಿಕರು ಸುಮ್ಮನೆ ನೆಲಾಗುದ್ದಿ ಮೈನೋಯಿಸಿಕೊಳ್ಳುವಷ್ಟು ಮೂರ್ಖರಾಗಿರಲಿಲ್ಲ. ಇದಲ್ಲದೆ ದೇವರು ಇಲ್ಲದೆ ಹೋಗಿದ್ದರೆ ಸಾಧನೆಯನ್ನು ಮಾಡಿದವರಿಗೆಲ್ಲಾ ನಿರಾಶೆಯೇ ಆಗುತ್ತಿತ್ತಾದ್ದರಿಂದ ಜನರ ಪ್ರವೃತ್ತಿಯೇ ಅದರ ಕಡೆಗೆ ಹೋಗುತ್ತಿರಲಿಲ್ಲ. ಚೆನ್ನಾಗಿ ಸಾಧನಗಳನ್ನು ಮಾಡಿದ ಎಷ್ಟೋ ಜನರು ನಾವು ದೇವರನ್ನು ಕಣ್ಣಾರೆ ಕಂಡೆವೆಂದು ಘಂಟಾಘೋಷವಾಗಿ ಹೇಳಿದ್ದಾರೆ. ಆ ಸಾಧನಗಳಲ್ಲಿ ಇನ್ನೊಂದು ಮಹತ್ವವಿದೆ. ಅವುಗಳನ್ನು ಆಚರಣೆಗೆ ತಂದುಕೊಂಡಷ್ಟೂ ದೇವರು ಹತ್ತಿರನಾದಂತೆಯೇ ಭಾಸವಾಗುತ್ತದೆ. ಸಾಧನವು ಪರಿಪಕ್ವಸ್ಥಿತಿಗೆ ಬಂದರೆ ದೇವರ ಸಾಕ್ಷಾತ್ಕಾರವಾಗಿಯೇ ಆಗುವದು. ಕೆಲವರು ತಾವು ನಿರ್ಗುಣಸ್ವರೂಪವನ್ನು ಕಂಡ ಆನಂದದಿಂದ ಮೈಮರೆತಿದ್ದದ್ದನ್ನು ಹೊಗಳಿದ್ದಾರೆ. ಕೆಲವರು ಸಗುಣಸ್ವರೂಪವನ್ನು ಕಂಡದ್ದಲ್ಲದೆ ಅದರೊಡನೆ ಆಟಊಟಗಳನ್ನು ಕೂಡ ಮಾಡಿದ ಅನುಭವವನ್ನು ಬಾಯಿತುಂಬ ಸ್ತೋತ್ರವನ್ನು ಮಾಡಿದ್ದಾರೆ. ಆದರೆ

ಹೀಗೆ ದೇವರ ಸಗುಣದ ಅಥವಾ ನಿರ್ಗುಣದ ಅನುಭವವನ್ನು ಪಡೆದವರ ಸಂಖ್ಯೆ ಮಾತ್ರ ಬಹಳ ಕಡಿಮೆ. ಏಕೆಂದರೆ–

"ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ"

ಎಂದು ಗೀತೆಯಲ್ಲಿ ಭಗವಂತನು ಹೇಳಿರುವಂತೆ ದೇವರನ್ನು ಕಾಣುವದಕ್ಕೆ ಪ್ರಯತ್ನಿಸುವವರೇ ಕಡಿಮೆ; ಪ್ರಯತ್ನಿಸುವವರಲ್ಲಿಯೂ

"ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ"

ಎಂಬ ವಾಕ್ಯದಂತೆ ಕಡೆಗಾಣುವವರು ಕಡಿಮೆ. ದೇವರ ಸಾಕ್ಷಾತ್ಕಾರವು ಬಹು ಬೆಲೆಯುಳ್ಳದ್ದಾದ್ದರಿಂದ ಅಲ್ಪಪ್ರಯತ್ನಕ್ಕೆ ದಕ್ಕುವದಿಲ್ಲ. ಎಡೆಬಿಡದೆ ಪ್ರಯತ್ನವನ್ನು ಮಾಡುವಷ್ಟು ದಾರ್ಢ್ಯವು ಸಾಮಾನ್ಯಜನರಿಗೆ ಇರುವದಿಲ್ಲ. ಹೀಗಾಗಿ ಬಹುಜನರಿಗೆ ಸಾಕ್ಷಾತ್ಕಾರವಾಗುವದಿಲ್ಲ. ಭೌತಿಕವಸ್ತುಗಳಿಗಾಗಿ ಮಾಡುವ ಪ್ರಯತ್ನವು ಬಹು ಮಟ್ಟಿಗೆ ಕ್ಷಿಪ್ರದಲ್ಲಿಯೇ ಫಲಕಾರಿಯಾಗುವದರಿಂದ ಜನರು ಅದರ ಕಡೆಗೆ ಸುಗ್ಗುವದೇ ಹೆಚ್ಚು. ದೇವರಿಗಾಗಿ ಎಡೆಬಿಡದೆ ಪ್ರಯತ್ನಮಾಡಿದರೆ ಸಾಕ್ಷಾತ್ಕಾರವಾಗದೆ ಎಂದಿಗೂ ಇರುವದಿಲ್ಲ. ಆದ್ದರಿಂದ ದೇವರಿದ್ದಾನೆಂಬದನ್ನು ಬರೀ ಶಾಸ್ತ್ರದಿಂದ ನಂಬಬೇಕಾದ್ದಿಲ್ಲ; ಅನುಭವಕ್ಕೆ ತಂದುಕೊಂಡು ನೋಡಬಹುದು. ಆ ಶಾಸ್ತ್ರವೂ ಅನುಭವದಿಂದಲೇ ಹುಟ್ಟಿದ್ದು. ದೇವರ ವಿಚಾರವು ಎಷ್ಟೋ ಜನಕ್ಕೆ ಅನುಭವಕ್ಕೆ ಬಂದಿರುವದು. ಅದನ್ನೇ ಶಾಸ್ತ್ರವು ದಿಕ್ಪ್ರದರ್ಶನ ಮಾಡುವದು. ಅದರ ನಿಜತ್ವವನ್ನು ಈಗಲೂ ಯಾರು ಬೇಕಾದರೂ ಅನುಭವಕ್ಕೆ ತಂದುಕೊಳ್ಳಬಹುದು. ಶ್ರೀಸ್ವಾಮಿ ವಿವೇಕಾನಂದರು ಕಂಡಕಂಡ ಸಾಧುಗಳನ್ನೆಲ್ಲಾ "ದೇವರನ್ನು ಕಂಡಿರುವಿರೋ?" ಎಂದು ಪ್ರಶ್ನೆಮಾಡುತ್ತಿದ್ದರಂತೆ. ಆ ಯೋಗ್ಯತೆಯನ್ನು ಪಡೆದಿರದ ಎಷ್ಟೋ ಜನರು ಅದು ತಮ್ಮ ನಂಬಿಕೆಯೆಂದು ಮಾತ್ರ ಹೇಳಿರಬಹುದು. ಇದೇ ಮಾತು ಶ್ರೀರಾಮಕೃಷ್ಣಪರಮಹಂಸರ ಮುಂದೆ ಬಂದಾಗ ಅವರು "ನಾನು ಕಂಡಿದ್ದೇನೆ; ಇಷ್ಟೇ ಅಲ್ಲ; ನಿನಗೆ ಬೇಕಾದರೂ ತೋರಿಸುತ್ತೇನೆ" ಎಂದು ಎದೆಯ ಮೇಲೆ ಕೈಇಟ್ಟುಕೊಂಡು ಹೇಳಿರುತ್ತಾರೆ. ಬರೀ ಹೇಳಿರುವದಿಷ್ಟೇ ಅಲ್ಲ. ಶ್ರೀಸ್ವಾಮಿ ವಿವೇಕಾನಂದರು ಅದಕ್ಕೆ ತಕ್ಕ ಪ್ರಯತ್ನವನ್ನು ಮಾಡಿ

ತಾವು ಆ ತತ್ತ್ವವನ್ನು ಮನಗಂಡವರಾಗಿದ್ದರೆಂಬದನ್ನು ಅರಿತವರು ಈಗಲೂ ಎಷ್ಟೋ ಜನರಿರುತ್ತಾರೆ. ನಾವು, ಬಯಸುವ ಪದಾರ್ಥಕ್ಕೆ ತಕ್ಕಷ್ಟು ಬೆಲೆಯನ್ನು ಕೊಡುವದಕ್ಕೆ ಸಿದ್ಧರಾಗಿರಬೇಕು. ಕೈಲಿ ಕಾಸಿಲ್ಲದೆ ಅದು ಸಿಕ್ಕುವದಿಲ್ಲ. ಅದರಂತೆ ದೇವರ ಸಾಕ್ಷಾತ್ಕಾರಕ್ಕೆ ಹೆಚ್ಚಿನ ಪ್ರಯತ್ನವು ಬೇಕು. ಪ್ರಯತ್ನವು ಪೂರ್ಣವಾದರೆ ದೇವರ ಸ್ವರೂಪವು ಅಂಗೈಯೊಳಗಣ ನೆಲ್ಲಿಯ ಕಾಯಂತೆ ಅನುಭವಕ್ಕೆ ಬಂದೇ ಬರುವದು. ಆದ್ದರಿಂದ ದೇವರಿದ್ದೇ ಇದ್ದಾನೆ.

## ದೇವರು ಸರ್ವವ್ಯಾಪಿ.

ಒಳ್ಳೇದು; ದೇವರೊಬ್ಬನಿದ್ದಾನೆಂದೊಪ್ಪಿಕೊಳ್ಳೋಣ. ಅವನು ಎಲ್ಲಿದ್ದಾನೆ? ಈ ಪ್ರಶ್ನೆಗೆ ಉತ್ತರವಾಗಿ ಒಂದು ಕಥೆಯನ್ನು ಹೇಳುವದು ಚೆನ್ನಾಗಿ ಕಾಣುತ್ತದೆ. ಹಿಂದಿನ ಕಾಲದಲ್ಲಿ ಒಬ್ಬ ಬ್ರಾಹ್ಮಣರ ಹುಡುಗನು ಒಂದೂರ ಮುಂಗಡೆಯಲ್ಲಿ ಆಕಳುಗಳನ್ನು ಮೇಯಿಸುತ್ತಿದ್ದನಂತೆ. ಒಂದು ದಿನ ಸಾಯಂಕಾಲದಲ್ಲಿ ಒಬ್ಬ ಪಂಡಿತನು ಆ ಮಾರ್ಗವಾಗಿ ಬರುತ್ತ ದಾರಿಯಲ್ಲಿ ಈ ಹುಡುಗನನ್ನು ಕಂಡು ಅವನ ಮುಖಭಾವಕ್ಕೆ ಬೆರಗಾಗಿ ಮೆಲ್ಲಗೆ ಅವನೊಡನೆ ಮಾತು ತೆಗೆದು ದೇವರು ಎಲ್ಲಿದ್ದಾನೆಂಬ ಪ್ರಶ್ನೆಯನ್ನು ಅವನಿಗೆ ಹಾಕಿದನಂತೆ. ಆಗ ದೇವರಿಲ್ಲದ ಸ್ಥಲವನ್ನು ಮೊದಲು ತೋರಿಸಿದರೆ ಆಮೇಲೆ ದೇವರಿರುವ ಸ್ಥಲವನ್ನು ತೋರಿಸುತ್ತೇನೆಂದು ಆಹುಡುಗನು ಹೇಳಿದನಂತೆ. ಈ ಉತ್ತರದಿಂದ ಅತ್ಯಂತಸಂತುಷ್ಟನಾಗಿ ಆ ಪಂಡಿತನು ಆ ಹುಡುಗನ ಮನೆಗೆ ಹೋಗಿ ಅವನ ತಂದೆತಾಯಿಗಳಿಗೆ ಹೇಳಿ ಅವನಿಗೆ ವಿದ್ಯೆಯನ್ನು ಕಲಿಸುತ್ತೇನೆಂದು ತಾನಾಗಿ ಅವನನ್ನು ಕರೆದುಕೊಂಡು ಹೋದನಂತೆ. ದೇವರು ಎಲ್ಲಿಯಾದರೂ ಒಂದೇ ಕಡೆ ಇರುತ್ತಿದ್ದರೆ ಅದೇ ಅವನ ಸ್ಥಲವೆಂದು ಹೇಳಬಹುದಾಗಿತ್ತು ಮತ್ತು ನಾವು ಅವನನ್ನು ನೋಡಬೇಕಾಗಿದ್ದರೆ ಅಲ್ಲಿಗೇ ಹೋಗಬೇಕಾಗಿತ್ತು. ವಸ್ತುಸ್ಥಿತಿ ಹಾಗಿಲ್ಲ. ದೊಡ್ಡದೊಡ್ಡ ಸಾಧು ಸಂತರೆಲ್ಲಾ ಇದೇ ಅಭಿಪ್ರಾಯವನ್ನು ಪ್ರಕಟಮಾಡಿರುವರು. ಒಂದೂರಲ್ಲಿ ಒಬ್ಬ ಮುಸಲ್ಮಾನರ ಸಾಧುವಿದ್ದನು. ಅಲ್ಲಿಯ ರಾಜನು ಅವ

ನನ್ನು ಕರೆಸಿ ದೇವರೆಲ್ಲಿರುವನೆಂದು ಪ್ರಶ್ನೆಯನ್ನು ಮಾಡಿದನು. ತಾನು ಓದು ಕಲಿತವನಲ್ಲವಾದ್ದರಿಂದ ಮಾತಿನಿಂದ ಸಮಂಜಸವಾದ ಉತ್ತರ ವನ್ನು ಕೊಡಲಾರೆನೆಂದು ಹೇಳಿ ಆ ಸಾಧು ಒಂದು ಮೇಣದ ಬತ್ತಿಯನ್ನು ತರಿಸಿ ಹತ್ತಿಸಿ ಅದರ ಬೆಳಕೆಲ್ಲಿರುವದೆಂದು ರಾಜನನ್ನೇ ಕೇಳಿದನು. ಆಗ ದೇವರು ಎಲ್ಲ ಕಡೆಯಲ್ಲಿಯೂ ಇರುವನೆಂದು ರಾಜನು ತಾನೇ ನಿಶ್ಚಯಿಸಿ ಕೊಂಡನು. ದೇವರಿಲ್ಲವೆಂಬ ಹಿರಣ್ಯಕಶಿಪು ದೇವರೆಲ್ಲಿರುವನೆಂದು ಪ್ರಹ್ಲಾದನನ್ನು ಗದರಿಸಿದಾಗ ದೇವರು ಸರ್ವವ್ಯಾಪಿಯೆಂದೇ ಪ್ರಹ್ಲಾ ದನು ಉತ್ತರವನ್ನು ಕೊಟ್ಟನು. "ಹಾಗಾದರೆ ಅವನು ಈ ಕಂಬದಲ್ಲಿರು ವನೋ?" ಎಂದು ಕುಚೇಷ್ಟೆಯಿಂದ ಹಿರಣ್ಯಕಶಿಪು ಮೊರೆದೆದ್ದಾಗ ತನ್ನ ಭಕ್ತನಾದ ಪ್ರಹ್ಲಾದನನ್ನು ಉದ್ಧಾರ ಮಾಡುವದಕ್ಕಾಗಿ ದೇವರು ಆ ಕಂಬದಿಂದಲೇ ನೃಸಿಂಹರೂಪಿನಿಂದ ಹೊರಬಿದ್ದನು. ಹೀಗೆ ದೇವರಿಲ್ಲದ ಸ್ಥಲವೇ ಇಲ್ಲ. ದೇವರು ಸರ್ವವ್ಯಾಪಿಯಾದ್ದರಿಂದಲೇ ಅವನ ವಾಸಕ್ಕೆ ಒಂದೇನೆಲೆ ಇಲ್ಲ. ವೇದದಲ್ಲಿ ಪುರುಷಸೂಕ್ತವೆಂಬ ಒಂದು ಮಂತ್ರವಿದೆ. ಅದರಲ್ಲಿ ದೇವರಿಗೆ ಸಾವಿರತಲೆಗಳೂ, ಸಾವಿರಕಣ್ಣುಗಳೂ, ಸಾವಿರ ಕಾಲುಗಳೂ ಇರುವವೆಂದೂ ಅವನು ಭೂಮಿಯನ್ನೂ ಆಕಾಶವನ್ನೂ ಎಲ್ಲಾ ವ್ಯಾಪಿಸಿ ಮೇಲೆ ಹತ್ತು ಅಂಗುಲ ಹೆಚ್ಚಾಗಿರುವನೆಂದೂ ಹೇಳಿದೆ. ಇದರ ಅಕ್ಷರಾರ್ಥವನ್ನು ನೋಡಿದರೆ ಇದೆಂಥ ವಿಲಕ್ಷಣ ಪ್ರಾಣಿಯೋ ಹೇಳುವದಕ್ಕೆ ಬರುವ ಹಾಗಿಲ್ಲ. ಇದರ ಆಕೃತಿಯಾ ದರೂ ಎಷ್ಟು ದೊಡ್ಡದು! ಭೂಮಿಯನ್ನೂ ಆಕಾಶವನ್ನೂ ವ್ಯಾಪಿಸಿ ಮೇಲೆ ಇನ್ನೂ ಹತ್ತು ಅಂಗುಲವಿರುವನೆಂದರೆ ಇವನನ್ನು ಯಾರು ಅಳತೆಮಾಡಿರಬಹುದು? ಭೂಮಿಯನ್ನೂ ಆಕಾಶವನ್ನೂ ದಾಟಿ ಹೋಗು ವದಕ್ಕೆ ಯಾರಿಗಾಗುತ್ತದೆ? ದೇವರ ಅಳತೆ ಇಷ್ಟೆಂದು ಹೇಳಬೇಕಾದರೆ ಅವನು ದೇವರಿಗಿಂತ ದೊಡ್ಡವನಾಗಿರಬೇಕಲ್ಲವೆ? ಇದು ಶಕ್ಯವೇ? ಇದರ ತಾತ್ಪರ್ಯ ಹಾಗಲ್ಲ. ದೇವರು ಭೂಮಿಯನ್ನೂ ಆಕಾಶವನ್ನೂ ಮೀರಿ ಹತ್ತು ಅಂಗುಲವಿರುವನೆಂಬ ಮಾತಿಗೆ ಭೂಮ್ಯಾಕಾಶಗಳಲ್ಲಿ ಅವನಿಲ್ಲದ ಸ್ಥಲವಿಲ್ಲವೆಂಬುದಿಷ್ಟೇ ಅರ್ಥ. ಈ ವೇದಾರ್ಥವನ್ನು ವೀರಶೈವರ ವಚನಶಾಸ್ತ್ರವೂ ಪುಷ್ಟಿಗೊಳಿಸುವದು. ನೋಡಿರಿ—

"ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ, ಸಕಲವಿಸ್ತಾರದ ರೂಹು ನೀನೇ ದೇವಾ, ವಿಶ್ವತೋ ಚಕ್ಷು ನೀನೇ ದೇವಾ, ವಿಶ್ವತೋ ಮುಖ ನೀನೇ ದೇವಾ, ವಿಶ್ವತೋ ಬಾಹು ನೀನೇ ದೇವಾ, ವಿಶ್ವತೋ ಪಾದ ನೀನೇ ದೇವಾ, ಕೂಡಲ ಸಂಗಮದೇವಾ."

## ದೇವರು ಸರ್ವಾಂತರ್ಯಾಮಿ.

ಮನುಷ್ಯನು ದೇವರ ಸರ್ವವ್ಯಾಪಿತ್ವವನ್ನು ಸ್ವಾನುಭವದಿಂದ ತಿಳಿಯುವದು ಕಠಿನವಾದೀತು; ಆದರೆ ಪ್ರಯತ್ನ ಮಾಡಿದರೆ ಅವನಿಗೆ ದೇವರ ಸರ್ವಾಂತರ್ಯಾಮಿತ್ವವು ತಿಳಿಯಬರುವ ಸಂಭವವು ಹೆಚ್ಚು. ಸರ್ವವ್ಯಾಪಿತ್ವಕ್ಕೂ ಸರ್ವಾಂತರ್ಯಾಮಿತ್ವಕ್ಕೂ ಅಜಗಜಾಂತರವೇನೂ ಇಲ್ಲ. ಸರ್ವವ್ಯಾಪಿತ್ವವೆಂದರೆ ಸ್ಥಾವರವಸ್ತುಗಳಲ್ಲಿಯೂ ಮತ್ತು ಜಂಗಮವಸ್ತುಗಳಲ್ಲಿಯೂ ಕೂಡ ವ್ಯಾಪಿಸಿಕೊಂಡಿರುವಿಕೆ. ಸರ್ವಾಂತರ್ಯಾಮಿಯೆಂದರೆ ಜಂಗಮವಸ್ತುಗಳಲ್ಲಿ ಒಳಹೊಕ್ಕಿರುವಿಕೆ. ಮನುಷ್ಯನು ದೇವರ ಸರ್ವವ್ಯಾಪಿತ್ವವನ್ನು ಜಡವಸ್ತುಗಳೊಳಗೆ ಹುಡುಕಿ ಕಾಣುವದಕ್ಕಿಂತಲೂ ಪ್ರಾಣಿಗಳಲ್ಲಿ ಹುಡುಕಿದರೆ ಅದು ಬೇಗ ಕಾಣುವ ಸೌಕರ್ಯವು ಹೆಚ್ಚು. ಪ್ರಾಣಿಗಳೊಳಗೆಲ್ಲಾ ದೇವರು ತುಂಬಿಕೊಂಡಿರುವನೆಂಬ ಕಲ್ಪನೆ ಬಂದರೆ ಮನುಷ್ಯನಿಗೆ ಪಾರಾಗುವ ದಾರಿ ಸಿಕ್ಕಿದಂತೆಯೇ. ದೇವರು ಸರ್ವರಲ್ಲಿಯೂ ಒಳಹೊಕ್ಕು ನೋಡುತ್ತಿರುವನೆಂಬ ಮಾತಿನ ಅರ್ಥವು ಎಲ್ಲರಿಗೂ ಆಗಬಹುದು. ಆದರೆ ಆ ಮಾತನ್ನಾಡಿದಾಗ ಮಾತ್ರ ಅದರ ಅರ್ಥವು ಮನಸ್ಸಿನ ಮುಂದೆ ಮಿಂಚಿನಂತೆ ಹೊಳೆದು ಹೋಗಬಹುದೇ ಹೊರತು ಮುಂದೆ ಆ ಅರ್ಥವು ತನಗೆ ತಾನೇ ಮನಸ್ಸಿನಿಂದಲೇ ಒಡೆದು ಮೂಡಿ ಬೆಳಕನ್ನುಂಟುಮಾಡುವಂತಾಗುವಷ್ಟು ಅದು ಮನಸ್ಸಿನಲ್ಲಿ ಮನೆಯನ್ನು ಮಾಡಿಕೊಳ್ಳುವದಿಲ್ಲ. ಎಂದು ಆ ಅಭಿಪ್ರಾಯವು ಮನಸ್ಸಿನಲ್ಲೆಲ್ಲಾ ವ್ಯಾಪಿಸಿಕೊಂಡು ಮನಸ್ಸಿನ ಪ್ರತಿಯೊಂದು ಅಲೆಯಲ್ಲಿಯೂ ತನ್ನ ಇರುವಿಕೆಯನ್ನು ತೋರಿಸಿಕೊಳ್ಳುವದೋ ಅಂದು ಆ ಮನುಷ್ಯನು ದೇವರ ವಾಸನೆಯನ್ನು ಹಿಡಿದವನಾಗುವನು. ಗುರುಶಿಷ್ಯರದೊಂದು ಕಥೆಯು ಈ ಅಭಿಪ್ರಾಯವನ್ನು ಸ್ಪಷ್ಟಗೊಳಿಸುವದು. ಆ ಕಥೆಯಲ್ಲಿ ಗುರುಗಳಿಗೆ ತಮ್ಮ ಶಿಷ್ಯ

ರಲ್ಲೆಲ್ಲಾ ಒಬ್ಬನ ಮೇಲೆ ಬಹಳ ಪ್ರೇಮವಿತ್ತು. ಉಳಿದ ಶಿಷ್ಯರಿಗೆ ಇದು ಒಗ್ಗಲಿಲ್ಲ. ಎಲ್ಲರೂ ಸೇರಿ ತಮ್ಮ ಗುರುಗಳನ್ನು ಪಕ್ಷಪಾತಿಗಳೆಂದು ದೂರುವದಕ್ಕಾರಂಭಿಸಿದ್ದರು. ಆಗ ಗುರುಗಳು ತಮ್ಮ ಪ್ರಿಯಶಿಷ್ಯನ ಯೋಗ್ಯತೆಯನ್ನು ಉಳಿದವರಿಗೆಲ್ಲಾ ಮನಗಾಣಿಸಬೇಕೆಂದು ಒಂದು ಯುಕ್ತಿಯನ್ನು ಹೂಡಿದರು. ಒಂದು ದಿನ ಎಲ್ಲರನ್ನೂ ಕರೆಸಿ ಅವರು ಎಲ್ಲರ ಕೈಯಲ್ಲಿಯೂ ಒಂದೊಂದು ಪಾರಿವಾಳವನ್ನು ಕೊಟ್ಟು ಯಾರೂ ಕಾಣದಂತೆ ಅದನ್ನು ಕೊಂದವರಿಗೆ ಶ್ರೇಷ್ಠತೆಯು ದೊರೆಯುವದೆಂದು ಆಶೆಯನ್ನು ಹಚ್ಚಿದರು. ಇದೊಂದು ಬಹು ಸುಲಭವಾದ ಪರೀಕ್ಷೆಯೆಂದು ಶಿಷ್ಯರೆಲ್ಲರೂ ಒಳ್ಳೇ ಉತ್ಸಾಹದಿಂದ ತಮ್ಮತಮ್ಮ ಹಂಚಿಕೆಗಳನ್ನಾಲೋಚಿಸುವವರಾದರು. ಒಬ್ಬನು ಗುಡ್ಡವನ್ನು ಹತ್ತಿದನು; ಒಬ್ಬನು ಕೊರಕಲಿಗಿಳಿದನು; ಒಬ್ಬನು ಹಾಳುಗೋಡೆಯನ್ನು ಮರೆಹೊಕ್ಕನು; ಒಬ್ಬನು ಮುಸುಕನ್ನು ಹಾಕಿಕೊಂಡನು. ಹೀಗೆ ಎಲ್ಲರೂ ತಮ್ಮ ತಮ್ಮ ಏಕಾಂತದಲ್ಲಿ ಗುರ್ವಾಜ್ಞೆಯನ್ನು ಪರಿಪಾಲನೆ ಮಾಡಿ ನಗೆಮೊಗದಿಂದ ಗುರುಗಳ ಮುಂದೆ ಬಂದು ನಿಂತರು. ಆ ಪ್ರಿಯಶಿಷ್ಯನೊಬ್ಬನು ಮಾತ್ರ ಜೋಲು ಮುಖವನ್ನು ಹಾಕಿಕೊಂಡು ತಾನು ಆ ದಿನದ ಪರೀಕ್ಷೆಯಲ್ಲಿ ತೇರ್ಗಡೆಯಾಗಲಾರೆನೆಂದು ಹೇಳಿ ಆ ಪಾರಿವಾಳವನ್ನು ಗುರುಗಳ ಮುಂದಿಟ್ಟು ಅಡ್ಡಬಿದ್ದನು. ಆಗ ಪ್ರಿಯಶಿಷ್ಯನ ದಡ್ಡತನವು ಹೊರಬಿತ್ತೆಂದು ಎಲ್ಲರೂ ಕೇಕೆಯನ್ನು ಹಾಕಿದರು. ತಮ್ಮಾಜ್ಞೆಯನ್ನು ನಡೆಸುವದಕ್ಕೇನು ಪ್ರತಿಬಂಧಕವಾಯಿತೆಂದು ಗುರುಗಳು ಕೇಳಲು ಆ ಪ್ರಿಯಶಿಷ್ಯನು “ಸ್ವಾಮಿ, ಎಷ್ಟು ಮರೆಗೆ ಹೋಗಿ ಅದನ್ನು ಕೊಲ್ಲುವ ಯತ್ನವನ್ನು ಮಾಡಿದರೂ ಅದರ ಕುತ್ತಿಗೆಗೆ ಕೈಹಾಕುತ್ತಲೇ ಅದರ ಕಣ್ಣೊಳಗಿನಿಂದ ಯಾರೋ ನನ್ನ ಕೆಲಸವನ್ನು ನೋಡುತ್ತಿರುವಂತೆ ನನಗೆ ಕಾಣುತ್ತಿತ್ತು. ಯಾರೂ ಕಾಣದಂತೆ ಆ ಕೆಲಸವನ್ನು ಮಾಡುವದು ನನ್ನಿಂದಾಗಲಿಲ್ಲ.” ಎಂದು ಹೇಳುತ್ತಲೇ ಗುರುಗಳು ಅವನ ಜ್ಞಾನಪ್ರಭಾವವನ್ನು ಹೊಗಳಿದರು. “ಪಾರಿವಾಳದ ಕಣ್ಣೊಳಗಿನಿಂದ ಯಾರೋ ನೋಡುತ್ತಿರುವಂತೆ” ಎಂಬ ಮಾತು ಆ ಪ್ರಿಯಶಿಷ್ಯನ ಬಾಯಿಂದ ಬರುವದಕ್ಕಾರಂಭಿಸುತ್ತಲೇ ಶಿಷ್ಯರೆಲ್ಲರೂ ತಲೆಯನ್ನು ಬಗ್ಗಿಸಿ ತಮ್ಮ ದಡ್ಡತನಕ್ಕಾಗಿ ಮರಮರ ಮರುಗಿದರು.

ಮನಸ್ಸಿನಲ್ಲಿ ಈ ಅಂತರ್ಯಾಮಿಯ ವಿಷಯಕವಾದ ಸ್ಫೂರ್ತಿಯು ಜಾಗರೂಕವಾಗಿರುವದೆಂದರೆ ಅದು ಬಹಳ ಪುಣ್ಯೋದಯದ ಮಾತೇ ಸರಿ. ಇದಕ್ಕೆ ಮಹಾಭಾರತದಲ್ಲೊಂದು ಕಥೆಯಿದೆ. ಪಾಂಡವರು ವನವಾಸದಲ್ಲಿದ್ದಾಗ ದ್ರೌಪದಿಯು ಎಲ್ಲಿಂದಲೋ ಹಾರಿ ಬಂದ ಒಂದು ಕಮಲವನ್ನು ನೋಡಿ ಆ ಜಾತಿಯ ಪುಷ್ಪವನ್ನು ತಂದು ಕೊಡಬೇಕೆಂದು ಭೀಮನನ್ನು ಬೇಡಿಕೊಂಡಳು. ಭೀಮನು ಆಗಲೆಂದು ಸೊಂಟೆವನ್ನು ಕಟ್ಟಿಕೊಂಡು ಅದರ ವಾಸನೆಯನ್ನು ಹಿಡಿದು ಗಂಧಮಾದನ ಪರ್ವತದ ಕಡೆಗೆ ಹೊರಟನು. ಅದು ಸ್ವರ್ಗದ ದಾರಿಯಾಗಿತ್ತು. ಭೀಮನು ಮುಂದೆ ಹೋದಾನೆಂದು ಹನುಮಂತನು ಆದಾರಿಗಡ್ಡಲಾಗಿ ಕುಳಿತಿದ್ದನು. ಭೀಮನ ಸ್ವಾರಿ ಬಂತು. ಹನುಮಂತನು ಅಲ್ಲಾಡಲಿಲ್ಲ. ದಾರಿಯನ್ನು ಬಿಡೆಂದು ಭೀಮನು ಗರ್ಜಿಸಿದನು. ಮುದುಕನಾದ ತಾನು ಏಳಲಾರೆನೆಂದೂ ತನ್ನನ್ನು ದಾಟಿಕೊಂಡು ಮುಂದೆ ಹೋಗಬಹುದೆಂದೂ ಹನುಮಂತನು ಹೇಳಿದನು. ಆಗ ಭೀಮನು ಸರ್ವಾಂತರ್ಯಾಮಿಯ ಎಚ್ಚರವಿಲ್ಲದೆ ದಾಟಿಹೋಗುವದಕ್ಕೆ ನಾನು ಹನುಮಂತನಲ್ಲವೆಂದು ಹೇಳುತ್ತಲೇ ತಾನು ಸಮುದ್ರವನ್ನು ದಾಟಿದ ಅವಿನಯಕ್ಕೆ ನಾಚಿಕೊಂಡು ಭೀಮನ ವಿವೇಕಕ್ಕೆ ಮೆಚ್ಚಿ ಹನುಮಂತನು ಭೀಮನಿಗೆ ಪದ್ಮಸರೋವರವನ್ನೂ ಸೌಗಂಧಿಕಪುಷ್ಪಗಳನ್ನೂ ತೋರಿಸಿದನಂತೆ. ಒಬ್ಬ ದೇವರೇ ಎಲ್ಲರಲ್ಲಿಯೂ ಸರ್ವಾಂತರ್ಯಾಮಿಯಾಗಿರುವನೆಂಬದನ್ನು ಎಲ್ಲರೂ ಮನಸ್ಸಿನಲ್ಲಿ ಬೇರುಬಿಟ್ಟುಕೊಳ್ಳುವಂತೆ ಮಾಡಿಕೊಳ್ಳಬೇಕು.

ಒಬ್ಬ ದೇವರೇ ಸರ್ವಾಂತರ್ಯಾಮಿಯೆಂಬದನ್ನು ಮನಗಾಣಿಸುವ ಎಷ್ಟೋ ಉದಾಹರಣೆಗಳು ಪುರಾಣಗಳಲ್ಲಿವೆ. ಪಾಂಡವರು ವನವಾಸದಲ್ಲಿ ಕಷ್ಟದಿಂದ ಜೀವನವನ್ನು ಮಾಡುತ್ತಿದ್ದಾಗ ಅವರನ್ನು ದೊಡ್ಡವರ ಆಗ್ರಹಕ್ಕೆ ಪಾತ್ರರನ್ನಾಗಿ ಮಾಡಬೇಕೆಂದು ದುರ್ಯೋಧನನು ದುರ್ವಾಸರಿಗೆ ದುರ್ಬೋಧನೆಯನ್ನು ಮಾಡಿ ಅವರ ಕಡೆಗೆ ಕಳುಹಿಸಿದನಂತೆ. ದುರ್ವಾಸನು ಲೆಕ್ಕವಿಲ್ಲದಷ್ಟು ಜನ ಶಿಷ್ಯರೊಡನೆ ನಡುರಾತ್ರಿಯಲ್ಲಿ ಧರ್ಮರಾಯನ ಎಲೆಮನೆಗೆ ಬಂದು ಊಟವನ್ನು ಬೇಡಿದನಂತೆ. ಅಷ್ಟು

ಹೊತ್ತಿಗೆ ಅವರಲ್ಲಿದ್ದ ಅಕ್ಷಯಪಾತ್ರೆಯನ್ನು ತೊಳೆದದ್ದಾಗಿದ್ದದರಿಂದ ಧರ್ಮರಾಯನು ಬಂದ ಅತಿಥಿಗಳಿಗೇನು ಹೇಳಬೇಕೆಂದು ಯೋಚನೆ ಮಾಡಿ ಕೊನೆಗೆ ಸ್ನಾನವನ್ನು ಮಾಡಿಕೊಂಡು ಬನ್ನಿರೆಂದು ಅವರನ್ನೆಲ್ಲಾ ನದಿಗೆ ಕಳುಹಿಸಿದನಂತೆ. ಆಗ ದ್ರೌಪದಿಯು ತನ್ನ ಭಕ್ತಿಯಿಂದ ಶ್ರೀಕೃಷ್ಣನನ್ನು ಬರಮಾಡಿಕೊಂಡು ಅವನ ಮುಂದೆ ತನ್ನ ಬರೀ ತಟ್ಟೆಯನ್ನು ತೋರಿಸಲು ಶ್ರೀಕೃಷ್ಣನು ಅದರಲ್ಲಿ ಉಳಿದುಕೊಂಡಿದ್ದ ಒಂದು ಸಪ್ಪಿನ ಎಸಳನ್ನು ತಿನ್ನುತ್ತಲೇ ನದಿಯಲ್ಲಿ ಸ್ನಾನಮಾಡುತ್ತಿದ್ದ ದುರ್ವಾಸರೇ ಮೊದಲಾದವರೆಲ್ಲರೂ ತೇಗಿದರಂತೆ. ತಾತ್ಪರ್ಯವೇ ನೆಂದರೆ ಶ್ರೀಕೃಷ್ಣನು ಸರ್ವಾಂತರ್ಯಾಮಿಯಾಗಿದ್ದದರಿಂದ ಅವನ ಹೊಟ್ಟೆಗೆ ಹೋದದ್ದು ಎಲ್ಲರ ಹೊಟ್ಟೆಗೂ ಹೋದಂತಾಗಿ ಎಲ್ಲರಿಗೂ ತೃಪ್ತಿ ಯಾಯಿತು. ಈ ಅಂತರ್ಯಾಮಿಯ ವಿಚಾರವು ಮಹಾಮಹಾ ತಪ ಸ್ವಿಗಳಿಗೆ ಮಾತ್ರ ತಿಳಿಯುವಂಥದ್ದೆಂದು ನಿಯಮವಿಲ್ಲ. ಮಹಾದುಷ್ಟ ನಾದ ದುರ್ಯೋಧನನಿಗೆ ಕೂಡ ಒಮ್ಮೆ ಈ ಸ್ಫೂರ್ತಿಯುಂಟಾಗಿದೆ. ಪಾಂಡವಗೀತೆಯಲ್ಲಿ ಅವನು ಹೇಳುವದೇನೆಂದರೆ

" ಜಾನಾಮಿ ಧರ್ಮಂ ನ ಚ ಮೇ ಪ್ರವೃತ್ತಿಃ ।
ಜಾನಾಮ್ಯಧರ್ಮಂ ನ ಚ ಮೇ ನಿವೃತ್ತಿಃ ॥
ಕೇನಾಪಿ ದೇವೇನ ಹೃದಿಸ್ಥಿತೇನ ।
ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ ॥ "

ಯಾವದು ಧರ್ಮವೆಂಬುದು ನನಗೆ ತಿಳಿಯುತ್ತದೆ; ಆದರೆ ಅದನ್ನು ಮಾಡಲಾರೆನು. ಯಾವದು ಅಧರ್ಮವೆಂಬುದು ನನಗೆ ತಿಳಿಯುತ್ತದೆ; ಆದರೆ ಅದನ್ನು ಬಿಡಲಾರೆನು. ಯಾವನೋ ಒಬ್ಬ ದೇವನು ನನ್ನ ಹೃದಯದಲ್ಲಿದ್ದುಕೊಂಡು ನನ್ನನ್ನು ಹೇಗೆಹೇಗೆ ಪ್ರೇರಿಸು ತ್ತಾನೋ ಅದರಂತೆ ಮಾಡುತ್ತೇನೆ—ಎಂದು ಅವನ ಅಭಿಪ್ರಾಯ. ಈ ಸರ್ವಾಂತರ್ಯಾಮಿಯ ಸ್ವರೂಪದ ವಿಷಯಕ್ಕೆ ವೀರಶೈವರ ವಚನ ಶಾಸ್ತ್ರದ ನುಡಿಯು ಒಳ್ಳೇ ಇನಿದಾಗಿದೆ.

" ವಸ್ತುವೆಂದರೆ ಹ್ಯಾಗಾಯಿತ್ತಯ್ಯ ಹೇಳುವೆ ಕೇಳಯ್ಯ ಮಗನೇ.
ಕಾಷ್ಠದಲ್ಲಿ ಅಗ್ನಿ ಹ್ಯಾಗೆ ಹಾಗಿಪ್ಪುದು, ಕ್ಷೀರದೊಳಗೆ ಘೃತ ಹ್ಯಾಗೆ

ವಾಗಿಪ್ಪದು. ಸರ್ವತ್ರ ಎಲ್ಲ ಠಾವಿನಲ್ಲಿಯೂ ವಸ್ತುವಿನ ಕಳೆ ಪರಿಪೂರ್ಣವಾಗಿರ್ಪುದೆಂದೆನಯ್ಯ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ. ”

“ ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ” ಎಂಬ ಗೀತಾವಾಕ್ಯವೂ ದೇವರ ಸರ್ವಾಂತರ್ಯಾಮಿತ್ವವನ್ನು ವ್ಯಕ್ತಮಾಡುತ್ತದೆ ಸೂತ್ರದಲ್ಲಿ ಪೋಣಿಸಿದ ಮಣಿಗಳಂತೆ ಎಲ್ಲವೂ ತನ್ನಲ್ಲಿ ಹೊಂದಿಕೊಂಡಿರುವವೆಂದು ಭಗವಂತನ ಆ ಮಾತಿನ ಅಭಿಪ್ರಾಯು.

## ದೇವರು ಸರ್ವಶಕ್ತನು.

ದೇವರು ಎಲ್ಲ ಸ್ಥಾವರವಸ್ತುಗಳಲ್ಲಿಯೂ ಎಲ್ಲ ಜಂಗಮವಸ್ತುಗಳಲ್ಲಿಯೂ ವ್ಯಾಪಿಸಿಕೊಂಡಿರುವದಷ್ಟೇ ಅಲ್ಲ. ಜಗತ್ತೆಂಬುದು ದೇವರ ಹೊಟ್ಟೆಯುಲ್ಲೊಂದು ಮೂಲೆಯುದಾಗಿರುವಂತೆ ಜಗತ್ತಿನಲ್ಲಿ ಎಷ್ಟು ಶಕ್ತಿಗಳಿವೆಯೋ ಅವುಗಳಿಗೆಲ್ಲಾ ದೇವರು ಮೂಲಸ್ಥಾನನಾಗಿರುವನು. ದೇವರ ಹೆದರಿಕೆಯಿಂದಲೇ ಅಗ್ನಿಯು ಸುಡುವನೆಂದೂ ದೇವರ ಹೆದರಿಕೆಯಿಂದಲೇ ಗಾಳಿಯುಬೀಸುವದೆಂದೂ ಮತ್ತು ದೇವರ ಹೆದರಿಕೆಯಿಂದಲೇ ಸೂರ್ಯೋದಯುವಾಗುವದೆಂದು ಮುಂತಾಗಿ ಉಪನಿಷತ್ತಿನಲ್ಲಿ “ ಭೀಷಾಸ್ಮಾದ್ವಾತಃ ಪವತೇ ” ಎಂಬ ಮುಂತಾದ ಮಂತ್ರಗಳಲ್ಲಿ ಹೇಳಿದೆ. ಈ ಅಭಿಪ್ರಾಯುವನ್ನು ಸಾಮಾನ್ಯವಾಗಿ ಹೇಳಿರುವದಿಷ್ಟೇ ಅಲ್ಲ ; ಶ್ರುತಿಯೇ ಸಾಕ್ಷಾತ್ತಾಗಿ ಉದಾಹರಣೆಯುನ್ನೂ ಹೇಳಿದೆ. ಈ ಉದಾಹರಣೆಯು ಕೇನೋಪನಿಷತ್ತಿನಲ್ಲಿ ಬಂದಿದೆ. ಅದರ ವಿಚಾರವೇನೆಂದರೆ–ದೇವತೆಗಳಿಗೂ ರಾಕ್ಷಸರಿಗೂ ಯುದ್ಧವು ನಡೆದಾಗ ದೇವತೆಗಳ ಮೇಲಿನ ಕನಿಕರದಿಂದ ದೇವರು ದೇವತೆಗಳಿಗೆ ಜಯುವಾಗುವಂತೆ ಮಾಡಿದನು. ಆಗ ದೇವತೆಗಳ ಮುಖಂಡರಲ್ಲಿ ತನ್ನಿಂದ ಜಯುವಾಯಿತೆಂದೊಬ್ಬನು, ತನ್ನಿಂದ ಜಯುವಾಯಿತೆಂದೊಬ್ಬನು– ಹೀಗೆ ಹೋರಾಟ ಹುಟ್ಟಿತು. ದೇವತೆಗಳು ಗರ್ವಿಸಿ ಕೆಡುವದು ದೇವರ ಮನಸ್ಸಿಗೆ ಬರಲಿಲ್ಲ. ಆದ್ದರಿಂದ ಅವರ ಗರ್ವವನ್ನು ತೊಡೆದು ತನ್ನ ಮಹಿಮೆಯುನ್ನು ಅವರಿಗೆ ಮನಗಾಣಿಸಬೇಕೆಂದು ದೇವರು ಅವರ ಕಣ್ಣಿಗೆ ಕಾಣುವಂತೆ ದೂರ

ದಲ್ಲಿ ಒಂದು ತೇಜೋರೂಪದಲ್ಲಿ ಬಂದು ನಿಂತನು. ಆಗ ದೇವತೆಗಳು ಅದರ ಪೂರ್ವೋತ್ತರವನ್ನು ತಿಳಿದುಕೊಂಡು ಬರಹೇಳಿ ಅಗ್ನಿಯು ನ್ನಟ್ಟಿದರು. ಅಗ್ನಿಯು ತನ್ನ ಬಳಿಗೆ ಬರುತ್ತಿರುವಾಗ ಆತೇಜಸ್ಸು "ನೀನು ಯಾರು" ಎಂದು ದರ್ಪದಿಂದ ಅಗ್ನಿಯನ್ನು ಕೇಳಿತು. "ನಾನು ಅಗ್ನಿ" ಎಂದು ಅಗ್ನಿಯು ಸಮ್ರತೆಯಿಂದ ಉತ್ತರವನ್ನಿತ್ತನು. ನಿನ್ನ ಸಾಮರ್ಥ್ಯವೇನೆಂದು ಮತ್ತೆ ಪ್ರಶ್ನೆ ಬಂತು. ಭೂಮಿಯ ಮೇಲಿ ರುವುದನ್ನೆಲ್ಲಾ ಸುಟ್ಟು ಹಾಕಬಲ್ಲೆನೆಂದು ಅಗ್ನಿಯು ಉತ್ತರವಾಯಿತು. ಆ ಮೇಲೆ ಆ ತೇಜಸ್ಸು ಇದನ್ನು ಸುಡೆಂದು ಮುಂದೊಂದು ಕಡ್ಡಿಯ ನ್ನಿಟ್ಟಿತು. ಅದನ್ನು ಸುಡಬೇಕೆಂದು ಅಗ್ನಿಯು ತನ್ನ ಸಾಹಸವನ್ನೆಲ್ಲ ಮಾಡಿ ನೋಡಿದನು. ಕೈಲಾಗದ್ದರಿಂದ ಮುಂದೆ ಮಾತಾಡುವದಕ್ಕೆ ಮುಖವಿಲ್ಲದೆ ಅಗ್ನಿಯು ತೆಪ್ಪಗೆ ಹಿಂದಿರುಗಿದನು. ಆ ಮೇಲೆ ದೇವತೆಗಳು ವಾಯುವನ್ನ ಟ್ಟಿದರು. ವಾಯುವೂ ಆ ಕಡ್ಡಿಯನ್ನು ಹಾರಿಸಲಾರದೆ ಮುಖವನ್ನು ಮುಚ್ಚಿ ಕೊಂಡು ಬಂದನು. ಆ ಮೇಲೆ ದೇವತೆಗಳು ಇಂದ್ರನನ್ನೇ ಕಳ್ಳ ಹಿಸಿದರು. ಇಂದ್ರನು ಬರುತ್ತಿರಲು ಆ ತೇಜಸ್ಸು ಅಲ್ಲಿಯೇ ಅಂತ ರ್ಧಾನವಾಯಿತು. ಇಂದ್ರನು ಅಷ್ಟರಿಂದ ನಿರಾಶನಾಗದೆ ಅದರ ನಿಜತ್ವವನ್ನು ತಿಳಿದೇ ಬಿಡಬೇಕೆಂದು ಅಲ್ಲಿಯೇ ಧ್ಯಾನಸ್ಥನಾದನು. ಇಂದ್ರನ ಭಕ್ತಿಗೆ ಮೆಚ್ಚಿ ದೇವರು ಆಗ ದೇವರೂಪದಲ್ಲಿ ಕಾಣಿಸಿ ಕೊಂಡು ತನ್ನಿಂದಲೇ ದೇವತೆಗಳ ಜಯವೆಂದು ಹೇಳಿ ಅವರ ಗರ್ವ ಖಂಡನೆಯನ್ನು ಮಾಡಿದನು. ಅಗ್ನಿವಾಯುಗಳು ಆ ತೇಜಸ್ಸಿನೊಡನೆ ಮಾತಾಡಿದ್ದಕ್ಕಾಗಿ ದೇವತೆಗಳಲ್ಲಿ ಅವರಿಗೆ ಎಷ್ಟೋ ಶ್ರೇಷ್ಠತೆ ಬಂತು. ಆತೇಜಸ್ಸು ದೇವರೆಂದು ಮೊದಲು ತಿಳಿದದ್ದಕ್ಕಾಗಿ ಇಂದ್ರನಿಗಂತು ದೇವ ತೆಗಳ ಮೇಲೆಲ್ಲ ಅಧಿಪತಿತ್ವವೇ ಬಂತು. ಇಂದ್ರಾಗ್ನಿವಾಯುಗಳಿಗೆ ರಾಕ್ಷಸರನ್ನು ಗೆಲ್ಲುವ ಸಾಮರ್ಥ್ಯವುಂಟಾದದ್ದು ನಿಜವಾಗಿ ದೇವ ರಿಂದ. ಹೊರಗೆ ನೋಡುವದಕ್ಕೆ ಇಂದ್ರಾದಿಗಳು ಕಾರಣರೆಂದು ಕಂಡರೂ ಒಳಗಣ್ಣಿನಿಂದ ನೋಡಿದರೆ ಅದು ದೇವರ ಶಕ್ತಿ.

ಮಹಾಭಾರತದ ಯುದ್ಧದಲ್ಲಿ ಅರ್ಜುನನು ಕೌರವರ ಹನ್ನೊಂದ ಕ್ಷೋಹಿಣಿಯ ಸೈನ್ಯವನ್ನು ಹೊಡೆದು ಕೆಡಹಿದನಷ್ಟೆ. ಆ ಯುದ್ಧ

ಪ್ರಕರಣಗಳಲ್ಲಿ ಮಹಾಭಾರತಕಾರರು ಅರ್ಜುನನನ್ನು ಎಷ್ಟೋ ಹೊಗಳಿದರೂ ಯುದ್ಧಕ್ಕೆ ಪೂರ್ವದಲ್ಲಿ ಬಂದಿರುವ ಗೀತಾಧ್ಯಾಯದಲ್ಲಿ ಅದರ ಗುಟ್ಟು ಹೊರಬಿದ್ದಿದೆ. ಭಗವದ್ಗೀತೆಯಲ್ಲಿ ವಿಶ್ವರೂಪದರ್ಶನವೆಂದು ಹನ್ನೊಂದನೆಯ ಅಧ್ಯಾಯದಲ್ಲಿ ನೋಡಿದರೆ ಅದು ತಿಳಿಯುತ್ತದೆ. ಭಗವಂತನ ವಿರಾಡ್ರೂಪದಲ್ಲಿದ್ದ ನಾನಾಮುಖಗಳಲ್ಲಿ ಕೌರವರ ಪಕ್ಷದವರೆಲ್ಲರೂ ಸುಗ್ಗುತ್ತ ಹಲ್ಲುಗಳ ಸಂದಿಗಳಲ್ಲಿ ಸಿಕ್ಕಿಕೊಂಡು ಚೂರೆದ್ದು ಹೋಗುತ್ತಿದ್ದದ್ದನ್ನು ಅರ್ಜುನನು ನೋಡಿದ್ದಾನೆ. ಇದರ ಗುಟ್ಟೇನು? ಶ್ರೀಕೃಷ್ಣನು ಅವರ ಆಯುಸ್ಸನ್ನೆಲ್ಲಾ ಮೊದಲೇ ಹರಣಮಾಡಿಬಿಟ್ಟಿದ್ದಾನೆ. ಅಂದರೆ ಅವರ ವಧೆಯೆಲ್ಲಾ ಆಗಿಯೇ ಹೋಗಿದೆ. ಇನ್ನು ಅರ್ಜುನನು ಕಾದಲಿ, ಬಿಡಲಿ; ಅವರೆಲ್ಲಾ ಸಾಯುವವರೆ. ಆದರೆ ತನ್ನ ಮಿತ್ರನಾದ ಅರ್ಜುನನಿಗೆ ಕೀರ್ತಿಯನ್ನು ತಂದುಕೊಡಬೇಕೆಂದು ಶ್ರೀಕೃಷ್ಣನ ಸಂಕಲ್ಪವಿದ್ದದರಿಂದ ಅರ್ಜುನನು ಯುದ್ಧ ಮಾಡಬೇಕಾಯಿತು. ಆ ಮಹಾಸೇನೆಯನ್ನು ಗೆಲ್ಲುವ ಸಾಮರ್ಥ್ಯವನ್ನು ಕೃಷ್ಣನು ಕೊಡದಿದ್ದರೆ ಅರ್ಜುನನಿಗೆ ಈಗಿನ ಕೀರ್ತಿಯು ಬರುವ ಸಂಭವವೇ ಇರಲಿಲ್ಲ. ಶ್ರೀಕೃಷ್ಣನು ಪರಂಧಾಮಕ್ಕೆ ಹೋಗುವಾಗ ಅರ್ಜುನನ ಕೈಯನ್ನು ಹಿಡಿದು ಅವನಲ್ಲಿ ತಾನಿಟ್ಟಿದ್ದ ಸಾಮರ್ಥ್ಯವನ್ನು ಹಿಂದಕ್ಕೆ ತೆಗೆದುಕೊಳ್ಳುವವರಿಗೂ ಅರ್ಜುನನಲ್ಲಿ ಪರಾಕ್ರಮವಿತ್ತು. ಉತ್ತರರಕ್ಷಣದಲ್ಲಿಯೇ ಅರ್ಜುನನ ಪಾಡು ನಾಚಿಕೆಗೀಡಾಯಿತು. ಶ್ರೀಕೃಷ್ಣನು ಪರಂಧಾಮಕ್ಕೆ ಹೋದ ಮೇಲೆ ಅರ್ಜುನನು ದ್ವಾರಕಿಯಿಂದ ಯಾದವಸ್ತ್ರೀಯರನ್ನು ಹಸ್ತಿನಾಪುರಕ್ಕೆ ಕರೆದುಕೊಂಡು ಬರುತ್ತಿರುವಾಗ ದಾರಿಯಲ್ಲಿ ಕಳ್ಳರು ಅವನನ್ನು ಅಡ್ಡಗಟ್ಟಿ ಆ ಸ್ತ್ರೀಯರನ್ನಪರಿಹರಿಸಿಕೊಂಡು ಹೋಗುವಾಗ ಅವನಿಗೆ ಏನು ಮಾಡುವದಕ್ಕೂ ಆಗಲಿಲ್ಲ; ಮುಖದ ಮೇಲೆ ಸೆರಗು ಹಾಕಿಕೊಂಡು ಊರದಾರಿಯನ್ನು ಹಿಡಿಯಬೇಕಾಯಿತು.

ಈ ಬಗೆಯ ಈಶ್ವರನ ಸರ್ವಶಕ್ತಿತ್ವವು ಪರಶುರಾಮಾವತಾರದ ಸಂಬಂಧದಲ್ಲಿಯೂ ಪ್ರಕಟವಾಗಿದೆ. ಇಪ್ಪತ್ತೊಂದು ಸಲ ಭೂಸಂಚಾರ ಮಾಡಿ ಕ್ಷತ್ರಿಯರನ್ನೆಲ್ಲಾ ಹುಡುಕಿ ಹುಡುಕಿ ಧ್ವಂಸಮಾಡಿದಂಥ ಪರಶು

ರಾಮನು ಶ್ರೀರಾಮಚಂದ್ರನ ಮುಂದೆ ಬಂದಾಗ ನಿರ್ವೀರ್ಯನಾಗಬೇಕಾಯಿತು. ತನ್ನಲ್ಲಿದ್ದ ಶಕ್ತಿಯನ್ನು ಶ್ರೀರಾಮನು ಸೆಳೆದುಕೊಂಡನೆಂದು ತಿಳಿದು ಪರಶುರಾಮನು ಮುಂದೆ ತಪಸ್ಸಿನಿಂದ ಕಾಲವನ್ನು ಕಳೆಯುವದಕ್ಕೆ ಹೋದನು. ಈಶ್ವರನ ಸರ್ವಶಕ್ತಿತ್ವವನ್ನು ಒಬ್ಬ ಮುಸಲ್ಮಾನ ಸಾಧು ರಾಜನಿಗೆ ಮನಗಾಣಿಸಿದ್ದು ಹೃದಯಂಗಮವಾಗಿದೆ. ಒಬ್ಬ ರಾಜನು ತನ್ನ ದೇಶದಲ್ಲಿದ್ದ ಮುಸಲ್ಮಾನರ ಸಾಧುವನ್ನು ತನ್ನ ಬಳಿಗೆ ಬರಮಾಡಿಕೊಂಡು ದೇವರ ವಿಷಯವಾಗಿ ಅನೇಕ ಪ್ರಶ್ನೆಗಳನ್ನು ಮಾಡುತ್ತ ನಡುವೆ ದೇವರು ಏನುಮಾಡುತ್ತಿರುವನೆಂದನು. ಇಂಥ ಮಾತುಗಳಿಗೆ ಆ ಸಾಧು ಸುಮ್ಮನೆ ತಾನೇ ಉತ್ತರವನ್ನು ಹೇಳಿಬಿಡುತ್ತಿರಲಿಲ್ಲ; ರಾಜನೇ ತಿಳಿದುಕೊಳ್ಳುವಂತೆ ಮಾಡುತ್ತಿದ್ದನು. ಆ ದಿನ ಆ ಸಾಧು ಆ ಪ್ರಶ್ನೆಯನ್ನು ಹೇಳುವದಕ್ಕೆ ಮುಂಚೆ ಸ್ವಲ್ಪಹೊತ್ತು ತನ್ನನ್ನು ಸಿಂಹಾಸನದಲ್ಲಿ ಕುಳ್ಳಿರಿಸಬೇಕೆಂದು ಕೇಳಿದನು. ರಾಜನು ಅದಕ್ಕೊಪ್ಪಿ ಅದರಂತೆ ಮಾಡಿ ತಾನು ಆ ರಾಜನ ಸೇವಕನಂತೆ ಕೆಳಗೆ ನಿಂತು ಈಗ ಉತ್ತರವನ್ನು ಹೇಳೆಂದನು. ಆಗ ಆ ಸಾಧು “ ಹೇಳುವದಿನ್ನೇನು; ದೇವರು ಮನಸ್ಸು ಬಂದರೆ ತಿರುಕನನ್ನು ಅರಸನನ್ನಾಗಿಯೂ ಅರಸನನ್ನು ತಿರುಕನನ್ನಾಗಿಯೂ ಹೀಗೆ ಮಾಡಬಲ್ಲನು ” ಎಂದು ರಾಜನಿಗೆ ದೇವರ ಸರ್ವ ಶಕ್ತಿತ್ವವನ್ನು ಮನಗಾಣಿಸಿದನು. ದೇವರ ಸರ್ವಶಕ್ತಿತ್ವದ ವಿಚಾರವಾಗಿ ಹೇಳುವಾಗ ಶ್ರೀರಾಮಕೃಷ್ಣ ಪರಮಹಂಸರು “ದೇವರು ಸೂಜಿಯ ಕಣ್ಣಿನಲ್ಲಿ ಆನೆಯನ್ನು ತೂರಿಸಬಲ್ಲನು ” ಎಂದು ಹೇಳಿದ್ದಾರೆ. ದೇವರಿಗೆ ಅಶಕ್ಯವಾದದ್ದು ಯಾವದೂ ಇಲ್ಲ.

## ದೇವರು ಸರ್ವಜ್ಞನು

ದೇವರು ಸರ್ವಶಕ್ತನಾಗಿರುವದಿಷ್ಟೇ ಅಲ್ಲ. ಅವನು ಸರ್ವಜ್ಞನೂ ಆಗಿರುವನು. ಸರ್ವಜ್ಞನೆಂದರೆ ಎಲ್ಲವನ್ನೂ ತಿಳಿದವನೆಂದರ್ಥ. ದೇವರು ಸರ್ವಜ್ಞನೆಂಬರ್ಥವನ್ನು ಪ್ರತಿಪಾದಿಸುವದಕ್ಕಾಗಿ ಶಾರೀರಕಸೂತ್ರಗಳಲ್ಲಿ ‘ ಶಾಸ್ತ್ರಯೋನಿತ್ವಾತ್ ” ಎಂಬದೊಂದು ಸೂತ್ರವಿದೆ. ದೇವರು ಸಮಸ್ತ ಶಾಸ್ತ್ರಗಳಿಗೂ ಕಾರಣನೆಂದು ಅದರ ಅರ್ಥವಾಗುತ್ತದೆ. ಶಾಸ್ತ್ರವೆಂದರೆ ವೇದಗಳು. ಇದನ್ನು ಮಾಡೆಂದೂ ಇದನ್ನು ಬಿಡೆಂದೂ ಶಾಸನಮಾಡು

ವದರಿಂದ ವೇದಗಳಿಗೆ ಶಾಸ್ತ್ರಗಳೆಂಬ ಮಾತು ಒಪ್ಪುವದು. ಆ ವೇದವು ಋಕ್, ಯಜುಸ್, ಸಾಮ, ಅಥರ್ವ—ಎಂದು ನಾಲ್ಕುಭೇದಗಳಾಗಿಯೂ ಅನೇಕಶಾಖೆಗಳುಳ್ಳದ್ದಾಗಿಯೂ ದೇವತ್ವ, ಮನುಷ್ಯತ್ವ, ಮತ್ತು ಪಶುತ್ವ— ಮೊದಲಾದ ಭೇದಗಳನ್ನೂ ತಿಳಿಸತಕ್ಕದ್ದಾಗಿಯೂ ಸಮಸ್ತ ಜ್ಞಾನಕ್ಕೂ ನಿಕ್ಷೇಪಸ್ಥಾನವಾಗಿರುವದು. ಇಲ್ಲಿ ಜ್ಞಾನವೆಂದರೆ ಈಗಿನ ರಸಾಯನಶಾಸ್ತ್ರದಂತೆ ಲೌಕಿಕವಸ್ತುಗಳ ವಿಚಾರವಾದ ಜ್ಞಾನವೆಂದು ತಿಳಿಯಬಾರದು. ವೇದವು ಲೌಕಿಕವಸ್ತುಗಳ ವಿಚಾರವನ್ನು ತಿಳಿಸುವದಕ್ಕಾಗಲಿ ಮಾಡತಕ್ಕ ಮತ್ತು ಬಿಡತಕ್ಕ ಲೌಕಿಕಕಾರ್ಯಗಳನ್ನು ಹೇಳುವದಕ್ಕಾಗಲಿ ಎಂದೂ ಹೊರಟಿಲ್ಲ. ಮನುಷ್ಯನಿಗೆ ಲೌಕಿಕವಾದ ವಸ್ತುಗಳ ಮತ್ತು ಲೌಕಿಕವಾದ ಕಾರ್ಯಾಕಾರ್ಯಗಳ ಜ್ಞಾನವು ತನಗೆ ತಾನೇ ಆಗುತ್ತ ಹೋಗುವದು. ಮನುಷ್ಯನು ತನ್ನ ಬುದ್ಧಿಯಿಂದ ಊಹಿಸಬಹುದಾದವುಗಳನ್ನೆಲ್ಲಾ ಹೇಳಹೋಗುವದು ಅದರ ಉದ್ದೇಶವೇ ಅಲ್ಲ. ಯಾವ ವಿಚಾರಗಳನ್ನು ಮನುಷ್ಯರ ಬುದ್ಧಿಯು ನಿಲುಕಿಸಿಕೊಳ್ಳಲಾರದೊ ಅಂಥ ಅಲೌಕಿಕವಿಚಾರಗಳನ್ನು— ಅಂದರೆ ಮನುಷ್ಯನಿಗೆ ಸಂಬಂಧಪಟ್ಟ ಪರಲೋಕಸಾಧನದ ಸಂಗತಿಗಳನ್ನು— ಹೇಳುವದಕ್ಕೆ ವೇದವು ಹೊರಟಿರುವದು. ಲೌಕಿಕವಿಷಯಗಳನ್ನು ಹೇಳಿದ್ದರೆ ವೇದಕ್ಕೆ ಹೆಚ್ಚುಗಾರಿಕೆಯೇ ಇರುತ್ತಿರಲಿಲ್ಲ. ಮನುಷ್ಯತ್ವದ ಮಬ್ಬಿನೊಳಗಿರುವ ಯಾರಿಗೂ ತಿಳಿಯಲಾಗದಂಥ ಪರಮರಹಸ್ಯಗಳನ್ನು ತಿಳಿಸುವದರಿಂದಲೇ ವೇದಕ್ಕೆ ವೇದತ್ವ. ಈ ವೇದವು ದೇವರ ಮುಖದಿಂದ ನಿಃಶ್ವಾಸದಂತೆ ಸ್ವಭಾವವಾಗಿ ಪ್ರವಹಿಸಿರುವದು. ಗಹನವಿಷಯಗಳನ್ನು ಮನಸ್ಸಿಗೆ ತಂದುಕೊಂಡು ಹೇಳಬೇಕಾದರೆ ಎಂತಹ ಬುದ್ಧಿಶಾಲಿಗಳಾದರೂ ಎಷ್ಟೋ ತಡೆದುತಡೆದು ಹೇಳಬೇಕಾಗುವದು. ಇಂದ್ರಿಯಗಳಿಗೆ ವಿಷಯವಲ್ಲದಂಥ ಪರಮಾರ್ಥತತ್ತ್ವಗಳನ್ನು ಲೀಲೆಯಿಂದ ಹೇಳಿದ ಹಾಗೆ ಆದ ಮೇಲೆ ಆ ಪರಮಾತ್ಮನ ಜ್ಞಾನವು ಇನ್ನೆಷ್ಟು ಪ್ರಬಲವಾಗಿರಬಹುದು! ಯಾರಾದರೊಬ್ಬರು ಲೌಕಿಕರು ಒಂದು ಶಾಸ್ತ್ರವನ್ನು ಬರೆದರೆ ಅವರಿಗೆ ಆ ಗ್ರಂಥದಲ್ಲಿರುವ ವಿಷಯಗಳಿಗಿಂತ ಎಷ್ಟೋ ಹೆಚ್ಚು ತಿಳಿದೇ ಇರುವದೆಂದು ನಮ್ಮೆಲ್ಲರ ಅನುಭವದಲ್ಲಿಯೂ ಇದೆ. ತನಗೆ ತಿಳಿದಿರುವದನ್ನೆಲ್ಲಾ ಗ್ರಂಥ

ರೂಪದಲ್ಲಿ ಬಿಚ್ಚಿಡುವದಕ್ಕೆ ಯಾರಿಗೂ ಆಗುವದಿಲ್ಲ. ಯಾವಾಗಲೂ ಗ್ರಂಥದಲ್ಲಿರುವ ವಿಚಾರವು ಗ್ರಂಥಕರ್ತನ ಜ್ಞಾನದ ಏಕಾಂಶವೇಸರಿ. ಈ ದೃಷ್ಟಿಯಿಂದ ನೋಡಿದರಂತು ದೇವರ ಜ್ಞಾನಕ್ಕೆ ಪಾರವೇ ಇಲ್ಲ. ದೇವರ ಮುಖದಿಂದ ಲೆಕ್ಕವಿಲ್ಲದಷ್ಟು ವೇದಗಳು ಹೊರಟವೆಂದು ಹೇಳುತ್ತಾರೆ. ಈಗ ನಮಗೆ ಸಿಕ್ಕಿರುವ ವೇದಗಳು ಬಹು ಅಲ್ಪಸಂಖ್ಯೆಯವುಗಳಾಗಿವೆ.

ಈ ಸ್ವಲ್ಪಪರಿಮಾಣದ ವೇದಗಳನ್ನು ತಿಳಿಯುವದಕ್ಕೇ ನಮ್ಮ ಬುದ್ಧಿಗೆ ಎಷ್ಟು ಜನ್ಮಗಳೆತ್ತಿದರೂ ಸಾಲದೆಂಬಂತಿದೆ. ಇನ್ನು ಲೆಕ್ಕವಿಲ್ಲದಷ್ಟು ವೇದಗಳನ್ನು ನಿಃಶ್ವಾಸರೂಪದಲ್ಲಿ ಹೊರಬಿಟ್ಟಂಥ ದೇವರ ಸರ್ವಜ್ಞತೆಯ ಮಹತ್ತ್ವವನ್ನು ತಿಳಿಯುವದು ನಮಗೆಂದಿಗೂ ದಕ್ಕುವ ಮಾತೇ ಅಲ್ಲ. ಇನ್ನು ಲೌಕಿಕವಸ್ತುಗಳ ಮತ್ತು ಕಾರ್ಯಗಳ ವಿಚಾರವನ್ನು ಹೇಳಿದ್ದರೆ ವೇದಕ್ಕೆ ಮಹತ್ತ್ವವುಂಟಾಗುತ್ತಿತ್ತೆಂದು ಯಾರಿಗಾದರೂ ತೋರಬಹುದು. ದೇವರಿಗೆ ಈ ವಿಚಾರಗಳು ತಿಳಿಯದೆಂತಲೂ ಹೇಳುವಹಾಗಿಲ್ಲ. ಆದರೆ ಇವುಗಳನ್ನು ಹೇಳುವದು ಅವನಿಗೆ ಮಹತ್ತ್ವವೆನಿಸಲಿಲ್ಲ. ಒಬ್ಬ ರಾಜನ ವೈಭವದ ವರ್ಣನೆಯನ್ನು ಮಾಡೆಂದು ಕವಿಗೆ ಹೇಳಿದರೆ ಕವಿ ಏನೇನನ್ನು ವರ್ಣನೆ ಮಾಡಬೇಕು? ರಾಜನ ಮನೆಯಲ್ಲಿ ಕಸವನ್ನು ಉಡುಗುವ ಪರಕೆಯೂ ಕಸವನ್ನು ಕೊಂಡೊಯ್ಯುವ ಬಿದಿರಗೂಡೆಯೂ ಇಲ್ಲದೆ ಇರಲಾರದು. ಆದರೆ ಕವಿಯು ಇವುಗಳನ್ನು ವರ್ಣನೆ ಮಾಡುವದಕ್ಕೆ ಹೋಗುವದಿಲ್ಲ. ಏಕೆಂದರೆ ಇವುಗಳ ಪರಿಚಯವು ಎಲ್ಲರಿಗೂ ಇರುವದು. ಆದ್ದರಿಂದಲೇ ಇವು ವೈಭವಸೂಚಕಗಳೂ ಇಲ್ಲ. ರಾಜನ ವೈಭವನ್ನು ವರ್ಣನೆಮಾಡುವದರಲ್ಲಿ ಸಾಮಾನ್ಯಜನರಿಗೆ ಪರಿಚಯವಿಲ್ಲದಂಥ ಹೆಚ್ಚಿನ ವಿಷಯಗಳನ್ನು ಹೇಳುವದೇ ಮುಖ್ಯವಾಗಿರುವದು. ಏಕೆಂದರೆ ಅದೇ ರಾಜನ ವೈಭವ. ಸಾಮಾನ್ಯಕವಿಗಳಿಗೇ ಇಷ್ಟು ವಿವೇಕವಿರುವಾಗ ಸಮಸ್ತಕವಿಗಳಿಗೆಲ್ಲಾ ಕವಿಯಾದ—ಅಂದರೆ ಸಮಸ್ತಕವಿಗಳನ್ನೂ ಸೃಷ್ಟಿಮಾಡಿರುವ— ದೇವರಿಗಿನ್ನೆಷ್ಟು ವಿವೇಕವಿರಬಹುದು! ಆದ್ದರಿಂದಲೇ ಅವನು ವೇದದಲ್ಲಿ ಲೌಕಿಕವಿಷಯಗಳನ್ನು ಹೇಳಿಲ್ಲ. ಒಂದು ಪಕ್ಷ ಲೌಕಿಕವಿಷಯಗಳು ಅವನಿಗೆ

ತಿಳಿದಿರಲಾರದೆಂದರೂ ಕೊರತೆ ಇಲ್ಲ. ಏಕೆಂದರೆ ಒಬ್ಬ ರಾಜನ ಮನೆಯಲ್ಲಿ ಒಂದು ಒಡಕ ಮಡಿಕೆಯ ಓಡು ಇಲ್ಲವೆಂದ ಮಾತ್ರಕ್ಕೇ ಅವನ ಅಷ್ಟೈಶ್ವರ್ಯಕ್ಕೇನಾದರೂ ನ್ಯೂನತೆಯೇ? ದೇವರಿಗೆ ಲೌಕಿಕದ ವಿಚಾರವು ಒಡಕ ಮಡಿಕೆಯ ಓಡಿನಂತೆ ಕ್ಷುದ್ರವೇ ಸರಿ. ಒಡಕ ಮಡಿಕೆ ಇಲ್ಲದ ಮಾತ್ರದಿಂದಲೇ ರಾಜನ ಅಷ್ಟೈಶ್ವರ್ಯಕ್ಕೆ ಹೇಗೆ ಹಾನಿ ಇಲ್ಲವೊ ಹಾಗೆ ಲೌಕಿಕವಿಷಯಗಳನ್ನು ಹೇಳದಿರುವ ಮಾತ್ರದಿಂದಲೇ ದೇವರ ಸರ್ವಜ್ಞತ್ವಕ್ಕೂ ಹಾನಿ ಇಲ್ಲ. ಈ ಜಗತ್ತೇ ದೇವರ ಒಂದಂಶವಾಗಿರುವದರಿಂದ ಜಗತ್ತಿನಲ್ಲಿರುವ ಎಲ್ಲರ ಜ್ಞಾನಗಳ ರಾಶಿಯೂ ಆ ದೇವರ ಜ್ಞಾನದ ಒಂದಂಶವೇ ಆಗುವದು. ಇದರಿಂದಲಂತು ದೇವರ ಸರ್ವಜ್ಞತ್ವವು ಬೇಕಾದಷ್ಟು ಎದ್ದು ಕಾಣುವದು.

## ದೇವರ ನಾಮರೂಪಗಳು.

ದೇವರು ಸರ್ವವ್ಯಾಪಿಯಾಗಿಯೂ ಸರ್ವಶಕ್ತನಾಗಿಯೂ ಸರ್ವಜ್ಞನಾಗಿಯೂ ಇರುವನೆಂದೊಪ್ಪಿಕೊಳ್ಳೋಣ ; ಅವನ ರೂಪೇನು ? ಅವನ ನಾಮವೇನು ? ರೂಪವನ್ನು ವಿಚಾರ ಮಾಡಿದರೆ ಶಾಸ್ತ್ರದಲ್ಲಿ ದೇವರು ರೂಪಿಲ್ಲದವನೆಂಬ ಮಾತುಗಳೂ ಸಿಕ್ಕುತ್ತವೆ ; ರೂಪವುಳ್ಳವನೆಂಬ ಮಾತುಗಳೂ ಸಿಕ್ಕುತ್ತವೆ. ಆ ರೂಪಗಳಲ್ಲಿ ಕೆಲವು ಕಡೆ ಅವನು ಶಂಖಚಕ್ರಗದಾಧಾರಿಯಾಗಿ ಆಕಾಶದಂತೆ ನೀಲವರ್ಣನಾಗಿರುವನೆಂದಿದೆ ; ಇನ್ನು ಕೆಲವು ಕಡೆ ಅವನು ತ್ರಿಶೂಲಡಮರುಗಧಾರಿಯಾಗಿ ಬೆಳ್ಳಿಯಂತೆ ಬೆಳ್ಳಗಿರುವನೆಂದಿದೆ ; ಇನ್ನೂ ಎಷ್ಟೋ ಕಡೆಗಳಲ್ಲಿ ಎಷ್ಟೆಷ್ಟೋ ಬಗೆಯ ರೂಪಗಳು ವರ್ಣಿತವಾಗಿವೆ. ಪರಮಾತ್ಮನ ರೂಪಿನ ವಿಷಯಕ್ಕೆ ನಾವು ಶಾಸ್ತ್ರಗಳಿಗೇ ಶರಣು ಹೋಗಬೇಕು; ಬೇರೆ ಉಪಾಯವೇ ಇಲ್ಲ. ಆ ಶಾಸ್ತ್ರಗಳಲ್ಲಿಯೇ ಹೀಗೆ ಬೇರೆ ಬೇರೆ ಬಗೆಯಾಗಿವೆ. ಇದರಿಂದ ದೇವರು ಯಾವ ರೂಪಿನಿಂದ ಬೇಕಾದರೂ ಕಾಣಿಸಿಕೊಳ್ಳುವನೆಂದೂ ಯಾವ ರೂಪೂ ಇಲ್ಲದವನಾಗಿಯೂ ಇರುವನೆಂದೂ ತಿಳಿಯಬೇಕು. ದೇವರಿಗೆ ರೂಪಿಗೆ ನಿಯಮವಿಲ್ಲ. ಯಾರು ಯಾರು ಯಾವ ಯಾವ ರೂಪವನ್ನು ಧ್ಯಾನ್ಯಮಾಡಿದರೆ ಅವರವರಿಗೆ ಆಯಾ

ರೂಪಿನಲ್ಲಿ ದೇವರು ಕಾಣುವನು. ಈ ರೂಪಿನ ನೆಲೆಯನ್ನರಿಯದೆ ಒಬ್ಬನು ಹೇಳಿರುವದೇನೆಂದರೆ

"ತವ ತತ್ತ್ವಂ ನ ಜಾನಾಮಿ ಕೀದೃಶೋಽಸಿ ಜನಾರ್ದನ ।
ಯಾದೃಶೋಽಸಿ ಜಗನ್ನಾಥ ತಾದೃಶಾಯ ನಮೋಽಸ್ತು ತೇ ॥"

ಹೆ, ದೇವ ನೀನು ಯಾವ ರೂಪಲ್ಲಿರುವೆಯೊ ನಾನು ಕಾಣೆ ; ನೀನು ಯಾವ ರೂಪದಲ್ಲಿರುವೆಯೋ ಆ ರೂಪಕ್ಕೆ ನಿನಗೆ ನಮಸ್ಕಾರ. ಇದು ಆಶ್ಲೋಕದ ಅಭಿಪ್ರಾಯ. ದೇವರ ರೂಪದ ವಿಷಯವಾಗಿ ಶ್ರೀರಾಮಕೃಷ್ಣಪರಮಹಂಸರು ತಮ್ಮ ಮಾತೃಭಾಷಾಪೇದಪ್ರಾಯವಾದ ಸೂಕ್ತಿಮಾಲೆಯಲ್ಲಿ ಹೇಳಿರುವದೇನೆಂದರೆ:—

(೧) ಬೆಂಕಿಗೆ ಸ್ವಂತವಾದ ಯಾವ ಆಕಾರವೂ ಇಲ್ಲ. ಆದರೆ ಅದು ಜಾಜ್ವಲ್ಯಮಾನವಾಗಿ ಉರಿಯುವಾಗ ಬೇರೆ ಬೇರೆ ಆಕಾರಗಳನ್ನು ಹೊಂದುತ್ತದೆ. ನಿರಾಕಾರವಾದ ಬೆಂಕಿಗೆ ಆಗ ಸಾಕಾರತ್ವವು ಬರುತ್ತದೆ. ಹಾಗೆಯೇ ನಿರಾಕಾರನಾದ ದೇವರು ಕೆಲವು ವೇಳೆ ಒಂದೊಂದು ಆಕಾರವನ್ನು ಹೊಂದುತ್ತಾನೆ.

(೨) ಘಂಟೆಯ ಸದ್ದು ಕೇಳುತ್ತಿರುವವರೆಗೂ ಅದು ಆಕಾರವನ್ನು ಹೊಂದಿದ ಹಾಗೆ ಕಾಣುತ್ತದೆ. ಆದರೆ ಸದ್ದು ನಿಂತ ಮೇಲೆ ಅದು ನಿರಾಕಾರವಾಗುತ್ತದೆ. ಹಾಗೆಯೇ ದೇವರು ಸಾಕಾರನೂ ಅಹುದು ; ನಿರಾಕಾರನೂ ಅಹುದು."

ಈ ಅಭಿಪ್ರಾಯವನ್ನು ವೀರಶೈವರ ವಚನಶಾಸ್ತ್ರವೂ ಪುಷ್ಟಿಗೊಳಿಸುತ್ತದೆ.

"ಸನಕಸನಂದ ಮುನಿಜನಾದಿಗಳು ಅರಿಯರಯ್ಯ ನಿಮ್ಮ ಅಂತುವನು. ಒಂದರಲ್ಲಿ ಹಲವಾಗಿ, ಹಲವರಲ್ಲಿ ಒಂದಾಗಿ ಸಾಕಾರನಿರಾಕಾರವಾಗಿಪ್ಪಲ್ಲಿ ಏಕವಾಗಿಪ್ಪ ಕಪಿಲ ಸಿದ್ಧಮಲ್ಲನಾಥ ನೀವೇಯಾಗಿ."

ಇನ್ನು ನಾಮದ ವಿಷಯವು ರೂಪದ ವಿಷಯವನ್ನೇ ಹಿಂಬಾಲಿಸುವದು. ಬೇರೆ ಬೇರೆ ರೂಪಗಳಿರುವದೂ ಯಾವ ರೂಪೂ ಇಲ್ಲದಿರುವದೂ ಇವೆರಡೂ ಇರುವಂತೆ ದೇವರಿಗೆ ಶಿವ, ವಿಷ್ಣು—ಮೊದಲಾದ ಬೇರೆ ಬೇರೆ ನಾಮಗಳಿರುವದೂ ಯಾವ ನಾಮವೂ ಇಲ್ಲದೆ ಇರುವದೂ ಇವೆರಡೂ ಉಂಟು.

## ದೇವರೇಕೆ ಕಾಣುವದಿಲ್ಲ ?

“ ದೇವರು ಸಾಕಾರನಾಗಿಯೂ ನಿರಾಕಾರನಾಗಿಯೂ ಇರುವದಾದರೆ ನಮಗೆ ಕಾಣಬೇಕಲ್ಲ ! ಎಲ್ಲೆಲ್ಲಿಯೂ ಇದ್ದಾನೆಂಬ ದೇವರು ನಮಗೆ ಎಲ್ಲಿಯೂ ಕಾಣುವದಿಲ್ಲವಲ್ಲ !! ” ಎಂದರೆ ದೇವರು ನಮಗೆಲ್ಲಿಯೂ ಕಂಡಿಲ್ಲವೆಂಬ ಮಾತು ನಿಜ. ಆದರೆ ದೇವರನ್ನು ಕಾಣಬೇಕೆಂದು ಎಷ್ಟು ಜನ ಪ್ರಯತ್ನಮಾಡುತ್ತಾರೆ? ಎಲ್ಲರೂ ಪ್ರಾಪಂಚಿಕ ಸೌಕರ್ಯಗಳನ್ನು ಕಾಣಬೇಕೆಂದು ತಪತಪಡುವರೇ ಹೊರತು ದೇವರನ್ನು ಕಾಣಬೇಕೆಂದು ಕುತೂಹಲವನ್ನು ಯಾರು ಪ್ರಕಟಮಾಡಿದ್ದಾರೆ ? ದೇವರ ಕಡೆಗೆ ಮನಸ್ಸು ಹರಿಯುವದು ಬಹು ದೊಡ್ಡ ಪುಣ್ಯದ ಫಲ. ಎಷ್ಟೋ ಜನಕ್ಕೆ ದೇವರ ವಿಚಾರವನ್ನು ಕೇಳಲಿಕ್ಕೆ ಕೂಡ ಸಿಕ್ಕುವದಿಲ್ಲ. ಕೇಳಲಿಕ್ಕೆ ಸಿಕ್ಕಿದವರಲ್ಲಿಯೂ ಎಷ್ಟೋ ಜನಕ್ಕೆ ಅದರ ಅರ್ಥವು ಮನಸ್ಸಿನಲ್ಲಿ ಬಿಂಬಿಸುವದಿಲ್ಲ. ಹೀಗೆ ಏಕಾಗುತ್ತದೆ ? ಎಂದರೆ ಅವನನ್ನು ನೋಡುವ ಯೋಗ್ಯತೆಯು ನಮಗೆ ಇಲ್ಲ. ಉದಾಹರಣೆ ನೋಡಿರಿ. ನಮ್ಮ ಕಣ್ಣುಗಳಿಗೆ ಸೂರ್ಯನನ್ನು ಪೂರ್ಣವಾಗಿ ನೋಡುವದಕ್ಕಾಗುವದೊ ? ಇಲ್ಲ. ಸೂರ್ಯನು ನಮಗೆ ಕಾಣುವಷ್ಟು ಸಣ್ಣ ವಸ್ತುವಲ್ಲ. ಅವನು ಭೂಮಿಗಿಂತ ಎಷ್ಟೋ ಪಾಲು ದೊಡ್ಡವನು. ಸೂರ್ಯನಿಗೂ ಭೂಮಿಗೂ ಇರುವ ನಡುವಣ ಅಂತರವು ಸೂರ್ಯನನ್ನು ಸಣ್ಣದೊಂದು ದುಂಡುಗನ್ನಡಿಯ ಹಾಗೆ ಕಾಣುವಂತೆ ಮಾಡಿರುವದು. ಹಾಗೆಯೇ ದೇವರು ಅಪಾರಮಹಿಮನು. ಆದ್ದರಿಂದ ನಾವು ಅವನ ನಿಜತ್ವವನ್ನು ಗ್ರಹಿಸಲಾರೆವು. ಸೂರ್ಯನ ಪ್ರಕಾಶವನ್ನೇ ನಮ್ಮ ಕಣ್ಣು ನೋಡಲಾರದು. ದೇವರು ಅನೇಕಸೂರ್ಯರ ಪ್ರಕಾಶದಂಥವನೆಂದು ಕವಿಗಳು ವರ್ಣಿಸುತ್ತಾರೆ. ನಮ್ಮ ಕಣ್ಣಿಗೆ ಅವನನ್ನು ನೋಡುವ ಸಾಮರ್ಥ್ಯವಿಲ್ಲ. ನಮಗೆ ದೃಷ್ಟಿಪಾಟವವು ಕಡಿಮೆಯಾಗಿ ಹೊರಗಣ ವಸ್ತುಗಳು ಕಾಣದೆ ಇರುವಾಗ ವೈದ್ಯರು ನಮ್ಮ ಕಣ್ಣಿಗೆ ತಕ್ಕ ಕನ್ನಡಿಯನ್ನಿಟ್ಟು ಕಾಣುವ ಹಾಗೆ ಮಾಡುವಂತೆ ನಮಗೆ ದೇವರನ್ನು ತೋರಿಸುವಂಥ ಗುರುವಿನ ಅನುಗ್ರಹವು ಬೇಕು. ಅರ್ಜುನನಿಗೆ ವಿಶ್ವರೂಪದರ್ಶನವನ್ನು ಮಾಡಿಸುವದಕ್ಕೆ ಮುಂಚೆಯೇ

ಶ್ರೀಕೃಷ್ಣನು " ಅರ್ಜುನ, ನಾನು ಈಗ ತೋರಿಸುವ ರೂಪವನ್ನು ನಿನ್ನ ಈ ಕಣ್ಣಿನಿಂದ ನೀನು ನೋಡಲಾರೆ ; ಆದ್ದರಿಂದ ನಿನಗೆ ನಾನೊಂದು ಜ್ಞಾನಚಕ್ಷುವನ್ನು ಕೊಡುತ್ತೇನೆ. " ಎಂದು ಆ ರೀತಿಯಲ್ಲಿ ಮೊದಲು ಕಣ್ಣನ್ನು ಕೊಟ್ಟು ಆ ಮೇಲೆ ತನ್ನ ರೂಪವನ್ನು ತೋರಿಸಿದ್ದಾನೆ. ಸಂಜಯನು ರಣಭೂಮಿಯಿಂದ ಎಷ್ಟೋ ದೂರದಲ್ಲಿದ್ದರೂ ಆ ರಣವಾದ್ಯಗಳ ಗದ್ದಲದ ನಡುವೆ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ ಗೀತೋಪದೇಶವನ್ನು ಶ್ರೀವ್ಯಾಸಮಹರ್ಷಿಗಳ ಅನುಗ್ರಹದಿಂದ ಕೇಳಿದವನಾಗಿದ್ದಾನೆ.

ಜನಮಂಡಲಿಯಲ್ಲಿ ಸಾಮಾನ್ಯವಾಗಿ ದೇವರನ್ನು ನೋಡುವ ಸಾಮರ್ಥ್ಯವುಳ್ಳವರು ಬಹು ಕಡಿಮೆ. ಏಕೆಂದರೆ—

" ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।
ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥ "

ಎಂದು ಶ್ರೀಕೃಷ್ಣನು ಗೀತೆಯಲ್ಲಿ ಹೇಳಿರುವಂತೆ ಹುಟ್ಟುವಾಗಲೆ ಎಲ್ಲರೂ 'ಬೇಕು, ಬೇಡ' ಎಂಬ ಜೋಡಿಯ ಮಂಕಿಗೆ ವಶರಾಗುತ್ತಾರೆ. ಅಂದರೆ ಶೀತೋಷ್ಣಗಳಂತೆ ಒಂದಕ್ಕೊಂದು ವಿರೋಧವುಳ್ಳಂಥ ಸುಖ, ದುಃಖ, ಲಾಭ, ನಷ್ಟ, ಬೇಕು, ಬೇಡ—ಎಂಬ ಮುಂತಾದ ಕೆಲವು ಜೋಡಿಗಳಿವೆ; ಪ್ರಾಣಿಯು ಹುಟ್ಟುವಾಗಲೇ ಈ ಜೋಡಿಗಳು ಬಂದು ಅವನನ್ನು ತಮ್ಮ ವಶವಾಗಿ ಮಾಡಿಕೊಂಡಿರುತ್ತವೆ. ಈ ಜೋಡಿಗಳ ಸೆಳೆತಕ್ಕೆ ಸಿಕ್ಕಿ ಅಲೆದಾಡುವ ಮನಸ್ಸು ದೇವರ ಕಡೆಗೆ ಸುಳಿಯಲಾರದು. ಆ ಜೋಡಿಗಳು ಮನಸ್ಸನ್ನು ಸಿಕ್ಕಿದ ಹಾಗೆ ಹಿಂಡಿ ಹೀರಿ ಹಿಪ್ಪೆಮಾಡುವದರಿಂದ ಮನಸ್ಸು ನಿರ್ವೀರ್ಯವಾಗಿ ದೇವರ ಕಡೆಗೆ ಹರಿಯಲಾರದೆ ಹೋಗುವದು. ವೇದದಲ್ಲಿ " ನಾಯಮಾತ್ಮಾ ಬಲಹೀನೇನ ಲಭ್ಯಃ "ಎಂದಿದೆ. ಅಂದರೆ ದೇವರು ದುರ್ಬಲರಿಗೆ ದಕ್ಕುವದಿಲ್ಲವೆಂದರ್ಥ. ಇಲ್ಲಿ ದುರ್ಬಲರೆಂದರೆ ಶರೀರದೃಷ್ಟಿಯಿಂದ ದುರ್ಬಲರೆಂದು ತಿಳಿಯಬಾರದು. ಶರೀರದಲ್ಲಿ ಬಲಶಾಲಿಗಳಾದ ಮಾತ್ರಕ್ಕೆ ದೇವರು ಕಾಣುವದಿಲ್ಲ; ಹಾಗಾದರೆ ಗರಡಿಯ ಮನೆಯೇ ದೇವರ ನರ್ತನಶಾಲೆಯಾದೀತು. ಶರೀರಬಲವುಳ್ಳವರು ಬಹುಜನರು ದೊರೆಯಬಹುದು.

ಶರೀರಬಲಕ್ಕೆ ದುರ್ಬಲಶರೀರಿಗಳು ಮಾತ್ರ ದಕ್ಕಬಹುದಲ್ಲದೆ ಸರ್ವ ಶಕ್ತನಾದ ದೇವರು ದಕ್ಕಲಾರನು. ಇದಲ್ಲದೆ ದೇವರನ್ನು ದಕ್ಕಿಸಿ ಕೊಳ್ಳುವದು ಮನಸ್ಸಿನಿಂದ. ಆದ್ದರಿಂದ ಮನೋದೌರ್ಬಲ್ಯವುಳ್ಳವರಿಗೆ ದೇವರು ದಕ್ಕುವದಿಲ್ಲವೆಂದರ್ಥ. ನೂರಾರು ಬಾರಿ ಭೂಮಿಯನ್ನೆಲ್ಲಾ ಸುತ್ತಿಸುತ್ತಿ ನವಖಂಡಗಳನ್ನೂ ಜಯಿಸಬಹುದು ; ಮನಸ್ಸನ್ನು ಜಯಿಸು ವದಾಗುವದಿಲ್ಲ. ಒಬ್ಬ ವಿದ್ವಾಂಸನು ತನ್ನ ಪಾಂಡಿತ್ಯದಿಂದ ಎಲ್ಲರನ್ನೂ ಗೆದ್ದು ಕೈಗೆ ಕಂಕಣವನ್ನು ಹಾಕಿಸಿಕೊಂಡು ಜಯಪತ್ರವನ್ನು ಪಡೆದು ಬರುತ್ತಿರುವಾಗ ಒಂದೂರಲ್ಲಿ ಒಬ್ಬರು ಸಾಧುಗಳು ಜ್ಞಾನಿಗಳೆಂದು ಹೆಸರುಗೊಂಡು ಅನೇಕರಿಂದ ನಮಸ್ಕಾರವನ್ನು ಪಡೆಯುತ್ತಿರುವರೆಂಬ ಸುದ್ದಿಯು ಅವನ ಕಿವಿಗೆ ಬಿತ್ತು. ಒಡನೆ ಆ ಸಾಧುಗಳನ್ನು ಗೆದ್ದರೆ ಅವರ ಶಿಷ್ಯಮಂಡಲಿಯೆಲ್ಲಾ ತನ್ನ ಕಾಲ ಮೇಲೆ ಬೀಳುವದೆಂದು ನೆನೆಸಿ ಆ ಪಂಡಿತನು ಜಯಾಪೇಕ್ಷಿಯಾಗಿ ಆ ಸಾಧುಗಳ ಬಳಿಗೆ ಬಂದನು. ಒಬ್ಬೊಬ್ಬರನ್ನು ಜಯಿಸುವದಕ್ಕಿಂತಲೂ ಪ್ರತಿಯೊಬ್ಬರನ್ನೂ ಜಯಿಸಬೇಕೆಂಬ ಮನಸ್ಸನ್ನೆ ಜಯಿಸಿದರೆ ಮಾತ್ರ ನಿಜವಾದ ಜಯವು ದೊರೆಯುವದೆಂದು ಆಗ ಆ ಪಂಡಿತನಿಗೆ ಆ ಸಾಧುಗಳು ಬುದ್ಧಿ ಯನ್ನು ಹೇಳಿ ಕಳುಹಿಸಿದರು. ತನ್ನ ಹಿಡಿತಕ್ಕೆ ಸಿಕ್ಕದೆ ಸೊಕ್ಕಿರುವ ಮನ ಸ್ಸಿಗೆ ದೇವರನ್ನು ಕಾಣುವ ಸೂಕ್ಷ್ಮದೃಷ್ಟಿ ಇರುವದಿಲ್ಲ. ದೇವರನ್ನು ಕಾಣುವದಕ್ಕೆಸೂಕ್ಷ್ಮದೃಷ್ಟಿ ಬೇಕು. ಮಹಾಲಿಂಗಕವಿಯು ಹೇಳಿರುವ ದೇನೆಂದರೆ—

" ಕ್ಷೀರದೊಳು ಘೃತವಡಗಿ ನೀರು ಮುತ್ತಿನೊಳಡಗಿ
ಆರೈದು ನೋಡೆ ಬೀಜದೊಳು ವೃಕ್ಷ ||
ಸಾರಿದುರ್ ಮೊಳೆದೋರದಂತಿರ್ಪ ಮಹಘನವ
ನಾರು ಭೇಧಿಸಿ ಕಾಣಲರಿದು ನೋಡಾ "

ಈ ವಿಚಾರದಲ್ಲಿ ವೀರಶೈವರ ವಚನಶಾಸ್ತ್ರವು ಹೇಳುವದೇನೆಂದರೆ-

" ಎಣ್ಣೆ ಇದ್ದು ಎಳ್ಳು ನನೆಯದ ಭೇದವ, ಕಿಚ್ಚಿದ್ದು ಕಲ್ಲು ಸಿಡಿಯದ ಭೇದವ, ಕಾಮವಿದ್ದು ಕನ್ನೆಯನನುಭವಿಸದ ಭೇದವ, ಪರವಿದ್ದು ಪ್ರಾಣನ ಪ್ರಕೃತಿಯು ಹರಿಯದ ಭೇದವ ನರರೆತ್ತ ಬಲ್ಲರೈ ರಾಮನಾಥಾ? "

ಈ ಸಂದರ್ಭಕ್ಕೆ ಒಪ್ಪುವಂತೆ ರತ್ನಾಕರಸಿದ್ಧಕವಿಯು ಹೇಳಿರುವ ದೇನೆಂದರೆ—

"ಒರೆಯೊಳಿರ್ಪಾಯುಧದಂತೆ ಕಾವುರ್ಗಿಲಿನ ಮರೆಯೊಳಗಣ ಸೂರ್ಯನಂತೆ||
ಹೊರಗೆ ಕಲ್ಮಷದ ಮೈಯುಹುದೊಳಗಾತ್ಮನು ಕರೆವುತಿಪನು ತಿಳಿವೆಗಾ||"

ಈ ರೀತಿಯಲ್ಲಿರುವ ದೇವರನ್ನು ಜ್ಞಾನದೃಷ್ಟಿಯಿಂದ ಕಾಣುವದು ಸಾಧ್ಯವಾದರೂ ಸಾಮಾನ್ಯವಾಗಿ ನಮಗೆ ಕಾಣುವದಿಲ್ಲವೆಂಬ ಮಾತ್ರದಿಂದ ದೇವರೇ ಇಲ್ಲವೆಂದು ಹೇಳಬಾರದು. ಆಕಾಶದಲ್ಲಿ ನಕ್ಷತ್ರಗಳು ಇದ್ದೇ ಇರುತ್ತವೆ. ಹಗಲು ಹೊತ್ತು ಅವು ನಮಗೆ ಕಾಣುವದಿಲ್ಲ. ಆದ ಮಾತ್ರಕ್ಕೇ ನಕ್ಷತ್ರಗಳೇ ಇಲ್ಲವೆಂದು ಹೇಳಬಹುದೇ? ಅಜ್ಞಾನಕಾಲದಲ್ಲಿ ದೇವರು ನಮಗೆ ಕಾಣದ ಮಾತ್ರಕ್ಕೇ ದೇವರೇ ಇಲ್ಲವೆಂದು ಹೇಳಬಾರದು.

## ದೇವರನ್ನು ಕಾಣುವದಕ್ಕೇನು ಮಾಡಬೇಕು?

ದೇವರನ್ನು ಕಾಣಬೇಕಾದರೆ ನಮ್ಮ ದೌರ್ಬಲ್ಯವನ್ನು ಕಳೆದುಕೊಂಡು ದೇವರನ್ನು ಕಾಣುವ ಯತ್ನವನ್ನು ಮಾಡಬೇಕು. ದೇವರು ಯಾವಾಗ ಕಾಣುತ್ತಾನೆ? ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೇಳಿರುವ ದೇನೆಂದರೆ—

"ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಂ |
ತೇ ದ್ವಂದ್ವಮೋಹನಿರ್ಮುಕ್ತಾಃ ಭಜಂತೇ ಮಾಂ ದೃಢವ್ರತಾಃ ||

ತಾತ್ಪರ್ಯವೇನೆಂದರೆ ನಾವು ಪಾಪಮಾಡಿದ್ದರ ಫಲವಾಗಿ 'ಬೇಕು, ಬೇಡ' ಮೊದಲಾದ ಜೋಡಿಗಳು ನಮ್ಮ ಮೇಲೆ ಕಾಲುಹಾಕಿಕೊಂಡು ನಮ್ಮನ್ನು ದುರ್ಬಲವಾಗಿ ಮಾಡಿವೆ. ಆ ಜೋಡಿಗಳನ್ನು ಕಿತ್ತೊಗೆಯಬೇಕು. ಹೇಗೆ? ಆ ಜೋಡಿಗಳ ಮೂಲವು ಪಾಪವು. ಪಾಪಕ್ಕೆ ವಿರೋಧಿ ಪುಣ್ಯವು. ಅದ್ದರಿಂದ ಪುಣ್ಯಕರ್ಮಗಳನ್ನು ಮಾಡಿ ಅದರ ವೇಗದಿಂದ ಪಾಪದ ಉಲ್ಬಣವನ್ನು ಹಿಮ್ಮೆಟ್ಟಿಸಬೇಕು. ಆಗ ಆ ಜೋಡಿಗಳು ತಮಗೆ ತಾವೇ ಬಾಲವನ್ನು ಮುದುರಿಕೊಂಡು ಬಂದ ಹಾದಿಯನ್ನು ಹಿಡಿಯುವವು. ಆಮೇಲೆ ಮನಸ್ಸು ದೇವರಕಡೆಗೆ ಎಡೆಬಿಡದೆ ಹರಿಯುವದಕ್ಕೆ ತಕ್ಕದ್ದಾಗುವದು. ದೇವರನ್ನು ಕಾಣುವದಕ್ಕೇನು ಮಾಡಬೇ

ಕೆಂಬ ವಿಚಾರದಲ್ಲಿ ಶ್ರೀ ರಾಮಕೃಷ್ಣ ಪರಮಹಂಸರು ಹೇಳಿರುವ ಒಂದೆರಡು ವಾಕ್ಯಗಳು ಇಲ್ಲಿ ಅನುಸಂಧಾನಕ್ಕೆ ಯೋಗ್ಯವಾಗಿವೆ.

(೧) ಒಂದು ಕೊಳದ ಅಂಚಿನ ಮೇಲೆ ನಿಂತು ನೀರನ್ನು ಕಾಣಬೇಕಾದರೆ ಕೊಳದ ಮಟ್ಟದ ಮೇಲೆ ಬೆಳದಿರುವ ಗಿಡಗಳನ್ನು ಕತ್ತರಿಸಿ ಹಾಕಬೇಕು. ಹಾಗೆಯೇ ಮಾಯೆಯೆಂಬ ಪರೆಯು ಕಣ್ಣನ್ನು ಮುಚ್ಚಿಕೊಂಡಿರುವಾಗ ದೇವರು ಕಾಣುವದಿಲ್ಲ. ಅವನನ್ನು ಕಾಣಬೇಕಾದರೆ ಆ ಪರೆಯನ್ನು ತೆಗೆದು ಹಾಕಬೇಕು.

(೨) ಮೇಘವು ಸೂರ್ಯನನ್ನು ಮರೆಮಾಡುವ ಹಾಗೆ ಮಾಯೆಯು ಪರಮಾತ್ಮನನ್ನು ಮರೆಮಾಡಿದೆ. ಮೇಘವು ಹೋದ ಮೇಲೆ ಸೂರ್ಯನು ಕಾಣುವಂತೆ ಮಾಯೆಯು ಹೋದ ಮೇಲೆ ದೇವರು ಕಾಣುತ್ತಾನೆ.

ಹೀಗೆ ದೇವರನ್ನು ಕಾಣುವದಕ್ಕೆ ಬರುವದರಿಂದ ದೇವರೇ ಇಲ್ಲವೆಂದು ಹೇಳಬಾರದು.

"ಅಸನ್ನೇವ ಸ ಭವತಿ ಅಸದ್ಬ್ರಹ್ಮೇತಿ ವೇದ ಚೇತ್ ।
ಅಸ್ತಿ ಬ್ರಹ್ಮೇತಿ ಚೇದ್ವೇದ ಸನ್ತಮೇನಂ ತತೋ ವಿದುಃ ॥"

ಎಂದು ತೈತ್ತಿರೀಯಶ್ರುತಿ ಇದೆ. ದೇವರಿಲ್ಲವೆಂದು ತಿಳಿದರೆ ಅವನೂ ಇಲ್ಲದವನೇ ಆಗುತ್ತಾನೆ. ದೇವರಿದ್ದಾನೆಂದು ತಿಳಿದರೆ ಇವನೊಬ್ಬನಿರುವನೆನಿಸಿಕೊಳ್ಳುತ್ತಾನೆ. ಆದ್ದರಿಂದ ದೇವರಿದ್ದಾನೆಂದು ತಿಳಿದು ದೇವರ ವಿಚಾರವನ್ನು ಮಾಡಿ ತಾನಿರುವದನ್ನು ಸಾರ್ಥಕಮಾಡಿಕೊಳ್ಳಬೇಕು.

# ಎರಡನೇ ಕಿರಣ.

# ಜಗತ್ತು.

## ಜಗತ್ತು ಎಂದು ಹುಟ್ಟಿತು ?

ಹಿಂದೆ "ದೇವರ ಕಲ್ಪನೆ ಏಕೆ ಬೇಕು ?" ಎಂಬ ವಿಚಾರವನ್ನು ಮಾಡಿದ ಕಡೆಯಲ್ಲಿ ಜಗತ್ತಿನ ವಿದ್ಯಮಾನದಿಂದ ಅದರ ಸೃಷ್ಟಿಸ್ಥಿತಿಲಯಗಳಿಗೆ ಕರ್ತನಾದ ಒಬ್ಬ ದೇವರನ್ನು ಕಲ್ಪಿಸಿಕೊಳ್ಳಬೇಕಾಗುವದೆಂದು ಹೇಳಿದ್ದಾಗಿದೆಯಷ್ಟೆ. ದೇವರೊಬ್ಬನಿದ್ದಾನೆಂದಿಟ್ಟುಕೊಳ್ಳೋಣ. ಅವನು ಈ ಜಗತ್ತನ್ನು ಎಂದು ಸೃಷ್ಟಿಮಾಡಿದನು? ಈ ಪ್ರಶ್ನೆಗೆ ನಮಗೆ ಪ್ರತ್ಯಕ್ಷಪ್ರಮಾಣದ ಉತ್ತರವಂತು ಶಕ್ಯವೇ ಇಲ್ಲ. ಏಕೆಂದರೆ ಪ್ರತಿಯೊಂದು ಪ್ರಾಣಿಗೂ ಅದರದರ ಇರುವಿಕೆಯು ಜಗತ್ತಿನ ಸೃಷ್ಟಿಯಾದ ಮೇಲೆಯೇ ಬಂದದ್ದಾಗಿರುವದರಿಂದ ದೇವರು ಜಗತ್ತನ್ನು ಎಂದು ಸೃಷ್ಟಿ ಮಾಡಿದನೆಂದು ಪ್ರತ್ಯಕ್ಷವಾಗಿ ಕಾಣುವದಕ್ಕೆ ಯಾರಿಗೂ ಸಾಧ್ಯವಿಲ್ಲ. ಆ ಉತ್ತರವು ನಮ್ಮ ಊಹೆಗೂ ನಿಲುಕುವಂತಿಲ್ಲ. ಆದ್ದರಿಂದ ಈ ವಿಷಯವನ್ನು ತಿಳಿಯುವದಕ್ಕೆ ನಾವು ಶಬ್ದಪ್ರಮಾಣಕ್ಕೇ ಶರಣುಹೋಗಬೇಕು ಅಂದರೆ ವೇದದಿಂದ ನಿಶ್ಚಯಿಸುವದಕ್ಕೆ ಯತ್ನಿಸಬೇಕು. ವೇದದಲ್ಲಿ ಹುಡುಕಿದರೆ ದೇವರು ಸೃಷ್ಟಿಯನ್ನು ಮಾಡುವಾಗಲೆಲ್ಲ "ಯಥಾಪೂರ್ವಮಕಲ್ಪಯತ್" ಎಂದು ಹೇಳಿದೆ. ಅಂದರೆ ಹಿಂದೆ ಸೃಷ್ಟಿಮಾಡಿದಂತೆಯೇ ಮಾಡಿದನೆಂದು ತಾತ್ಪರ್ಯ. ಹಿಂದಿನ ಸೃಷ್ಟಿ ಹೇಗಾಯಿತು! ಅದರ ಹಿಂದಿನದರಂತೆ. ಹೀಗೆ ಹೇಳುವದನ್ನು ನೋಡಿದರೆ ಎಷ್ಟೋ ಕಾಲದಿಂದ ಸೃಷ್ಟಿಗಳು ಆಗುತ್ತ ಹೋಗುತ್ತ ಇರುವವೆಂದು ಹೇಳಬೇಕಾಗುವದು. ಜೋತಿಶ್ಶಾಸ್ತ್ರವಿಶಾರದರು ಭೂಗೋಳಖಗೋಳಗಳ ಗತಿವಿಶೇಷದಿಂದ ಊಹಿಸಿ ಹೇಗೋ ಈ ಸೃಷ್ಟಿಯಾದ ಕಾಲವನ್ನು ಗೊತ್ತು ಮಾಡಿಕೊಂಡಿರುವರು. ಈ ಸೃಷ್ಟಿಯೆಂಬುವದು ಒಂದೇ ಸಮುದ್ರದ ಅಂಚಿನ ಕಡೆಯ ಅಲೆಯಂತೆ ಇದ್ದು ಮೇಲೆ ಮೊದಲನೇ ಸೃಷ್ಟಿಯೆಂಬ ಮೂಲತರಂಗವನ್ನು ಕಂಡು ಹಿಡಿಯ ಹೋದರೆ ಸೃಷ್ಟಿಪ್ರವಾಹವು ಅನಾದಿಯಾಗುವದೆಂದು

ಶಾಸ್ತ್ರವು ಆ ಮಾತನ್ನು ಮುಗಿಸುವದು. ಆದ್ದರಿಂದ ದೇವರು ಈ ಸೃಷ್ಟಿಯು ಕಾರ್ಯವನ್ನು ಎಂದಿನಿಂದ ಕೈಗೊಂಡನೆಂಬ ಮಾತಿಗೆ ನಾವು ಸಮರ್ಪಕ ವಾದ ಉತ್ತರವನ್ನು ಕೊಡುವದು ಸಾಧ್ಯವಿಲ್ಲ.

ಈಪ್ರಶ್ನೆಯೇ ಪ್ರಯೋಜನಕರವಲ್ಲವೆಂದೂ ತೋರುತ್ತದೆ. ಹೇಗೆಂದರೆ– ಒಬ್ಬನು ಒಂದು ರೋಗದಿಂದ ನರಳುತ್ತಿರುತ್ತಾನೆ. ಅವನು ತನ್ನ ರೋಗದ ಬಾಧೆಯನ್ನು ಕಳೆದುಕೊಳ್ಳಬೇಕಾದರೆ ಅದು ಎಂದು ಹುಟ್ಟಿತೆಂಬುದನ್ನು ತಿಳಿಯು ಬೇಕಾದಗತ್ಯವೇನು? ಎಂದಾದರೂ ಹುಟ್ಟಿರಲಿ. ರೋಗದ ವ್ಯಥೆಯು ಹೋಗುವಂತೆ ಔಷಧವನ್ನು ತೆಗೆದುಕೊಂಡರೆ ಸರಿ. ಹಾಗೆಯೇ ನಾವು ಈ ಜಗತ್ತಿನಲ್ಲಿ ಜನ್ಮವೆತ್ತಿದ್ದಾಗಿದೆ. ಇದರಲ್ಲಿ ಒಂದರ ಹಿಂದೊಂದು ದುಃಖಗಳು ನಮ್ಮನ್ನು ಹೆದರಿಸುತ್ತವೆ. ಅವುಗಳ ಭಯವನ್ನು ನಾವು ಕಳೆದುಕೊಳ್ಳಬೇಕಾದರೆ ಜಗತ್ತು ಎಂದು ಹುಟ್ಟಿತೆಂಬುದನ್ನು ತಿಳಿಯು ಬೇಕಾದಗತ್ಯವೇನು? ಎಂದಾದರೂ ಹುಟ್ಟಿರಲಿ. ಆದರಿಂದ ನಮಗೆ ದುಃಖವಾಗದಂತೆ ಮಾಡಿಕೊಳ್ಳುವ ಯತ್ನವನ್ನು ಮಾಡಿದರೆ ಸರಿ. ಈ ಜಗತ್ತಿನ ಅನಾದಿತ್ವವನ್ನೇ ಭಗವದ್ಗೀತೆಯೂ

"ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ।
ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ॥"

ಎಂಬ ಶ್ಲೋಕದಿಂದ ಅನುವಾದಮಾಡುತ್ತದೆ. ಇದರ ತಾತ್ಪರ್ಯವೇನೆಂದರೆ– ಜಗತ್ತಿನ ಸೃಷ್ಟಿಗೆ ಪೂರ್ವದಲ್ಲಿ ದೇವರು ಒಬ್ಬನೇ ಒಬ್ಬನಾಗಿ ಅವ್ಯಕ್ತಸ್ವರೂಪದಲ್ಲಿರುತ್ತಾನೆ. ಅವನಿಗೆ ಹಗಲಾಗುತ್ತಲೇ ಈ ವ್ಯಕ್ತಪ್ರಪಂಚವೆಲ್ಲಾ ಹುಟ್ಟುತ್ತದೆ; ಇರುಳಾಗುತ್ತಲೇ ಆ ಅವ್ಯಕ್ತಸ್ವರೂಪದಲ್ಲಿಯೇ ಅದು ಅಡಗಿ ಹೋಗುತ್ತದೆ. ಈ ಹಗಲಿರುಳುಗಳನ್ನು ನಮ್ಮ ಹಗಲಿರುಳುಗಳೆಂದು ತಿಳಿಯಬಾರದು. ಅವು ದೇವರ ಹಗಲಿರುಳುಗಳು. ನಮ್ಮ ಹಗಲಿರುಳುಗಳಿಗಿಂತ ಅವುಗಳ ಪ್ರಮಾಣವು ಬಹು ದೊಡ್ಡದಿರುವದು. ಈ ಕಾಲಪ್ರಮಾಣದ ವಿಚಾರಕ್ಕಾಗಿ ಗೀತೆಯಲ್ಲಿ

"ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ।
ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ॥"

ಎಂಬ ಒಂದು ಶ್ಲೋಕವುಂಟು. ಹಗಲಿರುಳುಗಳ ಪ್ರಮಾಣವನ್ನು ಬಲ್ಲ

ವರು ಬ್ರಹ್ಮನ ಹಗಲೂ ಇರುಳೂ ಪ್ರತಿಯೊಂದೂ ನಮ್ಮ ಸಹಸ್ರಯುಗಗಳ ಪ್ರಮಾಣವುಳ್ಳದ್ದೆಂದು ತಿಳಿಯುವರೆಂದು ಅದರ ತಾತ್ಪರ್ಯ. ಈ ಕಾಲಮಾನದ ವಿಚಾರವನ್ನು ಲೋಕಮಾನ್ಯ ಬಾಲಗಂಗಾಧರ ತಿಲಕರು ತಮ್ಮ ಗೀತಾರಹಸ್ಯದ ಎಂಟನೇ ಪ್ರಕರಣದಲ್ಲಿ ತೆಗೆದುಕೊಂಡು ಬ್ರಹ್ಮದೇವರ ಒಂದು ದಿವಸವೆಂದರೆ ಮನುಷ್ಯನ ನಾಲ್ಕು ಅಬ್ಜ ಮುವತ್ತೆರಡು ಕೋಟಿ ವರ್ಷಗಳಾಗುವವೆಂದು ಗೊತ್ತು ಹಚ್ಚಿದ್ದಾರೆ. ಒಂದು ಸೃಷ್ಟಿಯು ಆಗುಹೋಗುಗಳು ಇಷ್ಟು ದೀರ್ಘಕಾಲವನ್ನಾಕ್ರಮಿಸಿಕೊಂಡಂತಾಯಿತು. ಇಂಥ ಒಂದು ಸೃಷ್ಟಿಯು ಆದಿಯನ್ನು ತಿಳಿಯುವದೇ ನಮಗೆ ದಕ್ಕುವ ಮಾತಲ್ಲವಾಗಿರುವಾಗ ಮೊದಲನೆಯ ಸೃಷ್ಟಿಯ ಮಾತಂತು ಎಷ್ಟೋ ದೂರವಾಯಿತು.

## ದೇವರೊಬ್ಬನೇ ಜಗತ್ತನ್ನು ಹೇಗೆ ಮಾಡಿದನು?

ಇರಲಿ. ಸೃಷ್ಟಿಯ ವಿಷಯದಲ್ಲಿ ಇನ್ನೊಂದಾಶ್ಚರ್ಯವಿದೆ. ಅದೇನೆಂದರೆ-- ಲೋಕದಲ್ಲಿ ಒಂದು ವಸ್ತುವನ್ನು ನಿರ್ಮಿಸುವವರೆಲ್ಲಾ ಕೆಲವು ಉಪಕರಣಗಳ ಸಹಾಯದಿಂದ ತಮ್ಮ ಕಾರ್ಯವನ್ನು ಸೃಷ್ಟಿಸುತ್ತಾರೆ. ಸೃಷ್ಟಿಗೆ ಪೂರ್ವದಲ್ಲಿ ದೇವರೊಬ್ಬನೇ ಇದ್ದನೆಂದು ಒಪ್ಪುವದಾದರೆ ಅವನು ಈ ವಿಚಿತ್ರಸೃಷ್ಟಿಯನ್ನು ಮಾಡುವದಕ್ಕೆ ಹೇಗೆ ಸಾಧ್ಯವಾಗುತ್ತದೆ ? ಇದು ನಿಜವಾಗಿ ಆಶ್ಚರ್ಯಕರವಾದದ್ದೆ. ಸೃಷ್ಟಿಯ ವಿಚಾರಕ್ಕೆ ಇದು ಹೀಗೆಯೇ ಸರಿಯೆಂದು ಯಾರೂ ಎದೆಯನ್ನುಬ್ಬಿಸಿಕೊಂಡು ಹೇಳುವದಕ್ಕೆ ಬರುವ ಹಾಗಿಲ್ಲ. ಅಸಹಾಯನಾದ ದೇವರೊಬ್ಬನೇ ಇದನ್ನು ಮಾಡಿದನೆಂಬುದು ಅವನ ಶಕ್ತಿಯ ವಿಶೇಷವನ್ನು ತೋರಿಸುತ್ತದೆ. ಮುಂಡಕಶ್ರುತಿಯಲ್ಲಿ

"ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ। ಯಥಾ ಸತಃ ಪುರುಷಾತ್ಕೇಶಲೋಮಾನಿ ತಥಾಕ್ಷರಾತ್ಸಂಭವತೀಹ ವಿಶ್ವಮ್ ॥"

ಎಂದು ವಾಕ್ಯವಿದೆ. ಜಾಡರ ಹುಳವು ದಾರವನ್ನು ಹೊರಗೆಡಹಿ ಒಳಕ್ಕೆಳೆದುಕೊಳ್ಳುವಂತೆಯೂ ಭೂಮಿಯಲ್ಲಿ ಸಸಿಗಳು ಹೊರಬೀಳುವಂತೆಯೂ ಪ್ರಾಣಿಯ ದೇಹದಲ್ಲಿ ಕೂದಲು ಹುಟ್ಟುವಂತೆಯೂ ಈ ಜಗತ್ತು ಇತರಸಹಾಯವಿಲ್ಲದೆ ದೇವರಿಂದಲೇ ಹುಟ್ಟುವದೆಂದರ್ಥ. ಇದಲ್ಲದೆ

ಜಗತ್ತೆಂಬುದು ದೇವರೆಂಬ ಸಮುದ್ರದ ತೆರೆಯೆಂದು ಕೆಲವು ಕಡೆ ಇದೆ. ಜಗತ್ತೆಂಬುದು ದೇವರೆಂಬ ಪ್ರವಾಹದ ಸೊರೆಯೆಂದು ಶ್ರೀರಾಮ ಕೃಷ್ಣ ಪರಮಹಂಸರು ಹೇಳಿರುತ್ತಾರೆ. ನಿತ್ಯಶುದ್ಧನಾದ ದೇವರಿಂದ ಅಶುದ್ಧಿಮಿಶ್ರವಾದ ಜಗತ್ತು ಹೇಗೆ ಸೃಷ್ಟಿಯಾಗಿರಬೇಕೆಂಬ ಸಂಶಯವುಳ್ಳವರಿಗೆ ಶ್ರೀರಾಮಕೃಷ್ಣಪರಮಹಂಸರ ಕಲ್ಪನೆಯು ಒಳ್ಳೇ ಸಮಾಧಾನಕರವಾಗಿದೆ. ದೇವರು ಜಗತ್ತನ್ನು ಸೃಷ್ಟಿಮಾಡಬೇಕೆಂಬ ವಿಚಾರವನ್ನು ತಂದುಕೊಳ್ಳುತ್ತಲೇ ಜಗತ್ತು ಮುಂದೆ ನಿಂತಿತೆಂಬ ಅಭಿಪ್ರಾಯವೇ ಶ್ರುತಿಯ ತಾತ್ಪರ್ಯವಾಗಿ ಕಾಣ ಬರುತ್ತದೆ. ಈ ವಿಷಯದಲ್ಲಿ ವೀರಶೈವವಚನಶಾಸ್ತ್ರಕಾರರು ಹೇಳಿರುವದೇನೆಂದರೆ—

(೧) “ತನ್ನ ವಿನೋದಕ್ಕೆ ತಾನೇ ಸೃಷ್ಟಿಸಿದ ಸಕಲಪ್ರಪಂಚನು. ತನ್ನ ವಿನೋದಕ್ಕೆ ತಾನೇ ಹಿರಿಗಿಸಿದ ಅನಂತದುಃಖಂಗಳಲ್ಲಿ. ಇಂತಿನ್ನ ಚನ್ನಮಲ್ಲಿಕಾರ್ಜುನನೆಂಬ ಪರಶಿವನು ಜಗದ್ವಿಲಾಸ ನಾಕಾಡಡೆ ಮತ್ತೆ ಪರಿವನಾ ಮಾಯಾಪಾಶವನು.”

(೨) “ಧರಣಿಯ ಮೇಲೆ ಧರೆಯ ಕರಗದಂತಿರಿಸಿದೆ. ಅಂಬರಕ್ಕೆ ಗದ್ದುಗೆ ಬೋದುಗೆ ಇಲ್ಲದಂತಿರಿಸಿದೆ. ಎಲೆ ಮೃಡನೆ, ನೀನಲ್ಲದೆ ಉಳಿದ ದೈವಂಗಳಿಗಹುದೇ ರಾಮನಾಥಾ.”

## ಸೃಷ್ಟಿಕ್ರಮ.

ಒಳ್ಳೇದು; ದೇವರು ಮತ್ತೊಂದರ ಸಹಾಯವಿಲ್ಲದೆ ಜಗತ್ತನ್ನು ಮಾಡಿದನೆಂದೇ ಒಪ್ಪಿಕೊಳ್ಳೋಣ. ಏಕೆಂದರೆ ನಮ್ಮಂತೆ ಕೆಲವು ವಸ್ತುಗಳ ಸಹಾಯದಿಂದ ಈ ಜಗತ್ತನ್ನು ಮಾಡಿದ್ದರೆ ನಮಗೂ ಅವನಿಗೂ ಭೇದವೇ ಇರುತ್ತಿರಲಿಲ್ಲ. ಇಷ್ಟು ದೊಡ್ಡ ಜಗತ್ತನ್ನು ಮಾಡಬಲ್ಲವನು ಅದನ್ನು ಅಸಹಾಯನಾಗಿಯೇ ಏಕೆ ಮಾಡಿರಬಾರದು? ಹಾಗೆಯೇ ಮಾಡಿರಲಿ. ಆದರೆ ಯಾವ ಕ್ರಮವನ್ನು ಹಿಡಿದು ಜಗತ್ತನ್ನು ಮಾಡಿದನು? ಇದೂ ಕಠಿನವಿಷಯವೇ ಸರಿ “ಭೌತಿಕ ಶಾಸ್ತ್ರಜ್ಞರು ಶರೀರರಚನೆಯಲ್ಲಿ ಹೆಚ್ಚುಹೆಚ್ಚು ನ್ಯೂನತೆ ಇರುವ ಪ್ರಾಣಿಗಳೆಲ್ಲಾ ಮೊದಮೊದಲು ಸೃಷ್ಟಿಯಾದವುಗಳೆಂದೂ ಹೆಚ್ಚುಹೆಚ್ಚು ಪೂರ್ಣತೆ ಕಾಣುವಂಥ ಪ್ರಾಣಿಗಳೆಲ್ಲಾ ಆ ಮೇಲಿಮೇಲೆ ಸೃಷ್ಟಿಯಾದವುಗಳೆಂದೂ ಅಭಿಪ್ರಾಯಪಡುತ್ತಾರೆ. ಜಗತ್ತು ಇದರಂತೆ ಆಗಿರ

ಬೇಕಾಗಿದ್ದರೆ ಸೃಷ್ಟಿಗೊಂದು ಕ್ರಮವಿರಲೇಬೇಕು. ಆ ಕ್ರಮವೇನು ?” ಎಂದು ವಿಚಾರಮಾಡಿದರೆ ಇದೂ ನಮ್ಮ ಬುದ್ಧಿಗೆ ನಿಲುಕದ ಮಾತೇ. ಸೃಷ್ಟಿಯೊಳಗೇ ಒಂದು ಪರಮಾಣುವಾಗಿರುವ ನಾವು ಸೃಷ್ಟಿಯ ಕ್ರಮವನ್ನು ಊಹಿಸುವದು ಹೇಗೆ ಸಾಧ್ಯವಾದೀತು? ಅದ್ದರಿಂದ ಸೃಷ್ಟಿಕ್ರಮವನ್ನು ತಿಳಿಯುವದಕ್ಕೆ ನಾವು ಶ್ರುತಿಯ ಮುಂದೆಯೇ ಸೆರಗೊಡ್ಡಬೇಕು. ತೈತ್ತಿರೀಯಶ್ರುತಿಯನ್ನು ನೋಡಿದರೆ

“ ಆತ್ಮನ ಆಕಾಶಸ್ಸಂಭೂತಃ ಆಕಾಶಾದ್ವಾಯುಃ ”

ಎಂದು ಮೊದಲಾಗಿದೆ. ದೇವರು ಮೊದಲು ಆಕಾಶವನ್ನೂ ಆ ಮೇಲೆ ಕ್ರಮವಾಗಿ ವಾಯು, ಅಗ್ನಿ, ನೀರು, ಭೂಮಿ—ಇವುಗಳನ್ನೂ ಸೃಷ್ಟಿಸಿದನೆಂದು ಇದರ ತಾತ್ಪರ್ಯ. ಈ ಕ್ರಮವೇ ವಿಶೇಷವಾಗಿ ಭೌತಿಕಬುದ್ಧಿಗೆ ಸಯುಕ್ತಿಕವಾಗಿ ಕಾಣುವದು. ಏಕೆಂದರೆ ಆಕಾಶದಲ್ಲಿ ಶಬ್ದವೆಂಬ ಒಂದೇ ಗುಣವಿದೆ ಅದ್ದರಿಂದ ಇದೇ ಮೊದಲು ಹುಟ್ಟಿರಬೇಕು. ಆಕಾಶದಿಂದ ವಾಯು ಹುಟ್ಟಿರಬಹುದು. ಏಕೆಂದರೆ ವಾಯುವಿನಲ್ಲಿ ಆಕಾಶದ ಶಬ್ದಗುಣವೂ ಇದೆ; ಅದರ ಜೊತೆಗೆ ತನ್ನದೊಂದು ಸ್ಪರ್ಶಗುಣವೂ ಇದೆ. ವಾಯುವಿನಿಂದ ಅಗ್ನಿ ಹುಟ್ಟಿರಬಹುದು. ಏಕೆಂದರೆ ಅಗ್ನಿಯಲ್ಲಿ ವಾಯುವಿನ ಶಬ್ದಸ್ಪರ್ಶಗುಣಗಳೂ ಇವೆ. ಅವುಗಳ ಜೊತೆಗೆ ತನ್ನದೊಂದು ರೂಪಗುಣವೂ ಇದೆ. ಅಗ್ನಿಯಿಂದ ನೀರು ಹುಟ್ಟಿರಬಹುದು. ಏಕೆಂದರೆ ನೀರಿನಲ್ಲಿ ಅಗ್ನಿಯ ಶಬ್ದಸ್ಪರ್ಶರೂಪಗುಣಗಳೂ ಇವೆ; ಅವುಗಳ ಜೊತೆಗೆ ತನ್ನದೊಂದು ರಸಗುಣವೂ ಇದೆ. ನೀರಿನಿಂದ ಭೂಮಿ ಹುಟ್ಟಿರಬಹುದು. ಏಕೆಂದರೆ ಭೂಮಿಯಲ್ಲಿ ನೀರಿನ ಶಬ್ದಸ್ಪರ್ಶರೂಪರಸಗುಣಗಳೂ ಇವೆ; ಅವುಗಳ ಜೊತೆಗೆ ತನ್ನದೊಂದು ಗಂಧಗುಣವೂ ಇದೆ. ಹೀಗೆ ಸೂಕ್ಷ್ಮವಾದ ಪಂಚಭೂತಗಳು ಮೊದಲು ಹುಟ್ಟಿದವೆಂದೂ ಆ ಮೇಲೆ ಅವುಗಳ ಮಿಶ್ರಣವಿಶೇಷದಿಂದ ಬಗೆಬಗೆಯಾದ ಜಗತ್ತಾಯಿತೆಂದೂ ಹೇಳುವದು ಬುದ್ಧಿಗೊಂದುಬಗೆಯಲ್ಲಿ ಸಮಾಧಾನವನ್ನುಂಟುಮಾಡುತ್ತದೆ. ಇದರಿಂದ ದೇವರ ಮಹತ್ವವೂ ವ್ಯಕ್ತವಾಗುವದು. ಹೇಗೆಂದರೆ-ನಾವು ಭೂಮಿಯೆಂದರೆ ನಮ್ಮ ಮನಸ್ಸು ಹಿಡಿಸಲಾರದಷ್ಟು ದೊಡ್ಡದೆಂದು ತಿಳಿದುಕೊಂಡಿರುತ್ತೇವಷ್ಟೆ. ಈ ಭೂಮಿಯ ಮಾತ್ರಸ್ಥ

ನವು ನೀರೆಂದ ಮೇಲೆ ನೀರು ಭೂಮಿಗಿಂತ ದೊಡ್ಡದಾಗಿರಬೇಕು. ನೀರಿನ ಮಾತೃಸ್ಥಾನವು ಅಗ್ನಿಯೆಂದ ಮೇಲೆ ಅಗ್ನಿಯು ನೀರಿಗಿಂತ ದೊಡ್ಡದಾಗಿರಬೇಕು. ಹಾಗೆಯೇ ಅಗ್ನಿಗಿಂತ ವಾಯುವೂ ವಾಯುವಿಗಿಂತ ಆಕಾಶವೂ ದೊಡ್ಡವುಗಳಾಗಿರಬೇಕು. ಆ ಆಕಾಶದ ಮಾತೃಸ್ಥಾನವು ದೇವರೆಂದ ಮೇಲೆ ದೇವರು ಆಕಾಶಕ್ಕಿಂತ ದೊಡ್ಡವನೆಂದಾಗಿ

"ಪಾದೋಽಸ್ಯ ಸರ್ವಾ ಭೂತಾನಿ"

ಎಂಬ ಶ್ರುತಿಯಂತೆ ಮತ್ತು

"ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್"

ಎಂಬ ಸ್ಮೃತಿಯಂತೆ ಜಗತ್ತೆಲ್ಲಾ ದೇವರ ಒಂದಂಶವೆಂಬ ತಿಳಿವು ಬರುವದಕ್ಕೆ ಸಾಧಕವಾಗುವದು.

## ಹಸಿವುಬಾಯಾರಿಕೆಗಳ ಸೃಷ್ಟಿ.

ಸೃಷ್ಟಿಯ ದೃಷ್ಟಿಯಿಂದ ನೋಡಿದರೆ ದೇವರು ದೊಡ್ಡವನೇ ಸರಿ. ಆದರೆ ಬಹುಮಟ್ಟಿಗೆ ಸೃಷ್ಟಿಯು ಸುಖಸ್ವರೂಪವೆಂಬುದೆಲ್ಲಾ ಪ್ರಾಣಿಗಳಿಗೆ ಹಸಿವುಬಾಯಾರಿಕೆಗಳ ತ್ರಾಸವಿಲ್ಲದಿರುವಾಗಲೇ ಸರಿ. ಹಸಿವುಬಾಯಾರಿಕೆಗಳು ತಲೇಹಾಕಿದವೆಂದರೆ ಸೃಷ್ಟಿಗೆ ಸೃಷ್ಟಿಯೇ ದುಃಖಸ್ವರೂಪವನ್ನು ತಾಳಿದಂತೆ ಆಗುವದು. ಈ ರೀತಿಯಲ್ಲಿ ಸೃಷ್ಟಿಯೇ ಒಂದು ತೂಕವಾದರೆ ಹಸಿವುಬಾಯಾರಿಕೆಗಳೇ ಒಂದು ತೂಕವಾಗಿರುವವು. ಅಷ್ಟೇ ಅಲ್ಲ; ಹಸಿವುಬಾಯಾರಿಕೆಗಳೇ ಉಳಿದ ಸೃಷ್ಟಿಗಿಂತ ಮೇಲುಗಯ್ಯಾಗಿರುವವು. ಇದರ ಗುಟ್ಟು ವಿಲಕ್ಷಣವಾಗಿರುವದು. ದೇವರು ಹಸಿವುಬಾಯಾರಿಕೆಗಳನ್ನು ಸೃಷ್ಟಿಮಾಡದಿದ್ದರೆ ಈ ಜಗತ್ತಿನಲ್ಲಿ ಬಹುಮಟ್ಟಿಗೆ ಒಬ್ಬರ ಹಂಗು ಇನ್ನೊಬ್ಬರಿಗೆ ಇರುತ್ತಿರಲಿಲ್ಲ ಮತ್ತು ಯಾರೂ ಯಾವ ಕಷ್ಟಕ್ಕೂ ಮೆಯ್ಯೊಡ್ಡಬೇಕಾಗ್ತಿರುತ್ತಿರಲಿಲ್ಲ. ಈಗ ಪ್ರಾಣಿಗಳಿಗಿರುವ ದುಡಿತವೆಲ್ಲಾ ಹಸಿವುಬಾಯಾರಿಕೆಗಳ ತೃಪ್ತಿಗಾಗಿಯೇ. ಹಸಿವುಬಾಯಾರಿಕೆಗಳ ಕೈ ಇಷ್ಟೇಕೆ ಮೇಲಾಯಿತೆಂಬುದನ್ನು ಐತರೇಯಶ್ರುತಿಯು ಹೇಳುತ್ತದೆ. ದೇವರು ಮೊದಲು ಸ್ಥೂಲದೇಹವನ್ನು ಸೃಷ್ಟಿಮಾಡಿ ಅದರಲ್ಲಿ ಕಣ್ಣು, ಕಿವಿ, ಮೊದಲಾದ ಇಂದ್ರಿಯಗಳಿಗೆಲ್ಲಾ ಸ್ಥಾನಗಳನ್ನು ಕಲ್ಪನೆಮಾಡಿದನು. ಆ ಮೇಲೆ ದೇವತೆಗಳನ್ನು ಕರೆದು ಆ ಇಂದ್ರಿಯ

ಸ್ಥಾನಗಳಲ್ಲಿ ಪ್ರವೇಶಿಸಿರೆಂದು ಹೇಳಿದನು. ಅಗ್ನಿಯು ವಾಗ್ರೂಪನಾಗಿ ಮುಖವನ್ನು ಹೊಕ್ಕನು. ವಾಯುವು ಪ್ರಾಣರೂಪನಾಗಿ ಮೂಗನ್ನು ಸೇರಿದನು. ಆದಿತ್ಯನು ದೃಷ್ಟಿಯಾಗಿ ಕಣ್ಣನ್ನು ಪ್ರವೇಶಿಸಿದನು ದಿಗ್ದೇವತೆಯು ಶ್ರೋತ್ರಶಕ್ತಿಯಾಗಿ ಕಿವಿಗಳನ್ನೈದಿತು. ಓಷಧಿವನಸ್ಪತಿಗಳು ಕೂದಲುಗಳಾಗಿ ಚರ್ಮದೊಳಗೆ ತೂರಿದವು. ಚಂದ್ರನು ಮನೋರೂಪನಾಗಿ ಹೃದಯವನ್ನು ಮನೆಮಾಡಿಕೊಂಡನು. ಹೀಗೆ ದೇವತೆಗಳೆಲ್ಲಾ ತಮತಮಗೆ ಅನುರೂಪವಾದ ಸ್ಥಾನಗಳನ್ನು ಆರಿಸಿಕೊಂಡ ಮೇಲೆ ಹಸಿವುಬಾಯಾರಿಕೆಗಳು ತಮ್ಮ ಸ್ಥಲವಾವುದೆಂದು ಹುಡುಕಿಕೊಂಡು ದೇವರ ಬಳಿಗೆ ಬಂದವು. ಅವುಗಳಿಗಾಗಿ ಬೇರೆ ಸ್ಥಾನವಿರಲಿಲ್ಲ. ಆದ್ದರಿಂದ ನೀವು ಎಲ್ಲಾ ದೇವತೆಗಳಲ್ಲಿಯೂ ವ್ಯಾಪಿಸಿಕೊಂಡಿರಬಹುದೆಂದು ದೇವರು ಅವುಗಳಿಗೆ ಹೇಳಿದನು. ಅವು ಅದರಂತೆ ಮಾಡಿದವು. ಈ ಕಾರಣದಿಂದ ಯಾವ ದೇವತೆಗಾಗಿ ನಾವು ಹವಿಸ್ಸನ್ನು ಕೊಟ್ಟರೂ ಹಸಿವುಬಾಯಾರಿಕೆಗಳಿಗೆ ಅವುಗಳ ಭಾಗವು ಮುಟ್ಟುವದು. ಅನ್ನನೀರಿನಿಂದಾಗಬೇಕಾದ ತೃಪ್ತಿಯು ನಿಜವಾಗಿ ಅವು ಹೊಟ್ಟೆಗೆ ಹೋದ ಮೇಲೆಯೇ ಆಗುವದಾದರೂ ಅವುಗಳನ್ನು ಕಣ್ಣುಗಳಿಗೆ ತೋರಿಸಿದಾಗ, ಕಿವಿಗಳಿಗೆ ಕೇಳಿಸಿದಾಗ ಮತ್ತು ಯಾವ ಜ್ಞಾನೇಂದ್ರಿಯಕ್ಕೆ ವಿಷಯವಾಗಿ ಮಾಡಿದರೂ ಅದರಿಂದ ಅಷ್ಟಿಷ್ಟು ತೃಪ್ತಿಯಾದರೂ ಆಗಿಯೇ ಆಗುತ್ತದೆ. ಏಕೆಂದರೆ ಅಶನಾಪಿಪಾಸೆಗಳು ಅನ್ನಕೋಶವನ್ನೇ ಅವಲಂಬಿಸಿಕೊಂಡಿಲ್ಲ. ಅವು ಎಲ್ಲಾ ಇಂದ್ರಿಯಗಳಲ್ಲಿಯೂ ಅವರಿಸಿಕೊಂಡಿವೆ. ಇದೇ ಕಾರಣದಿಂದಲೇ ಅಶನಾಪಿಪಾಸೆಗಳ ತೃಪ್ತಿಯಾಗದೆ ಹೋದರೆ ಎಲ್ಲಾ ಇಂದ್ರಿಯಗಳೂ ಸೊರಗುತ್ತವೆ. ಆದ್ದರಿಂದ ಅಶನಾಪಿಪಾಸೆಗಳಿಗೆ ಇಷ್ಟು ಪ್ರಾಶಸ್ತ್ಯ.

## ಸೃಷ್ಟಿಯ ಉದ್ದೇಶ

ಇಷ್ಟೆಲ್ಲಾ ವಿಚಾರಮಾಡಿದ ಮೇಲೆ ದೇವರು ಯಾವ ಉದ್ದೇಶದಿಂದ ಈ ಸೃಷ್ಟಿಯನ್ನು ಮಾಡಿದನೆಂಬ ಪ್ರಶ್ನೆಯು ಮುಂದೆ ಬರುತ್ತದೆ. ದೇವರು ನಿತ್ಯತೃಪ್ತನೆಂದು ವೇದಗಳೆಲ್ಲಾ ಹೇಳುವವು. ಅಂಥ ನಿತ್ಯತೃಪ್ತನಿಗೆ ಈ ಜಗತ್ತಿನಿಂದಾಗಬೇಕಾದ್ದೇನು ? ಮನಸ್ಸಿಗೆ ಸಮಾಧಾನ

ವಾಗುವಂತೆ ಏನಾದರೊಂದು ಉತ್ತರವನ್ನು ಹೇಳಬೇಕಾದರೆ “ಲೀಲೆಗಾಗಿ” ಎಂದು ಹೇಳಬಹುದು. ವೀರಶೈವರ ವಚನಶಾಸ್ತ್ರವೂ ಇದೇ ಅಭಿಪ್ರಾಯವನ್ನು ಹೇಳುವದು

“ಮರದೊಳಗಣ ಪತ್ರಫಲಂಗಳು ಮರಕಾಲವಶದಲ್ಲಿ ತೋರುವಂತೆ, ಹರನೊಳಗಣ ಪ್ರಕೃತಿ ಸ್ವಭಾವಂಗಳು ಪರಭಾವದಿಚ್ಛೆಗೆ ತೋರುವವು. ಲೀಲೆ ಯಾದಡೆ ಉಮಾಪತಿ, ಲೀಲೆ ತಪ್ಪಿದಡೆ ಸ್ವಯಂಭು ಗುಹೇಶ್ವರಾ.”

ಜಗತ್ತಿನಲ್ಲಿ ವ್ಯವಹಾರವನ್ನು ಮಾಡುವ ಮನುಷ್ಯನು ಜಗತ್ತನ್ನು ಹೇಗೆ ತಿಳಿದುಕೊಂಡಿರಬೇಕೆಂದು ಶ್ರೀಪುರಂದರದಾಸರು ಹೇಳಿರುವ ಪದವೂ ಇದೇ ಅಭಿಪ್ರಾಯಕ್ಕೆ ಉತ್ತೇಜಕವಾಗಿದೆ.

ರಾಗ— ಮುಖಾರಿ; ತಾಳ— ಅಟತಾಳ

ಹೀಂಗಿರ ಬೇಕಲ್ಲ ಸಂಸಾರದಲ್ಲಿ
ಹೀಂಗೇ ಇರುವದು ಪ್ರಾಚೀನದಲ್ಲಿ ॥ ಪ ॥
ಮಕ್ಕಳಾಟ ಮನೆ ಕಟ್ಟಿದಂತೆ ।
ಆಟಸಾಕೆಂದು ಅಳಿಸಿ ಪೋದಂತೆ ॥ ೧ ॥

ಇನ್ನು ಲೀಲಾರ್ಥವಾಗಿ ಮಾಡಿಕೊಳ್ಳುವ ವಸ್ತುಗಳೆಲ್ಲಾ ಸಾಮಾನ್ಯವಾಗಿ ಆಶ್ಚರ್ಯಕರಗಳಾಗಿರುತ್ತವೆ. ದೇವರು ಮಾಡಿಕೊಂಡಿರುವ ಜಗತ್ತೂ ಆಶ್ಚರ್ಯಕರವಾಗಿಯೇ ಇದೆ. ಅದು ಹೇಗೆಂಬದನ್ನು ವಚನಶಾಸ್ತ್ರದಲ್ಲಿ ನೋಡಿರಿ.

“ಮರದೊಳಗಣ ಮಂದಾಗ್ನಿಯ ಉರಿಯದಿರಿಸಿದೆ. ನೊರೆವಾಲೊಳಗೆ ತುಪ್ಪದ ಕಂಪಿಲ್ಲದಂತಿರಿಸಿದೆ. ಶರೀರದೊಳಗಾತ್ಮನ ಕಾಣದಂತಿರಿಸಿದೆ. ನೀ ಬೆರಿಸುವ ಭೇದಕ್ಕೆ ಬೆರಗಾದೆನ್ನೈ ರಾಮನಾಥಾ.”

ಹೀಗೆ ಮರೆಮಾಡಿಟ್ಟ ಕಾರಣವೇನೆಂದರೆ ಹೀಗೆ ಮಾಡಿರದಿದ್ದರೆ ಅದು ಲೀಲೆಯೇ ಆಗುತ್ತಿರಲಿಲ್ಲ. ಈ ಅಭಿಪ್ರಾಯವನ್ನು ಮನಗಾಣಿಸುವದಕ್ಕೆ ಇಲ್ಲಿ ಒಂದು ಕಥೆಯನ್ನು ಉದಾಹರಿಸಬಹುದು. ಒಬ್ಬ ರಾಜಪುತ್ರನು ತನ್ನ ಗೆಳೆಯರೊಡನೆ ಕಣ್ಣಾಮುಚ್ಚಾಲೆಯನ್ನಾಡುತ್ತಿದ್ದನು. ಆಗ ಒಬ್ಬ ಗೆಳೆಯನು ರಾಜಪುತ್ರನ ಕಣ್ಣನ್ನು ಮುಚ್ಚಿ ಹಿಡಿದುಕೊಂಡನು. ಎಲ್ಲರೂ ಎಲ್ಲೆಲ್ಲಿಯೋ ಅಡಗಿಕೊಂಡರು. ಆ

ಮೇಲೆ ಗೆಳೆಯನು ಕೈಬಿಟ್ಟನು. ರಾಜಪುತ್ರನು ತನ್ನ ಗೆಳೆಯರನ್ನು ಹುಡುಕಿಹುಡುಕಿ ಕಾಣದೆ ಸಿಟ್ಟುಸಿರಿಡುತ್ತಿದ್ದನು. ಈ ಆಟವನ್ನು ನೋಡುತ್ತಿದ್ದ ಗೃಹಸ್ಥನು ರಾಜಪುತ್ರನನ್ನು ಕರೆದು ನಿನ್ನ ರಾಜಕೀಯ ದರ್ಪದಿಂದ ಒಮ್ಮೆ ಆಜ್ಞೆಯನ್ನಿತ್ತರೆ ಅವರೆಲ್ಲರೂ ತಾವೇ ಓಡಿಬರುವರೆಂದು ಸೂಚಿಸಿದನು. ಆಗ ರಾಜಪುತ್ರನು ಹಾಗಾದರೆ ನನ್ನ ಆಟದ ಜೀವವೇ ಹಾರುವದೆಂದು ಹೇಳಿ ಎಲ್ಲರಂತೆಯೇ ತಾನೂ ಹುಡುಕಿ ಕಂಡು ಆಟವನ್ನು ಮುಗಿಸಿದನು. ಆದರೆ ಈ ಕಥೆಗೂ ದೇವರ ವಿಷಯಕ್ಕೂ ಒಂದು ಕಡೆ ಬೆಸಿಗೆ ಬಿಡುತ್ತದೆ. ಅದೇನೆಂದರೆ ಕಥೆಯಲ್ಲಿ ರಾಜಪುತ್ರನು ತಾನೇ ಓಡಾಡಿದ್ದಾನೆ ; ಜಗತ್ತಿನಲ್ಲಿ ದೇವರು ಓಡಾಡಿದ್ದು ನಮಗೆ ಕಾಣುವದಿಲ್ಲ. ಇದು ಹೊರಗಣ್ಣಿಗೆ ಈ ರೀತಿಯಲ್ಲಿ ಕಂಡರೂ ಒಳಗಣ್ಣಿಂದ ನೋಡಿದರೆ ಕಥೆಗೆ ಹೊಂದಿಕೆಯಾಗಿಯೇ ಕಾಣುತ್ತದೆ. ಅದು ಹೇಗೆಂದರೆ ದೇವರು ದೇಹವನ್ನು ಸೃಷ್ಟಿ ಮಾಡಿ ಇಂದ್ರಿಯಗಳ ಸ್ಥಾನಗಳನ್ನೇರ್ಪಡಿಸಿ ಆಯಾಸ್ಥಲದಲ್ಲಿ ದೇವತೆಗಳನ್ನಿಟ್ಟು ಲೀಲೆಯನ್ನಾರಂಭಿಸಿದೊಡನೆ ತಾನು ಈ ದೇಹದಲ್ಲಿ ಕೂತುಕೊಳ್ಳದೆ ಇದ್ದರೆ ನನ್ನ ಪಾಲಿನ ಲೀಲೆಯಾಗುವದಿಲ್ಲವೆಂದು ಯೋಚಿಸಿ ತಾನೇ ದೇಹದೊಳಕ್ಕೆ ಪ್ರವೇಶವನ್ನು ಮಾಡಿ ಹೃದಯವೆಂಬ ಪೀಠದ ಮೇಲೆ ಕುಳಿತಿರುವನೆಂದು ಶ್ರುತಿ ಇದೆ. ಈ ದೇಹವೆಂಬುದು ಒಂದು ನಗರವೆಂದೂ ಇದಕ್ಕೆ ಕಣ್ಣು, ಕಿವಿ-ಮೊದಲಾದ ಒಂಬತ್ತು ಬಾಗಿಲುಗಳಿರುವವೆಂದೂ ಆ ಬಾಗಿಲುಗಳಲ್ಲೆಲ್ಲಾ ದೇವತೆಗಳು ದ್ವಾರಪಾಲಕರಾಗಿರುವರೆಂದೂ ದೇವರು ಈ ನಗರದ ಸ್ವಾಮಿಯಾಗಿ ಊರ ನಡುವೆ ಹೃದಯವೆಂಬ ಕಡೆಯಲ್ಲಿರುವನೆಂದೂ ಕವಿಶ್ರೇಷ್ಠರು ವರ್ಣಿಸುವರು. "ಹೃದಿ ಅಯಂ" ಎಂದರೆ 'ಈ ದೇವರು ಹೃದಯದಲ್ಲಿರುವದರಿಂದ' ಎಂಬರ್ಥದಿಂದಲೇ ಹೃದಯವೆಂಬ ಹೆಸರಾಯಿತೆಂಬ ನಾಮನಿರ್ವಚನವನ್ನು ಶ್ರುತಿಯು ತಾನೇ ಮಾಡಿರುವದು.

"ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ"

ಎಂದು ಭಗವದ್ಗೀತಾವಚನವೂ ಹೃದಯಸ್ಥಾನದಲ್ಲಿ ದೇವರಿರುವನೆಂಬದನ್ನು ನೆನಪುಗೊಡುವದು.

ದೇವರು ದೇಹದೊಳಕ್ಕೆ ಎಲ್ಲಿಂದ ಪ್ರವೇಶಮಾಡಿದನು ? ಇದೂ ತಿಳಿಯುತಕ್ಕದ್ದೆ. ಸೂರ್ಯ ಮೊದಲಾದ ದೇವತೆಗಳು ಕಣ್ಣು ಮೊದಲಾದ ರಂಧ್ರಗಳಲ್ಲಿ ಸುಸಿದರಷ್ಟೇ. ದೇವರು ಆ ಯಾವ ಮಾರ್ಗದಲ್ಲಿಯೂ ಕಾಲಿಡಲಿಲ್ಲ. ಏಕೆಂದರೆ ಅವು ಸೇವಕರ ದಾರಿಗಳು. ಸೂರ್ಯ ಮೊದಲಾದವರು ದೇವರ ಸೇವಕರು. ಆದ್ದರಿಂದ ದೇವರು ತಾನು ನಡು ನೆತ್ತಿಯಿಂದ ಪ್ರವೇಶಿಸಿದನೆಂದು ಶ್ರುತಿ ಹೇಳುತ್ತದೆ. ಪ್ರತ್ಯಕ್ಷವಾಗಿ ನಡು ನೆತ್ತಿಯ ಸ್ಥಾನವು ಬಹು ಕೋಮಲವಾಗಿದೆ. ಮಕ್ಕಳ ದೇಹದಲ್ಲಿ ಅದು ಬಳುಕುತ್ತ ಬಹು ಸ್ಪಷ್ಟವಾಗಿರುವದು. ಶಾಸ್ತ್ರಕಾರರು ಆ ಸ್ಥಾನವನ್ನು ಬಹು ಗೌರವಿಸುತ್ತಾರೆ. ನೆತ್ತಿಯ ಮೇಲೆ ಹೊರೆಯನ್ನು ಹೊರಿಸಬಾರದೆಂದು ಶಾಸ್ತ್ರಕಾರರ ಮತ. ಏಕೆಂದರೆ ದೇವರ ಬಾಗಿಲನ್ನು ಮುಚ್ಚಿದಂತಾಗುತ್ತದೆ. ಬಾಗಿಲಿಗೆ ಅಡ್ಡಗಟ್ಟುವದು ಅಮಂಗಲ. ಆ ಸ್ಥಾನದ ಪ್ರಶಂಸೆಯು ಶ್ರುತಿಯಲ್ಲಿ ಬಹಳ ಕಡೆ ಬಂದಿರುತ್ತದೆ. ಆ ಸ್ಥಲವನ್ನು ಬ್ರಹ್ಮರಂಧ್ರವೆನ್ನುತ್ತಾರೆ. ಯೋಗಿಗಳು ದೇಹವನ್ನು ಬಿಡುವಾಗ ತಮ್ಮ ಪ್ರಯತ್ನದಿಂದ ಪ್ರಾಣವಾಯುವನ್ನು ಆ ಮಾರ್ಗವಾಗಿ ಹೊರಡಿಸುವರೆಂದು ಯೋಗಶಾಸ್ತ್ರವು ಹೇಳುತ್ತದೆ. ಆ ಮಾರ್ಗದಿಂದ ದೇಹವನ್ನು ಬಿಟ್ಟು ಹೊರಟವರಿಗೆ ಪುನರ್ಜನ್ಮವಿಲ್ಲವೆಂದು ಶಾಸ್ತ್ರಸಿದ್ಧಾಂತವು. ಇದನ್ನೆಲ್ಲಾ ಸಮಾಲೋಚನೆ ಮಾಡಿದರೆ ದೇವರು ಹೃದಯದೊಳಗಿದ್ದು ತಾನೇ ಈ ಜಗದ್ವ್ಯವಹಾರದ ಲೀಲೆಯನ್ನು ನೋಡುತ್ತಿರುವನೆಂದು ತಿಳಿಯುತ್ತದೆ.

## ಜಗತ್ತನ್ನು ನಶ್ವರವಾಗಿ ಮಾಡಿದ್ದೇಕೆ?

ದೇವರು ಜಗತ್ತನ್ನು ತನ್ನ ಲೀಲೆಗಾಗಿ ಸೃಷ್ಟಿಮಾಡಿದ್ದರೆ ಜಗತ್ತಿನ ಸೃಷ್ಟಿಯಿಂದ ದೇವರಿಗೆ ಲೀಲೆಯಾಗಿರಬಹುದು ; ಆದರೆ " ಬೆಕ್ಕಿನ ಚೆಲ್ಲಾಟವು ಇಲಿಗೆ ಪ್ರಾಣಸಂಕಟ " ವೆಂಬಂತೆ ಪ್ರಾಣಿಗಳಿಗೆ ದುಃಖವಾಗುವದಲ್ಲ ! ಪ್ರತಿಯೊಂದು ವಸ್ತುವೂ ಪ್ರತಿಕ್ಷಣಕ್ಕೂ ವಿಕಾರವನ್ನು ಪಡೆಯುತ್ತ ನಶ್ವರವಾಗಿ ಕಾಣುವದಲ್ಲ ! ಜಗತ್ತನ್ನು ಹೀಗೆ ಸೃಷ್ಟಿ ಮಾಡಿದ್ದು ಯಾವ ನ್ಯಾಯ ?–ಎಂಬ ವಿಚಾರವು ಮುಂದೆ ಬರುವದು. ಪರಮದಯಾಳುವಾದ ದೇವರು ತನ್ನ ಲೀಲೆಗಾಗಿ ಪ್ರಾಣಿಗಳಿಗೆ

ದುಃಖವನ್ನು ಕೊಡುವನೆಂದು ಕಲ್ಪಿಸುವದು ಬಹಳ ಅನ್ಯಾಯವಾಗುವದು. ಜಗತ್ತಿನಲ್ಲಿ ಪ್ರಾಣಿಗಳಿಗೆ ದುಃಖವು ತೋರುತ್ತಿರುವದೇನೋ ನಿಜ. ಆದರೆ ಅವರನ್ನು ಈ ದುಃಖಕ್ಕೆ ಭಾಗಿಗಳನ್ನಾಗಿ ಮಾಡುವದೇ ಅವನ ಉದ್ದೇಶವಲ್ಲ. ಒಳಹೊಕ್ಕು ವಿಚಾರಮಾಡಿದರೆ ಜಗತ್ತಿನಲ್ಲಿ ಸುಖದ ಜೊತೆಗೆ ದುಃಖದ ವಾಸನೆಯನ್ನು ತೋರಿಸಿ ಅಲ್ಲಿಂದ ಪ್ರಾಣಿಯನ್ನು ಹಿಮ್ಮೆಟ್ಟಿಸಿ ಜಗತ್ತಿನಲ್ಲಿ ಎಲ್ಲಿಯೂ ಸಿಕ್ಕದಂಥ ಉತ್ಕೃಷ್ಟವಾದ ಸುಖವನ್ನು ಕೊಡಬೇಕೆಂಬುದೇ ಅವನ ಉದ್ದೇಶವಾಗಿರುವದು. ದುಃಖವು ಅನುಭವಕ್ಕೆ ಬಂದ ಮೇಲೆಯೇ ಸುಖದ ಬೆಲೆಯು ಚೆನ್ನಾಗಿ ತಿಳಿಯುವದು. ರಾತ್ರಿಯೊಡನೆ ಹೋಲಿಸಿದರೇನೇ ಹಗಲಿನ ಹೆಚ್ಚುಗಾರಿಕೆ ಗೊತ್ತಾಗುವದು. ಆದ್ದರಿಂದ ದೇವರು ಆನಂದಸ್ವರೂಪದ ಸವಿಯನ್ನು ತೋರಿಸುವದಕ್ಕೆ ಮುಂಚೆ ಮನುಷ್ಯರಿಗೆ ಜಗತ್ತಿನ ಕ್ಷುದ್ರಾನಂದದ ಪರಿಚಯವಾಗಲೆಂದು ಜಗತ್ತನ್ನು ನಿರ್ಮಿಸಿದ್ದಲ್ಲದೆ ಎಲ್ಲರ ಇಂದ್ರಿಯಗಳೂ ಹೊರಗೆ ಹರಿದು ಹೋಗುವಂತೆಯೇ ಮಾಡಿರುವನು.

ಜಗತ್ತಿನಲ್ಲಿ ಆನಂದವಿಲ್ಲದೆ ಇಲ್ಲ. ಹಾಗಿದ್ದರೆ ಯಾರೂ ಜಗತ್ತಿನ ಕಡೆಗೆ ಕಣ್ಣು ಹಾಕುತ್ತಲೇ ಇರಲಿಲ್ಲ. ಜಗತ್ತಿನಲ್ಲಿ ಆನಂದವಿದೆ; ಆದರೆ ಅದು ದುಃಖಮಿಶ್ರಿತವಾದದ್ದು ಮತ್ತು ಭಯದಿಂದ ಕೂಡಿದ್ದು. ಇದನ್ನೊಂದು ಉದಾಹರಣೆಯಿಂದ ತೋರಿಸಬಹುದು. ಜಗತ್ತಿನಿಂದ ದೊರೆಯುವ ಆನಂದವು ಸಾಮಾನ್ಯವಾಗಿ ರಾಜರಿಗಿರುವಷ್ಟು ಮತ್ತೊಬ್ಬರಿಗಿರಲಾರದು. ಏಕೆಂದರೆ ರಾಜರಿಗೆ ಸರ್ವಸಂಪತ್ಸಮೃದ್ಧಿ ಇರುತ್ತದೆ. ಆ ರಾಜನ ಆನಂದದ ಸ್ವರೂಪವು ಒಂದು ಕಥೆಯಿಂದ ತೋರುತ್ತದೆ. ಮನುಷ್ಯಾನಂದದ ಪರಮಾವಧಿಯಾದ ರಾಜನ ಆನಂದವು ಬಹುಸ್ಪೃಹಣೀಯವೆಂದು ತಿಳಿದಿದ್ದ ಒಬ್ಬ ಬ್ರಾಹ್ಮಣನಿಗೆ ಅದರ ರಹಸ್ಯವನ್ನು ತಿಳಿಸುವದಕ್ಕಾಗಿ ರಾಜನು ತನ್ನ ಮನೆಗೆ ಊಟಕ್ಕೆ ಬರಬೇಕೆಂದು ಆ ಬ್ರಾಹ್ಮಣನಿಗೆ ಔತಣವನ್ನು ಕೊಟ್ಟನು. ಆ ಬ್ರಾಹ್ಮಣನು ಬರುವದರೊಳಗೇ ಅವನಿಗಾಗಿ ರತ್ನಖಚಿತವಾದ ಪೀಠವನ್ನು ಹಾಕಿ ಚಿನ್ನದ ತಟ್ಟೆಯಲ್ಲಿಯೂ ಬಟ್ಟಲಗಳಲ್ಲಿಯೂ ಷಡ್ರಸೋಪೇತವಾದ ಮೃಷ್ಟಾನ್ನಗಳನ್ನು ಬಡಿಸಿಟ್ಟಿದ್ದರಲ್ಲದೆ ನೆಟ್ಟನೆ ನಡುನೆತ್ತಿಗೆ ಗುರಿಯಿಟ್ಟಂತೆ ಒಳ್ಳೇ ಹರಿತವಾದ ಒಂದು

ಕತ್ತಿಯನ್ನು ಸಣ್ಣದಾದ ಒಂದು ಹೊಸದಾರದಿಂದ ಜಂತೆಗೆ ಕಟ್ಟಿ ಆ ಜಂತೆಯ ಮೇಲೊಂದು ಇಲಿಯನ್ನು ಓಡಾಡಬಿಟ್ಟಿದ್ದರು. ಇಷ್ಟರಲ್ಲಿ ಔತನದ ಶ್ರವಣಮಾತ್ರದಿಂದಲೇ ರಾಜಭೋಜನವು ಲಭ್ಯವಾದ ಆ ಸುದಿನವನ್ನೇ ತನ್ನ ಜನ್ಮದಿನವೆಂದು ತಿಳಿದುಕೊಂಡು ಬಂದ ಆ ಬ್ರಾಹ್ಮಣನು ತನಗೆ ದೊರೆತ ವೈಭವದಿಂದ ಮೈಮರೆತು ಆ ಮೃಷ್ಟಾನ್ನಗಳ ಸುವಾಸನೆಯಿಂದ ಬಾಯಿ ನೀರು ಕರೆದು ನೋಟದಿಂದ ಕಣ್ಣಿಗೆ ಹಬ್ಬವನ್ನು ಮಾಡಿಕೊಂಡು ಉತ್ಕಟವಾದ ಇಚ್ಛೆಯಿಂದ ಅದಕ್ಕೆ ಕೈನೀಡುವದರೊಳಗೇ ಮೇಲೆ ಇಲಿಯು ದಡದಡನೆ ಓಡಿತು. ಆಗ ಅವನು ಸ್ವಭಾವಸಿದ್ಧವಾದ ಭಯದಿಂದ ಅತ್ತಿತ್ತ ನೋಡುತ್ತಲೇ ತೂಗಾಡುತ್ತಿದ್ದ ಕತ್ತಿ ಕಾಣಿಸಿತು. ಒಡನೆ ಅವನು ತನ್ನ ತಲೆಯ ಮೇಲೆ ಅದು ಬಿದ್ದು ತನ್ನ ತಲೆಯನ್ನು ಸೀಳಿಬಿಡುವದೆಂದು ಗಾಬರಿಗೊಂಡು ಊಟವನ್ನು ಬಿಟ್ಟು ಅಲ್ಲಿಂದ ಚಟಕ್ಕನೆ ದೂರಕ್ಕೆ ಸರಿದನು. ತನ್ನ ಪ್ರಾಣವೇ ಹೋಗುತ್ತಿತ್ತೆಂದು ಮುಖವೆಲ್ಲಾ ವಿವರ್ಣವಾಗಿ ಕಪ್ಪುಬಿಳಿಚಿಟ್ಟಿದ್ದ ಆ ಬ್ರಾಹ್ಮಣನನ್ನು ಸಂತಯಿಸಿ ರಾಜನು ಇದೇ ರಾಜಭೋಗದ ಸ್ವರೂಪವೆಂದು ಹೇಳಿದನಂತೆ. ಜಗತ್ತಿನಿಂದಾಗುವ ಸುಖವು ಯಾವಾಗ ದುಃಖರೂಪಕ್ಕೆ ತಿರುಗಿಬಿಡುವದೋ ಹೇಳುವದಕ್ಕೆ ಬರುವ ಹಾಗಿಲ್ಲ. ಅದು ಕ್ಷಣಮಾತ್ರದಲ್ಲಿ ಸುಖಕರವಾಗುವದು; ಕ್ಷಣಮಾತ್ರದಲ್ಲಿ ದುಃಖಕರವಾಗುವದು. ಈ ಜಗತ್ತೆಂಬ ಹಾವಿನ ವಿಷದ ಹಲ್ಲನ್ನು ಮುರಿಯಬೇಕಾದರೆ ಜಗದೀಶ್ವರನೆಂಬ ಹಾವಾಡಿಗನ ಆಶ್ರಯವನ್ನು ಪಡೆಯಬೇಕು. ಹಾವಾಡಿಗನ ಅನುಗ್ರಹವನ್ನು ಪಡೆಯದೆ ಹಾವಿನೊಡನೆ ಚೆಲ್ಲಾಟವಾಡಬಾರದು. ಹೀಗೆ ಜಗತ್ತಿನ ದುಃಖಸ್ವರೂಪವನ್ನು ಮನಸ್ಸಿಗೆ ತಂದುಕೊಂಡು ಮನುಷ್ಯನು ತನ್ನ ಕಡೆಗೆ ಬರಲೆಂದು ದೇವರು ಇಂಥ ಜಗತ್ತನ್ನು ನಿರ್ಮಿಸಿರುವನು. ಇದು ಬರಿ ಯುಕ್ತಿಯಿಂದ ನಿಶ್ಚಯಿಸಿದ ಮಾತಲ್ಲ. ಶ್ರುತಿಯು ತಾನೇ ಈ ಅರ್ಥವನ್ನು

"ಪರೀಕ್ಷ್ಯ ಲೋಕಾನ್ಕರ್ಮಚಿತಾನ್ಬ್ರಾಹ್ಮಣೋ ನಿರ್ವೇದಮಾಯಾತ್"

ಎಂದು ಹೇಳುವದು. ಕರ್ಮದಿಂದ ಪಡೆದಂಥ ಲೋಕಗಳ ( ಇಹಲೋಕ ಪರಲೋಕಗಳ ) ಸ್ವಭಾವವನ್ನು ಪರೀಕ್ಷೆಮಾಡಿ ಜಗತ್ತಿನ ವಿಷಯದಲ್ಲಿ ವಿರಕ್ತನಾಗಿರಬೇಕೆಂದರ್ಥ. ಜಗತ್ತಿನ ವಿಷಯದಲ್ಲಿ ವಿರಕ್ತನಾಗುವ

ದೆಂದರೆ ಜಗತ್ತನ್ನೇ ಬಿಟ್ಟು ಹೋಗುವದೆಂದರ್ಥವಲ್ಲ. ಈ ಊರನ್ನು ಬಿಟ್ಟವರು ಮತ್ತೊಂದೂರಿಗೆ ಹೋಗುತ್ತಾರೆ. ಊರನ್ನೇ ಬಿಟ್ಟವರು ಕಾಡಿಗೆ ಹೋಗುತ್ತಾರೆ. ಈ ಲೋಕವನ್ನೇ ಬಿಟ್ಟವರು ಪರಲೋಕಕ್ಕೆ ಹೋಗುತ್ತಾರೆ. ಹೀಗೆ ಮನುಷ್ಯರು ಜಗತ್ತಿನಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗುತ್ತಿರುವರೇ ಹೊರತು ಜಗತ್ತನ್ನೇ ಬಿಟ್ಟು ಹೋಗುವದು ಶಕ್ಯವೇ ಅಲ್ಲ. ವಿರಕ್ತನಾಗುವದೆಂದರೆ ಜಗತ್ತಿನಿಂದ ದೊರೆಯುವ ಆನಂದವೇ ತನ್ನ ಧ್ಯೇಯವೆಂದು ಭಾವಿಸದಿರುವದು. ಇಷ್ಟೇ. ಏಕೆಂದರೆ—

"ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ"

ಎಂಬ ಗೀತಾವಚನದಂತೆ ವಿಷಯೇಂದ್ರಿಯಗಳ ಸಂಯೋಗದಿಂದಾಗುವ ಸುಖಗಳೆಲ್ಲಾ ದುಃಖದಿಂದ ಕೂಡಿದವುಗಳೇ. "ದುಃಖ ಬೆರೆಸದ ಸುಖವದಾರಿಗೆ ಸಿಕ್ಕುವದು ಹೇಳ್ಕಂದ" ಎಂದು ವ್ಯಾಸರು ಶುಕರಿಗೆ ಹೇಳಿದ್ದಾರೆ. ಹೀಗೆಂದು ತಿಳಿದು ಜಗತ್ತಿನ ವಿಷಯದಲ್ಲಿ ವೈರಾಗ್ಯವನ್ನು ಪಡೆದ ಮೇಲೆ ಸುಖದ ದಾರಿ ಇನ್ನಾವುದೆಂದರೆ ಗೀತೆಯಲ್ಲಿ ಶ್ರೀಕೃಷ್ಣನೇ ಹೇಳಿದ್ದಾನೆ ಏನೆಂದರೆ—

"ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಂ"

ಎಂದರೆ ನಶ್ವರವಾದಂಥ ಮತ್ತು ದುಃಖಮಿಶ್ರಿತವಾದಂಥ ಈ ಲೋಕದಲ್ಲಿ ಜನ್ಮವೆತ್ತಿದ ಮೇಲೆ ನನಗೆ ಶರಣು ಬಾರೆಂದರ್ಥ. ಈ ರೀತಿಯಲ್ಲಿ ದೇವರು ಜಗತ್ತನ್ನು ನಶ್ವರವಾಗಿಯೂ ದುಃಖಮಯವಾಗಿಯೂ ಮಾಡಿರುವದರಲ್ಲಿ ಪ್ರಾಣಿಗಳನ್ನು ದುಃಖಭಾಗಿಗಳನ್ನಾಗಿ ಮಾಡಬೇಕೆಂಬ ದುರುದ್ದೇಶವಿಲ್ಲದೆ ಎಲ್ಲರಿಗೂ ಉತ್ಕೃಷ್ಟವಾದ ನಿಜಾನಂದವನ್ನು ಕೊಡಬೇಕೆಂಬ ಸದುದ್ದೇಶವೇ ಇರುವದು.

## ದೇವರ ಸರ್ವರಕ್ಷಕತ್ವ.

ಜಗತ್ತನ್ನು ದುಃಖಮಯವಾಗಿ ಮತ್ತು ನಶ್ವರವಾಗಿ ಮಾಡಿದ್ದ ಮೇಲೆ ಮನುಷ್ಯರು ತಮ್ಮನ್ನು ತಾವು ರಕ್ಷಿಸಿಕೊಳ್ಳುವದು ಬಹು ಕಠಿನವಾಗುವದೆಂದು ತೋರಬಹುದು. ಇದಕ್ಕೆ ಉತ್ತರವಾಗಿ "ಹುಟ್ಟಿಸಿದ

ದೇವರು ಹುಲ್ಲುಮೇಯಿಸುವನೆ? " ಎಂಬ ಗಾದೆಯನ್ನು ನೆನೆಸಿಕೊಂಡ ಸಾಕಾಗಿದೆ. ದೇವರು ಸೃಷ್ಟಿಕರ್ತನಾಗಿರುವಂತೆ ಸ್ಥಿತಿಕರ್ತನೂ ಆಗಿ ವನು. ಹೆತ್ತ ಮಕ್ಕಳ ಯೋಗಕ್ಷೇಮವನ್ನು ತಾಯ್ತಂದೆಗಳು ನೋ ಕೊಳ್ಳುವಂತೆ ಎಲ್ಲರ ಯೋಗಕ್ಷೇಮವನ್ನೂ ದೇವರು ನೋಡಿಕೊಳ್ಳ ವನು. ವಯಸ್ಸಾದ ಮೇಲೆ ಮಕ್ಕಳು ತಮ್ಮ ಯೋಗಕ್ಷೇಮವನ ತಾವು ನೋಡಿಕೊಳ್ಳುತ್ತಿರಬಹುದು. ಆದರೂ ತಾಯ್ತಂದೆಗಳು ಅವ ಮೇಲೊಂದು ದಯಾದೃಷ್ಟಿಯನ್ನಿಟ್ಟೇ ಇರುವರು. ಇದರಂತೆ ಮನುಷ್ಯರ ತಮ್ಮ ಯೋಗಕ್ಷೇಮವನ್ನು ತಾವು ನೋಡಿಕೊಳ್ಳುತ್ತಿದ್ದರೂ ದೇವರ ದೂರದಲ್ಲಿದ್ದುಕೊಂಡು ತಾನೂ ಅವರ ಭಾರವನ್ನು ಹೊತ್ತೇ ಇರ ವನು. ಒಟ್ಟಿನ ಮೇಲೆ ಜಗತ್ತಿನ ನಿಜವಾದ ರಕ್ಷಣೆಯು ದೇ ರಿಂದಲೇ ಆಗುವದು. ಈ ಅರ್ಥವು ನಮ್ಮ ಪರಮಾತ್ಮಸ್ತುತಿಯಲ್ಲಿಯು ಇರುವದು.

ಭಾ॥ ಗಿರಿಯ ತುದಿಯೊಳಗಿಪ್ಪ ಮರಕೆ ನೀ ।
ರೆರೆವರಾರ್‍ಕಲ್ಲ ಸಂದಿಯೊ ।
ಳಿರುವ ಕ್ರಿಮಿಕೀಟಗಳಿಗನ್ನವ ಕೊಡುವರಿನ್ನಾರೊ ? ॥
ಮೊರೆವ ಕಾಡಾನೆಗಳ ಹೊಟ್ಟೆಯು ।
ಬಿರಿಯೆ ಮೇವನ್ನೊದಗಿಸುವರಾ ।
ರರಿಯೆ ನೀನೇ ಪಾಲಿಸುತ್ತಿಹೆ ವಿಷ್ಣುರೂಪಿನಲಿ ॥

ಈ ಅಭಿಪ್ರಾಯವನ್ನೆ ಮತ್ತಿಷ್ಟು ವಿಸ್ತರಿಸಿ ಶ್ರೀಸರ್ಪಭೂಷಣಶಿ ಯೋಗಿಗಳು ತಮ್ಮ ಕೈವಲ್ಯಕಲ್ಪವಲ್ಲರಿಯಲ್ಲಿ ಹಾಡಿರುವದೇನೆಂದರೆ—

ರಾಗ—ತೋಡಿ.

ಏತಕ್ಕೆ ಚಿಂತೆಯನು ಮಾಳ್ಪೆ ಮೂಢ । ವಿಶ್ವ ।
ನಾಥನೇ ಪೋಷಿಪನು ಯೋಚಿಸಬೇಡ ॥ ಪ ॥
ಯಾರು ನಿನಗಾಗುವ ಸಹಾಯರಿಲ್ಲ । ವೆಂದು ।
ಹಾರೈಸಿ ಸುಮ್ಮನೆ ಬಳಲುವೆಯಲ್ಲ ॥
ಮೂರು ಲೋಕಂಗಳನು ಪೊರೆಯಬಲ್ಲಾ । ನಮ್ಮ ।
ಮಾರವೈರಿಯು ನಿನ್ನ ಮರೆವುದಿಲ್ಲ ॥ ೧ ॥

ಮಕ್ಕಳಿಗೆ ಮುಂದಿನ್ನು ದಾರಿಯೇನು । ಎಂದು ।
ದುಃಖದೊಳು ಕೊರಗಿ ಸಾಯುವಿಯೊ ನೀನು ॥
ಮಕ್ಕಳಾ ಗರ್ಭದೊಳಗಿರುವಾಗ ತಾ । ತುತ್ತ ।
ನಿಕ್ಕಿ ಸಾಕಿದ ದೇವರಿಲ್ಲವೇನು ॥ ೨ ॥
ಬೆಟ್ಟದ ತುದಿಯೊಳಿಹ ಪ್ರಾಣಿಗಳಿಗೇ । ಅನ್ನ ।
ಇಟ್ಟು ಸಾಕುವ ದೇವನೇ ದಿಕ್ಕೆನುತ್ತ ॥
ನಿಷ್ಟೆಯೊಳು ತಪ್ಪದಿರೆ ಗಳಿಗೆಯೊಳಗೆ । ತಾನೆ ।
ಕಟ್ಟಿ ತಂದೀಯುವನು ಕೇಳ್ನಿನ್ನ ಬಳಿಗೆ ॥ ೩ ॥
ಆಶೆಯಿಂದಲಿ ನಾಳೆಗುಂಬೆನೆಂದು । ಧಾನ್ಯ ।
ರಾಶಿಯನ್ನೇ ಮಾಡೆ ಹೋಗುವದು । ಸಂದು ॥
ವಿಸುಕಾಲಪಿರಕ್ಕೆ ಆನೆ ಮುಂದಕೆ । ಮೇವ ।
ನಾಶಿಸದೆ ಬಾಳ್ವುದ ನೀನೆ ಶೋಧಿಂದು ॥ ೪ ॥
ಪಕ್ಷಿಗಳು ಸುತ್ತತ್ತಿದುತೆ ಮೇವಪ್ರೇಲ್ । ಸರ್ಪ ।
ವೃಕ್ಷಂಗಳೀಸ್ಪದಿ ಮೇಯುವವೆ ಮುಂದೆ? ॥
ಪಕ್ಷಿವೃಕ್ಷಾದಿಗಳ ಪೋಷಿಪಂತೆ । ನಿನ್ನ ।
ರಕ್ಷಿಪನು ಗುರುಸಿದ್ಧನೆಲೊ ಭ್ರಾಂತೆ ॥ ೫ ॥

## ದೇವರಿಗೂ ಮನುಷ್ಯನಿಗೂ ಸಂಬಂಧ.

ದೇವರು ಈ ರೀತಿಯಲ್ಲಿ ಜಗತ್ತನ್ನು ಸೃಷ್ಟಿಮಾಡಿರುವದೂ ಅಲ್ಲದೆ ಅದರ ಸ್ಥಿತಿಯನ್ನು ನೋಡಿಕೊಳ್ಳುವವನಾಗಿದ್ದರೂ ಆ ಕಲ್ಪನೆಯು ಮನುಷ್ಯರಲ್ಲಿ ಸರ್ವಸಾಮಾನ್ಯವಾಗಿ ಎದ್ದು ಕಾಣುವದಿಲ್ಲ. ದೇವರ ಸೃಷ್ಟಿಯಲ್ಲೆಲ್ಲಾ ಮನುಷ್ಯನೇ ಶ್ರೇಷ್ಠನೆಂಬುದು ಸರ್ವಾನುಭವಸಿದ್ಧವಾಗಿದೆ. ಆದ್ದರಿಂದ ದೇವರು ಮನುಷ್ಯರೊಡನೆ ಹೆಚ್ಚಿನ ಸಂಬಂಧವನ್ನಿಟ್ಟುಕೊಂಡಿರಬೇಕಾಗುವದು. ಹಾಗಿಟ್ಟುಕೊಂಡಿರದೆ ಹೋಗಿದ್ದರೆ ಈ ಸೃಷ್ಟಿಯೇ ವ್ಯರ್ಥವಾಗುತ್ತಿತ್ತು. ಆ ಸಂಬಂಧದ ವಿಚಾರವು ಮನಸ್ಸಿನಲ್ಲಿ ಒಡೆದು ಮೂಡುವದಕ್ಕಾಗಿ ಶ್ರೀ ರಾಮಕೃಷ್ಣಪರಮಹಂಸರ ಸೂಕ್ತಿಮಾಲೆಯ ನಾಲ್ಕು ಪುಷ್ಪಗಳನ್ನು ಇಲ್ಲಿಡುವೆವು.

(೧) ಮನುಷ್ಯರಿಗೂ ದೇವರಿಗೂ ಇರುವ ಸಂಬಂಧವು ಕಬ್ಬಿಣಕ್ಕೂ ಸೂಜಿಗಲ್ಲಿಗೂ ಇರುವ ಸಂಬಂಧದಂತೆ ಇದೆ. ಹಾಗಾದರೆ ಮನುಷ್ಯರನ್ನೆಲ್ಲಾ ಭಗವಂತನು ಏಕೆ ತನ್ನ ಕಡೆಗೆ ಎಳೆಯುವದಿಲ್ಲ? ದಪ್ಪವಾಗಿ ಮಣ್ಣುಮೆತ್ತಿಕೊಂಡಿರುವ ಕಬ್ಬಿಣವು ಸೂಜಿಗಲ್ಲಿನ ಆಕರ್ಷಣಶಕ್ತಿಯಿಂದ ಚಲಿಸದಿರುವಂತೆ ಮಾಯೆಯಿಂದ ಬಲವಾಗಿ ಕಟ್ಟಲ್ಪಟ್ಟಿರುವ ಮನುಷ್ಯನ ಮೇಲೆ ಭಗವಂತನ ಆಕರ್ಷಣಶಕ್ತಿಯು ನಡೆಯುವದಿಲ್ಲ. ಆದರೆ ನೀರಿನಿಂದ ಮಣ್ಣನ್ನು ತೊಳೆದ ಮೇಲೆ ಕಬ್ಬಿಣದ ತುಂಡು ಸೂಜಿಗಲ್ಲಿನ ದೆಸೆಯಿಂದ ಚಲಿಸುವಂತೆ ಪಶ್ಚಾತ್ತಾಪದಿಂದ ಮತ್ತು ದೈನ್ಯದಿಂದ ಹುಟ್ಟಿದ ಕಣ್ಣೀರಿನ ಧಾರೆಗಳಿಂದ ಮಾಯೆಯೆಂಬ ಮಣ್ಣನ್ನು ತೊಳೆದ ಮೇಲೆ ಅವನು ತಡವಿಲ್ಲದೆ ಭಗವಂತನ ಆಕರ್ಷಣಶಕ್ತಿಗೊಳಗಾಗುತ್ತಾನೆ.

(೨) ಉತ್ತರಮುಖಿ ಎಂಬ ಯಂತ್ರವು ಯಾವಾಗಲೂ ಉತ್ತರ ದಿಕ್ಕಿಗೇ ಮುಖವಾಗಿರುತ್ತದೆ; ಆದುದರಿಂದ ಹಡಗಿಗೆ ದಾರಿ ತಪ್ಪುವದಿಲ್ಲ. ಹಾಗೆಯೇ ಮನುಷ್ಯನ ಮನೋವೃತ್ತಿಯು ಭಗವಂತನ ಕಡೆಗೆ ತಿರುಗಿ ಇರುವವರೆಗೂ ಅವನು ಸಂಸಾರದಲ್ಲಿ ಮುಳುಗಿ ಹೋಗುವದಿಲ್ಲ.

(೩) ಸಮುದ್ರದ ತಳದಲ್ಲಿ ಅಡಗಿಕೊಂಡಿರುವ ಸೂಜಿಗಲ್ಲು ಬಂಡೆಯು ಮೇಲೆ ಹೋಗುತ್ತಿರುವ ಹಡಗನ್ನು ತನ್ನ ಕಡೆಗೆ ಎಳೆದುಕೊಳ್ಳುತ್ತದೆ. ಆಗ ಅದರ ಕಬ್ಬಿಣದ ಮೊಳೆಗಳೆಲ್ಲಾ ಹೊರಬಿದ್ದು ಹಲಿಗೆಗಳು ಒಂದಕ್ಕೊಂದು ಬೇರೆಯಾಗಿ ಹಡಗು ಸಮುದ್ರದಲ್ಲಿ ಮುಳುಗುತ್ತದೆ. ಹಾಗೆಯೇ ಹೃದ್ಗತವಾದ ಭಗವತ್ತತ್ತ್ವವು ಮನುಷ್ಯನ ಜೀವವನ್ನು ಆಕರ್ಷಣೆಮಾಡಿದಾಗ ಅದು ಕ್ಷಣಮಾತ್ರದಲ್ಲಿ ಅವನ ಪ್ರಾಪಂಚಿಕವಾದ ಅಹಂಕಾರವನ್ನೂ ಸ್ವಾರ್ಥಬುದ್ಧಿಯನ್ನೂ ಹೊರಗೆಡವಿ ಆ ಜೀವವನ್ನು ಪರಮಾತ್ಮನ ಮೇಲಣ ಅಪಾರವಾದ ಪ್ರೀತಿಯೆಂಬ ಸಾಗರದಲ್ಲಿ ಮುಳುಗಿಸುವದು.

(೪) ಎಣ್ಣೆ ಇಲ್ಲದೆ ದೀಪವು ಹೇಗೆ ಉರಿಯುವದಿಲ್ಲವೋ ಹಾಗೆ ದೇವರಿಲ್ಲದೆ ಮನುಷ್ಯನಿರಲಾರನು.

---

## ಮೂರನೇ ಕಿರಣ.

# ಧರ್ಮ

---

### ಧರ್ಮದ ಶ್ರೇಷ್ಠತೆ.

ಹಿಂದೆ ಹೇಳಿದಂತೆ ದೇವರಿಗೂ ಮನುಷ್ಯನಿಗೂ ಇರುವ ನಿತ್ಯ ಸಂಬಂಧವು ಒಳ್ಳೇ ಹಿತಕರವಾಗಿ ಪರಿಣಮಿಸಬೇಕಾಗಿದ್ದರೆ ಏನುಮಾಡಬೇಕು? ಇದನ್ನು ನಾವು ಎಲ್ಲಾ ಬಗೆಯಿಂದಲೂ ವಿಚಾರಮಾಡಿ ನೋಡಬೇಕು. ದೇವರೊಡನೆ ಸಂಬಂಧವು ಮನುಷ್ಯನಿಗೆ ಹಿತಕರವಾಗಿ ಪರಿಣಮಿಸುವದೆಂದರೆ ಮನುಷ್ಯನ ಸುಖವನ್ನು ಹೆಚ್ಚಿಸುವದು. ಆ ಸುಖಕ್ಕಾಗಿಯೇ ಮನುಷ್ಯನು ಹಗಲಿರುಳೂ ಹೋರಾಡುತ್ತಿರುವನೆಂದು

"ಸುಖಾರ್ಥಾಃ ಸರ್ವಲೋಕಾನಾಂ ಮತಾಃ ಸರ್ವಾಃ ಪ್ರವೃತ್ತಯಃ"

ಎಂಬ ಸ್ಮೃತಿವಾಕ್ಯವು ನೆನಪುಗೊಡುತ್ತದೆ. ಆದರೂ ನಿಜವಾದ ಸುಖವನ್ನು ಪಡೆದಿರುವವರು ಕಡಿಮೆ. ಇದಕ್ಕೆ ಕಾರಣವೇನು? ಯಾವದು ಸುಖವನ್ನು ಕೊಡಲಾರದೋ ಅದರ ಮುಂದೆ ಇವರು ಸುಖದ ಜೋಳಿಗೆಯನ್ನು ಹಿಡಿದರೆನ್ನಬೇಕು. ಸುಖಕ್ಕಾಗಿ ಎಲ್ಲರೂ ಭೌತಿಕವಸ್ತುಗಳನ್ನು ಆಶ್ರಯಿಸುತ್ತಿರುವದು ಕಂಡುಬರುತ್ತದೆ. ಭೌತಿಕವಸ್ತುಗಳು ನಿಜವಾದ ಸುಖದ ಸಾಧನವಲ್ಲವೆಂಬುದನ್ನು ಹಿಂದೆಯೇ ಹೇಳಿದ್ದೇವೆ. ಆದ್ದರಿಂದ ನಿರಾಶೆಯಾಗುವದು ಅನಿರೀಕ್ಷಿತವೇನೂ ಅಲ್ಲ. ಹಾಗಾದರೆ ನಿಜವಾದ ಸುಖದ ಹಾದಿ ಯಾವದು? ನಿಜವಾದ ಸುಖದ ಪರಿಚಯವುಳ್ಳವರೇ ಇದನ್ನು ಹೇಳಬೇಕು. ಸುಖಕ್ಕಾಗಿಯೇ ಇನ್ನೂ ಬಾಯಾರಿಬೆಂಡಾಗುತ್ತಿರುವವರ ಹಲುಬುವಿಕೆಯ ಬೆನ್ನು ಹತ್ತಿದರೇನೂ ಫಲವಾಗಲಾರದು. ಸುಖಾನುಭವದ ಪರವಶತೆಯನ್ನು ಅನುಭವಿಸುವವರು ತೋರಿಸುವ ದಾರಿ ಯಾವದೆಂದರೆ—

"ಸುಖಂ ತು ನ ವಿನಾ ಧರ್ಮಾತ್ತಸ್ಮಾದ್ಧರ್ಮಪರೋ ಭವೇತ್"

ಎಂದರೆ ಸುಖವೆಂಬುವದು ಧರ್ಮದ ಹೊರತು ಬೇರೆ ಯಾವದರಿಂದಲೂ ಸಿಕ್ಕುವದಿಲ್ಲ. ಆದ್ದರಿಂದ ಎಲ್ಲರೂ ಧರ್ಮಪರರಾಗಬೇಕು. ಇದು ಸ್ಮೃತಿ ವಾಕ್ಯ. ಇದೇ ಅಭಿಪ್ರಾಯವನ್ನೇ ಭಗವಾನ್‌ವ್ಯಾಸರು "ಭರತ ಸಾವಿತ್ರೀ" ಎಂಬ ಸ್ತೋತ್ರದಲ್ಲಿ ಹೇಳಿರುವದೇನೆಂದರೆ—

"ಊರ್ಧ್ವಬಾಹುರ್ವಿರೌಮ್ಯೇಷ ನ ಚ ಕಶ್ಚಿಚ್ಛೃಣೋತಿ ಮೇ ।
ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ॥"

"ಎಲೊ ಪ್ರಾಣಿಗಳಿರಾ, ಈ ನಾನು ಎರಡು ಕೈಗಳನ್ನೂ ಎತ್ತಿ ಸಾರಿ ಸಾರಿ ಹೇಳುತ್ತಿದ್ದೇನೆ; ಇದಕ್ಕೆ ಒಬ್ಬನಾದರೂ ಕಿವಿಗೊಡುವದಿಲ್ಲ. ಧರ್ಮವೊಂದನ್ನು ಹಿಡಿದರೆ ಅರ್ಥವೂ ಕಾಮವೂ ತಾವೇ ಹುಡುಕಿಕೊಂಡು ಬರುವವು. ಅಂಥ ಧರ್ಮವನ್ನು ನೀವೇಕೆ ಆಶ್ರಯಿಸಲೊಲ್ಲಿರಿ?" ಎಂದು ಅದರ ತಾತ್ಪರ್ಯ. "ಭರತಸಾವಿತ್ರಿ" ಎಂಬುವದು ಪ್ರತಿದಿನವೂ ಉದಯ ಕಾಲದಲ್ಲಿ ಸ್ಮರಿಸುವ ಸ್ತೋತ್ರ. ಧರ್ಮವನ್ನಾಶ್ರಯಿಸಬೇಕೆಂಬ ಕಲ್ಪನೆಯೇ ಮನುಷ್ಯನ ಮನಸ್ಸನ್ನು ಮೊದಲು ಆಕ್ರಮಿಸಲೆಂದು ಭಗವಾನ್ ವ್ಯಾಸರು ಈ ಅಭಿಪ್ರಾಯವನ್ನು ಉದಯಕಾಲದ ಸ್ಮರಣೆಯಲ್ಲಿ ಸೇರಿಸಿರುತ್ತಾರೆ. ಮನುಷ್ಯನು ಹುಟ್ಟಿದ್ದಕ್ಕೆ ಧರ್ಮ, ಅರ್ಥ, ಕಾಮ, ಮೋಕ್ಷ— ಎಂಬ ನಾಲ್ಕನ್ನು ಸಾಧಿಸಬೇಕೆಂದು ಪ್ರಾಚೀನರು ಆ ನಾಲ್ಕಕ್ಕೇ "ಪುರುಷಾರ್ಥ" ಎಂದು ಹೆಸರಿಟ್ಟಿದ್ದಾರೆ. ಈ ನಾಲ್ಕರಲ್ಲಿಯೂ ಧರ್ಮವು ಮೊದಲನೆಯದೆಂದ ಮೇಲೆ ಅದರ ಶ್ರೇಷ್ಠತೆಯ ವಿಷಯಕ್ಕೆ ಹೇಳಬೇಕಾದ್ದೇನಿದೆ?

## ಧರ್ಮದ ಸ್ವರೂಪ.

ಧರ್ಮವೆಂದರೇನೆಂಬುದನ್ನು ಬೇರೆಬೇರೆ ಮಹನೀಯರು ಬೇರೆಬೇರೆ ವಿಧವಾಗಿ ಹೇಳಿದ್ದಾರೆ. ಶ್ರೀ ಜೈಮಿನಿಮಹರ್ಷಿಗಳು "ಚೋದನಾಲಕ್ಷಣೋಽರ್ಥೋ ಧರ್ಮಃ" ಎಂದು ಹೇಳಿದ್ದಾರೆ. ಎಂದರೆ 'ಇದನ್ನು ಮಾಡು, ಇದನ್ನು ಬಿಡು' ಎಂಬ ಆಜ್ಞೆಗಳೆಂದರ್ಥ. ಶ್ರೀಕಣಾದಮಹರ್ಷಿಗಳು "ಯತೋಽಭ್ಯುದಯನಿಃಶ್ರೇಯಸಸಿದ್ಧಿಃ ಸ ಧರ್ಮಃ" ಎಂದು ಹೇಳಿದ್ದಾರೆ. ಎಂದರೆ ಯಾವದನ್ನು ಮಾಡುವದರಿಂದ ಈ ಲೋಕದ ಸುಖವೂ ಪರ-

ಲೋಕದ ಸುಖವೂ ದೊರೆಯುವದೊ ಅದೆಂದರ್ಥ. ಶ್ರುತಿಯಲ್ಲಿ "ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" ಎಂದಿದೆ. ಎಂದರೆ ಧರ್ಮವು ಜಗತ್ತಿಗೆಲ್ಲಾ ಆಧಾರವಾದದ್ದೆಂದರ್ಥ. ಧರ್ಮಶಬ್ದದ ಅವಯವಾರ್ಥವು ಈ ಅಭಿಪ್ರಾಯಕ್ಕೆ ಚೆನ್ನಾಗಿಹೊಂದುತ್ತದೆ. ಧರ್ಮವೆಂಬ ರೂಪವು 'ಧೃ' ಧಾತುವಿನಿಂದಾಗಿದೆ.

"ಧ್ರಿಯತೇ ಲೋಕೋಽನೇನ; ಧರತಿ ಲೋಕಂ ವಾ"

ಎಂಬ ವ್ಯುತ್ಪತ್ತಿಯ ಕಡೆಗೆ ಲಕ್ಷ್ಯವನ್ನು ಕೊಟ್ಟರೆ ಧರ್ಮವು ಜಗತ್ತಿನ ಸ್ಥಿತಿಗೆ ಕಾರಣವಾಗಿದೆಯೆಂಬುವದು ಸ್ಪಷ್ಟವಾಗಿ ಕಂಡುಬರುವದು. ಧರ್ಮವಿಲ್ಲದಿದ್ದರೆ ಜಗತ್ತಿನ ವ್ಯವಹಾರವೇ ನಾಗುವದಿಲ್ಲವೆಂಬರ್ಥವನ್ನು

"ಧರ್ಮ ಏವ ಹತೋ ಹನ್ತಿ ಧರ್ಮೋ ರಕ್ಷತಿ ರಕ್ಷಿತಃ"

ಎಂಬ ಸ್ಮೃತಿವಾಕ್ಯವು ಉದ್ಘೋಷಿಸುವದು. ನಾವು ಧರ್ಮವನ್ನು ಕಾಪಾಡಿದರೆ ಅದು ನಮ್ಮನ್ನು ಕಾಪಾಡುವದೆಂದೂ ನಾವು ಅದನ್ನು ಹಾಳುಮಾಡಿದರೆ ಅದು ನಮ್ಮನ್ನು ಹಾಳುಮಾಡುವದೆಂದೂ ಅದರ ತಾತ್ಪರ್ಯ. ಹೀಗೆ ಧರ್ಮವು ಜಗತ್ತಿಗೆ ಆಧಾರಸ್ವರೂಪವಾಗಿರುವದರಿಂದ ನಮಗೆ ನಮ್ಮ ಸುಸ್ಥಿತಿಯ ಆಶೆಯಿದ್ದರೆ ನಾವು ಅದನ್ನು ಊರ್ಜಿತಗೊಳಿಸಿ ಇಟ್ಟುಕೊಂಡಿರಬೇಕು.

## ಧರ್ಮದಿಂದ ಮನುಷ್ಯತ್ವ.

ಮನುಷ್ಯಜನ್ಮವೆಂದು ಬಂತೋ ಆಂದೇ ಧರ್ಮವು ಗಂಟುಬಿತ್ತೆಂದೇ ಹೇಳಬೇಕು. ಉಳಿದ ಯಾವ ಪ್ರಾಣಿಗೂ ಬುದ್ಧಿಯಿಲ್ಲ; ಆದ್ದರಿಂದ ಅವುಗಳಿಗೆ ಧರ್ಮದ ಬಂಧನವಿಲ್ಲ. ಮನುಷ್ಯನೊಬ್ಬನೇ ಬುದ್ಧಿಯುಳ್ಳ ಪ್ರಾಣಿ; ಆದ್ದರಿಂದ ಇವನು ಧರ್ಮದಂತೆ ನಡೆಯುವದಕ್ಕೆ ಬದ್ಧನಾಗಿದ್ದಾನೆ. ಬುದ್ಧಿಯೆಂಬುವದು ವಿವೇಕಶಕ್ತಿ; ಅಂದರೆ ಒಳ್ಳೇದನ್ನೂ ಕೆಟ್ಟದ್ದನ್ನೂ ಬೇರೆಬೇರೆ ಮಾಡಿ ತಿಳಿಯುವ ಶಕ್ತಿ. ದೇವರು ಮನುಷ್ಯನಿಗೆ ಬುದ್ಧಿಯನ್ನು ಕೊಟ್ಟಾಗಲೇ ಧರ್ಮವನ್ನೂ ಅಧರ್ಮವನ್ನೂ ತಿಳಿದು ಅಧರ್ಮವನ್ನು ಬಿಟ್ಟು ಧರ್ಮದಿಂದ ನಡೆಯುವ ಭಾರವನ್ನು ಅವನ ಮೇಲೆ ಹೇರಿದ ಹಾಗಾಯಿತು. ಧರ್ಮವನ್ನಾಚರಿಸುವ ಸಾಮರ್ಥ್ಯವಿರುವದರಿಂದಲೇ ಮನುಷ್ಯನು ಒಳ್ಳೆಯದನ್ನು ಹಿಡಿದು ಒಳ್ಳೇ ಗತಿಯನ್ನು ಪಡೆಯು

ವದಕ್ಕೂ ಕೆಟ್ಟದ್ದನ್ನು ಹಿಡಿದು ಕೆಟ್ಟಗತಿಯನ್ನು ಪಡೆಯುವದಕ್ಕೂ ಅಧಿಕಾರವುಳ್ಳವನಾದನು. ಉಳಿದ ಯಾವ ಪ್ರಾಣಿಗೂ ಈ ಅಧಿಕಾರವಿಲ್ಲ. ಅವು ತನ್ನ ತಮ್ಮ ಜನ್ಮದಲ್ಲಿ ಹಿಂದಿನ ತಮ್ಮ ಪಾಪದ ಫಲವನ್ನು ಅನುಭವಿಸಿ ಬಿಡುವದೆಷ್ಟೋ ಅಷ್ಟೇ ಸರಿ. ಒಂದು ಪಶು ತನಗೆ ಮನೆಯವರು ಮೇವನ್ನು ಹಾಕದಿದ್ದರೂ ಹಸರುಕಸಕಡ್ಡಿಯನ್ನು ಮೇದು ಬಂದು ತನ್ನ ಹೊಟ್ಟೆಯಲ್ಲಿದ್ದಷ್ಟು ಹಾಲನ್ನೆಲ್ಲಾ ಹಿಂಡಿಕೊಂಡವರಿಗೆ ಸುಮ್ಮನೇ ನಿಂತು ಕೊಡುತ್ತದೆಂದಿಟ್ಟುಕೊಳ್ಳೋಣ. ಇದರಿಂದ ಆ ಪಶುವಿಗೇನಾದರೂ ಉತ್ತಮಗತಿಯುಂಟೋ? ಇಲ್ಲ. ಹೊಟ್ಟೆಗೆ ತಕ್ಕಷ್ಟು ಸಿಕ್ಕದೆ ಇರುವದು ಅದರ ಪಾಪದ ಫಲ. ಹಿಂಡಿಕೊಂಡವರಿಗೆ ಹಾಲು ಕೊಡುವದು ಪಶುಸ್ವಭಾವ. ತಾನು ಯಾರಿಗೆ ಹಾಲು ಕೊಡಬೇಕೆಂಬುದನ್ನೂ ಯಾರಿಗೆ ಹಾಲು ಕೊಡಬಾರದೆಂಬುದನ್ನೂ ಯಾರ ಸಮಯವು ಹೇಗೆ ಇರುವದೆಂಬದನ್ನೂ ತಿಳಿದು ಅದು ತನಗೆ ಅಪಕಾರವನ್ನೆಣಿಸಿದವರಿಗಾದರೂ ಉಪಕಾರವನ್ನು ಮಾಡಬೇಕೆಂದು ಹಾಲು ಕೊಟ್ಟಿದ್ದರೆ ಆದಕ್ಕೆ ಉತ್ತಮಗತಿಯುಂಟಾಗುವದು ಯೋಗ್ಯವಾಗಿತ್ತು. ವಸ್ತುಸ್ಥಿತಿ ಹಾಗಿಲ್ಲ. ಪಶುವಿಗೆ ಆ ವಿವೇಕವಿಲ್ಲ. ಅದ್ದರಿಂದ ಅದಕ್ಕೆ ಸದ್ಗತಿಯಿಲ್ಲ. ಇದರಂತೆ ಅದು ಒಂದುದಿನ ತನ್ನನ್ನು ಸಾಕಿದವರ ಕಂದನನ್ನು ಇರಿದು ಕೊಂದಿತೆಂದು ಇಟ್ಟುಕೊಳ್ಳೋಣ. ಇದರಿಂದ ಅದಕ್ಕೆ ದುರ್ಗತಿಯೂ ಇಲ್ಲ. ಏಕೆಂದರೆ ಅದು ಆ ಅಕಾರ್ಯವನ್ನು ತಿಳಿದು ಮಾಡಿಲ್ಲ. ತನಗೆ ಆ ಕೂಸಿನಿಂದಾಗುತ್ತಿದ್ದ ಅಪಾಯವನ್ನೂ ಇರಿಯುವದರಿಂದ ತನ್ನಿಂದ ಆ ಮಗುವಿಗೆ ಆಗುವ ಅಪಾಯವನ್ನೂ ತೂಕಮಾಡಿ ನೋಡುವ ಸಾಮರ್ಥ್ಯವು ಅದಕ್ಕಿಲ್ಲ. ಒಟ್ಟು ತಾತ್ಪರ್ಯವೇನೆಂದರೆ ವಿವೇಕಶಕ್ತಿ ಇಲ್ಲದಿರುವ ಕಡೆ ಧರ್ಮದ ಬಂಧನವಿಲ್ಲ. ಮನುಷ್ಯನಿಗೆ ಅದು ಇರುವದರಿಂದ ಅವನು ಧರ್ಮಕ್ಕೆ ಬದ್ಧನಾಗಿದ್ದಾನೆ ಹೀಗಿದ್ದರೂ ಕೂಡ ಯಾವನಾದರೊಬ್ಬನು ಧರ್ಮದ ಕಟ್ಟನ್ನು ಮೀರಿ ನಡೆದರೆ ಅವನು ಮನುಷ್ಯನಾದರೂ ಪಶುವೇ. ಏಕೆಂದರೆ “ ಧರ್ಮೋ ಹಿ ತೇಷಾಮಧಿಕೋ ವಿಶೇಷಃ ” ಎಂಬ ನೀತಿಶಾಸ್ತ್ರಕಾರರ ವಚನದಂತೆ ಮನುಷ್ಯನಿಗೆ ಧರ್ಮವೊಂದು ಹೆಚ್ಚಿಗೆ ಇರುವದೇ ಅವನ ಮನುಷ್ಯತ್ವ. ಇದೇ ಅವನ ಉನ್ನತಿಗೆ ಕಾರಣ. ಇದರಿಂದಲೇ ಮನುಷ್ಯ

ಜನ್ಮದ ಶ್ರೇಷ್ಠತೆ. ಆದ್ದರಿಂದ ಶ್ರೀಪುರಂದರದಾಸರು ಮನುಷ್ಯಜನ್ಮವನ್ನು ತಮ್ಮದೊಂದು ಪದದಲ್ಲಿ ಹೊಗಳಿರುವದೇನೆಂದರೆ–

ರಾಗ ರೇಗುಪ್ತಿ ಅಟತಾಳ.

ಮಾನವ ಜನ್ಮ ದೊಡ್ಡದು । ಇದರ |
ಹಾನಿಮಾಡಲುಬೇಡಿ ಹುಚ್ಚಪ್ಪಗಳಿರಾ ॥ ಪ ॥

ಕಣ್ಣುಕೈಕಾಲ್ಕಿವಿ ನಾಲಿಗೆ ಇರಲಿಕೆ । ಮಣ್ಣುಮುಕ್ಕಿ ಹುಚ್ಚರಾಗುವರೆ? ॥
ಹೆಣ್ಣುಮಣ್ಣಿಗಾಗಿ ಹರಿನಾಮಾಮೃತ । ಉಣ್ಣದೆ ಉಪವಾಸವಿರುವರೆ ಕೇಡಿ ॥೧॥
ಕಾಲನ ದೂತರು ಕೆಳಪಿಡಿದೆಳೆವಾಗ । ತಾಳುತಾಳೆಂದರೆ ತಾಳುವರೆ? ॥
ಧಾಳಿ ಬಾರದ ಮುನ್ನ ಧರ್ಮವ ಗಳಿಸಿರೋ । ಹಾಳುಸಂಸಾರದ ಸುಳಿಗೆ ಸಿಕ್ಕಲು ಬೇಡಿ ॥೨॥
ಏನುಕಾರಣ ಯದುಪತಿಯನು ಮರೆತಿರಿ । ಧನಧಾನ್ಯಪುತ್ರರು ಕಾಯುವರೆ? ॥
ಇನ್ನಾದರೂ ಏಕೋಭಾವದಿ ಭಜಿಸಿರೋ । ಚೆನ್ನಾಗಿ ಪುರಂದರ ವಿಠಲನಾಮವ ಬೇಗ ॥೩॥

## ಧರ್ಮಮೂಲವು ಯಾವದು ?

ಮನುಷ್ಯನು ಧರ್ಮವನ್ನಾಚರಿಸುವದಕ್ಕೆ ಬದ್ಧನಾದನೆಂದ ಮೇಲೆ ಅವನು ಧರ್ಮಗಳ ಮತ್ತು ಅಧರ್ಮಗಳ ವಿಚಾರವನ್ನೆಲ್ಲಾ ತಿಳಿದುಕೊಂಡು ಅಧರ್ಮಗಳಿಂದ ಹಿಮ್ಮೆಟ್ಟಬೇಕು ಮತ್ತು ಧರ್ಮಗಳಲ್ಲಿ ಮುಂದುವರಿಯಬೇಕು. ಆ ಧರ್ಮಾಧರ್ಮಗಳನ್ನು ಎಲ್ಲಿ ತಿಳಿದುಕೊಳ್ಳಬೇಕೆಂಬ ವಿಚಾರಕ್ಕೆ ಮನುಸ್ಮೃತಿಯಲ್ಲಿ ಹೇಳಿರುವದೇನೆಂದರೆ—

" ವೇದಃ ಸ್ಮೃತಿಸ್ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ ।
ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಮ್ ॥

ಇದರಂತೆ ನಮಗೆ ಧರ್ಮದ ವಿಷಯಕ್ಕೆ ನಾಲ್ಕು ಪ್ರಮಾಣಗಳಿವೆ.– (೧) ವೇದ, (೨) ಸ್ಮೃತಿ, (೩) ಸದಾಚಾರ, (೪) ಆತ್ಮಪ್ರಿಯ. ಇವುಗಳಲ್ಲಿ ಮೊದಮೊದಲನೆಯದಕ್ಕೆ ಹೆಚ್ಚುಹೆಚ್ಚು ಪ್ರಾಶಸ್ತ್ಯವುಂಟು. ಆತ್ಮಪ್ರಿಯಕ್ಕಿಂತ ಅಂದರೆ ತನಗೆ ಹಿತಕರವಾಗಿ ತೋರುವಮಾತ್ರಕ್ಕಿಂತ ಸದಾಚಾ

ರಕ್ಕೆ ಬೆಲೆ ಹೆಚ್ಚು. ಸದಾಚಾರಕ್ಕಿಂತ ಸ್ಮೃತಿಗೆ ಬೆಲೆ ಹೆಚ್ಚು. ಸ್ಮೃತಿಗಿಂತ ವೇದಕ್ಕೆ ಬೆಲೆ ಹೆಚ್ಚು. ವೇದದ ಮುಂದೆ ಪ್ರಶ್ನೆಯಿಲ್ಲ.

" ವಚಸಸ್ತಸ್ಯ ಸಪದಿ ಕ್ರಿಯಾ ಕೇವಲಮುತ್ತರಮ್ "

ಎಂಬ ವಾಕ್ಯದಂತೆ ಆದರಂತೆ ಮಾಡುವದೊಂದೇ ಆದಕ್ಕೆ ಉತ್ತರವೇ ಹೊರತು ಅದರ ಯುಕ್ತಾಯುಕ್ತತೆಯ ವಿಷಯದಲ್ಲಿ ಸಂಶಯಗೊಳ್ಳುವದು ಪ್ರಯೋಜನಕಾರಿಯಲ್ಲ. ಏಕೆಂದರೆ ವೇದವು ಸಾಕ್ಷಾದ್ದೇವರ ಮುಖದಿಂದ ನಿಃಶ್ವಾಸರೂಪದಲ್ಲಿ ಹೊರಬಿದ್ದದ್ದು. ತಂದೆಯ ಅನುಗ್ರಹಕ್ಕೆ ಪಾತ್ರನಾಗಬೇಕಾದರೆ ಮಗನು ತಂದೆಯ ಮಾತಿನ ಪ್ರತ್ಯಕ್ಷರವನ್ನು ಹಿಂದು ಮುಂದು ನೋಡದೆ ಹೇಗೆ ನಡೆಸಬೇಕೋ ಹಾಗೆ ದೇವರನುಗ್ರಹಕ್ಕೆ ಪಾತ್ರನಾಗಬೇಕಾದರೆ ದೇವರು ವೇದದಲ್ಲಿ ವಿಧಿಸಿರುವ ಆಜ್ಞೆಯ ಪ್ರತ್ಯಕ್ಷರವನ್ನು ಪಾಲಿಸುವದಕ್ಕೆ ಮನುಷ್ಯನು ಪ್ರಯತ್ನಪಡಬೇಕು. ಅಪಾರವಾದ ವೇದರಾಶಿಯಲ್ಲಿ ಒಂದಾನೊಂದು ಧರ್ಮದ ವಿಚಾರವು ಎಲ್ಲಿರುವದೆಂದು ತಿಳಿಯದೆ ಹೋದರೆ ಮತ್ತು ವೇದದಲ್ಲಿ ಅದರ ಅರ್ಥವು ಸಂದಿಗ್ಧವಾಗಿದ್ದರೆ ಆಗ ಸ್ಮೃತಿಗೆ ಶರಣು ಹೋಗಬೇಕು. ಏಕೆಂದರೆ ಮಹಾಮಹಾ ಋಷಿಗಳು ತಮ್ಮ ದಿವ್ಯಜ್ಞಾನದಿಂದ ವೇದಾರ್ಥಗಳನ್ನೆಲ್ಲಾ ಸ್ಮರಣೆಗೆ ತಂದುಕೊಂಡು ತಮ್ಮ ತಮ್ಮ ಗ್ರಂಥಗಳನ್ನು ಮಾಡಿಟ್ಟಿದ್ದಾರೆ. ಆದ್ದರಿಂದ ಅವೂ ಪ್ರಮಾಣಗಳೆ. ಒಂದೊಂದು ವಿಚಾರದ ನಿರ್ಣಯವು ಸ್ಮೃತಿಯಲ್ಲಿಯೂ ದೊರೆಯದೆ ಹೋದರೆ ಸದಾಚಾರವನ್ನನುಸರಿಸಬೇಕು. ಸದಾಚಾರವೆಂದರೆ ಶಿಷ್ಟರ ನಡವಳಿಕೆ. ನಮಗೆ ಸಾಕ್ಷಾತ್ತಾಗಿ ಶ್ರುತಿಸ್ಮೃತಿಗಳ ಪರಿಚಯವಿರದಿದ್ದರೂ, ಶಿಷ್ಟರು ವೇದಗಳನ್ನೂ ಸ್ಮೃತಿಗಳನ್ನೂ ಅನುಸರಿಸುವವರಾದ್ದರಿಂದ, ನಾವು ಸುಮ್ಮನೆ ಶಿಷ್ಟರನ್ನು ಹಿಂಬಾಲಿಸಿದರೆ ಶ್ರುತಿಸ್ಮೃತಿಗಳ ನಿರ್ಣಯವನ್ನನುಸರಿಸಿದ ಫಲವೇ ಬರುವದು. ಇನ್ನು ಒಂದೊಂದು ವೇಳೆ ಶಿಷ್ಟರಲ್ಲಿಯೂ ಒಬ್ಬೊಬ್ಬರಲ್ಲಿ ಒಂದೊಂದು ಬಗೆಯ ಆಚರಣೆಗಳಿದ್ದರೆ ನಾವು ಅವುಗಳಲ್ಲಿ ನಮಗೆ ಪ್ರಿಯವಾಗಿ ತೋರಿದ್ದನ್ನು ಆರಿಸಿಕೊಳ್ಳಬಹುದು. ಧರ್ಮವನ್ನಾಚರಿಸುವದಕ್ಕೆ ಆತ್ಮಪ್ರಿಯವೂ ಒಂದು ಪ್ರಮಾಣವೆಂದು ತನ್ನ ಮನಸ್ಸಿಗೆ ಬಂದಂತೆ ನಡೆಯಹೋಗುವದು ತಪ್ಪು. ಆತ್ಮಪ್ರಿಯವು ಶಿಷ್ಟಾಚಾರಕ್ಕೆ

ಅವಿರುದ್ಧವಾಗಿಯೇ ಇರಬೇಕು. ಹಾಗೆಯೇ ಯಾವದಾದರೂ ಶಿಷ್ಟಾಚಾರವೆನಿಸಿರುವದು ಸ್ಮೃತಿಗೆ ಸಾಕ್ಷಾತ್ತಾಗಿ ವಿರೋಧವಾಗಿದ್ದರೆ ಅದು ನಿಂದ್ಯವೇ ಸರಿ. ಹಾಗೆಯೇ ಒಂದು ಸ್ಮೃತಿವಾಕ್ಯವು ಶ್ರುತಿಗೆ ವಿರೋಧವಾಗಿ ಕಂಡರೆ ಆ ಸ್ಮೃತಿವಾಕ್ಯವೂ ಅನುಸರಣೀಯವಲ್ಲ. ಹೀಗೆ ಹೇಳುವದರಲ್ಲಿ ಸ್ಮೃತಿ, ಸದಾಚಾರ, ಆತ್ಮಪ್ರಿಯ– ಇವುಗಳ ಪ್ರಮಾಣಬುದ್ಧಿಯನ್ನು ತಗ್ಗಿಸುವದು ತಾತ್ಪರ್ಯವಲ್ಲ. ಸ್ಮೃತಿಯು ಶ್ರುತಿಯನ್ನು ಹಿಂಬಾಲಿಸಿಯೇ ಇರುವದು. ಸದಾಚಾರವೂ ಶ್ರುತಿಸ್ಮೃತಿಗಳಿಗೆ ಅನುಗುಣವಾಗಿಯೇ ಇರುವದು. ಈ ಧೈರ್ಯವಿರುವದರಿಂದಲೇ ಧರ್ಮಜ್ಞಾನಕ್ಕೆ ಇದೇ ಮೂಲವೆಂದು ಸ್ಮೃತಿಯು ಈ ನಾಲ್ಕನನ್ನು ಕ್ರಮವಾಗಿ ಹೇಳಿರುವದು.

## ವೇದವೆಂದರೇನು ?

ವೇದವೆಂಬ ಶಬ್ದವು ಸಂಸ್ಕೃತದ ವಿದ್ ಎಂಬ ಧಾತುವಿನಿಂದಾಗಿದೆ. ವಿದ್ ಎಂದರೆ ತಿಳಿಯೋಣ, ಆದ್ದರಿಂದ ವೇದವೆಂದರೆ ಜ್ಞಾನದ ಭಾಂಡಾರವೆಂದಾಯಿತು. ವೇದದಲ್ಲಿ ಯಾವದರ ಜ್ಞಾನವಿದೆ? ಈ ವಿಷಯದಲ್ಲಿ ಶ್ರೀಸಾಯಣಾಚಾರ್ಯರು “ ಅಲೌಕಿಕಂ ಪುರುಷಾರ್ಥೋಪಾಯಂ ವೇತ್ತ್ಯನೇನೇತಿ ವೇದಶಬ್ದ ನಿರ್ವಚನಂ ” ಎಂದು ಬರೆದಿರುವರು. ಎಂದರೆ ಈ ಲೋಕದ ಸಂಬಂಧವಲ್ಲದಂಥ ಮತ್ತು ಧರ್ಮ, ಅರ್ಥ, ಕಾಮ, ಮೋಕ್ಷ– ಎಂಬ ಪುರುಷಾರ್ಥಗಳ ಸಾಧನವಾದಂಥ ಉಪಾಯವನ್ನು ತಿಳಿಸುವದರಿಂದ ಅದಕ್ಕೆ ವೇದವೆಂದರ್ಥ. ಈ ಲೋಕದ ಸಂಬಂಧವಾದ ಉಪಾಯಗಳನ್ನು ಈ ಲೋಕದವರು ತಮಗೆ ತಾವೇ ತಿಳಿದುಕೊಳ್ಳುತ್ತಾರೆ. ಅದಕ್ಕೆ ವೇದವೇಕೆ ಬೇಕು? ವೇದಶಬ್ದದ ಅರ್ಥವನ್ನು ಸ್ಪಷ್ಟವಾಗಿ ಹೇಳುವಂಥ ಮತ್ತೊಂದು ಶ್ಲೋಕವಿದೆ. ಅದೇನೆಂದರೆ–

“ ಪ್ರತ್ಯಕ್ಷೇಣಾನುಮಿತ್ಯಾ ವಾ ಯಸ್ತೂಪಾಯೋ ನ ಬುಧ್ಯತೇ ।
ಏನಂ ವಿದಂತಿ ವೇದೇನ ತಸ್ಮಾದ್ವೇದಸ್ಯ ವೇದತಾ ॥ ”

ಪ್ರತ್ಯಕ್ಷದಿಂದಾಗಲಿ ಅನುಮಾನದಿಂದಾಗಲಿ ಯಾವ ಉಪಾಯವನ್ನು ತಿಳಿಯುವದಕ್ಕಾಗುವದಿಲ್ಲವೊ ಅದನ್ನು ವೇದವು ತಿಳಿಸುವದರಿಂದಲೇ ವೇದಕ್ಕೆ ವೇದತ್ವ.

## ವೇದದ ಅಪೌರುಷೇಯತ್ವ.

ದೇವರು ಜಗತ್ತನ್ನು ಸೃಷ್ಟಿಸಿದಾಗಲೇ ಅವನ ಮುಖದಿಂದ ಅಪ್ರಯತ್ನಪೂರ್ವಕವಾದ ವೇದವಾಣಿಯುತ್ಪನ್ನವಾಯಿತು. ಆಗ ಮರೀಚಿ, ಸನಕ, ಸನಂದನ- ಮೊದಲಾದವರು ಅವುಗಳನ್ನು ಗ್ರಹಣಮಾಡಿ ಮುಂದಿನವರಿಗೆ ಉಪದೇಶ ಮಾಡುತ್ತ ಅವುಗಳ ಚಿರಸ್ಥಾಯಿತ್ವಕ್ಕೆ ತಳಹದಿಯನ್ನು ಹಾಕಿದರು. ಆದರೆ ಈಗ ವೇದಮಂತ್ರಗಳನ್ನು ನೋಡತೊಡಗಿದರೆ ಅವುಗಳಲ್ಲಿ ಒಂದೊಂದರ ಸ್ವಾಮಿತ್ವಸೂಚಕವಾಗಿ ಒಬ್ಬೊಬ್ಬ ಋಷಿಯ ಹೆಸರಿರುವದು. ಇದರಿಂದ ಆ ಮಂತ್ರವನ್ನು ಆ ಋಷಿಯೇ ನಿರ್ಮಿಸಿದನೆಂದು ತೋರಿಸುವದಕ್ಕವಕಾಶವುಂಟಾಗಿರುವದು. ನಿಜಸ್ಥಿತಿಯನ್ನು ನೋಡಿದರೆ ಋಷಿಗಳು ಋಕ್ಕುಗಳ ನಿರ್ಮಾಣಕರ್ತರಲ್ಲ. ಋಷಿಗಳೆಂದರೆ ಮಂತ್ರದ್ರಷ್ಟೃಗಳೆಂದರ್ಥ- ಎಂದರೆ ಮಂತ್ರಗಳನ್ನು ಕಂಡುಹಿಡಿದವರೆಂದರ್ಥ. ಕಂಡುಹಿಡಿಯುವದಕ್ಕೆ ಮುಂಚೆ ಅವುಗಳಿರಲೇಬೇಕಷ್ಟೆ. ಕೋಲಂಬಸನು ಕಂಡುಹಿಡಿಯುವದಕ್ಕೆ ಮುಂಚೆ ಅಮೇರಿಕಾಖಂಡವು ಇದ್ದೇ ಇತ್ತು. ನ್ಯೂಟನನು ಕಂಡುಹಿಡಿಯುವದಕ್ಕೆ ಮುಂಚೆ ಗುರುತ್ವಾಕರ್ಷಣಶಕ್ತಿಯು ಇದ್ದೇ ಇತ್ತು. ಹಾಗೆಯೇ ವಿಶ್ವಾಮಿತ್ರರ್ಷಿಗಳು ಕಂಡುಹಿಡಿಯುವದಕ್ಕೆ ಮುಂಚೆ ಗಾಯತ್ರೀಮಂತ್ರವಿದ್ದೇ ಇತ್ತು. ಕೋಲಂಬಸನು ಕಲ್ಲುಮಣ್ಣುಗಳನ್ನು ಕೂಡಿಸಿ ಅಮೇರಿಕಾಖಂಡವನ್ನು ಕಟ್ಟಲಿಲ್ಲ. ನ್ಯೂಟನನು ಹೊಸದಾಗಿ ಭೂಮಿಯಲ್ಲಿ ಗುರುತ್ವಾಕರ್ಷಣಶಕ್ತಿಯನ್ನುಂಟುಮಾಡಲಿಲ್ಲ. ಹಾಗೆಯೇ ವಿಶ್ವಾಮಿತ್ರರು ಗಾಯತ್ರೀಮಂತ್ರವನ್ನು ರಚಿಸಲಿಲ್ಲ. ಮಹರ್ಷಿಗಳು ಪರಮಾತ್ಮಧ್ಯಾನದಲ್ಲಿ ತಲ್ಲೀನರಾಗಿ ತಮ್ಮ ದೇಹದ ಅರಿವಿಲ್ಲದೆ ಇರುವಾಗ ಅವರಿಗೆ ಒಳಗೇ ಸ್ಫೂರ್ತಿಯಾದ ನುಡಿಗಳೇ ವೇದಗಳು. ಇನ್ನು ಕೆಲವರು ಋಷಿಗಳು ಕೆಲಕೆಲವು ಮಂತ್ರಗಳ ರಕ್ಷಣೆಯ ಭಾರವನ್ನು ಹೊತ್ತು ಅವುಗಳನ್ನು ತಮ್ಮ ಶಿಷ್ಯಪರಂಪರೆಯಲ್ಲಿ ಅವಿಚ್ಛಿನ್ನವಾಗಿ ಸಾಗಿಸಿದ್ದರಿಂದಲೂ ಅಥವಾ ಒಬ್ಬೊಬ್ಬ ಋಷಿಗಳು ಒಂದೊಂದು ಮಂತ್ರಾರ್ಥವನ್ನು ಸಿದ್ಧಿ ಮಾಡಿಕೊಳ್ಳುವದಕ್ಕಾಗಿ ತಮ್ಮ ಆಯುಸ್ಸನ್ನೆಲ್ಲಾ ವಿನಿಯೋಗಿಸಿದ್ದರಿಂದಲೂ ಜನಮಂಡಲಿ

ಯಲ್ಲಿ ಅವರ ವಿಷಯವಾದ ಕೃತಜ್ಞತೆಯ ಸೂಚಕವಾಗಿ ಆಯಾಮಂತ್ರಕ್ಕೆ ಆಯಾ ಋಷಿಗಳ ಸಂಬಂಧವುಂಟಾಗಿರಬಹುದು. ಇಷ್ಟೇ ಹೊರತು ಲೌಕಿಕನಾದ ಮನುಷ್ಯನು ತನ್ನ ಪಾಂಡಿತ್ಯದ ಪ್ರಭಾವದಿಂದ ಮನಸ್ಸಿನಲ್ಲಿ ವಿಚಾರಮಾಡಿ ಒಂದು ಕವಿತೆಯನ್ನು ಬರೆದಂತೆ ಋಷಿಗಳು ಮಂತ್ರವನ್ನು ಬರೆಯಲಿಲ್ಲ. ಲೌಕಿಕನಾದ ಮನುಷ್ಯನು ತನ್ನ ಕಾವ್ಯದ ಎಲ್ಲಾ ಬಾಧ್ಯತೆಯನ್ನೂ ತಾನೇ ಉಳಿಸಿಕೊಳ್ಳುವಂತೆ ಋಷಿಗಳು ಯಾವ ಮಂತ್ರದ ಸ್ವಾಮ್ಯವನ್ನೂ ಇಟ್ಟುಕೊಂಡಿಲ್ಲ. ಈ ಕಾರಣಗಳಿಂದ ವೇದವು ಅಪೌರುಷೇಯವಾದದ್ದು.

## ವೇದಗಳನ್ನು ಕಂಡ ರೀತಿ

ಲೋಕದಲ್ಲಿ ಮಹಾಮಹಾ ಪಂಡಿತರೆನಿಸಿಕೊಂಡಿರುವವರಿಗೆ ಕೂಡ ಪ್ರಯತ್ನಮಾಡಿದರೂ ಮಹತ್ತ್ವದ ವಿಚಾರಗಳು ಬುದ್ಧಿಯೆಂಬ ಸಮುದ್ರದಲ್ಲಿ ಮೇಲಕ್ಕೆ ತೇಲುವ ಸಂಭವಗಳೇ ಕಡಿಮೆಯಾಗಿರುವಾಗ ಮಹರ್ಷಿಗಳ ಬಾಯಲ್ಲಿ ಎಲ್ಲಾ ಲೌಕಿಕರ ಬುದ್ಧಿಗೂ ಮೀರಿದಂಥ ಉದಾತ್ತ ವಿಚಾರಗಳು ಪ್ರಯತ್ನವಿಲ್ಲದೆ ಪ್ರವಾಹರೂಪವಾಗಿ ಬಂದವೆನ್ನುವದು ಹೇಗೆ ಶಕ್ಯವಾಗಿದ್ದೀತೆಂದು ತೋರುವದು. ಆದರೆ ಬುದ್ಧಿಯಲ್ಲಿ ಉದಾತ್ತ ವಿಚಾರಗಳ ಸ್ಫೂರ್ತಿಯಾಗುವದುಂಟೆಂಬುದನ್ನು ನಾವು ಪ್ರತ್ಯಕ್ಷವಾಗಿ ಅನುಭವಿಸುತ್ತೇವೆ. ಇನ್ನು ಇದು ಕವಿತೆಯ ರೂಪವಾಗಿ ಅಲಂಕಾರದಿಂದ ಕೂಡಿ ಹೇಗೆ ಸ್ಫುರಿಯುಂತೆ ಹರಿದು ಬಂತೆಂದು ವಿಚಾರಮಾಡಿದರೆ ಲೌಕಿಕವಿಚಾರಗಳನ್ನು ಆಶುಕವಿತ್ವದಿಂದ ಹೇಳುವ ಎಷ್ಟೋ ಜನರನ್ನು ನಾವು ನೋಡುವೆವಲ್ಲ! ಆದರೆ ಇವುಗಳಿಗೆಲ್ಲಾ ಆಯಾಪುರುಷರ ಪ್ರಯತ್ನವುಂಟು. ಪ್ರಯತ್ನವಿಲ್ಲದ ಕವಿತೆಯನ್ನೂ ನಮ್ಮ ಇತಿಹಾಸದಲ್ಲಿ ತೋರಿಸಬಹುದು. ಶ್ರೀಮದ್ರಾಮಾಯಣವು ಆದಿಕಾವ್ಯವೆಂದು ಪ್ರಸಿದ್ಧವಾಗಿದೆ. ವೇದಗಳು ಅದಕ್ಕಿಂತ ಎಷ್ಟೋ ಹಿಂದೆ ಪ್ರಕಟವಾದವುಗಳು. ವೇದಗಳಿಗೂ ರಾಮಾಯಣಕ್ಕೂ ಜನ್ಮಕಾಲವಿದೇ ಎಂದು ಆಧುನಿಕಪಂಡಿತರು ತಮ್ಮ ಬುದ್ಧಿಯಿಂದ ಹುಡುಕಿ ತೆಗೆದಿದ್ದಾರೆ. ಆ ನಿರ್ಣಯವು ಎಷ್ಟರ ಮಟ್ಟಿಗೆ ನಿಜವೊ ನಮಗೆ ತಿಳಿಯದು. ಈಗ ನಾವು ಆ ಕಾಲ

ವಿಚಾರದ ಗೋಜಿನಲ್ಲಿ ಬೀಳುವದು ಬೇಡ. ಹಣ್ಣಿನ ಕಡೆಗೆ ಕೈಹಾಕದೆ ಮರದ ಎಲೆಯನ್ನು ಎಣಿಸುತ್ತ ಕುಳಿತುಕೊಳ್ಳುವದು ನಮಗೆ ತೃಪ್ತಿಯನ್ನೀಯಲಾರದು. ಒಬ್ಬ ಬಾಯಾರಿದವನು ನದಿಯ ಬಳಿಗೆ ಬಂದರೆ ಅವನು ಹಿಂದು ಮುಂದು ನೋಡದೆ ಬೊಗಸೆಯಲ್ಲಿ ನೀರನ್ನು ತೆಗೆದುಕೊಂಡು ಕುಡಿಯುತ್ತಾನೆ. ವ್ಯಾಪಾರದ ದೃಷ್ಟಿಯಿಂದ ಬಂದವನು ದಡದ ಮೇಲೆಯೇ ನಿಂತು ಆ ನೀರಿನ ಮೇಲೆ ಎಷ್ಟು ತೂಕದ ಹಡಗು ಹೋಗಬಹುದೆಂದು ಲೆಕ್ಕವನ್ನು ಹಾಕುತ್ತಾನೆ. ನಮಗೆ ಈಗ ಬೇಕಾಗಿರುವದು ತತ್ತ್ವಾರ್ಥ; ವ್ಯಾಪಾರವಲ್ಲ. ಅದ್ದರಿಂದ ಈಗ ನಾವು ಕಾಲನಿರ್ಣಯಕ್ಕೆ ಬಿದ್ದು ನೆಲಾಗುದ್ದಿ ಮೈನೋಯಿಸಿಕೊಳ್ಳುವದು ಹಿತವಲ್ಲ. ವೇದದ ಮತ್ತು ಶ್ರೀಮದ್ರಾಮಾಯಣದ ಕಾಲದ ನಿರ್ಣಯವೇನಾಗಿದ್ದರೂ ಶ್ರೀಮದ್ರಾಮಾಯಣವು ವೇದಕ್ಕಿಂತ ಬಹಳ ಈಚೀಚಿನದೆಂಬ ಮಾತಿಗೆರಡಿಲ್ಲ. ಶ್ರೀಮದ್ರಾಮಾಯಣದಲ್ಲಿ ಒಂದು ಕಥೆ ಬಂದಿದೆ. ಶ್ರೀವಾಲ್ಮೀಕಿಮಹರ್ಷಿಗಳು ಪ್ರಾತಃಕಾಲದ ಅನುಷ್ಠಾನಗಳನ್ನು ತೀರಿಸಿಕೊಂಡು ಮಧ್ಯಾಹ್ನದ ಸ್ನಾನಕ್ಕೆ ತಮಸಾ ಎಂಬ ನದಿಗೆ ಬರುತ್ತಿದ್ದಾರೆ. ದಾರಿಯಲ್ಲಿ ಒಂದು ಮರದ ಮೇಲೆ ಒಂದು ಕ್ರೌಂಚಕುಟುಂಬವು ಕುಳಿತಿದೆ. ಅದನ್ನು ಗುರಿಯಿಟ್ಟು ಹೊಡೆದು ಒಬ್ಬ ವ್ಯಾಧನು ಒಂದು ಹಕ್ಕಿಯನ್ನು ಕೆಳಗೆ ಕೆಡವಿದ್ದಾನೆ. ಆ ಹಕ್ಕಿಯ ಸಂಕಟವನ್ನು ನೋಡಿದ ಮಾತ್ರದಿಂದಲೇ ಶ್ರೀವಾಲ್ಮೀಕರ ಮನಸ್ಸು ಮರುಗಿ ಕರಗಿ ಹರಿಯಲಾರಂಭಿಸಿದೆ. ಆಗ ಅವರ ಬಾಯಿಂದ ತನ್ನಷ್ಟಕ್ಕೆ ತಾನೇ ಕೆಲವು ಶಬ್ದಗಳು ಹೊರಬಿದ್ದಿವೆ. ಆ ಮೇಲೆ ಆ ಋಷಿಗಳು ಆ ಶಬ್ದಗಳನ್ನು ಮತ್ತೆ ನೆನಪಿಗೆ ತಂದುಕೊಂಡು ನೋಡುತ್ತಾರೆ. ಅದೊಂದು ಛಂದೋಬದ್ಧವಾದ ಶ್ಲೋಕವಾಗಿದೆ. ಆಗ ಅವರಿಗೆ ಆಶ್ಚರ್ಯವಾಗಿದೆ. ಆದರೆ ಆ ಆಶ್ಚರ್ಯದ ಜೊತೆಗೆ ಒಂದು ಬಗೆಯ ವಿಷಾದಕ್ಕೆ ಕಾರಣವಾಗಿದೆ. ಏನೆಂದರೆ ಆ ಶ್ಲೋಕವು ಆ ವ್ಯಾಧನಿಗೆ ಶಾಪರೂಪವಾಗಿದೆ. ಆ ಶ್ಲೋಕವನ್ನು ಕೆಳಗೆ ಕೊಡುತ್ತೇವೆ.

" ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ ।
" ಯತ್ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಮ್ ॥ "

ಅರ್ಥವೇನೆಂದರೆ—ಕ್ರೌಂಚದಂಪತಿಗಳಲ್ಲಿ ಕಾಮಮೋಹಿತವಾದ ಒಂದನ್ನು ನೀನು ಕೊಂದ ಕಾರಣದಿಂದ ಎಲೋ ವ್ಯಾಧನೆ, ನೀನು ಬಹುಕಾಲ ಬಾಳಬೇಡ. ಹೀಗೆ ತಮ್ಮ ಬಾಯಲ್ಲಿ ಮೊದಲೇ ಅಮಂಗಲವಾದ ಕವಿತೆಯು ಹೊರಬಿದ್ದದ್ದಕ್ಕಾಗಿ ಶ್ರೀ ವಾಲ್ಮೀಕಿಮಹರ್ಷಿಗಳು ಖೇದಗೊಂಡಿರುವಾಗ ಬ್ರಹ್ಮನು ಬಂದು ಆ ಶ್ಲೋಕಕ್ಕೇ ಮಂಗಲಕರವಾದ ಅರ್ಥವಿರುವದನ್ನು ತೋರಿಸಿ ಅದನ್ನೇ ಮೊದಲಿಗಿಟ್ಟುಕೊಂಡು ಶ್ರೀಮದ್ರಾಮಾಯಣವನ್ನು ರಚಿಸಬೇಕೆಂದು ಅವರಿಗೆ ಪ್ರೇರಿಸಿದ್ದಾನೆ. ಅದರ ಮಂಗಲಕರವಾದ ಅರ್ಥವೇನೆಂದರೆ—ಹೆ, ಲಕ್ಷ್ಮೀಪತಿಯೇ, ರಾಕ್ಷಸದಂಪತಿಗಳಲ್ಲಿ ಕಾಮಮೋಹಿತರಾದ ಒಬ್ಬರನ್ನು ನೀನು ಕೊಂದ ಕಾರಣದಿಂದ (ರಾವಣನನ್ನು ಕೊಂದದ್ದರಿಂದ) ನೀನು ಬಹುಕಾಲ ಚೆನ್ನಾಗಿ ಬಾಳು. ಈ ಅರ್ಥವು ಬ್ರಹ್ಮನ ಬಾಯಿಂದ ಬರುವವರೆಗೂ ಶ್ರೀ ವಾಲ್ಮೀಕರಿಗೆ ಅದರ ಸ್ಫೂರ್ತಿಯಾಗಲಿಲ್ಲ. ಇದರಿಂದ ಅಪ್ರಯತ್ನದಿಂದ ಕವಿತೆಯು ಹೊರಡುವದುಂಟೆಂಬುದಕ್ಕೆ ಮೇಲಿನ ಶ್ಲೋಕವು ಪುರಾಣದ ನಿದರ್ಶನವಾಯಿತು. ವೇದವು ಋಷಿಗಳ ಬಾಯಿಂದ ಹೊರಟದ್ದು ಹೀಗೆಯೇ. ಅವರು ದೇವರ ಧ್ಯಾನದಲ್ಲಿ ತನ್ಮಯರಾಗಿದ್ದಾಗ ತಮ್ಮ ಪ್ರಯತ್ನವಿಲ್ಲದೆ ಪಾರಮಾರ್ಥಿಕತತ್ತ್ವಗಳು ಹೊರಡುವದು ಶಕ್ಯವಾಗಿದೆ.

ಈಗಿನ ಕಾಲದಲ್ಲಿ ದೇವರ ಧ್ಯಾನದಲ್ಲಿ ತನ್ಮಯರಾಗುವಿಕೆಯೂ ಪುರಾಣದ ಮಾತೇ ಆಗಿದೆ. ಆದರೂ ಅಷ್ಟೇನೂ ಅಸಂಭವವಾಗಿ ಕಾಣಿಸುವದಿಲ್ಲ. ಏಕೆಂದರೆ ಪುರಂದರದಾಸರು ಇಂಥ ಸ್ಥಿತಿಯ ತಮ್ಮ ಅನುಭವವನ್ನು ತಮ್ಮದೊಂದು ಪದ್ಯದಲ್ಲಿ ಎಷ್ಟು ಚೆನ್ನಾಗಿ ವರ್ಣನೆ ಮಾಡಿದ್ದಾರೆ!

ರಾಗ—ಗೌಳಿವಂತು ಆದಿತಾಳ.

ಹುಚ್ಚು ಹಿಡಿಯಿತು । ಎನಗೆ । ಹುಚ್ಚು ಹಿಡಿಯಿತು ॥ ಪ ॥
ಅಚ್ಯುತನ ನಾಮವೆಂಬೊ । ಅಚ್ಚಮದ್ದು । ತಲೆಗೆ ಏರಿ ॥ ಅ. ಪ. ॥
ವಾಸುದೇವನೆಂಬ ನಾಮ ವದನದಲ್ಲಿ ಒದರುವೆ ಮಾಯಾ ।
ಪಾಶವೆಂಬೊ ಅಂಗಿಯನ್ನು ಹರಿದು ಹರಿದು ಹಾಕುವೆ ॥

ಕೇಶವನ ಪುಷ್ಪ ಮುಡಿದು ಕುಣಿದು ಕುಣಿದು ಆಡುವೆ । ಕೆಟ್ಟ ।
ದೋಷವೆಂಬ ಗೋವೆಯನ್ನು ಕೆದರಿ ಕೆದರಿ ಹಾಕುವಂಥ ॥ ೧ ॥
ಕೃಷ್ಣನಂಘ್ರಿಕಮಲದಲ್ಲಿ ಸೊರಗಿ ಸೊರಗಿ ಬೀಳುವೆ । ಭವ ।
ಕಷ್ಟವೆಂಬೊ ಕುಂಭವನ್ನು ಒಡೆದು ಒಡೆದು ಹಾಕುವೆ ॥
ನಿಷ್ಠರನು ಕಂಡು ಅವರ ಹಿಂದೆ ಹಿಂದೆ ತಿರುಗುವೆ । ಕಡು ।
ದುಷ್ಟರನ್ನು ಕಂಡು ನಾನು ಕಲ್ಲು ಕಲ್ಲು ಬೀಸುವಂಥ ॥ ೨ ॥
ಮಂದಮತಿಗಳನ್ನು ಕಂಡು ಮೂಕನಾಗಿ ಇರುವೆ । ಹರಿಯ ।
ನಿಂದೆ ಮಾಡಿದವನ ಮೇಲೆ ಮಣ್ಣು ಮಣ್ಣು ಚೆಲ್ಲುವೆ ॥
ಬಂಧುಬಳಗದವರೊಳಗೆ ದಾಸನಾಗಿ ಬಾಳುವೆ । ಎನ್ನ ।
ತಂದೆ ಪುರಂದರ ವಿಠಲನ ನೆನೆದು ಕುಣಿದು ಆಡುವೆ ॥ ೩ ॥

ಶ್ರೀಪುರಂದರದಾಸರ ಕಾಲದ ಈಚೆಗೆ ಕಲ್ಕತ್ತೆಯಲ್ಲಿ ಹೊಸ್ಸೆ ಹೊಸ್ಸೆ ಶ್ರೀರಾಮಕೃಷ್ಣಪರಮಹಂಸರು ಅವತಾರ ಮಾಡಿ ಈ ಸ್ಥಿತಿಯನ್ನು ಎಷ್ಟೋ ಜನರಿಗೆ ತೋರಿಸಿರುವರು. ಋಷಿಗಳ ಕಾಲಕ್ಕಂತು ಈ ಸ್ಥಿತಿಯು ಪರಮಾವಧಿಯ ಸ್ಥಿತಿಯಲ್ಲಿತ್ತಾದ್ದರಿಂದ ಅವರಿಗೆ ದೇಹಭಾನ ವಿಲ್ಲದಂಥ ಸಮಾಧಿಸ್ಥಿತಿಯು ಶಕ್ಯವಾಗಿತ್ತು. ಅವರ ಮನೋಭೂಮಿ ಕೆಯು ಅತ್ಯಂತ ಶುದ್ಧವಾಗಿದ್ದು ಅವರಲ್ಲಿ ಪರಮಾತ್ಮನ ಆವಿರ್ಭಾವದ ಹೊರತು ಮತ್ತೊಂದಿರಲಿಲ್ಲವಾದ್ದರಿಂದ ಪರಮಾತ್ಮನ ಮುಖದಿಂದ ಬರುವ ವೇದವು ಅವರ ಮುಖದಿಂದ ಹೊರಬೀಳುವದೂ ಶಕ್ಯವಾಗಿತ್ತು.

## ವೇದದ ಪ್ರಾಮಾಣ್ಯ.

ವೇದವೇ ನಮ್ಮ ಹಿಂದೂಧರ್ಮಕ್ಕೆ ಮುಖ್ಯವಾದ ಪ್ರಮಾಣಗ್ರಂಥ. ಈ ಮಾತು ವೇದದಲ್ಲಿ ಹೇಳಿರುವದೆಂದರೆ ಎಲ್ಲರೂ ತಲೆ ಬಗ್ಗಿಸುವರು. ವೇದವು ನಮ್ಮ ಹಿಂದುಸ್ಥಾನಕ್ಕೆ ಮಾನ್ಯವಾಗಿರುವದೊಂದು ಕಡೆ ಇರಲಿ; ಕೇವಲ ವಿಚಾರಪ್ರಧಾನರಾದ ಪಾಶ್ಚಾತ್ಯರು ಕೂಡ ಇದರ ಅಗಾಧ ಮಹಿಮೆಯ ಕಡೆಗೆ ಕಣ್ಣುಹಾಕಿ ನೋಡಿ ಬೆರಗಾಗಿ ಇದಕ್ಕೆ ಆತ್ಮಾ ರ್ಪಣವನ್ನು ಮಾಡಿದ್ದಾರೆ. ಇದಕ್ಕೊಂದೆರಡು ಮೂರು ನಿದರ್ಶನಗ ಳನ್ನು ಕೊಡುತ್ತೇವೆ. ಜರ್ಮನಿದೇಶದ ತತ್ತ್ವವೇತ್ತರಾದ ಶೋಪನ್ಹೇರ

ಸಾಹೇಬರು ಹೇಳಿರುವದರ ಭಾವಾರ್ಥವೇನೆಂದರೆ—

"ಈ ಜಗತ್ತಿನಲ್ಲೆಲ್ಲ ಉಪನಿಷತ್ತುಗಳ ಅಧ್ಯಯನದಷ್ಟು ಶ್ರೇಯಸ್ಕರವಾದದ್ದು ಮತ್ತು ಹಿತದಾಯಕವಾದದ್ದು ಮತ್ತಾವುದೂ ಇಲ್ಲ. ಇವರ ಬಲದಿಂದಲೇ ನಾನು ಸಮಾಧಾನದಿಂದ ಜೀವಧಾರಣ ಮಾಡುತ್ತಿದ್ದೇನೆ ಮತ್ತು ಇದರ ಬಲದಿಂದಲೇ ನಾನು ಸಮಾಧಾನದಿಂದ ದೇಹತ್ಯಾಗವನ್ನು ಮಾಡುವೆನು."

ಪ್ರೊಫೆಸರ್ ಮ್ಯಾಕ್ಸಮುಲ್ಲರ್ ಸಾಹೇಬರು ಹೇಳಿರುವದರ ಭಾವಾರ್ಥವೇನೆಂದರೆ—"ಶೋಪನ್ಹೋರ ಸಾಹೇಬರ ಮೇಲೆ ಕಂಡ ಮಾತುಗಳಿಗೆ ಅನುಮೋದನವೇನಾದರೂ ಬೇಕಾಗಿದ್ದರೆ ಅದನ್ನು ನಾನು ಎಷ್ಟೋ ತತ್ತ್ವಶಾಸ್ತ್ರಗಳ ಮತ್ತು ಧರ್ಮಗಳ ಅಧ್ಯಯನಕ್ಕಾಗಿಯೇ ಧಾರೆಯೆರೆದ ನನ್ನ ದೀರ್ಘಾಯುಷ್ಯದ ಅನುಭವವೆಂದು ಕೊಡಲು ಸಿದ್ಧನಾಗಿದ್ದೇನೆ. ತತ್ತ್ವಶಾಸ್ತ್ರವೆಂಬುದು ಮರಣಕ್ಕೆ ಸಂತೋಷದಿಂದ ತಲೆಗೊಡುವದಕ್ಕೆ ಸಿದ್ಧತೆಗಾಗಿಯೇ ಇರುವದಾದರೆ ಇಂಥ ತತ್ತ್ವಶಾಸ್ತ್ರವು ವೇದಮೂಲಕವಾದುದು ಒಂದೇ ಹೊರತು ಅನ್ಯವಾದುದನ್ನು ನಾನರಿಯೆನು."

ವಿಕ್ಟರಕಝಿನ ಸಾಹೇಬರು ಹೇಳಿರುವದರ ಭಾವಾರ್ಥವೇನೆಂದರೆ—"ಯೂರೋಪಿನಲ್ಲಿ ಹರಡುವದಕ್ಕೆ ಪ್ರಾರಂಭವಾಗಿರುವ ಪೂರ್ವದೇಶಗಳ—ಮುಖ್ಯವಾಗಿ ಹಿಂದುಸ್ಥಾನದ—ತತ್ತ್ವಶಾಸ್ತ್ರವಿಚಾರಗಳನ್ನು ಗಮನವಿಟ್ಟು ನೋಡಿದರೆ ಅನೇಕತತ್ತ್ವಗಳು ತಿಳಿಯಬರುವವು. ಆತತ್ತ್ವಗಳು ಉದಾತ್ತವಾಗಿರುವವಲ್ಲದೆ ಕೆಲವು ವೇಳೆ ಯುರೋಪಿಯನ್ನರ ಬುದ್ಧಿಯು ಮುಂದಕ್ಕೆ ಹಾಯದೆ ನಿಂತಿರುವ ಎಷ್ಟೋ ವಿಚಾರಗಳಿಗಿಂತಲೂ ಮಹತ್ತ್ವದವುಗಳಾಗಿರುವದರಿಂದ ಪೂರ್ವದೇಶದ ತತ್ತ್ವಶಾಸ್ತ್ರಗಳ ಮುಂದೆ ನಾವೆಲ್ಲರೂ ತಲೆಯನ್ನು ಬಗ್ಗಿಸಬೇಕಾಗಿರುವದು. ಪೂರ್ವದೇಶವು ಸಮಸ್ತಜನಾಂಗಗಳಿಗೂ ಮೂಲಸ್ಥಾನವೆಂಬುದಿಷ್ಟೇ ಅಲ್ಲ ; ನಿರತಿಶಯವಾದ ತತ್ತ್ವಶಾಸ್ತ್ರಕ್ಕೂ ತವರುಮನೆಯಾಗಿರುವದು."

ಹೀಗೆ ವೇದವು ಪಾಶ್ಚಾತ್ಯರಿಗೆ ಕೂಡ ಮಾನ್ಯವಾಗಿರುವದೆಂದ ಮೇಲೆ ಇಲ್ಲಿಯವರಿಗೆ ಅದರ ಮೇಲೆ ಗೌರವಬುದ್ಧಿ ಇರುವದೇನು ಹೆಚ್ಚು?

ವೇದಕ್ಕೆ ಮೂಲಭೂತರಾದ ಋಷಿಗಳು ತಮ್ಮ ತನುಮನಧನಗಳನ್ನೆಲ್ಲಾ ಧರ್ಮಾನುಷ್ಠಾನಕ್ಕೆ ಧಾರೆಯೆರೆದು ತಮ್ಮ ಜೀವನಯಾತ್ರೆಯನ್ನೆಲ್ಲಾ ತನ್ಮಯವಾಗಿ ಮಾಡಿದವರಾಗಿದ್ದಾರೆ. ಯಾರು ಯಾವ ವಿಷಯದಲ್ಲಿ ಹೆಚ್ಚು ಪರಿಶ್ರಮವನ್ನು ಪಡೆದಿರುವರೋ ಅವರ ಬಾಯಿಂದ ಬಂದದ್ದು ಆ ವಿಷಯದಲ್ಲಿ ಪ್ರಮಾಣಭೂತವಾದದ್ದು. ರೋಗನಿದಾನವನ್ನು ತಿಳಿಯುವದಕ್ಕಾಗಿ ತಮ್ಮ ಜನ್ಮವನ್ನು ವಿನಿಯೋಗಿಸಿದಂಥ ವೈದ್ಯರ ಬಾಯಿಂದ ರೋಗಚಿಕಿತ್ಸೆಯ ವಿಷಯದಲ್ಲಿ ಯಾವ ಮಾತು ಬಂದರೂ ಯಾರೂ ಅದನ್ನು ಗೌರವಿಸದೆ ಬಿಡುವದಿಲ್ಲ. ಅದೇ ವೈದ್ಯರೇ ಜ್ಯೋತಿಶ್ಶಾಸ್ತ್ರದ ವಿಚಾರದಲ್ಲಿ ಏನಾದರೂ ಹಂಬಲಿಸಿದರೆ ಅದಕ್ಕೆ ಯಾರೂ ಉಪ್ಪು ಹಾಕುವದಿಲ್ಲ. ಅಂಥ ಮಾತಿಗೆ ತಮ್ಮ ತಮ್ಮ ಹಳ್ಳಿಯಲ್ಲಿರುವ ಬಡ ಜೋಯಿಸನ ಮಾತೇ ಪ್ರಮಾಣ. ಅದರಂತೆ ತತ್ತ್ವವಿಚಾರಕ್ಕೆ ನಮ್ಮ ಮಹರ್ಷಿಗಳ ಬಾಯಿಂದ ಬಂದ ಮಾತು ಪ್ರಮಾಣವಾಗುವದು ಸಯುಕ್ತಿಕವೂ ಆಗಿದೆ.

## ಪುರಾಣ.

**ಮೊದಲು** ವೇದವು ಒಂದೇ ಪ್ರಮಾಣಗ್ರಂಥವಾಗಿತ್ತು. ಬರಬರುತ್ತ ಮನುಷ್ಯರಲ್ಲಿ ಸಾತ್ತ್ವಿಕತೆಯು ಕಡಿಮೆಯಾಗುತ್ತ ಬುದ್ಧಿಯ ಸ್ವಚ್ಛತೆಯು ಮಾಸುತ್ತ ಬಂತು. ಹೀಗಾಗಿ ಶ್ರುತ್ಯರ್ಥವು ಜನರಿಗೆ ಹೊಳೆಯುವದು ಕಡಿಮೆಯಾಯಿತು. ಈ ಸ್ಥಿತಿಯನ್ನು ನೋಡಿ ಮಹರ್ಷಿಗಳಾದವರು ಜನರ ಮೇಲಿನ ಕನಿಕರದಿಂದ ವೇದಾರ್ಥವನ್ನು ತಮ್ಮ ಸ್ಮರಣೆಗೆ ತಂದುಕೊಂಡು ಬೇರೆ ಬೇರೆ ಸ್ಮೃತಿಗಳನ್ನು ಬರೆಯುವದಕ್ಕಾರಂಭಿಸಿದರು. ಕಾಲಚಕ್ರದಲ್ಲಿ ಇನ್ನೂ ಹೆಚ್ಚು ಕಡಿಮೆಯಾಗುತ್ತ ಬಂತು. ಮನುಷ್ಯರ ಮನಸ್ಸಿನಲ್ಲಿ ಸ್ಮೃತ್ಯರ್ಥವು ಬಿಂಬಿಸುವದೂ ಕಡಿಮೆಯಾಯಿತು. ಇಷ್ಟೇ ಅಲ್ಲ. ಧಾರ್ಮಿಕತತ್ತ್ವಗಳು ಹೇಳುವದಕ್ಕೆ ಮನೋಹರಗಳೇ ಹೊರತು ಆಚರಿಸುವದಕ್ಕೆ ಶಕ್ಯಗಳಲ್ಲವೆಂಬ ಕಲ್ಪನೆಯು ತಲೆ ಎತ್ತುವದು ಹೆಚ್ಚಾಯಿತು. ಆಗ ಋಷಿಗಳು ಕಾಲಕ್ಕೆ ತಕ್ಕ ಹಾಗೆ ಮನೋರಂಜಕವಾಗಿ ಅನೇಕವಾದ ಉದಾಹರಣೆಗಳನ್ನು ಕೊಟ್ಟು ಅವು

ಗಳ ಮೂಲಕವಾಗಿಯೇ ಧರ್ಮತತ್ತ್ವಗಳನ್ನು

" ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ "

ಎಂಬ ವಚನದಂತೆ ವಿವರಿಸಿ ಇತಿಹಾಸಪುರಾಣಗಳನ್ನು ರಚನೆ ಮಾಡಿರುವರು. ಇತಿಹಾಸಪುರಾಣಗಳಿಂದ ವೇದದ ಅರ್ಥವಿವರಣೆಯಾದ್ದಿಷ್ಟೇ ಅಲ್ಲ. ವೇದದ ಪ್ರತ್ಯಕ್ಷರವೂ ಅನುಷ್ಠಾನಕ್ಕೆ ಸಾಧ್ಯವೆಂಬರ್ಥವನ್ನು ಮನಗಾಣುವದಕ್ಕೆ ದಾರಿಯಾಯಿತು.

## ಧರ್ಮಸ್ವರೂಪದ ವಿಷಯದಲ್ಲಿ ಸಂದೇಹವಾದರೇನು ಮಾಡಬೇಕು ?

ವೇದಾರ್ಥವು ಇಷ್ಟೆಲ್ಲ ರೀತಿಯಿಂದಲೂ ಪ್ರಕಾಶಿತವಾಗಿದ್ದರೂ ಯಾವದಾದರೊಂದು ಧರ್ಮದ ವಿಷಯದಲ್ಲಿ ಮನಸ್ಸಿನಲ್ಲಿ ಇನ್ನೂ ಸಂಶಯವು ಬಾಧಿಸುತ್ತಿದ್ದರೆ ಆಗ ಅದರ ಪರಿಣಾಮಕ್ಕೇನುಪಾಯುವನ್ನು ಮಾಡಬೇಕೆಂಬದನ್ನು ಯಾಜ್ಞವಲ್ಕ್ಯಸ್ಮೃತಿಯು ಈ ಕೆಳಗಣ ಶ್ಲೋಕದಲ್ಲಿ ಹೇಳುತ್ತದೆ—

" ಚತ್ವಾರೋ ವೇದಧರ್ಮಜ್ಞಾಃ ಪರ್ಷತ್ತ್ರೈವಿದ್ಯಮೇವ ವಾ ।
ಸಾ ಬ್ರೂತೇ ಯಂ ಸ ಧರ್ಮಃ ಸ್ಯಾದೇಕೋ ವಾಽಧ್ಯಾತ್ಮವಿತ್ತಮಃ ॥"

ನಾಲ್ಕುವೇದಗಳ ಅಥವಾ ಮೂರುವೇದಗಳ ಧರ್ಮಗಳನ್ನು ತಿಳಿದ ನಾಲ್ವರಾಗಲಿ ಅಥವಾ ಆತ್ಮಜ್ಞಾನಿಯೊಬ್ಬನೇ ಆಗಲಿ ಯಾವದನ್ನು ಧರ್ಮವೆಂದು ಹೇಳುತ್ತಾನೊ ಅದು ಧರ್ಮವು. ಈ ಮಾತು ಬಹಳ ಸಯುಕ್ತಿಕವಾಗಿ ತೋರುತ್ತದೆ. ಧರ್ಮವಿಷಯಕವಾದ ಸಂದೇಹವು ಬಂದಾಗ ಇದೇ ಧರ್ಮವೆಂದು ನಿರ್ಣಯಿಸಿ ಹೇಳುವವನು ನಿಜವಾಗಿ ನಾಲ್ಕುವೇದಗಳ ಅಥವಾ ಮೂರುವೇದಗಳ ಅರ್ಥಜ್ಞಾನವುಳ್ಳವನಾಗಿದ್ದರೇ ಯೋಗ್ಯನಾಗುವದು. ಅಲ್ಲಿಷ್ಟಿಲ್ಲಿಷ್ಟು ವೇದದ ಹೊರಮೈಯನ್ನು ನೋಡಿದವನು ತನ್ನದೊಂದಭಿಪ್ರಾಯವನ್ನು ಮುಂದಿಟ್ಟರೆ ಅದು ಗ್ರಾಹ್ಯವಾಗಲಾರದು. ವೇದಾರ್ಥವನ್ನು ನಿರ್ಣಯಿಸುವವನ ಮನಸ್ಸು ವೇದಾರ್ಥಸಂಸ್ಕಾರದಿಂದ ತುಂಬಿ ತುಳಕುತ್ತಿರಬೇಕು. ಹೀಗಿದ್ದರೆ ಮಾತ್ರ ಅವನ ಮಾತಿನಲ್ಲಿ ವೇದಾರ್ಥದ ಜೀವಕಳೆಯು ಬರುವ ಸಂಭವವುಂಟು. ವೇದಾ

ರ್ಥವನ್ನು ತಿಳಿದ ನಾಲ್ವರ ಅಭಿಪ್ರಾಯವೂ ಒಬ್ಬ ಆತ್ಮಜ್ಞಾನಿಯ ಅಭಿ
ಪ್ರಾಯವೂ ಒಂದೇ ತೂಕವುಳ್ಳವುಗಳೆಂದು ಹೇಳುವದರಲ್ಲಿಯೂ ಒಂದು
ಅರ್ಥಸ್ವಾರಸ್ಯವಿದೆ. ಬರೀ ವೇದಾರ್ಥಜ್ಞರು ಶಬ್ದಾರ್ಥಗಳಲ್ಲಿ ಮಾತ್ರ
ವ್ಯವಹಾರಮಾಡತಕ್ಕವರಾಗಿರುವರು. ಆದರೂ ಅವರ ಮನಸ್ಸು ಎಣ್ಣೆ
ಯನ್ನು ಅರೆದ ಹಾಸಿನಂತೆ ಎಷ್ಟೋ ಮಟ್ಟಿಗೆ ಧರ್ಮಸ್ವರೂಪದ ಸಂಪರ್ಕ
ವುಳ್ಳದ್ದಾಗುವದು. ಆದರೆ ಅಷ್ಟು ಮಾತ್ರವೇ ಮನುಷ್ಯನ ಧ್ಯೇಯವಲ್ಲ.
ಸ್ನೇಹದ ಉಗಮಸ್ಥಾನವಾದ ಪರಮಾತ್ಮಸ್ವರೂಪವು ಹೃದಯದಲ್ಲಿ
ಒಡೆದು ಮೂಡುವದು ಮುಖ್ಯ. ಸಾಮಾನ್ಯರಾದ ವೇದಾರ್ಥಜ್ಞರಲ್ಲಿ
ಈ ಯೋಗ್ಯತೆಯು ಇರಲಾರದಾದ್ದರಿಂದ ಅವರ ಮೂಲಕವಾದ
ನಿರ್ಣಯಕ್ಕೆ ಅವರ ನಾಲ್ವರ ಗುಂಪು ಬೇಕು. ಯಾಕೆಂದರೆ ಅವರು ವಾಸ
ನೆಯನ್ನು ಹಿಡಿದು ಹೇಳುವವರಾಗಿದ್ದಾರೆ. ಆದ್ದರಿಂದ ಎಲ್ಲರಿಗೆ ಅಥವಾ
ಬಹುಜನಕ್ಕೆ ಯಾವ ವಾಸನೆಯು ತೋರುತ್ತದೊ ಆ ವಾಸನೆಯಿಂದ
ವಸ್ತು ನಿಶ್ಚಯವಾಗುತ್ತದೆ. ಆತ್ಮಜ್ಞಾನಿಯ ವಿಷಯದಲ್ಲಿ ಹಾಗಲ್ಲ.
ಅವನು ವೇದಮೂಲಕವಾಗಿಯಾದರೂ ಜ್ಞಾನವನ್ನು ಪಡೆದಿರಲಿ; ಅಥವಾ
ವೇದಮೂಲಕವಲ್ಲದೆ ದೇಶಭಾಷಾಗ್ರಂಥಪರಿಚಯ ಮತ್ತು ಗುರ್ವನು
ಗ್ರಹ— ಮೊದಲಾದವುಗಳಿಂದಲೇ ಜ್ಞಾನವನ್ನು ಪಡೆದಿರಲಿ; ಅವನು ವಾಸ
ನೆಯಿಂದ ವಸ್ತುವನ್ನು ನಿರ್ಣಯಿಸುವವನಲ್ಲ; ವಸ್ತುವನ್ನು ಸಾಕ್ಷಾತ್ತಾಗಿ
ಕಂಡವನಾಗಿದ್ದು ಅದನ್ನು ಹೇಳುವಂಥವನಾಗುವನು. ಜ್ಞಾನಿಯಾಗಿರು
ವವರಿಗೆಲ್ಲಾ ಸಾಕ್ಷಾತ್ತಾಗಿ ಅಥವಾ ಪರೋಕ್ಷವಾಗಿ ವೇದಾರ್ಥದ
ಮೂಲಕವೇ ಜ್ಞಾನವಾಗಿರುವದು.

ಪ್ರತ್ಯಕ್ಷವಾಗಿ ವೇದದ ಪರಿಚಯವಿಲ್ಲದ ಜ್ಞಾನಿಗಳಲ್ಲಿ ವೈದಿಕಶಬ್ದ
ಗಳ ಕೊರತೆಇದ್ದರೂ ವೇದಾರ್ಥದ ಕೊರತೆ ಇರುವದಿಲ್ಲ. ಯಾಕೆಂದರೆ
ವೇದಪುರುಷನು ಅವರ ಹೃದಯದಲ್ಲಿ ಆವಿರ್ಭವಿಸಿರುವನು. ಆದ್ದರಿಂದ
ಅವರ ಬಾಯಿಂದ ಬರುವದೆಲ್ಲಾ ಧರ್ಮವಲ್ಲದೆ ಇನ್ನೊಂದಾಗದು.
ಮೊನ್ನೆಮೊನ್ನೆ ಕಲ್ಕತ್ತೆಯಲ್ಲಿ ಆಗಿಹೋದ ಶ್ರೀ ರಾಮಕೃಷ್ಣಪರಮ
ಹಂಸರು ವೇದಗಳನ್ನಧ್ಯಯನಮಾಡಿದವರಲ್ಲದಿದ್ದರೂ ಅವರ ಮಾತು
ಗಳೆಲ್ಲಾ ಸರ್ವವೇದಸಾರಸಂಗ್ರಹಭೂತಗಳಾಗಿರುವದು ಈಗಲೂ ಕಣ್ಣಿಗೆ

ಕಟ್ಟಿದಂತೆ ಇದೆ. ಇಂಥ ಸಾಧುಸಂತರು ಇನ್ನೂ ಅಲ್ಲಲ್ಲಿ ಇದ್ದಾರೆ; ಮುಂದೆಯೂ ಇರುವರು. ಇವರೇ ನಮ್ಮ ದೇಶದ ಜೀವಸ್ಥಾನ. ಇವರ ಇರುವಿಕೆಗೆ ಅಭಾವವಾಯಿತೆಂದರೆ ನಮ್ಮ ದೇಶವು ಆತ್ಮವಿಲ್ಲದ ದೇಹದಂತೆಯೇ ಸರಿ. ಆದರೆ ಇಲ್ಲಿ ಒಂದು ವಿಷಯವನ್ನು ನೆನಪಿನಲ್ಲಿಡಬೇಕಾಗಿದೆ. ನಮ್ಮ ದೇಶದಲ್ಲಿ ಸಾಧುಗಳಿಗೆ ಗೌರವವು ಹೆಚ್ಚಾಗಿರುವದನ್ನು ಅನೇಕರು ನೋಡಿ ಯೋಗ್ಯತೆಯಿಲ್ಲದಿದ್ದರೂ ಸ್ವಾರ್ಥಬುದ್ಧಿಯಿಂದ ಸಾಧುಗಳೆಂಬ ಹೆಸರುವಾಸಿಯನ್ನು ಕಲ್ಪಿಸಿಕೊಂಡವರು ಬಹಳಜನರಿರುವರು. ಇಂಥವರ ಮಾತುಗಳಿಗೆಲ್ಲಾ ಮರುಳಾಗಬಾರದು. ನಿಜವಾದ ಸಾಧುಗಳ ಲಕ್ಷಣಗಳು ಭಗವದ್ಗೀತೆ, ಭಾಗವತ—ಮೊದಲಾದ ಕಡೆಗಳಲ್ಲಿ ವಿವರವಾಗಿ ಉಕ್ತವಾಗಿವೆ. ಆ ಲಕ್ಷಣಗಳನ್ನು ಒರೆಗಲ್ಲೆಂದು ತಿಳಿದುಕೊಂಡು- ಗಿಲೀಟನ್ನೂ ನಿಜವಾದ ಬಂಗಾರವನ್ನೂ ಒರೆಹಚ್ಚಿನೋಡಿ ಗೊತ್ತುಮಾಡುವಂತೆ- ವೇಷಧಾರಿಸಾಧುಗಳನ್ನೂ ಯೋಗ್ಯರನ್ನೂ ಪರೀಕ್ಷೆಯಿಂದ ಗೊತ್ತುಮಾಡಿಕೊಂಡು ಯೋಗ್ಯರ ಮಾತನ್ನು ಮಾತ್ರ ಗೌರವಿಸಬೇಕು. ದೇವರನ್ನು ಕಂಡವರ ಮನಸ್ಸಿನಲ್ಲಿ ಬರುವ ಕಲ್ಪನೆಯು ಒಂದು ಪಕ್ಷದಲ್ಲಿ ಹೊರಗಣ್ಣಿಂದ ನೋಡುವದಕ್ಕೆ ಧರ್ಮದ ವಿರುದ್ಧವಾಗಿ ಕಂಡರೂ ಒಳಗಣ್ಣಿಂದ ನೋಡಿದರೆ ಧರ್ಮಕ್ಕೆ ಅನುಗುಣವಾಗಿಯೇ ಇರುವದೆಂಬದಕ್ಕೆ ಪುರಾಣದಿಂದ ಒಂದು ಕಥೆಯನ್ನು ಉದಾಹರಿಸಬಹುದು. ಹಿಂದೆ ದುಷ್ಯಂತನೆಂಬ ಬಹು ಧರ್ಮಿಷ್ಠನಾದ ರಾಜನಿದ್ದನು. ಅವನು ಒಮ್ಮೆ ಕಣ್ವರ್ಷಿಗಳಾಶ್ರಮಕ್ಕೆ ಹೋದನು. ಅಲ್ಲಿ ಶಕುಂತಲೆಯೆಂಬಾಕೆಯು ಎಳೇಗಿಡಗಳಿಗೆ ನೀರೆರೆಯುತ್ತಿದ್ದಳು. ಆಗತಾನೇ ಯೌವನದ ಆವಿರ್ಭಾವವಾಗುತ್ತಿದ್ದ ಆಕೆಯನ್ನು ನೋಡುತ್ತಲೇ ದುಷ್ಯಂತನ ಮನಸ್ಸು ಆಕೆಯ ಕಡೆಗೆ ಹರಿದು ಕಾಮವಿಕಾರವನ್ನು ಪಡೆಯಿತು. ಯಾವಾಗಲೂ ಇಂಥ ವಿಕಾರಗಳಾಗುತ್ತಲೇ ಇರುವವರಿಗೆ ತಮ್ಮ ಮನಸ್ಸಿನಲ್ಲೊಂದು ವಿಪರೀತವಾದ ವಿಕಾರವಾಯಿತೆಂಬುದೇ ತಿಳಿಯದೆ ಹೋಗಬಹುದು. ಕಪ್ಪುಬಣ್ಣದ ಗೋಡೆಯ ಮೇಲೆ ಮಸಿಯು ಚೆಲ್ಲಿದರೆ ಅದು ಹೇಗೆ ಎದ್ದುಕಂಡೀತು? ಬಿಳೀಗೋಡೆಯ ಮೇಲೆ ಅದರ ಒಂದು ಹನಿ ಸಿಡಿದರೂ ಅದೇ ದೊಡ್ಡ

ದಾಗಿ ಕಾಣುವದು. ಹಾಗೆ ಯಾವಾಗಲೂ ಅಂಥ ವಿಕಾರಗಳಾಗದವರಿಗೆ ಒಮ್ಮೆ ಆಯಿತೆಂದರೆ ಮನಸ್ಸು ಗಾಬರಿಗೊಳ್ಳುವದು. ದುಷ್ಯಂತನು ಎಷ್ಟುಮಾತ್ರವೂ ವಿಷಯಾಸಕ್ತನಲ್ಲ. ನಾಟಕದವರು ದುಷ್ಯಂತನಲ್ಲಿ ಕಾಮಾಧಿಕ್ಯದ ಚೇಷ್ಟೆಗಳನ್ನೇನಾದರೂ ತೋರಿಸಿದರೆ ಅದು ಸಾಮಾನ್ಯ ಜನಸಮುಂಡಲಿಗೆ ಹಿತವಾದೀತೆಂದು ಕಲ್ಪಿಸಿಕೊಂಡದ್ದೇ ಹೊರತು ನಿಜ ವಾದ ದುಷ್ಯಂತನಲ್ಲಿ ಅದಿರಲಿಲ್ಲ. ಆದರೂ ಶಕುಂತಲೆಯನ್ನು ನೋಡಿದ ಕೂಡಲೆ ಅವನ ಮನಸ್ಸು ಚಲಿಸಿತು. ಒಡನೆ ಅವನಿಗೆ ಗಾಬರಿಯಾಯಿತು. ಏಕೆಂದರೆ ಬ್ರಹ್ಮರ್ಷಿಗಳ ಆಶ್ರಮದಲ್ಲಿರುವ ಆ ಕನ್ಯೆ ಬ್ರಾಹ್ಮಣವರ್ಣ ದ್ದೆಂದು ತೋರುತ್ತಿತ್ತು. ಆದ್ದರಿಂದ ಆಕೆಯ ಮೇಲೆ ಕ್ಷತ್ರಿಯನಾದ ತಾನು ದೃಷ್ಟಿಯನ್ನಿಡುವದು ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿತ್ತು. ಆಗ ತನ್ನ ಮನಃ ಶುದ್ಧಿಯ ವಿಷಯದಲ್ಲಿ ದೃಢವಾದ ನಂಬಿಕೆಯುಳ್ಳ ದುಷ್ಯಂತನು ಆಡಿರುವ ಮಾತು ಎಂದೆಂದಿಗೂ ನೆನಪಿಡತಕ್ಕದ್ದಾಗಿದೆ.

“ ಅಸಂಶಯಂ ಕ್ಷತ್ರಪರಿಗ್ರಹಕ್ಷಮಾ
ಯದಾರ್ಯಮಸ್ಯಾಮಭಿಲಾಷಿ ಮೇ ಮನಃ ॥
ಸತಾಂ ಹಿ ಸಂದೇಹಪದೇಷು ವಸ್ತುಷು
ಪ್ರಮಾಣಮಂತಃಕರಣಪ್ರವೃತ್ತಯಃ ॥ ”

ತಾತ್ಪರ್ಯವೇನೆಂದರೆ– “ ಶುದ್ಧವಾದ ನನ್ನ ಮನಸ್ಸು ಈಕೆಯನ್ನು ಬಯಸುವ ದನ್ನು ನೋಡಿದರೆ ಈಕೆಯು ಕ್ಷತ್ರಿಯನಾದ ನನ್ನಿಂದ ಪರಿಗ್ರಹಿಸುವ ದಕ್ಕೆ ತಕ್ಕವಳೆಂಬ ವಿಷಯದಲ್ಲಿ ಸಂಶಯವಿಲ್ಲ. ಏಕೆಂದರೆ ಯಾವದಾದ ರೊಂದು ವಿಚಾರದಲ್ಲಿ ಸತ್ಪುರುಷರಿಗೆ ಸಂಶಯವು ಬಂದಾಗ ಅವರ ಮನ ಸ್ಸಿನ ಒಲವೇ ಅದಕ್ಕೆ ಪ್ರಮಾಣವು. ” ಹೀಗೆಂದು ದುಷ್ಯಂತನು ಹೇಳಿರು ವದನ್ನು ನೋಡಿದರೆ ಶಕುಂತಲೆಯು ಬ್ರಹ್ಮರ್ಷಿಗಳ ಆಶ್ರಮದಲ್ಲಿದ್ದರೂ ಕ್ಷತ್ರಿಯಕನ್ಯೆಯಾಗಿರಬೇಕೆಂದು ತೋರುತ್ತದೆ. ಇನ್ನು ಒಳಗಣ್ಣಿನಿಂದ ನೋಡಿದರೆ ಆಕೆ ಕ್ಷತ್ರಿಯಕನ್ಯೆಯೇ ನಿಜ. ಆಕೆ ಮೇನಕೆಯ ಹೊಟ್ಟೆಯಲ್ಲಿ ವಿಶ್ವಾಮಿತ್ರನಿಂದ ಹುಟ್ಟಿದವಳು. ಈ ಕಥೆಯಿಂದ ನಮಗೆ ತಿಳಿಯುವದೇ ನೆಂದರೆ ಶುದ್ಧಮನಸ್ಸಿಗೆ ಬರುವ ಕಲ್ಪನೆಗಳೆಲ್ಲಾ ಧರ್ಮಕ್ಕೆ ಅನುಗುಣವಾ ಗಿಯೇ ಇರುತ್ತವೆ. ಆತ್ಮಜ್ಞಾನಿಗಳ ಮನಸ್ಸು ಶುದ್ಧಿಯ ಪರಮಾವಧಿ

ಯನ್ನು ಪಡೆದಿರುವದು. ಆದ್ದರಿಂದ ಅವರ ಮನಸ್ಸಿನ ಒಲವು ಯಾವದನ್ನು ಧರ್ಮವೆಂದು ತಿಳಿಯುವದೊ ಅದು ಧರ್ಮವಾಗಿದ್ದೇ ತೀರಬೇಕು. ಅದರಲ್ಲಿ ಸಂಶಯಕ್ಕೆ ಕಾರಣವಿಲ್ಲ. ಆದ್ದರಿಂದ ನಾಲ್ವರು ವೇದಾರ್ಥಜ್ಞರೂ ಒಂದೇ; ಒಬ್ಬ ಆತ್ಮಜ್ಞಾನಿಯೂ ಒಂದೇ. ಇದು ಶ್ಲೋಕಾರ್ಥ.

## ಸರ್ವಧರ್ಮಸಹಾನುಭೂತಿ.

ಇನ್ನೂ ವಿಚಾರಮಾಡಿದರೆ ಅಸಂಖ್ಯಾಕವೇದಾರ್ಥಜ್ಞರಿಗಿಂತ ಒಬ್ಬ ಆತ್ಮಜ್ಞಾನಿಯ ಮಾತಿನ ಬೆಲೆಯೇ ಹೆಚ್ಚೆಂದು ಕೂಡ ತಿಳಿಯುವದಕ್ಕೆ ದಾರಿಯಿದೆ. ವೇದದಲ್ಲಿ ಹೇಳಿರುವ ಧಾರ್ಮಿಕತತ್ತ್ವಗಳೆಲ್ಲಾ ಆತ್ಮಧ್ಯಾನದಲ್ಲಿ ಮಗ್ನರಾದಂಥವರ ಅತ್ಯಂತಶುದ್ಧವಾದ ಮನಸ್ಸಿನಲ್ಲಿ ಆವಿರ್ಭವಿಸಿ ಬಂದವುಗಳಾದ್ದರಿಂದ ಅವುಗಳಲ್ಲಿ ಎಳ್ಳಷ್ಟು ಕಲಂಕವಿರುವದಿಲ್ಲ.

"ದೃಷ್ಟಂ ಕಿಮಪಿ ಲೋಕೇऽಸ್ಮಿನ್ನ ನಿರ್ದೋಷಂ ನ ನಿರ್ಗುಣಂ"

ಎಂಬದೊಂದು ವಾಕ್ಯವಿದೆ. "ಜಗತ್ತಿನಲ್ಲಿ ಕಾಣಬರುವ ಯಾವದೂ ನಿರ್ದೋಷವೂ ಅಲ್ಲ; ನಿರ್ಗುಣವೂ ಅಲ್ಲ" ಎಂದು ಅದರ ಅರ್ಥ. ಇದರಂತೆ ಎಲ್ಲವೂ ಗುಣದೋಷಗಳ ಮಿಶ್ರಣವೇ ಆಗಿರುವದು. ಲೋಕದಲ್ಲಿ ಒಳ್ಳೆಯ ಪದಾರ್ಥವೆಂದರೆ ಗುಣಾಧಿಕ್ಯವುಳ್ಳದ್ದೆಂದೂ ಕೆಟ್ಟದ್ದೆಂದರೆ ದೋಷಾಧಿಕ್ಯವುಳ್ಳದ್ದೆಂದೂ ಅರ್ಥವೇ ಹೊರತು ಮತ್ತೇನೂ ಇಲ್ಲ. ಈ ನಿಯಮವು ಲೌಕಿಕವಾದ ವಸ್ತುಗಳಿಗೆ ಒಪ್ಪುವದೇ ಹೊರತು ವೇದಕ್ಕೆ ಒಪ್ಪುವದಿಲ್ಲ. ಲೌಕಿಕವಾದ ವಸ್ತುಗಳು ಸತ್ತ್ವ, ರಜ, ತಮ –ಎಂಬ ಮೂರುಗುಣಗಳಿಂದಾದವುಗಳು. ಅವುಗಳಿಗೆ ರಜ ಮತ್ತು ತಮ—ಈ ಗುಣಗಳ ಸಂಬಂಧವಿರುವದರಿಂದ ಆ ಸಂಬಂಧದ ಪ್ರಮಾಣಕ್ಕನುಸರಿಸಿ ಅವು ದೋಷಯುಕ್ತಗಳಾಗುವವು. ವೇದವು ಮಹರ್ಷಿಗಳ ಗುಣಾತೀತಸ್ಥಿತಿಯಲ್ಲಿ ಸ್ಫೂರ್ತಿಯಾದದ್ದು. ಆದ್ದರಿಂದ ಇದರಲ್ಲಿ ದೋಷದ ಲೇಶಕ್ಕೆ ಕೂಡ ಅವಕಾಶವಿಲ್ಲ. ಒಂದುಪಕ್ಷ ಅದು ತ್ರಿಗುಣಾತ್ಮಕವಾದ ಮುಖದಿಂದ ಹೊರಬಿದ್ದದ್ದೆಂಬ ನೆವವನ್ನು ಹಿಡಿದು ಆಗ್ರಹದಿಂದ ಅದರಲ್ಲಿ ಎಷ್ಟೇ ದೋಷವನ್ನು ಕಲ್ಪನೆ ಮಾಡಿದರೂ ಲೋಕದಲ್ಲಿ ಅದರಷ್ಟು ನಿರ್ದುಷ್ಟವಾದ ವಸ್ತು ಮತ್ತೊಂದಿಲ್ಲ. ಈ ಶುದ್ಧಸ್ವಭಾವದ ಪರಮಾ

ಮಧಿಯ ಪರಿಣಾಮಕ್ಕೆ ಇದರ ಒಂದುಗುಣವನ್ನು ಉದಾಹರಿಸಬಹುದು. ಅದು ಯಾವದೆಂದರೆ ಸರ್ವಧರ್ಮಸಹಾನುಭೂತಿ. ಲೋಕದಲ್ಲಿ ಎಷ್ಟೋ ಧರ್ಮಪಂಥಗಳಿವೆ. ಅವುಗಳೆಲ್ಲಾ ತಮ್ಮತಮ್ಮ ಪಂಥದವರ ಅಭ್ಯುದಯ ವನ್ನು ಬಯಸುವದರಲ್ಲಿ ತಮ್ಮ ಅಟ್ಟಹಾಸವನ್ನು ತೋರಿಸುವವೇ ಹೊರತು ಉಳಿದ ಪಂಥಗಳವರ ಮೇಲೆ ಸಹಾನುಭೂತಿಯ ಕಲ್ಪನೆಯನ್ನು ತಂದುಕೊಳ್ಳುವ ಸುಯೋಗವನ್ನು ಪಡೆದಿಲ್ಲ. ಲೋಕದಲ್ಲಿ ತಮ್ಮ ಪಂಥವು ಒಂದೇ ಸತ್ಪಂಥವೆಂದೂ ಉಳಿದವುಗಳೆಲ್ಲಾ ಅಸತ್ಪಂಥಗಳೆಂದೂ ಉಳಿದ ಪಂಥದವರು ಸದ್ಗತಿಯನ್ನು ಪಡೆಯಬೇಕಾದರೆ ತಮ್ಮ ಪಂಥಕ್ಕೇ ಶರಣು ಬರಬೇಕೆಂದೂ ಅವರ ನಂಬಿಕೆ. ನಮ್ಮ ವೈದಿಕಧರ್ಮಪಂಥವು ಹಾಗಲ್ಲ. ಇದರ ಉದಾರಹೃದಯವು ಇದುವರೆಗೆ ಆಗಿರುವ ಎಲ್ಲಾ ಧರ್ಮಪಂಥಗ ಳನ್ನೂ ಮುಂದೆಯೂ ಆಗಬಹುದಾದ ಎಲ್ಲಾ ಪಂಥಗಳನ್ನೂ ತನ್ನೊಳಗೆ ಅಡಗಿಸಿಕೊಳ್ಳುವಂಥ ವ್ಯಾಪಕಸ್ವಭಾವದ್ದು. ಇದು ಇತರಪಂಥಗ ಳನ್ನೆಂದಿಗೂ ಜರಿಯುವದಿಲ್ಲ; ಇತರಪಂಥದವರಿಗೆಲ್ಲಾ ನರಕವೆಂದು ನಿರ್ದಯದಿಂದ ಎಲ್ಲರನ್ನೂ ದುಃಖಕ್ಕೀಡುಮಾಡುವದಿಲ್ಲ. ಇಷ್ಟೇ ಅಲ್ಲ. ತನ್ನಿಂದಾದಷ್ಟು ಮಟ್ಟಿಗೆ ಉಳಿದ ಪಂಥಗಳಿಗೆಲ್ಲಾ ಉತ್ತೇಜನವೆ ಯನ್ನು ಕೊಡುವದು. ಉದಾಹರಣೆಗೆ ನೋಡಿರಿ. ಪಾರ್ಸಿಜನರು ತಮ್ಮ ದೇಶಕ್ಕೆ ದಾಳಿಯಿಟ್ಟ ಪರಧರ್ಮದವರ ನಿಷ್ಠುರಸ್ವಭಾವಕ್ಕೆ ವೈಗೊಟ್ಟು ನಿಲ್ಲಲಾರದೆ ದಿಕ್ಕುಗೆಟ್ಟು ಹಿಂದುಸ್ಥಾನಕ್ಕೆ ಬಂದಾಗ ಹಿಂದು ಜನರು ಅವರನ್ನು ಪರಧರ್ಮದವರೆಂದು ಕೆಟ್ಟಕಣ್ಣಿನಿಂದ ನೋಡದೆ ಅದು ಅವರ ಕರ್ಮಾನುಗುಣವಾದ್ದೆಂದು ಸಮಾಧಾನವನ್ನು ಮಾಡಿಕೊಂಡು ಅವ ರಲ್ಲಿ ಅವರ ಧರ್ಮವು ಸುರಕ್ಷಿತವಾಗಿರುವದಕ್ಕೆ ತಾವೂ ನೆರವಾಗಿರುತ್ತಾರೆ. ಈಗ ಹಿಂದುಸ್ಥಾನದಲ್ಲಿ ಎಷ್ಟೋ ಜನ ಪಾರ್ಸಿಯವರಿದ್ದಾರೆ; ಎಷ್ಟೋ ಜನ ಮುಸಲ್ಮಾನರಿದ್ದಾರೆ; ಎಷ್ಟೋ ಜನ ಕ್ರಿಶ್ಚಿಯನರಿದ್ದಾರೆ. ಹಿಂದು ಗಳು ಎಂದಾದರೂ ಅವರ ಯಾವದಾದರೊಂದು ಧರ್ಮಕ್ಕೆ ಧಕ್ಕೆಯನ್ನು ತಂದ ಉದಾಹರಣೆಗಳು ಹಿಂದೆ ಸಂಭವಿಸಲಿಲ್ಲ; ಮುಂದೆ ಸಂಭವಿಸುವ ದಿಲ್ಲ. ಹಿಂದುಗಳು ಪರಧರ್ಮದವರ ಮೇಲೆ ಕೈಮಾಡಿದ್ದರೆ ಅದು ಆ ಪರದೇಶೀಯರ ಧರ್ಮಘಾತಕತ್ವತನದ ಪರಿಹಾರಕ್ಕಾಗಿಯೇ ಹೊರತು

ಅವರ ಧರ್ಮಕ್ಕೆ ಧಕ್ಕೆಯನ್ನು ತರುವದಕ್ಕಲ್ಲ. ಪರಧರ್ಮದವರ ಧರ್ಮವನ್ನು ಹೊಲಸುಗೆಡಿಸುವ ಕುಹಕಯೋಚನೆಯು ಎಂದು ಹಿಂದುಗಳಿಗೆ ಬರುವದೊ ಅಂದು ಹಿಂದುಗಳು ಹಿಂದುಗಳೇ ಅಲ್ಲ. ಉಳಿದ ಪ್ರತಿಯೊಂದು ಧರ್ಮದವರೂ ಪರಧರ್ಮದವರನ್ನು ಧರ್ಮಾಂತರವಮಾಡಿ ತಮ್ಮೊಳಗೆ ಸೇರಿಸಿಕೊಳ್ಳುತ್ತಾರೆ. ಏಕೆಂದರೆ ಅವರಿಗೆ ಪರಧರ್ಮಸಹಾನುಭೂತಿ ಇಲ್ಲ. ಹಿಂದುಗಳು ಪರಧರ್ಮದವರನ್ನು ಎಂದಿಗೂ ಧರ್ಮಾಂತರವನ್ನು ಮಾಡಿ ಸೇರಿಸಿಕೊಂಡಿಲ್ಲ. ಏಕೆಂದರೆ ಇವರಿಗೆ ಪರಧರ್ಮಸಹಾನುಭೂತಿ ಇರುವದರಿಂದ ಅದರ ಅವಶ್ಯಕತೆ ಇಲ್ಲ. ಉಳಿದ ಸಂಘದವರೆಲ್ಲರೂ ತಮ್ಮತಮ್ಮ ಸಂಘದ ಶ್ರೇಯಸ್ಸನ್ನು ಹಾರೈಸಿದರೆ ಹಿಂದುಗಳು ದೇವರ ಮುಂದೆ ಪ್ರತಿದಿನವೂ "ಸರ್ವೇ ಲೋಕಾಃ ಸುಖಿನೋ ಭವಂತು" ಎಂದು ಸರ್ವಲೋಕದವರ ಹಿತವನ್ನೂ ಪ್ರಾರ್ಥಿಸುವವರಾಗಿದ್ದಾರೆ. ಭಿನ್ನಸ್ವರೂಪದಲ್ಲಿ ಕೂಡ ಏಕತ್ವದ ಕಡೆಗೇ ದೃಷ್ಟಿಯಿಡುವಂಥ ಹಿಂದುಧರ್ಮದಲ್ಲಿರುವ ಸರ್ವಧರ್ಮಸಹಾನುಭೂತಿಯ ಸ್ವರೂಪವನ್ನು ತಿಳಿಸುವದಕ್ಕೆ ಸಾಧಕವಾಗಿ ಶ್ರೀರಾಮಕೃಷ್ಣಪರಮಹಂಸರ ಕೆಲವು ಸೂಕ್ತಿಗಳನ್ನು ಈ ಕೆಳಗೆ ಕೊಡುತ್ತೇವೆ.—

(೧) ಒಂದು ಮಾಳಿಗೆಯ ಮೇಲಕ್ಕೆ ಒಬ್ಬನು ನಿಚ್ಚಣಿಗೆಯಿಂದ ಏರಬಹುದು; ಒಬ್ಬನು ಬಂಬಿನ ಮೇಲೆ ಹತ್ತಬಹುದು; ಮತ್ತು ಒಬ್ಬನು ಹಗ್ಗದಿಂದ ಸಾಗಬಹುದು. ಹಾಗೆಯೇ ದೇವರ ಸಾಮೀಪ್ಯವನ್ನು ಪಡೆಯುವದಕ್ಕೆ ಬೇರೆಬೇರೆ ದಾರಿಗಳೂ ಉಪಾಯಗಳೂ ಇವೆ. ಪ್ರಪಂಚದಲ್ಲಿರುವ ಪ್ರತಿಯೊಂದು ಮತವೂ ಅವುಗಳಲ್ಲೊಂದು ದಾರಿಯನ್ನು ತೋರಿಸುತ್ತದೆ.

(೨) ಬೇರೆಬೇರೆ ಮತಗಳು ಭಗವಂತನ ಬಳಿಗೆ ಸೇರುವ ಬೇರೆ ಬೇರೆ ದಾರಿಗಳು. ಕಲ್ಕತ್ತೆಯ ಸಮೀಪದಲ್ಲಿ ಕಾಳೀಘಾಟಿನಲ್ಲಿರುವ ಲೋಕಮಾತೆಯಾದ ಶಕ್ತಿಯ ದೇವಾಲಯಕ್ಕೆ ಹೋಗುವ ದಾರಿಗಳು ಎಷ್ಟೋ ಇವೆ. ಹಾಗೆಯೇ ಭಗವಂತನ ಸನ್ನಿಧಾನಕ್ಕೆ ಸೇರುವ ದಾರಿಗಳೂ ಬಹಳವಾಗಿವೆ. ಪ್ರತಿಯೊಂದು ಮತವೂ ಪರಮಾತ್ಮನ ಕಡೆಗೆ ಹೋಗುವ ಒಂದೊಂದು ದಾರಿಯೇ ಹೊರತು ಮತ್ತೇನೂ ಅಲ್ಲ.

( ೩ )ತನ್ನ ಧರ್ಮದಲ್ಲಿ ತನಗೆ ದೃಢನಿಷ್ಠೆ ಇರಬೇಕು. ಅಸಹಿಷ್ಣುತೆ, ದುರಭಿಮಾನ—ಇವುಗಳಿಗೆ ಮಾತ್ರ ಅವಕಾಶವನ್ನು ಕೊಡಬಾರದು.

( ೪ )ಬಾವಿಯೊಳಗಣ ಕಪ್ಪೆಯಂತೆ ಇರಬಾರದು. ಬಾವಿಯಲ್ಲಿರುವ ಕಪ್ಪೆ ತನ್ನ ಬಾವಿಗಿಂತ ದೊಡ್ಡ ವಸ್ತುವೇ ಇಲ್ಲವೆಂದು ತಿಳಿದಿರುವದು. ಮತವಿಷಯಕದುರಭಿಮಾನಿಗಳೆಲ್ಲರೂ ಹಾಗೆಯೇ. ಅವರಿಗೆ ತಮ್ಮ ಮತಕ್ಕಿಂತ ಯಾವದೂ ಹೆಚ್ಚಿನದಾಗಿ ಕಾಣುವದಿಲ್ಲ.

## ಪರಮಧರ್ಮ.

“ ವೇದವು ಅಪಾರವಾಗಿರುವದೆಂದು ಹೇಳಿರುವದನ್ನು ನೋಡಿದರೆ ಅದರಲ್ಲಿ ಅನೇಕಧರ್ಮಗಳ ಸಮಾವೇಶವಾಗಿರುವದೆಂದು ಸ್ಪಷ್ಟವಾಗುವದು. ಅತ್ಯಲ್ಪವಾದ ಆಯುಷ್ಯವುಳ್ಳವನಾಗಿಯೂ ದಿನದಿನಕ್ಕೆ ವಿಷಯೇಚ್ಛಾಪ್ರಾಬಲ್ಯದಿಂದ ದುರ್ಬಲವಾಗುತ್ತಿರುವ ಮನಸ್ಸುಳ್ಳವನಾಗಿಯೂ ಇರುವ ಮನುಷ್ಯನು ಆ ಎಲ್ಲ ಧರ್ಮಗಳನ್ನೂ ಅನುಷ್ಠಾನ ಮಾಡಿ ಮುಗಿಸುವದಕ್ಕೆ ಹೇಗೆ ಸಾಧ್ಯವಾದೀತು? ” ಎಂಬದೊಂದು ಸಂದೇಹವು ಯಾರಿಗಾದರೂ ಬರಬಹುದು. ಇದಲ್ಲದೆ ವೇದದಲ್ಲಿ ಹೇಳಿರುವಂಥ ಅನುಷ್ಠಾನಗಳು ಉಳಿದ ಧರ್ಮಪಂಥಗಳಲ್ಲಿ ಎಲ್ಲಿಯೂ ಹೇಳಿಲ್ಲವಾದರೂ ಧರ್ಮಪಂಥಗಳಿಂದ ಮೇಲೆ ಧರ್ಮವನ್ನು ಹೇಳಿಯೇ ತೀರಬೇಕಾದ್ದರಿಂದ ಅವುಗಳಲ್ಲಿಯೂ ಧರ್ಮವಿದ್ದೇ ಇರಬೇಕಾಗುವದು. ಇದನ್ನೆಲ್ಲಾ ಸಮಾಲೋಚನೆ ಮಾಡಿದರೆ ವೇದದಲ್ಲಿ ಹೇಳಿರುವಂಥ ಬಗೆಬಗೆಯ ಅನುಷ್ಠಾನಗಳಲ್ಲಿಯೂ ಮತ್ತು ಇತರಪಂಥದವರ ಬೇರೆಬೇರೆ ಪದ್ಧತಿಗಳಲ್ಲಿಯೂ ಯಾವದೋ ಒಂದು ಮುಖ್ಯತತ್ತ್ವವು— ಮಣಿಗಳಲ್ಲಿ ಸೂತ್ರವು ಹೇಗೋ ಹಾಗೆ— ಒಳಗೇ ತೂರಿಕೊಂಡಿರಬೇಕು. ಅದು ಯಾವದೆಂದರೆ ಯಾಜ್ಞ್ಯವಲ್ಕ್ಯಸ್ಮೃತಿಯು ತಾನೇ ಅದನ್ನು ಮುಂದಿಟ್ಟಿರುವದು.

“ ಇಜ್ಯಾಚಾರದಮಾಹಿಂಸಾದಾನಸ್ವಾಧ್ಯಾಯಕರ್ಮಣಾಮ್ ।
ಅಯಂ ತು ಪರಮೋ ಧರ್ಮೋ ಯದ್ಯೋಗೇನಾತ್ಮದರ್ಶನಮ್ ”

ವೇದದಲಿ ಯಜ್ಞ, ಆಚಾರ, ಇಂದ್ರಿಯನಿಗ್ರಹ, ಅಹಿಂಸಾ, ದಾನ, ವೇದಾ

ಧ್ಯಯನ- ಮೊದಲಾದ ಅನೇಕಧರ್ಮಗಳು ಉಕ್ತವಾಗಿವೆ. ಆದರೆ ಒಂದು ಪರಮಧರ್ಮವಿದೆ. ಅದು ಯಾವದೆಂದರೆ ಮನಸ್ಸನ್ನು ಏಕಾಗ್ರವಾಗಿ ಮಾಡಿ ಆತ್ಮಜ್ಞಾನವನ್ನು ಪಡೆಯುವದು. ಇದು ಉಳಿದ ಎಲ್ಲಾ ಧರ್ಮಗಳಿಗೂ ಜೀವರೂಪವಾದದ್ದು. ಇದೇ ಮುಖ್ಯ. ಉಳಿದುವೆಲ್ಲಾ ಇದಕ್ಕೆ ಸಾಧನ. ಮನುಷ್ಯನು ಸತ್ತ ಮೇಲೆ ಅವನಿಗೆ ಸದ್ಗತಿಯಾಗಲಿ ದುರ್ಗತಿಯಾಗಲಿ ಇದನ್ನವಲಂಬಿಸಿಕೊಂಡಿರುವದು.

"ನರಕೇ ಪಚ್ಯಮಾನಾನಾಂ ಯಮೇನ ಪರಿಭಾಷಿತಂ |

ಕಿಂ ತ್ವಯಾ ನಾರ್ಚಿತೋ ದೇವಃ ಕೇಶವಃ ಕ್ಲೇಶನಾಶನಃ ||"

ಎಂಬದೊಂದು ಶ್ಲೋಕವಿರುವದು. ಇದರಿಂದ ಮನುಷ್ಯನು ಸತ್ತ ಮೇಲೆ ಯಮನು ಅವನನ್ನು ಕುರಿತು ಸರ್ವದುಃಖಪರಿಹಾರಕವಾದ ಭಗವಚ್ಚಿಂತನದ ವಿಷಯಕವಾದ ಪ್ರಶ್ನೆಯನ್ನು ಹಾಕುವನೆಂದು ಸ್ಪಷ್ಟವಾಗುವದು. ವೇದಗಳನ್ನೆಲ್ಲಾ ಆಮೂಲಾಗ್ರವಾಗಿ ನೋಡಿ ವಿಭಾಗಮಾಡಿ ತಮ್ಮ ಸಿದ್ಧಾಂತದ ವಿಷಯದಲ್ಲಿ ಸೂತ್ರಗಳನ್ನು ರಚಿಸಿ ಆದರ ಅರ್ಥವಿವರಣೆಗಾಗಿ ಅಷ್ಟಾದಶಪುರಾಣಗಳನ್ನು ಬರೆದ ಭಗವಾನ್ ವ್ಯಾಸಮಹರ್ಷಿಗಳು ಕೊನೆಗೆ ಅಭಿಪ್ರಾಯಪಟ್ಟಿರುವದೇನೆಂದರೆ —

"ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃಪುನಃ |

ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ"

ತಾತ್ಪರ್ಯವೇನೆಂದರೆ- "ಸಮಸ್ತಶಾಸ್ತ್ರಗಳನ್ನೂ ಸಮಾಲೋಚನೆ ಮಾಡಿದ್ದಾಯಿತು; ಮತ್ತೆಮತ್ತೆ ಅದನ್ನು ವಿಚಾರಮಾಡಿದ್ದೂ ಆಯಿತು. ಇದೊಂದು ಮಾತು ಕೊನೆಗೆ ಗಟ್ಟಿಯಾಯಿತು. ಅದೇನೆಂದರೆ ಯಾವಾಗಲೂ ದೇವರ ನಾಮಸ್ಮರಣೆಯನ್ನು ಮಾಡಬೇಕು."

## ಯುಗಧರ್ಮ.

ನಮ್ಮ ಪೂರ್ವಜರ ಇತಿಹಾಸವನ್ನು ನೋಡಿದರೆ ಅತ್ಯಂತಕಷ್ಟಸಾಧ್ಯಗಳಾದ ತಪಶ್ಚರ್ಯೆಗಳನ್ನು ಮಾಡಿದವರೂ ಯಜ್ಞಯಾಗಾದಿಗಳನ್ನು ಮಾಡಿದವರೂ ನಮ್ಮ ಕಣ್ಣಮುಂದೆ ಬಂದು ನಿಲ್ಲುವರು. ಹೀಗಿರುವಾಗ ನಾವು ಆ ಆಯಾಸಕ್ಕೆ ಮೈಯ್ಯೊಡ್ಡದೆ ಅವರು ಪಡೆದ ಫಲವನ್ನು

ಮಾತ್ರ ಪಡೆಯಲಿಚ್ಛಿಸುವದು ಅವಿವೇಕರೂಪವಾಗಿ ಕಾಣಬಹುದು. ಒಳಹೊಕ್ಕು ವಿಚಾರಮಾಡಿದರೆ ಅದರ ಗುಟ್ಟು ತಿಳಿಯುವದು. ಸೃಷ್ಟಿಯಾದ ಮೊದಮೊದಲು ಜನರ ಮನಸ್ಸು ಸ್ವಭಾವವಾಗಿಯೇ ದೇವರ ಕಡೆಗೇ ಹರಿಯುತ್ತಿತ್ತು. ಮದಾಲಸೆಯೆಂಬಾಕೆಯ ಮಕ್ಕಳು ದೇವರ ವಿಷಯಕವಾದ ಜೋಗುಳದ ಪದವನ್ನು ಕೇಳಿದ ಮಾತ್ರದಿಂದಲೇ ವಿರಕ್ತರಾಗಿ ತಪಸ್ಸಿಗೆ ಹೋದರೆಂದು ಕಥೆಯಿದೆ. ಹುಟ್ಟಿದ ಮಕ್ಕಳೆಲ್ಲಾ ಹೀಗಾಗುತ್ತ ಬರಲು ಒಬ್ಬನಾದರೂ ಕುಲಪದ್ಧತಿಯನ್ನು ನಡೆಸುವದಕ್ಕೆ ಉಳಿದುಕೊಳ್ಳಲೆಂದು ಯೋಚಿಸಿ ಆಕೆಯ ಗಂಡನು ಆಕೆಯನ್ನು ಕುರಿತು ಆ ಜೋಗುಳವನ್ನು ಕೊನೆಯ ಮಗುವಿನ ಕಿವಿಯ ಮೇಲಾದರೂ ಹಾಕಬೇಡವೆಂದು ಅಂಗಲಾಚಿಕೊಂಡನು. ಇದರಿಂದೇನು ತೋರುವದೆಂದರೆ ಆಗ ಜನರ ಮನಸ್ಸು ಸ್ವಭಾವವಾಗಿಯೇ ದೇವರ ಕಡೆಗೆ ಇತ್ತು. ಅದಕ್ಕೆ ಉದ್ಬೋಧಕವಾಗಿ ಒಂದು ಮಾತು ಕಿವಿಗೆ ಬಿದ್ದರಾಯಿತು; ಗಾಳಿಯಿಂದ ಪುಟಗೊಂಡ ದೀಪದಂತೆ ಅದು ಹತ್ತಿಕೊಂಡು ಬಲುಬೇಗ ಜಾಜ್ವಲ್ಯಮಾನವಾಗುತ್ತಿತ್ತು. ಹೀಗೆ ಎಲ್ಲಾ ಜನರೂ ದೇವರನ್ನು ಅತಿಕುತೂಹಲದಿಂದ ಬಯಸುತ್ತಿರುವ ಕಾಲದಲ್ಲಿ ದೇವರು ಬಹಳ ತುಟ್ಟಿಯಾಗಿದ್ದನು. ಒಂದು ಪದಾರ್ಥವನ್ನು ಕೊಂಡುಕೊಳ್ಳುವವರ ಸಂಖ್ಯೆ ಹೆಚ್ಚಾದರೆ ಅದರ ಬೆಲೆ ಹೆಚ್ಚುವದು ಜಗತ್ತಿನಲ್ಲಿ ಸ್ವಾಭಾವಿಕವಾಗಿದೆ. ಆದ್ದರಿಂದ ಆಗ ಜನರು ದೇವರನ್ನು ಪಡೆಯಬೇಕಾದರೆ ಬಹು ಕಷ್ಟಸಾಧ್ಯವಾದ ಸಾಧನಗಳನ್ನು ಮಾಡಲೇ ಬೇಕಾಗಿತ್ತು. ಬರಬರುತ್ತ ಆ ಸ್ಥಿತಿ ಬದಲಾಗುತ್ತ ಬಂತು. ದೇವರ ಕಡೆಗೇ ಎಡೆಬಿಡದೆ ಹೋಗುತ್ತಿದ್ದ ಮನಸ್ಸಿನ ಪ್ರವೃತ್ತಿಯು ಮೆಲ್ಲಮೆಲ್ಲನೆ ಜನರಿಗೆ ಅರಿವಿಲ್ಲದಂತೆ ಸ್ವಲ್ಪಸ್ವಲ್ಪವಾಗಿ ಹೊರಮುಖವಾಗಿಯೇ ಹರಿಯುವದಕ್ಕಾರಂಭವಾಯಿತು. ಯಾವ ಯಾವ ಅಳತೆಯಿಂದ ಜನರು ದೇವರ ಕಡೆಯಿಂದ ಹಿಮ್ಮುಖರಾದರೆ ಆ ಅಳತೆಗೆ ತಕ್ಕಂತೆ ದೇವರು ತಾನೂ ಅಗ್ಗವಾಗುತ್ತ ಬಂದನು. ಜನರು ಅಪೇಕ್ಷಿಸದೆ ಇರುವಾಗಲೂ ತಾನು ತನ್ನ ಹೆಚ್ಚಿನ ಬೆಲೆಯನ್ನೇ ಇಟ್ಟುಕೊಂಡರೆ ತನ್ನನ್ನು ಕೇಳುವವರೇ ಇಲ್ಲವಾದೀತು! ಯಾರೂ ಕೇಳದೆ ಹೋಗಲೆಂದರೆ ಹೀಗೆ ಜನರು ತನ್ನಿಂದ ದೂರರಾಗುವದು ದೇವರಿಗೆ

ಸಮ್ಮತವಿಲ್ಲ. ಎಲ್ಲರೂ ತನ್ನ ಕಡೆಗೆ ಬಂದು ತನ್ನೊಡನೆ ಸುಖವಾಗಿರಬೇಕೆಂದೇ ದೇವರ ಇಚ್ಛೆ. ಆದ್ದರಿಂದ ಅವನು ತನ್ನನ್ನು ಅಗ್ಗವಾಗಿ ಮಾಡಿಕೊಳ್ಳಲೇ ಬೇಕು.

ದೇವರು ಹೇಗೆ ಹೇಗೆ ಅಗ್ಗವಾಗುತ್ತ ಬಂದನೆಂಬದನ್ನು ವಿಷ್ಣು ಪುರಾಣದ ಒಂದು ಶ್ಲೋಕವು ತಿಳಿಸುತ್ತದೆ—

“ಧ್ಯಾಯನ್ ಕೃತೇ ಯಜನ್ ಯಜ್ಞೈಸ್ತ್ರೇತಾಯಾಂ ದ್ವಾಪರೇಽರ್ಚಯನ್ ।
ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್ ॥”

ದೇವರು ಕಾಣಬೇಕಾದರೆ ಕೃತಯುಗದಲ್ಲಿ ದೇಹದ ಮೇಲೆ ಎಚ್ಚರವಿಲ್ಲದಂತೆ ಅಖಂಡಸಮಾಧಿಯಲ್ಲಿ ಎಷ್ಟೋ ಕಾಲವಿರಬೇಕಾಗಿತ್ತು; ತ್ರೇತಾಯುಗದಲ್ಲಿ ಬಹುಶ್ರಮದಿಂದಲೂ ಬಹುದ್ರವ್ಯದಿಂದಲೂ ಸಾಧ್ಯವಾದ ಯಜ್ಞಗಳಿಗೆ ಪ್ರಾಶಸ್ತ್ಯವಿತ್ತು; ದ್ವಾಪರಯುಗದಲ್ಲಿ ಪೂಜಾದಿಸಾಧನಗಳೇ ಸಾಕಾದವು; ಅಂಥ ಮಹತ್ವದ ಸಾಧನಗಳಿಂದ ಸಿಕ್ಕುತ್ತಿದ್ದ ಫಲದ ಬೆಲೆ ಕಲಿಯುಗದಲ್ಲಿ ನಾಮಸ್ಮರಣೆ. ಹೀಗೇಕಾಯಿತೆಂದರೆ ಹಿಂದಹಿಂದಿನ ಜನರು ಶರೀರಸ್ಥಿತಿಯಿಂದಲೂ ಮನಸ್ಸಿನ ಸ್ಥಿತಿಯಿಂದಲೂ ಹೆಚ್ಚು ಹೆಚ್ಚು ಬಲಿಷ್ಠರಾಗಿದ್ದರು. ಆದ್ದರಿಂದ ಅವರು ದೇವರನ್ನು ಪಡೆಯುವದಕ್ಕೆ ಹೆಚ್ಚು ಹೆಚ್ಚು ಬೆಲೆಯನ್ನು ಕೊಡಬೇಕಾಗಿತ್ತು. ಈಗಲೂ ಒಂದಂಗಡಿಯಲ್ಲಿ ಒಂದು ಪದಾರ್ಥವನ್ನು ಒಬ್ಬ ಬಡವನು ಬಯಸಿದರೆ ಅವನಿಗೆ ಅದು ಕಡಿಮೆಯಾದ ಬೆಲೆಗೆ ದೊರೆಯುವದು ಅದನ್ನೇ ಒಬ್ಬ ರಾಜನು ಬಯಸಿದರೆ ಅದಕ್ಕೆ ( *Royal price* ) ರಾಜಯೋಗ್ಯವಾದ ಹೆಚ್ಚಿನ ಬೆಲೆಯನ್ನು ಹಾಕುವದುಂಟು. ಕೃತಯುಗದಲ್ಲಿ ಜೀವಶಕ್ತಿಯು ಮೂಳೆಗಳನ್ನು ವ್ಯಾಪಿಸಿಕೊಂಡಿತ್ತು. ಇದರಿಂದ ರಕ್ತವೆಲ್ಲಾ ಒಣಗಿದರೂ ಮಾಂಸವೆಲ್ಲಾ ಕ್ಷೀಣಿಸಿದರೂ ಜೀವವಿರುತ್ತಿತ್ತು. ವಾಲ್ಮೀಕಿಮಹರ್ಷಿಗಳೇ ಮೊದಲಾದವರು ಮೈಯಮೇಲೆ ಹುತ್ತವು ಬೆಳೆದಿದ್ದರೂ ತಪಶ್ಚರ್ಯೆಯಲ್ಲಿಯೇ ಇದ್ದರೆಂಬ ಮಾತು ಇದರಿಂದ ಸಯುಕ್ತಿಕವಾಗಿರುವದು. ಹೀಗೆ ದೀರ್ಘಾಯುಸಿದ್ದದ್ದರಿಂದ ಅವರು ಅಖಂಡಸಮಾಧಿಯಲ್ಲಿ ಬಹುಕಾಲವಿದ್ದು ಪ್ರಯತ್ನಿಸುವದಕ್ಕೆ ಸಾಧ್ಯವಾಗಿತ್ತು. ಆ ಮೇಲೆ

ತ್ರೇತಾಯುಗದಲ್ಲಿ ಜೀವಶಕ್ತಿಯು ಮಾಂಸವನ್ನಾಶ್ರಯಿಸಿಕೊಂಡಿತ್ತು. ರಕ್ತವೆಲ್ಲಾ ಬಸಿದು ಹೋದರೂ ಮಾಂಸವು ಕರಗುವವರೆಗೂ ಜೀವವಿರುತ್ತಿತ್ತು. ಆದ್ದರಿಂದ ಬೇಕಾದಷ್ಟು ಶರೀರಶೋಷಣಮಾಡಿ ಯಜ್ಞಯಾಗಾದಿಗಳನ್ನು ಮಾಡುವದಕ್ಕಾಯಿತು. ಅಲ್ಲಿಂದ ದ್ವಾಪರಯುಗದಲ್ಲಿ ಜೀವಶಕ್ತಿಯು ರಕ್ತವನ್ನಾಶ್ರಯಿಸಿತು. ರಕ್ತವಿರುವವರೆಗೂ ಜೀವವಿರುತ್ತಿತ್ತು. ಆದ್ದರಿಂದ ಪೂಜೋಪಕರಣಾದಿಗಳನ್ನು ಸಂಗ್ರಹಿಸುವ ಕಷ್ಟವು ಸಹ್ಯವಾಯಿತು. ಈಗ ಕಲಿಯುಗದಲ್ಲಿ ಮೂಳೆಯೂ ಮಾಂಸವೂ ರಕ್ತವೂ ಎಲ್ಲವೂ ಇದ್ದರೂ ಜೀವಶಕ್ತಿಯು ಹಾರಿಹೋಗುತ್ತಿರುವದು. ಆದ್ದರಿಂದ ಹಿಂದಿನವರು ಸಹಿಸಿದ ಕಷ್ಟಗಳನ್ನು ಈಗಿನವರು ಸಹಿಸುವದು ಶರೀರದೃಷ್ಟಿಯಿಂದ ಸಾಧ್ಯವಿಲ್ಲ.

ಇನ್ನು ಮನಸ್ಸಿನ ದೃಷ್ಟಿಯಿಂದ ನೋಡಿದರೆ ಕೃತಯುಗದಲ್ಲಿ ಮನಸ್ಸಿನ ಪೂರ್ಣವು ಅಥವಾ ಬಹುಭಾಗವು ದೇವರ ಕಡೆಗೆ ಹರಿಯುತ್ತಿತ್ತು; ಹೊರಗಣ ವಿಷಯುಗಳ ಕಡೆಗೆ ಒಲಿಯುತ್ತಲೇ ಇರಲಿಲ್ಲ ಅಥವಾ ಒಲಿದರೂ ಬಹುಸ್ವಲ್ಪ. ಕಲಿಯುಗದಲ್ಲಿ ಮನಸ್ಸು ದೇವರ ಕಡೆಗೆ ಒಲಿಯುವದೇ ಇಲ್ಲ; ಒಲಿದರೂ ಬಹುಸ್ವಲ್ಪ; ವಿಷಯುಗಳ ಕಡೆಗೆ ಪೂರ್ಣವಾಗಿಯೇ ಹರಿಯುವದು ಅಥವಾ ಬಹುಭಾಗವಾದರೂ ಹೋಗುವದು. ಇದರಿಂದ ಮನಸ್ಸಿನ ಮೇಲೊಂದು ಬಗೆಯ ಪರಿಣಾಮವಾಗಿರುವದು. ಮನಸ್ಸು ದೇವರ ಕಡೆಗಿರುವ ಪ್ರಮಾಣಕ್ಕೆ ತಕ್ಕಂತೆ ಸಶಕ್ತವಾಗುವದು. ಏಕೆಂದರೆ ಅಲ್ಲಿ ಅದು ವಿಶ್ರಮಿಸಿಕೊಂಡು ಪುಷ್ಟಿಯನ್ನು ಪಡೆಯುವದು. ಮತ್ತು ವಿಷಯುಗಳ ಕಡೆಗಿರುವ ಪ್ರಮಾಣಕ್ಕೆ ತಕ್ಕಂತೆ ಅದು ದುರ್ಬಲವಾಗುವದು. ಏಕೆಂದರೆ ವಿಷಯುಗಳು ಒಂದರ ಹಿಂದೊಂದು ಯಾವಾಗಲೂ ಜಗ್ಗುತ್ತಲೇ ಇರುವದರಿಂದ ಅವರ ಹುರಿಕಟ್ಟಿಳಿದು ಹೋಗುವದು. ಇದು ಅದರ ಸ್ವಭಾವ. ಈಗಿನ ಮನಸ್ಸಿನವರ ಪ್ರವಾಹವೆಲ್ಲಾ ವಿಷಯುಗಳ ಕಡೆಗೆ ಒಂದೇ ಓಟದಿಂದ ಓಡುತ್ತಿರುವದು. ಆದ್ದರಿಂದ ಹಿಂದಿರುಗಿ ದೇವರ ಕಡೆಗೆ ಕಣ್ಣುಹಾಕಲಾರದು. ಹೀಗೆ ಶರೀರವೂ ಮನಸ್ಸೂ ಎರಡೂ ದುರ್ಬಲಗಳಾಗಿ ತನ್ನನ್ನು ಕೇಳುವವರೇ ದಿಕ್ಕಿಲ್ಲದೆ ಹೋದ

ದ್ದರಿಂದ ದೇವರು ತನ್ನನ್ನು ತಾನೇ ಅಗವಾಗಿ ಮಾಡಿಕೊಂಡನೆನ್ನ ಬಹುದು. ಹೀಗಾಗಿ ಕೃತಯುಗದಲ್ಲಿ ಬಹುಕಾಲದ ಅಖಂಡಸಮಾಧಿಗೆ ದೊರೆಯುತ್ತಿದ್ದವನು ಈಗ ಬರೀ ನಾಮಸ್ಮರಣೆಗೆ ಕೂಡ ದೊರೆಯುವನೆಂದು ಭಗವಾನ್ ವ್ಯಾಸಮಹರ್ಷಿಗಳ ಅಭಿಪ್ರಾಯ. ಈ ಅಗ್ಗವು ಮನುಷ್ಯರ ದೃಷ್ಟಿಯಿಂದಲೇ ಹೊರತು ದೇವರ ದೃಷ್ಟಿಯಿಂದ ಅಲ್ಲ. ದೇವರು ಹಿಂದಿನವರಿಗೊಂದು ಈಗಿನವರಿಗೊಂದು ಹೀಗೆ ಮಾಡಿಲ್ಲ. ಹೇಗೆಂದರೆ ಕೃತಯುಗದಲ್ಲಿ ಅಖಂಡಸಮಾಧಿಯಲ್ಲಿ ಬಹುಕಾಲವಿರುವದು ಎಷ್ಟು ಕಷ್ಟವೋ ಈಗ ಸಾಮಾನ್ಯವಾಗಿ ನಾಮಸ್ಮರಣೆಯನ್ನು ಮಾಡುವದು ಅಷ್ಟೇ ಕಷ್ಟ. ಮನಸ್ಸಿಗೆ ಹೊರಗಣ ಸೆಳೆತವು ಬಹಳವಾಗಿರುವದರಿಂದ ದೇವರ ಕಡೆಗೆ ತಿರುಗುವದೇ ಅದಕ್ಕೆಷ್ಟೋ ಕಷ್ಟ. ಆ ಮೇಲೆ ಅಲ್ಲಿಯೇ ನಿಲ್ಲುವದಂತು ಅತಿಕಷ್ಟ. ಹೀಗಿರುವದರಿಂದ ದೇವರ ಮೇಲೆ ಪಕ್ಷಪಾತವೆಂಬ ದೋಷವನ್ನು ಹೇರುವದಕ್ಕೆ ಇಲ್ಲಿ ಅವಕಾಶವಿಲ್ಲ.

## ಶ್ರದ್ಧೆ

ಪರಮಾತ್ಮನ ನಾಮಸ್ಮರಣೆಯಿಂದ ಅಥವಾ ಧ್ಯಾನದಿಂದ ಸದ್ಗತಿಯಾಗುವದನ್ನು ನಂಬುವದು ಹೇಗೆಂದು ಮನಸ್ಸಿಗೆ ತೋರಬಹುದು. ಈಗಿನ ಕಾಲದಲ್ಲಂತು ಜನರಿಗೆ ಪ್ರತಿಯೊಂದೂ ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾಗಬೇಕು ಅಥವಾ ವಿಚಾರಶಕ್ತಿಯಿಂದ ಅನುಮಾನಪ್ರಮಾಣಕ್ಕಾದರೂ ಒಳಗಾಗಬೇಕು. ಇವೆರಡಕ್ಕೂ ಕೂಡದಿದ್ದರೆ ಅದು ತಿರಸ್ಕರಣೀಯವೇ ಆಗಿದೆ. ಪಾಶ್ಚಾತ್ಯಪದ್ಧತಿಯು ನಮ್ಮ ದೇಶದಲ್ಲಿ ಕಾಲು ಚಾಚಿದಾಗಿನಿಂದ ಈ ಪರಿಸ್ಥಿತಿಯು ಬಹಳ ಬಲಿತುಕೊಂಡಿದೆ. ಪ್ರತ್ಯಕ್ಷ ಮತ್ತು ಅನುಮಾನ- ಇವೆರಡರಿಂದಲೇ ನಮ್ಮ ವ್ಯವಹಾರವೆಲ್ಲಾ ನಾಗುವದಿಲ್ಲ. ಆಪ್ತವಾಕ್ಯವೆಂಬದನ್ನು ಪ್ರಮಾಣವಾಗಿ ತೆಗೆದುಕೊಳ್ಳಬೇಕಾಗುತ್ತದೆ. ಒಬ್ಬನು ತನ್ನ ತಂದೆಯನ್ನು ತಂದೆಯೆಂದು ಪ್ರತ್ಯಕ್ಷದಿಂದ ತಿಳಿಯುವದಂತು ಶಕ್ಯವಿಲ್ಲ; ಏಕೆಂದರೆ ಗರ್ಭಕ್ಕೆ ಬಂದಾಗಿನ ಜ್ಞಾನವು ಯಾರಿಗೂ ಇರುವದಿಲ್ಲ. ಅನುಮಾನಕ್ಕೂ ಸಾಧನ

ವಿಲ್ಲ. ಸಾಕುವದರಿಂದ ಅನುಮಾನಿಸಬಹುದೆಂದರೆ ತುದೆಯಿಲ್ಲದ ಮಕ್ಕಳನ್ನು ಬಂಧುಗಳಲ್ಲೊಬ್ಬರು ಸಾಕುತ್ತಿರುವದುಂಟು. ಆದ್ದರಿಂದ ನೆರೆಹೊರೆಯವರು ಅಸ್ವಾರ್ಥಬುದ್ಧಿಯಿಂದ ಹೇಳುವದರ ಮೇಲೆ ನಂಬಬೇಕು; ಬೇರೆ ಉಪಾಯವೇ ಇಲ್ಲ. ಆ ನೆರೆಯವರ ಹೇಳಿಕೆಯೇ ಆಪ್ತವಾಕ್ಯ. ಅದರಂತೆ ದೇವರ ವಿಚಾರವನ್ನು ನಾವು ಮೊದಲೇ ಪ್ರತ್ಯಕ್ಷದಿಂದ ತಿಳಿಯುವದಂತು ಶಕ್ಯವಿಲ್ಲ; ಅನುಮಾನಕ್ಕೆ ತಕ್ಕ ಸಾಧನವಿಲ್ಲ ಮಹರ್ಷಿಗಳು ಅಸ್ವಾರ್ಥಬುದ್ಧಿಯಿಂದ ನಮ್ಮ ಮೇಲೆ ಅನುಗ್ರಹವನ್ನು ಮಾಡಿ ಪ್ರಕಟಿಸಿರುವ ವೇದವನ್ನು ನಂಬಬೇಕು. ಬೇರೆ ಉಪಾಯವೇ ಇಲ್ಲ. ದೇವರ ವಿಚಾರಗಳು "ನೈಷಾ ತರ್ಕೇಣ ಮತಿರಾಪನೇಯಾ" ಎಂಬ ಶ್ರುತಿಯಂತೆ ಬುದ್ಧಿಗೆ ನಿಲುಕ ತಕ್ಕವುಗಳಲ್ಲ

ಇದರ ಮೇಲೆ ಇನ್ನೊಂದು ವಿಷಯವಿದೆ. ಅದೇನೆಂದರೆ ತರ್ಕದಿಂದ ಯಾವದೂ ಸಿದ್ಧವಾಗುವದಿಲ್ಲ. ಒಬ್ಬನು ತನ್ನ ಬುದ್ಧಿಬಲದಿಂದ ಒಂದು ವಿಷಯವನ್ನು ಸಾಧಿಸಿದರೆ ಇನ್ನೊಬ್ಬನು ತನ್ನ ಬುದ್ಧಿಬಲದಿಂದ ಅದನ್ನು ಚೂರುಚೂರಾಗಿ ಕತ್ತರಿಸಿಬಿಡಬಹುದು. ತರ್ಕದ ಹಣೆಯು ಬರಹವೇ ಇಷ್ಟು. ತರ್ಕಕ್ಕೆಂದಿಗೂ ನಿಲುಗಡೆಯೇ ಇಲ್ಲವೆಂದು ಭಗವಾನ್ ವೇದವ್ಯಾಸರು ತಮ್ಮ ಶಾರೀರಕಸೂತ್ರಗಳಲ್ಲಿ "ತರ್ಕಾಪ್ರತಿಷ್ಠಾನಾತ್" ಎಂದೊಂದು ಸೂತ್ರವನ್ನ ರಚಿಸಿದ್ದಾರೆ. ಇಂಥ ತರ್ಕವನ್ನು ಕಟ್ಟಿಕೊಂಡು ದೇವರನ್ನು ಕಾಣುವದಕ್ಕೆ ಹೊರಟರೆ ಕಣ್ಣುಕಟ್ಟಿಕೊಂಡು ಕಾಡಿಗೆ ಹೋದಂತೆಯೇ ಸರಿ. ದೇವರನ್ನು ಕಾಣುವದಕ್ಕಂತು ಆಪ್ತವಾಕ್ಯವು ಬೇಕೇಬೇಕು. ಆಪ್ತವಾಕ್ಯವಾದ ವೇದದ ಮೇಲೆ ಅಶ್ರದ್ಧೆಯನ್ನು ತೋರಿಸುವದು ದೇವರಿಗೇ ಒಂದಪರಾಧವನ್ನು ಮಾಡಿದಂತಾಗುವದು. ಪರಮಾತ್ಮನ ಅವತಾರವೆನಿಸಿದ ಶ್ರೀರಾಮಚಂದ್ರನು ವನವಾಸದಲ್ಲಿ ತನ್ನ ತಂದೆಯ ಮರಣವಾರ್ತೆಯನ್ನು ಕೇಳಿದಾಗ ವೇದೋಕ್ತಪದ್ಧತಿಯಿಂದ ಶ್ರಾದ್ಧವನ್ನು ಮಾಡಬೇಕೆಂಬ ಯತ್ನವನ್ನು ನಡೆಸಿದ್ದನು. ಆಗ ಜಾಬಾಲಿಯೆಂಬ ಋಷಿಯು ಬಂದು ಅದರಿಂದೇನಾಗುವದೆಂದು ಮುಂತಾಗಿ ವಿಚಾರಶಕ್ತಿಯನ್ನು ಮುಂದುಮಾಡಿ ಶ್ರೀರಾಮನ ಶ್ರದ್ಧೆಯನ್ನು ಕದಲಿಸುವ

ಹಂಚಿಕೆಯನ್ನು ಮಾಡಿದನು. ಆಗ ಅದಕ್ಕೆ ಶ್ರೀರಾಮನು ಕೋಪಿಸಿಕೊಂಡನೆಂತಲೂ ಜಾಬಾಲಿಯು ತಾನು ಶ್ರೀರಾಮನ ಶ್ರದ್ಧಾವಿಶೇಷದ ಬಿಗಿಯನ್ನು ನೋಡುವದಕ್ಕೆ ಹೀಗೆ ಮಾಡಿದೆನೆಂದು ಹೇಳಿದನೆಂತಲೂ ಶ್ರೀಮದ್ರಾಮಾಯಣದಲ್ಲಿದೆ. ಶ್ರೀಕೃಷ್ಣನು ಭಗವದ್ಗೀತೆಯಲ್ಲಿ

" ಅಶ್ರದ್ಧಧಾನಾಃ ಪುರುಷಾಃ ಧರ್ಮಸ್ಯಾಸ್ಯ ಪರಂತಪ ।
ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥ "

ಎಂದು ಹೇಳಿದ್ದಾನೆ. ಈ ಧರ್ಮದಲ್ಲಿ ಅಶ್ರದ್ಧೆಯನ್ನು ಮಾಡುವಂಥವರು ಭಗವಂತನನ್ನು ಪಡೆಯದೆ ಮೃತ್ಯುರೂಪವಾದ ಸಂಸಾರಕ್ಕೆ ತಿರುಗುವರೆಂದು ಅದರರ್ಥ. ದೇವರನ್ನು ಕಾಣಬೇಕಾದರೆ " ಶ್ರದ್ಧಾವಾನ್ ಲಭತೇ ಜ್ಞಾನಂ " ಎಂಬ ಗೀತೋಕ್ತಿಯಂತೆ ಶ್ರದ್ಧೆಯು ಬೇಕೇಬೇಕು.

ಶ್ರದ್ಧೆಯ ಪರಿಣಾಮವು ಎಷ್ಟೋಮಟ್ಟಿಗೆ ಪ್ರತ್ಯಕ್ಷವಾಗಿ ಕೂಡ ಪರಿಣಮಿಸುವದೆಂಬದಕ್ಕೆ ಇಲ್ಲಿ ಒಂದು ಕಥೆಯನ್ನು ಉದಾಹರಿಸಬಹುದು. ಒಂದೂರಲ್ಲಿ ಒಬ್ಬ ಬಡಹುಡುಗನಿದ್ದನು. ಅವನು ಪ್ರತಿದಿನವೂ ನೆರೆಯೂರಿಗೆ ಹೋಗಿ ಒಬ್ಬ ಗುರುಗಳಲ್ಲಿ ಪಾಠವನ್ನು ಕಲಿಯುತ್ತಿದ್ದನು. ಚಿಕ್ಕ ಹುಡುಗ. ಆ ಎರಡು ಹಳ್ಳಿಗಳ ನಡುವೆ ಒಂದು ಸಣ್ಣ ಕಾಡೂ ಇತ್ತು. ಒಂದು ದಿನ ಅವನು ತನಗೆ ದಾರಿಯಲ್ಲಿ ಭಯವಾಗುವದೆಂದು ತಾಯಿಯ ಮುಂದೆ ಹೇಳಿದನು. ಪಾಪ! ಬಡತಾಯಿ. ಮಗನ ಜೊತೆಯಲ್ಲಿ ಹೋದರೆ ಮನೆಯಲ್ಲಿ ದುಡಿಯುವವರಿಲ್ಲ. ಆದ್ದರಿಂದ ಆಕೆಯು ಒಂದು ಹಂಚಿಕೆಯನ್ನು ಮಾಡಿದಳು. ಆ ಕಾಡಿನಲ್ಲಿ ಕೃಷ್ಣನೆಂಬ ಹುಡುಗನೊಬ್ಬನಿರುವನೆಂದೂ ಕರೆದರೆ ಅವನು ಭಯವನ್ನು ಕಳೆಯುವನೆಂದೂ ಹೇಗೋ ಆ ತಾಯಿ ಮಗನ ಸಮಾಧಾನವನ್ನು ಮಾಡಿದಳು. ಆ ಮಗನು ಆ ಮಾತಿನ ಪ್ರತ್ಯಕ್ಷರದಲ್ಲಿಯೂ ಸಂಪೂರ್ಣವಾಗಿ ಶ್ರದ್ಧೆಯನ್ನೇ ಇಟ್ಟನು. ಅಂದಿನಿಂದ ಅವನು ಹೋಗುವಾಗಲೂ ಬರುವಾಗಲೂ ದಾರಿಯಲ್ಲಿ ಕೃಷ್ಣನನ್ನು ಕರೆಯುತ್ತಲೇ ಒಬ್ಬನು ಬಂದು ಕಾಡನ್ನು ದಾಟಿಸಿ ಹೋಗುತ್ತಿದ್ದನು. ಒಂದು ದಿನ ಗುರುಗಳ ಮನೆಯಲ್ಲಿ ಏನೋ ಒಂದು ದೊಡ್ಡ ಸಮಾರಂಭವು ನಡೆಯಿತು. ಆ ದಿನ ಉಳಿದ ಶಿಷ್ಯರೆಲ್ಲರೂ ತಮ್ಮತಮ್ಮ ಮನೆಗಳಿಂದ ಬೆಲೆಯುಳ್ಳ ಪದಾರ್ಥಗಳನ್ನು ತಂದು ಗುರುಗಳಿಗೆ ಒಪ್ಪಿಸತೆ

ಕ್ಕದ್ದೆಂದು ಮಾತಾಡಿಕೊಂಡರು. ಮರುದಿನ ನಮ್ಮ ಬಡಹುಡುಗನು ಗುರುಗಳಿಗೆ ಏನನ್ನಾದರೂ ಕೊಡಹೇಳಿ ತಾಯಿಯ ಮುಂದೆ ಹಟಹಿಡಿದನು. ಕೊನೆಗೆ ತಾಯಿ ಹೇಗಾದರೂ ಸಮಾಧಾನವನ್ನು ಮಾಡಲು "ಮಗು, ದಾರಿಯಲ್ಲಿ ಕೃಷ್ಣನನ್ನೇ ಕೇಳು; ಕೊಡುತ್ತಾನೆ" ಎಂದು ಹೇಳಿದಳು. ಅದಕ್ಕೊಪ್ಪಿ ಹುಡುಗನು ಕಾಡಿಗೆ ಬರುತ್ತಲೆ ಕೃಷ್ಣನನ್ನು ಕರೆದು ಅದರಂತೆ ಕೇಳಿದನು. ಆ ಕಾಡಿನ ಹುಡುಗನು ಒಂದು ಸಣ್ಣ ಕುಡಿಕೆಯಲ್ಲಿ ಹಾಲನ್ನು ತುಂಬಿ ತಂದುಕೊಟ್ಟನು. ನಮ್ಮ ಹುಡುಗನು ಆನಂದದಿಂದ ಬೇಗಬೇಗ ಕಾಲುಹಾಕಿಕೊಂಡು ಬಂದು ಗುರುಗಳ ಮನೆಯ ಮುಂದೆ ನಿಂತು ಗುರುಪತ್ನಿಯನ್ನು ಕೂಗಿದನು. ಆದಿನ ಆಕೆಗೆ ಎಷ್ಟೋ ಕೆಲಸಗಳು. ಬಹಳಸಲ ಕೂಗಿದ ಮೇಲೆ ಹೊರಕ್ಕೆ ಬಂದು ನೋಡುತ್ತಾಳೆ; ಬಡಹುಡುಗ. ಆಕೆಯನ್ನು ಕಾಣುತ್ತಲೇ ಹುಡುಗನು ನಗುತ್ತ ಹಾಲಿನ ಕುಡಿಕೆಯನ್ನು ಮುಂದೆ ಹಿಡಿದನು. ಅನೇಕ ಬೆಲೆಯುಳ್ಳ ಪದಾರ್ಥಗಳು ಬಂದುಬಂದು ರಾಶಿಯಾಗಿ ಬೀಳುತ್ತಿರುವಾಗ ಈ ಒಂದು ಕುಡಿಕೆಯ ಹಾಲಿನದೇನು ಲಕ್ಷ್ಯವೇ? ಆಕೆ ಮುಖವನ್ನು ಸೊಟ್ಟಮಾಡಿಕೊಂಡು ಹೋಗಿಬಿಟ್ಟಳು. ಅಷ್ಟರಲ್ಲಿ ಗುರುಗಳು ಬಂದು ಆ ಹುಡುಗನ ಕಾಟವನ್ನು ತಡೆಯಲಾರದೆ ಸಣ್ಣದೊಂದು ಪಾತ್ರೆಯನ್ನು ತಂದು ಹಿಡಿದರು. ಹುಡುಗನು ಆ ಕುಡಿಕೆಯನ್ನು ಬಗ್ಗಿಸಲಾಗಿ ಗುರುಗಳ ಪಾತ್ರೆಯು ತುಂಬಿತು. ಕುಡಿಕೆಯೂ ತುಂಬಿಯೇ ಇತ್ತು. ಆ ಮೇಲೆ ಗುರುಗಳು ಇನ್ನೊಂದು, ಮತ್ತೊಂದು, ಮಗದೊಂದು- ಹೀಗೆ ಒಂದಕ್ಕಿಂತ ಒಂದು ದೊಡ್ಡಪಾತ್ರೆಗಳನ್ನು ತಂದುತಂದು ಸಾಕಾದರು. ಎಲ್ಲಾ ಪಾತ್ರೆಗಳೂ ಸೂಸಿ ಹರಿದವು. ಹುಡುಗನ ಕುಡಿಕೆಯು ಇನ್ನೂ ತುಂಬಿಯೇ ಇತ್ತು. ಗುರುಗಳು ಬೆರಗಾದರು. ಎಲ್ಲರೂ ಒಬ್ಬರೊಬ್ಬರನ್ನು ನೋಡುವದಕ್ಕಾರಂಭಿಸಿದರು. ಕೊನೆಗೆ ಇದು ದೈವತಂತ್ರವೆಂದು ತಿಳಿದು ಗುರುಗಳು ಇದರ ಪೂರ್ವಾಪರವನ್ನು ವಿಚಾರಿಸಿದರು. ಹುಡುಗನು ಇದ್ದದ್ದನ್ನು ಇದ್ದ ಹಾಗೆ ಹೇಳಿದನು. ಆಗ ಗುರುಗಳು ಆ ಕೃಷ್ಣನನ್ನು ತನಗೆ ತೋರಿಸೆಂದು ಆ ಹುಡುಗನೊಡನೆ ಕಾಡಿಗೆ ಹೋದರೆಂದೂ ಶ್ರದ್ಧೆ ಇಲ್ಲದವರಿಗೆ ತಾನು ಕಾಣಿಸಿಕೊಳ್ಳೆನೆಂದು ಶ್ರೀಕೃಷ್ಣನು ಮೊದಲು ಹೇಳಿ ಆಮೇಲೆ ಶ್ರದ್ಧೆಯುಳ್ಳ

ಹುಡುಗನ ಮೇಲಿನ ಪ್ರೇಮದಿಂದ ಗುರುಗಳಿಗೂ ಕಾಣಿಸಿಕೊಂಡನೆಂದೂ ಕಥೆಯಿದೆ. ಶ್ರದ್ಧೆಯ ಪ್ರಭಾವವು ಇಂಥದ್ದು. ಶ್ರದ್ಧೆಯ ವಿಷಯಕ್ಕೆ ನಮ್ಮ ವಚನಶಾಸ್ತ್ರಕಾರರು ಹೇಳುವದೇನೆಂದರೆ —

"ನೆರೆ ನಂಬೋ ನೆರೆ ನಂಬೋ ದರದುರವಿಲ್ಲದೆ, ಸಾಮವೇದಿಗಳಂತೆ. ನೆರೆ ನಂಬೋ ನೆರೆ ನಂಬೋ ದಾಸದುಗ್ಗಳೆಯಂತೆ. ನೆರೆ ನಂಬೋ ನೆರೆ ನಂಬೋ ಸಿರಿಯಾಳ ಚಂಗಳೆಯಂತೆ. ನಂಬಿದೆಯಾದರೆ, ತನ್ನನೀವ ಕೂಡಲಸಂಗಮದೇವಾ."

ಹೀಗೆ ಶ್ರದ್ಧೆಯನ್ನಿಡುವದೇ ನಮ್ಮ ದೇಶದ ಸ್ವಭಾವ. ಪಾಶ್ಚಾತ್ಯ ಸಂಸ್ಕೃತಿಯು ಬಂದ ಮೇಲೆ ನಮ್ಮ ಶ್ರದ್ಧೆಗೆ ಗೌರವವು ತಪ್ಪಿತು. ಪಾಶ್ಚಾತ್ಯಧರ್ಮೋಪದೇಶಕರು ಬಂದು ನಮ್ಮ ಧರ್ಮದ ಶ್ರದ್ಧೆ ಹಾಳಾಗುವದಕ್ಕೆಷ್ಟು ಬೇಕೋ ಅಷ್ಟು ಮಾಡಿದರು. ನಮ್ಮಲ್ಲಿದ್ದದ್ದನ್ನು ಕೆಡಿಸುವದಕ್ಕೆಷ್ಟು ಬೇಕೋ ಅಷ್ಟುಮಾಡಿದರೇ ಹೊರತು ಆ ಕಳೆದ ಭಾಗಕ್ಕೆ ತಕ್ಕಹಾಗೆ ಕೊಡುವದಕ್ಕೆ ಅವರಲ್ಲೇನೂ ಗತಿ ಇಲ್ಲ. ಹೀಗಾಗಿ ನಮ್ಮ ಸ್ಥಿತಿಯು "ಇದ್ದದ್ದು ಉಳಿಯಲಿಲ್ಲ; ಇಲ್ಲದ್ದು ಬರಲಿಲ್ಲ" ಎಂಬ ಹಾಡಾಗಿದೆ. ಅವರು ನಮ್ಮ ಪುರಾಣಗ್ರಂಥಗಳಲ್ಲಿ ಮಹಿಮಾಪ್ರಧಾನವಾದ ಕಥೆಗಳನ್ನು ತೆಗೆದುಕೊಂಡು ಅದನ್ನು ಮಾನುಷವಿಚಾರಶಕ್ತಿಯ ಒರೆಗೆ ಹಚ್ಚಿ ಅದರಲ್ಲಿ ಹುರುಳಿಲ್ಲವೆಂದು ತೋರಿಸಿ ಕಣ್ಣಿಗೆ ಮಣ್ಣುಹಾಕಿದ್ದು ಅತ್ಯಂತ ವಿಷಾದಕರವಾಗಿದೆ. ಏಕೆಂದರೆ ವಿಚಾರಮಾಡಿದರೆ ಅವರ ಬೈಬಲಿನಲ್ಲಿಯೂ ಇಂಥ ಮಹಿಮಾಪ್ರಧಾನವಾದ ಕಥೆಗಳು ಬೇಕಾದಷ್ಟಿವೆ. ಅವುಗಳಲ್ಲೊಂದೂ ವಿಚಾರಶಕ್ತಿಗೆ ಹೊಂದುವದಿಲ್ಲ. ಹೀಗೆ ತಮ್ಮ ಕಣ್ಣಲ್ಲಿ ಗಜ್ಜುಗವನ್ನಿಟ್ಟುಕೊಂಡು ನಮ್ಮ ಕಣ್ಣಲ್ಲಿ ಹೂವಿರುವದೆಂದು ಎತ್ತೆಣಿಸಿದ್ದು ವಿಚಾರಾಸ್ಪದವಾಗಿದೆ. ಶ್ರದ್ಧೆಯೆಂಬ ಗುಣವು ಅವರಿಗೆ ಬೇಡವಾದದ್ದೇನೂ ಅಲ್ಲ. ಬೈಬಲಿನಲ್ಲಿ ನೋಡಿರಿ. "*Verily I say unto you, unless ye be children ye cannot enter into the Kingdom of God.*" ಎಂದರೆ "ನಿಜವಾಗಿ ನಾನು ಹೇಳುತ್ತೇನೆ; ನೀವು ಮಕ್ಕಳಂತೆ ಆದ ಹೊರತು ದೇವರ ಸನ್ನಿಧಿಯನ್ನು ಪಡೆಯಲಾರಿರಿ." ಹಿಂದೆ ನಾವು ಹೇಳಿದ ಕಥೆಯಲ್ಲಿ ತಾಯಿ ಮಾತಿನಲ್ಲಿ ಶ್ರದ್ಧೆಯನ್ನಿಟ್ಟ ಹುಡುಗನಂತೆ ಆದ ಹೊರತು ದೇವರು ನಮಗೂ ಕಾಣು

ವದಿಲ್ಲ, ಕ್ರಿಶ್ಚಿಯನರಿಗೂ ಕಾಣುವದಿಲ್ಲ. ಆದ್ದರಿಂದ ಶ್ರದ್ಧೆಯು ಸರ್ವ ವಿಧದಿಂದಲೂ ಸಂರಕ್ಷಣೀಯವಾದದ್ದು.

## ಶೀಲ.

ಧರ್ಮದಲ್ಲಿ ಬರೀಶ್ರದ್ಧೆಯಿದ್ದ ಮಾತ್ರಕ್ಕೇ ಸಾಲದು. ಧರ್ಮಗ್ರಂಥ ದಲ್ಲಿ ಹೇಳಿದ ಆಚಾರಗಳನ್ನೆಲ್ಲಾ ಸಾಂಗನಾಗಿ ಪಾಲಿಸಬೇಕು. ಮನುಷ್ಯನಿಗಾಗುವ ಸರ್ವಶ್ರೇಯಸ್ಸುಗಳೂ ಶೀಲವನ್ನವಲಂಬಿಸಿಕೊಂಡಿ ರುವವು. ಶೀಲವೊಂದು ಸಡಿಲವಾಯಿತೆಂದರೆ- ಕಮಾನಿನ ನಡುವಣ ಬಿಗಿಕಲ್ಲು (ಬೂಚುಗಲ್ಲು ಅಥವಾ ಕೀಲುಗಲ್ಲು) ಸಡಿಲಿದರೆ ಉಳಿದೆಲ್ಲ ಕಲ್ಲುಗಳೂ ತಮ್ಮಷ್ಟಕ್ಕೆ ತಾವೇ ಉರುಳಿಕೊಂಡು ಬೀಳುವಂತೆ—ಉಳಿ ದೆಲ್ಲ ಗುಣಗಳೂ ಅಳಿದು ಹೋಗುವವು. ಬಿಗಿಕಲ್ಲು ಉಳಿದ ಎಲ್ಲಾ ಕಲ್ಲುಗಳನ್ನೂ ಹಿಡಿದುಕೊಂಡಿರುವದು. ಆದ್ದರಿಂದ ಮನುಷ್ಯನು, ತನ್ನನ್ನು ಶ್ರೇಯಸ್ಸುಗಳೆಲ್ಲಾ ಆಶ್ರಯಿಸಿರಬೇಕಾದರೆ, ಶೀಲವನ್ನು ಚೆನ್ನಾಗಿಟ್ಟುಕೊಳ್ಳಬೇಕು. ಪೂರ್ವದಲ್ಲಿ ಪ್ರಹ್ಲಾದನೆಂಬ ರಾಕ್ಷಸ ರಾಜನಾಳುತ್ತಿದ್ದನು. ಅವನು ತನ್ನ ದರ್ಪದಿಂದ ದೇವಲೋಕವನ್ನು ಕೂಡ ಗೆದ್ದುಕೊಂಡನು. ಅವನಲ್ಲಿ ಶೀಲವೊಂದು ಚೆನ್ನಾಗಿದ್ದು ದರಿಂದ ಅವನ ಮೇಲೆ ದೇವತೆಗಳ ಆಟನೇನೂ ನಾಗಲಿಲ್ಲ. ಈ ಮರ್ಮವನ್ನರಿತು ಇಂದ್ರನು ಒಂದು ಯುಕ್ತಿಯನ್ನು ಹೂಡಿದನು. ಅದೇನೆಂದರೆ, ತಾನೊಬ್ಬ ಬ್ರಾಹ್ಮಣನಾಗಿ ಪ್ರಹ್ಲಾದನ ಬಳಿಗೆ ಬಂದನು. ಶೀಲವಂತನಾದ ಪ್ರಹ್ಲಾದನು ಆ ಬ್ರಾಹ್ಮಣನಿಗೆ ಬೇಡಿದ್ದನ್ನು ಕೊಡುತ್ತೇ ನೆಂದನು. ಬಂದ ಕೆಲಸವಾಯಿತು. ಬ್ರಾಹ್ಮಣನು ಶೀಲವನ್ನು ಬೇಡಿ ದನು. ತನ್ನ ನುಡಿ ಹುಸಿಯಾಗುವದು ಪ್ರಹ್ಲಾದನ ಶೀಲಕ್ಕೊಪ್ಪುವ ಮಾತಾಗಿರಲಿಲ್ಲ. ಪ್ರಹ್ಲಾದನು ತನ್ನ ಶೀಲವನ್ನು ಆ ಬ್ರಾಹ್ಮಣನಿಗೆ ಕೊಡುವದಕ್ಕೊಪ್ಪಿದನು. ಆ ಬ್ರಾಹ್ಮಣನು ತನಗೆ ಅದು ಸಲ್ಲಿತೆಂದನು. ಒಡನೆ ಪ್ರಹ್ಲಾದನ ಮುಖದಿಂದ ಒಂದು ತೇಜಸ್ಸು ಹೊರಟಿತು. ನೀನು ಯಾರೆಂದು ಪ್ರಹ್ಲಾದನು ಕೇಳಿದನು. ತಾನು ಶೀಲವೆಂದುಹೇಳಿ ಅದು ಮುಂದಕ್ಕೆ ಹೋಯಿತು. ಸ್ವಲ್ಪ ಹೊತ್ತಿನ ಮೇಲೆ ಮತ್ತೊಂದು ತೇಜಸ್ಸು

ಹೊರಟು ತಾನು ಧರ್ಮನೆಂದು ಹೇಳಿ ನಾಗಿತು. ಹೀಗೆಯೇ ಸತ್ಯವೂ ವೃತ್ತಿಯೂ ಲಕ್ಷ್ಮಿಯೂ ತೇಜೋರೂಪವಾಗಿ ಹೊರಬಿದ್ದು ಹೋದರು. ಆ ಮೇಲೆ ಪ್ರಹ್ಲಾದನು ಹಲ್ಲು ಮುರಿದ ಸಿಂಹವಾಗಿ ಇಂದ್ರನ ಮನೆಯ ನಾಯಿ ಮರಿಯಾದನು. ಮನುಷ್ಯನಲ್ಲಿ ಶೀಲವು ಚೆನ್ನಾಗಿರುವವರೆಗೂ ಅವನು ಇತರರಿಗೆ ದಕ್ಕುವದಿಲ್ಲ. ಹಿಂದೆ ನಳರಾಜನು ದಮಯಂತಿಯನ್ನು ಮದುವೆಯಾದ ಮೇಲೆ ಅವನ ಮೇಲಿನ ಅಸೂಯೆಯಿಂದ ಕಲಿಯು ಅವನಿಗೇನಾದರೂಮಾಡಿ ತೊಂದರೆಯನ್ನು ಕೊಡಬೇಕೆಂದು ಮನಸ್ಸುಮಾಡಿದನು. ಕಲಿಯೆಂದರೆ ಸಾಮಾನ್ಯವಾಗಿ ಧರ್ಮದಲ್ಲಿ ಉಂಟಾಗುವ ಅಶ್ರದ್ಧೆಯ ಅಭಿಮಾನದೇವತೆಯೆನ್ನಬಹುದು. ನಳನು ಮಹಾಶೀಲವಂತನಾಗಿದ್ದುದರಿಂದ ಅವನ ಮೇಲೆ ಕಲಿಯ ಕೈ ಏನೇನೂ ಸಾಗಲಿಲ್ಲ. ಅವನು ಸಮಯವನ್ನು ಕಾಯುತ್ತಲೇ ಇದ್ದನು. ಒಂದು ದಿನ ದೇಹಶುದ್ಧಿಗಾಗಿ ಕೈಕಾಲುಗಳನ್ನು ತೊಳೆದುಕೊಳ್ಳಬೇಕಾದ ಸಂದರ್ಭದಲ್ಲಿ ಅವನು ಅದನ್ನು ಉಪೇಕ್ಷೆಮಾಡಿದನು. ಇದರಿಂದ ಅವನ ಶೀಲದ ಬಿಗಿಯು ಸಡಿಲವಾದಂತಾಯಿತು. ಒಡನೆಯೇ ಇದೇ ಸಮಯವೆಂದು ಕಲಿಯು ಬಂದು ಕಾಲು ಹೊಕ್ಕಿದನು. ಆಮೇಲೆ ಆ ಕಲಿಪ್ರಭಾವದಿಂದ ಅವನು ಎಷ್ಟೋ ದುಃಖಗಳಿಗೀಡಾದದ್ದು ಪುರಾಣದಲ್ಲಿ ಪ್ರಸಿದ್ಧವಾಗಿದೆ. ಕೈಕಾಲುಗಳನ್ನು ತೊಳೆದುಕೊಳ್ಳುವದೆಂಬದೊಂದು ಸಾಮಾನ್ಯವಾಗಿ ಕ್ಷುದ್ರವಾಗಿಯೇ ಕಾಣಬಹುದು. ಆದರೆ ಅದನ್ನು ಉಪೇಕ್ಷೆಮಾಡಿದ್ದರಿಂದ ಉಂಟಾದ ದುಷ್ಟಪರಿಣಾಮವು ಮಾತ್ರ ಕ್ಷುದ್ರವಾಗಲಿಲ್ಲ. ಆದ್ದರಿಂದ ಆಚಾರಗಳಲ್ಲಿ ಸಣ್ಣದುಪುಟ್ಟದೆಂದು ನೋಡದೆ ಪ್ರತಿಯೊಂದನ್ನೂ ಆದರದಿಂದ ಆಚರಿಸುತ್ತ ಶೀಲವನ್ನು ಸರ್ವವಿಧದಿಂದಲೂ ಕಾಪಾಡಬೇಕು. ಈ ವಿಷಯದಲ್ಲಿ ವೀರಶೈವವಚನಶಾಸ್ತ್ರಕಾರರ ಉಪದೇಶವೇನೆಂದರೆ.—

"ಎಂಜಲುಂಡ ಮಾತನಾಡುವ ಜಗದ ಜಂಗುಳಿಗಳೆಲ್ಲ ಶೀಲವಂತರೆ? ಭಿನ್ನರುಚಿಗೆರಗದ ಕಾಮನ ಬೆಂಬಳಿವಿಡಿಯದೆ ಅಂಗಸಂಗದ ಸಂಗವ ತೊರೆದವ ಶೀಲವಂತರೆಂಬೆನು. ಲೋಕದ ನಚ್ಚುಮೆಚ್ಚು ಬಿಟ್ಟು ನಿಶ್ಚಿಂತನಾದವ ಮೆಚ್ಚುವನಯ್ಯಾ ನಮ್ಮ ಸಕಳೇಶ್ವರಾ" ಮತ್ತು

"ಆಶೆಯೆಂಬ ಕೂಸನೆತ್ತಲು ರೋಷವೆಂಬ ತಾಯಿ ಮುಂದೆ ಬಂದಿಪ್ಪಳು

ನೋತಾ. ಇಂತೀ ಎರಡಿಲ್ಲದ ಕೂಸನೆತ್ತಬಲ್ಲದೆ ಅವರನಚ್ಚ ಶೀಲವಂತರೆಂಬೆ ಕೂಡಲ ಸಂಗಮೇಶ್ವರಾ."

ಶೀಲದವಿಷಯಕ್ಕೆ ನೀತಿಶಾಸ್ತ್ರಕಾರರು ಎಷ್ಟೋ ಮಹತ್ತ್ವವನ್ನು ಕೊಡುವರೆಂಬದನ್ನು ಈ ಕೆಳಗಣ ಒಬ್ಬ ಶೀಲವಂತನ ಉದ್ಗಾರದಿಂದ ತಿಳಿಯಬಹುದು.

"ಅಡವಿಯನ್ನೆಂದಿ ಗುಡ್ಡದೊಳಗಾದೊಡಮಿರ್ದವೆಸೂಂಟಿಯಾಗಿ ಪಾ।
ಪಿಡಿದಿಹ ಬಾವಿಯಂ ಪುಗುವೆ ನಿರ್ಭಯದಿಂದಲೆ ಪೋಣ್ವಸಮುದ್ರದೊಳ್ ।।
ಮಿಡುಕದೆ ಹಾರಿಕೊಂಡದನೆ ಸೌಖ್ಯಮೆನುತ್ತಿಹೆನಲ್ಲದಿಂದಿಗುಂ।
ಬಿಡೆನಿದ ಶೀಲಮಂ ಧರಣಿಯೊಳ್ಪ್ರಸರಂತಿರಲೆನ್ನ ವಂಶದಾ ।।"

## ವರ್ಣವ್ಯವಸ್ಥೆ

ಶೀಲವು ಇಷ್ಟು ಮುಖ್ಯವಾದ್ದರಿಂದಲೇ ನಮ್ಮ ವೇದಶಾಸ್ತ್ರಗಳಲ್ಲಿ ಬಹುಭಾಗವು ಇದರ ವಿಚಾರದಲ್ಲಿಯೇ ಇರುತ್ತದೆ. ಬೇರೆ ಯಾವ ಪಂಥದ ಧರ್ಮಗ್ರಂಥದಲ್ಲಿಯೂ ಶೀಲಕ್ಕಾಗಿ ಇಷ್ಟು ವಿಚಾರಮಾಡಿದ್ದು ಕಾಣಬರಲಾರದು. ಶೀಲಕ್ಕೆ ಪೋಷಕವಾಗಿರಬೇಕೆಂದೇ ನಮ್ಮ ದೇಶದಲ್ಲಿ ಚಾತುರ್ವರ್ಣ್ಯದ ವ್ಯವಸ್ಥೆಯುಂಟಾಗಿದೆ. ಚಾತುರ್ವರ್ಣ್ಯದ ವ್ಯವಸ್ಥೆಯೆಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ-ಎಂಬ ಜಾತಿಭೇದಗಳು. ಈ ಜಾತಿಭೇದಗಳು ಈ ನಮ್ಮ ದೇಶದಲ್ಲಿ ಹೊರತು ಬೇರೆ ಯಾವದೇಶದಲ್ಲಿಯೂ ಇಲ್ಲ. ಪಶ್ಚಿಮದೇಶದಲ್ಲಿಯೂ ಜಾತಿಭೇದಗಳಂತೆ ಪಂಗಡಗಳಿವೆ. ಅವುಗಳೆಲ್ಲಾ ಅವರವರ ಲೌಕಿಕಪರಿಸ್ಥಿತಿಯನ್ನನುಸರಿಸಿರುವವು. ಅಲ್ಲೆಲ್ಲಾ ಮುಖ್ಯವಾಗಿ ಐಶ್ವರ್ಯದ ಪ್ರಮಾಣದ ಮೇಲೆ ಜಾತಿ. ನಮ್ಮದು ಐಶ್ವರ್ಯಕ್ಕೆ ಮಹತ್ತ್ವವನ್ನು ಕೊಡುವ ದೇಶವಲ್ಲ. ನಮಗೆ ಐಶ್ವರ್ಯವು ಬೇಡವೆಂದಲ್ಲ. ಐಶ್ವರ್ಯವು ನಮಗೆ ಎರಡನೆಯದು. ಮೊದಲನೆಯದು ಧರ್ಮಾಚರಣೆ. ಆದ್ದರಿಂದ ನಮ್ಮಲ್ಲಿಯ ಜಾತಿ ಧರ್ಮಾಚರಣೆಯ ದೃಷ್ಟಿಯಿಂದ. ಚಾತುರ್ವರ್ಣ್ಯದ ವಿಷಯದಲ್ಲಿ ಭಗವದ್ಗೀತೆಯಲ್ಲಿ

"ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ"

ಎಂದು ಹೇಳಿದೆ. ಗುಣ ಮತ್ತು ಕರ್ಮ- ಇವುಗಳ ದೃಷ್ಟಿಯಿಂದ

ನಾಲ್ಕುವರ್ಣಗಳನ್ನು ನಾನು ಸೃಷ್ಟಿಸಿದೆನೆಂದು ಭಗವಂತನ ಅಭಿಪ್ರಾಯ. ಈ ವರ್ಣವ್ಯವಸ್ಥೆಯು ಈಚೀಚೆಗೆ ಜನರು ವ್ಯವಹಾರ ಸೌಕರ್ಯಕ್ಕಾಗಿ ಮಾಡಿಕೊಂಡದ್ದೆಂದು ಈಗೀಗ ಕೆಲವರು ತರ್ಕಿಸುವದಕ್ಕೆ ಮೊದಲು ಮಾಡಿರುವರು. ಆದರೆ ಇದರ ಸೃಷ್ಟಿಯು ವಿಚಾರವು ವೇದದಲ್ಲಿ ಪುರುಷಸೂಕ್ತದಲ್ಲಿಯೇ ಬಂದಿದೆ. ವೇದದ ಕಾಲ ನಿರ್ಣಯವು ಇನ್ನೂ ಯಾರಿಗೂ ಪೂರ್ಣವಾಗಿ ದಕ್ಕಿಲ್ಲ. ನಮ್ಮ ಜನರ ಪರಂಪರೆಯ ಹೇಳಿಕೆಯನ್ನು ಕೇಳಿದರಂತೂ ವೇದವು ಅನಾದಿ. ಆದ್ದರಿಂದ ಜಾತಿವ್ಯವಸ್ಥೆ ಎಂದಿನಿಂದ ಆರಂಭವಾಯಿತೆಂದು ತಿಳಿಯುವದು ಶಕ್ಯವಿಲ್ಲ. ಅಂತು ನಮ್ಮ ಬುದ್ಧಿಗೆ ನಿಲುಕದಷ್ಟು ಹಿಂದಿನಿಂದ ನಮ್ಮ ದೇಶದಲ್ಲಿ ಈ ವರ್ಣವ್ಯವಸ್ಥೆಯು ನಡೆಯುತ್ತ ಬಂದಿರುವದು. ಇಷ್ಟೇ ಅಲ್ಲ. ನಮ್ಮ ದೇಶದಲ್ಲಿ ಇದಕ್ಕೆ ಬಹು ಹೆಚ್ಚಿನ ಪ್ರಾಶಸ್ತ್ಯವಿರುವದು. ಇರಲಿ. ಗುಣಕರ್ಮಗಳ ವಿಭಾಗವು ಹೇಗೆಂದರೆ ಸತ್ತ್ವಗುಣವೇ ಪ್ರಧಾನವಾಗಿ ಉಳ್ಳವರು ಬ್ರಾಹ್ಮಣರು. ಅವರಿಗೆ

“ ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ”

ಎಂಬ ಗೀತೋಕ್ತಿಯಂತೆ ಅವರ ಮನಸ್ಸಿನ ಒಲವಿಗನುಗುಣವಾಗಿ ಮನಸ್ಸನ್ನು ಬಿಗಿಹಿಡಿಯುವದು, ಇಂದ್ರಿಯಗಳನ್ನು ಹರಿಯಗೊಡದಿರುವದು, ಶರೀರ ವಾಕ್ಕು ಮನಸ್ಸು — ಇವುಗಳಿಂದ ತಪಶ್ಚರ್ಯೆಯನ್ನು ಮಾಡುವದು, ಶುಚಿತ್ವ, ಕ್ಷಮೆ, ಸರಳಬುದ್ಧಿ, ತಿಳಿವಳಿಕೆ, ಅನುಭವ, ದೇವರಿದ್ದಾನೆಂಬ ಭಾವನೆ, — ಇವು ಕರ್ಮಗಳು. ಸತ್ತ್ವಗುಣವಿದ್ದೂ ರಜೋಗುಣದ ಪ್ರಾಧಾನ್ಯವುಳ್ಳವರು ಕ್ಷತ್ರಿಯರು. ಅವರಿಗೆ

“ ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।
ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥ ”

ಎಂಬ ಗೀತೋಕ್ತಿಯಂತೆ ಅವರ ಮನಸ್ಸಿನ ಒಲವಿಗನುಗುಣವಾಗಿ ಪರಾಕ್ರಮ, ಪ್ರಗಲ್ಭತೆ, ಧೈರ್ಯ, ದಕ್ಷತೆ, ಯುದ್ಧದಲ್ಲಿ ಹಗೆಗಳಿಗೆ ಬೆನ್ನು ತೋರಿಸದಿರುವಿಕೆ, ಯೋಗ್ಯರಾದವರಿಗೆ ಕೈಬಿಟ್ಟು ಕೊಡುವಿಕೆ, ಪ್ರಭುಶಕ್ತಿಯನ್ನು ತೋರಿಸೋಣ— ಇವು ಕರ್ಮಗಳು. ತಮೋಗುಣವಿದ್ದೂ

ರಜೋಗುಣದ ಪ್ರಾಧಾನ್ಯವುಳ್ಳವರು ವೈಶ್ಯರು. ಅವರಿಗೆ

" ಕೃಷಿಗೌರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ "

ಎಂಬ ಗೀತೋಕ್ತಿಯಂತೆ ಅವರ ಮನಸ್ಸಿನ ಒಲವಿಗನುಗುಣವಾಗಿ ವ್ಯವಸಾಯ, ಪಶುಪಾಲನೆ, ವ್ಯಾಪಾರ- ಇವು ಕರ್ಮಗಳು. ರಜೋಗುಣವೂ ಇದ್ದು ತಮೋಗುಣದ ಪ್ರಾಧಾನ್ಯಉಳ್ಳವರು ಶೂದ್ರರು. ಅವರಿಗೆ

" ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ "

ಎಂಬ ಗೀತೋಕ್ತಿಯಂತೆ ಅವರ ಮನಸ್ಸಿನ ಒಲವಿಗನುಗುಣವಾಗಿ ಸೇವೆಮಾಡುವದೇ ಅವರ ಕರ್ಮ. ಗುಣಕರ್ಮಗಳ ವಿಭಾಗವು ಈ ರೀತಿಯಾಗಿರುವದು. ಈ ನಿಯಮವನ್ನು ಹಿಡಿದುಕೊಂಡೇ ಈಗ ನಾವು ಪ್ರತಿಯೊಬ್ಬನ ಗುಣಕರ್ಮಗಳನ್ನು ನೋಡಿ ಅವನವನ ವರ್ಣವನ್ನು ನಿಶ್ಚಯಿಸಬೇಕೆಂದು ಈಗಿನ ಕೆಲವರು ಒಂದು ತರ್ಕವನ್ನೆಬ್ಬಿಸಿರುವರು. ಇದರಂತೆ ನಿರ್ಣಯಿಸುವದು ಪರಮಾರ್ಥವಿಚಾರಕ್ಕೆ ಹೊಂದಬಹುದು. ಆದರೆ ವ್ಯವಹಾರದಲ್ಲಿ ಹೀಗಲ್ಲ. ವ್ಯವಹಾರದಲ್ಲಿ ಜನ್ಮದಿಂದಲೇ ಜಾತಿಯನ್ನು ನಿರ್ಣಯಿಸುವ ಪದ್ಧತಿ ಇದೆ. ಆ ಜನ್ಮವು ಅವನ ಗುಣಕರ್ಮಗಳಿಗನುಗುಣವಾಗಿಯೇ ಬಂದಿರುವದೆಂದು ಭಾವನೆಯಿದೆ. ಜನ್ಮದಿಂದ ಜಾತಿಯನ್ನು ನಿರ್ಣಯಿಸುವ ಪದ್ಧತಿಯು ತಲೆಹಾಕಿದ ಕಾಲವನ್ನೂ ಕಾರಣವನ್ನೂ ಆಯಾಕಾಲದಲ್ಲಿ ಕಾಣುವ ಗುಣಕರ್ಮಗಳಿಂದಲೇ ಜಾತಿಯನ್ನು ನಿರ್ಣಯಿಸಬೇಕೆಂಬುವರು ಇನ್ನೂ ಕಾಣುವದಕ್ಕೆ ಶಕ್ತರಾಗಿಲ್ಲ. ಇಷ್ಟೇ ಅಲ್ಲ. ಈ ಪ್ರಯತ್ನವನ್ನು ಕೂಡ ಇನ್ನೂ ಯಾರೂ ಮಾಡಿಲ್ಲ. ಆಯಾಕಾಲದ ಗುಣಕರ್ಮಗಳಿಂದಲೇ ಜಾತಿಯೆಂಬ ತರ್ಕವು ಇನ್ನೂ ಎಳೆಯದಾಗಿರುವದರಿಂದ ಅದರ ಸಂಬಂಧವಾದ ವಿಚಾರಗಳಿನ್ನೂ ತಕ್ಕಷ್ಟು ಬೆಳೆದಿಲ್ಲ.

ಪ್ರಾಚೀನಸಂಪ್ರದಾಯದವರು ಜಗತ್ತಿನ ಸೃಷ್ಟಿಯೊಡನೆಯೇ ಚಾತುರ್ವರ್ಣ್ಯದ ಸೃಷ್ಟಿಯಾಯಿತೆಂದು ಅಭಿಪ್ರಾಯಪಡುವರು. ಆಯಾಕಾಲದ ಗುಣಕರ್ಮವನ್ನು ನೋಡಿ ಒಬ್ಬನ ಜಾತಿಯನ್ನು ನಿರ್ಣಯಿಸುವದಾದರೆ ಮನುಷ್ಯನ ಗುಣಕರ್ಮಗಳು ಆಗಾಗ ಬದಲಾಗುವದುಂಟಾದ್ದರಿಂದ

ಆವನು ಒಂದೊಂದು ಕಾಲದಲ್ಲಿ ಒಂದೊಂದು ಜಾತಿಯವನಾಗಬೇಕಾಗುತ್ತದೆ. ಹಾಗೂ ಆಗಲೆಂದರೆ ಅವನು ಒಂದೊಂದು ಕಾಲದಲ್ಲಿ ಒಂದೊಂದು ಜಾತಿಯ ವಿಶೇಷಸಂಸ್ಕಾರಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಇದು ವೇದಕ್ಕೆ ಸಮ್ಮತವಾಗುವದಿಲ್ಲ. ಅಥವಾ ಮನುಷ್ಯರು ತಮಗೆ ತೋಚಿದಂತೆ ಮಾಡಿಕೊಂಡದ್ದನ್ನು ವೇದವೇಕೆ ಹೇಳೀತು! ಇನ್ನು ಬ್ರಾಹ್ಮಣಶಿಶುವಿಗೆ ಗರ್ಭಕಾಲದಿಂದಲೂ ಸಂಸ್ಕಾರವಾಗಬೇಕಾಗುತ್ತದೆ. ಮಗು ಹುಟ್ಟಿ ಗುಣವನ್ನು ತೋರಿಸಿಕೊಂಡ ಮೇಲಲ್ಲವೆ ಅದರ ವರ್ಣವನ್ನು ನಿರ್ಣಯಿಸುವದು? ಅದು ಹುಟ್ಟುವದಕ್ಕೆ ಮುಂಚೆ ಅಥವಾ ಅದು ಹುಟ್ಟಿದ ಮೇಲೆ ಗುಣಕರ್ಮಗಳನ್ನು ತೋರಿಸುವದಕ್ಕೆ ಮುಂಚೆ ಅದಕ್ಕೆ ಯಾವ ಸಂಸ್ಕಾರವನ್ನು ಮಾಡುವದಕ್ಕೂ ತೋಚುವದಿಲ್ಲ. ಇದಲ್ಲದೆ ಬ್ರಾಹ್ಮಣಸ್ತ್ರೀಯ ಗರ್ಭದಲ್ಲಿ ಮುಂದೆ ಶೂದ್ರತ್ವವನ್ನು ಪ್ರಕಟಮಾಡುವ ಶಿಶುವಿದ್ದರೆ ಆಕೆಯ ಗರ್ಭಕ್ಕೆ ಬ್ರಾಹ್ಮಣವರ್ಣದ ಸಂಸ್ಕಾರವನ್ನು ಮಾಡುವದು ಅನಾವಶ್ಯಕವಾಗುವದು. ಹೀಗೆಲ್ಲಾ ಲೆಕ್ಕವಿಲ್ಲದಷ್ಟು ಅವ್ಯವಸ್ಥೆಗಳಾಗುವವು. ಆದ್ದರಿಂದ ಜನ್ಮದಿಂದ ಜಾತಿಯನ್ನು ನಿರ್ಣಯಿಸಬೇಕಾಗುವದು ಸೃಷ್ಟಿಯ ಆದಿಯಲ್ಲಿ ಆಯಾ ವರ್ಣದವರಲ್ಲಿ ಆಯಾಗುಣಕರ್ಮಗಳೇ ತೋರುತ್ತಿರಬಹುದು. ಕಾಲಚಕ್ರದ ಸುತ್ತುವಿಕೆಯಿಂದ ಈಗ ಆ ಶುದ್ಧಪರಿಸ್ಥಿತಿಯು ಉಳಿದುಕೊಂಡಿಲ್ಲ. ಬ್ರಾಹ್ಮಣರಲ್ಲಿ ಶೂದ್ರಸ್ವಭಾವದವರೂ ಶೂದ್ರರಲ್ಲಿ ಬ್ರಾಹ್ಮಣಸ್ವಭಾವದವರೂ ಕಂಡು ಬರುವರು. ಹೀಗೆ ದಿಕ್ಕು ತೋಚದಂತೆ ಆಗಿರುವದಕ್ಕೆ ಪಶ್ಚಿಮದೇಶದ ಸಂಸ್ಕೃತಿಗೂ ಪೂರ್ವದೇಶದ ಸಂಸ್ಕೃತಿಗೂ ಹೋರಾಟವು ನಡೆದಿರುವದೇ ಕಾರಣ. ಪಶ್ಚಿಮದೇಶದವರು ನೋಡಿದೊಡನೆ ಮನೋಹರವಾಗಿ ಕಾಣುವಂಥ ತಮ್ಮ ಗಿಲೀಟಿನ ವಿಚಾರಗಳನ್ನು ಮುಂದುಮಾಡುತ್ತಿರುವರು. ಪೂರ್ವದೇಶದವರ ವೈದಿಕಶ್ರದ್ಧಾವಿಶೇಷವು ಅದಕ್ಕೆ ಅಡ್ಡಗಾಲನ್ನು ಹಾಕಿ ತಡೆಯುತ್ತಿರುವದು. ಇದರಿಂದ ಹೊರಗಣಿಂದ ಬಂದ ರೋಗದ ಕ್ರಿಮಿಗಳಿಗೂ ರಕ್ತದಲ್ಲಿಯ ಮೊದಲಿಂದ ಇರುವ ಕ್ರಿಮಿಗಳಿಗೂ ಹೋರಾಟವು ನಡೆದು ಜ್ವರವು ಬರುವಂತೆ ಪಶ್ಚಿಮಸಂಸ್ಕೃತಿಯ ಮತ್ತು ಪೂರ್ವಸಂಸ್ಕೃತಿಯ ಹೋರಾಟದಿಂದ

ಈಗ ಜನತೆಯು ಪ್ರೈ ಕಾಪೇರಿರುವದು. ಇನ್ನೇನು ! ಪೂರ್ವದೇಶದವರ ಶ್ರದ್ಧೆಯು ಕಾಲೇ ಮುರಿಯುವದೋ ಪಾಶ್ಚಾತ್ಯ ಸಂಸ್ಕೃತಿಗೇ ಪರಾಜಯ ವಾಗುವದೋ ದೇವರಿಗೇ ಗೊತ್ತು. ಪ್ರಾಚೀನಸಂಪ್ರದಾಯದವರ ಮಾತಿಗೆ ಕಿವಿಗೊಟ್ಟರೆ ವರ್ಣಾಶ್ರಮವ್ಯವಸ್ಥೆಯು ಜಗತ್ಕುಟುಂಬದ ದೃಷ್ಟಿ ಯಿಂದ ಜನ್ಮವನ್ನನುಸರಿಸಿ ಬಂದದ್ದೆಂದು ಹೇಳಬೇಕಾಗುವದು. ಒಂದು ಮನೆಯಲ್ಲಿ ಬೇರೆಬೇರೆ ಕೆಲಸಗಳನ್ನು ನಿರ್ವಹಿಸುವದಕ್ಕೆ ಯಜಮಾನರು ಬೇರೆಬೇರೆ ನಾಲ್ಕುಮಂದಿಯನ್ನು ಗೊತ್ತುಮಾಡಿದಂತೆ ಚಾತುರ್ವರ್ಣ್ಯವು ದೇವರ ಜಗದ್ವ್ಯವಸ್ಥೆಯೆಂದು ತಿಳಿಯುವದು. ದೇವರು ಜಗತ್ತನ್ನು ನಿರ್ಮಿಸಿ ಜಗತ್ತಿನ ಜನರೆಲ್ಲರನ್ನೂ ಒಂದು ಕುಟುಂಬವೆಂದು ತಿಳಿದು ಅವರೆ ಲ್ಲರೂ ಪರಸ್ಪರಸಹಾಯದಿಂದ ಜಗತ್ತಿನ ಸ್ಥಿತಿಯನ್ನು ರಕ್ಷಣೆಮಾಡುವಂತೆ ಬ್ರಾಹ್ಮಣಕ್ಷತ್ರಿಯವೈಶ್ಯಶೂದ್ರರಿಗೆ ಬೇರೆಬೇರೆ ಉದ್ಯೋಗಗಳನ್ನು ನಿಯ ಮಿಸಿರುವನು. ಆ ಉದ್ಯೋಗಗಳು ವಂಶಪರಂಪರೆಯಾಗಿ ಸಾಗುವದ ರಿಂದ ಉದ್ಯೋಗಗಳ ಅಭ್ಯುದಯವೂ ಆಗಿ ಜಗತ್ತಿನಲ್ಲಿ ಒಬ್ಬರ ಹಿತಚಿಂತ ನೆಯನ್ನಿನ್ನೊಬ್ಬರು ನೋಡುವ ಪ್ರವೃತ್ತಿಯುಂಟಾಗುವದಕ್ಕೆ ಅವಕಾಶವಾ ಗುವದು. ಹೀಗೆ ಜನ್ಮದಿಂದ ವರ್ಣವ್ಯವಸ್ಥೆ ಇಲ್ಲದೆ ಇರುವ ಪಾಶ್ಚಾತ್ಯ ದೇಶದ ಪರಿಸ್ಥಿತಿಯನ್ನು ನೋಡಿದರೆ ಪ್ರತಿಯೊಂದುದ್ಯೋಗಕ್ಕೂ ಪ್ರತಿಯೊ ಬ್ಬನೂ ಸ್ಪರ್ಧೆಮಾಡುವದಕ್ಕೆ ಅವಕಾಶವುಂಟಾಗಿ ಬಲಿಷ್ಠನಾದವನೊಬ್ಬನು ಅಭ್ಯುದಯವನ್ನು ಪಡೆಯುತ್ತ ಉಳಿದವರೆಲ್ಲರೂ ಹೊಟ್ಟೆಗಿಲ್ಲದೆ ಅಲೆ ಯುತ್ತ ಇರುವದು ಕಂಡುಬರುವದು. ನಮ್ಮಲ್ಲಿ ಜನ್ಮದಿಂದ ಜಾತಿ ವ್ಯವಸ್ಥೆಯಾಗಿ ಆ ದುಃಸ್ಥಿತಿಗೆ ನಿರ್ಬಂಧನವಾದಂತೆ ಕಾಣಬರುವದು.

ನಮ್ಮ ದೇಶದಲ್ಲಿ ಜನ್ಮದಿಂದ ಜಾತಿವ್ಯವಸ್ಥೆಯಾಗಿರುವದರಲ್ಲಿ ಬ್ರಾಹ್ಮ ಣರಿಗೆ ದೇವರನ್ನು ಕಾಣುವ ಸೌಕರ್ಯವೆಲ್ಲಾ ಸೂರೆಯಾಗಿರುವದೆಂದು ಎಲ್ಲರ ಕಣ್ಣಲ್ಲಿಯೂ ಕುಕ್ಕುತ್ತಿದೆ. ವಸ್ತುಸ್ಥಿತಿ ಹಾಗೇನೂ ಇಲ್ಲ.

" ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾನ್ತಿ ಪರಾಂ ಗತಿಮ್ "

ಎಂದು ಭಗವದ್ಗೀತೆಯಲ್ಲಿದೆ. ಸ್ತ್ರೀಯರು, ವೈಶ್ಯರು, ಶೂದ್ರರು ಕೂಡ ಪರಮಾತ್ಮನನ್ನು ಪಡೆಯುವರೆಂದು ತಾತ್ಪರ್ಯ. ಇನ್ನು ಅದರ ಸೌಕರ್ಯ ಗಳು ಬ್ರಾಹ್ಮಣರಿಗೆ ಹೆಚ್ಚಾಗಿಯೂ ಶೂದ್ರರಿಗೆ ಕಡಿಮೆಯಾಗಿಯೂ

ಇರಬಹುದು. ಎಷ್ಟೆಷ್ಟು ಸೌಕರ್ಯಗಳು ಹೆಚ್ಚಿನ ಫಲವು ಅಷ್ಟಷ್ಟು ಆಯಾಸಲಭ್ಯವಾಗಿಯೇ ಇರುವದು. ದೇವರೊಲಿಯಬೇಕಾದರೆ ಶರೀರದಾರ್ಢ್ಯವು ಬಲವಾಗಿದ್ದ ಕೃತಯುಗದಲ್ಲಿ ದೀರ್ಘತಪಸ್ಸು ಬೇಕಾಗಿತ್ತೆಂದೂ ಶರೀರವು ದುರ್ಬಲವಾದ ಕಲಿಯುಗದಲ್ಲಿ ಬರೀ ನಾಮಸ್ಮರಣೆಯೇ ಸಾಕೆಂದೂ ಹಿಂದೆಯೇ ಹೇಳಿದೆ. ಆ ನಿಯಮದಂತೆ ದೇವರೊಲಪಿಗಾಗಿ ಬ್ರಾಹ್ಮಣರು ಎಷ್ಟು ಕಷ್ಟಪಟ್ಟರೂ ತೀರದಾಗುವದು; ಶೂದ್ರರ ಅತ್ಯಲ್ಪಪ್ರಯತ್ನವೇ ಸಾಕಾಗುವದು. ಇದಕ್ಕೊಂದಿತಿಹಾಸವುಂಟು. ನಾರದರು ಯಾವಾಗಲೂ ತಂಬೂರಿಯನ್ನು ಹಿಡಿದು ಹರಿನಾಮಸ್ಮರಣೆಯನ್ನು ಮಾಡುವರಷ್ಟೆ. ಇದರಿಂದ ತನಗೆ ಸಮಾನರಾದ ಭಕ್ತರು ಯಾರೂ ಇಲ್ಲವೆಂದು ಅವರಿಗೆ ಸ್ವಲ್ಪ ತಲೆ ತಿರುಗಿತ್ತು. ಪರಮಭಾಗವತರು ಯಾರೆಂದರೆ ಕೃಷ್ಣನು ತನ್ನ ಹೆಸರನ್ನೇ ಹೇಳುವನೆಂದು ಅವರ ಭಾವನೆ ಇತ್ತು. ಒಮ್ಮೆ ಅವರು ಕೃಷ್ಣನ ಬಳಿಗೆ ಹೋಗಿ ನಿನ್ನ ಪರಮಪ್ರೀತಿಯ ಭಕ್ತರು ಯಾರೆಂದು ಕೇಳಿದರು. ಕೃಷ್ಣನು ಒಂದು ಹಳ್ಳಿಯ ಒಬ್ಬ ಒಕ್ಕಲಿಗನ ಹೆಸರನ್ನು ಹೇಳಿದನು. ನಾರದರು ಖಿನ್ನರಾಗಿ ಆ ಒಕ್ಕಲಿಗನನ್ನು ನೋಡಿಕೊಂಡು ಬಂದು ಕೃಷ್ಣನೊಡನೆ ಹೋರಾಡಬೇಕೆಂದು ಅಲ್ಲಿಗೆ ಹೋಗಿ ಒಂದು ದಿನವೆಲ್ಲಾ ಆ ಒಕ್ಕಲಿಗನ ಹಿಂದೆ ಇದ್ದು ನಿರೀಕ್ಷಿಸಿದರು. ಆ ಒಕ್ಕಲಿಗನು ಹೊಟ್ಟೆಗಾಗಿ ಕ್ಷಣವೂ ವಿರಾಮವಿಲ್ಲದೆ ದುಡಿಯುತ್ತ ಇದ್ದನೇ ಹೊರತು ಒಮ್ಮೆಯಾದರೂ ದೇವರನ್ನು ನೆನೆಯಲಿಲ್ಲ. ಮಲಗುವಾಗ ಮಾತ್ರ ಒಮ್ಮೆ ದೇವರಿಗೆ ಶರಣೆಂದು ಮಲಗಿದನು. ಇದನ್ನೆಲ್ಲಾ ನೋಡಿ ನಾರದರು ಕೃಷ್ಣನ ಬಳಿಗೆ ಹೋಗಿ ತಮ್ಮ ಅಸಮಾಧಾನವನ್ನು ವ್ಯಕ್ತಮಾಡಿದರು. ಆಗ ಕೃಷ್ಣನು “ಬೇಕಾದಷ್ಟು ಅವಕಾಶವನ್ನಿಟ್ಟುಕೊಂಡು ಆಗಾಗ ಸ್ಮರಿಸುತ್ತ ನಡುನಡುವೆ ಮರೆಯುತ್ತ ಇರುವ ಭಕ್ತಿಗಿಂತಲೂ ಒಂದು ಕ್ಷಣಕಾಲವಾದರೂ ವಿರಾಮವಿಲ್ಲವಿದ್ದರೂ ಮಲಗುವಾಗಾದರೂ ಮರೆಯದೆ ಅವನು ಸ್ಮರಿಸುವದರಿಂದ ಅವನ ಭಕ್ತಿ ಹೆಚ್ಚಿನ”ದೆಂದು ಹೇಳಿದನಂತೆ. ಆದ್ದರಿಂದ ಇದರಲ್ಲಿ ಜನ್ಮದ ಹೆಚ್ಚುಗಾರಿಕೆಯೇನೂ ಇಲ್ಲ.

“ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ”

ಎಂಬಂತೆ ಜನ್ಮದಿಂದ ಯಾವ ವರ್ಣದವನಾದರೂ ತನ್ನತನ್ನ ಕರ್ಮಗಳನು ಈಶ್ವರಾರ್ಪಣಬುದ್ಧಿಯಿಂದ ಮಾಡಿದವೆ ಅವನಿಗೆ ಸಿದ್ಧಿಯಾಗದೆ ತಪ್ಪುವದೇ ಇಲ್ಲ.

## ಬ್ರಹ್ಮತೇಜಸ್ಸು.

ಸರ್ವವರ್ಣಗಳಿಗೂ ಮೋಕ್ಷಕ್ಕೆ ಅಧಿಕಾರವಿದ್ದರೂ ಭರತಖಂಡದಲ್ಲಿ ಬ್ರಾಹ್ಮಣತ್ವಕ್ಕೆ ಸರ್ವಶ್ರೇಷ್ಠತೆ ಇರುವದೇನೂ ಸುಳ್ಳಲ್ಲ. ಇಲ್ಲಿ ವಂಶದ ಮೂಲಪುರುಷರೆನಿಸಿಕೊಂಡಿರುವವರೆಲ್ಲಾ ಬ್ರಾಹ್ಮಣತ್ವದಿಂದ ಹೆಸರುಗೊಂಡವರೆ. ಬ್ರಾಹ್ಮಣತ್ವವೇ ಈ ದೇಶದ ಜೀವಕಳೆ. ಪಾಶ್ಚಿಮಾತ್ಯದೇಶದಲ್ಲಿ ಮೂಲಪುರುಷರೆಲ್ಲಾ ಕ್ಷಾತ್ರತೇಜಸ್ವಿಗಳವರು. ನೆರೆಹೊರೆಯವರ ಮೇಲೆ ತಮ್ಮ ಕೈಯನ್ನು ನಡೆಸಿ ಇತರರನ್ನು ಕೊಂದು ಮುಂದೆ ಬಂದವರೆ ಅಲ್ಲಿಯ ಜನರ ಗೌರವಕ್ಕೆ ಪಾತ್ರರಾಗಿ ಖ್ಯಾತಿಯನ್ನು ಪಡೆದರು. ಆ ದೇಶದವರ ಅಭಿರುಚಿ ಹಾಗೆ. ಅದು ಭೌತಿಕಪ್ರಧಾನವಾದ ದೇಶವಾದ್ದರಿಂದ ಅವರ ಭಾವನೆ ಅವರಿಗೆ ಒಪ್ಪುವದು. ನಮ್ಮ ದೇಶದ ಮೂಲಪುರುಷರೆಲ್ಲಾ ಮಹರ್ಷಿಗಳು. ಪೂರ್ವದಲ್ಲಿ ಯಾರು ತಮ್ಮ ತನುಮನಧನಗಳನ್ನು ಧರ್ಮಕ್ಕಾಗಿ ಉಪಯೋಗಿಸಿ ತಾವೂ ಮರಣಭಯದಿಂದ ಪಾರಾಗಿ ಇತರರಿಗೂ ಹುಟ್ಟುಸಾವುಗಳ ಕೋಟಲೆಯನ್ನು ತಪ್ಪಿಸಿದರೊ ಅವರೆ ಇಲ್ಲಿಯ ಜನರ ಗೌರವಕ್ಕೆ ಪಾತ್ರರಾಗಿ ಪ್ರಸಿದ್ಧರಾದರು. ಈ ದೇಶದವರ ಅಭಿರುಚಿ ಹೀಗೆ. ಇದು ಆಧ್ಯಾತ್ಮಿಕಪ್ರಧಾನವಾದ ದೇಶವಾದ್ದರಿಂದ ಇವರ ಭಾವನೆ ಇವರಿಗೆ ಒಪ್ಪುವದು.

ವ್ಯವಹಾರದೃಷ್ಟಿಯಿಂದ ನೋಡಿದರೆ ಕ್ಷಾತ್ರತೇಜಸ್ಸಿಗೇ ಮಹತ್ತ್ವವು ಬರುವದು. ಈ ದೃಷ್ಟಿಯಿಂದ ಬ್ರಾಹ್ಮಣತ್ವಕ್ಕೆ ಅತ್ಯಂತಕನಿಷ್ಠದಶೆಯೇ ಬರುವದು. ಏಕೆಂದರೆ ತನ್ನ ದೇಹೇಂದ್ರಿಯಾದಿಗಳ ಉಪಭೋಗಕ್ಕೆಂದು ಏನನ್ನೂ ಇಟ್ಟುಕೊಳ್ಳದ ವೈರಾಗ್ಯವೃತ್ತಿಯ ಯೋಗ್ಯತೆಯನ್ನರಿಯದವರಿಗೆ ಅದು ದರಿದ್ರಾವಸ್ಥೆಯಾಗಿ ತೋರುವದು. ದರಿದ್ರಾವಸ್ಥೆಯು ಶ್ರೀಮಂತಿಕೆಯ ದೃಷ್ಟಿಯಿಂದ ಕನಿಷ್ಠವೆ. ಆದರೆ ಆ ಶ್ರೀಮಂತಿಕೆಯನ್ನು ಕೂಡ ಕಸಕ್ಕಿಂತ ಕಡೆಯಾಗಿ ಕಾಣುವ ಮಹರ್ಷಿಗಳ ಯೋಗ್ಯತೆಯು

ವಿರಕ್ತಾವಸ್ಥೆಯದು. ಅದು ಶ್ರೀಮಂತಿಕೆಗಿಂತ ಮೇಲಿನದು. ಇದರ ಸವಿ ಪಶ್ಚಿಮದೇಶದವರಿಗಿನ್ನೂ ಹತ್ತಿಲ್ಲ. ಆದ್ದರಿಂದ ಅವರು ಇನ್ನೂ ಭೌತಿಕಭಾಗ್ಯಕ್ಕೇ ಬೆಲೆಯನ್ನು ಕಟ್ಟಿಕೊಂಡಿರುವರು. ನಮ್ಮ ಮಹರ್ಷಿಗಳ ಸ್ಥಿತಿಯು ರಾಜಾಧಿರಾಜರನ್ನು ಕೂಡ ಕಃಪದಾರ್ಥವೆಂದು ಭಾವಿಸುವಂಥದ್ದೆಂಬದಕ್ಕೆ ಎಷ್ಟೋ ನಿದರ್ಶನಗಳಿವೆ. ಇಲ್ಲಿ ಭಾಗವತದ ಒಂದು ಕಥೆಯನ್ನು ಉದಾಹರಿಸಿದರೆ ನಾಕಾಗಿ ತೋರುವದು. ಹಿಂದೆ ವೇನನೆಂಬ ರಾಜನಿದ್ದನು. ಅವನು ತನ್ನನ್ನೇ ದೇವರೆಂದು ತಿಳಿದು ಕೊಳ್ಳಿರೆಂದೂ ತನಗೇ ಸರ್ವವನ್ನೂ ಅರ್ಪಣಮಾಡಿರೆಂದೂ ಜನರನ್ನು ನಿರ್ಬಂಧಿಸಿ ಅವರನ್ನೆಲ್ಲಾ ಮನಸ್ಸು ಬಂದ ಹಾಗೆ ಕಾಡುವದಕ್ಕಾರಂಭಿಸಿದನು. ಇದರಿಂದ ಜನಗಳಿಗಾದ ಕಷ್ಟವನ್ನು ನೋಡಿ ಆಗಿನ ಋಷಿಗಳು ಜನಕಂಟಕನಾದ ರಾಜನಿರುವದು ಯೋಗ್ಯವಲ್ಲವೆಂದು ತಮ್ಮ ತಪಃಪ್ರಭಾವದಿಂದ ಅವನನ್ನು ಸಂಹಾರಮಾಡಿದರು. ಆಮೇಲೆ ರಾಜನೊಬ್ಬನಿಲ್ಲದಿದ್ದರೆ ವ್ಯವಹಾರವು ನಾಗುವದಿಲ್ಲವೆಂದು ಜನರೆಲ್ಲರೂ ಹೇಳಿಕೊಂಡದ್ದರಿಂದ ಅದೇ ಋಷಿಗಳೇ ಆ ವೇನನ ತೊಡೆಯಿಂದ ಒಬ್ಬ ಪುರುಷನನ್ನು ಹುಟ್ಟಿಸಿ ವ್ಯವಹಾರದ ಸೌಕಾರ್ಯವನ್ನು ಕಲ್ಪನೆಮಾಡಿಕೊಂಡರು. ಈ ರೀತಿಯಲ್ಲಿ ಅವರಲ್ಲಿ ಶಾಪಾನುಗ್ರಹಸಾಮರ್ಥ್ಯವಿದ್ದದರಿಂದಲೇ ಅವರು ಸರ್ವವರ್ಣಗಳಲ್ಲಿಯೂ ತಮ್ಮ ಪ್ರಾಶಸ್ತ್ಯವನ್ನು ಸ್ಥಾಪಿಸಿದರು.

ಪೂರ್ವದ ಋಷಿಗಳಲ್ಲಿ ನಿಜವಾದ ಬ್ರಹ್ಮತೇಜಸ್ಸು ಇದ್ದದರಿಂದ ಅವರ ಮುಂದೆ ರಾಜಾಧಿರಾಜರು ಕೂಡ ತಲೆಯನ್ನು ಬಗ್ಗಿಸುತ್ತಿದ್ದರು. ಹಿಂದೆ ಭರತನು ಅಣ್ಣನಾದ ಶ್ರೀರಾಮನನ್ನು ಹುಡುಕಿಕೊಂಡು ಹೋಗುವಾಗ ಮಹತ್ತಾದ ಅವನ ಪರಿವಾರಕ್ಕೆಲ್ಲಾ ಮಹರ್ಷಿಗಳಾದ ಭಾರದ್ವಾಜರು ತಮ್ಮ ತಪಃಪ್ರಭಾವದಿಂದ ರಾಜಯೋಗ್ಯವಾದ ಆತಿಥ್ಯವನ್ನು ಮಾಡಿದ್ದು ಶ್ರೀರಾಮಾಯಣದಲ್ಲಿದೆ. ಅದೇ ರಾಮಾಯಣದಲ್ಲಿಯೇ ಬ್ರಹ್ಮತೇಜಸ್ಸಿನಲ್ಲಿ ಹೆಸರು ಹೊಂದಿದ ವಸಿಷ್ಠರ ಆಶ್ರಮಕ್ಕೆ ರಾಜನಾದ ವಿಶ್ವಾಮಿತ್ರನು ಬಂದಾಗ ಅವನ ಸರ್ವಸೇನೆಗೂ ಪರಿವಾರಕ್ಕೂ ಯಥಾಯೋಗ್ಯವಾಗಿ ವಸಿಷ್ಠರು ತಮ್ಮ ಕಾಮಧೇನುವಿನ ಪ್ರಭಾವದಿಂದ

ಆತಿಥ್ಯವನ್ನು ಮಾಡಿದರು. ಆ ಕಾಮಧೇನುವನ್ನು ತಾನು ಹೊತ್ತು ಹಾಕಬೇಕೆಂದು ವಿಶ್ವಾಮಿತ್ರನು ಕುಕಲ್ಪನೆಯನ್ನು ತಂದುಕೊಂಡು ಪ್ರಯತ್ನವನ್ನು ನಡೆಸಿದನು. ಕೊನೆಗೂ ವಸಿಷ್ಠವಿಶ್ವಾಮಿತ್ರರಿಗೆ ಯುದ್ಧವೇ ಆಯಿತು. ವಸಿಷ್ಠರು ತಮ್ಮ ಮುಂದೊಂದು ಬ್ರಹ್ಮದಂಡವನ್ನಿಟ್ಟುಕೊಂಡು ಸ್ವಸ್ಥವಾಗಿ ಕುಳಿತಿದ್ದರು. ವಿಶ್ವಾಮಿತ್ರನು ಅವರ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು. ಆದರೇನು! ಬಂದ ಬಾಣಗಳನ್ನೆಲ್ಲಾ ಆ ಬ್ರಹ್ಮದಂಡವು ತನ್ನ ಕಡೆಗೆ ಸೆಳೆದುಕೊಂಡು ಅವುಗಳನ್ನು ಮುರಿದುಹಾಕಿ ಬಿಡುತ್ತಿತ್ತು. ಆಗ ವಿಶ್ವಾಮಿತ್ರನು

"ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋಬಲಂ ಬಲಂ ।
ಏಕೇನ ಬ್ರಹ್ಮದಂಡೇನ ಸರ್ವಾಸ್ತ್ರಾಣಿ ಹತಾನಿ ಮೇ ॥"

"ಕ್ಷತ್ರಿಯಬಲಕ್ಕೆ ಧಿಕ್ಕಾರವಿರಲಿ; ಬ್ರಹ್ಮತೇಜಸ್ಸಿನ ಬಲವೇ ಬಲ. ಒಂದು ಬ್ರಹ್ಮದಂಡವು ನನ್ನ ಸರ್ವಾಸ್ತ್ರಗಳನ್ನೂ ನುಂಗಿ ನೀರು ಕುಡಿಯಿತಲ್ಲ.!" ಎಂದು ಹೇಳಿ ನೊಂತು ಅಂದೇ ಅವನು ಬ್ರಹ್ಮತೇಜಸ್ಸನ್ನು ಪಡೆದುಕೊಳ್ಳಬೇಕೆಂದು ತಪಸ್ಸಿಗೆ ಹೋದನು.

ಹೀಗೆ ಕ್ಷತ್ರಿಯರು ಬ್ರಹ್ಮತೇಜಸ್ಸನ್ನು ಗೌರವಿಸುವದೇನು ದೊಡ್ಡ ಮಾತು! ಯೋಗ್ಯತೆ ಇದ್ದಮೇಲೆ ಎಲ್ಲರೂ ಗೌರವಿಸಲೇಬೇಕು. ಬ್ರಹ್ಮತೇಜಸ್ಸಿನಲ್ಲಿ ಹೆಸರುಗೊಂಡಿದ್ದ ಭೃಗುಋಷಿಗಳು ಒಮ್ಮೆ ವಿಷ್ಣುವಿನ ದರ್ಶನಕ್ಕೆ ಹೋದರು. ಆಗ ವಿಷ್ಣು ಕಾಲನ್ನು ನೀಡಿಕೊಂಡು ವಿನೋದದಿಂದ ಮಲಗಿದ್ದನು. ಆ ಉದ್ಧತತನವನ್ನು ನೋಡಿ ಕೋಪದಿಂದ ಆ ಋಷಿಗಳು ವಿಷ್ಣುವಿನ ಎದೆಯನ್ನು ತಮ್ಮ ಕಾಲಿನಿಂದ ಒದ್ದರು. ಹೀಗೆ ದೊಡ್ಡವರಿಗೆ ಕೋಪವು ಬರಬಹುದೋ ಹೇಗೆಂಬದನ್ನು ಸಮಯಬಂದಾಗ ವಿಚಾರಮಾಡೋಣ. ಇಲ್ಲಿ ವಿಷ್ಣು ಬ್ರಾಹ್ಮಣನ ವಿಷಯದಲ್ಲಿ ಹೇಗೆ ನಡೆದುಕೊಂಡನೆಂಬುದು ವಿಚಾರಾಸ್ಪದವಾದ ವಿಷಯವಾಗಿದೆ. ಆ ಬ್ರಾಹ್ಮಣನು ಉತ್ತಮಭಕ್ತನೆಂದು ವಿಷ್ಣುವಿಗೆ ಗೊತ್ತಿತ್ತು. ಆದ್ದರಿಂದ ಭಕ್ತಪರಾಧೀನನಾದ ವಿಷ್ಣು ಆ ಬ್ರಾಹ್ಮಣನ ಪಾದವನ್ನು ಗಟ್ಟಿಯಾಗಿ ಹಿಡಿದುಕೊಂಡು "ನನ್ನ ಕಠಿನವಾದ ಎದೆಯ ಬಿರುಸಿನಿಂದ ಎಷ್ಟು ಪೆಟ್ಟಾಯಿತೊ!" ಎಂದು ಬಹಳವಾಗಿ ಉಪಚರಿಸಿದನು. ಬ್ರಹ್ಮ

ತೇಜಸ್ಸು ದೇವರಿಗೂ ಕೂಡ ಪೂಜ್ಯವಾದದ್ದು. ಆದ್ದರಿಂದ ಬ್ರಹ್ಮ ತೇಜಸ್ಸು ಸರ್ವಪ್ರಕಾರದಿಂದಲೂ ಸಂರಕ್ಷಣೀಯವಾದದ್ದು. ಈ ಅಭಿಪ್ರಾಯಕ್ಕೆ ಸಾಧಕವಾಗಿ ಶ್ರೀಮಚ್ಛಂಕರಭಗವತ್ಪಾದರ ಗೀತಾ ಭಾಷ್ಯದಲ್ಲಿರುವದೇನೆಂದರೆ—

" .... ವಿಷ್ಣುಃ ಬ್ರಾಹ್ಮಣತ್ವಸ್ಯ ರಕ್ಷಣಾರ್ಥಂ .... ಸಂಬಭೂವ.
ಬ್ರಾಹ್ಮಣತ್ವಸ್ಯ ಹಿ ರಕ್ಷಣೇನ ರಕ್ಷಿತಃ ಸ್ಯಾದ್ವೈದಿಕೋಧರ್ಮ
ಸ್ತದಧೀನತ್ವಾದ್ವರ್ಣಾಶ್ರಮಭೇದಾನಾಮ್ "

ತಾತ್ಪರ್ಯವೇನೆಂದರೆ— ಎಲ್ಲಾ ವರ್ಣಾಶ್ರಮಭೇದಗಳೂ ವೈದಿಕಧರ್ಮದ ಅಧೀನವಾದ್ದರಿಂದಲೂ ಆ ವೈದಿಕಧರ್ಮವು ಬ್ರಾಹ್ಮಣತ್ವದ ರಕ್ಷಣೆಯಿಂದ ರಕ್ಷಿತವಾಗುವದರಿಂದಲೂ ಆದಿಕರ್ತನಾದ ವಿಷ್ಣು ಬ್ರಾಹ್ಮಣತ್ವದ ರಕ್ಷಣೆಗಾಗಿ ಕೃಷ್ಣನಾಗಿ ಅವತರಿಸಿದನು. ಇದನ್ನು ನೋಡಿದರೆ ಬ್ರಾಹ್ಮಣತ್ವದ ರಕ್ಷಣೆಯು ಮೊದಲನೆಯ ಕರ್ತವ್ಯವಾಗಿ ಕಾಣುವದು. ದೈವ ದುರ್ವಿಪಾಕದಿಂದ ಈಚೀಚೆಗೆ ಬ್ರಾಹ್ಮಣತ್ವದ ಸುಳಿ ಸೀಯುತ್ತ ಬಂದಿರುವದನ್ನು ನೆನೆಸಿಕೊಂಡರೆ ಮುಂದೆ ಜಗತ್ತಿನ ಗತಿಯೇನಾಗುವದೊ ಎಂದು ಎದೆಯೊಡೆಯುವದು. ಬ್ರಾಹ್ಮಣಜಾತಿಗೇ ಇದೊಂದು ಅಪಹಾಸ್ಯದ ಕಾಲವೊದಗಿರುವಂತೆ ಕಾಣುವದು. ಯಾರನ್ನು ನೋಡಿದರೂ ಆ ಜಾತಿಯ ಮೇಲೆ ವಿಷವನ್ನು ಕಾರುವರು. ಯಾರನ್ನು ಕೇಳಿದರೂ ಅದನ್ನು ತಳಕ್ಕೆ ಹಾಕಿ ತುಳಿಯಬೇಕೆನ್ನುವರು. ಇದಕ್ಕೆ ಕಾರಣವು ಕಲಿಧರ್ಮವೆಂದು ಕಲಿಯ ಮೇಲೆ ಕೆಲವರು ಗೂಗೆಯನ್ನು ಕೂಡಿಸುವರು. ಇದು ಅವರು ಮಾಡಿದ ಪಾಪದ ಫಲವೆಂದು ಕೆಲವರು ಅವರ ನಾಲಿಗೆಯನ್ನು ಅವರ ಹಲ್ಲುಗಳ ಸಂದಿಗೇ ಚಾಚುವರು. ಅಂತು ಪೂರ್ವದಲ್ಲಿ ಪ್ರತೀಕಾರ ಸಾಮರ್ಥ್ಯವಿದ್ದರೂ ತಪೋಹಾನಿಯ ಭಯದಿಂದ ಸಹನಮಾಡುತ್ತಿದ್ದ ಬ್ರಾಹ್ಮಣರು ಈಗ ಬಹು ಮಟ್ಟಿಗೆ ತಮ್ಮೊಳಗೇ ತಿರುಳಿಲ್ಲದ್ದರಿಂದ ಸಹನಮಾಡುತ್ತಿರುವರು. ಹೀಗಾಗಿರುವದೇ ಒಂದು ದೃಷ್ಟಿಯಿಂದ ಯೋಗ್ಯವಾಗಿರಬಹುದು. ಈ ಸಂದರ್ಭಕ್ಕೊಂದು ಈಸೋಪನ ಕಥೆಯು ನೆನಪಾಗುತ್ತದೆ. ಒಂದು ಸಿಂಹವು ಒಬ್ಬ ಸುಂದರಸ್ತ್ರೀಯನ್ನು ನೋಡಿ ಆಕೆಯನ್ನು ತನ್ನ ಹೆಂಡತಿಯಾಗಿ ವರಿಸಿತಂತೆ. ಆಕೆ ಹಲ್ಲನ್ನೂ ಉಗ್ರ

ರನ್ನೂ ತೆಗೆಸಿಕೊಂಡರೆ ಹಾಗಾಗುವನೆಂದು ಅದಕ್ಕೆ ಮಂಕುಬೂದಿಯನ್ನು ತಳೆದಳಂತೆ. ಆದು ಅವೆರಡನ್ನೂ ತೆಗೆಸಿಕೊಂಡು ಬರುತ್ತಲೇ ಕಿನ್ನಿಗೆ ಹೊಡೆದಳಂತೆ. ಉಗುರೂ ಹಲ್ಲೂ ಹೋದ ಮೇಲೆ ಸಿಂಹದ ಭಯವೇಕೆ? ಬ್ರಾಹ್ಮಣರು ತಮ್ಮ ನಿಷ್ಠೆಯನ್ನು ಬಿಟ್ಟು ಬ್ರಹ್ಮತೇಜಸ್ಸಿನ ನೆಲೆಯೇ ಇಲ್ಲದವರಾಗಿರುವಾಗ ಅವರಿಗೆ ಬ್ರಾಹ್ಮಣಜಾತಿಯ ಪೂಜ್ಯತೆ ಹೇಗೆ ಬಂದೀತು? ಈದು ಬ್ರಾಹ್ಮಣರ ದೋಷವಾಯಿತು. ಇರಲಿ. ಬ್ರಾಹ್ಮಣರು ತಳಕ್ಕೆ ತುಳಿದಿದ್ದರೆಂದು ಹೇಳಿ ಈಗ ಇತರ ಜಾತಿಗಳ ಉನ್ನತಿಗೆ ಕೆಲವರು ಯತ್ನಿಸುತ್ತಿರುವರಲ್ಲ! ಇದು ಶ್ಲಾಘ್ಯವೇ ಸರಿ. ಆ ಜಾತಿಗಳೂ ಮೇಲಕ್ಕೇರತಕ್ಕದ್ದೆ. ಬ್ರಾಹ್ಮಣರು ಅವರನ್ನು ತುಳಿದುಕೊಂಡಿರುವರೆಂಬ ಮಾತು ಮಾತ್ರ ತಪ್ಪು. ಬ್ರಾಹ್ಮಣರು ತಾವೇ ಇದ್ದಕಡೆಯಲ್ಲಿಲ್ಲ. ಅಧಃಪತನವನ್ನು ಹೊಂದಿರುವವರು ತುಳಿಯುವದು ಹೇಗೆ? ಅದೂ ಹೋಗಲಿ. ಎಲ್ಲಾ ಜಾತಿಗಳನ್ನೂ ಉನ್ನತಸ್ಥಿತಿಗೆ ತಂದರಲ್ಲವೆ ಜಗತ್ತು ಮೇಲಕ್ಕೇರುವದು? ತಳಕ್ಕೆ ಇಳಿದಿರುವ ಬ್ರಾಹ್ಮಣತ್ವವನ್ನು ಮೇಲಕ್ಕೆತ್ತುವದಕ್ಕೆ ಯಾರು ಯತ್ನಿಸಿದ್ದಾರೆ? ಹಿಂದೆ ವಿಶ್ವಾಮಿತ್ರರು ಯಾಗವನ್ನಾರಂಭಿಸಿದಾಗ ಅವರ ಯಾಗರಕ್ಷಣೆಯಾಗಿ ಬ್ರಾಹ್ಮಣತ್ವವು ವೃದ್ಧಿಯಾಗಲು ದಶರಥಮಹಾರಾಜನು ತನ್ನ ಮುದ್ದುಮಕ್ಕಳಾದ ಶ್ರೀರಾಮಲಕ್ಷ್ಮಣರನ್ನು ಮುನಿಯ ಹಿಂದೆ ಕಳುಹಿಸಿದನು. ಹೀಗೆ ಬ್ರಾಹ್ಮಣತ್ವದ ರಕ್ಷಣೆಗೆ ರಾಜರೂ ನೆರವಾಗಬೇಕು. ಈಗಿನ ದಿನದಲ್ಲಿ ನಾವು ಇದಕ್ಕೆ ರಾಜರ ನೆರವನ್ನು ನಿರೀಕ್ಷಿಸುವ ಹಾಗಿಲ್ಲ. ಆದ್ದರಿಂದ ಜನತೆಯ ಮುಖಂಡರು ಇತ್ತ ಕಣ್ಣು ಹಾಕಬೇಕು.

ಎಲ್ಲರೂ ಸೇರಿ ಬ್ರಾಹ್ಮಣಜಾತಿಯನ್ನು ಮತ್ತೆ ಅಟ್ಟಕ್ಕೇರಿಸಬೇಕೆಂದು ನನ್ನ ಅಭಿಪ್ರಾಯವಲ್ಲ. ಬ್ರಾಹ್ಮಣತ್ವದ ರಕ್ಷಣೆಯಾಗಬೇಕು. ಬ್ರಾಹ್ಮಣತ್ವದ ಲಕ್ಷಣಗಳು ನಮ್ಮ ಶಾಸ್ತ್ರದಲ್ಲಿ ಬೇಕಾದಷ್ಟಿವೆ. ಆದರೂ ಈಚೀಚೆಗೆ ಪಾಶ್ಚಾತ್ಯರ ಮಾತಿನ ನಾದವು ನಮಗೆ ಬಹಳ ಹತ್ತಿದೆ. ಆದ್ದರಿಂದ ಆಲಿವರ್ ಗೋಲ್ಡ್‌ಸ್ಮಿತ್ ಸಾಹೇಬರು "ಸಿಟಿಜನ್ ಆಫ್ ದಿ ವರ್ಲ್ಡ್" ಎಂಬ ಗ್ರಂಥದಲ್ಲಿ ಬ್ರಾಹ್ಮಣರ ವಿಷಯದಲ್ಲಿ ಮಾಡಿರುವ ವರ್ಣನೆಯನ್ನು ಇಲ್ಲಿ ದಿಕ್ಪ್ರದರ್ಶನವಾಗಿ

ಕೊಡುತ್ತೇನೆ

" ಸರಳರೂ ಪ್ರಾಮಾಣಿಕರೂ ಆದ ಭರತಖಂಡದ ಬ್ರಾಹ್ಮಣರೆ, ನಿಮ್ಮ ಹಾಗೆ ಸುಖಾನುಭವವನ್ನು ಮಾಡುವದಕ್ಕಾಗಿ ಹುಟ್ಟಿರುವ ಸರ್ವ ಪ್ರಾಣಿವರ್ಗಕ್ಕೂ ನಿರುಪದ್ರವಮಿತ್ರರಾದವರೆ, ಧನ್ಯರು; ನೀವೇ ಧನ್ಯರು. ಅನ್ಯಪ್ರಾಣಿಗಳ ಸಂಕಟಗಳ ಮೂಲಕವಾದ ಕ್ಷಣಿಕಸುಖ ವನ್ನು ನೀವು ಎಂದೂ ಬಯಸಿದವರಲ್ಲ. ವಿಲಕ್ಷಣಸುಶಿಕ್ಷಣೆಯು ಹಿಂಸಾ ತ್ಮಕವಾದ ಕುಶಲವಿದ್ಯೆಯನ್ನು ನೀವು ಎಂದೂ ತಿಳಿಯಲಿಚ್ಛಿಸಲಿಲ್ಲ. ಹಿಂಸಾಲಬ್ಧವಾದ ಆಹಾರವನ್ನು ನೀವು ಎಂದೂ ತಿಂದು ತೇಗಿದವ ರಲ್ಲ. ನಿಮ್ಮ ಮನೋಭಾವಗಳು ನಮಗಿಂತ ಎಷ್ಟು ಶುದ್ಧವಾದವು ! ಮತ್ತು ಎಷ್ಟು ಸುಶಿಕ್ಷಿತವಾದವು !! ಪಂಚಭೂತಗಳಲ್ಲಿ ಪ್ರತಿಯೊಂದರ ಸೂಕ್ಷ್ಮತತ್ತ್ವವೂ ನಿಮಗೆ ಚೆನ್ನಾಗಿ ಗೊತ್ತಿದೆ. ಹಿಂದೆ ಎಂದೂ ಸೇವಿ ಸದೆ ಇರುವಂಥ ಜುಳುಜುಳು ಹರಿಯುವ ನಿರ್ಮಲವಾದ ನೀರಿನ ಪ್ರವಾಹನೇ ನಿಮಗೊಂದು ಭೋಗಾತಿಶಯವು. ಸ್ಥಲಾಂತರವೇ ನಿಮ ಗೊಂದು ಹೊಸಹಬ್ಬ. ಆಹಹ ! ಏನಿದು ; ಪಾಶ್ಚಿಮಾತ್ಯರ ಊಹೆಗೂ ಕೂಡ ನಿಲುಕದಂಥ ಪರಿಶುದ್ಧತೆಯು !! "

ಈಗ ಗ್ರಂಥಸ್ಥವಾಗಿರುವ ಈ ವರ್ಣನೆಯನ್ನು ನಾವು ಸಜೀವ ವಾಗಿ ಮಾಡಿದರೆ ಮಾತ್ರ ಬ್ರಾಹ್ಮಣತ್ವದ ರಕ್ಷಣೆಯ ದಾರಿ ಸಾಗೀತು. ಪೂರ್ವ ದಲ್ಲಿ ಬ್ರಾಹ್ಮಣನು ರಾಜರ ಮುಂದೆ ಸಾಕ್ಷಿಯನ್ನು ಹೇಳುವ ದಕ್ಕೆ ಹೋದಾಗ ರಾಜನು ಅವನನ್ನು " ಹೇಳು " ಎಂದು ಮಾತ್ರ ಕೇಳಬೇಕೆಂದು ವಿಧಿಯಿತ್ತು. ಬ್ರಾಹ್ಮಣನ ಬಾಯಿಂದ ಬಂತೆಂದರೆ ಅದು ಸತ್ಯವೇ ಆಗಿರುವದೆಂದು ಭಾವನೆಯಿತ್ತು. ಹಿಂದೆ ಸತ್ಯಕಾಮನೆಂಬುವನು ಒಬ್ಬ ಋಷಿಗಳ ಬಳಿಗೆ ಹೋಗಿ ಜ್ಞಾನೋಪ ದೇಶವನ್ನು ಮಾಡಬೇಕೆಂದು ಕೇಳುವಾಗ ತನ್ನ ಗೋತ್ರವು ಗೊತ್ತಿಲ್ಲ ವೆಂದು ಸತ್ಯವನ್ನು ಹೇಳಿದ್ದರಿಂದ ಅವನು ಬ್ರಾಹ್ಮಣನಿರಬೇಕೆಂದು ನಿರ್ಣಯಿಸಿ ಅವನಿಗೆ ಬ್ರಾಹ್ಮಣವರ್ಣಕ್ಕೆ ಉಚಿತವಾದ ಸಂಸ್ಕಾರವನ್ನು ಮಾಡಿದರು. ಹೀಗೆ ಸತ್ಯ, ಶಮ, ದಮ– ಮೊದಲಾದ ಗುಣಗಳನ್ನು ಹೆಚ್ಚಿಸಿಕೊಂಡು ತಪಸ್ಸಾಮರ್ಥ್ಯವನ್ನು ಪಡೆಯುತ್ತಿದ್ದದರಿಂದ ಅವರಿಂದ

ಮಹಿಮೆಗಳು ನಡೆದು ಜನರಲ್ಲಿ ಅವರಿಗೆ ಗುರುತ್ವವು ತಾನಾಗಿ ಹುಟ್ಟುತ್ತಿತ್ತು. ಹಿಂದೆ ಒಮ್ಮೆ ಸೂರ್ಯನು ಅಂತರ್ಧಾನನಾದ ಸಂದರ್ಭದಲ್ಲಿ ಅತ್ರಿಋಷಿಗಳು ತಮ್ಮ ತಪಃಪ್ರಭಾವದಿಂದ ಏಳುದಿನ ತಾವೇ ಸೂರ್ಯಮಂಡಲವಾಗಿ ಬೆಳಗುತ್ತಿದ್ದರೆಂದು ಕಥೆಯಿದೆ. ಭರತಖಂಡವು ಉತ್ತಮಸ್ಥಿತಿಗೆ ಬರಬೇಕಾದರೆ ನಾವು ವೈದಿಕಧರ್ಮವನ್ನು ಉಜ್ಜೀವನಗೊಳಿಸಬೇಕು. ಆ ವೈದಿಕಧರ್ಮವು ಬ್ರಾಹ್ಮಣತ್ವದ ರಕ್ಷಣೆಯಿಂದ ಮಾತ್ರ ಆಗುವದು. ಆದ್ದರಿಂದ ಇತರ ವರ್ಣಗಳನ್ನು ಮೇಲಕ್ಕೆತ್ತುವೆವೆಂಬ ಗಡಿಬಿಡಿಯಲ್ಲಿ ಬ್ರಾಹಣತ್ವದ ರಕ್ಷಣೆಗಾಗಿಯೂ ಪ್ರಯತ್ನ ಮಾಡುವದನ್ನು ಮರೆಯಬಾರದು. ಇದನ್ನು ಬಿಟ್ಟು ಉಳಿದವುಗಳ ಉನ್ನತಿಯನ್ನು ಮಾಡಹೋದರೆ ಆಕಾಶದಲ್ಲಿ ಅರಮನೆಯನ್ನು ಕಟ್ಟುವದಕ್ಕೆ ಹೋದಂತೆ ಆಗುವದು.

## ಧರ್ಮಗ್ಲಾನಿಯ ಲಕ್ಷಣ.

ನಮ್ಮ ದೇಶದ ಜನರ ಪ್ರತಿದಿನದ ಪ್ರಾರ್ಥನೆಯಲ್ಲಿ “ ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ ” ಎಂದೊಂದು ಮಾತಿದೆ. ಗೋವುಗಳಿಗೂ ಬ್ರಾಹ್ಮಣರಿಗೂ ಯಾವಾಗಲೂ ಮಂಗಲವಾಗಲೆಂದು ಅದರ ತಾತ್ಪರ್ಯ. ಬ್ರಾಹ್ಮಣರಿಗೆ ಮಂಗಲವೆಂದರೆ ಬ್ರಾಹ್ಮಣತ್ವದ ರಕ್ಷಣೆ. ಈ ಬ್ರಾಹ್ಮಣತ್ವದ ಹೀನಸ್ಥಿತಿಯು ಈಗ ಎಲ್ಲರಿಗೂ ಕಾಣಿಸುತ್ತಿದೆ. ಇದೊಂದು ಧರ್ಮಗ್ಲಾನಿಯ ದೊಡ್ಡ ಗುರ್ತು. ಗೋರಕ್ಷಣೆಯೂ ಇದಕ್ಕೆ ಸಮಾನವಾದದ್ದು. ಇದು ವ್ಯವಸಾಯದ ದೇಶವಾದ್ದರಿಂದ ಗೋಗಳ ಹೆಚ್ಚುಗಾರಿಕೆಯೆಂಬುದು ವ್ಯವಹಾರದೃಷ್ಟಿ. ಧಾರ್ಮಿಕದೃಷ್ಟಿಯಿಂದ ನೋಡಿದರೆ ಗೋವಿನ ಶರೀರದಲ್ಲಿ ಸಮಸ್ತದೇವತೆಗಳೂ ಇರುವರೆನ್ನುತ್ತಾರೆ. ಭೂದೇವಿಯು ದುಷ್ಟರ ಭಾರವನ್ನು ತಡೆಯಲಾರದೆ ದೇವರ ಕಡೆಗೆ ಶರಣು ಹೋಗುವಾಗಲೆಲ್ಲಾ ಗೋರೂಪವನ್ನು ಧಾರಣ ಮಾಡಿಯೇ ಹೋಗಿದ್ದಾಳೆ. ಗೋವಿನ ಹಾಲಿನಂಥ ಉತ್ತಮಪದಾರ್ಥವು ಈಸೃಷ್ಟಿಯಲ್ಲಿನ್ನೊಂದಿಲ್ಲವೆಂಬಷ್ಟು ಪ್ರಶಸ್ತವಾಗಿದೆ. ಬರೀ ಅದರ ಹಾಲೇ ಏಕೆ ; ಅದರ ಗಂಜಲವೂ ಸಗಣಿಯೂ ಕೂಡ ವಿಷ

ಕ್ರಿಮಿಪರಿಹಾರಕಗಳೆಂದೂ ದೊಡ್ಡದೊಡ್ಡ ಪಾಶ್ಚಾತ್ಯ ಡಾಕ್ಟರರೂ ಒಪ್ಪುತ್ತಾರೆ. ಬೆಳಗಾಗಿ ಏಳುತ್ತಲೇ ಗೋವಿನ ದರ್ಶನವು ಅತ್ಯಂತ ಶ್ರೇಯಸ್ಕರವೆಂಬ ಭಾವನೆ ಇದೆ. ಹಿಂದೆ ತನ್ನ ದೇಶದಲ್ಲಿ ಒಬ್ಬ ಶೂದ್ರನು ನಿರ್ದಯದಿಂದ ಗೋವನ್ನು ಹೊಡೆಯುತ್ತಿರುವದನ್ನು ಕಂಡೊಡನೆ ಪರೀಕ್ಷಿದ್ರಾಜನು ತನ್ನ ದೇಶಕ್ಕೆ ಕಲಿಪ್ರವೇಶವಾಯಿತೆಂದು ತಿಳಿದುಕೊಂಡನೆಂದು ಹೇಳುತ್ತಾರೆ. ಈಗಂತು ನಮ್ಮ ದೇಶದಲ್ಲಿ ಗೋವಧೆಯು ಮಿತಿಮೀರಿ ನಡೆಯುವದನ್ನು ವಿಚಾರಕ್ಕೆ ತೆಗೆದುಕೊಂಡರೆ ಧರ್ಮವು ಕಣ್ಣಿಗೆ ಕಾಣದಂತೆ ಎತ್ತ ಕಡೆಗೆ ವನವಾಸಕ್ಕೆ ಹೋಗಿದೆಯೋ ಹೇಳುವದಕ್ಕೆ ಬರುವಹಾಗಿಲ್ಲ. ಹಿಂದೆ ಗೋಕ್ಷೀರಪಾನದಿಂದ ಸಾತ್ತ್ವಿಕತೆಯನ್ನು ಹೊಂದಿ ಬುದ್ಧಿಯಲ್ಲಿ ಮಹತ್ತ್ವದ ಸ್ಫೂರ್ತಿಯನ್ನು ಅನುಭವಿಸುತ್ತಿದ್ದ ಪ್ರಭಾವವು ಈಗ ಪುರಾಣದ ಮಾತಾಗಿದೆ. ಪೂರ್ವದಲ್ಲಿ ನಾವು ಯಾವ ಗೋಮಾತೆಯ ಕಾಲಮೇಲೆ ಬಿದ್ದು ಪುನೀತರಾಗುತ್ತಿದ್ದೆವೊ ಅಂಥ ಗೋಮಾತೆ ಈಗ ನಮ್ಮ ಕಣ್ಣೆದುರಿಗೆ ಕಣ್ಣೀರಿಡುತ್ತ ಚಿತ್ರಹಿಂಸೆಗೆ ಗುರಿಯಾಗಿದ್ದಾಳೆ; ಯಾವ ಭೂಮಿ ಗೋಗಳು ತೊರೆದ ಕೆಚ್ಚಲಿನಿಂದ ಸುರಿದ ಹಾಲಿನಿಂದ ತಣ್ಪನ್ನು ಪಡೆದು ಸುಗಂಧಮಯವಾಗಿ "ಗಂಧವತೀ ಪೃಥ್ವೀ" ಎನಿಸಿಕೊಂಡು ಮೆರೆದಿತ್ತೊ ಆ ಭೂಮಿ ಅದೇ ಗೋಗಳ ದೇಹದಿಂದ ಸುರಿದ ಹಸಿಯಾದ ರಕ್ತದಿಂದ ಕಾಮೇರಿ ದುರ್ಗಂಧಮಯಳಾಗಿರುವಳು. ಹಾಯ್! ಹಾಯ್!! ಇಂಥ ದುರ್ಯೋಗವನ್ನು ನೋಡುವ ನಮ್ಮ ಜನ್ಮಕ್ಕೆ ಧಿಕ್ಕಾರವಿರಲಿ. ಈ ರೀತಿಯಲ್ಲಿ ಬ್ರಾಹ್ಮಣತ್ವದ ಅಭಾವರೂಪವಾಗಿಯೂ ಗೋವಧೆಯ ಭಾವರೂಪವಾಗಿಯೂ ಇರುವ ಭಯಂಕರವಾದ ಧರ್ಮಗ್ಲಾನಿಗೆ ಅಸುರರ ಹಾವಳಿಯಿಂದ ದೇವಲೋಕವನ್ನು ರಕ್ಷಿಸಿದಂಥ ಪರಮಾತ್ಮನೇ ಪ್ರತೀಕಾರವನ್ನು ಮಾಡಬೇಕೇ ಹೊರತು ಉಳಿದವರಿಗೆ ಅದು ಸಾಧ್ಯವಾಗಿ ಕಾಣುವದಿಲ್ಲ.

---

## ನಾಲ್ಕನೇ ಕಿರಣ.

# ಅವತಾರ ಮತ್ತು ಜನ್ಮಾಂತರ.

---

### ಅವತಾರದ ಕಾರಣ.

ಲೋಕದಲ್ಲಿ ಸಾತ್ತ್ವಿಕನಾದ ತಂದೆಗೆ ತನ್ನ ಮಕ್ಕಳು ಭೌತಿಕ ಭಾಗ್ಯಹೀನರಾದ್ದನ್ನು ನೋಡುವದಕ್ಕಿಂತಲೂ ಧರ್ಮಭ್ರಷ್ಟರಾದ್ದನ್ನು ನೋಡುವದು ಹೆಚ್ಚು ಸಂತಾಪಕರವಾಗುವದು. ಮಕ್ಕಳ ನಿಜವಾದ ಶ್ರೇಯಸ್ಸನ್ನು ಬಯಸುವ ತಂದೆಯು ತನ್ನ ಮಕ್ಕಳ ಭೌತಿಕಭಾಗ್ಯ ದಲ್ಲಿ ಕುಂದಿಲ್ಲದಂತೆ ಮಾಡುವದಕ್ಕಾಗಿ ತೆಗೆದುಕೊಳ್ಳುವ ಶ್ರಮೆಗಿಂತಲೂ ಅವರ ಧಾರ್ಮಿಕಸಂಪತ್ತು ಅಸಘ್ರ್ಯವಾಗಿರುವಂತೆ ಮಾಡುವದರಲ್ಲಿ ಹೆಚ್ಚಿನ ಪ್ರಯತ್ನವನ್ನು ವಿನಿಯೋಗಿಸುವನು. ಈ ಗುಣದ ಉಗ ಮಸ್ಥಾನವು ದೇವರಲ್ಲಿರುವದು. ದೇವರು ನಮ್ಮೆಲ್ಲರಿಗೂ ತಂದೆಯು. ನಾವೆಲ್ಲರೂ ದೇವರಿಗೆ ಮಕ್ಕಳು. ಆದ್ದರಿಂದ ನಮ್ಮ ಶ್ರೇಯಸ್ಸಿನ ಮೇಲೆ ಅವನ ಲಕ್ಷ್ಯವು ಹೆಚ್ಚು. ನಮಗೆ ಭೌತಿಕಭಾಗ್ಯದ ಕೊರತೆ ಯಾದರೂ ಅವನ ಮನಸ್ಸು ಅಷ್ಟೇನೂ ತಳಮಳಿಸಲಾರದು. ಏಕೆಂ ದರೆ ಭೌತಿಕಭಾಗ್ಯವು ಮನುಷ್ಯನ ಶ್ರೇಯಃಸಾಧನಗಳಲ್ಲಿ ಮುಖ್ಯವಾ ದ್ದೇನೂ ಅಲ್ಲ. ನಮ್ಮಲ್ಲಿ ಧರ್ಮಗ್ಲಾನಿಯಾಯಿತೆಂದರೆ ಅವನ ಮನಸ್ಸು ಕುದಿದು ಉಕ್ಕುವದು. ಆಗ ಅವನು ಜಗತ್ತಿನ ಉದ್ಧಾರಕ್ಕಾಗಿ ತಾನೇ ಕಂಕಣವನ್ನು ಕಟ್ಟಿಕೊಂಡು ಬರುವನು. ಈ ಅಭಿಪ್ರಾಯವನ್ನು **ಭಗವಂತನು ಅರ್ಜುನನಿಗೆ ಗೀತೆಯಲ್ಲಿ ಸ್ಪಷ್ಟಾಕ್ಷರಗಳಿಂದ ಹೇಳಿದ್ದಾನೆ—**

“ ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।

ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥ ”

ಧರ್ಮದ ಗ್ಲಾನಿಯೂ ಅಧರ್ಮದ ಏಳಿಗೆಯೂ ಯಾವ ಯಾವ ಕಾಲ ದಲ್ಲಿ ಆಗುವದೊ ಆಕಾಲದಲ್ಲೆಲ್ಲ ತಾನೇ ಹುಟ್ಟಿಬರುವೆನೆಂದು ಮೇಲಿನ

ವಾಕ್ಯದ ಅರ್ಥ. ಇಲ್ಲಿ “ ಹುಟ್ಟಿ ಬರುವೆನು ” ಎಂದು ಹೇಳಿರುವದನ್ನು ನೋಡಿದರೆ ಪರಮಾತ್ಮನು ತನ್ನ ಮೂಲಸ್ವರೂಪವಲ್ಲದ ಬೇರೊಂದು ರೂಪನ್ನು ತೆಗೆದುಕೊಂಡು ಬರುವನೆಂದು ಸ್ಪಷ್ಟವಾಗುತ್ತದೆ. ಇದಕ್ಕೆ ಕಾರಣವೇನೆಂದರೆ ಪರಮಾತ್ಮನ ಆ ಮೂಲಸ್ವರೂಪವು ಹೆಚ್ಚಿನ ತಪಶ್ಚರ್ಯೆಯಿಂದ ಮನಸ್ಸನ್ನು ಸಾತ್ತ್ವಿಕವಾಗಿ ಮಾಡಿಕೊಂಡವರಿಗೆ ಮಾತ್ರ ಕಾಣತಕ್ಕದ್ದು. ಆದ್ದರಿಂದ ದೇವರು ವ್ಯವಹಾರಕ್ಕಾಗಿ ಬೇರೊಂದು ರೂಪನ್ನು ಧಾರಣಮಾಡಿಕೊಂಡು ಬಂದು ತಾನು ಮಾಡತಕ್ಕ ಕಾರ್ಯವನ್ನು ನಡೆಸುವನು. ಯಾವ ರೂಪನಲ್ಲಿದ್ದರೂ ಅವನು ದೇವರೇ ಆದ್ದರಿಂದ ಎಲ್ಲರೂ ಅವನನ್ನು ನೋಡಿದಂತೆ ಆಗುವದೇನೋ ನಿಜ. ಆದರೆ ಅವನನ್ನು ದೇವರೆಂದು ತಿಳಿದು ನೋಡಿದರೆ ಮಾತ್ರ ದೇವರನ್ನು ಕಂಡ ಫಲವಾಗುವದು. ಒಬ್ಬನ ಮನೆಯಲ್ಲಿ ಒಂದು ಕಡೆ ನೆಲದಲ್ಲಿ ಒಂದು ನಿಧಿ ಇರುತ್ತದೆ. ಆ ಮನೆಯವರು ಪ್ರತಿದಿನವೂ ಅದರ ಮೇಲೆಯೇ ಗೋಣಿಯ ತಟ್ಟನ್ನು ಹಾಸಿಕೊಂಡು ಮಲಗುತ್ತಾರೆ. ಆದರೆ ಅವರಿಗೆ ದಾರಿದ್ರ್ಯದ ದುಃಖವು ಮಾತ್ರ ಹೋಗುವದೇ ಇಲ್ಲ. ಅದೇ ನಿಧಿಯನ್ನೇ ಅವರು ಒಮ್ಮೆ ಕಣ್ಣಿನಿಂದ ನೋಡಿದರೆ ತಾವು ಧನಿಕರೆಂಬ ತಿಳಿವಾಗಿ ಅವರು ಉತ್ಸಾಹಿಗಳಾಗುವರು. ಇದರಂತೆ ದೇವರು ಅವತಾರ ಮಾಡಿ ಬಂದು ನಮ್ಮ ನಡುವೆಯೇ ಇದ್ದರೂ ಅವನನ್ನು ನಾವು ಗುರ್ತಿಸದೆ ಇರುವದರಿಂದ ಅವನ ಪರಿಚಯದ ಲಾಭವು ನಮಗೆ ಆಗುವದಿಲ್ಲ. ಇನ್ನು ಅವನು ನಿರ್ವಹಿಸುವ ಮಹತ್ಕಾರ್ಯಗಳನ್ನು ನೋಡಿ ಕೆಲವರು ಅವನನ್ನು ದೇವರೆಂದು ಗುರ್ತಿಸಬಹುದು. ಅವರು ಧನ್ಯರಾಗುವರು. ಭಗವಾನ್ ಶ್ರೀರಾಮಚಂದ್ರನು ಈ ಪ್ರಪಂಚದಲ್ಲಿ ಅವತರಿಸಿದಾಗ ಸಪ್ತರ್ಷಿಗಳು ಮಾತ್ರ ಅವನನ್ನು ಭಗವಂತನ ಅವತಾರವೆಂದು ಗುರ್ತಿಸಿದರಂತೆ.

## ಅವತಾರದ ಉದ್ದೇಶ.

ಈ ಉದ್ದೇಶವನ್ನು ಭಗವದ್ಗೀತೆಯ ಒಂದು ಶ್ಲೋಕವು ಸ್ಪಷ್ಟ

ಪಡಿಸುವದು.

"ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ |
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ||"

ಈ ಶ್ಲೋಕದ ತಾತ್ಪರ್ಯವೇನೆಂದರೆ— ದೇವರು ಪ್ರತಿಯುಗದಲ್ಲಿಯೂ- ಅಂದರೆ ಆಗಾಗ- ಹುಟ್ಟುತ್ತಿರುತ್ತಾನೆ. ಧರ್ಮದ ಪ್ರಮಾಣವು ಹೆಚ್ಚಾಗಿರುವಂಥ ಕೃತತ್ರೇತಾಯುಗಗಳೇ ಅವನ ಅವತಾರಕಾಲವೆಂಬ ನಿಯಮವಿಲ್ಲ. ಗಡಿಯಾರವು ತಪ್ಪಾಗಿ ನಡೆಯುವದೆಂದು ತೋರಿದಾಗಲೆಲ್ಲಾ ಗಡಿಯಾರದವನು ಅದನ್ನು ತಿದ್ದಿ ಕೀಲನ್ನು ತಿರುಗಿಸುವಂತೆ ಧರ್ಮವು ಅಡ್ಡದಾರಿಯನ್ನು ಹಿಡಿದಿರುವದೆಂದು ತೋರಿದಾಗಲೆಲ್ಲಾ ದೇವರು ಅದನ್ನು ತಿದ್ದಿ ಸರಿಯಾದ ಮಾರ್ಗದಲ್ಲಿ ನಿಲ್ಲಿಸುವದಕ್ಕಾಗಿ ಬರುವನು. ಧರ್ಮಸಂಸ್ಥಾಪನೆಯನ್ನು ಮಾಡುವ ರೀತಿ ಯಾವದೆಂದರೆ ದುಷ್ಟಶಿಕ್ಷೆ ಮತ್ತು ಶಿಷ್ಟರಕ್ಷೆ. ಲೋಕದಲ್ಲಿ ಪಾಪಾತ್ಮರು ತಾವು ಪಾಪಕೃತ್ಯಗಳನ್ನು ಮಾಡುವದಲ್ಲದೆ ಇತರರ ಪುಣ್ಯಕರ್ಮಗಳಿಗೆ ಅಡ್ಡನಿಂತು ಎಲ್ಲರನ್ನೂ ಅಡ್ಡದಾರಿಗೆಳೆಯುತ್ತಿರುವರು. ಇವರನ್ನು ಮೊದಲು ನೆಲಾ ಹಿಡಿಸಬೇಕಾಗಿರುವದು. ಪುಣ್ಯಾತ್ಮರೂ ಹಾಗೆಯೇ ತಾವು ಪುಣ್ಯಕರ್ಮಗಳನ್ನು ಮಾಡುತ್ತ ಇತರರನ್ನು ಪಾಪಕರ್ಮದಿಂದ ಹಿಮ್ಮೆಟ್ಟಿಸುವದಕ್ಕೆ ಯತ್ನಿಸುತ್ತಿರಬಹುದು. ಆದರೆ ಈ ಪುಣ್ಯಾತ್ಮರ ಮತ್ತು ಪಾಪಾತ್ಮರ ಹೋರಾಟದಲ್ಲಿ ಪುಣ್ಯಾತ್ಮರ ಬೆಳಕು ಬೀಳುವದು ಕಡಿಮೆ. ಪುಣ್ಯದ ಕಡೆಗೆ ಒಲಿಯಬೇಕಾದರೆ ಮನಸ್ಸಿನಲ್ಲಿ ಸಾತ್ತ್ವಿಕಗುಣವು ಹೆಚ್ಚಾಗಿ ಬೇಕಾಗುವದು. ಸಾಮಾನ್ಯವಾಗಿ ಜನರು ಈ ಗುಣವನ್ನು ಕೂಡಿ ಹಾಕಿಕೊಂಡಿರುವದು ಕಡಿಮೆ. ಎಲ್ಲರೂ ಪ್ರಯತ್ನಪೂರ್ವಕವಾಗಿಯೇ ರಜಸ್ತಮೋಗುಣಗಳನ್ನು ಬೆಳೆಸಿಕೊಳ್ಳುತ್ತಿರುವದರಿಂದ ಅವರು ಬಹುಬೇಗ ಪಾಪಾತ್ಮರ ಬಲೆಗೆ ಬೀಳುವರು. ಹೀಗೆ ಪುಣ್ಯಾತ್ಮರಿಗೆ ಜನಸಹಾಯವು ದೊರೆಯುವದು ಕಡಿಮೆಯಾಗುವದು. ಇನ್ನೇನು! ಅವರು ತಮ್ಮ ತಪಃಪ್ರಭಾವದಿಂದ ದುಷ್ಟರನ್ನು ನಿಗ್ರಹಿಸಬೇಕಾಗುವದು. ಇದು ಅಸಾಧ್ಯವೇನೂ ಅಲ್ಲ. ಇದರಿಂದ ಅವರ ತಪಸ್ಸಿನ ವೆಚ್ಚವಾಗುವದರಿಂದ ಈ ನಷ್ಟವನ್ನು ಮಾಡಿಕೊಳ್ಳುವದು ಅವರ

ಮನಸ್ಸಿಗೆ ಬರುವದಿಲ್ಲ. ಆದ್ದರಿಂದ ಅವರು ತಮ್ಮಲ್ಲಿ ತಾವೇ ನೊಂದು ಕೊಳ್ಳುವರು. ಪುಣ್ಯಾತ್ಮರ ಹೃದಯಕ್ಕೆ ನೋವಾಯಿತೆಂದರೆ ಅದು ದೇವರಿಗಾದಂತೆಯೇ ಸರಿ. ಏಕೆಂದರೆ ದೇವರು ಅಲ್ಲಿ ಆವಿರ್ಭೂತ ನಾಗಿರುವನು. ಹಾಲಿನಲ್ಲಿ ಬೆಣ್ಣೆಯು ಎಲ್ಲಾ ಕಡೆಯಲ್ಲಿಯೂ ಇದ್ದರೂ ಕಡೆದ ಕಡೆಯಲ್ಲಿ ಮೇಲಕ್ಕೆದ್ದು ತೇಲುವಂತೆ ದೇವರು ಎಲ್ಲರ ಹೃದಯ ದಲ್ಲಿಯೂ ಇದ್ದರೂ ಧ್ಯಾನಾದಿಗಳನ್ನು ಮಾಡುವ ಪುಣ್ಯಾತ್ಮರ ಹೃದಯ ದಲ್ಲಿ ಅಭಿವ್ಯಕ್ತನಾಗಿ ಎದ್ದು ಕಾಣುತ್ತಿರುವನು. ಆದ್ದರಿಂದ ಅವರ ಹೃದ ಯಕ್ಕೆ ಆದ ನೋವು ಅವನಿಗಾದಂತೆಯೇ ಆಗುವದು. ಆಗ ಅವನು ತನಗೆ ನೋವನ್ನು ಕೊಟ್ಟ ಆ ದುಷ್ಟರ ಮಗ್ಗಲನ್ನು ಮುರಿಯುವ ದಕ್ಕೆ ಬರುವದು ಸ್ವಭಾವವಾಗುವದು. ಈ ರೀತಿಯಲ್ಲಿ ದುಷ್ಟರ ಶಿಕ್ಷೆಯಾಯಿತೆಂದರೆ ಶಿಷ್ಟರ ರಕ್ಷೆ ತನ್ನಷ್ಟಕ್ಕೆ ತಾನೇ ಆಗಿಯೇ ಆಗು ವದು. ಶಿಷ್ಟರು ತಮ್ಮ ತಪಶ್ಚರ್ಯೆಯನ್ನು ತಾವು ಮಾಡಿಕೊಂಡಿರುವರು. ಅವರು ಏನನ್ನೂ ಕೇಳುವದಿಲ್ಲ. ಅವರ ತಪಸ್ಸಿಗೆ ಭಂಗವು ಬರದಿದ್ದ ರಾಯಿತು. ಇದೇ ಅವರಿಗೆ ದೇವರಿಂದ ಆಗಬೇಕಾದ ಪ್ರಯೋಜನ. ದೇವರು ಅವತಾರವನ್ನು ಮಾಡಿ ಈ ಕೆಲಸವನ್ನು ಮಾಡುವನು.

## ಅವತಾರವೆಂದರೇನು?

ಅವತಾರವೆಂಬ ಮಾತಿಗೆ ಇಳಿದುಬರುವದೆಂದರ್ಥ. ದೇವರು ಎಲ್ಲಿಂದ ಇಳಿದು ಬರುವನು? ದೇವರು ಸರ್ವವ್ಯಾಪಿಯೆಂದು ಶಾಸ್ತ್ರಗಳು ಹೇಳುತ್ತವೆ. ಲೋಕವೆಲ್ಲಾ ಸಾಧಾರಣವಾಗಿ ಸರಿಯಾದ ವ್ಯವಸ್ಥೆಯಲ್ಲಿ ನಡೆಯುತ್ತಿರುವಾಗ ದೇವರು ತನ್ನ ಆ ಸ್ಥಿತಿಯಲ್ಲಿಯೇ ಇರುತ್ತಾನೆ. ಸಜ್ಜನರ ನೆಮ್ಮದಿಗೆ ಭಂಗವನ್ನುಂಟುಮಾಡುವಂಥ ಪ್ರಬಲವಾದ ಪ್ರಸಂಗ ಗಳೇನಾದರೂ ಬಂದರೆ ಆಗ ದೇವರು ತಾನೊಂದು ರೂಪವನ್ನು ಧರಿಸಿ ಜಗತ್ತಿನಲ್ಲಿ ಕಾಣಿಸಿಕೊಂಡು ವ್ಯವಸ್ಥೆಯ ಕೆಲಸವನ್ನು ಸರಿಗೊಳಿಸುತ್ತಾನೆ. ಅಥವಾ ಪರಮಾತ್ಮನ ನಿಜಸ್ವರೂಪವು ವೈಕುಂಠದಲ್ಲಿರುವ ನೀಲಮೇಘ ಶ್ಯಾಮಲವೋ ಕೈಲಾಸದಲ್ಲಿರುವ ಶರದಭ್ರಶುಭ್ರವೋ ಆಗಿರುವದೆಂಬ ಪಕ್ಷ ದಲ್ಲಿಯೂ ದೇವರು ಆ ತನ್ನ ದಿವ್ಯವೈಭವವನ್ನೂ ಆ ತನ್ನ ಪರಮಪದವಿ

ಯನ್ನೂ ಆ ತನ್ನ ಪತ್ನೀಪುತ್ರರನ್ನೂ ಆ ತನ್ನ ಪರಿಜನರನ್ನೂ ಆ ತನ್ನ ಲೋಕಸೌಕರ್ಯವನ್ನೂ ಕೆಲವು ಕಾಲದ ವರೆಗೆ ಬಿಟ್ಟವನ ಹಾಗೆ ತನ್ನದೊಂದಂಶದಿಂದ ಭೂಲೋಕದಲ್ಲಿ ಹುಟ್ಟಿ ತನ್ನ ಮಹತ್ತ್ವವನ್ನು ಪ್ರಕಟ ಮಾಡುತ್ತಾನೆ. ಇದನ್ನೇ ಅವತಾರವೆಂದು ಕರೆಯುತ್ತಾರೆ. ಪರಮಾತ್ಮನು ತನ್ನ ಉತ್ಕೃಷ್ಟಸ್ಥಿತಿಯನ್ನು ಬಿಟ್ಟು ನಿಕೃಷ್ಟಸ್ಥಿತಿಗೆ ಬರುವದನ್ನು ಲಕ್ಷ್ಯದಲ್ಲಿಟ್ಟುಕೊಂಡು ಪಂಡಿತರು ಅದನ್ನು ಇಳಿದು ಬರುವಿಕೆಯೆಂದು ಭಾವಿಸುತ್ತಾರೆ. ಹೀಗೆ ದೇವರೇ ಮೇಲಿನಿಂದ ಇಳಿದು ಬಂದರೂ ಕೂಡ ಅವಿವೇಕಿಗಳು ಈ ರಹಸ್ಯವನ್ನರಿಯಲಾರದೆ ಹೋಗುವರು.

“ ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಮ್ ।
ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥ ”

ಎಂಬ ಗೀತೋಕ್ತಿಯಂತೆ ಮೂಢರಾದ ಜನರು ಮನುಷ್ಯರೂಪಿನಲ್ಲಿ ಬಂದ ದೇವನನ್ನು ಮನುಷ್ಯನೆಂದೇ ತಿಳಿದುಕೊಂಡು ಬಿಡುವರೇ ಹೊರತು ಅವನ ಸರ್ವೇಶ್ವರಸ್ವರೂಪವನ್ನು ತಿಳಿಯುವದಿಲ್ಲ. ಪಾಪ! ಅವರೇನು ಮಾಡಿಯಾರು? ಅವತಾರ ಪುರುಷರ ವ್ಯವಹಾರವಾದರೂ ಮನುಷ್ಯರಂತೆಯೇ ಇರುವದು. ಆದ್ದರಿಂದ ಅವರು ಅವನನ್ನೂ ಮನುಷ್ಯನೆಂದು ತಿಳಿಯುವರು. ಹುಟ್ಟಿದ್ದು ಮನುಷ್ಯರ ಹೊಟ್ಟೆಯಲ್ಲಿ; ಬೆಳೆಯುವದು ಮನುಷ್ಯಾನ್ನದಿಂದ; ವ್ಯವಹಾರವೂ ಮನುಷ್ಯರಂತೆ—ಹೀಗಿರುವಾಗ ಅವನನ್ನು ಮನುಷ್ಯನೆಂದು ತಿಳಿಯುವದಕ್ಕೆ ಅಡ್ಡಿ ಏನು? ಸ್ಥೂಲದೃಷ್ಟಿಯಿಂದ ಹೀಗೆ ಕಂಡರೂ ವಸ್ತುಸ್ಥಿತಿ ಬೇರೆಯೇ ಇರುವದು. ಶ್ರೀರಾಮಚಂದ್ರನೂ ಶ್ರೀಕೃಷ್ಣನೂ ಮನುಷ್ಯರ ಹೊಟ್ಟೆಯಲ್ಲಿಯೇ ಹುಟ್ಟಿದಂತೆ ಕಂಡರೂ ಅವರು ಉಳಿದ ಶಿಶುಗಳಂತೆ ಅಳುತ್ತ ಹುಟ್ಟಲಿಲ್ಲವೆಂದು ಜ್ಞಾನಿಗಳು ಹೇಳುವರು. ಮನುಷ್ಯರ ಮಕ್ಕಳೆಲ್ಲಾ ಭೂಪತನವಾಗುತ್ತಲೇ ಅತ್ತೇ ಅಳುವವು. ಶ್ರೀರಾಮಕೃಷ್ಣರಿಗೆ ಹಾಗಾಗಲಿಲ್ಲ. ಅವರ ತಾಯಿಯರಿಗೆ ಪ್ರಸವವೇದನೆಯಿಂದ ವೈಷುಲ್ಯವು ಉಂಟಾಗುತ್ತಲೇ ದೇವರು ಶಂಖಚಕ್ರಗದಾಪದ್ಮಧಾರಿಯಾಗಿ ಅವರ ಮುಂದಕ್ಕೆ ಬಂದು ನಿಂತನೆಂತಲೂ ಆಮೇಲೆ ಅವರು ಅದಕ್ಕೆ ಬೆರಗಾಗಿ ಪುತ್ರರೂಪದಲ್ಲಿ ತಮಗೆ ಆನಂದವನ್ನು ಕೊಡಬೇಕೆಂದು ಬೇಡಿಕೊಳ್ಳುತ್ತಲೇ ದೇವರು ಮಕ್ಕಳ ರೂಪವನ್ನು

ಧಾರಣಮಾಡಿ ತಾನು ಹುಟ್ಟಿದಂತೆ ಕಾಣಿಸಿಕೊಂಡನೆಂತಲೂ ಪುರಾಣಗಳು ಹೇಳುತ್ತವೆ. ಮನುಷ್ಯರ ಮಕ್ಕಳಿಗೆ ಆಗುವಂಥ ಸುಖದುಃಖಗಳೇನೂ ರಾಮಕೃಷ್ಣರಿಗೆ ಆಗಲಿಲ್ಲ. ಆದರೂ ಅವರು ಮನುಷ್ಯರ ಮಕ್ಕಳಂತೆ ಸ್ತನ್ಯಪಾನವನ್ನು ಮಾಡುವದು, ಆಡುವದು, ಉಣ್ಣುವದು, ತಿನ್ನುವದು—ಮೊದಲಾದ ವ್ಯವಹಾರವನ್ನೆಲ್ಲಾ ಮಾಡುತ್ತಿದ್ದರು. ಇದು ಅವರಿಗೆ ಭೂಷಣವೇ ಆಗಿತ್ತು. ಏಕೆಂದರೆ—

"ದೇವತ್ವೇ ದೇವವಚ್ಚೇಷ್ಟಾ ಮನುಷ್ಯತ್ವೇ ತು ಮಾನುಷೀ"

ಎಂಬಂತೆ ದೇವತಾರೂಪದಲ್ಲಿರುವಾಗ ದೇವತ್ವಕ್ಕೆ ತಕ್ಕ ವ್ಯವಹಾರ; ಮನುಷ್ಯತ್ವಕ್ಕೆ ಬಂದಿರುವಾಗ ಮನುಷ್ಯರಂತೆ ವ್ಯವಹಾರ. ಉತ್ತಮಜಾತಿಯವನಾದ ಒಬ್ಬನು ನಾಟಕದಲ್ಲಿ ನೀಚಜಾತಿಯವನ ಅಭಿನಯವನ್ನು ಮಾಡಬೇಕಾದರೆ ಅವನು ಜನರೆಲ್ಲರೂ ತನ್ನನ್ನು ನೀಚಜಾತಿಯವನೆಂದು ಭಾವಿಸುವಂತೆ ಮಾಡುವದೇ ಹೆಚ್ಚು ಒಪ್ಪುವದು. ಆ ಸಮಯದಲ್ಲಿ ಮೂಢರಾದ ಜನರು ಅವನನ್ನು ನೀಚಜಾತಿಯವನೆಂದೇ ತಿಳಿದು ಬಿಡಬಹುದು. ಅವತಾರದ ವಿಚಾರವೂ ಹೀಗೆಯೇ. ನಟನ ನಿಜಸ್ಥಿತಿಯನ್ನು ವಿಚಾರದಿಂದ ಗೊತ್ತು ಮಾಡಿಕೊಳ್ಳುವಂತೆ ಅವತಾರಪುರುಷರ ನಿಜಸ್ಥಿತಿಯನ್ನೂ ವಿಚಾರದಿಂದಲೇ ಗೊತ್ತುಮಾಡಿಕೊಳ್ಳಬೇಕು.

## ಶಿವವಿಷ್ಣು ಮೊದಲಾದ ಭೇದಗಳು.

ನಮ್ಮ ಭರತಖಂಡದ ವೇದಾಂತವು ಯಾವ ಯಾವ ದೃಷ್ಟಿಯಿಂದ ನೋಡಿದರೂ ಅದರ ಪರಮಾವಧಿಯ ಸ್ಥಿತಿಯನ್ನು ಮುಟ್ಟಿರುವದು. ಲೋಕದಲ್ಲಿ ದೇವರೆಂಬುವನೊಬ್ಬನಿದ್ದರೆ ಅವನು ನಿರಾಕಾರನಾಗಿರಬೇಕು; ಅಥವಾ ಸಾಕಾರನಾಗಿರಬೇಕು. ಇವೆರಡು ಕೋಟಿಗಳಿಗಿಂತ ಬೇರೆಯಾದ್ದೇನೂ ಇರುವದಿಲ್ಲ. ನಮ್ಮ ಉಪನಿಷತ್ತುಗಳನ್ನು ನೋಡಿದರೆ ಅಲ್ಲಿ ನಿರಾಕಾರದ ವರ್ಣನೆ ಬೇಕಾದಷ್ಟು ಇದೆ. ಈ ವರ್ಣನೆಗೆ ಪ್ರಪಂಚದ ಬೇರೆ ಯಾವ ಧರ್ಮಗ್ರಂಥದ ವರ್ಣನೆಯೂ ಸಮಾನವಾಗಲಾರದು. ಹೀಗೆಂದು ನಮ್ಮ ದೇಶವನ್ನು ಸಂಪೂರ್ಣ ನಿರಾಕಾರಭಾವನೆಯದೆಂದು

ಹೇಳೋಣವೆಂದರೆ ನಮ್ಮ ದೇಶದಷ್ಟು ಸಗುಣಮೂರ್ತಿಗಳ ಕಲ್ಪನೆ ಬೇರೆ ಯಾವ ದೇಶದಲ್ಲಿಯೂ ಇರಲಾರದು. ಉಳಿದ ದೇಶಗಳಲ್ಲಿ ಒಂದೊಂದು ದೇವರನ್ನು ಮಾಡಿಕೊಂಡು ಅದಕ್ಕೆ ನಡೆದುಕೊಳ್ಳುವದಕ್ಕೇ ಸಾಗದೆ ಹೆಣ ಗುತ್ತಾರೆ. ನಮ್ಮ ದೇಶದವರಿಗೆ ಮೂವತ್ತಮೂರು ಕೋಟಿ ದೇವತೆಗಳು. ಜಗತ್ತಿನಲ್ಲಿರುವ ಎಲ್ಲಾ ಧರ್ಮಪಂಥದ ದೇವತೆಗಳ ಒಟ್ಟು ಸಂಖ್ಯೆಗಿಂತಲೂ ನಮ್ಮ ದೇವತೆಗಳ ಸಂಖ್ಯೆಯು ಒಂದು ದೊಂಬರಗಣೆಯುದ್ದದ ಮೇಲೆಯೇ ಇರುವದು. ಹೀಗೆ ಸಗುಣದೇವರ ವಿಷಯದಲ್ಲಿಯೂ ನಮ್ಮ ದೇಶವು ಮುಗಿಲು ಮುಟ್ಟಿದೆ. ಹೀಗೆ ಲೆಕ್ಕವಿಲ್ಲದಷ್ಟು ದೇವರು ಗಳಿದ್ದರೂ ಅವುಗಳಲ್ಲೆಲ್ಲಾ ಶಿವ, ವಿಷ್ಣು ಮೊದಲಾದ ಕೆಲವು ಭೇದಗಳು ಮಾತ್ರ ಬಹಳ ಪ್ರಸಿದ್ಧವಾಗಿವೆ ಈ ಬೇರೆಬೇರೆ ಸಗುಣಮೂರ್ತಿಗಳ ವಿಷಯದಲ್ಲಿ ನಾವು ಹೇಗೆಹೇಗೆ ನಡೆದು ಕೊಳ್ಳಬೇಕೆಂಬದಕ್ಕೆ ಭಗ ವಾನ್ ರಾಮಕೃಷ್ಣ ಪರಮಹಂಸರ ಕೆಲವು ಉಪದೇಶವಾಕ್ಯಗಳನ್ನು ಇಲ್ಲಿ ಬರೆಯುತ್ತೇನೆ—

(೧) ಒಂದೇ ಚಿನ್ನದಿಂದ ಬೇರೆಬೇರೆ ಆಕಾರದ ಮತ್ತು ಹೆಸ ರಿನ ಬಗೆಬಗೆಯಾದ ಒಡವೆಗಳಾಗುತ್ತವೆ. ಹಾಗೆಯೇ ಒಬ್ಬನೇ ದೇವರು ಒಂದೊಂದು ದೇಶದಲ್ಲಿ ಒಂದೊಂದು ಕಾಲದಲ್ಲಿ ಒಂದೊಂದು ಆಕಾರ ವನ್ನೂ ಮತ್ತು ಒಂದೊಂದು ಹೆಸರನ್ನೂ ತೆಗೆದುಕೊಂಡಿರುತ್ತಾನೆ.

(೨) ಇತರರು ಎಲ್ಲಿ ತಲೆಯನ್ನು ಬಗ್ಗಿಸುತ್ತಾರೊ ಅಲ್ಲಿ ಪೂಜ್ಯ ಬುದ್ಧಿಯನ್ನು ತೋರಿಸುತ್ತಿರುವಾಗ ದಯಾಮಯನಾದ ಭಗವಂತನ ಸಾನ್ನಿಧ್ಯವು ಅಲ್ಲಿ ಇದ್ದೇ ಇರುವದು.

(೩) ಒಂದೇ ಸಕ್ಕರೆಯು ಪಕ್ಷಿಗಳಂತೆಯೂ ಮೃಗಗಳಂತೆಯೂ ಬೇರೆಬೇರೆ ಆಕಾರವಾಗಿ ಮಾಡಲ್ಪಡುವಂತೆ ಲೋಕಮಾತೆಯಾದ ಶಕ್ತಿ ದೇವತೆಯೊಬ್ಬಳೇ ಒಂದೊಂದು ಕಾಲದಲ್ಲಿ ಒಂದೊಂದು ಆಕಾರವನ್ನೂ ಒಂದೊಂದು ಹೆಸರನ್ನೂ ಹೊಂದಿ ಪೂಜ್ಯಳಾಗಿದ್ದಾಳೆ.

(೪) ಒಂದೇ ಅವತಾರವು ಜೀವರಾಶಿಗಳೆಂಬ ಸಮುದ್ರದ ಒಂದು ಕಡೆಯಲ್ಲಿ ಎದ್ದು ಕೃಷ್ಣನೆನಿಸುತ್ತದೆ; ಮತ್ತೆ ಮುಳುಗಿ ಇನ್ನೊಂದು ಕಡೆಯಲ್ಲಿ ಎದ್ದು ಕ್ರೈಸ್ತನೆನಿಸುತ್ತದೆ.

( ೫ ) ರಾಮ, ಕೃಷ್ಣ, ಬುದ್ಧ, ಕ್ರೈಸ್ತ-ಮೊದಲಾದ ಅವತಾರಗೆಳಿಗೂ ಪರಬ್ರಹ್ಮವಸ್ತುವಿಗೂ ಇರುವ ಸಂಬಂಧವು ಸಮುದ್ರಕ್ಕೂ ಅದರ ಅಲೆಗಳಿಗೂ ಇರುವ ಹಾಗೆ ಇದೆ.

## ಅವತಾರಪುರುಷರ ಉದ್ಧರಣಶಕ್ತಿ.

ಮನುಷ್ಯನು ದೇವರಿಗೆ ಹತ್ತಿರವಾಗುತ್ತ ಹೋದಷ್ಟು ಉನ್ನತಿಯೆನಿಸುವದು; ದೂರವಾಗುತ್ತ ಹೋದಷ್ಟು ಅವನತಿಯೆನಿಸುವದು. ಸಾಮಾನ್ಯವಾಗಿ ಮನುಷ್ಯರು ಅನೇಕಪ್ರಾಪಂಚಿಕವಸ್ತುಗಳ ಸೆಳೆತಕ್ಕೆ ಸಿಕ್ಕಿ ದೇವರಿಗೆ ದೂರವಾಗುತ್ತಲೇ ಇರುತ್ತಾರೆ. ಕೆಲಕೆಲವರು ಪುಣ್ಯಾತ್ಮರು ದೇವರ ಅತ್ಯಂತ ಸಮೀಪಸುಖವನ್ನು ಕೂಡ ಕಂಡು ಉಳಿದವರಿಗೆ ಅದರ ದಿಕ್ಕನ್ನು ತೋರಿಸಿ ಎಷ್ಟೋ ಸಂದರ್ಭದಲ್ಲಿ ಅವರನ್ನು ತಮ್ಮ ಪ್ರಭಾವದಿಂದ ಮೇಲಕ್ಕೆ ಎತ್ತಿ ಹಿಡಿಯುತ್ತಾರೆ- ಎಂದರೆ ದೇವರನ್ನು ಬಿಟ್ಟು ಕೆಳಕೆಳಕ್ಕೆ ಪ್ರಾಪಂಚಿಕವಸ್ತುಗಳ ಮೋಹಕ್ಕೆ ಇಳಿಯು ಬೀಳುವವರನ್ನು ದೇವರ ಹತ್ತಿರಕ್ಕೆ ಸೆಳೆಯುತ್ತಾರೆ. ಇದಕ್ಕೆ ಉದ್ಧರಣವೆಂದು ಹೆಸರು. ಮನುಷ್ಯರಾಗಿ ಹುಟ್ಟಿ ತಪಶ್ಚರ್ಯೆಯಿಂದ ದೇವರ ಸಾಮೀಪ್ಯಸುಖವನ್ನು ಪಡೆದವರಿಗೂ ಕೂಡ ಈ ಉದ್ಧರಣಶಕ್ತಿಯುಂಟು. ಈ ಶಕ್ತಿಯು ಇವರಿಗೆ ಎಷ್ಟೇ ಇದ್ದರೂ ಅವತಾರಪುರುಷರ ದೃಷ್ಟಿಯಿಂದ ನೋಡಿದರೆ ಅದು ಅಲ್ಪವೇ ಸರಿ. ಸಾಮಾನ್ಯಸಾಧುಗಳು ಉತ್ತಮಸಾಧಕರನ್ನು ಮಾತ್ರ ತಮ್ಮ ಪ್ರಯತ್ನದಿಂದ ಎತ್ತಬಲ್ಲರು. ಅವತಾರಪುರುಷರ ಸಾಮರ್ಥ್ಯವಷ್ಟೇ ಅಲ್ಲ. ಅವರ ಶಕ್ತಿಗೆ ಪರಿಮಿತಿ ಇಲ್ಲ. ಅವರು ಉತ್ತಮಸಾಧಕರಾಗಿಲ್ಲದವರಿಗೆ ಕೂಡ ತಮ್ಮ ಪ್ರಭಾವದಿಂದ ಉತ್ತಮಸಾಧನದ ಫಲವನ್ನು ತಂದುಕೊಟ್ಟು ಅವರನ್ನು ಅನಾಯಾಸದಿಂದ ಪಾರುಮಾಡಬಲ್ಲರು. ಅವತಾರಪುರುಷರ ಉದ್ಧರಣಶಕ್ತಿಯ ವಿಷಯವಾಗಿ ಶ್ರೀರಾಮಕೃಷ್ಣಪರಮಹಂಸರು ಹೇಳಿರುವದೇನೆಂದರೆ--

( ೧ ) ಕೆಲವು ಋತುಗಳಲ್ಲಿ ಬಾವಿಯ ನೀರು ಬಹಳ ಆಳದಲ್ಲಿರುತ್ತದೆ ಮತ್ತು ಬಹು ಕಷ್ಟದಿಂದ ಮೇಲಕ್ಕೆ ತರಬೇಕಾಗಿರುತ್ತದೆ. ಆದರೆ ಮಳೆಗಾಲದಲ್ಲಿ ನೀರು ಮೇಲಕ್ಕೆ ಉಕ್ಕಿ ಬಂದು ಎಲ್ಲೆಲ್ಲಿಯೂ ಸುಲಭ

ವಾಗಿ ಸಿಕ್ಕುತ್ತದೆ. ಹಾಗೆ ಸಾಮಾನ್ಯವಾಗಿ ಸಾಧುಗಳು ಪರಮಾತ್ಮನನ್ನು ಸಾಕ್ಷಾತ್ಕಾರಮಾಡಿಕೊಳ್ಳಬೇಕಾದರೆ ಅನೇಕ ತಪಶ್ಚರ್ಯೆಗಳನ್ನು ಮಾಡಬೇಕಾಗಿರುವದು. ಆದರೆ ಅವತಾರವೆಂಬ ಪ್ರವಾಹವು ಉಕ್ಕಿ ಬಂದಾಗ ಎಲ್ಲೆಲ್ಲಿಯೂ ಪರಮಾತ್ಮಮಯವೇ ಆಗಿ ಅವರ ದಯದಿಂದ ಪ್ರತಿಯೊಬ್ಬರೂ ಉದ್ಧೃತರಾಗುವರು.

( ೨ ) ವಿಸ್ತಾರವಾದ ಮತ್ತು ಬಲವಾದ ಹಡಗು ನೀರಿನ ಮೇಲೆ ಹೋಗುವಾಗ ತನ್ನ ಹಿಂದೆ ಅನೇಕ ದೋಣಿಗಳನ್ನು ಎಳೆದುಕೊಂಡು ವೇಗವಾಗಿ ಓಡುವಂತೆ ಅಧಿಕಾರಪುರುಷರ ಅವತಾರವಾದಾಗ ಅವರು ಸಾವಿರಾರು ಜನರನ್ನು ಮಾಯೆಯೆಂಬ ಸಮುದ್ರದಿಂದ ದಾಟಿಸುತ್ತಾರೆ.

( ೩ ) ಹೊಗೇ ಗಾಡಿಯ ಯಂತ್ರವು ಒಂದು ಗೊತ್ತಾದ ಸ್ಥಲಕ್ಕೆ ತಾನು ಹೋಗಿ ಸೇರುವದಲ್ಲದೆ ಅನೇಕ ಸಾಮಾನುಗಾಡಿಗಳ ಸಾಲು ಸಾಲನ್ನೇ ಎಳೆದುಕೊಂಡು ಹೋಗಿ ಬಿಡುವಂತೆ ಅವತಾರಪುರುಷರು ಅನೇಕ ಪಾಪರಾಶಿಗಳಿಂದ ಭೂಭಾರರಾಗಿರುವ ಜನರನ್ನು ಸರ್ವಶಕ್ತನಾದ ಭಗವಂತನ ಸನ್ನಿಧಿಗೆ ಕರೆದುಕೊಂಡು ಹೋಗಿ ಬಿಡುವರು.

## ಅವತಾರಸ್ವರೂಪವು ರೂಪಕವಲ್ಲ

ಅವತಾರಪುರುಷರು ಬಂದಾಗ ಅವರು ಭೂಲೋಕದಲ್ಲಿ ಮಾಡುವ ಕಾರ್ಯಗಳು ಮನುಷ್ಯರ ಬುದ್ಧಿಗೆ ನಿಲುಕದಂಥವುಗಳಾಗಿರುತ್ತವೆ. ಆದ್ದರಿಂದ ಅಂಥವರ ವಿಚಾರವನ್ನು ಹೇಳುತ್ತಲೇ ಕಾರ್ಯಕಾರಣಭಾವ ಪ್ರಿಯರಾದ ಜನರಿಗೆ ಆ ಅವತಾರಪುರುಷರ ಇರುವಿಕೆಯಲ್ಲಿಯೇ ಸಂಶಯವು ಹುಟ್ಟುತ್ತದೆ ಆ ಅವತಾರಪುರುಷರ ಸ್ವರೂಪವು ಕವಿಕಲ್ಪಿತವೆಂದೂ ಯಾವದೋ ಒಂದು ಗುಣದ ಪ್ರಾಶಸ್ತ್ಯವನ್ನು ತೋರಿಸುವದಕ್ಕಾಗಿ ಕವಿಯು ಆ ಗುಣವನ್ನು ಅವತಾರಪುರುಷಸ್ವರೂಪದಿಂದ ವರ್ಣನೆಮಾಡಿರುವನೆಂದೂ ಅವರ ಅಭಿಪ್ರಾಯವಾಗುವದು. ಈ ಭಾವನೆಯಾದರೂ ಮೂಲತತ್ತ್ವಕ್ಕೇನೂ ಬಾಧೆ ಇಲ್ಲ. ಏಕೆಂದರೆ ರಾಮ, ಕೃಷ್ಣ– ಮೊದಲಾದವರ ಸ್ವರೂಪದ ವರ್ಣನೆಯನ್ನು ಓದಿದರೂ ಅನುಕರಣಕ್ಕೆ ತೆಗೆದುಕೊಳ್ಳಬೇಕಾದದ್ದು– ಅವರ ಗುಣಗಳನ್ನೇ. ಆದರೂ ಸೀತೆ,

ರಾಮ, ಕೃಷ್ಣ, ರಾಧೆ, ಅರ್ಜುನ—ಮೊದಲಾದವರು ವ್ಯಾವಹಾರಿಕ ವ್ಯಕ್ತಿಗಳಲ್ಲವೆಂದೂ ಪ್ರತ್ಯೇಕ ಗೂಢಾರ್ಥಗಳುಳ್ಳ ಒಂದು ಬಗೆಯ ರೂಪಕಶಬ್ದಗಳೆಂದೂ ತಿಳಿಯಬಾರದೆಂದು ಶ್ರೀರಾಮಕೃಷ್ಣ ಪರಮ ಹಂಸರು ಎಚ್ಚರಿಕೆಯನ್ನು ಕೊಟ್ಟಿದ್ದಾರೆ. ಈಗ ನಾವು ಇರುವ ಹಾಗೆಯೇ ಆ ಅವತಾರಪುರುಷರೂ ಮಾಂಸದಿಂದ ಮತ್ತು ರಕ್ತದಿಂದ ಕೂಡಿದ ದೇಹವನ್ನು ಧರಿಸಿದ್ದರು. ಆದರೆ ಅವರಲ್ಲಿ ದೇವತ್ವವಿದ್ದದ ರಿಂದ ಅವರನ್ನು ವ್ಯಾವಹಾರಿಕವ್ಯಕ್ತಿಗಳನ್ನಾಗಿಯೂ ಹೇಳಬಹುದು; ಪಾರಮಾರ್ಥಿಕವ್ಯಕ್ತಿಗಳನ್ನಾಗಿಯೂ ತಿಳಿಯಬಹುದು.

## ಜನ್ಮಾಂತರದ ಸ್ವರೂಪ.

ದೇವರು ಹೀಗೆ ಒಂದೊಂದು ಕಾಲದಲ್ಲಿ ಒಂದೊಂದು ರೂಪವನ್ನು ತೆಗೆದುಕೊಂಡು ಬರುವದರ ಪ್ರತಿಕೃತಿಯು ಮನುಷ್ಯರಲ್ಲಿಯೂ ಇರುವದು. ಮನುಷ್ಯರೂ ಒಂದೊಂದು ಕಾಲದಲ್ಲಿ ಒಂದೊಂದು ರೂಪವನ್ನು ಧರಿಸು ವರು. ದೇವರು ರೂಪಾಂತರವನ್ನು ಧರಿಸುವದಕ್ಕೆ ಅವತಾರವೆನ್ನುತ್ತಾರೆ; ಮನುಷ್ಯರು ರೂಪಾಂತರವನ್ನು ಧರಿಸುವದಕ್ಕೆ ಜನ್ಮಾಂತರವೆನ್ನುತ್ತಾರೆ. ಅವತಾರಕ್ಕೂ ಜನ್ಮಾಂತರಕ್ಕೂ ಭೇದವೇನೆಂದರೆ ಅವತಾರಪುರುಷರು ಜಗತ್ತನ್ನು ನಿಯಮನಮಾಡುವವರಾಗಿ ಸ್ವತಂತ್ರದಿಂದ ರೂಪಾಂತರ ವನ್ನು ಹೊಂದುತ್ತಾರೆ. ಜನ್ಮಾಂತರವನ್ನು ಹೊಂದಿದವರು ಜಗತ್ತಿನ ನಿಯಮಕ್ಕೊಳಗಾಗಿ ಕರ್ಮಬಂಧದಿಂದ ರೂಪಾಂತರವನ್ನು ಹೊಂದು ತ್ತಾರೆ. ಜನ್ಮಾಂತರಸ್ವರೂಪದ ವಿಷಯದಲ್ಲಿ ಭಗವದ್ಗೀತೆಯು ಹೇಳುವ ದೇನೆಂದರೆ—

"ದೇಹಿನೋಽಸ್ಮಿನ್ಯಥಾ ದೇಹೇ ಕೌಮಾರಂ ಯೌವನಂ ಜರಾ ।
ತಥಾ ದೇಹಾನ್ತರಪ್ರಾಪ್ತಿಃ .... .... .... ॥"

ಬೇರೊಂದು ದೇಹವನ್ನು ಪಡೆಯುವದೆಂಬುದು ಒಂದೇ ದೇಹದಲ್ಲಿ ಬಾಲ್ಯ, ಯೌವನ, ಮುಪ್ಪು— ಇವು ತೋರುವಂತೆ— ಎಂದರ್ಥ. ಒಂದು ಶರೀರದಲ್ಲಿರುವಾಗಲೇ ಬಾಲ್ಯದ ದೇಹವು ಒಂದು ಬಗೆಯಾಗಿರು ವದು; ಯೌವನದ ದೇಹವು ಮತ್ತೊಂದು ಬಗೆಯಾಗಿರುವದು; ಮುಪ್ಪಿನ

ದೇಹವು ಬೇರೊಂದು ಬಗೆಯಾಗಿರುವದು. ಈ ದೇಹಗಳು ಬೇರೆಬೇರೆ ಯೆಂದು ಸಾಮಾನ್ಯವಾಗಿ ನಮಗೆ ತಿಳಿಯುವದಿಲ್ಲ. ಏಕೆಂದರೆ ಒಂದೇ ದೇಹದಲ್ಲಿರುವದನ್ನೇ ನಾವು ಎಡೆಬಿಡದೆ ನೋಡುತ್ತಿರುತ್ತೇವೆ. ಆದರೆ ಈ ಗುಟ್ಟನ್ನು ಭೌತಿಕಶಾಸ್ತ್ರಜ್ಞರು ಪ್ರತ್ಯಕ್ಷವಾಗಿಯೇ ಸಿದ್ಧಮಾಡಿದ್ದಾರೆ. ಏಳುವರ್ಷಗಳಲ್ಲಿ ಪ್ರತಿಯೊಬ್ಬನ ದೇಹವೂ ಸಂಪೂರ್ಣವಾಗಿ ಬದಲಾಗಿರುವದೆಂದು ಅವರು ಭೌತಿಕಸಾಧನಗಳಿಂದ ಕಂಡು ಹಿಡಿದಿದ್ದಾರೆ. ಮನುಷ್ಯನಿಗೆ ಮತ್ತೊಂದು ಬೇರೆ ದೇಹವೇ ಬರುವದೆಂಬುದೂ ಇದರ ಹಾಗೆಯೆ. ಬಾಲ್ಯಯೌವನ ಮೊದಲಾದವುಗಳ ದೇಹವು ಒಂದಾದ ಮೇಲೊಂದು ಬರುವದಕ್ಕೂ ಸತ್ತಮೇಲೆ ಮತ್ತೊಂದು ದೇಹವು ಬರುವದಕ್ಕೂ ಒಂದು ವ್ಯತ್ಯಾಸವಿದೆ. ಯೌವನದ ದೇಹವು ಬರಬೇಕಾದರೆ ಬಾಲ್ಯದ ದೇಹವು ಸಂಪೂರ್ಣವಾಗಿ ಹೋಗಬೇಕಾಗಿಲ್ಲ. ಕ್ಷಣಕ್ಷಣಕ್ಕೂ ಕ್ಷಯಿಸಿಹೋಗುತ್ತಿರುವದೇ ಶರೀರದ ಸ್ವರೂಪ. ನಮ್ಮ ಶರೀರದ ಸಣ್ಣ ಸಣ್ಣ ಪರೆಗಳು ಸಿಬರೆದ್ದು ಕಿತ್ತು ಹೋಗುತ್ತಿರುವದನ್ನು ನಾವು ಅನುಭವಿಸುತ್ತಲೇ ಇದ್ದೇವೆ. ಹೀಗೆ ಕ್ಷಣಕ್ಕೊಂದೊಂದು ಪರೆಯು ಕಿತ್ತು ಹೋಗುವಿಕೆಯು ಏಳುವರ್ಷಗಳವರೆಗೂ ನಡೆಯುವದರಲ್ಲಿ ಹಳೇ ಶರೀರದ ಪರೆಗಳೆಲ್ಲಾ ಹೋಗಿರುವವೆಂದೂ ಆಯಾಕ್ಷಣದಲ್ಲಿಯೇ ಹೊಸ ಹೊಸ ಪರೆಗಳು ಪ್ಯೆಗೂಡುತ್ತ ಬರುವದರಿಂದ ಏಳುವರ್ಷಗಳಲ್ಲಿ ಹೊಸ ದೇಹವೇ ಆಗಿರುವದೆಂದೂ ಬಹಳ ಹಿಂದೆ ನೋಡಿದವರ ಗುರ್ತು ಬೇಗ ಸಿಕ್ಕುವದಿಲ್ಲವೆಂದೂ ಅವರು ಹೇಳುತ್ತಾರೆ. ಬಾಲ್ಯಯೌವನ ಮೊದಲಾದ ದೇಹಗಳೇರ್ಪಡುವಾಗ ಈ ಸ್ಥಿತಿ ಇರುತ್ತದೆ. ಸತ್ತಮೇಲೆ ದೇಹಾಂತರ ವುಂಟಾಗುವಾಗ ಹಿಂದಿನದು ಸಂಪೂರ್ಣವಾಗಿ ಹೋಗಿ ಹೊಸದು ಬರುತ್ತದೆ. ಒಂದು ಮನೆಯನ್ನು ಅಲ್ಲಲ್ಲಿ ಬಿದ್ದ ಕಡೆ ಹಚ್ಚುತ್ತಬಂದರೂ ಬಹು ದಿನದ ಹಿಂದೆ ನೋಡಿದವರಿಗೆ ಅದು ಹೊಸದರಂತೆಯೇ ಕಾಣುತ್ತದೆ. ಹಿಂದಿನದನ್ನು ಕೆಡವಿ ಕಟ್ಟಿದರಂತು ಅದು ಹೊಸ ಮನೆಯೆ. ಸತ್ತಮೇಲೆ ಬರುವ ದೇಹವು ಕೆಡವಿ ಕಟ್ಟಿದ ಮನೆಯಂತೆ ಇರುವದು. ಅಥವಾ

“ ವಾಸಾಂಸಿ ಜೀರ್ಣಾನಿ ಯಥಾ ವಿಹಾಯ

ನವಾನಿ ಗೃಹ್ಣಾತಿ ನರೋಽಪರಾಣಿ ।

ತಥಾ ಶರೀರಾಣಿ ವಿಹಾಯ ಜೀರ್ಣಾ

ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ ”

ಎಂದರೆ ಜೀವನು ಹಳೆಯದಾದ ಬಟ್ಟೆಗಳನ್ನು ತೆಗೆದೊಗೆದು ಬೇರೆ ಹೊಸವನ್ನು ಧರಿಸುವಂತೆ ಹಳೆಯ ದೇಹವನ್ನು ಬಿಟ್ಟು ಹೊಸದೇಹ ವನ್ನು ಧರಿಸುವನೆಂದರ್ಥ.

ಹೊಸದೇಹವು ಹೇಗೆ ಬರುವದೆಂಬದನ್ನು ವಿಚಾರಮಾಡುವದಕ್ಕೆ ಮೊದಲು ಪೀಠಿಕೆಯಾಗಿ ಹೊಸದೇಹಗಳ ಅಗತ್ಯವನ್ನು ಕುರಿತು ವಿಚಾರಮಾಡುವದು ಅವಶ್ಯಕವಾಗಿದೆ. ಹೊಸದೇಹಗಳು ಬರುವ ನಿಯಮವಿಲ್ಲದಿದ್ದರೆ ಒಂದು ಸೃಷ್ಟಿನಿಯಮದ ಸೊಬಗಿಗೇ ಭಂಗಬರು ತ್ತದೆ. ಅದೇನೆಂದರೆ ಲೋಕದಲ್ಲಿ ಒಳ್ಳೇ ಕೆಲಸಗಳಿಗೆ ಒಳ್ಳೇ ಫಲ ವಿರಬೇಕು; ಕೆಟ್ಟಕೆಲಸಗಳಿಗೆ ಕೆಟ್ಟ ಫಲವಿರಬೇಕು. ಹೀಗಿಲ್ಲದಿ ದ್ದರೆ ಲೋಕದ ವ್ಯವಸ್ಥೆಯೇ ನಾಗಲಾರದು. ಆದ್ದರಿಂದ ಮನುಷ್ಯನು ಮಾಡುವ ಪ್ರತಿಯೊಂದು ಕೆಲಸವೂ ಒಂದು ಫಲವನ್ನು ಕೊಟ್ಟೇತೀರ ಬೇಕಾಗುವದು. ಮನುಷ್ಯನ ಶರೀರವಂತು ಶಾಶ್ವತವಾದದ್ದಲ್ಲವೆಂಬದು ಕಣ್ಣಿಗೆ ಕಟ್ಟಿದಂತೆ ಇದೆ. ಮನುಷ್ಯನು ಸಾಯುವತನಕ ಒಳ್ಳೆಯದನ್ನೂ ಕೆಟ್ಟದ್ದನ್ನೂ ಮಾಡುತ್ತಲೇ ಇರುತ್ತಾನೆ. ಆದ್ದರಿಂದ ಅವನು ಮಾಡಿ ದ್ದನ್ನೆಲ್ಲಾ ಅದೇ ಜನ್ಮದಲ್ಲಿ ಅನುಭವಿಸುವದು ಸಾಧ್ಯವಲ್ಲ. ಸ್ವಲ್ಪ ದಿನದ ಸಂಪಾದನೆಯಿಂದ ಬಹುದಿವಸದ ಜೀವನಯಾತ್ರೆಯನ್ನು ನಾಗಿ ಸುವವರನ್ನು ನಾವು ನೋಡಿದ್ದೇವೆ. ಹಾಗೆಯೇ ಎಷ್ಟೋ ಜನರ ಬಹು ಸ್ವಲ್ಪಕಾಲದ ಕರ್ಮಗಳೇ ಎಷ್ಟೋ ದೀರ್ಘಕಾಲದತನಕ ಅನುಭವಿಸಿ ತೀರಿಸುವಷ್ಟು ಅಪಾರವಾಗಬಹುದು. ಆದ್ದರಿಂದ ಕರ್ಮದ ಫಲವನ್ನು ಅನುಭವಿಸುವದಕ್ಕಾಗಿ ಮನುಷ್ಯನು ಮತ್ತೆ ಹುಟ್ಟಲೇ ಬೇಕು; ಸಾಯಲೇ ಬೇಕು.

ಈ ರೀತಿಯಲ್ಲಿ ಹೊಸ ದೇಹಗಳ ಅಗತ್ಯವು ಗೊತ್ತಾದೊಡನೆಯೆ ಅವು ಹೇಗೆ ಬರುತ್ತವೆಂಬ ಪ್ರಶ್ನೆಯ ಉತ್ತರವೂ ತನಗೆ ತಾನೇ ಎದ್ದು ಕಾಣುತ್ತದೆ. ಹೊಸ ವಸ್ತ್ರವು ಬರಬೇಕಾದರೆ ನಾವು ಧನರೂಪವಾದ ಬೆಲೆಯನ್ನು ಕೊಡಬೇಕಷ್ಟೆ. ಹೊಸ ದೇಹವು ಬರಬೇಕಾದರೆ ನಾವು

ಆದಕ್ಕೆ ಬೆಲೆಯಾಗಿ ನಮ್ಮ ಅನೇಕಕರ್ಮಗಳನ್ನು ಮುಂಗಡವಾಗಿ ಸಮರ್ಪಿಸಿರುವೆವು. ಎಂದರೆ ನಾವು ಮಾಡಿದ ಕರ್ಮದಿಂದಲೇ ನಮಗೆ ಬೇರೆಬೇರೆ ದೇಹಗಳು ಬರುವವು. ಈ ವಿಷಯದಲ್ಲಿ ಉಪನಿಷದ್ವಾಕ್ಯವೇನೆಂದರೆ—

"ತದ್ಯಥಾ ಪೇಶಸ್ಕಾರೀ ಪೇಶಸೋ ಮಾತ್ರಾಮುಪಾದಾಯಾನ್ಯನ್ನವತರಂ ಕಲ್ಯಾಣತರಂ ರೂಪಂ ತನುತ ಏವಮೇವಾಯಮಾತ್ಮೇದಂ ಶರೀರಂ ನಿಹತ್ಯಾವಿದ್ಯಾಂ ಗಮಯಿತ್ವಾನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ"

ತಾತ್ಪರ್ಯವೇನೆಂದರೆ— ಒಬ್ಬ ಅಕ್ಕಸಾಲೆಯು ಒಂದು ಚಿನ್ನದ ತುಂಡನ್ನು ತೆಗೆದುಕೊಂಡು ಅದಕ್ಕೊಂದು ಸುಂದರವಾದ ಹೊಸರೂಪವನ್ನು ಕೊಡುವಂತೆ ಮನುಷ್ಯನು ಈ ದೇಹವು ಸತ್ತಮೇಲೆ ತನ್ನ ಅವಿದ್ಯೆಯಿಂದ ಸುಂದರವಾದ ಹೊಸರೂಪವನ್ನು ತಂದುಕೊಳ್ಳುತ್ತಾನೆ. ಅವಿದ್ಯೆಯೆಂಬ ಒಂದು ಮಾತಿನಲ್ಲಿ ಅವಿದ್ಯೆ, ಕಾಮ, ಕರ್ಮ—ಎಂಬ ಮೂರು ಮಾತುಗಳ ಅರ್ಥವಿರುವದೆಂದು ಶಾಸ್ತ್ರಕಾರರು ಹೇಳುತ್ತಾರೆ. ಅವಿದ್ಯೆಯೆಂದರೆ ದೇವರ ಸ್ವರೂಪದ ಜ್ಞಾನವಿಲ್ಲದೆ ಇರುವಿಕೆ. ಕಾಮವೆಂದರೆ ಬಗೆಬಗೆಯ ಬಯಕೆ. ಕರ್ಮವೆಂದರೆ ಬಗೆಬಗೆಯ ಕೆಲಸಗಳು. ದೇವರ ನಿಜಸ್ವರೂಪದ ಅರಿವಿಲ್ಲದ ಮನುಷ್ಯನಿಗೆ ಬಗೆಬಗೆಯ ಬಯಕೆಗಳಾಗುತ್ತಿರುತ್ತವೆ. ಆ ಬಯಕೆಗಳ ಸೆಳೆತಕ್ಕೆ ಸಿಕ್ಕಿ ಅವನು ಬಗೆಬಗೆಯ ಕರ್ಮಗಳನ್ನು ಮಾಡುತ್ತಾನೆ. ಆದ್ದರಿಂದ ಅವಿದ್ಯೆಯಿಂದ ಹೊಸದೇಹವನ್ನು ತಂದುಕೊಳ್ಳುತ್ತಾನೆಂದರೆ ತನ್ನ ಕರ್ಮದಿಂದಲೇ ತನ್ನ ಹೊಸ ದೇಹವನ್ನು ಪಡೆಯುತ್ತಾನೆಂದರ್ಥ. ಹೀಗೆ ಮನುಷ್ಯನು ಬಗೆಬಗೆಯ ರೂಪವನ್ನು ಧರಿಸುವ ವಿಚಾರದಲ್ಲಿ ಭಗವಾನ್ ವ್ಯಾಸರು ಧೃತರಾಷ್ಟ್ರನನ್ನು ಕುರಿತು ಒಂದು ಕಡೆ ಹೇಳಿರುವದೇನೆಂದರೆ—

ಭಾ ॥ ನರನು ನಾನಾರೂಪಗಳ ತಾ । ಧರಿಸಿ ಬಹುತರನಾಮಗಳನನು ।
ಕರಿಸಿ ನಾಟ್ಯವನಾಡುವಂದದಿ ದೇಹಿಯಾದವನು ॥
ದುರಿತವೆಚ್ಚರೆ ಜನನಮೃತಿಗಳ । ಪರಿಪರಿಯ ಜನ್ಮಗಳ ಬಳಸುತ ।
ಪರಿಪಡಿಯುಬೋಲಾಡುತಿರ್ಪನು ಕಾಲಗತಿಯಿಂದ ॥

ಈ ಪದ್ಯದಲ್ಲಿ ಹುಟ್ಟುಸಾವುಗಳು ಪಾಪದ ಫಲವೆಂದು ವ್ಯಕ್ತವಾ

ತ್ತದೆ. ಇನ್ನು ಪುಣ್ಯವನ್ನು ಮಾಡಿದರೆ ಹುಟ್ಟುಸಾವುಗಳು ತಪ್ಪಬೇಕಾ ಯಿತು. ನಿಜ; ತಪ್ಪಿಯೇ ತಪ್ಪುವವು. ಹುಟ್ಟುಸಾವುಗಳನ್ನು ತಪ್ಪಿ ಸುವ ಪುಣ್ಯವು ಯಾವದೆಂದರೆ ಭಗವತ್ಸ್ವರೂಪದ ಜ್ಞಾನ. ಅದನ್ನು ಪಡೆದ ಮನುಷ್ಯನು ಮತ್ತೆ ಹುಟ್ಟುವದಿಲ್ಲ. ಹುಟ್ಟುವಿಕೆಯೇ ಇಲ್ಲದ ಮೇಲೆ ಸಾವಿನ್ನೆಲ್ಲಿಯದು? ಸಾಮಾನ್ಯವಾದ ಪರೋಪಕಾರ ಮೊದಲಾದ ವುಗಳನ್ನೂ ಪುಣ್ಯವೆಂದು ಹೇಳುತ್ತಾರೆ. ಆದರೆ ಅವು ಹುಟ್ಟುಸಾವು ಗಳನ್ನು ಕಳೆಯಲಾರವು; ಆದರೆ ಪ್ರಪಂಚದಲ್ಲಿ ಸುಖವಾಗಿರುವಂತೆ ದೇವರ ಅನುಗ್ರಹವನ್ನು ಪಡೆದುಕೊಡುವವು. ಮನುಷ್ಯನನ್ನು ಕೆಳಕ್ಕೆ ಜಾರಬಿಡದೆ ಸ್ವಲ್ಪವಾದರೂ ಮೇಲಕ್ಕೆ ಏರಿಸುವದರಿಂದ ಈ ಪರೋಪ ಕಾರ ಮೊದಲಾದವುಗಳನ್ನು ಪುಣ್ಯವೆನ್ನುತ್ತಾರೆ. ಭಗವತ್ಸ್ವರೂಪಜ್ಞಾನವೇ ನಿಜವಾದ ಪುಣ್ಯ. ಅದಕ್ಕೆ ಸಾಧನವಾದ ಉಳಿದವುಗಳೆಲ್ಲಾ ಗೌಣ ಪುಣ್ಯಗಳು. ಪಾಪಗಳು ದುಃಖಾನುಭವಕ್ಕೆ ಜನ್ಮವನ್ನು ಕೊಟ್ಟರೆ ಈ ಗೌಣಪುಣ್ಯಗಳು ಸುಖಾನುಭವಕ್ಕೆ ಜನ್ಮವನ್ನು ಕೊಡುವವು. ಅಂತು ಜನ್ಮವನ್ನು ಕೊಡುವದರಲ್ಲಿ ಪಾಪಪುಣ್ಯಗಳೆರಡೂ ಸಮವೆ. ಆದ್ದರಿಂದ ವೇದಾಂತಿಗಳು ಗೌಣಪುಣ್ಯವನ್ನೂ ಪಾಪವೆಂದೇ ಕರೆಯುತ್ತಾರೆ. ಅವರ ದೃಷ್ಟಿಯಿಂದ ಭಗವಂತನ ಜ್ಞಾನವು ಒಂದೇ ಪುಣ್ಯವು. ಇರಲಿ. ಕಷ್ಟಕರ ವಾದ ಕೆಳಗಿನ ಕೆಲಸದಲ್ಲಿ ಯಶಸ್ವಿಯಾದವರಿಗೆ ಸುಖಕರವಾದ ಮೇಲಿನ ಕೆಲಸವು ದೊರೆಯುವಂತೆ ಪರೋಪಕಾರದಂಥ ಉತ್ತಮಕರ್ಮ ಗಳನ್ನು ಮಾಡಿದವರಿಗೆ ಸುಖಾತಿಶಯವುಳ್ಳ ದೇವಲೋಕವಾಸದ ಜನ್ಮವು ದೊರೆಯಬಹುದು. ಹಾಗಲ್ಲದೆ ಪುಣ್ಯಪಾಪಗಳೆರಡನ್ನೂ ಮಾಡಿಕೊಂಡಿ ದ್ದರೆ ಮತ್ತೆ ಮನುಷ್ಯಜನ್ಮವೇ ಬರಬಹುದು; ಪಾಪವು ಹೆಚ್ಚಾದರೆ ಪಶುಪಕ್ಷಿಗಳ ಜನ್ಮವು ಬರಬಹುದು; ಬರೀ ಪಾಪವೇ ಆದರೆ ಕಲ್ಲು ಮರಗಳ ಜನ್ಮವು ಬರಬಹುದು—ಹೀಗೆ ಅವನವನ ಕರ್ಮಕ್ಕನುಗುಣವಾಗಿ ಅವನವನಿಗೆ ಹೊಸ ದೇಹಗಳು ಬರುವವು.

ಹಿಂದೆ ಬೇರೆ ಬೇರೆ ದೇಹದಲ್ಲಿದ್ದ ನಾವೇ ಇಂದು ಈ ದೇಹದಲ್ಲಿ ರುವದಾದರೆ ಅದರ ನೆನಪೇಕಿಲ್ಲವೆಂಬದೊಂದು ಸಂಶಯವು ಮುಂದೆ ಬರಬ ಹುದು. ನೆನುಪುಗಳಿಗೆಲ್ಲಾ ಆಧಾರವು ಮನಸ್ಸು. ಮನಸ್ಸೆಂಬುದು

ಒಂದು ಸರೋವರದಂತೆ. ಸಂಸ್ಕಾರಗಳೆಂಬುವು ಅನೇಕ ಬಗೆಯ ಹೊಲಸುಗಳಂತೆ. ಸರೋವರದಲ್ಲಿ ಬಿದ್ದ ಹೊಲಸುಗಳು ಕ್ರಮಕ್ರಮವಾಗಿ ತಳಕ್ಕೆ ಹೋಗಿ ನಿಲ್ಲುವಂತೆ ಸಂಸ್ಕಾರಗಳು ಮನಸ್ಸಿನಲ್ಲಿ ದಿನ ದಿನಕ್ಕೆ ಹೆಚ್ಚು ಹೆಚ್ಚು ತಳಕ್ಕಿಳಿಯುವವು. ಆ ಸರೋವರವನ್ನು ಸ್ವಲ್ಪ ಕದಡಿದರೆ ಮೇಲಮೇಲಿನ ಹೊಲಸುಗಳು ಮೇಲಕ್ಕೇಳುವವು. ಇನ್ನೂ ಹೆಚ್ಚು ಕದಡಿದರೆ ಇನ್ನೂ ಕೆಳಗಿನ ಹೊಲಸುಗಳೇಳುವವು. ತೀರ ತಳಕ್ಕೆ ಹೋಗಿ ಕದಡಿದರೆ ತಳದಲ್ಲಿದ್ದ ಹೊಲಸು ಕೂಡ ಮೇಲಕ್ಕೇಳಬಹುದು. ಮನಸ್ಸು ಬಹು ಆಳವಾದ ಸರೋವರ. ಅದರ ಆಳವನ್ನು ಕಾಣುವದು ಅಂಥಿಂಥವರಿಗೆ ದಕ್ಕುವ ಮಾತಲ್ಲ. ಆದ್ದರಿಂದ ಅದರ ತಳಕ್ಕೆ ಹೋದ ಸಂಸ್ಕಾರಗಳನ್ನೆಬ್ಬಿಸುವದು ಕಠಿನ. ಆದ್ದರಿಂದಲೇ ಅನೇಕದಿನಗಳ ಹಿಂದೆ ನಡೆದ ಎಷ್ಟೋ ವಿದ್ಯಮಾನಗಳು ನಮಗೆ ನೆನಪಿಲ್ಲವೆನ್ನುತ್ತ ಒಮ್ಮೊಮ್ಮೆ ಅತ್ತ ಕಡೆಗೇ ಲಕ್ಷ್ಯವನ್ನಿಟ್ಟು ನಾವು ಯೋಚಿಸುತ್ತೇವೆ. ಆಗ ನಾವು ನಮ್ಮ ಮನಸ್ಸೆಂಬ ಸರೋವರದೊಳಗೆ ಮುಳುಗಿ ತಳದಲ್ಲಿರುವದನ್ನು ಮೇಲಕ್ಕೆಬ್ಬಿಸುವ ಪ್ರಯತ್ನವನ್ನು ಮಾಡುತ್ತೇವೆ. ಹೀಗೆ ಮಾಡಿ ಎಷ್ಟೋ ಸಂದರ್ಭಗಳಲ್ಲಿ ಆ ನೆನಪನ್ನು ಪಡೆಯುತ್ತೇವೆ. ಆದರೆ ಹಿಂದಿನ ಜನ್ಮದ ನೆನಪು ಮಾತ್ರ ನಮಗೆಂದೂ ಆಗಿಲ್ಲ. ಇದಕ್ಕೆ ಕಾರಣವೇನೆಂದರೆ ಮನುಷ್ಯನು ಗರ್ಭದಿಂದ ನೆಲದ ಮೇಲೆ ಬೀಳುತ್ತಲೇ ಈಶ್ವರನ ಮಾಯೆಯಿಂದ ಒಂದು ಬಗೆಯ ಮರವೆಯನ್ನು ಪಡೆಯುತ್ತಾನೆಂದು ಜ್ಞಾನಿಗಳು ಹೇಳುತ್ತಾರೆ. ಹೊಟ್ಟೆಯಿಂದ ಹುಟ್ಟುವದಕ್ಕೆ ಮುಂಚೆ ಅವನಿಗೆ ಗರ್ಭದಲ್ಲಿ ಹಿಂಬಿನ ಎಲ್ಲಾ ಜನ್ಮಗಳ ನೆನವಾಗುವದೆಂದು ಶಾಸ್ತ್ರದಲ್ಲಿ ಹೇಳಿದೆ. ಹುಟ್ಟಿದ ಮೇಲಂತು ಹಿಂದಿನ ಜನ್ಮದ ನೆನಪು ಸಾಮಾನ್ಯರಿಗೆ ಆಗಲಾರದು. ಇನ್ನು ಮನಃಶಕ್ತಿಯನ್ನು ಬೆಳೆಸಿಕೊಂಡಂಥ ಯೋಗಿಗಳು ತಮ್ಮ ಯೋಗಸಾಮರ್ಥ್ಯದಿಂದ ತಮ್ಮ ಅಥವಾ ಇತರರ ಮನಸ್ಸೆಂಬ ಸಮುದ್ರದ ತೀರ ತಳಕ್ಕಾದರೂ ಹೋಗಿ ಆ ಸಂಸ್ಕಾರವನ್ನು ಮೇಲೆಬ್ಬಿಸುವರೆಂದು ಯೋಗಶಾಸ್ತ್ರದಲ್ಲಿ ಹೇಳಿದೆ. ಹಿಂದಿನ ಜನ್ಮದ ಸ್ಮರಣೆಯುಳ್ಳವರ ವಿಚಾರಗಳು ಪುರಾಣದಲ್ಲಿ ಬೇಕಾದಷ್ಟಿವೆ. ದ್ರೌಪದಿಗೆ ಐವರು ಗಂಡಂದಿರು ಗಂಟುಬೀಳಬೇಕಾದರೆ ಆಕೆ ಹಿಂದಿನ

ಜನ್ಮದಲ್ಲಿ " ಪತಿಂ ದೇಹಿ " ಎಂಬ ಪ್ರಾರ್ಥನೆಯನ್ನು ಐದು ಸಲ ಮಾಡಿದ್ದಳೆಂದೂ ದಶರಥನೂ ವಸುದೇವನೂ ಹಿಂದಿನ ಜನ್ಮದಲ್ಲಿ ದೇವರನ್ನೇ ಮಗನಾಗಬೇಕೆಂದು ಯಾಚಿಸಿ ತಪಸ್ಸನ್ನು ಮಾಡಿದ್ದರೆಂದೂ ಗೋಪಿಕಾಸ್ತ್ರೀಯರೆಲ್ಲಾ ಹಿಂದಿನ ಜನ್ಮದಲ್ಲಿ ಬೇರೆಬೇರೆ ಋಷಿಗಳಾಗಿದ್ದು ಶ್ರೀಕೃಷ್ಣನ ಆಲಿಂಗನವನ್ನು ಬಯಸಿದ್ದರೆಂದೂ ಕಥೆಗಳಿರುವವು.

## ಮರಣಕಾಲದ ಸ್ಮರಣೆ.

ಹೀಗೆ ಜನ್ಮಾಂತರವಾಗುವದಕ್ಕೆ ಅವನವನ ಕರ್ಮಗಳೇ ಕಾರಣವೆಂಬ ಪಕ್ಷವನ್ನಿಟ್ಟುಕೊಂಡರೂ ಅವನು ಮಾಡಿರುವ ಕರ್ಮಗಳನೇಕವಾಗಿರುವಾಗ ಅವುಗಳಲ್ಲಿ ಯಾವದು ಮೊದಲು ಫಲವನ್ನು ಕೊಡಬೇಕೆಂಬುದು ತಿಳಿದುಕೊಳ್ಳತಕ್ಕ ವಿಷಯವಾಗಿದೆ. ವಿಚಾರಮಾಡಿದರೆ ಯಾವದು ಉತ್ಕಟವಾಗಿರುವದೊ ಅದು ಮೊದಲು ಫಲವನ್ನು ಕೊಟ್ಟು ಬಿಡುವದು. ಜನ್ಮಾಂತರದ ಮಾತು ಒಂದು ಕಡೆ ಇರಲಿ.

" ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ "

ಎಂಬ ವಚನದಂತೆ ಪುಣ್ಯಪಾಪಗಳು ಅತ್ಯುತ್ಕಟವಾದರೆ ಅವು ಮುಂದಿನ ಜನ್ಮದವರೆಗೆ ಕಾಯದೆ ಒಡನೆಯೆ ಫಲವನ್ನು ಕೊಟ್ಟೇ ಬಿಡುವವು. ಈ ದೃಷ್ಟಿಯಿಂದ ನೋಡಿದರೆ ಉತ್ಕಟವಾದ ಪುಣ್ಯಪಾಪಗಳೇ ಅಥವಾ ಸಂಸ್ಕಾರಗಳೇ ಮುಂದಿನ ಜನ್ಮವನ್ನು ಕೊಡುವವು. ಆ ಉತ್ಕಟತೆಯನ್ನು ತಿಳಿಯುವದಕ್ಕೆ ಒರೆಗಲ್ಲೇನು? ಇದು ಭಗವದ್ಗೀತೆಯಿಂದ ತಿಳಿಯುತ್ತದೆ. ಭಗವದ್ಗೀತೆಯಲ್ಲಿ

" ಏಷಾ ಬ್ರಾಹ್ಮೀಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।
ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥ "

ಎಂಬದೊಂದು ಶ್ಲೋಕವಿದೆ. ದೇವರ ಸಾಕ್ಷಾತ್ಕಾರವನ್ನು ಪಡೆದವನು ಮತ್ತೆ ಪ್ರಪಂಚದ ಮೋಹಕ್ಕೆ ಬೀಳುವದಿಲ್ಲವೆಂದು ಪೂರ್ವಾರ್ಧದ ಅರ್ಥ. ದೇವರ ಸಾಕ್ಷಾತ್ಕಾರಸ್ಥಿತಿ ಬಂತೆಂದೊಡನೆ ಅವನಿಗೆ ಮೋಕ್ಷವಾದಂತೆಯೇ ಆಯಿತಾದರೂ ಸಾಯುವ ಕಾಲದಲ್ಲಿ ಕೂಡ ಆಸ್ಥಿತಿಯಲ್ಲಿದ್ದರೆ ಅವನು ಮುಕ್ತನಾಗುವನೆಂದು ಉತ್ತರಾರ್ಧದಲ್ಲಿ

ಹೇಳಿದೆ. ಇದರ ತಾತ್ಪರ್ಯವೇನೆಂದರೆ ಮನುಷ್ಯನಿಗೆ ಮರಣಕಾಲವೆಂಬದೊಂದು ಬಹು ಕಠಿನಪ್ರಸಂಗವು. ಆಸಮಯದಲ್ಲಿ ಮನುಷ್ಯನು ಗಾಬರಿಯಾಗಿ ದಿಕ್ಕುತೋಚದವನಾಗುತ್ತಾನೆ. ಇಂಥ ಕಾಲದಲ್ಲಿ ಕೂಡ ಆ ಸಾಕ್ಷಾತ್ಕಾರಸ್ಥಿತಿ ಕದಲಬಾರದು. ಅದು ಮನಸ್ಸಿನಲ್ಲಿ ಜೀವಿತಕಾಲದಲ್ಲಿ ಚೆನ್ನಾಗಿ ಬೇರೂರಿತ್ತೆಂದರೆ ಸಾಯುವ ಕಾಲವು ಬರುತ್ತಲೇ ಮನಸ್ಸಿನಲ್ಲಿ ಅದು ತಾನಾಗಿಯೇ ಮುಂದೆ ಬಂದು ನಿಲ್ಲುತ್ತದೆ. ಅದೇ ಉತ್ಕಟತೆಯ ಗುರ್ತು. ಮನುಷ್ಯನಿಗೆ ಸಾಯುವ ಕಾಲದಲ್ಲಿ ಅವನ ಸಂಸ್ಕಾರಗಳೆಲ್ಲಾ ಅವನ ಮುಂದೆ ಬಂದು ನಿಲ್ಲುವವಂತೆ. ಆದರೆ ಅವನು ಯಾವ ಸಂಸ್ಕಾರವನ್ನು ಜೀವಿತಕಾಲದಲ್ಲಿ ಬಹು ಚೆನ್ನಾಗಿ ಪರಿಪುಷ್ಟಿ ಮಾಡಿಕೊಂಡಿರುವನೆಂ ಆ ಸಂಸ್ಕಾರವು ಉಳಿದ ಎಲ್ಲಾ ಸಂಸ್ಕಾರಗಳನ್ನೂ ಹಿಂದಕ್ಕೆ ತಳ್ಳಿ ತಾನು ಮುಂದಕ್ಕೆ ಬಂದು ಮುಂದಿನ ಜನ್ಮವನ್ನು ಕೊಡುವದು. ಅವನು ಒಂದು ಉತ್ತಮಸಂಸ್ಕಾರವನ್ನು ಬೆಳೆಸಿಕೊಂಡಿದ್ದರೆ ಅದು ಉತ್ತಮಜನ್ಮವನ್ನು ಕೊಡುವದು; ಹೀನಸಂಸ್ಕಾರವನ್ನು ವೃದ್ಧಿಗೊಳಿಸಿಕೊಂಡಿದ್ದರೆ ಅದು ಹೀನಜನ್ಮವನ್ನು ಕೊಡುವದು. ಆದ್ದರಿಂದ ಮುಂದಿನ ಜನ್ಮವು ತನಗೆ ಉತ್ತಮವಾಗಿರಬೇಕೆಂದು ಬಯಸುವವನು ಈ ಜನ್ಮದಲ್ಲಿ ತನ್ನ ಮನಸ್ಸಿನೊಳಗೆ ಉತ್ತಮಸಂಸ್ಕಾರವನ್ನು ತುಂಬಬೇಕು. ಇದೇ ನಿಜವಾದ ಯೋಗ. ಈ ಅಭಿಪ್ರಾಯವನ್ನು ಭಗವದ್ಗೀತೆಯ

"ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।
ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥"

ಎಂಬ ಶ್ಲೋಕವು ಹೇಳುವದು. ಅಧಿಭೂತವೂ ಅಧಿದೈವವೂ ಅಧಿಯಜ್ಞವೂ ಒಬ್ಬ ನೇ ನಾನೇ ಎಂದು ಸಾಯುವಾಗ ಕೂಡ ಮರೆಯದಿರುವವರೇ ಯೋಗಿಗಳೆಂದರ್ಥ. ಜೀವಿತಕಾಲದಲ್ಲಿ ಮನಸ್ಸು ಸಮಾಧಾನವಾಗಿರುವಾಗ ವಿಚಾರದಿಂದ ಇಂಥ ವಿಷಯವನ್ನು ನಿರ್ಣಯಿಸಬಹುದು. ಆದರೆ ಸಾಯುವ ಕಾಲದಲ್ಲಿ ಮನಸ್ಸು ಹೊಯ್ದಾಡುವಾಗ ಈ ವಿಷಯವನ್ನು ವಿಚಾರಪೂರ್ವಕವಾಗಿ ನಿರ್ಣಯಿಸುವದಕ್ಕೆ ಹೊತ್ತಿರುವದಿಲ್ಲ. ಮೊದಲೇ ನಿರ್ಣಯಿಸಿ ಅದು ಮನಸ್ಸಿನಲ್ಲಿ ಬೇರು ಬಿಟ್ಟುಕೊಳ

ಮಂತೆ ಮಾಡಿದ್ದರೆ ಸಾಯುವ ಕಾಲದಲ್ಲಿ ಅದೇ ಎದ್ದು ಕಾಣುವದು.

ಅವತಾರವು ದೇವರ ಇಚ್ಛೆಗಧೀನವಾಗಿರುವದೆಂದು ಮೇಲೆ ಹೇಳಿದೆಯಷ್ಟೆ. ಒಂದು ದೃಷ್ಟಿಯಿಂದ ನೋಡಿದರೆ ಜನ್ಮಾಂತರವೂ ಜೀವರ ಇಚ್ಛೆಗಧೀನವಾಗಿಯೇ ಇರುವದು. ಅವತಾರಪುರುಷರ ಇಚ್ಛೆಗೆ ಪ್ರಯತ್ನವು ಬೇಕಾಗಿಲ್ಲ. ಜೀವರ ಇಚ್ಛೆಗೆ ಪ್ರಯತ್ನವು ಬೇಕು. ಹೇಗೆಂದರೆ—

"ಯಂ ಯಂ ವಾಪಿ ಸ್ಮರನ್ಭಾವಂ ತ್ಯಜತ್ಯನ್ತೇ ಕಲೇವರಮ್ ।
ತಂ ತಮೇವೈತಿ ಕೌನ್ತೇಯ ಸದಾ ತದ್ಭಾವಭಾವಿತಃ ॥"

ಎಂದು ಗೀತೆಯಲ್ಲಿ ಹೇಳಿದೆ. ಸಾಯುವಾಗ ಯಾವನು ಯಾವ ರೂಪವನ್ನು ಸ್ಮರಿಸುತ್ತಾನೊ ಮುಂದಿನ ಜನ್ಮದಲ್ಲಿ ಅವನು ಅದೇ ರೂಪವನ್ನು ಪಡೆಯುತ್ತಾನೆ. ಆದರೆ ಸಾಯುವ ಕಾಲದಲ್ಲಿ ತನಗೆ ಶ್ರೇಯಸ್ಕರವಾದ ರೂಪು ನೆನಪಿಗೆ ಬರಬೇಕಾದರೆ ಜೀವಿತಕಾಲದಲ್ಲೆಲ್ಲಾ ಅವನು ಅದೇ ಚಿಂತೆಯನ್ನೇ ಮಾಡಿರಬೇಕಾಗುತ್ತದೆ. ಭರತನ ಕಥೆಯು ಇದಕ್ಕೆ ಉದಾಹರಣೆಯಾಗಿದೆ. ಭರತನು ಚಕ್ರವರ್ತಿಯಾಗಿದ್ದು ಅನೇಕಸತ್ಕರ್ಮಗಳನ್ನು ಮಾಡಿ ಕೊನೆಗೆ ವೈರಾಗ್ಯದಿಂದ ರಾಜ್ಯವನ್ನು ಮಕ್ಕಳಿಗೆ ಹಂಚಿ ತಾನು ಮುನಿವೃತ್ತಿಯನ್ನಾಶ್ರಯಿಸಿ ಪರಮಾತ್ಮಭಾವನೆಯನ್ನು ಮನಸ್ಸಿನಲ್ಲಿ ತುಂಬಿಕೊಳ್ಳುವ ಉದ್ಯೋಗವನ್ನೇ ಎಡೆಬಿಡದೆ ನಡೆಸಿದನು. ಈ ಪ್ರಯತ್ನದಿಂದ ಅವನಿಗೆ ಆ ಜನ್ಮದಲ್ಲಿಯೇ ಸಾಕ್ಷಾತ್ಕಾರವಾಗಿ ಹುಟ್ಟುಸಾವುಗಳ ಕೋಟಲೆಯೇ ತಪ್ಪಬೇಕಾಗಿತ್ತು. ಆದರೆ ಇದಕ್ಕೊಂದು ವಿಘ್ನವು ಬಂತು. ಒಮ್ಮೆ ಭರತನು ನದಿಯಲ್ಲಿ ಮಿಂದು ದಡದಲ್ಲಿ ಆಹ್ನಿಕವನ್ನು ಮಾಡುತ್ತ ಕುಳಿತಿರುವಾಗ ಸಮೀಪದಲ್ಲಿಯೇ ಭಯಂಕರವಾದೊಂದು ಸಿಂಹಗರ್ಜನೆಯಾಯಿತು. ಅದೇ ಸಮಯದಲ್ಲಿಯೇ ಪೂರ್ಣಗರ್ಭಿಣಿಯಾಗಿ ಬಾಯಾರಿ ನೀರು ಕುಡಿಯಲಿಕ್ಕೆ ಬಂದಿದ್ದ ಒಂದು ಹೆಣ್ಣುಜಿಂಕೆಯು ಹೆದರಿ ದಿಕ್ಕು ತೋಚದೆ ಭರತನ ಹತ್ತಿರದಲ್ಲಿಯೇ ನದಿಯನ್ನು ಹಾರಿತು. ಅದು ಹಾರುತ್ತಿರುವಾಗ ಜಿಂಕೆಯ ಮರಿಯು ಅದರ ಹೊಟ್ಟೆಯಿಂದ ಹೊರಬಿದ್ದು ನದಿಯೊಳಕ್ಕೆ ಬಿತ್ತು. ಅದನ್ನು ನೋಡಿ ಕನಿಕರವುಳ್ಳವನಾದ ಭರ

ತನು ಆ ಮರಿಯನ್ನು ತೆಗೆದುಕೊಂಡು ಹೋಗಿ ತನ್ನಾಶ್ರಮದಲ್ಲಿ ಸಾಕುವದಕ್ಕಾರಂಭಿಸಿದನು. ತಾಯಿಜಿಂಕೆಯು ಎಲ್ಲಿಗೋ ಹೋಗಿ ತನ್ನ ಸಂಕಟದಲ್ಲಿ ತಾನು ಸತ್ತದ್ದರಿಂದ ಆ ಜಿಂಕೆಯ ಮರಿಗೆ ಭರತನೇ ತಾಯಿಯಾದನು. ಭರತನಿಗೆ ದಿನದಿನಕ್ಕೆ ಅದರ ಮೇಲೆ ಪ್ರೀತಿ ಹೆಚ್ಚಿತು. ಅವನು ಅದನ್ನು ಒಂದು ಕ್ಷಣಮಾತ್ರವೂ ಅಗಲಿರಲಾರದವನಾದನು. ಇದರಿಂದ ಅವನ ಧ್ಯಾನಾದಿಗಳೆಲ್ಲಾ ನಿಂತು ಹೋದವು. ಹೀಗಿರು ವಾಗ ಭರತನಿಗೆ ಮರಣಕಾಲವು ಬಂತು. ಕೊನೆಕೊನೆಗೆ ಅವನು ಜಿಂಕೆಯ ಮರಿಯಲ್ಲಿ ಉತ್ಕಟವಾದ ಪ್ರೇಮವನ್ನಿಟ್ಟುಕೊಂಡು ಅದರ ಲ್ಲಿಯೇ ತನ್ಮಯವೃತ್ತಿಯಾಗಿದ್ದದರಿಂದ ಸಾಯುವಾಗ ಅವನ ಮುಂದೆ ಜಿಂಕೆಯ ಮರಿಯ ವಿಚಾರವೇ ಬಂದು ನಿಂತಿತು. ತಾನು ಸತ್ತ ಮೇಲೆ ಜಿಂಕೆಯ ಮರಿಯ ಗತಿಯೇನೆಂಬ ಯೋಚನೆಯೇ ಅವನ ಮನಸ್ಸನ್ನಾ ವರಿಸಿತ್ತು. ಈ ಸ್ಥಿತಿಯಲ್ಲಿ ಅವನ ಪ್ರಾಣವು ಹೋಗುತ್ತಲೇ ಮುಂದಿನ ಜನ್ಮದಲ್ಲಿ ಅವನು ಜಿಂಕೆಯೇ ಆದನೆಂದೂ ಆ ಜಿಂಕೆಯ ಜನ್ಮವು ಹೋದ ಮೇಲೆ ಒಬ್ಬ ಬ್ರಾಹ್ಮಣನಾಗಿ ತನ್ನ ಸಾಧನೆಯನ್ನು ಮುಗಿಸಿ ಮುಕ್ತ ನಾದನೆಂದೂ ಭಾಗವತದಲ್ಲಿ ಹೇಳಿದೆ. ಆದ್ದರಿಂದ ತನ್ನ ಶ್ರೇಯಸ್ಸಿಗೆ ಪ್ರತಿಬಂಧಕವಾದ ಯಾವ ವಿಚಾರಕ್ಕೂ ಹೆಚ್ಚಾಗಿ ಮನಸ್ಸನ್ನು ಕೊಡದೆ ತನಗೆ ಹಿತವಾದ ನೆನಪೇ ಕೊನೆಗೂ ಬರುವಂತೆ ಮನುಷ್ಯನು ಯಾವಾ ಗಲೂ ಪ್ರಯತ್ನವನ್ನು ಮಾಡಬೇಕು.

ಇದೇ ಜನ್ಮದಲ್ಲಿಯೇ ಮೋಕ್ಷವೇ ಆಗಬೇಕಾದರೆ ಸಾಯುವಾಗ ದೇವರ ಸ್ಮರಣೆಯುಂಟಾಗುವಂತೆ ಮಾಡಿಕೊಳ್ಳಬೇಕು. ಜೀವಿತಕಾಲ ದಲ್ಲೆಲ್ಲಾ ದೇವರ ಸ್ಮರಣೆಯನ್ನು ಮಾಡಿದ್ದರೆ ಸಾಯುವಾಗಲೂ ಅದು ಬರುವದಂತು ಸರಿಯಷ್ಟೆ. ಸರ್ವಪರಿಕರಗಳೂ ಅಂತ್ಯಕಾಲದಲ್ಲಿ ದೇವರ ಸ್ಮರಣೆಯುಂಟಾಗುವದಕ್ಕೆ ಸಾಧಕವಾಗಿರಬೇಕೆಂಬ ಉದ್ದೇಶದಿಂದಲೇ ನಮ್ಮ ಪೂರ್ವಿಕರು ಮಕ್ಕಳಿಗೆ ಕೂಡ ದೇವರ ಹೆಸರನ್ನೇ ಇಡುವ ಪದ್ಧತಿ ಯನ್ನು ಹಾಕಿದ್ದಾರೆ. ಅದರೆ ಸಾಯುವ ಕಾಲದಲ್ಲಿ ಮಕ್ಕಳನ್ನು ಲಕ್ಷ್ಯ ದಲ್ಲಿಟ್ಟುಕೊಂಡು ಮಕ್ಕಳಿಗಿಟ್ಟಿದ್ದ ದೇವರ ಹೆಸರನ್ನುಚ್ಚರಿಸಿದ ಮಾತ್ರ ದಿಂದಲೇ ದೇವರ ಸ್ಮರಣೆಯಾದಂತಾಗಲಾರದು. ಆದರೂ ಸಾಯು

ವವನ ಮನಸ್ಸಿನಲ್ಲಿ ದೇವರ ಸ್ಮರಣೆಯ ಸಂಸ್ಕಾರವೇನಾದರೂ ಇದ್ದು ಅದು ಮನಸ್ಸೆಂಬ ಸರೋವರದ ತಳದಲ್ಲಿ ಕೂತಿದ್ದರೆ ಆ ಸಾವಿನ ಸಂಕಟದಲ್ಲಿ ಅವನು ಮಕ್ಕಳನ್ನೇ ಲಕ್ಷವಾಗಿಟ್ಟುಕೊಂಡು ಕರೆದರೂ ಆ ಹೆಸರು ದೇವರ ಸಂಬಂಧವಾಗಿದ್ದರೆ ಎಷ್ಟೋ ಸಲ ಅದು ಪುತ್ರನೆಂಬ ಸಂಸ್ಕಾರವನ್ನು ಎಬ್ಬಿಸುವದಲ್ಲದೆ ಮನಸ್ಸಿನಲ್ಲಿರುವ ದೇವರ ಸಂಸ್ಕಾರವನ್ನೂ ಎಬ್ಬಿಸಬಹುದು. ಇಬ್ಬರು ಗೆಳೆಯರು ಮಾತಾಡುವಾಗ ಒಬ್ಬನು ನನ್ನ ಎಳೆಯ ಮಗುವಾದ ತಿಮ್ಮಪ್ಪಗೆ ಶರೀರದಲ್ಲಿ ಸ್ವಸ್ಥವಿಲ್ಲವೆನ್ನುತ್ತಲೆ ಇನ್ನೊಬ್ಬನು ತಿರುಪತಿಯ ತಿಮ್ಮಪ್ಪಗೆ ಮುಡುಪನ್ನು ಕಟ್ಟೆಂದು ಹೇಳಬಹುದು. ಮಗುವಿಗೆ ಇಟ್ಟ ತಿಮ್ಮಪ್ಪನೆಂಬ ಹೆಸರು ಆ ಗೆಳೆಯನಿಗೆ ವೆಂಕಟರಮಣಸ್ವಾಮಿಯ ನೆನಪನ್ನು ತಂದು ಕೊಟ್ಟಿತು. ಮಕ್ಕಳ ಹೆಸರಿನಿಂದ ದೇವರ ನೆನಪಾದ ವಿಚಾರವು ಪುರಾಣದಲ್ಲಿಯೂ ಇದೆ. ಅಜಾಮಿಳನ ಚರಿತ್ರೆಯನ್ನು ನೋಡಿರಿ. ಅವನು ಮೊದಲು ಒಳ್ಳೇ ಕರ್ಮಠನಾದ ಬ್ರಾಹ್ಮಣನಾಗಿದ್ದನು. ಆ ಮೇಲೆ ಏನೋ ದುರ್ದೈವದಿಂದ ಅವನು ಒಬ್ಬ ನೀಚಜಾತಿಯ ಸ್ತ್ರೀಯಲ್ಲಿ ಅನುರಕ್ತನಾಗಿ ಪತಿತನಾಗಿದ್ದನು. ಆ ನೀಚಸ್ತ್ರೀಯಲ್ಲಿಯೂ ಅವನಿಗೆ ಅನೇಕರು ಮಕ್ಕಳಾದರು. ಅವರಲ್ಲಿ ಅಜಾಮಿಳನಿಗೆ ಕಿರಿಯವನ ಮೇಲೆ ಬಹಳ ಪ್ರೀತಿಯಿತ್ತು. ಅಜಾಮಿಳನು ಆ ಮಗನನ್ನು ನಾರಗನೆಂದು ಕರೆಯುತ್ತಿದ್ದನು. ನಾರಗನೆಂಬುದು ನಾರಾಯಣ ಎಂಬ ದೇವರ ಹೆಸರಿನ ಮುದ್ದಿನ ರೂಪ. ಅಜಾಮಿಳನು ಹೀಗೆ ಇರುವಾಗ ಅವನಿಗೆ ಸಾಯುವ ಕಾಲವು ಬಂತು. ಆಗ ಅವನು ನಾರಗ ಎಂದು ಒದರಿದನು. ಈ ಶಬ್ದವನ್ನುಚ್ಚರಿಸುತ್ತಲೇ ಅವನಿಗೆ ಪೂರ್ವಸಂಸ್ಕಾರದ ಬಲದಿಂದ ನಾರಾಯಣದೇವರ ನೆನಪಾಯಿತು. ಆಗ ತಾನು ಸತ್ಕರ್ಮಗಳಿಂದ ಪತಿತನಾದ್ದಕ್ಕೆ ಅವನಿಗೆ ಪಶ್ಚಾತ್ತಾಪವಾಯಿತು. ಹೀಗಾಗಿ ಮರಣಕಾಲದಲ್ಲಿ ಅವನ ಮನಸ್ಸಿನಲ್ಲಿ ನಾರಾಯಣಸ್ಮರಣೆಯುಂಟಾದ್ದರಿಂದ ಸದ್ಗತಿಯೇ ಉಂಟಾಯಿತು. ನಾರಾಯಣಸ್ಮರಣೆಯ ಪ್ರಭಾವವನ್ನು ಹೇಳುವದೇನು !

“ ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಳೇವರಮ್ ।

ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥ ”

ಎಂದು ಭಗವದ್ಗೀತೆಯಲ್ಲಿ ಹೇಳಿರುವಂತೆ ಸಾಯುವಾಗ ಕೂಡ ದೇವರನ್ನು ಸ್ಮರಿಸುತ್ತ ದೇಹವನ್ನು ಬಿಡುವವರು ದೇವತ್ವವನ್ನೇ ಪಡೆಯುವರೆಂಬ ವಿಷಯದಲ್ಲಿ ಸಂಶಯವಿಲ್ಲ. ವಾಲಿಯೂ ರಾವಣನೂ ಶ್ರೀರಾಮಚಂದ್ರನ ಹಗೆಗಳಾಗಿದ್ದರೂ ಕೂಡ ಸಾಯುವದಕ್ಕೆ ಕೆಲವು ದಿನಗಳ ಹಿಂದೆ ಅವನ ಭೀತಿಯಿಂದ ಎಡೆಬಿಡದೆ ಅವನನ್ನು ಸ್ಮರಿಸುತ್ತಿದ್ದು ಕೊನೆಗೂ ಅವನ ಸ್ಮರಣೆಯಲ್ಲಿಯೇ ಸತ್ತದ್ದರಿಂದ ಅವರಿಗೆ ಸದ್ಗತಿಯಾಯಿತೆಂದು ಶ್ರೀಮದ್ರಾಮಾಯಣದಲ್ಲಿ ಹೇಳಿದೆ.

## ಮರಣದ ವೃತ್ತಾಂತ.

ಪ್ರಾಣಿಗಳಿಗೆ ಮರಣವಾಗುವದನ್ನು ನಾವು ಪ್ರತಿದಿನವೂ ನೋಡುತ್ತಲೇ ಇರುತ್ತೇವೆ. ಆದರೆ ಮರಣವೆಂದರೇನೆಂಬುದನ್ನೂ ಆಮೇಲೆ ಜೀವನ ಸ್ಥಿತಿಗತಿಯೇನಾಗುವದೆಂಬದನ್ನೂ ನಾವು ವಿಚಾರಮಾಡುವದಿಲ್ಲ. ಅದು ಪ್ರತಿಯೊಬ್ಬನಿಗೂ ತಿಳಿದಿರಬೇಕಾದದ್ದು. ಜೀವರ ಶರೀರವು ಮರಣವಾಗುವದಕ್ಕೆ ಮೊದಲಿದ್ದಂತೆಯೇ ಮರಣವಾದ ಮೇಲೆಯೂ ಇದ್ದೇ ಇರುತ್ತದೆ ಆದರೆ ಆ ಶರೀರದಲ್ಲಿ ಏಳುವದು, ಕೂಡುವದು, ನಿಲ್ಲುವದು— ಮೊದಲಾದ ಯಾವ ಕ್ರಿಯೆಯೂ ನಡೆಯುವದಿಲ್ಲ. ಆದ್ದರಿಂದ ಮೊದಲು ಶರೀರದಲ್ಲಿದ್ದ ಒಂದಾನೊಂದು ಶಕ್ತಿವಿಶೇಷವು ಈಗ ಹೊರಬಿದ್ದು ಹೋಗಿರಬೇಕೆಂದು ತಿಳಿಯುತ್ತದೆ. ಹಾಗೆ ಹೊರಬಿದ್ದು ಹೋದಂಥ ವಸ್ತು ಯಾವದೆಂಬದನ್ನು ಬಹುಮಟ್ಟಿಗೆ ನಾವು ಪ್ರತ್ಯಕ್ಷವಾಗಿ ಕಂಡಹಾಗೆಯೇ ಕಾಣಬಹುದು. ಸಾಯುವವನ ಹತ್ತಿರ ನಿರೀಕ್ಷಿಸುತ್ತಿದ್ದರೆ ಕೆಲವು ಹೊತ್ತು ಅವರಿಗೆ ಮೇಲುಸಿರಿಟ್ಟದ್ದು ಆ ಮೇಲೆ ಒಮ್ಮೆ ಆ ಉಸಿರು ಘೋರ್ಗರೆಯುತ್ತ ಹೊರಬಿದ್ದು ಹೋಗಿ ಬಿಡುತ್ತದೆ. ಆಗ ಮರಣವಾಯಿತೆಂದು ತಿಳಿಯುವರು. ಮೂಗಿನಲ್ಲಿ ಉಸಿರಾಡುತ್ತಿರುವವರಿಗೂ ಶರೀರಕ್ಕೆ ಚೈತನ್ಯವಿರುವದು. ಅದು ಹೋಯಿತೆಂದರೆ ಶರೀರವು ಬಣಕಟ್ಟಿಗೆಯಂತಾಗುವದು. ಮರಣವಾಗಿರುವದೋ ಇಲ್ಲವೋ ಎಂಬ ಸಂಶಯವು ಬಂದಾಗ ಕೆಲವರು

ಮೂಗಿನ ಬಳಿಯಲ್ಲಿ ಹಿಡಿದುಬಿಟ್ಟು ನೋಡುವರು. ಮೂಗಿನಲ್ಲಿ ಉಸಿರು ಓಡಾಡುವದೋ ಇಲ್ಲವೋ ಎಂಬದನ್ನು ತಿಳಿಯುವದೇ ಅವರ ಉದ್ದೇಶ. ಜೀವವೆಂಬ ಬೆಲೆಯುಳ್ಳ ಧನಕ್ಕೆ ಈ ಶರೀರವೆಂಬುದು ಕಬ್ಬಿಣದ ಪೆಟ್ಟಿಗೆಯಂತೆ ; ಪ್ರಾಣವೆಂಬುದು ಕಬ್ಬಿಣದ ಪೆಟ್ಟಿಗೆಯೊಳಗಿರುವ ತೆಳುವಾದ ಚೀಲದಂತೆ. ಬೆಲೆಯುಳ್ಳ ಧನದ ಕಳವಾಗುವಾಗ ಕಬ್ಬಿಣದ ಪೆಟ್ಟಿಗೆಯೇ ಕಳವಾಗಿ ಹೋಗುವದಿಲ್ಲ; ಅದರೊಳಗಿನ ಚೀಲಗಳು ಹಣದೊಂದಿಗೆ ಹೋಗುತ್ತವೆ. ಅದರಂತೆ ಈ ಶರೀರದಲ್ಲಿರುವ ಜೀವವೆಂಬ ಬೆಲೆಯುಳ್ಳ ಧನವು ಹೋಗುವಾಗ ಶರೀರವು ಕಬ್ಬಿಣದ ಪೆಟ್ಟಿಗೆಯಂತೆ ಇದ್ದ ಹಾಗೆಯೇ ಬಿದ್ದಿರುವದು. ಅದರೊಳಗಿದ್ದ ಪ್ರಾಣವೆಂಬ ಚೀಲವು ಜೀವವೆಂಬ ಹಣದೊಡನೆ ಸ್ಥಲಾಂತರಕ್ಕೆ ಹೋಗಿರುವದು. ಆ ಪ್ರಾಣವನ್ನು ಸೂಕ್ಷ್ಮಶರೀರವೆಂದು ಕರೆಯುತ್ತಾರೆ. ನಮ್ಮ ಚೇತನಶಕ್ತಿಯೆಲ್ಲಾ ಆ ಸೂಕ್ಷ್ಮಶರೀರದಲ್ಲಿರುವದು. ಮರಣವೆಂದರೆ ಸೂಕ್ಷ್ಮಶರೀರವು ಸ್ಥೂಲಶರೀರವನ್ನು ಬಿಟ್ಟು ಹೊರಬೀಳುವದು. ಸೂಕ್ಷ್ಮಶರೀರವು ಹೋಗಿಬಿಟ್ಟರೆ ಸ್ಥೂಲಶರೀರವು ಹೆಣವೆನಿಸಿಕೊಳ್ಳುವದು. ಆ ಸೂಕ್ಷ್ಮಶರೀರವು ಶರೀರದಿಂದ ಶರೀರಕ್ಕೆ ಹೋಗುವಾಗಲೂ ಬರುವಾಗಲೂ

“ ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।
ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥ ”

ಎಂಬ ಗೀತಾವಚನದಂತೆ— ವಾಯು ಹೂವಿನಿಂದ ಗಂಧವನ್ನು ಸೆಳೆದುಕೊಂಡು ಹೋಗುವ ಹಾಗೆ- ಜೀವವು ಪಂಚೇಂದ್ರಿಯಗಳನ್ನೂ ಮನಸ್ಸನ್ನೂ ಕೂಡ ಕೂಡಿಕೊಂಡೇ ಸಾಗುವದು.

ಮರಣವು ಯಾವ ಕಾರಣದಿಂದ ಬರುವದೆಂಬುದನ್ನು ಮನಗಾಣಿಸುವದಕ್ಕೆ ಆಗುವದಿಲ್ಲ. ಅವನು ಹುಟ್ಟುವಾಗಲೇ ಅವನ ಪೂರ್ವಕರ್ಮಾನುಗುಣವಾಗಿ ಅವನ ಜೀವಿತಕಾಲವಿಷ್ಟೇಯೆಂದು ಗೊತ್ತಾಗಿರುವದೆಂದು ಶಾಸ್ತ್ರಗಳು ಹೇಳುವವು. ಆದ್ದರಿಂದ ಮುಪ್ಪಾದ ಮೇಲೆಯೇ ಮರಣವಾಗಬೇಕೆಂಬ ನಿಯಮವಿಲ್ಲ. ಮರಣವೆಂಬ ದುಃಖವನ್ನು ಯಾವಕಾಲದಲ್ಲಿ ಅನುಭವಿಸಬೇಕಾದ ಯೋಗವಿರುವದೋ

ಆ ಕಾಲದಲ್ಲಿ ಅದು ಬರುವದೆಂದೂ ಆ ದುಃಖವು ಅವನ ಹಿಂದಿನ ಪಾಪದ ಫಲವೇ ಆಗಿರುವದರಿಂದ ಈ ಜನ್ಮದಲ್ಲಿ ಅದಕ್ಕಿಂತ ಪ್ರಬಲವಾದ ಪುಣ್ಯವೆನಿಸುವ ಕರ್ಮವನ್ನು ಮಾಡುವದರಿಂದ ಕೆಲವು ಸಂದರ್ಭಗಳಲ್ಲಿ ಆ ದುಃಖವನ್ನು ಹಿಮ್ಮೆಟ್ಟಿಸುವದಕ್ಕೆ ಶಕ್ಯವಾಗುವದೆಂದೂ ಶಾಸ್ತ್ರಗಳಲ್ಲಿ ಹೇಳಿದೆ. ಆಯುಃಪರಿಮಾಣವು ವಿಶೇಷವಾಗಿ ಉಸಿರಿನ ಸಂಖ್ಯೆಯ ಮೇಲಿರುವದೆಂದೂ ತಿಳಿದವರ ಮತವಿದೆ. ಆದ್ದರಿಂದಲೇ ನಮ್ಮ ದೇಶದಲ್ಲಿ ಎಷ್ಟೋ ಜನರು ಯೋಗಮಾರ್ಗದಿಂದ ಉಸಿರನ್ನು ಕಟ್ಟಿ ಎಷ್ಟೋ ಕಾಲ ಮರಣವನ್ನು ತಪ್ಪಿಸಿಕೊಂಡು ತಪಶ್ಚರ್ಯೆಯಲ್ಲಿದ್ದರೆಂದು ಕಂಡು ಬರುತ್ತದೆ. ಆದ್ದರಿಂದ ಆಯುಷ್ಯವು ಪ್ರಾಣದ ಧೀನವೆಂದು ಸಿದ್ಧವಾಯಿತು.

ಈ ಪ್ರಾಣವು ಶರೀರವನ್ನು ಬಿಡುವ ಲಕ್ಷಣದಿಂದಲೇ ಆ ಜೀವನ ಮುಂದಿನ ಗತಿಯನ್ನು ಶಾಸ್ತ್ರಕಾರರು ನಿರ್ಣಯಿಸುತ್ತಾರೆ. ಸ್ಥೂಲ ಶರೀರಕ್ಕೆ ಗಂಟು ಬಿದ್ದಿರುವ ಪ್ರಾಣವು ತನ್ನ ಗಂಟನ್ನು ಕತ್ತರಿಸಿಕೊಂಡು ಹೊರಬೀಳುವ ಗಡಿಬಿಡಿಯಲ್ಲಿ ಜೀವನಿಗೆ ದಿಕ್ಕು ತೋಚದಂತಾಗುತ್ತದೆ. ಶರೀರಕ್ಕಿರುವ ಒಂಬತ್ತು ಬಾಗಿಲುಗಳಲ್ಲಿ ತಾನು ಯಾವ ಬಾಗಿಲಲ್ಲಿ ತೂರಬೇಕೆಂದು ಅವನಿಗೆ ಸ್ವಭಾವವಾಗಿ ತವಕವು ಉಂಟಾಗಿರುತ್ತದೆ. ಅವನು ಸತ್ಕರ್ಮಗಳನ್ನು ಮಾಡಿದ್ದರೆ ಆಗ ಅವನ ಮನಸ್ಸು ಆದಷ್ಟು ಸಮಾಧಾನವನ್ನು ಹೊಂದಿ ಮುಖಭಾಗದ ಬಾಗಿಲಿನಲ್ಲಿ ಹಾಯುತ್ತದೆ. ಅವನು ದುಷ್ಕರ್ಮಗಳನ್ನು ಮಾಡಿದ್ದರೆ ಎಲ್ಲಿಯಾದರೂ ನುಸಿದು ಪಾರಾದರೆ ಸಾಕೆಂದು ಹಿತ್ತಲ ಬಾಗಿಲಿನಂಥ ಕೆಳಗಿನ ಬಾಗಿಲುಗಳಲ್ಲಿ ನುಗ್ಗುತ್ತದೆ. ಪ್ರಾಣವು ಮುಖದಲ್ಲಿರುವ ಕಣ್ಣು, ಕಿವಿ- ಮೊದಲಾದ ಕಂಡಿಗಳಿಂದ ಹೊರಬಿದ್ದರೆ ಆ ಜೀವವು ಸ್ವರ್ಗಕ್ಕೆ ಹೋಗುವದೆಂದೂ ಕೆಳಗಿನ ಕಂಡಿಗಳಿಂದ ಹೊರಬಿದ್ದರೆ ನರಕಕ್ಕೆ ಹೋಗುವದೆಂದೂ ಹೇಳುತ್ತಾರೆ. ಹೀಗೆ ಸ್ವರ್ಗಕ್ಕಾಗಲಿ ನರಕಕ್ಕಾಗಲಿ ಹೋದ ಜೀವನು ತನ್ನ ಪುಣ್ಯಕ್ಕೆ ತಕ್ಕಂತೆ ಸ್ವರ್ಗದಲ್ಲಿ ಸುಖವನ್ನೂ ಪಾಪಕ್ಕೆ ತಕ್ಕಂತೆ ನರಕದಲ್ಲಿ ದುಃಖವನ್ನೂ ಅನುಭವಿಸಿ ಮತ್ತೆ ಭೂಲೋಕದಲ್ಲಿ ಹುಟ್ಟುವನು.

ಈ ಒಂಬತ್ತು ಬಾಗಿಲುಗಳಲ್ಲದೆ ಇನ್ನೊಂದು ಬಾಗಿಲಿದೆ. ಈ

ಒಂಬತ್ತು ಬಾಗಿಲುಗಳೂ ದೇವತೆಗಳನ್ನು ಬರಮಾಡಿಕೊಂಡ ಬಾಗಿಲುಗಳು. ಇನ್ನೊಂದು ಬಾಗಿಲು ಸಾಕ್ಷಾತ್ಪರಮಾತ್ಮನನ್ನೇ ಅಂತರ್ಯಾಮಿಯಾಗಿ ಒಳಕ್ಕೆ ಬಿಟ್ಟುಕೊಂಡ ಬಾಗಿಲು. ಅದು ಯಾವದೆಂದರೆ ನೆಡುನೆತ್ತಿಯಲ್ಲಿರುವ ಬ್ರಹ್ಮರಂಧ್ರ. ಇದರ ವಿಚಾರವೂ ಹಿಂದೆಯೇ ಬಂದಿದೆ. ಜೀವನು ಈ ಬಾಗಿಲಿನಲ್ಲಿ ಹೋದರೆ ಮಾತ್ರ ಅವನು ಈಶ್ವರಸಾನ್ನಿಧ್ಯವನ್ನೇ ಪಡೆದು ಹುಟ್ಟುಸಾವುಗಳ ಚಕ್ರದ ಸುತ್ತಿನಿಂದ ಕಳಚಿಕೊಳ್ಳುವನು. ಮಹಾಮಹಾಯೋಗಿಗಳು ಮರಣಕಾಲದಲ್ಲಿ ಈ ಬಾಗಿಲಿನಿಂದ ಶರೀರವನ್ನು ಬಿಡುವ ಶಕ್ತಿಯನ್ನು ಪಡೆಯುವದಕ್ಕಾಗಿ ಸರ್ವಪ್ರಯತ್ನವನ್ನೂ ಮಾಡುವರು. ಪ್ರತಿಯೊಬ್ಬನ ಬೆನ್ನುಹುರಿಯಲ್ಲಿ ಈಡಾ, ಪಿಂಗಳಾ, ಸುಷುಮ್ನಾ– ಎಂಬ ಮೂರು ನಾಡಿಗಳಿರುವವೆಂತಲೂ ಪ್ರಾಣವಾಯುವು ಈಡಾ ಮತ್ತು ಪಿಂಗಳಾ ಎಂಬ ಎರಡು ನಾಡಿಗಳಲ್ಲಿಯೇ ತೂರಿ ಮೂಗಿನ ಹೊಳ್ಳೆಗಳಲ್ಲಿ ಓಡಾಡುತ್ತಿರುವದೆಂತಲೂ ಆ ಪ್ರಾಣವಾಯು ಈಡೆಯೊಳಕ್ಕೂ ಪಿಂಗಳೆಯೊಳಕ್ಕೂ ನುಗ್ಗುವದನ್ನು ತಪ್ಪಿಸಿ ಸುಷುಮ್ನೆಯೊಳಕ್ಕೆ ಹೋಗುವಂತೆ ಮಾಡಿದರೆ ಆ ನಾಡಿಯ ಮೂಲಕ ಅದು ನೇರವಾಗಿ ಬ್ರಹ್ಮರಂಧ್ರದಲ್ಲಿ ತೂರಬಹುದೆಂತಲೂ ಯೋಗಿಗಳು ಹೇಳುವರು.

## ಮತ್ತೆ ಹುಟ್ಟುವ ಬಗೆ.

ಭೂಲೋಕದಲ್ಲಿ ಶರೀರವನ್ನು ಬಿಟ್ಟು ಹೊರಟ ಜೀವರಲ್ಲಿ ನಡುನೆತ್ತಿಯಿಂದ ಹೊರಬಿದ್ದವರು ಮತ್ತೆ ಹುಟ್ಟುವದೇ ಇಲ್ಲ. ಅವರು ದೇವರ ಸನ್ನಿಧಿಯಲ್ಲಿ ಆನಂದದಿಂದಿರುವರು. ಇನ್ನುಳಿದ ಒಂಬತ್ತು ಬಾಗಿಲುಗಳಲ್ಲಿ ಯಾವದಾದರೊಂದರಿಂದ ಹೊರಬಿದ್ದವರು ತಮ್ಮ ತಮ್ಮ ಕರ್ಮಾನುಸಾರವಾಗಿ ಸ್ವರ್ಗವನ್ನೂ ನರಕವನ್ನೂ ಅನುಭವಿಸಿದ್ದಾದ ಮೇಲೆ ಮತ್ತೆ ಭೂಲೋಕದಲ್ಲಿ ಹುಟ್ಟಬೇಕಾದ ಪ್ರಸಂಗವು ಬರುತ್ತಾನೆ. ಆಗ ಆ ಜೀವನು ಮೋಡದಲ್ಲಿ ಸೇರಿ ಮಳೆಯ ಮೂಲಕವಾಗಿ ಭೂಮಿಗಿಳಿಯುತ್ತಾರೆ. ಆಮೇಲೆ ಭೂಮಿಯಲ್ಲಿ ಬೆಳೆಯುವ ಧಾನ್ಯಗಳೊಳಗೆ ಸೇರುತ್ತಾರೆ. ಅಲ್ಲಿಂದ ಆ ಧಾನ್ಯವನ್ನು ತಿಂದಂಥ

ಪುರುಷರ ರಕ್ತದಲ್ಲಿ ಸೇರುತ್ತಾರೆ. ಕೊನೆಗೆ ಪುರುಷರ ಶರೀರದಿಂದ ಸ್ತ್ರೀಯರ ಶರೀರದಲ್ಲಿ ಹೊಕ್ಕು ಅಲ್ಲಿ ತಮ್ಮ ಮುಂದಿನ ಜನ್ಮದ ಶರೀರವನ್ನು ಪಡೆಯುತ್ತಾರೆ. ಸ್ತ್ರೀಯರ ಶರೀರದಲ್ಲಿ ಮತ್ತೊಂದು ಜೀವಕ್ಕಾಗಿ ಒಂದು ದೇಹವು ಹೊಸದಾಗಿ ರಚನೆಯಾಗುವದೇ ಹೊರತು ಜೀವವೇ ಹೊಸದಾಗಿ ರಚನೆಯಾಗುವದಿಲ್ಲ. ಸ್ತ್ರೀಪುರುಷರ ಆಹಾರದಲ್ಲಿ ಅನೇಕಜೀವರು ಅವರ ದೇಹದೊಳಕ್ಕೆ ಹೋಗಬಹುದು. ಆದರೆ ಆ ಜೀವರಲ್ಲಿ ಯಾರ ಯೋಗ್ಯತೆಯು ಆ ದಂಪತಿಗಳ ಯೋಗ್ಯತೆಗೆ ಹೊಂದಿಕೆಯಾಗಿರುವದೊ ಅಂಥವರು ಮಾತ್ರ ಗರ್ಭದಲ್ಲಿ ನಿಲ್ಲುವರು. ಉಳಿದವರೆಲ್ಲಾ ಬಂದ ದಾರಿಯನ್ನು ಹಿಡಿದು ಹೋಗುವರು. ಜೀವರು ಈ ರೀತಿಯಲ್ಲಿ ಧಾನ್ಯಗಳಲ್ಲಿರುವಾಗ ಧಾನ್ಯಗಳಿಗಾಗುವ ಕುಟ್ಟುವಿಕೆ, ಬೀಸುವಿಕೆ, ಬೇಯಿಸುವಿಕೆ– ಮೊದಲಾದ ಕ್ರಿಯೆಗಳಿಂದ ಅವರಿಗೆ ಉಪಹತಿಯೇನೂ ಆಗದಂತೆ ಅವರ ಪರಿಸ್ಥಿತಿ ಇರುತ್ತದೆ.

ಜೀವವು ಗರ್ಭದಲ್ಲಿ ಬೆಳೆಯುತ್ತಿರುವಾಗ ಅದಕ್ಕೆ ತನ್ನ ಉನ್ನತಿಯನ್ನು ಮಾಡಿಕೊಳ್ಳುವ ಅವಕಾಶವಿರುವದಿಲ್ಲ. ಅಲ್ಲಿ ಅದಕ್ಕೆ ಬಹಳ ನಿರ್ಬಂಧವಿರುವದರಿಂದ ಕಷ್ಟದಿಂದ ಕಾಲವನ್ನು ಕಳೆಯಬೇಕಾಗಿರುವದು. ಜೀವನು ಹೀಗೆ ಅಜ್ಞಾನಿಯಾಗಿ ಗರ್ಭದಲ್ಲಿ ತಳಮಳಿಸುತ್ತಿರುವಾಗ ಆರನೇ ತಿಂಗಳಲ್ಲಿ ಒಮ್ಮೆಗೇ ತನ್ನ ಹಿಂದಿನ ಎಲ್ಲ ಜನ್ಮಗಳ ಸ್ಮರಣೆಯುಂಟಾಗುವದು. ತಾನು ಅಧರ್ಮಿಷ್ಠನಾದದ್ದೇ ತನ್ನ ಈ ದುಃಖಕ್ಕೆ ಕಾರಣವೆಂದು ಆಗ ಜೀವನಿಗೆ ಕಣ್ಣಿಗೆ ಕಟ್ಟಿದ ಹಾಗೆ ಕಾಣುವದು. ಆಗ ಅವನು ಇನ್ನು ಮುಂದೆ ಎಂದೆಂದೂ ಧರ್ಮಮಾರ್ಗವನ್ನು ಬಿಟ್ಟು ನಡೆಯುವದಿಲ್ಲವೆಂದು ಆಣೆಯನ್ನು ಹೊತ್ತು ದೇವರಿಗೆ ಬೇಡಿಕೊಳ್ಳುವನು. ಗರ್ಭದಿಂದ ಹೊರಬೀಳುತ್ತಲೇ ಈ ಸ್ಮರಣೆಯು ಹಾರಿಹೋಗುವದು. ಈ ರೀತಿಯಲ್ಲಿ ಜೀವನು ದೇಹವನ್ನು ಬಿಡುವಾಗಲೂ ದೇಹವನ್ನು ಪಡೆದು ಹುಟ್ಟುವಾಗಲೂ ಪಡುವ ಕಷ್ಟವು ಹೇಳತೀರದಾಗಿರುವದರಿಂದ ಈ ಕಷ್ಟವನ್ನು ತಪ್ಪಿಸಿಕೊಳ್ಳುವದಕ್ಕಾಗಿ ಧರ್ಮಮಾರ್ಗದಲ್ಲಿ ಎಡೆಬಿಡದೆ ಅಡಿಯಿಡಬೇಕೆಂದು ಸಮಸ್ತಶಾಸ್ತ್ರಗಳೂ

ಏಕಪ್ರಕಾರವಾಗಿ ಉದ್ಘೋಷಿಸುತ್ತಿರುವವು. “ಬೀಸುವ ದೊಣ್ಣೆಯನ್ನು ತಪ್ಪಿಸಿಕೊಂಡರೆ ಸಾವಿರವರ್ಷ ಆಯುಷ್ಯ” ಎಂಬ ಗಾದೆಯಂತೆ ಗರ್ಭದಲ್ಲಿದ್ದಾಗ ಬೇಕಾದಷ್ಟು ಹರಕೆಯನ್ನು ಹೊತ್ತ ಜೀವನು ಅಲ್ಲಿಂದ ಪಾರಾಗುತ್ತಲೇ ಆ ವಿಚಾರವನ್ನು ಮನಸ್ಸಿಗೆ ಕೂಡ ತಂದುಕೊಳ್ಳದಿರುವದು ಬಹು ಶೋಚನೀಯವಾದ ವಿಷಯ.

## ಮನುಷ್ಯರಿಗೂ ಅವತಾರಪುರುಷರಿಗೂ ಇರುವ ಭೇದ.

ಇದನ್ನು ದೊಡ್ಡವರ ಮಾತಿನಲ್ಲಿಯೇ ಹೇಳುವದು ಯುಕ್ತವಾದ್ದರಿಂದ ಈ ವಿಚಾರದಲ್ಲಿ ಶ್ರೀರಾಮಕೃಷ್ಣಪರಮಹಂಸರ ವಚನಗಳನ್ನೇ ಇಲ್ಲಿ ಉದಾಹರಿಸುತ್ತೇವೆ.

(೧) ಹೋಮವೆಂಬ ಒಂದು ಬಗೆಯ ಪುರಾಣಪಕ್ಷಿಗಳಿವೆ. ಅವು ಅಂತರಿಕ್ಷದ ಅತ್ಯಂತೋನ್ನತಪ್ರದೇಶದಲ್ಲಿಯೇ ಇರುತ್ತವೆ. ಆ ಸ್ಥಲದಲ್ಲಿಯೇ ಅವುಗಳಿಗೆ ಅತ್ಯಂತ ಪ್ರೀತಿ. ಅವು ಅಲ್ಲಿಂದ ಭೂಮಿಗೆಂದೂ ಇಳಿಯುವದೇ ಇಲ್ಲ. ಅವು ಆಕಾಶದಲ್ಲಿಯೇ ಮೊಟ್ಟೆಯನ್ನಿಟ್ಟರೆ ಅದು ಭೂಮಿಯ ಗುರುತ್ವಾಕರ್ಷಣಶಕ್ತಿಗೊಳಪಟ್ಟು ಬೀಳುತ್ತಿರುವಾಗ ಮಧ್ಯಮಾರ್ಗದಲ್ಲಿಯೇ ಮೊಟ್ಟೆಯೊಡೆದು ಮರಿಯಾಗುವವಂತೆ. ಮತ್ತು ಆ ಮರಿಗಳು ಒಡನೆ ತಾವು ಬೀಳುತ್ತಿರುವೆವೆಂದು ತಿಳಿದು ಕ್ಷಣಮಾತ್ರದಲ್ಲಿ ತಮಗೆ ತಾವೇ ತಮ್ಮ ವಾಸಸ್ಥಾನದ ಮಾರ್ಗಕ್ಕೆ ತಿರುಗಿ ಹಾರುವವಂತೆ. ಶುಕದೇವ, ನಾರದ, ಏಸು ಮತ್ತು ಶ್ರೀಶಂಕರಾಚಾರ್ಯರೇ ಮೊದಲಾದವರೆಲ್ಲ ಆ ಪಕ್ಷಿಗಳ ಹಾಗೆ ತಮ್ಮ ಬಾಲ್ಯದಲ್ಲಿಯೇ ಪ್ರಾಪಂಚಿಕವಿಷಯಾಸಕ್ತಿಯನ್ನೆಲ್ಲ ತೊರೆದು ಸತ್ಯಜ್ಞಾನಾನಂದಸ್ವರೂಪದ ದಾರಿಯನ್ನು ಹಿಡಿದರು.

(೨) ಆನೆಗೆ ಹೊರಗೆ ಕೋರೆಹಲ್ಲುಗಳೂ ಒಳಗೆ ಅಗಿಯುವ ಹಲ್ಲುಗಳೂ ಹೀಗೆ ಎರಡು ಜೊತೆ ಇರುವಂತೆ ಶ್ರೀಕೃಷ್ಣನಂಥ ಭಗವದಂಶಸಂಭೂತರು ಎಲ್ಲರ ಕಣ್ಣಿಗೆ ಇತರರಂತೆ ತಾವೂ ಸಾಮಾನ್ಯರಾಗಿ ವರ್ತಿಸುತ್ತಿದ್ದರೂ ಅವರ ಆತ್ಮಗಳು ಕರ್ಮಪಾಶಕ್ಕೆ ಬಹುದೂರ ಇರುವವು.

(೩) ಪ್ರ. ಯೆಹೋದ್ಯರು ತನ್ನ ಮೈಗೆ ಮೊಳೆಯನ್ನು ಹೊಡೆದರೂ ಏಸುವು ಅಷ್ಟು ತೊಂದರೆಯನ್ನು ಸಹಿಸಿಕೊಂಡು ಅಗಲೂ ದೇವರು ಅವರನ್ನು ಕ್ಷಮಿಸಲೆಂದು ಬೇಡಿಕೊಂಡದ್ದು ಹೇಗೆ ?

ಉ. ಒಂದು ಸಾಮಾನ್ಯವಾದ ತೆಂಗಿನಕಾಯಿಯೊಳಕ್ಕೆ ಮೊಳೆಯನ್ನು ತಿವಿದರೆ ಆ ಮೊಳೆಯು ಒಳಗಣ ತಿರುಳಿಗೂ ಕೂಡ ನಾಟುತ್ತದೆ. ಆದರೆ ಗಿಟಕುಗಳಲ್ಲಿ ಒಳಗಣ ತಿರುಳೆಲ್ಲಾ ಒಣಗಿ ಕೊಬ್ಬರಿಯಾಗಿ ಚಿಪ್ಪಿನಿಂದ ಬೇರೆಯಾಗಿರುತ್ತದೆ. ಅಂಥ ಕಾಯಿಯೊಳಕ್ಕೆ ಮೊಳೆಯನ್ನು ತಿವಿದರೆ ಅದು ಕೊಬರಿಗೆ ನಾಟುವದಿಲ್ಲ. ಏಸುವು ಗಿಟಕಿನಂತಿದ್ದನು. ಅವನ ಸೂಕ್ಷ್ಮದೇಹವು ಸ್ಥೂಲದೇಹದಿಂದ ಕಳಚಿಕೊಂಡು ಸ್ವತಂತ್ರವಾಗಿತ್ತು. ಆದುದರಿಂದ ದೇಹಕ್ಕೆ ಮಾಡಿದ ಹಿಂಸೆಗಳು ಯಾವದೂ ತಟ್ಟಲಿಲ್ಲ. ಮೇಲೆ ಮೇಲೆ ಮೊಳೆಗಳಿಂದ ಚುಚ್ಚಿದರೂ ಅವನು ಶಾಂತತ್ವವನ್ನು ಕಳೆದುಕೊಳ್ಳದೆ ಸಮಾಧಾನದಿಂದ ತನ್ನ ಹಗೆಗಳ ಶ್ರೇಯಸ್ಸನ್ನು ಬಯಸುವದಕ್ಕಾಯಿತು.

## ಸಿದ್ಧರಿಗೂ ಅವತಾರಪುರುಷರಿಗೂ ಇರುವ ಭೇದ.

ಸಿದ್ಧರೆಂದರೆ ಹುಟ್ಟುವಾಗ ಎಲ್ಲರಂತೆ ಬದ್ಧರಾಗಿ ಹುಟ್ಟಿ ತಮ್ಮ ತಪಃಪ್ರಭಾವದಿಂದ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದವರು. ಅವತಾರಪುರುಷರೆಂದರೆ ಇತರರಂತೆ ಹುಟ್ಟಿದ ಹಾಗೆ ಕಂಡರೂ ಗರ್ಭವಾಸದ ಕ್ಲೇಶ ಮೊದಲಾದವುಗಳ ಆಯಾಸಕ್ಕೆ ಗುರಿಯಾಗದೆ ತಾವಾಗಿಯೇ ತಮಗೆ ಬೇಕಾದ ದೇಹವನ್ನು ತೆಗೆದುಕೊಂಡು ಬಂದವರು. ಸಾಧಾರಣರಾದ ಮನುಷ್ಯರ ಸ್ಥಿತಿಗೂ ಅವತಾರಪುರುಷರ ಸ್ಥಿತಿಗೂ ಇರುವ ಭೇದವನ್ನು ಹೇಳಿದ್ದಾದ ಮೇಲೆ ಸಾಧಾರಣರಾಗಿ ಹುಟ್ಟಿ ಸಿದ್ಧರಾದವರ ಸ್ಥಿತಿಗೂ ಅವತಾರಪುರುಷರ ಸ್ಥಿತಿಗೂ ಭೇದವನ್ನು ಹೇಳುವದೂ ಅಗತ್ಯವಾಗುವದು. ಮಹತ್ತ್ವದ ವಿಚಾರವನ್ನು ಹೇಳುವಾಗಲೆಲ್ಲಾ ದೊಡ್ಡವರ ಮಾತನ್ನು ಹೇಳುವದೇ ಹೆಚ್ಚು ಶೋಭಿಸುವದರಿಂದ ಸಿದ್ಧರ ಮತ್ತು ಅವತಾರಪುರುಷರ ಸ್ಥಿತಿಯ ಭೇದದ

ವಿಚಾರದಲ್ಲಿಯೂ ಶ್ರೀರಾಮಕೃಷ್ಣಪರಮಹಂಸರ ಉಪದೇಶವನ್ನೇ ಇಲ್ಲಿ ಮುಂದುಮಾಡುವೆವು.

(೧) ಲೋಕದಲ್ಲಿ ಎರಡುಬಗೆಯ ಜನರಿದ್ದಾರೆ. ಗುರು ತನ್ನ ಒಬ್ಬ ಶಿಷ್ಯನನ್ನು ಕುರಿತು "ಪ್ರಿಯಶಿಷ್ಯನೇ, ಈಗ ನಾನು ನಿನಗೆ ತಿಳಿಸುವದು ಅಮೌಲ್ಯವಾದ ವಿಷಯ. ಇದು ನಿನ್ನಲ್ಲಿಯೇ ಇರಲಿ." ಎಂದು ಹೇಳಿದನು. ಶಿಷ್ಯನು ಅದರಂತೆ ಮಾಡಿದನು. ಆ ಗುರು ಅದೇ ವಿಷಯವನ್ನು ಇನ್ನೊಬ್ಬನಿಗೆ ಉಪದೇಶಮಾಡಿದಾಗ ಆ ಶಿಷ್ಯನು ಆದರ ಅಸದೃಶಪ್ರಭಾವವನ್ನು ಮನಗಂಡು ಅದನ್ನು ತಾನೊಬ್ಬನು ಮಾತ್ರನೇ ಅನುಭವಿಸಲಿಚ್ಛಿಸದೆ ಎತ್ತರವಾದ ಸ್ಥಲದಲ್ಲಿ ನಿಂತು ಎಲ್ಲರಿಗೂ ಆ ಮಹಿಮಾವಿಶೇಷವನ್ನು ಪ್ರಕಟಮಾಡಿದನು. ಅವತಾರ ಪುರುಷರು ಕಡೆಗೆ ಉದಾಹರಿಸಿದ ಶಿಷ್ಯರ ಗುಂಪಿನವರು. ಸಿದ್ಧರು ಮೊದಲನೆಯ ಶಿಷ್ಯರ ತರಗತಿಯವರು.

(೨) ಪ್ರವಾಹವು ಉಕ್ಕಿಬಂದಾಗ ನದಿಗಳೂ ಹಳ್ಳಗಳೂ ಎಲ್ಲ ತುಂಬಿ ತುಳುಕಿ ಸುತ್ತುಮುತ್ತಣ ನೆಲವೆಲ್ಲ ಜಲಮಯವಾಗುವದು. ಆದರೆ ಮಳೆಯ ನೀರು ತನ್ನಷ್ಟಕ್ಕೆ ತಾನು ಮಾರ್ಗಗಳ ಎರಡು ಕಡೆಯಲ್ಲಿಯೂ ತನಗಾಗಿ ಮಾಡಿರುವ ದಾರಿಯಲ್ಲಿ ಹರಿದು ಹೋಗುವದು. ಅಧಿಕಾರಿಕಪುರುಷರ ಅವತಾರವಾದಾಗ ಎಷ್ಟೋ ಜನರ ಉದ್ಧಾರವಾಗುತ್ತದೆ. ಸಿದ್ಧರು ಕಷ್ಟಕಾರ್ಪಣ್ಯಗಳನ್ನು ಸಹಿಸಿ ತಪಶ್ಚರ್ಯಾದಿಗಳನ್ನು ಮಾಡಿ ತಮ್ಮ ದಾರಿಯಲ್ಲಿ ಮಾತ್ರ ಪಾರಾಗಬಲ್ಲರು.

(೩) ಸಿದ್ಧಪುರುಷರು ನೂರಾರುವರ್ಷಗಳಿಂದ ಬೆಳೆದ ಆಪು ಮೊದಲಾದ ಗಿಡಗಳಿಂದ ತುಂಬಿ ಅನುಪಯುಕ್ತವಾಗಿರುವ ಹಾಳು ಬಾವಿಯ ಕಶ್ಮಲವನ್ನೆಲ್ಲ ತೆಗೆದು ಅದನ್ನು ಬಳಕೆಗೆ ಯೋಗ್ಯವಾಗಿ ಮಾಡುವ ಕೆಲಸಗಾರರಂತೆ. ಅವತಾರಪುರುಷರು ಹಾಗಲ್ಲ. ಅವರು ಮೊದಲು ನೀರಿಲ್ಲದೆ ಇದ್ದ ಕಡೆ ಹೊಸದಾಗಿ ಬಾವಿಯನ್ನು ತೋಡಿ ನೀರುಬರಿಸುವ ಕೆಲಸಗಾರರಂತೆ. ಸಿದ್ಧಪುರುಷರು ಸಹಜವಾಗಿ ಭಕ್ತಿಶ್ರದ್ಧೆಗಳಿಂದ ಆರ್ದ್ರವಾದ ಹೃದಯವುಳ್ಳವರನ್ನು ಮಾತ್ರ ಉದ್ಧಾರಮಾಡಬಲ್ಲರು. ಅವತಾರಪುರುಷರಾದರೋ, ಪ್ರೇಮದ ವಾಸನೆ ಕೂಡ

ಇಲ್ಲದೆ ಮರುಭೂಮಿಯಂತೆ ಕಠಿನವಾದ ಹೃದಯವುಳ್ಳವರನ್ನಾದರೂ ಉದ್ಧಾರಮಾಡುತ್ತಾರೆ.

(೪) ಭಾರವಾದ ಮರದ ತೊಲೆಯು ಪ್ರವಾಹದ ಮೇಲೆ ತೇಲುವಾಗ ತಾನು ಮುಳುಗದೆ ಇರುವದಷ್ಟೇ ಅಲ್ಲ; ನೂರಾರು ಜನರನ್ನು ಹೊತ್ತುಕೊಂಡು ಪಾರು ಮಾಡುತ್ತದೆ. ಒಂದು ಅಪಿಸ ಕಡ್ಡಿಯ ದಂಟು ತೇಲುವಾಗ ಅದರ ಮೇಲೆ ಒಂದು ಗುಬ್ಬಿ ಕುಳಿತರೂ ಮುಳುಗುತ್ತದೆ. ಹಾಗೆಯೇ ಅವತಾರಪುರುಷರ ಉದಯವಾದಾಗ ಅವರ ಆಶ್ರಯಬಲದಿಂದ ಲೆಕ್ಕವಿಲ್ಲದಷ್ಟು ಜನರು ಮುಕ್ತಿಸುಖವನ್ನು ಪಡೆಯುತ್ತಾರೆ. ಸಿದ್ಧರು ಎಷ್ಟೋ ಕಷ್ಟದಿಂದ ತಾವು ಮಾತ್ರ ಪಾರಾಗುತ್ತಾರೆ.

## ದಶಾವತಾರಗಳು.

ಅವತಾರಪುರುಷರನ್ನು ಗುರ್ತು ಹಿಡಿಯುವದು ಹೇಗೆ? ಎಂದು ವಿಚಾರ ಮಾಡುತ್ತ ಹೋದರೆ

“ ಅಥವಾ ಬಹುನೈತೇನ ಕಿಂ ಜ್ಞಾನೇನ ತವಾರ್ಜುನ ।
ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥ ”

ಎಂಬ ಗೀತೆಯ ಶ್ಲೋಕವು ಮುಂದೆ ಬಂದು ನಿಲ್ಲುತ್ತದೆ. ಅರ್ಜುನನು ಪರಮಾತ್ಮನ ವಿಭೂತಿವಿಶೇಷಗಳನ್ನು ತಿಳಿಯಬಯಸಿ ಪ್ರಶ್ನೆಯನ್ನು ಮಾಡಿದಾಗ ಶ್ರೀಕೃಷ್ಣನು ಅದನ್ನು ಸಂಕ್ಷೇಪವಾಗಿ ಹೇಳುತ್ತೇನೆಂದು ಹೊರಟು ಕೊನೆಯಲ್ಲಿ ಈ ಅಭಿಪ್ರಾಯವನ್ನು ಹೇಳಿದ್ದಾನೆ. ಮೊದಮೊದಲು ತಾನು ದ್ವಾದಶಾದಿತ್ಯರಲ್ಲಿ ವಿಷ್ಣುವೆಂಬ ಆದಿತ್ಯನೆಂದೂ ಪ್ರಕಾಶಕವಸ್ತುಗಳಲ್ಲಿ ಸೂರ್ಯನೆಂದೂ ಒಂದೊಂದನ್ನಾಗಿ ಹೇಳುತ್ತ ಬಂದ ಅವುಗಳನ್ನು ಮುಗಿಸಲಾರದೆ ಕೊನೆಗೆ ಈ ಶ್ಲೋಕದಲ್ಲಿ ಅವನು “ಹೆ, ಅರ್ಜುನ, ಬಿಡಿಬಿಡಿಯಾಗಿ ಬಹಳವಾಗಿರುವ ಆ ಜ್ಞಾನದಿಂದ ಏನು ಪ್ರಯೋಜನ? ಈ ಅಖಂಡವಾದ ಜಗತ್ತೇ ನನ್ನದೊಂದಂಶವಾಗಿರುವದು.” ಎಂದು ಹೇಳಿರುವನು. ಇದು ಸ್ಥೂಲವಾಗಿ ಹೇಳಿ

ಮಾತಾಯಿತು. ಇನ್ನೂ ಸೂಕ್ಷ್ಮವಾಗಿ ತಿಳಿಯಬೇಕಾದರೆ ಮತ್ತೊಂದು ಶ್ಲೋಕವು ನಾಕಾಗಿರುವದು. ಅದು ಯಾವದೆಂದರೆ–

"ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಂಶಸಂಭವಮ್ ॥"

ಎಂದರೆ ಯಾವ ಯಾವ ವಸ್ತು ಲೋಕೋತ್ತರವಿಭೂತಿಯಿಂದ ಕೂಡಿದೆಯೊ ಮತ್ತು ಹೆಚ್ಚು ಉತ್ಸಾಹಯುಕ್ತವಾಗಿದೆಯೊ ಆ ವಸ್ತುಗಳೆಲ್ಲಾ ಪರಮಾತ್ಮನ ಅಂಶದಿಂದ ಹುಟ್ಟಿದವುಗಳೆಂದರ್ಥ. ಆದ್ದರಿಂದ ಲೋಕದಲ್ಲಿ ಯಾರಲ್ಲಿ ನಾವು ಹೆಚ್ಚಿನ ವಿಭೂತಿತ್ವವನ್ನು ಕಂಡರೂ ಅದನ್ನು ಈಶ್ವರನ ಅವತಾರವೆಂದು ಸಂಭಾವಿಸಬೇಕು.

ವಿಷ್ಣು, ಈಶ್ವರ, ಆದಿಶಕ್ತಿ, ಗಣಪತಿ– ಮೊದಲಾದವರೆಲ್ಲರೂ ಧರ್ಮಗ್ಲಾನಿಯಾದ ಎಷ್ಟೋ ಸಂದರ್ಭಗಳಲ್ಲಿ ತಮ್ಮ ಅಂಶದಿಂದ ಬೇರೆಬೇರೆ ಅವತಾರಗಳನ್ನು ಮಾಡಿ ದುಷ್ಟನಿಗ್ರಹವನ್ನೂ ಶಿಷ್ಟರಕ್ಷಣೆಯನ್ನೂ ಮಾಡಿರುತ್ತಾರೆ. ಆ ವಿಚಾರಗಳೆಲ್ಲಾ ಆಯಾಪುರಾಣಗಳಲ್ಲಿ ವಿಸ್ತಾರವಾಗಿವೆ. ಇಲ್ಲಿ ದಿಕ್ಪ್ರದರ್ಶನಾರ್ಥವಾಗಿ ವಿಷ್ಣುವಿನ ಪ್ರಸಿದ್ಧವಾದ ದಶಾವತಾರಗಳನ್ನು ಉದಾಹರಿಸಲಾಗುವದು.

**ಮತ್ಸ್ಯಾವತಾರ**– ಹಿಂದೆ ಸೋಮಕನೆಂಬೊಬ್ಬ ದೈತ್ಯನಿದ್ದನು. ಅವನಿಗೆ ದೇವತೆಗಳ ಮೇಲೆ ಹೆಚ್ಚಿನ ಹಗೆತನವಿತ್ತು. ದೇವತೆಗಳು ಭೂಲೋಕದಲ್ಲಿ ನಡೆಯುವ ವೇದೋಕ್ತಕರ್ಮಗಳಿಂದ ಪುಷ್ಟಿಯನ್ನು ಪಡೆದು ದೈತ್ಯರನ್ನು ಹಿಮ್ಮೆಟ್ಟಿಸುತ್ತಿದ್ದರು. ಬ್ರಹ್ಮನು ವೇದದ ಸಹಾಯದಿಂದ ಬೇಕುಬೇಕಾದ ಸೃಷ್ಟಿಯನ್ನು ಮಾಡುತ್ತಿದ್ದನು. ಹೀಗೆ ವೇದವು ದೇವತೆಗಳಿಗೆ ಬೆಂಬಲವಾಗಿದ್ದದರಿಂದ ಆ ವೇದವನ್ನು ಅಪಹರಿಸಿ ದೇವತೆಗಳನ್ನು ನಿರ್ವೀರ್ಯರನ್ನಾಗಿ ಮಾಡಬೇಕೆಂದು ಮನಸ್ಸು ಮಾಡಿ ಸೋಮಕನು ಆ ವೇದಗಳನ್ನು ಕದ್ದುಕೊಂಡು ಹೋಗಿ ಸಮುದ್ರದಲ್ಲಿ ಅಡಗಿಕೊಂಡನೆಂದು ಕಥೆಯಿದೆ. ಈಗಿನ ಕಾಲದ ಬುದ್ಧಿಗೆ ಸಮಾಧಾನವಾಗುವದಕ್ಕೆ ಇಲ್ಲಿ ಸ್ವಲ್ಪ ವಿಚಾರಮಾಡಬೇಕಾಗಿದೆ. ಆಗಿನ ಕಾಲದಲ್ಲಿ ವೇದವನ್ನು ಒಬ್ಬರಿಂದೊಬ್ಬರು ಕೇಳಿ ಪಡೆಯುತ್ತಿದ್ದರೇ ಹೊರತು

ಆದಕ್ಕೆ ಲೇಖನರೂಪವನ್ನು ಕೊಟ್ಟು ಇಟ್ಟುಕೊಂಡಿದ್ದ ಹಾಗೆ ತೋರು ವದಿಲ್ಲ. ಆದ್ದರಿಂದ ಬರೆದಿಟ್ಟಿದ್ದ ವೇದವನ್ನು ಕದ್ದುಕೊಂಡು ಹೋದ ನೆಂದು ಹೇಳುವದು ಸಯುಕ್ತಿಕವಾಗುವದಿಲ್ಲ. ಒಂದು ಪಕ್ಷ ಹಾಗ ನಡೆದಿದ್ದರೂ ಪಂಚಾಂಗವು ಹೋದರೆ ನಕ್ಷತ್ರವು ಹೋಯಿತೆ? ವೇದ ವನ್ನು ಕಲಿತಿದ್ದವರು ಮತ್ತೆ ಅದನ್ನು ಬರೆದರಾಯಿತು. ಆದ್ದರಿಂದ ಬರೆದಿದ್ದ ವೇದವನ್ನು ಅವನು ತೆಗೆದುಕೊಂಡು ಹೋಗಿರಲಾರನು. ದೈತ್ಯರು ಬಹಳ ಮಾಯಾವಿಗಳು. ಸೋಮಕನು ಬ್ರಹ್ಮನ ಮೇಲೆಯೂ ಬ್ರಾಹ್ಮಣರ ಮೇಲೆಯೂ ತನ್ನ ಮಾಯಾಜಾಲವನ್ನು ಬೀಸಿ ಅವರಿ ವೇದದ ಸ್ಫೂರ್ತಿಯುಂಟಾಗದಂತೆ ಮಾಡಿ ತಾನು ಸಮುದ್ರದಲ್ಲಿ ಹೋ ಅಡಗಿಕೊಂಡಿರಬಹುದು. ಇದನ್ನರಿತು ಮಹಾವಿಷ್ಣು ಆ ಮಾಯೆಯ ಮೂಲವನ್ನು ಕಡಿದು ಹಾಕುವದಕ್ಕಾಗಿ ಮತ್ಸ್ಯಾವತಾರವನ್ನು ಮಾ ನೀರಿನೊಳಹೊಕ್ಕು ಸೋಮಕನನ್ನು ಧ್ವಂಸಮಾಡಿರುವದಾಗಿ ತೋರ ತ್ತದೆ. ಆಮೇಲೆ ಬ್ರಹ್ಮನಿಗೂ ಬ್ರಾಹ್ಮಣರಿಗೂ ವೇದದ ಸ್ಫೂರ್ತಿಯಾ ಅವರ ಶ್ರೇಯಸ್ಸಾಧನೆಯು ಸಾಂಗವಾಗಿ ನಡೆದಿರಬೇಕು.

**ಕೂರ್ಮಾವತಾರ**— ಒಮ್ಮೆ ದೇವತೆಗಳೂ ರಾಕ್ಷಸರೂ ಸೇ ಅಮೃತವನ್ನು ಪಡೆಯುವದಕ್ಕಾಗಿ ಮಂದರಪರ್ವತವನ್ನು ಕಡೆಗೋಲಾ ಮಾಡಿ ಕ್ಷೀರಸಾಗರವನ್ನು ಕಡೆಯುವದಕ್ಕಾರಂಭಿಸಿದರು. ಆ ಪರ್ವತ ಬಹು ಭಾರವಾಗಿದ್ದದರಿಂದ ಆ ಸಮುದ್ರದಲ್ಲಿ ಮುಳುಗುವದಕ್ಕೆ ಮೊ ಲಾಯಿತು. ಅದು ಮುಳುಗಿ ಹೋಗಿದ್ದರೆ ಯಾರಿಗೂ ಅಮೃತವು ಸಿಕ ತ್ತಲೇ ಇರಲಿಲ್ಲ. ಅಮೃತವನ್ನು ದೇವತೆಗಳಿಗೆ ಕುಡಿಸಿ ಅದರಿಂದ ಅ ರಿಗೆ ಮರಣದ ಭಯವಿಲ್ಲದಂತೆ ಮಾಡಿ ಅವರ ವೈರಿಗಳಾದ ದೈತ್ಯರನ ಮೂಲೆಗೊತ್ತಬೇಕೆಂದು ವಿಷ್ಣುವಿನ ಸಂಕಲ್ಪವಿತ್ತು. ಆದ್ದರಿಂದ ಪರ್ವತವನ್ನು ಕ್ಷೀರಸಮುದ್ರದ ಮೇಲೆ ತೇಲಿಸುವದಕ್ಕಾಗಿ ವಿಷ ಕೂರ್ಮಾವತಾರವನ್ನು ಮಾಡಿ ಮಂದರಪರ್ವತವನ್ನು ಬೆನ್ನಮೇಲೆ ಹೊತ ತನ್ನ ಭಕ್ತೈಕಪಕ್ಷಪಾತಿತ್ವವನ್ನು ತೋರಿಸಿದನು. ಆಮೇಲೆ ಅಮೃತ ಮೇಲಕ್ಕೆ ಬಂತು. ಅದು ದೇವತೆಗಳಿಗೇ ದಕ್ಕಿಯೂ ದಕ್ಕಿತು. ಅದ ಬಲದಿಂದ ರಾಕ್ಷಸರ ಹಾನಿಯೂ ಆಯಿತು.

**ವರಾಹಾವತಾರ**— ಯಾವಾಗಲೂ ದೇವರ ಮೇಲೆಯೂ ದೇವತೆಗಳ ಮೇಲೆಯೂ ದೈತ್ಯರ ಕಣ್ಣು ಬಹಳ. ಭೂದೇವಿಯು ವಿಷ್ಣುವಿನ ಪತ್ನಿಯಾದ್ದರಿಂದ ಆಕೆಯನ್ನಪಹರಿಸಬೇಕೆಂದೋ ಅಥವಾ ಭೂಲೋಕವು ಕರ್ಮಭೂಮಿಯಾಗಿದ್ದು ದೇವತೆಗಳಿಗೆ ಹವಿರ್ಭಾಗವನ್ನು ಕೊಡತಕ್ಕದ್ದಾದ್ದರಿಂದ ಅದರ ಲಾಭವನ್ನು ದೇವತೆಗಳಿಗೆ ತಪ್ಪಿಸಬೇಕೆಂದೋ ಅಥವಾ ವೇದೋಕ್ತಕರ್ಮಗಳನ್ನು ಮಾಡಿಕೊಂಡು ಭೂದೇವತೆನಿಸಿಕೊಂಡಿರುವ ಬ್ರಾಹ್ಮಣರನ್ನು ಹುಟ್ಟಣಗಿಸಬೇಕೆಂದೋ ಹಿರಣ್ಯಾಕ್ಷನೆಂಬ ದೈತ್ಯನು ಭೂಮಿಯನ್ನು ಚಾಪೆಯಂತೆ ಸುತ್ತಿಕೊಂಡು ಹೋಗಿ ಸಮುದ್ರದಲ್ಲಿ ಅಡಗಿಸಿದನಂತೆ. ಭೂಮಿಯನ್ನು ಸುತ್ತಿಕೊಂಡು ಹೋದನೆಂದರೆ ಈ ಕಲ್ಲುಮಣ್ಣುಗಳನ್ನೆಲ್ಲಾ ಹೊತ್ತುಕೊಂಡು ಹೋದನೆಂಬುವುದಸಂಭವವಾಗಿ ಕಾಣಬಹುದು. ಆದರೆ ಭೂಮಿಯ ಜೀವವನ್ನಪಹರಿಸಿಕೊಂಡು ಹೋಗುವದು ಶಕ್ಯವು. ಭೂಮಿಯ ಜೀವವು ಯಾವದು? "ಗಂಧವತೀ ಪೃಥ್ವೀ" ಎನ್ನುತ್ತಾರೆ. ಗಂಧಗುಣ ಉಳ್ಳದ್ದು ಪೃಥ್ವಿಯು. ಹಿರಣ್ಯಾಕ್ಷನು ತನ್ನ ಮಾಯಾಶಕ್ತಿಯಿಂದ ಪೃಥ್ವಿಯ ಗಂಧಗುಣವನ್ನಪಹಾರಮಾಡಿಕೊಂಡು ಹೋಗಿರಬಹುದು. ಗಂಧಗುಣವು ಹೋಗುತ್ತಲೇ ಪೃಥ್ವಿಯೆಲ್ಲಾ ಊಷರಕ್ಷೇತ್ರವಾಗಿ ಬೆಳೆಯೇ ನಿಂತು ಹೋಗಿರಬಹುದು. ಇದರಿಂದ ವೇದೋಕ್ತಕರ್ಮಗಳೆಲ್ಲಾ ನಿಂತು ದೇವತೆಗಳ ಹವಿರ್ಭಾಗಕ್ಕೆ ಸೊನ್ನೆ ಬಿದ್ದಿರಬಹುದು. ವಿಷ್ಣುವು ವರಾಹಾವತಾರವನ್ನು ಮಾಡಿ ಆ ಮಾಯಾವಿಯನ್ನು ಕೊಂದು ಪೃಥ್ವಿಯನ್ನು ಪೂರ್ವಸ್ಥಿತಿಗೆ ತಂದಿರಬಹುದು. ಅಂತು ರಸಾತಲದಲ್ಲಿ ಹೊತ್ತುಕೊಂಡು ಹೋಗುತ್ತಿದ್ದ ಭೂಮಿಯನ್ನು ವರಾಹರೂಪಿನ ವಿಷ್ಣು ಕೋರೆದಾಡೆಯಿಂದೆತ್ತಿ ಮೇಲಕ್ಕೆ ತಂದನೆಂದು ಕಥೆಯಿದೆ.

**ನರಸಿಂಹಾವತಾರ**— ತಾನೇ ದೇವರೆಂದೂ ಹವಿರ್ಭಾಗ ಮೊದಲಾದ್ದೆಲ್ಲಾ ತನಗೇ ಸಲ್ಲತಕ್ಕದ್ದೆಂದೂ ಹಿರಣ್ಯಕಶಿಪುವೆಂಬ ದೈತ್ಯನು ಜಗತ್ತಿನಲ್ಲೆಲ್ಲಾ ಕಟ್ಟುಮಾಡುವದಕ್ಕೆ ಮೊದಲುಮಾಡಿದನು. ಇದರಿಂದ ಜನರಿಗೆ ದೇವಭಕ್ತಿಯು ಹಾರಿಹೋಗುವದಕ್ಕೆ ದಾರಿಯಾಯಿತು. ಹೀಗಾಗುವದು ದೇವರಿಗೆ ಹೇಗೆ ಸಮ್ಮತವಾದೀತು ? ಜನರನ್ನು ಅಡ್ಡದಾರಿಗೆ

ತಿರುಗಿಸುವದು ದೇವರಿಗೆ ಇಷ್ಟವಲ್ಲ. ಆದ್ದರಿಂದ ಆ ಹಿರಣ್ಯಕಶಿಪುವನ್ನು ಸಂಹಾರಮಾಡುವದಕ್ಕೆ ವಿಷ್ಣು ಕಂಕಣವನ್ನು ಕಟ್ಟಿಕೊಂಡನು. ಹಿರಣ್ಯಕಶಿಪುವಿನ ಮಗನು ದೇವರೊಬ್ಬನಿರುವನೆಂಬ ಪಕ್ಷವನ್ನು ಹಿಡಿದು ತಂದೆಗೆ ವಿರುದ್ಧವಾಗಿ ನಿಂತಿದ್ದನು. ಆ ದೇವರನ್ನು ತೋರಿಸದಿದ್ದರೆ ತಲೆಯನ್ನು ಛೇದಿಸುತ್ತೇನೆಂದು ಹಿರಣ್ಯಕಶಿಪು ಮಗನಾದ ಪ್ರಹ್ಲಾದನ ಮೇಲೆ ಕತ್ತಿಯನ್ನೆತ್ತಿದ್ದನು. ಈ ಪರಿಸ್ಥಿತಿಯಲ್ಲಿ ವಿಷ್ಣು ಒಂದು ಕಂಬದಿಂದ ಒಡೆದು ಮೂಡಿ ನರಸಿಂಹರೂಪನ್ನು ತೋರಿ ಹಿರಣ್ಯಕಶಿಪುವನ್ನು ಕೊಂದು ದೇವರಲ್ಲಿ ಶ್ರದ್ಧೆಯುಳ್ಳ ಪ್ರಹ್ಲಾದನನ್ನು ಸಂರಕ್ಷಣೆ ಮಾಡಿದನು.

**ವಾಮನಾವತಾರ**— ಬಲಿಚಕ್ರವರ್ತಿಯೆಂಬ ರಾಕ್ಷಸನು ತನ್ನ ಬಾಹುಬಲದಿಂದ ದೇವತೆಗಳನ್ನೆಲ್ಲಾ ಗೆದ್ದು ಅವರನ್ನೆಲ್ಲಾ ಅಡಿಯಾಳಾಗಿ ಮಾಡಿಕೊಂಡು ಅವರಿಗೆ ಇಲ್ಲದ ತೊಂದರೆಗಳನ್ನು ಕೊಡುತ್ತಿದ್ದನು. ಸಾತ್ವಿಕರಾದ ಈ ದೇವತೆಗಳಿಗೆ ಬಂದಿದ್ದ ಈ ಕಷ್ಟವನ್ನು ತಪ್ಪಿಸುವದಕ್ಕಾಗಿ ವಿಷ್ಣು ಗಿಡ್ಡನಾದ ಬ್ರಹ್ಮಚಾರಿಯಾಗಿ ಬಲಿಯ ಆಸ್ಥಾನಕ್ಕೆ ಬಂದು ತನಗೆ ಮೂರಡಿಯ ಭೂಮಿಯನ್ನು ಯಾಚಿಸಿದನು. ಏನು ಕೇಳಿದರೂ ಕೊಡುವ ಸ್ವಭಾವದ ಬಲಿಯು ಅದಕ್ಕೆ ಸಮ್ಮತಿಸಿದನು. ಆಗ ಆ ವಾಮನನು ಒಂದಡಿಯಿಂದ ಆಕಾಶವೆಲ್ಲವನ್ನೂ ಒಂದಡಿಯಿಂದ ಭೂಮಿಯೆಲ್ಲವನ್ನೂ ಆಕ್ರಮಿಸಿ ಅಳೆದು ಮೂರನೆಯ ಅಡಿಗೆ ಸ್ಥಲವೆಲ್ಲೆಂದು ಕೇಳಿದನು. ಉಪಾಯಾಂತರವಿಲ್ಲದೆ ಬಲಿಯು ಅದಕ್ಕೆ ತನ್ನ ತಲೆಯನ್ನೊಡ್ಡಿದನು. ವಾಮನನು ಬಲಿಯನ್ನು ತುಳಿದು ಮೂರುಲೋಕವನ್ನೂ ಗೆದ್ದು ದೇವತೆಗಳಿಗೆ ಕೊಟ್ಟನು. ಈ ಸಂದರ್ಭದಲ್ಲಿ ನಡೆದಿದ್ದ ಧರ್ಮಗ್ಲಾನಿಯೇನೆಂಬ ವಿಚಾರವು ಬರಬಹುದು. ಬಲಿಯು ದಾನವನಾಗಿದ್ದರೂ ಪರಮಭಗವದ್ಭಕ್ತನೇ ಆಗಿದ್ದನು. ಆದರೂ ತನ್ನ ಅಸುರಸ್ವಭಾವದಿಂದ ನಿಷ್ಕಾರಣವಾಗಿ ದೇವತೆಗಳನ್ನು ಗೆದ್ದು ಅವರಿಗೆ ಹಿಂಸೆಯನ್ನು ಕೊಡುತ್ತಿದ್ದನು. ಆದ್ದರಿಂದ ವಿಷ್ಣು ಅವನನ್ನು ತಲಕ್ಕೆ ತುಳಿಯಬೇಕಾಯಿತು. ಹೀಗೆ ರಾಜ್ಯವನ್ನು ಕಳೆದುಕೊಂಡದ್ದು ಅವನ ಆ ಪಾಪದ ಫಲ. ಇನ್ನು ಅವನು ಆಡಿದ ಮಾತಿನ ಪ್ರತ್ಯಕ್ಷರವನ್ನೂ ಉಳಿಸಿಕೊಳ್ಳುವದು ಮತ್ತು ಸತ್ಕರ್ಮನಿರತನಾಗಿರುವದು ಮೊದಲಾದ ಭಕ್ತಿಲಕ್ಷಣಗಳಿಗೂ ಫಲವು

ಇಲ್ಲದೆ ಹೋಗಲಿಲ್ಲ. ಅವನ ಭಕ್ತಿಗೆ ಮೆಚ್ಚಿ ವಿಷ್ಣು ಯಾವಾಗಲೂ ಅವನ ಮನೆಯ ಬಾಗಿಲಲ್ಲಿ ಕಾದುಕೊಂಡಿರುವನೆಂದು ಕಥೆಯಿದೆ. ಸಾಮಾನ್ಯವಾಗಿ ಉಳಿದ ಅವತಾರಗಳಲ್ಲಿ ದುಷ್ಟತ್ವದ ಫಲವಾಗಿ ಒಬ್ಬನಿಗೆ ಶಿಕ್ಷೆಯಾಗಿರುತ್ತದೆ; ಶಿಷ್ಟತ್ವದ ಫಲವಾಗಿ ಮತ್ತೊಬ್ಬನಿಗೆ ರಕ್ಷೆಯಾಗಿರುತ್ತದೆ. ವಾಮನಾವತಾರದಲ್ಲಿ ಒಂದು ವಿಶೇಷವಿದೆ. ದುಷ್ಟತ್ವದ ಫಲವಾದ ಶಿಕ್ಷೆಯೂ ಶಿಷ್ಟತ್ವದ ಫಲವಾದ ರಕ್ಷೆಯೂ ಒಬ್ಬನಲ್ಲಿಯೇ ಕಂಡುಬಂದಿದೆ.

**ಪರಶುರಾಮಾವತಾರ**— ಒಂದಾನೊಂದು ಕಾಲದಲ್ಲಿ ಕ್ಷತ್ರಿಯರು ಸಾತ್ತ್ವಿಕರಾದ ಬ್ರಾಹ್ಮಣರನ್ನು ಅಲಕ್ಷ್ಯದಿಂದ ಕಾಣುತ್ತ ಕಂಡ ಕಂಡ ಕಡೆಯಲ್ಲೆಲ್ಲಾ ತಮ್ಮ ತೋಳ ತೀಟೆಯನ್ನು ತೀರಿಸಿಕೊಳ್ಳುತ್ತ ಲೋಕಕಂಟಕರಾಗಿದ್ದರು. ಇದಕ್ಕೊಂದೇ ಒಂದು ಉದಾಹರಣೆಯನ್ನು ಹೇಳಿದರೆ ಸಾಕಾಗುತ್ತದೆ. ಕಾರ್ತವೀರ್ಯಾರ್ಜುನನೆಂಬ ಕ್ಷತ್ರಿಯನು ಬೇಟೆಯಾಡುತ್ತ ಆಡುತ್ತ ಜಮದಗ್ನಿಋಷಿಗಳ ಆಶ್ರಮಕ್ಕೆ ಬಂದನು. ಜಮದಗ್ನಿಋಷಿಗಳು ತಮ್ಮಲ್ಲಿದ್ದ ಕಾಮಧೇನುವಿನ ಸಹಾಯದಿಂದ ಕಾರ್ತವೀರ್ಯಾರ್ಜುನನಿಗೆ ರಾಜಯೋಗ್ಯವಾದ ಸತ್ಕಾರವನ್ನು ಮಾಡಿದರು. ಇದರಿಂದ ಸೊಕ್ಕಿದ ಕಾರ್ತವೀರ್ಯಾರ್ಜುನನು ಜಮದಗ್ನಿಋಷಿಗಳ ಮಹತ್ತ್ವವನ್ನು ಲೆಕ್ಕಕ್ಕೆ ತಂದುಕೊಳ್ಳದೆ ಆ ಧೇನುವನ್ನು ಬಲಾತ್ಕಾರದಿಂದ ತನ್ನ ಪಟ್ಟಣಕ್ಕೆ ಹಿಡಿದೊಯ್ದನು. ಆ ಸಮಯದಲ್ಲಿ ಜಮದಗ್ನಿಋಷಿಗಳ ಮಗನಾದ ಪರಶುರಾಮನು ಆಶ್ರಮದಲ್ಲಿರಲಿಲ್ಲ. ಅವನು ಅಲ್ಲಿಗೆ ಬಂದು ಈ ಸುದ್ದಿಯನ್ನು ಕೇಳುತ್ತಲೇ ಸಿಟ್ಟಾಗಿ ತನ್ನ ಪರಾಕ್ರಮದಿಂದ ಕಾರ್ತವೀರ್ಯಾರ್ಜುನನನ್ನು ನೆಲಕ್ಕೆ ಮಲಗಿಸಿದನು. ಈ ಹಗೆತನವನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದ ಕಾರ್ತವೀರ್ಯಾರ್ಜುನನ ಮಕ್ಕಳು ಪರಶುರಾಮನಿಲ್ಲದ ವೇಳೆಯಲ್ಲಿ ತಪಶ್ಚರ್ಯೆಯಲ್ಲಿದ್ದ ಜಮದಗ್ನಿಋಷಿಗಳನ್ನು ಆಹುತಿಯಾಗಿ ತೆಗೆದುಕೊಂಡರು. ಇಷ್ಟು ಹೊತ್ತಿಗೆ ಇನ್ನೂ ಎಷ್ಟೋ ಕ್ಷತ್ರಿಯರು ಹೀಗೆಯೇ ಎಲ್ಲೆಲ್ಲಿಯೂ ಮದೋನ್ಮತ್ತರಾಗಿ ಸಾಧುಗಳಿಗೆ ಪೀಡೆಯನ್ನು ಮಾಡುತ್ತಿರುವರೆಂದು ಸುದ್ದಿಯು ಹಬ್ಬಿತ್ತು. ತನ್ನ ತಂದೆಗೊದಗಿದ ದುಃಸ್ಥಿತಿಯನ್ನು ಕಂಡ ಪರಶುರಾಮನು ಮದಾಂಧರಿಗೆ ತಕ್ಕ ಪ್ರತೀ

ಕಾರವನ್ನು ಮಾಡಬೇಕೆಂದು ದುಷ್ಟಕ್ಷತ್ರಿಯರನ್ನೆಲ್ಲಾ ಹುಡುಕಿ ಹುಡುಕಿ ಹೆಸರಿಲ್ಲದಂತೆ ಮಾಡುತ್ತೇನೆಂದು ಪ್ರತಿಜ್ಞೆಯನ್ನು ತೊಟ್ಟು ಇಪ್ಪತ್ತೊಂದು ಸಲ ಭೂಪ್ರದಕ್ಷಿಣೆಯನ್ನು ಮಾಡಿ ದುರುಳರಾದ ಕ್ಷತ್ರಿಯರನ್ನೆಲ್ಲಾ ನಿಗ್ರಹ ಮಾಡಿದನು.

**ರಾಮಾವತಾರ**— ಲಂಕೆಯ ರಾಜನಾದ ರಾವಣನೆಂಬ ರಾಕ್ಷಸನು ದೇವತೆಗಳನ್ನೆಲ್ಲಾ ಗೆದ್ದು ಅನೇಕ ಜನ ದುರುಳರಿಗೆ ಬೆಂಬಲನಾಗಿ ಸಾಧುಸಂತರಿಗೆ ಅಪಕಾರಕನಾಗಿದ್ದುದರಿಂದ ದೇವತೆಗಳ ಮೊರೆಯನ್ನು ಕೇಳಿದ ವಿಷ್ಣು ರಾಮಾವತಾರವನ್ನು ಮಾಡಿ ದುಷ್ಟರನ್ನೆಲ್ಲಾ ದಂಡಿಸಿ ಶಿಷ್ಟರನ್ನೆಲ್ಲಾ ಉದ್ಧಾರಮಾಡಿದನು.

**ಕೃಷ್ಣಾವತಾರ**— ಕಂಸ, ಜರಾಸಂಧ- ಮೊದಲಾದ ಅನೇಕ ರಾಕ್ಷಸರು ಸಾತ್ತ್ವಿಕಜನರಿಗೆ ಬಾಧೆಯನ್ನು ಕೊಡುತ್ತಿದ್ದುದರಿಂದ ವಿಷ್ಣು ಕೃಷ್ಣಾವತಾರವನ್ನು ಮಾಡಿ ಅವರ ಪೀಡೆಯನ್ನು ಕಳೆದು ಭೂಭಾರವನ್ನಿಳುಹಿ ಆತ್ಮತತ್ತ್ವವನ್ನುಪದೇಶ ಮಾಡಿ ಅನೇಕರನ್ನುದ್ಧಾರ ಮಾಡಿದ್ದಾನೆ.

**ಬೌದ್ಧಾವತಾರ**— ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ— ಎಂಬ ಮೂವರು ರಾಕ್ಷಸರು ಪತಿಯನ್ನು ಪರದೈವವೆಂದು ಭಾವಿಸುವ ತಮ್ಮ ಸತಿಯರ ಪಾತಿವ್ರತ್ಯಪ್ರಭಾವದಿಂದಲೂ ತಮ್ಮ ವೈದಿಕಧರ್ಮಾನುಷ್ಠಾನದಿಂದಲೂ ಅಜೇಯರಾಗಿ ಆಕಾಶಮಾರ್ಗದಲ್ಲಿ ಸಂಚರಿಸುವ ಮೂರುಪಟ್ಟಣಗಳನ್ನು ಮಾಡಿಕೊಂಡು ನಿರರ್ಗಳರಾಗಿ ಸಂಚರಿಸುತ್ತ ದೇವತೆಗಳಿಗೆ ಸಂತಾಪವನ್ನುಂಟುಮಾಡುತ್ತಿದ್ದರು. ನಮ್ಮ ಶಾಸ್ತ್ರಕಾರರ ಅಭಿಪ್ರಾಯದ ಪ್ರಕಾರ ಹೆಂಡತಿಯರ ಪಾಪಪುಣ್ಯಗಳು ಗಂಡಂದಿರಿಗೆ ಹತ್ತುತ್ತವೆ. ಏಕೆಂದರೆ ಸ್ವಭಾವವಾಗಿ ಪುರುಷರು ಬಲಿಷ್ಠರು; ಸ್ತ್ರೀಯರು ದುರ್ಬಲರು. ಅವರಿಗೆ ಅಬಲೆಯರೆಂದೇ ಹೆಸರಿರುವದು. ಆದ್ದರಿಂದ ದಂಪತಿಗಳಲ್ಲಿ ಸ್ತ್ರೀಯು ಪುರುಷನ ಅಧೀನಳಾಗಿರಬೇಕೆಂದು ಪದ್ಧತಿಯಾಗಿದೆ. ಲಗ್ನಪತ್ರಿಕೆಗಳಲ್ಲಿ ಕೂಡ ಇಂಥ ಪುರುಷನಿಗೆ ಇಂಥ ಸ್ತ್ರೀಯನ್ನು ಕೊಟ್ಟು ಲಗ್ನವಾಗುವದೆಂಬ ಭಾವನೆಯೇ ಇರುತ್ತದೆ. ಈ ರೀತಿಯಲ್ಲಿ ಸ್ತ್ರೀಯು ಪುರುಷನ ಅಧೀನಳಾದ್ದರಿಂದ ಸ್ತ್ರೀಯ ಪುಣ್ಯಾಪುಣ್ಯಗಳು ಪುರುಷನಿಗೆ ಹತ್ತುತ್ತವೆ ಪುರುಷನ ಅರ್ಧಾಂಗಿಯೆಂದು ಹೇಳಿಸಿಕೊ

ಳ್ಳುವ ಸ್ತ್ರೀಯು ಪಾಪಪುಣ್ಯಗಳು ಪುರುಷನದಾಗುವದು ಯೋಗ್ಯವೇ ಆಗಿರುವದು. ಸ್ತ್ರೀಯು ಪುರುಷನ ಅರ್ಧಾಂಗಿಯೆಂಬ ಕಲ್ಪನೆಯು ಬರೀ ನಮ್ಮಲ್ಲಿ ಮಾತ್ರವೇ ಅಲ್ಲ; ಪಾಶ್ಚಾತ್ಯರಲ್ಲಿಯೂ ಉಂಟು. ಅವರು ಹೆಂಡತಿಯರನ್ನು better half ಎನ್ನುತ್ತಾರೆ. ಸ್ತ್ರೀಯು ಪುರುಷನ ಉತ್ತಮವಾದ ಅರ್ಧಭಾಗವೆಂದು ಅದರ ಅರ್ಥವಾಗುತ್ತದೆ. ನಮ್ಮದು ಹಾಗಲ್ಲ. ಸ್ತ್ರೀಯು ಪುರುಷನ ವಾಮಾಂಗಿ; ಎಂದರೆ ಎಡಭಾಗದ ಅರ್ಧ ದೇಹ. ಆದ್ದರಿಂದ ಸ್ತ್ರೀಯು ಕರ್ಮದ ಮೇಲೆ ಪುರುಷನ ಅಧಿಕಾರ. ಸ್ತ್ರೀಯ ಅಧಿಕಾರವು ಪುರುಷನ ಮೇಲೆ ಇಲ್ಲವಾದ್ದರಿಂದ ಪುರುಷರ ಕರ್ಮಗಳು ಸ್ತ್ರೀಯರಿಗೆ ಅಂಟುವದಿಲ್ಲ. ಈ ನಿಯಮವು ವಾಲ್ಮೀಕರ ಚರಿತ್ರೆಯಲ್ಲಿ ಕಂಡುಬಂದಿದೆ. ವಾಲ್ಮೀಕರು ವ್ಯಾಧವೃತ್ತಿಯಲ್ಲಿದ್ದು ನಾರದರನ್ನು ಹೊಡೆಯುವದಕ್ಕೆ ಹೋದಾಗ ಆ ಪಾಪದ ಫಲವನ್ನು ಹೆಂಡತಿಮಕ್ಕಳು ತೆಗೆದುಕೊಳ್ಳುವರೋ ಹೇಗೆಂಬುದನ್ನು ತಿಳಿದು ಬಾರೆಂದು ನಾರದರು ವಾಲ್ಮೀಕರನ್ನು ಮನೆಗೆ ಕಳುಹಿಸಿದರು. ಅವರು ಬಂದು ಕೇಳಿದಾಗ ತಂದದ್ದನ್ನು ತಿನ್ನುವದಕ್ಕೆ ತಾವು ಭಾಗಿಗಳೇ ಹೊರತು ಮಾಡಿದ್ದನ್ನು ಅನುಭವಿಸುವದಕ್ಕೆ ಮಾಡಿದವನೇ ಹೊಣೆಗಾರನೆಂದು ಆ ಹೆಂಡತಿ ಮಕ್ಕಳು ವಾಲ್ಮೀಕರಿಗೆ ಹೇಳಿದ್ದಾರೆ. ಇರಲಿ. ತ್ರಿಪುರಾಸುರರು ತಮ್ಮ ಸ್ತ್ರೀಯರ ಪಾತಿವ್ರತ್ಯಪ್ರಭಾವದಿಂದ ಮತ್ತರಾಗಿದ್ದರು. ಲೋಕಹಿತಕ್ಕಾಗಿ ಆ ರಾಕ್ಷಸರನ್ನು ಮೂಲೆಗೆ ಕೂಡಿಸಬೇಕಾಗಿತ್ತು. ಈ ಕಾರ್ಯವು ಸಾಧ್ಯವಾಗಬೇಕಾದರೆ ಆ ಸ್ತ್ರೀಯರ ಪತಿಭಕ್ತಿ ಸಡಿಲವಾಗಬೇಕಾಗಿತ್ತು. ಮತ್ತು ಅವರಿಗೆ ವೈದಿಕಧರ್ಮದ ಶ್ರದ್ಧೆ ಹೋಗಬೇಕಾಗಿತ್ತು. ಆದ್ದರಿಂದ ವಿಷ್ಣು ಬೌದ್ಧಸಂನ್ಯಾಸಿಯ ವೇಷವನ್ನು ಧಾರಣಮಾಡಿ ಬಂದು ಭಗವದ್ವಿಷಯಕವಾದ ಶ್ರದ್ಧೆಯನ್ನು ಕದಲಿಸಿ ಸರ್ವವೂ ಕ್ಷಣಿಕವಿಜ್ಞಾನವೆಂದು ಬೌದ್ಧಧರ್ಮವನ್ನುಪದೇಶಿಸಿದನು. ಇದನ್ನು ಚಿತ್ತಗೊಟ್ಟು ಕೇಳಿದ ಆ ಸ್ತ್ರೀಯರಿಗೆ ಪತಿಯಲ್ಲಿ ಪರದೈವಬುದ್ಧಿಯು ಕಳೆದು ಹೋಯಿತು. ಇದರಿಂದ ಆ ರಾಕ್ಷಸರಿಗೆ ತಮ್ಮ ಸತಿಯರ ಪಾತಿವ್ರತ್ಯ ಪ್ರಭಾವದ ಬೆಂಬಲವೂ ದೂರವಾಯಿತು; ತಮಗಿದ್ದ ವೇದಶ್ರದ್ಧೆಯೂ ಹೋಯಿತು. ವಿಷ್ಣು ಈ ಪರಿಸ್ಥಿತಿಯನ್ನು ತಂದುಕೊಟ್ಟ ಮೇಲೆ ಈಶ್ವ

ರನು ಆ ತ್ರಿಪುರವನ್ನು ಧ್ವಂಸ ಮಾಡಿದನು. ಈ ರೀತಿಯಲ್ಲಿ ತ್ರಿಪುರ ಸ್ತ್ರೀಯರ ಬುದ್ಧಿಭೇದವನ್ನು ಮಾಡುವದಕ್ಕಾಗಿ ಮೊದಲು ಬೌದ್ಧಾವತಾರವಾಯಿತೆಂದು ಪುರಾಣವು ಹೇಳುತ್ತದೆ.

**ಕಲ್ಕಿಯು ಅವತಾರ—** ಕಲಿದೋಷಗಳಿಂದ ವೇದವಿರುದ್ಧವಾದ ಮತಗಳು ಹೆಚ್ಚಿ ವೈದಿಕಧರ್ಮದ ಗ್ಲಾನಿಯು ಪರಮಾವಧಿಯನ್ನು ಮುಟ್ಟಿದಾಗ ವಿಷ್ಣು ಕಲ್ಕಿಯಾಗಿ ಅವತರಿಸಿ ದುರ್ಮತಗಳನ್ನೆಲ್ಲಾ ಖಂಡಿಸಿ ಸ್ವಧರ್ಮವನ್ನು ಸ್ಥಾಪಿಸುವನೆಂದು ಭವಿಷ್ಯವನ್ನು ಹೇಳುತ್ತಾರೆ.

ಮುಖ್ಯತಾತ್ಪರ್ಯವೇನೆಂದರೆ ಧರ್ಮವೇ ಜಗತ್ತಿನ ಸುಸ್ಥಿತಿಗೆ ಕಾರಣವಾದ್ದರಿಂದ ಅದರ ಗ್ಲಾನಿಯನ್ನು ಅವನು ಸಹಿಸಲಾರನು. ಅದು ಅವನಿಗೆ ಬಹು ಪ್ರಿಯವಾದ ವಸ್ತು. ಆದ್ದರಿಂದ ತನ್ನ ಜನ್ಮವನ್ನು ಸಾರ್ಥಕಮಾಡಿಕೊಳ್ಳಬೇಕೆನ್ನುವವನು ಧರ್ಮವನ್ನು ರಕ್ಷಿಸಿಕೊಂಡು ದೇವರ ಅನುಗ್ರಹಕ್ಕೆ ಪಾತ್ರನಾಗಬೇಕು.

---

## ಐದನೇ ಕಿರಣ.

# ವಿದ್ಯಾರ್ಥಿವೃತ್ತಿ.

—O—

### ದೇವರ ಜ್ಞಾನದ ಮಹತ್ತ್ವ.

ದೇವರು ಧರ್ಮವನ್ನು ರಕ್ಷಿಸುವದಕ್ಕಾಗಿ ಮೀನು, ಆಮೆ, ಹಂದಿ-ಮೊದಲಾದ ಪಶುಪ್ರಾಣಿಗಳ ಜನ್ಮವನ್ನಾದರೂ ತಾನಾಗಿ ತೆಗೆದುಕೊಳ್ಳುವನೆಂದು ತಿಳಿದ ಮೇಲೆ ದೇವರಿಗೆ ಅಷ್ಟು ಪ್ರಿಯವಾದ ಧರ್ಮವನ್ನು ನಾವು ಅಗತ್ಯವಾಗಿ ಚೆನ್ನಾಗಿ ಆಚರಿಸಬೇಕು. ಧರ್ಮವನ್ನು ನಾವು ಪೂರ್ಣವಾಗಿ ನಡೆಸಿದರೆ ಅದರಿಂದ ತೃಪ್ತನಾದ ದೇವರು ನಮ್ಮನ್ನು ಹುಡುಕಿಕೊಂಡು ನಮ್ಮೆದುರಿಗೆ ಬಂದು ನಮಗೆ ತನ್ನ ನಿಜಸ್ವರೂಪವನ್ನು ತೋರಿಸಿ ನಮ್ಮನ್ನು ಆನಂದಸಾಗರದಲ್ಲಿ ತೇಲಾಡಿಸುವನು. ಧರ್ಮವನ್ನು ನಾವು ಕಡೆಗಂಡರೆ ಆಗಲೂ ಅವನು ನಮ್ಮನ್ನು ಹುಡುಕಿಕೊಂಡು ನಮ್ಮೆದುರಿಗೆ ಬರುವನು. ಯಾವ ರೀತಿಯಲ್ಲಿ? ಮೀನು, ಆಮೆ, ಹಂದಿ-ಮೊದಲಾದ ವೇಷಾಂತರದಲ್ಲಿ. ಹೀಗೆ ಬರುವ ಉದ್ದೇಶವೇನು? ಧರ್ಮಘಾತಕರಾದ ನಮ್ಮನ್ನು ಘಾತಿಸುವದಕ್ಕೆ. ಈ ರೀತಿಯಲ್ಲಿ ನಾವು ಅವನನ್ನು ಧರ್ಮದ ಬಲದಿಂದಲೂ ಬರಮಾಡಿಕೊಳ್ಳಬಹುದು; ಅಧರ್ಮದ ಬಲದಿಂದಲೂ ಬರಮಾಡಿಕೊಳ್ಳಬಹುದು. ಧರ್ಮದಿಂದ ಬರಮಾಡಿಕೊಂಡವರು ಅನುಗ್ರಹಕ್ಕೆ ಪಾತ್ರರಾಗುವರು; ಅಧರ್ಮದಿಂದ ಬರಮಾಡಿಕೊಂಡವರು ನಿಗ್ರಹಕ್ಕೆ ಪಾತ್ರರಾಗುವರು. ಇವೆರಡರಲ್ಲಿ ಯಾವದು ಉತ್ತಮ? ಪರಮಪೂಜ್ಯನಾದ ತಂದೆಯನ್ನು ವಿವೇಕಿಯಾದ ಯಾವನು ತಾನೇ ಸಿಟ್ಟಿಗೆಬ್ಬಿಸಲಿಚ್ಛಿಸುವನು? ನಾವು ಕುಲೀನರೆನ್ನಿಸಿಕೊಳ್ಳಬೇಕಾದರೆ ತಂದೆಯಲ್ಲಿ ರೋಷಾವೇಶದ ಭರವನ್ನು ಹುಟ್ಟಿಸದೆ ಪ್ರೇಮಾವೇಶದ ಭರವನ್ನು ಹುಟ್ಟಿಸಿ ಬರಮಾಡಿಕೊಳ್ಳಬೇಕು. ತಂದೆಗೆ ನಮ್ಮನ್ನು ಹೊಡೆಯುವದಕ್ಕೆಂದು ಕೈ ಎತ್ತಿಕೊಂಡು ಬರುವ ಸಂಭವವನ್ನು ತಂದುಕೊಡದೆ

ಆಲಿಂಗಿಸುವದಕ್ಕೆಂದು ಕೈಗಳನ್ನಗಲಿಸಿಕೊಂಡು ಬರುವ ಪರಿಸ್ಥಿತಿಯನ್ನೊದಗಿಸುವದೇ ಸತ್ಪುತ್ರನ ಲಕ್ಷಣ. ಅದ್ದರಿಂದ ನಾವು ಧರ್ಮಸ್ವರೂಪಗಳನ್ನು ಚೆನ್ನಾಗಿ ವಿಚಾರಮಾಡಿ ಅವುಗಳ ಅನುಷ್ಠಾನದಿಂದ ದೇವರನ್ನು ಮೆಚ್ಚಿಸಬೇಕು.

ಧರ್ಮಗಳೆಂಬುವೆಲ್ಲಾ ನಮ್ಮನ್ನು ದೇವರ ಬಳಿಗೆ ಸೇರಿಸುವಂಥ ಹಾದಿಗಳು. ಆ ಹಾದಿಗಳ ವಿಚಾರವನ್ನು ಮಾಡುವದಕ್ಕೆ ಮೊದಲು ದೇವರ ಜ್ಞಾನದ ಮಹತ್ತ್ವವು ಮನಸ್ಸಿನಲ್ಲಿ ಬೇರೂರಿರಬೇಕು. ಹಾಗಿದ್ದರೆ ಮಾತ್ರ ಅವನು ದೇವರನ್ನು ಬಯಸುವನು. ಲೋಕದಲ್ಲಿ ಎಷ್ಟೋ ಜನರಲ್ಲಿ ದೇವರ ಬಯಕೆಯು ಎದ್ದು ಕಾಣುವದು. ಆದರೆ ಅವರು ದೇವರ ಜ್ಞಾನದ ಮಹತ್ತ್ವವನ್ನು ಮನಗಂಡಿರುವಂತೆ ಕಾಣುವದಿಲ್ಲ. ಹೇಗೆಂದರೆ ಅವರಿಗೆ ಪ್ರಾಪಂಚಿಕವಸ್ತುಗಳ ಬಯಕೆಯೂ ಇರುವದು. ಇಷ್ಟೇ ಅಲ್ಲ. ಆ ಬಯಕೆಯನ್ನು ತೀರಿಸಿಕೊಳ್ಳುವದಕ್ಕೇ ಅವರು ಹಗಲಿರುಳೂ ಹೆಣಗುತ್ತಿರುವರು. ಇದರಿಂದ ಅವರು ಪ್ರಾಪಂಚಿಕವಸ್ತುಗಳಿಗೂ ಮಹತ್ತ್ವವನ್ನು ಕೊಟ್ಟುಕೊಂಡಿರುವದು ವ್ಯಕ್ತವಾಗುತ್ತದೆ. ಅದೂ ಎಂಥ ಮಹತ್ತ್ವ? ದೇವರಿಗಿಂತ ಹೆಚ್ಚಿನ ಮಹತ್ತ್ವ. ಅದ್ದರಿಂದಲೇ ಅವರಿಗೆ ದೇವರಿಗಿಂತ ಪ್ರಾಪಂಚಿಕವಸ್ತುಗಳ ಬಯಕೆ ಹೆಚ್ಚು. ಪ್ರಾಪಂಚಿಕವಸ್ತುಗಳಿಗೆ ಮಹತ್ತ್ವವನ್ನೇ ಕೊಡಬಾರದೆಂದು ನಮ್ಮ ಅಭಿಪ್ರಾಯವಲ್ಲ. ವ್ಯವಹಾರಕ್ಕೆ ಅವು ಬೇಕೇಬೇಕು. ಅವುಗಳಿಂದ ನಮ್ಮ ಜೀವನಯಾತ್ರೆ ನಡೆದರಲ್ಲವೆ ನಾವು ಧರ್ಮವನ್ನಾಚರಿಸಿ ದೇವರ ಅನುಗ್ರಹವನ್ನು ಪಡೆಯುವದು. ಅದ್ದರಿಂದ ಅವುಗಳಿಗೆ ಅವುಗಳ ಉಪಯೋಗಕ್ಕೆ ತಕ್ಕಷ್ಟೇ ಮಹತ್ತ್ವವನ್ನು ಕೊಡಬೇಕು. ಸಾಮಾನ್ಯ ಜನರ ತಿಳಿವಳಿಕೆಯು ಹಾಗಿರುವದಿಲ್ಲ. ಅವರಿಗೆ ಪ್ರಾಪಂಚಿಕವಿಷಯಗಳೇ ಹೆಚ್ಚು ಮಹತ್ತ್ವದವೆನಿಸುತ್ತವೆ. ಅವುಗಳ ಜೊತೆಗೆ ದೇವರೂ ಬೇಕೆನಿಸುತ್ತದೆ. ಇದು ದೇವರ ಜ್ಞಾನದ ಮಹತ್ತ್ವವನ್ನು ತಿಳಿದ ಗುರ್ತಲ್ಲ. ಇಂಥವರನ್ನು ನೋಡಿ ಶ್ರೀ ಸರ್ಪಭೂಷಣಶಿವಯೋಗಿಗಳು ಸಂಬೋಧಿಸಿರುವದೇನೆಂದರೆ—

ರಾಗ— ದೇಸಾಕ್ಷಿ.

ಬರಿಯ ಭ್ರಮೆಯೊಳು ಬಿದ್ದು ಕೆಡಬೇಡವೆಲೆ ಮರುಳೆ ।
ಪರವಸ್ತುವನು ಮರೆದು ಲೌಕಿಕವ ನಂಬಿ ॥ ಪ ॥
ಶರೀರ ಸತಿಪುತ್ರರೆನ್ನವರೆಂದು ನೆಚ್ಚಿರುವೆ ।
ಮರಣಗಾಲದಿ ನಿನ್ನ ಹಿಂದೆ ಬಹರೇ ? ॥
ಇರುವ ದ್ರವ್ಯವನೆಲ್ಲ ಕೊಟ್ಟು ಕಳುಹುವರೆ ಯಮ ।
ಪುರದ ಬಾಧೆಯ ಬಂದು ಬಿಡಿಸಿಕೊಂಬುವರೆ ? ॥೧॥
ನೀನುದಿಪುದಕೆ ಮೊದಲು ನೀನದಾರಿವರಾರು ? ।
ನೀನಿರುವ ಪರಿಯಂತವಗಲದಿಹರೇ ? ॥
ನೀನು ಪುನರಪಿ ಜನಿಸಲಿವರು ನಿನಗಾಗುವರೆ ? ।
ಶ್ವಾನನ ಕನಸಿನಂತೆ ಸಂಸಾರಸುಖವು ॥೨॥
ಕಾರ ಮಿಂಚಿನ ತೆರದಿ ತೋರಿ ನಿಮಿಷದಿ ತನುವು ।
ನೀರ ಗುಳ್ಳೆಯ ತೆರದಿ ಮಾಯೆಯಾಗುವದು ॥
ಪಾರಮಾರ್ಥಿಕ ಮರೆದು ಶರೀರಸುಖಕೆಳಸುವದು ।
ನೀರಿನೊಳು ಕೈಯಿಕ್ಕಿ ನೆಕ್ಕಿದಂತಹುದು ॥೩॥
ನೆರೆದ ಸಂತೆಯ ಪರಿಯು ಸಿರಿ; ಪುಣ್ಯ ತೀರಿದರೆ ।
ಹರಿದು ಹೋಹುದು; ಸುತ್ತ ಬಯಲು ಬಯಲೇ ॥
ಸ್ಥಿರಮೋಕ್ಷವನು ಪಡೆಯದಿಹ ಭೋಗಕಾಸಿಪುದು ।
ನರೆ ತುಪ್ಪದಾಸೆಗೆಂಜಲ ತಿಂದ ಪರಿಯು ॥೪॥
ಬಿಂದುಸುಖಕಾಗಿನಿತು ದುಃಖವನಿಗೊನೆಯ ಮಧು ।
ಬಿಡದು ಸಂಸ್ಕೃತಿಯೆಂದು ಗುರುಸಿದ್ಧನ ॥
ಹೊಂದಿ ಲೌಕಿಕವನುಳಿದಧ್ಯಾತ್ಮದನುವನರಿ ।
ದೊಂದೆರಡುವೆರಸದಾನಂದದೊಳಗಿರದೆ ॥೫॥

ದೇವರ ಜ್ಞಾನದ ನಿಜವಾದ ಮಹತ್ತ್ವವನ್ನರಿತವನ ಬಯಕೆಗೆ ಶ್ರೀರಾಮಕೃಷ್ಣಪರಮಹಂಸರ ಒಂದು ಸೂಕ್ತಿಯನ್ನು ಹೇಳಬಹುದು. ಒಬ್ಬ ಶಿಷ್ಯನು ಅವರ ಬಳಿಗೆ ಬಂದು ತನಗೆ ದೇವರನ್ನು ತೋರಿಸಬೇಕೆಂದು ಕೇಳಿದನಂತೆ. ಆಗ ಅವರು ಅವನನ್ನು ನದಿಗೆ ಕರೆದುಕೊಂಡು ಹೋಗಿ

ನೀರಿನಲ್ಲಿ ಮುಳುಗಿಸಿ ಮೇಲಕ್ಕೇಳದಂತೆ ಗಟ್ಟಿಯಾಗಿ ಹಿಡಿದರಂತೆ. ಆ ಶಿಷ್ಯನು ಉಸಿರು ಕಟ್ಟಿರಲಾರದೆ ಬಲವಾಗಿ ತಳಮಳಿಸಿದನಂತೆ. ಆಮೇಲೆ ಪರಮಹಂಸರು ಕೈಬಿಟ್ಟು ಅವನನ್ನು ಕುರಿತು ನೀರಿನಲ್ಲಿ ಮುಳುಗಿದ್ದಾಗ ನಿನಗೇನು ಬೇಕಾಗಿತ್ತೆಂದು ಕೇಳಿದರಂತೆ. ಉಸಿರಾಡುವದು ಬೇಕಾಗಿತ್ತೆಂದು ಅವನು ಹೇಳಲು ದೇವರ ಬಯಕೆಯು ಆ ಉಸಿರಿನ ಮೇಲಿನ ಬಯಕೆಯಷ್ಟು ಬಲವಾದಾಗ ದೇವರು ಸಿಕ್ಕುವನೆಂದು ಹೇಳಿದರಂತೆ. ಇರಲಿ. ಇದು ಬಯಕೆಯ ಪರಮಾವಧಿಯ ಮಾತು. ಈ ಬಯಕೆಯನ್ನು ಪಡೆಯುವದು ನಮ್ಮ ಧ್ಯೇಯವಾಗಿರಬೇಕು. ಪ್ರಾರಂಭದಲ್ಲಿ ಈ ಸ್ಥಿತಿಯು ಬರದೆ ಇದ್ದರೂ ಪ್ರಾಪಂಚಿಕವಸ್ತುಗಳಿಗಿಂತ ದೇವರ ಮಹತ್ತ್ವವು ಹೆಚ್ಚಿನದೆಂಬ ಜ್ಞಾನವು ಮಾತ್ರ ಬೇಕೇ ಬೇಕು. ಈ ಜ್ಞಾನವು ಬಂದದ್ದಕ್ಕೊಂದು ಒರೆಗಲ್ಲಿದೆ. ಅದೇನೆಂದರೆ ದೇವರೂ ಪ್ರಾಪಂಚಿಕ ವಸ್ತುಗಳೂ ಎರಡೂ ಅಭಿಮುಖವಾದಾಗ ಮನಸ್ಸು ಪ್ರಾಪಂಚಿಕವಸ್ತುಗಳ ಕಡೆಗೆ ಒಲಿಯದೆ ದೇವರ ಕಡೆಗೆ ಬಗ್ಗುವದು.

ಒಮ್ಮೆ ಯಮನು ನಚಿಕೇತನೆಂಬ ಅತಿಥಿಗೆ ಮೂರು ವರಗಳನ್ನು ಕೊಟ್ಟಿದ್ದನು. ಮೂರನೆಯ ವರವನ್ನು ಕೇಳೆಂದು ಯಮನು ಹೇಳಿದಾಗ ಮನುಷ್ಯನು ಸತ್ತ ಮೇಲೆಯೂ ಇರುವನೆಂದು ಕೆಲವರೂ ಹೋದನೆಂದು ಕೆಲವರೂ ಹೇಳುವದರಿಂದ ಇದರ ನಿಜಸ್ಥಿತಿಯೇನೆಂದು ನಚಿಕೇತನು ಮೂರನೆಯ ವರಕ್ಕೆ ವಿಷಯವನ್ನಿಟ್ಟನು. ಇದು ರೂಪಾಂತರದಿಂದ ಆತ್ಮಸ್ವರೂಪದ ವಿಚಾರವನ್ನು ಕೇಳಿದಂತಾಯಿತು. ಹಿಂದಿನ ಎರಡು ವರಗಳಿಗೆ ಹೇಗೋ ಹಾಗೆ ಈ ವರಕ್ಕೂ ಯಮನು ಒಡನೆ ತಕ್ಕ ಉತ್ತರವನ್ನು ಹೇಳಬಹುದಾಗಿತ್ತು. ಆದರೆ ಆತ್ಮವಿಚಾರವು ಅಂದರೆ ದೇವರ ವಿಚಾರವು ಅಷ್ಟು ಅಗ್ಗವಾದ್ದಲ್ಲ. ಒಳ್ಳೇ ಫಲಕಾರಿಯಾದ ಬೀಜವನ್ನು ಮರುಭೂಮಿಯಲ್ಲಿ ಬಿತ್ತುವದುಂಟೆ ? ಇದು ಯೋಗ್ಯತೆಯನ್ನು ನೋಡಿ ಹೇಳಬೇಕಾದ ಮಾತು. ದೇವರ ವಿಚಾರಕ್ಕೆ ಬೇಕಾದ ಯೋಗ್ಯತೆಯೇನು ? ಪ್ರಾಪಂಚಿಕವಿಷಯಗಳು ದೇವರ ವಿಚಾರಕ್ಕಿಂತ ತುಚ್ಛವೆಂಬ ತಿಳಿವಳಿಕೆ. ಅದು ಇವನಲ್ಲಿ ಎಷ್ಟರಮಟ್ಟಿಗೆ ಬೇರುಬಿಟ್ಟುಕೊಂಡಿರುವದೆಂಬುದನ್ನು ನೋಡಬೇಕೆಂದು ಯಮನಿಗೆ ಮನಸ್ಸಾಯಿತು. ಆಗ

ಯಮನು "ನಚಿಕೇತಾ, ಹಿಂದೆ ಈ ವಿಚಾರದ ಸಂಶಯವು ದೇವತೆಗಳಿಗೆ ಕೂಡ ಬಂದಿತ್ತು. ಇದು ಎಷ್ಟು ಹೇಳಿದರೂ ತಿಳಿಯದಿರುವಷ್ಟು ಸೂಕ್ಷ್ಮವಾದದ್ದು. ಅದ್ದರಿಂದ ಇನ್ನೇನನ್ನಾದರೂ ಕೇಳು. ಈ ವಿಷಯಕ್ಕೆ ನನ್ನನ್ನು ನಿರ್ಬಂಧಪಡಿಸಬೇಡ. ನಿನಗೆ ನೂರಾರುವರ್ಷಗಳ ಆಯುಷ್ಯ ಬೇಕೆ? ಮಕ್ಕಳು ಮೊಮ್ಮಕ್ಕಳು ಬೇಕೆ? ದನಕರುಗಳೂ ಆನೆಕುದುರೆಗಳೂ ಹಣಕಾಸುಗಳೂ ಬೇಕೆ? ವಿಸ್ತಾರವಾದ ರಾಜ್ಯ ಬೇಕೆ? ಕೊನೆಗೆ ಚಿರಜೀವಿತ್ವವು ಬೇಕಾದರೂ ಬೇಡು" ಎಂದು ಹೇಳಲು ನಚಿಕೇತನು "ದೇವಾ, ನೀನು ಕೊಡುವ ಈ ಸುಖಸೌಕರ್ಯಗಳೆಲ್ಲಾ ಇಂದಿಲ್ಲದಿದ್ದರೆ ನಾಳೆಯಾದರೂ ಹೋಗತಕ್ಕವುಗಳು. ನೀನು ಚಿರಜೀವಿತ್ವವನ್ನು ಕೊಟ್ಟರೂ ನನ್ನ ಪ್ರಶ್ನೆಯ ವಿಷಯದೊಡನೆ ಹೋಲಿಸಿದರೆ ಅದು ಅಲ್ಪವೆ. ನಿನ್ನ ಹಣಕಾಸುಗಳೂ ಆನೆಕುದುರೆಗಳೂ ನಿನಗೇ ಇರಲಿ. ಇವುಗಳನ್ನೆಲ್ಲಾ ನೀನು ಕೊಡುವದೇನು? ನಿನ್ನ ದರ್ಶನದಿಂದ ಇವೆಲ್ಲಾ ತಾವಾಗಿಯೇ ನನ್ನ ಮನೆಯ ಬಾಗಿಲಲ್ಲಿ ಉರುಳಾಡುವವು. ನೀನು ಯಮಾಧಿಪತ್ಯದಲ್ಲಿರುವವರೆಗೂ ನನಗೆ ಚಿರಜೀವಿತ್ವವೇ. ಅದನ್ನು ನೀನು ಹೊಸದಾಗಿ ಕೊಡುವದೇನು? ನನಗೆ ಆ ವಿಚಾರವೇ ಬೇಕು" ಎಂದು ಅದನ್ನು ಗಟ್ಟಿಯಾಗಿ ಹಿಡಿದನು. ಇದರಿಂದ ಸಂತುಷ್ಟನಾದ ಯಮನು ನಚಿಕೇತನನ್ನು ಉತ್ತಮಾಧಿಕಾರಿಯಾಗಿ ತಿಳಿದು ಅವನಿಗೆ ಭಗವತ್ತತ್ತ್ವವನ್ನು ಮನಗಾಣಿಸಿದನು. ಈ ರೀತಿಯಲ್ಲಿ ವಿಚಾರಪರನಾದವನು ದೇವರ ಜ್ಞಾನವನ್ನೂ ಪ್ರಾಪಂಚಿಕವಿಷಯಗಳನ್ನೂ ತನ್ನ ಮನಸ್ಸೆಂಬ ತಕ್ಕಡಿಯಲ್ಲಿ ತೂಕಕ್ಕೆ ಹಾಕಿ ದೇವರ ಜ್ಞಾನದ ಮಹತ್ತ್ವವನ್ನು ಅರಿಯಬೇಕು. ಆಮೇಲೆ ಅವನಿಗೆ ಅದರ ಮೇಲೆ ಬಲವಾದ ಬಯಕೆ ಹುಟ್ಟುವದು. ಭಗವತ್ತತ್ತ್ವದ ಜ್ಞಾನವಾಗುವ ಕಾಲಕ್ಕೆ ಪ್ರಾಪಂಚಿಕವಿಷಯಗಳು ತಮ್ಮಷ್ಟಕ್ಕೆ ತಾವೇ ನಮ್ಮ ಮುಂದೆ ಬಾಯಿನೀರು ಕರೆಯುವವು. ಚೇತನರಾದ ನಮಗೆ ಅದು ಭೂಷಣ. ಅದನ್ನು ಬಿಟ್ಟು ಚೇತನರಾದ ನಾವು ಜಡರಾದ ಅವುಗಳ ಮುಂದೆ ನಾಲಿಗೆಯನ್ನು ನೀಡುವದು ನಾಚಿಕೆಗೇಡು. ಶಿವಶರಣರ ಇಚ್ಛೆ ಹೇಗಿರುವದೆಂಬದನ್ನು ನೋಡಿರಿ—

"ವಿಷಯವೆಂಬ ಪಸರನೆನ್ನ ಮುಂದೆ ತಂದು ಪಸರಿಸದಿರಯ್ಯಾ. ಪಶುವೇನ

ಬಲ್ಲದು ಹಸುರೆಂದೆಳಸುವದಲ್ಲವೆ? ವಿಷಯರಹಿತನ ಮಾಡಿ, ಭಕ್ತಿರಸವ ದಣಿಯ ಮೇಯಿಸಿ, ಸುಬುದ್ಧಿ ಎಂಬ ಉದಕವನೆರೆದು ನೋಡಿ ಸಲಹಯ್ಯ ಕೂಡಲ ಸಂಗಮ ದೇವಾ".

ಆದಕಾರಣ ಸರ್ವವಿಧದಿಂದಲೂ ನಾವು ದೇವರ ಬಯಕೆಯನ್ನು ಬೆಳೆಸಿ ಕೊಳ್ಳಬೇಕು. ಶ್ರೀಕೃಷ್ಣನು ಅರ್ಜುನನಿಗೆ ಗೀತೆಯನ್ನು ಉಪದೇಶ ಮಾಡುವಾಗ ಜ್ಞಾನ, ಭಕ್ತಿ, ಕರ್ಮ– ಮೊದಲಾದ ಅನೇಕಸಾಧನಗಳಲ್ಲಿ ಒಂದಕ್ಕಿಂತ ಒಂದರ ಸೌಲಭ್ಯವನ್ನು ಹೇಳುತ್ತ ಬಂದು ಕೊನೆಗೆ "ಮಾಮಿ ಚ್ಛಾಪ್ತುಂ ಧನಂಜಯ" ಎಂದು ಹೇಳಿದ್ದಾನೆ. ಎಂದರೆ ನನ್ನನ್ನು ಪಡೆ ಯಬೇಕೆಂಬ ಇಚ್ಛೆಯಾದರೂ ಸಾಕೆಂದು ತಾತ್ಪರ್ಯ "ಜ್ಞಾನಭೂಮಿ ಶ್ಶುಭೇಚ್ಛಾಖ್ಯಾ" ಎಂದು ಯೋಗವಾಸಿಷ್ಠವೂ ಹೇಳುತ್ತದೆ. ಜ್ಞಾನ ವಾಗುವದಕ್ಕೆ ಮೊದಲು ಅದರ ಬಯಕೆಯುಂಟಾಗುವದೇ ಮೊದಲನೇ ಮೆಟ್ಟಲೆಂದು ಅದರ ತಾತ್ಪರ್ಯ. ದೇವರ ಜ್ಞಾನದ ಮಹತ್ತ್ವವನ್ನು ಮನ ಗಂಡದ್ದರಿಂದುಂಟಾದ ಬಯಕೆಯು ಬಲವಾದಷ್ಟು ಅದು ಪುರುಷನನ್ನು ಫಲದ ಕಡೆಗೊಯ್ಯುತ್ತದೆ.

## ಮೊದಲು ದೇವರು; ಆಮೇಲೆ ಪ್ರಪಂಚ.

ಈಸು ಬಂದ ಮೇಲೆ ನೀರಿಗಿಳಿಯಬೇಕಲ್ಲವೆ? ಅದರಂತೆ ದೇವ ರನ್ನು ಕಂಡ ಮೇಲೆ ಪ್ರಪಂಚದ ಯಾವ ವ್ಯವಹಾರದಲ್ಲಿ ಸುಗ್ಗಿದರೂ ಬಾಧಕವಿಲ್ಲ. ಈ ವಿಷಯದಲ್ಲಿ ಶ್ರೀರಾಮಕೃಷ್ಣಪರಮಹಂಸರ ಕೆಲವು ಉಪದೇಶಗಳನ್ನು ಮುಂದಿಡುತ್ತೇವೆ.

(೧) ಒಬ್ಬನಿಗೆ ಭಗವಾನ್ ಪರಮಹಂಸರು ಹೇಳಿದುದೇನೆಂದರೆ– ಒಳ್ಳೇದು, ಪ್ರಪಂಚವ್ಯವಹಾರದಲ್ಲಿ ನಿನ್ನ ಜೀವಮಾನದ ಬಹುಭಾಗ ವನ್ನೆಲ್ಲಾ ಕಳೆದು ದೇವರನ್ನು ಹುಡುಕುವದಕ್ಕೆ ನೀನು ಈಗ ಬಂದಿರುವೆ. ದೇವರನ್ನು ಕಂಡ ಮೇಲೆ ಪ್ರಪಂಚದಲ್ಲಿ ತೊಡಗಿದ್ದರೆ ನಿನಗೆ ಎಷ್ಟು ಶಾಂತಿಯೂ ಆನಂದವೂ ಆಗುತ್ತಿತ್ತು!

(೨) ಮೊದಲು ಭಗವಂತನ ಪ್ರಾಪ್ತಿಯಾಗಲಿ; ಆಮೇಲೆ ಸಂಪ ತ್ಪ್ರಾಪ್ತಿಯಾಗಲಿ. ಅದಕ್ಕೆ ವಿಪರೀತವಾಗಬಾರದು. ಪರಮಾರ್ಥವನ್ನು

ಸಾಧಿಸಿದ ಮೇಲೆ ಪ್ರಪಂಚವ್ಯವಹಾರವನ್ನು ಸಾಗಿಸಿದರೆ ಆಗ ನಿಮ್ಮ ಮನಸ್ಸಿನ ಸಮಾಧಾನವು ಎಂದೂ ಹೋಗುವದಿಲ್ಲ.

(೩) ಒಬ್ಬ ಹುಡುಗನು ಒಂದು ಕಂಬವನ್ನು ಹಿಡಿದುಕೊಂಡಿರುವಾಗ ಬೀಳುವ ಭಯವಿಲ್ಲದೆ ಅದರ ಸುತ್ತಲೂ ಗರಗರನೆ ತಲೆತಿರುಗುವಷ್ಟು ವೇಗದಿಂದ ಸುತ್ತುತ್ತಾನೆ. ಹಾಗೆ ನೀವು ದೇವರನ್ನು ಗಟ್ಟಿಯಾಗಿ ಹಿಡಿದುಕೊಂಡು ಬೇಕಾದಷ್ಟು ಪ್ರಾಪಂಚಿಕಕೃತ್ಯಗಳನ್ನೆಲ್ಲಾ ನಡೆಸಿರಿ. ನಿಮಗೆ ಯಾವ ಅಪಾಯವೂ ಆಗಲಾರದು.

(೪) ನಿಮ್ಮ ಮನಸ್ಸನ್ನು ಪ್ರಾಪಂಚಿಕವಾದ ಆಲೋಚನೆಗಳೂ ಮತ್ತು ವ್ಯಾಕೂಲತೆಗಳೂ ಕೊಂದರೆಗೊಳಿಸದೆ ಇರಲಿ. ಪ್ರತಿಯೊಂದನ್ನೂ ಆದರದರ ಕಾಲಕ್ಕೆ ಸರಿಯಾಗಿ ಮಾಡಿರಿ. ನಿಮ್ಮ ಮನಸ್ಸು ಯಾವಾಗಲೂ ದೇವರ ಕಡೆ ನೆಲೆಯಾಗಿರಲಿ.

## ದೇವರ ಜ್ಞಾನಕ್ಕೆ ಬಾಲ್ಯವೇ ತಕ್ಕಕಾಲ.

ಊರೆಲ್ಲಾ ಹೋದ ಮೇಲೆ ಊರ ಬಾಗಿಲನ್ನು ಹಾಕಿದರೆಂಬಂತೆ ಆಯುಸ್ಸೆಲ್ಲಾ ಪ್ರಾಪಂಚಿಕವ್ಯವಹಾರದಲ್ಲಿ ಮುಗಿದ ಮೇಲೆ ಅದಕ್ಕೆ ಅಡ್ಡಗಟ್ಟೆಯನ್ನು ಹಾಕಿ ದೇವರ ಕಡೆಗೆ ತಿರುಗುವದೇನು ಪ್ರಯೋಜನಕ್ಕಾದೀತು? ಬಣ್ಣವು ಹೊಸ ಬಟ್ಟೆಗೆ ಹಿಡಿಯುವಂತೆ ಹಳೇ ಬಟ್ಟೆಗೆ ಹಿಡಿಯುವದಿಲ್ಲ. ಆದರಂತೆ ದೇವರ ವಿಚಾರವು ಒಡೆದು ಮೂಡುವದಕ್ಕೂ ಬಾಲ್ಯವೇ ಹದ. ಈ ವಿಚಾರದಲ್ಲಿಯೂ ಶ್ರೀರಾಮಕೃಷ್ಣಪರಮಹಂಸರ ಸ್ಫೂರ್ತಿದಾಯಕವಾದ ಕೆಲವು ವಿಚಾರಗಳನ್ನು ಇಲ್ಲಿ ನೆನಪುಗೊಡುತ್ತೇವೆ.

(೧) ಎಳೇ ಬಿದಿರನ್ನು ಸುಲಭವಾಗಿ ಬಗ್ಗಿಸಬಹುದು; ಚೆನ್ನಾಗಿ ಬಲಿತದ್ದನ್ನು ಬಗ್ಗಿಸುವದಕ್ಕೆ ಪ್ರಯತ್ನವನ್ನು ಮಾಡಿದರೆ ಮುರಿದು ಹೋಗುತ್ತದೆ. ಬಾಲ್ಯವಯಸ್ಸಿನಲ್ಲಿ ಮನಸ್ಸನ್ನು ದೇವರ ಕಡೆಗೆ ತಿರುಗಿಸುವದು ಸುಲಭ. ವೃದ್ಧರ ಹೃದಯವನ್ನು ಎಳೆಯುವದಕ್ಕೆ ಹೋದರೆ ಅದು ನುಣುಚಿಕೊಂಡು ಹೋಗುತ್ತದೆ.

(೨) ಪಕ್ವವಾದ ಮಾವಿನ ಹಣ್ಣು ದೇವರಿಗಾಗಲಿ ಭಗವದ್ಭಕ್ತರಿಗಾಗಲಿ ಅರ್ಪಣಮಾಡುವದಕ್ಕೆ ಬರುತ್ತದೆ; ಅಥವಾ ಬೇರೆ ಯಾವ ಉಪಯೋಗಕ್ಕಾದರೂ ಆಗುತ್ತದೆ. ಆದರೆ ಒಂದು ಸಲ ಅದನ್ನು ಕಾಗೆ ಕುಕ್ಕಿ ಬಿಟ್ಟರೆ ಅದು ಯಾವ ಕೆಲಸಕ್ಕೂ ಬರುವದಿಲ್ಲ. ಅದು ದೇವರ ನೈವೇದ್ಯಕ್ಕೆ ತಕ್ಕದ್ದಲ್ಲ; ಬ್ರಾಹ್ಮಣರಿಗೆ ದಾನ ಮಾಡುವದಕ್ಕೆ ಯೋಗ್ಯವಲ್ಲ. ಯಾರೊಬ್ಬರೂ ತಿನ್ನುವದಕ್ಕೆ ಕೂಡ ಹಿತಕರವಲ್ಲ. ಹಾಗೆಯೇ ಹುಡುಗರಾಗಲಿ ಹುಡುಗಿಯರಾಗಲಿ ಪ್ರಾಪಂಚಿಕವಾದ ಇಚ್ಛೆಗಳು ಹುಟ್ಟಿ ಮನಸ್ಸನ್ನು ಕೆಡಿಸುವದಕ್ಕೆ ಮೊದಲೇ ಭಗವತ್ಕೈಂಕರ್ಯದ ಕಡೆಗೆ ಲಕ್ಷ್ಯವನ್ನು ಕೊಡಬೇಕು. ಒಂದೇ ಒಂದು ಸಲ ಪ್ರಾಪಂಚಿಕವಾದ ಇಚ್ಛೆಗಳು ಅವರ ಮನಸ್ಸಿಗೆ ತಾಕಿದರೂ ಸಾಕು. ಅಥವಾ ವಿಷಯ ಸುಖಾಭಿಮಾನ ದೇವತೆಯು ಅವರ ಕಡೆಗೆ ತನ್ನ ವಿಷಕಟಾಕ್ಷವನ್ನು ಸ್ವಲ್ಪ ಪ್ರಸರಿಸಿದರೂ ಸಾಕು; ಆ ಮೇಲೆ ಅವರನ್ನು ಸನ್ಮಾರ್ಗದಲ್ಲಿಯೇ ನಡೆಸುವದು ಬಹು ಕಷ್ಟ.

(೩) ಆಗ ತಾನೇ ಹುಟ್ಟಿದ ಕರು ಬಹಳ ಉಲ್ಲಾಸದಿಂದ ಚೆಲ್ಲಾಟವಾಡಿಕೊಂಡಿರುತ್ತದೆ. ಅದು ಹಾರುತ್ತದೆ; ಓಡಾಡುತ್ತದೆ; ಮತ್ತು ತಾಯ ಮೊಲೆಹಾಲನ್ನು ಕುಡಿಯುವಾಗ ಮಾತ್ರ ಕ್ಷಣಕಾಲ ಒಂದು ಕಡೆ ನಿಲ್ಲುತ್ತದೆ. ಆದರೆ ಅದರ ಕೊರಳಿಗೆ ಹಗ ಬಿದ್ದ ಮೇಲೆ ಅದು ಮೆಲ್ಲ ಮೆಲ್ಲಗೆ ಸೊರಗುವದಕ್ಕೆ ಮೊದಲಾಗುತ್ತದೆ. ಆ ಮೇಲೆ ಉಲ್ಲಾಸದ ಕಳೆಯೆಲ್ಲಾ ಹೋಗಿ ಅದರ ಮುಖವು ಖಿನ್ನತೆಯಿಂದ ಜೋಲುಬಿದ್ದು ಕೊನೆಗೆ ಅದರ ದೇಹವೆಲ್ಲ ಕಡ್ಡಿಯ ಗಾತ್ರವೆಂಬಷ್ಟು ಒಡವಾಗುತ್ತದೆ. ಹುಡುಗನು ತನ್ನ ಮೇಲೆ ಪ್ರಪಂಚವ್ಯವಹಾರದ ಭಾರವು ಬೀಳುವವರೆಗೂ ಹಗಲೆಲ್ಲ ಆನಂದದಿಂದಿರುತ್ತಾನೆ. ಅವನು ಪ್ರಾಯಸ್ಥನಾಗುತ್ತಲೆ ಅತಿಕ್ರಮಿಸಲಳವಲ್ಲದ ವಿವಾಹಸಂಬಂಧಕ್ಕೆ ಕಟ್ಟು ಬಿದ್ದು ಗೃಹಸ್ಥಾಶ್ರಮಿಯ ಕರ್ತವ್ಯಭಾರವನ್ನು ಒಂದು ಸಲ ನೋಡಿದ ಮೇಲೆ ಅವನ ಉಲ್ಲಾಸವೆಲ್ಲಾ ಹಾರಿಹೋಗುತ್ತದೆ. ಖಿನ್ನತೆ, ಚಿಂತೆ ಮತ್ತು ವ್ಯಾಕುಲತೆ ಇವುಗಳು ಅವನ ಮುಖವನ್ನು ವ್ಯಾಪಿಸಿ ಅವನ ಕೆನ್ನೆಗಳನ್ನು ಕುಂದಿಸಿ ಬತ್ತಿಸುತ್ತವೆ. ಆ ಮೇಲೆ ಅವನ ಹಣೆ ಕೂಡ ಸುಕ್ಕುಸುಕ್ಕಾಗುತ್ತ ಬರು

ವದು. ಯಾವನು ಪ್ರಾತಃಕಾಲದ ಗಾಳಿಯಂತೆ ನಿರ್ದೋಷಿಯಾಗಿ ಆಗ ತಾನೇ ಅರಳಿದ ಹೂವಿನಂತೆ ಉಲ್ಲಾಸಿಯಾಗಿ ಮಂಜಿನ ಹನಿಯಂತೆ ಶುದ್ಧನಾಗಿ ಜೀವಮಾನದಲ್ಲೆಲ್ಲ ಹುಡುಗತನದಲ್ಲಿಯೇ ಇರುವನೋ ಅವನೇ ಪುಣ್ಯಾತ್ಮನು.

( ೪ ) ಪ್ರ. ನಿಮಗೆ ಹುಡುಗರ ಮೇಲೆಯೇ ಏಕೆ ಹೆಚ್ಚು ಪ್ರೇಮ?

ಉ. ಏಕೆಂದರೆ ಅವರ ಮನಸ್ಸೆಲ್ಲ ಅವರವಾಗಿಯೇ ಇರುತ್ತದೆ. ಮದುವೆಯಾದವನ ಮನಸ್ಸಿನ ಅರ್ಧಭಾಗವು ಹೆಂಡತಿಗೆ ಹೋಗಿರುತ್ತದೆ. ಒಂದು ಮಗು ಹುಟ್ಟಿದರೆ ಅದು ಉಳಿದ ಅರ್ಧದಲ್ಲಿ ಅರ್ಧವನ್ನು ತೆಗೆದುಕೊಳ್ಳುತ್ತದೆ. ಕೊನೆಗೆ ಉಳಿದದ್ದು ಬಂಧುಗಳು, ಸ್ನೇಹಿತರು, ವ್ಯವಹಾರ, ಹೆಸರುವಾಸಿ, ಅನ್ನ, ಬಟ್ಟೆ—ಮೊದಲಾದವುಗಳ ಮೇಲೆ ನಾನಾಮುಖವಾಗಿ ಹರಿದು ಹೋಗಿರುತ್ತದೆ. ಆದುದರಿಂದ ಬಾಲ್ಯದ ಮನಸ್ಸು ಸುಲಭವಾಗಿ ಭಗವಂತನನ್ನು ಪಡೆಯಬಲ್ಲದು.

( ೫ ) ಗಿಣಿ ಮುದಿಯಾದ ಮೇಲೆ ಒಳಕಂಠದ ಪರೆಯು ಒರಟಾಗುವದರಿಂದ ಅದಕ್ಕೆ ಆಗ ಹಾಡನ್ನು ಕಲಿಸಲಿಕ್ಕೆ ಆಗುವದಿಲ್ಲ. ಅದು ಇನ್ನೂ ಎಳೆಯದಾಗಿದ್ದು ಕಂಠದ ಗೆರೆ ಮೂಡುವದಕ್ಕೆ ಮುಂಚೆ ಅದಕ್ಕೆ ಕಲಿಸಬೇಕು. ಹಾಗೆಯೇ ವೃದ್ಧಾಪ್ಯದಲ್ಲಿ ಮನಸ್ಸನ್ನು ದೇವರ ಮೇಲೆ ನಿಲ್ಲಿಸುವದು ಕಷ್ಟ. ಬಾಲ್ಯದಲ್ಲಿ ಆ ಕೆಲಸವನ್ನು ಸುಲಭವಾಗಿ ಮಾಡಬಹುದು.

## ‘ ಮಾತೃದೇವೋ ಭವ ’

ದೇವರ ಕಲ್ಪನೆಯು ದೊಡ್ಡದೊಡ್ಡವರಿಗೆ ಕೂಡ ಗಹನವಾಗಿರುವಾಗ ಚಿಕ್ಕವರು ಅದನ್ನು ಹೇಗೆ ಗ್ರಹಿಸುವರೆಂದು ಸಂಶಯವು ತೋರಬಹುದು. ದೇವರ ವಿಚಾರವಾದ ಬಾಲಪಾಠಗಳು ಬಾಲಕರಿಗೆ ತಕ್ಕಂತೆಯೇ ಇರುವವು. ಅದೇನೆಂದರೆ ವೇದವು ಮೊದಲು “ ಮಾತೃದೇವೋ ಭವ ” ಎಂದುಪದೇಶ ಮಾಡುತ್ತದೆ. ತಾಯನ್ನು ದೇವರಂತೆ ಭಾವಿಸಬೇಕೆಂದು ಅದರರ್ಥ. ಇದು ಬಾಲಕರಿಗೆ ಕಷ್ಟವೇನು ? ಕಷ್ಟವಿಲ್ಲವೆಂ

ಬುದ್ಧಿಷ್ಟೇ ಅಲ್ಲ; ಸ್ವಭಾವಕ್ಕನುಗುಣವಾಗಿಯೇ ಇರುವದು. "ತಾಯಿಗಿಂತ ಬಂಧುವಿಲ್ಲ; ಉಪ್ಪಿಗಿಂತ ರುಚಿ ಇಲ್ಲ" ಎಂಬ ಗಾದೆಯಂತೆ ತಾಯಿ ಮಕ್ಕಳಿಗೆ ಪರಮಪ್ರೇಮಾಸ್ಪದಳಾಗಿರುವಳು. ತಂದೆಯ ಸಲಿಗೆಯಿಲ್ಲದ ಮಕ್ಕಳುಂಟು. ತಾಯ ಸಲಿಗೆ ಇಲ್ಲದ ಮಕ್ಕಳಿಲ್ಲ. ಮಕ್ಕಳಿಗೆ ತಾಯಿಯಿಂದಾದಷ್ಟು ಉಪಕಾರವು ಬೇರೆ ಯಾರಿಂದಲೂ ಆಗಿರುವದಿಲ್ಲ. ಶಿಶು ಗರ್ಭದಲ್ಲಿ ತಾಯ ಆಹಾರದ ಸಾರದಿಂದಲೇ ಬೆಳೆಯುವದು. ಮಗು ಹುಟ್ಟಿದ ಮೇಲೆ ತಾಯ ಹಾಲಿನಿಂದಲೇ ಪುಷ್ಟಿಗೊಳ್ಳುವದು. ಇಂಥ ವಿಷಯಗಳೆಲ್ಲಾ ಪ್ರತಿಯೊಬ್ಬರಿಗೂ ಅನುಭವದಲ್ಲಿಯೇ ಇರುವದು. ಲೋಕದಲ್ಲಿ ತಾಯ ಋಣವು ಎಂದೂ ತೀರುವದಿಲ್ಲ. ಸಂನ್ಯಾಸಿಗಳು ನಮಗೆ ಯಾರ ಋಣವೂ ಇಲ್ಲವೆಂದು ಎಲ್ಲರನ್ನೂ ತೊರೆದು ಕಾವಿಯ ಶಾಟಿಯನ್ನು ಧರಿಸುವರು. ಅವರಿಗೆ ಕೂಡ ಮಾತೃಋಣವು ತೀರಿರುವದಿಲ್ಲ. ಸಂನ್ಯಾಸಿಯಾದರೂ ತಾಯಿಗೆ ನಮಸ್ಕಾರವನ್ನು ಮಾಡಬೇಕಾಗುವದು. ಶ್ರೀಶಂಕರಾಚಾರ್ಯರು ತಮ್ಮ ತಾಯಿ ಸ್ವರ್ಗಸ್ಥಳಾದಾಗ ಆಕೆಯ ಶವಸಂಸ್ಕಾರವನ್ನು ಕೂಡ ಮಾಡಿರುತ್ತಾರೆ. ತಾಯ ಪ್ರಾಧ್ಯಾನ್ಯತೆ ಇಷ್ಟಿರುವದರಿಂದ ಪ್ರತಿಯೊಂದು ಕೆಲಸವನ್ನೂ ಆಕೆಯ ಸಮ್ಮತಿಯಿಂದ ಮಾಡಬೇಕು. ತಮ್ಮ ಕಾಲನ್ನು ಪೂರ್ಣಾನದಿಯಲ್ಲಿ ಒಂದು ಮೊಸಳೆ ಹಿಡಿದೆಳೆದಾಗ ಹೇಗಾದರೂ ಬದುಕಿಕೊಳ್ಳಲೆಂದು ತಾಯಿ ಸಂನ್ಯಾಸಕ್ಕೆ ಸಮ್ಮತಿಸಿದ ಮೇಲೆಯೇ ಶ್ರೀಶಂಕರಾಚಾರ್ಯರು ಮನೆಯನ್ನು ಬಿಟ್ಟು ಹೊರಟಿರುತ್ತಾರೆ. ತಾಯ ಮಾತಿನ ವಿಷಯದಲ್ಲಿ ಪಾಂಡವರ ನಡೆವಳಿಕೆಯಂತು ಆಶ್ಚರ್ಯಕರವಾಗಿದೆ. ಅರ್ಜುನನು ಪಾಂಚಾಲರಾಯನ ಸಭೆಯಲ್ಲಿ ಮತ್ಸ್ಯಯಂತ್ರವನ್ನು ಭೇದಿಸಿ ದ್ರೌಪದಿಯನ್ನು ಗೆದ್ದ ಮೇಲೆ ಆಕೆಯನ್ನು ಕರೆದುಕೊಂಡು ಅಣ್ಣತಮ್ಮಂದಿರೈವರೂ ಮನೆಗೆ ಬಂದು ತಾಯಿಯನ್ನು ಕುರಿತು "ಅವ್ವ, ಒಂದು ಹೆಣ್ಣು ತಂದಿದ್ದೇವೆ" ಎಂದರಂತೆ. ಕುಂತಿಗೆ ಹೆಣ್ಣಿನ ನಿರೀಕ್ಷಣೆಯೇ ಇರಲಿಲ್ಲ. ಆದ್ದರಿಂದ ಹೆಣ್ಣೆಂಬ ಮಾತು ಆಕೆಯ ಕಿವಿಗೆ ಹಣ್ಣೆಂದು ಕೇಳಿಸಿತು. ಆಗ ಆಕೆಯು "ಒಳ್ಳೇದಾಯಿತು; ಅದನ್ನು ಎಲ್ಲರೂ ಹಂಚಿಕೊಳ್ಳಿರಿ" ಎಂದು ಹೇಳಿದಳಂತೆ. ವಸ್ತುಸ್ಥಿತಿಯನ್ನು ತಿಳಿಯದೆ ಆಕೆ ಹೀಗೆ ಹೇಳಿದ್ದರೂ ತಾಯ ಮಾತನ್ನು ಹುಸಿಯಾ

ಗಗೋಡಬಾರದೆಂದು ಆ ಅಣ್ಣತಮ್ಮಂದಿರೈವರೂ ದ್ರೌಪದಿಯನ್ನು ಮದುವೆಯಾದರಂತೆ.

ತಾಯಿಯ ಸೇವೆಯನ್ನು ಸರ್ವವಿಧದಿಂದಲೂ ಸಮರ್ಪಕವಾಗಿ ಮಾಡುವದು ಪ್ರತಿಯೊಬ್ಬನ ಕರ್ತವ್ಯವು. ಇದಕ್ಕೆ ಭೀಮಾರ್ಜುನರೂ ಶ್ರೀಶಂಕರಾಚಾರ್ಯರೂ ಮೇಲುಪಙ್ಕ್ತಿಯನ್ನು ಹಾಕಿಕೊಟ್ಟಿರುತ್ತಾರೆ. ಕುಂತಿಯು ಗಜಗೌರಿಯ ವ್ರತವನ್ನು ಮಾಡಲಪೇಕ್ಷಿಸಿದಾಗ ಭೀಮಾರ್ಜುನರು ತಮ್ಮ ಸ್ವಸಾಹಸದಿಂದ ದೇವಲೋಕದ ಐರಾವತವನ್ನೇ ತಂದು ನೋಂಪಿಯನ್ನು ಮಾಡಿಸಿ ತಾಯಿಯ ಇಚ್ಛೆಯನ್ನು ಪೂರ್ಣ ಮಾಡಿರುತ್ತಾರೆ. ತಾಯಿ ದೂರದ ನದಿಯಿಂದ ನೀರನ್ನು ತರಲಾರದೆ ಕಷ್ಟಪಡುತ್ತಿದ್ದದ್ದನ್ನು ನೋಡಿ ಶ್ರೀಶಂಕರಾಚಾರ್ಯರು ತಮ್ಮ ತಪಃಪ್ರಭಾವದಿಂದ ನದಿಯನ್ನೇ ತಮ್ಮ ಮನೆಯ ಹತ್ತಿರಕ್ಕೆ ತಿರುಗಿಸಿ ತಾಯಿಗೆ ಸಮಾಧಾನವನ್ನುಂಟು ಮಾಡಿರುತ್ತಾರೆ. ತಾಯಿಯನ್ನು ದೇವರಂತೆ ಭಾವಿಸಿದರೆ ಆಕೆ ನಿಜವಾದ ದೇವರ ದಾರಿಯನ್ನು ತೋರಿಸುವಳು. ದೇವರ ದಾರಿಯನ್ನು ತೋರಿಸುವದಕ್ಕೆ ತಂದೆಗಿಂತ ತಾಯಿಯೇ ಉತ್ತಮವಾದ ಸಾಧನ. ತಂದೆ ವಿಚಾರಪ್ರಧಾನನಾಗಿರುವದರಿಂದ ವಿಚಾರಪ್ರಭಾವದಿಂದಲೇ ಕಾರ್ಯವನ್ನು ಸಾಧಿಸುವಂತೆ ತನ್ನ ಮಕ್ಕಳನ್ನು ಪ್ರೇರಿಸುವನು. ತಾಯಿ ಪ್ರೇಮಪ್ರಧಾನಳಾದ್ದರಿಂದ ದೇವರ ಮೇಲೆ ಪ್ರೇಮವನ್ನು ಮಾಡುವದರ ಮೂಲಕ ಕಾರ್ಯವನ್ನು ಸಾಧಿಸುವಂತೆ ಆಕೆ ತನ್ನ ಮಕ್ಕಳ ಮನಸ್ಸನ್ನು ದೇವರ ಕಡೆಗೆ ಒಲಿಸುವಳು. ಧ್ರುವನನ್ನು ಮಲತಾಯಿಯು ಹೊಡೆದಟ್ಟಿದಾಗ ಸುನೀತಿಯು ಆ ತನ್ನ ಮಗನನ್ನು ಆದರ ಪ್ರತೀಕಾರಕ್ಕಾಗಿ ಲೌಕಿಕವಾದ ಉಪಾಯಕ್ಕೆ ಹಚ್ಚದೆ ದೇವರ ಕಡೆಗೆ ತಿರುಗಿಸಿದ್ದು ಆವನ ಅತ್ಯಂತಶ್ರೇಯಸ್ಸಿಗೆ ಸಾಧಕವಾಯಿತು. ನಿಜವಾದ ಹಾಲನ್ನು ಬೇಡಿ ಉಪಮನ್ಯು ತಾಯಿಯ ಸೆರಿಗೆಯನ್ನು ಹಿಡಿದು ಕಾಡಿದಾಗ ಆಕೆ ಆವನನ್ನು ತಪಸ್ಸಿಗೆ ಹಚ್ಚಿದ್ದು ಮುಂದೆ ಆವನು ಕ್ಷೀರಸಾಗರದ ಅಧಿಷ್ಠಾನದೇವತೆಯಾಗುವಂತಾಯಿತು. ಆದ್ದರಿಂದ ಇಂಥ ಅನುಗ್ರಹದ ನಿರೀಕ್ಷಣೆಯನ್ನಿಟ್ಟುಕೊಂಡು ಪ್ರತಿಯೊಬ್ಬನೂ ತಾಯಿಯ ಮೇಲೆ ಅನ್ಯಾದೃಶವಾದ ಭಕ್ತಿಯನ್ನಿಟ್ಟುಕೊಂಡು ನಡೆಯಬೇಕು.

## 'ಪಿತೃದೇವೋ ಭವ'

"ಮಾತೃದೇವೋ ಭವ" ಎಂದು ಹೇಳಿದ ಮೇಲೆ ಶ್ರುತಿಯು "ಪಿತೃದೇವೋ ಭವ" ಎಂದಿದೆ. ಎಂದರೆ ತಂದೆಯನ್ನು ದೇವರಂತೆ ಭಾವಿಸಬೇಕೆಂದರ್ಥ. ತಾಯಿಯು ಹೇಗೆ ಪೂಜ್ಯಳೋ ತಂದೆಯೂ ಹಾಗೆಯೇ ಪೂಜ್ಯನು. ಶರೀರದ ಪರಿಪುಷ್ಟಿಯು ತಾಯಿಯಿಂದ ನಡೆದಿರುತ್ತದೆ. ಮನಸ್ಸಿನ ಸಂಸ್ಕಾರಗಳ ಪರಿಪುಷ್ಟಿಯು ತಂದೆಯಿಂದ ನಡೆದಿರುತ್ತದೆ. ಸಂಸ್ಕಾರಗಳ ಪರಿಪುಷ್ಟಿ ಇಲ್ಲದೆ ಸುಮ್ಮನೆ ಶರೀರದೃಷ್ಟಿಯಿಂದ ಬೆಳೆಯುವ ಮಕ್ಕಳನ್ನು ಕಂಡಾಗ ಹಿರಿಯರು "ಅಜ್ಜಿ ಸಾಕಿದ ಮಗು ಯಾವ ಕಜ್ಜಕ್ಕೂ ಬಾರದು" ಎಂಬ ಗಾದೆಯನ್ನು ನೆನೆಸಿಕೊಳ್ಳುತ್ತಾರೆ. ಮನುಷ್ಯನ ಶ್ರೇಯಸ್ಸು ಸಂಸ್ಕಾರಗಳ ಪರಿಪುಷ್ಟಿಯನ್ನೇ ಅವಲಂಬಿಸಿಕೊಂಡಿರುವದು. ಆದ್ದರಿಂದ ತಂದೆಯ ಪೂಜ್ಯತೆಯೇನೂ ಕಡಿಮೆಯ ತರದ್ದಲ್ಲ. ಒಂದು ದೃಷ್ಟಿಯಿಂದ ಹೆಚ್ಚಿನದಾಗಿಯೇ ಇರುವದು. ತಾಯಿಯು ತನ್ನ ಕೂಸಿಗೆ ತನ್ನ ರಕ್ತಮಾಂಸಗಳನ್ನು ಹಂಚಿಕೊಟ್ಟಂತೆ ಎಲ್ಲರಿಗೂ ಕಾಣುತ್ತಿದ್ದರೂ ಆ ಕೂಸನ್ನು ಮತ್ತೊಬ್ಬರಿಗೆ ಸಾಕಕೊಡಬೇಕಾದರೆ ಆ ಕೂಸಿನ ಮೇಲೆ ತಂದೆಯ ಅಧಿಕಾರವೇ ಹೆಚ್ಚು. ತಂದೆಯು ವಿಚಾರಪ್ರಧಾನನಾಗಿರುವದೇ ಇದಕ್ಕೆ ಕಾರಣ. ಮನುಷ್ಯನ ಹುಟ್ಟಿಗೆ ನಿಜವಾಗಿ ತಂದೆತಾಯಿಗಳಿಬ್ಬರೂ ಕಾರಣರಾದರೂ ತಂದೆಗೊಂದು ಹೆಚ್ಚುಗಾರಿಕೆಯಿದೆ. ಸಂಸ್ಕೃತದಲ್ಲಿ ಪಿತೃಶಬ್ದವು ರೂಢಿಯಲ್ಲಿ ತಂದೆಯೆಂಬರ್ಥದಲ್ಲಿದ್ದರೂ ತಂದೆತಾಯಿಗಳಿಗಿಬ್ಬರಿಗೂ ಪಿತೃಗಳೆಂದು ಪ್ರಯೋಗ ಉಂಟು. "ಮಾತಾ ಚ ಪಿತಾ ಚ ಪಿತರೌ" ಎಂದು ಸಂಸ್ಕೃತದಲ್ಲಿ ಸಮಾಸವಾಗುತ್ತದೆ. ಇನ್ನೊಂದು ಜೀವತ್ಪಿತೃವೆಂಬ ಮಾತಿದೆ. ಜೀವತ್ಪಿತೃವೆಂದರೆ ತಂದೆತಾಯ್ಗಳುಳ್ಳವನೆಂದರ್ಥ. ತಂದೆತಾಯ್ಗಳಲ್ಲಿ ತಾಯಿ ಸತ್ತರೂ ಅವನು ಜೀವತ್ಪಿತೃವೆಂದೇ ಕರೆಸಿಕೊಳ್ಳುತ್ತಾನೆ; ತಂದೆ ಸತ್ತರೆ ತಾಯಿ ಬದುಕಿದ್ದರೂ ಅವನು ಜೀವತ್ಪಿತೃವೆನಿಸಿಕೊಳ್ಳುವದಿಲ್ಲ. ಇದರಿಂದ ತಂದೆತಾಯ್ಗಳಲ್ಲಿ ತಂದೆಗೊಂದು ಬಗೆಯ ಹೆಚ್ಚುಗಾರಿಕೆಯು ತೋರುತ್ತದೆ. ಅದ್ದರಿಂದಲೂ ತಂದೆಯನ್ನು ದೇವರಂತೆ ಭಾವಿಸುವದಗತ್ಯವಾಯಿತು.

ಶ್ರೇಯಸ್ಕಾಮಿಯಾದವನು ತಂದೆಯ ಪ್ರಸನ್ನತೆಯನ್ನು ಕಾಪಾಡಿಕೊಳ್ಳಬೇಕು. ಹಿಂದೆ ಒಬ್ಬ ರಾಜನು ಒಂದು ಯಾಗದಲ್ಲಿ ತನ್ನ ಸರ್ವಸ್ವವನ್ನೂ ದಾನಮಾಡುತ್ತಿರುವಾಗ ಅವನ ಮಗ ನಚಿಕೇತನು ಅಪ್ಪನ ಹತ್ತಿರಕ್ಕೆ ಬಂದು "ಅಪ್ಪ, ಅಪ್ಪ, ನನ್ನನ್ನು ಯಾರಿಗೆ ಕೊಡುತ್ತಿ?" ಎಂದು ಕೇಳಿದನು. ಕೆಲಸದಲ್ಲಿ ತೊಡಗಿದ್ದ ತಂದೆಯು ಮಗನ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಹುಡುಗನು ಮತ್ತೆ ಮತ್ತೆ ಹಾಡಿದ್ದನ್ನೇ ಹಾಡಿ ಕಾಡಿದನು. ಇದರಿಂದ ಬೇಸರಗೊಂಡ ತಂದೆಯು "ನಿನ್ನನ್ನು ಯಮನಿಗೆ ಕೊಡುತ್ತೇನೆ" ಎಂದು ಹೇಳಿದನು. ತಂದೆಯ ಭಾವವು ತಿಳಿಯಿತು. ಒಡನೆ ನಚಿಕೇತನು ಯಮನ ಬಳಿಗೆ ಹೋಗಿ ತನ್ನ ಸೌಜನ್ಯದಿಂದ ಮೂರು ವರಗಳನ್ನು ಪಡೆದನು. ಅದರಲ್ಲಿ ಮೊದಲನೆಯದೇನೆಂದರೆ ತನ್ನ ತಂದೆಯು ಕೋಪವನ್ನು ಬಿಟ್ಟು ಶಾಂತನಾಗುವದು. ಈ ರೀತಿಯಲ್ಲಿ ನಚಿಕೇತನು ತನ್ನ ತಂದೆಯ ಪ್ರಸನ್ನತೆಯನ್ನು ಮೊದಲು ಸಂಪಾದಿಸಿದನು. ಯಯಾತಿಯೆಂಬ ರಾಜನಿಗೆ ವಿಷಯಸುಖವನ್ನು ಹೆಚ್ಚಾಗಿ ಅನುಭವಿಸುವದಕ್ಕಾಗಿ ಪ್ರಾಯದ ಆಶೆಯುಂಟಾಯಿತು. ಆಗ ಅವನು ಅದಕ್ಕಾಗಿ ತನ್ನ ಮಕ್ಕಳ ಮುಂದೆ ಅಂಗಲಾಚಿದನು. ತಮ್ಮ ಯೌವನವನ್ನು ಕಳೆದುಕೊಳ್ಳುವದಕ್ಕೆ ಯಾರೂ ಒಪ್ಪಲಿಲ್ಲ. ಕಿರಿಯವನಾದ ಪುರು ಎಂಬುವನು ತಂದೆಯ ಮನಸ್ಸಿನಂತೆ ನಡೆದು ತನ್ನ ಯಶಸ್ಸನ್ನು ಸುವರ್ಣಾಕ್ಷರಗಳಿಂದ ಬರೆಸಿಕೊಂಡನು. ದಶರಥನು ಹಿರಿಯ ಮಗನಾದ ರಾಮನನ್ನು ವನವಾಸಕ್ಕೆ ಹೋಗೆಂದು ಹೇಳದಿದ್ದರೂ ರಾಮನು ದಶರಥನ ಪರಿಸ್ಥಿತಿಯನ್ನು ಮನಸ್ಸಿಗೆ ತಂದುಕೊಂಡವನಾಗಿ ತನ್ನ ತಂದೆಯು ಹೆಂಡತಿಯಾದ ಕೈಕಯಿಗೆ ಕೊಟ್ಟ ವಾಗ್ದಾನವನ್ನು ತೀರಿಸುವದಕ್ಕೆ ತಾನು ಬಾಧ್ಯನೆಂದು ರಾಜ್ಯಕೋಶಗಳನ್ನೆಲ್ಲಾ ತೊರೆದು ಹೆಂಡತಿಯೊಡನೆ ವನವಾಸಕ್ಕೆ ಹೋದನು. ಪರಶುರಾಮನ ಪಿತೃಭಕ್ತಿಯಂತು ವಿಲಕ್ಷಣವಾಗಿದೆ. ಪರಶುರಾಮನ ತಾಯಿಯಾದ ರೇಣುಕೆಯು ನೀರನ್ನು ತರುವದಕ್ಕೆ ಸರೋವರಕ್ಕೆ ಹೋಗಿದ್ದಳು. ಅಲ್ಲಿ ಜಲಕ್ರೀಡೆಯಾಡುತ್ತಿದ್ದ ಒಬ್ಬ ಗಂಧರ್ವನ ಶರೀರವೈಭವವನ್ನು ನಿಟ್ಟಿಸುವದರಲ್ಲಿ ಸ್ವಲ್ಪ ತಡವಾಯಿತು. ಆಕೆ ನೀರನ್ನು ತರುವದರೊಳಗೇ ತಪಸ್ವಿ

ಯಾದ ಜಮದಗ್ನಿಯು ಜ್ಞಾನದೃಷ್ಟಿಗೆ ಆದರ ಕಾರಣವು ಗೋಚರವಾಯಿತು. ಆಕೆ ಬರುತ್ತಲೇ ಆಕೆಯ ತಲೆಯನ್ನು ಹೊಡೆಯಿರೆಂದು ಜಮದಗ್ನಿಯು ಮಕ್ಕಳಿಗೆ ಹೇಳಿದನು. ಯಾರೂ ಅದಕ್ಕೆ ಸಮ್ಮತಿಸಲಿಲ್ಲ. ಪರಶುರಾಮನು ತಂದೆಯ ಆಜ್ಞೆಯ ಮುಂದೆ ತನ್ನ ವಿಚಾರವೇಕೆಂದು ತಂದೆಯ ಆಜ್ಞೆಯ ಪ್ರತ್ಯಕ್ಷರವನ್ನೂ ಪಾಲಿಸಿಯೇ ಬಿಟ್ಟನು. ಈ ಬಗೆಯ ಪಿತೃಭಕ್ತಿಯನ್ನು ನೋಡಿ ಸಂತುಷ್ಟನಾದ ಜಮದಗ್ನಿಯು ಬೇಕಾದ ವರವನ್ನು ಕೇಳೆಂದು ಪರಶುರಾಮನಿಗೆ ಹೇಳಿದನು. ತಾಯಿ ಬದುಕುವದೇ ತನ್ನ ಇಷ್ಟಾರ್ಥವೆಂದು ಪರಶುರಾಮನು ಹೇಳಲು ಜಮದಗ್ನಿಯು ತಾನೂ ಆ ಮಾತಿನ ಪ್ರತ್ಯಕ್ಷರವನ್ನೂ ನಡೆಸಿಕೊಟ್ಟನು. ಹೀಗೆ ತಾಯಿ ತಲೆಯನ್ನು ಹೊಡೆಯೆಂದು ಹೇಳುವ ತಂದೆಯ ಆಜ್ಞೆಯು ಈ ಕಾಲಕ್ಕೆ ಮಾನ್ಯವಾಗದೆ ಇರಬಹುದು. ಏಕೆಂದರೆ ಆಗಿನ ಕಾಲದವರಿಗೆ ನಿಗ್ರಹಾನುಗ್ರಹಸಾಮರ್ಥ್ಯವಿತ್ತು. ಆದರ ವಾಸನೆ ಕೂಡ ಈಗಿನವರಿಗೆ ಇಲ್ಲವೆಂದಮೇಲೆ ಅಂಥ ಆಜ್ಞೆಯು ಹೇಗೆ ಯೋಗ್ಯವಾದೀತು? ಇರಲಿ. ಸರ್ವವಿಧದಿಂದಲೂ ತಂದೆಯ ಯೋಗಕ್ಷೇಮವೆಂಬುದನ್ನು ನೋಡಿಕೊಳ್ಳಬೇಕೆಂಬುವದಕ್ಕಂತು ಎರಡಿಲ್ಲ. ಭೀಷ್ಮಾಚಾರ್ಯರ ಉದಾಹರಣೆಯನ್ನು ತೆಗೆದುಕೊಂಡರಂತು ಪಿತೃಭಕ್ತಿಯೆಂಬ ಗೋಪುರಕ್ಕೆ ಕಳಸವನ್ನಿಟ್ಟಂತಿದೆ. ಭೀಷ್ಮರ ತಂದೆಯಾದ ಶಂತನುರಾಜನು ಸತ್ಯವತಿಯೆಂಬ ರಾಜಪುತ್ರಿಯನ್ನು ಮದುವೆಯಾಗಬೇಕೆಂಬ ಕುತೂಹಲದಲ್ಲಿದ್ದನು. ಆದರೆ ಆಕೆ ತನ್ನ ಸವತಿಯ ಮಗನಾದ ಭೀಷ್ಮನನ್ನು ಚೆನ್ನಾಗಿ ನೋಡಿಕೊಳ್ಳುವಳೋ ಇಲ್ಲವೋ ಎಂಬ ಸಂಶಯದಿಂದ ಹಿಂದುಮುಂದು ನೋಡುತ್ತಿದ್ದನು. ಇದರ ವಾಸನೆಯನ್ನು ಹಿಡಿದು ಭೀಷ್ಮರು ಸತ್ಯವತಿಯ ತಂದೆಯ ಬಳಿಗೆ ಹೋಗಿ ಆ ಕನ್ಯೆಯನ್ನು ತಮ್ಮ ತಂದೆಗಾಗಿ ಯಾಚಿಸಿದರು. ಪ್ರಾಯಸ್ಥನಾದ ನೀನೇ ಮದುವೆಯಾಗೆಂದು ಸತ್ಯವತಿಯ ತಂದೆಯು ಹೇಳಿದನು. ತಂದೆಯ ಹಿತದ ದೃಷ್ಟಿಯಿಂದ ಅವರು ಅದಕ್ಕೆ ಮನಸ್ಸನ್ನು ಸೋಲಲಿಲ್ಲ. ತಂದೆಯ ಪ್ರೇಮಕ್ಕೆ ಪಾತ್ರಳಾದ ಆಕೆ ತಮ್ಮ ತಾಯಿಯೆಂದು ಹೇಳಿ ತಮ್ಮ ತಂದೆಗೇ ಆಕೆಯನ್ನು ಕೊಡಬೇಕೆಂದು ಬಹಳವಾಗಿ ಕೇಳಿಕೊಂಡರು. ತನ್ನ ಮಗಳ ಹೊಟ್ಟೆಯಲ್ಲಿ ಹುಟ್ಟಿದವನೇ ಸಿಂಹಾಸನವನ್ನೇರಬೇಕೆಂದು

ಆ ರಾಜನು ಅಪೇಕ್ಷಿಸಿದನು. ತಾನು ಹಿರಿಯನಾದರೂ ಸಿಂಹಾಸನವನ್ನು ಹತ್ತದೆ ಸತ್ಯವತಿಯ ಮಗನನ್ನೇ ಪಟ್ಟಕ್ಕೆ ತರುವೆನೆಂದು ಭೀಷ್ಮರು ತಮ್ಮ ತಂದೆಯ ಹಿತದ ದೃಷ್ಟಿಯಿಂದ ತಮ್ಮ ರಾಜ್ಯಾಧಿಕಾರವನ್ನೂ ಬಿಡಲೊಪ್ಪಿದರು. ಇಷ್ಟಾದರೂ ಭೀಷ್ಮರಿಗೆ ಮಕ್ಕಳಾದ ಮೇಲೆ ಅವರು ಸತ್ಯವತಿಯ ಮಕ್ಕಳ ಮೇಲೆ ಕೈಮಾಡಬಹುದೆಂದು ಆ ರಾಜನು ಸಂಶಯಗೊಂಡನು. ಆ ಸಂಶಯಕ್ಕೆ ಅವಕಾಶ ಉಳಿಯದಂತೆ ತಾವು ಮದುವೆಯನ್ನೇ ಮಾಡಿಕೊಳ್ಳುವದಿಲ್ಲವೆಂದು ಭೀಷ್ಮರು ಆ ರಾಜನ ಮುಂದೆ ಪ್ರತಿಜ್ಞೆಯನ್ನು ಮಾಡಿದರು. ಬ್ರಹ್ಮಚರ್ಯವ್ರತವನ್ನು ಪಾಲಿಸುವದು ಮನುಷ್ಯರಿಗೆ ಬಹಳ ಕಷ್ಟಸಾಧ್ಯ. ಅದನ್ನು ಸಾಯುವವರೆಗೂ ಪಾಲಿಸುತ್ತೇನೆಂದು ಭೀಷ್ಮರು ತಂದೆಯ ಹಿತದ ದೃಷ್ಟಿಯಿಂದ ವ್ರತವನ್ನು ಕೈಕೊಂಡದ್ದನ್ನು ನೋಡಿ ದೇವತೆಗಳು ಬೆರಗಾಗಿ ಸಂತೋಷದಿಂದ ಅವರಿಗೆ ಸ್ವೇಚ್ಛಾಮರಣಿಗಳ ಪದವಿಯನ್ನು ಕೊಟ್ಟರು. ಬ್ರಹ್ಮಚರ್ಯವ್ರತದ ಪ್ರಭಾವವು ಅಂಥದ್ದು. ಇರಲಿ. ಒಂದು ಕಠಿನವ್ರತವನ್ನು ಹಿಡಿಯುವದು ದೊಡ್ಡ ಮಾತಲ್ಲ; ಎಂಥ ಪ್ರಸಂಗಗಳೊದಗಿದರೂ ಅದಕ್ಕೆ ಕೊಂಕು ಬರಗೊಡದೆ ಅದನ್ನು ಪಾಲಿಸುವ ಮನೋದಾರ್ಢ್ಯದಿಂದ ಮನುಷ್ಯನ ಯೋಗ್ಯತೆಯು ಪ್ರಕಾಶವಾಗುವದು. ಕೆಲವು ದಿವಸಗಳ ಮೇಲೆ ಭೀಷ್ಮರ ನಡವಳಿಕೆಯಿಂದ ತೃಪ್ತಳಾದ ಸತ್ಯವತಿಯು ಮದುವೆಯಾಗೆಂದು ಅವರನ್ನು ಪ್ರೇರಿಸಿದಳು. ಭೀಷ್ಮರ ಮನಸ್ಸು ಕದಲಲಿಲ್ಲ. ಆಮೇಲೆ ಭೀಷ್ಮರು ತಮ್ಮ ಮಲತಮ್ಮನಾದ ವಿಚಿತ್ರವೀರ್ಯನಿಗಾಗಿ ಕಾಶೀರಾಜನ ಮೂವರು ಕನ್ಯೆಯರನ್ನು ಗೆದ್ದು ತಂದರು. ಅವರಲ್ಲಿಬ್ಬರು ವಿಚಿತ್ರವೀರ್ಯನನ್ನು ಮದುವೆಯಾದರು. ಮೂರನೆಯವಳು ತಾನು ಮತ್ತೊಬ್ಬ ರಾಜನನ್ನು ವರಿಸಿರುವೆನೆಂದಳು. ಹಾಗಾದರೆ ಅವನನ್ನೇ ಮದುವೆಯಾಗೆಂದು ಭೀಷ್ಮರು ಆಕೆಯನ್ನು ಅವನ ಬಳಿಗೆ ಕಳುಹಿಸಿದರು. ಆದರೆ ಭೀಷ್ಮರ ಹೆದರಿಕೆಯಿಂದಲೇ ಏನೋ ಅವನು ಆಕೆಯನ್ನು ಪರಿಗ್ರಹಿಸಲಿಲ್ಲ. ಆಗ ಆಕೆ ಹಿಂದಿರುಗಿ ಬಂದು ಭೀಷ್ಮರನ್ನು ಕುರಿತು "ನೀವು ನನ್ನನ್ನು ಗೆದ್ದು ತಂದಿರುವದರಿಂದ ನೀವೇ ಮದುವೆಯಾಗಬೇಕೆಂದಳು." ಭೀಷ್ಮರ ಮನಸ್ಸು ಆಗಲೂ ಒಲಿಯಲಿಲ್ಲ. ಆಗ ಆಕೆ ಪರಶುರಾಮರಿಗೆ ಶರಣುಹೊಕ್ಕು ಅವರಿಂದ ಭೀಷ್ಮರಿಗೆ

ಹೇಳಿಸಿದಳು. ಭೀಷ್ಮರು ಪರಶುರಾಮರ ಶಿಷ್ಯರು. ತಂದೆಯ ಹಿತಕ್ಕಾಗಿ ಮಾಡಿದ ಪ್ರತಿಜ್ಞೆಯನ್ನು ಕಾಪಾಡುವ ಭರದಲ್ಲಿ ಭೀಷ್ಮರು ಪರಶುರಾಮರ ಮಾತನ್ನೂ ಲೆಕ್ಕಿಸಲಿಲ್ಲ. ಇದರಿಂದ ಕ್ರುದ್ಧರಾದ ಪರಶುರಾಮರು ಭೀಷ್ಮರೊಡನೆ ಯುದ್ಧವನ್ನೇ ಹೂಡಿದರು. ಯುದ್ಧದಲ್ಲಿ ಭೀಷ್ಮರು ಪರಶುರಾಮರನ್ನೇ ಹಣ್ಣು ಮಾಡಿದರೇ ಹೊರತು ಹೆಣ್ಣಿಗೆ ಬಾಯಿನೀರು ಕರೆಯಲಿಲ್ಲ. ಹೀಗೆ ಎಂಥೆಂಥ ಕಠಿನಪ್ರಸಂಗಗಳು ಬಂದರೂ ತಂದೆಯ ಹಿತದ ದೃಷ್ಟಿಯಿಂದ ಮಾಡಿದ ಪ್ರತಿಜ್ಞೆಯಲ್ಲಿ ಕೂದಲೆಳೆಯಷ್ಟು ಕೊರತೆಯಾಗದಂತೆ ಸಾಧಿಸಿ ಭೀಷ್ಮರು ಭರತಖಂಡದ ಚರಿತ್ರೆಯಲ್ಲಿ ಅಜರಾಮರರಾಗಿ ಉಳಿದಿರುವರು. ಮಹಾಭಾರತದ ಯುದ್ಧದಲ್ಲಿ "ಅಶ್ವತ್ಥಾಮಾ ಹತಃ" ಎಂದರೆ ಅಶ್ವತ್ಥಾಮನೆಂಬ ಆನೆಯು ಸತ್ತಿತೆಂದು ಧರ್ಮರಾಯನು ಹೇಳಿದ ಮಾತನ್ನು ಕೇಳಿ ಅಶ್ವತ್ಥಾಮನೇ ಸತ್ತನೆಂದು ಭ್ರಾಂತಿಗೊಂಡು ದ್ರೋಣಾಚಾರ್ಯರು ತಮ್ಮ ಶರೀರವನ್ನು ರಥದಲ್ಲಿಟ್ಟು ಅಲ್ಲಿಂದ ಹೊರಬಿದ್ದ ಮಗನನ್ನು ನೋಡುವದಕ್ಕೆ ಹೋದ ಸಮಯದಲ್ಲಿ ದೃಷ್ಟದ್ಯುಮ್ನನು ಬಂದು ಆಚಾರ್ಯರ ಜುಟ್ಟು ಹಿಡಿದೆಳೆದನೆಂಬ ಸುದ್ದಿಯನ್ನು ಕೇಳಿ ಆಚಾರ್ಯರ ಮಗನಾದ ಅಶ್ವತ್ಥಾಮಾಚಾರ್ಯರು ಹೇಳುತ್ತಾರೆ—

"ಮಯಿ ಜೀವತಿ ಯತ್ತಾತಃ ಕೇಶಗ್ರಹಮವಾಪ್ತವಾನ್ ।
ಕಥಮನ್ಯೇ ಕರಿಷ್ಯಂತಿ ಪುತ್ರೇಭ್ಯಃ ಪುತ್ರಿಣಃ ಸ್ಪೃಹಾಮ್ ॥"

ಎಂದರೆ "ನಾನು ಬದುಕಿರುವಾಗಲೇ ನನ್ನಪ್ಪನು ಜುಟ್ಟು ಹಿಡಿಸಿಕೊಂಡನಲ್ಲ ! ನಮ್ಮ ಪಾಡೇ ಹೀಗಾಗಿರುವಾಗ ಬೇರೆ ಮಕ್ಕಳಂದಿಗರು ಮಕ್ಕಳಿಗಾಗಿ ಏಕೆ ಬಾಯಿನೀರು ಕರೆಯುತ್ತಾರೊ ಕಾಣೆ" ಎಂದರ್ಥ. ಈ ಅಶ್ವತ್ಥಾಮನ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು ಮಕ್ಕಳು ತಂದೆಯ ಯೋಗಕ್ಷೇಮವನ್ನು ನೋಡಿಕೊಳ್ಳಬೇಕು.

ತಾಯಿತಂದೆಗಳ ಸಮ್ಮತಿಯನ್ನು ಪಡೆಯದೆ ಎಲ್ಲಿಗೆ ಹೋಗಿ ಎಂಥ ತಪಶ್ಚರ್ಯೆಯನ್ನು ಮಾಡಿದರೂ ಅದು ಫಲಕಾರಿಯಾಗುವದಿಲ್ಲ. ಕೌಶಿಕನೆಂಬುವನು ತಾಯಿತಂದೆಗಳನ್ನು ಕೇಳದೆ ಕಾಡಿಗೆ ಹೋಗಿ ಒಂದು

ಮರದ ಕೆಳಗೆ ತಪಸ್ಸನ್ನು ಮಾಡಿದನು. ಅವನ ತಪಸ್ಸಿನ ಉಗ್ರತೆಯಿಂದ ಸ್ವಲ್ಪ ಕಾಲದಲ್ಲಿಯೇ ಅವನಿಗೆ ಒಂದು ಬಗೆಯ ಸಾಮರ್ಥ್ಯವುಂಟಾಯಿತು. ಹೀಗಿರುವಾಗ ಒಂದು ದಿನ ಅವನು ತಪಶ್ಚರ್ಯೆಯಲ್ಲಿರುವಾಗ ಮರದ ಮೇಲಿನ ಒಂದು ಹಕ್ಕಿ ಅವನ ತಲೆಯ ಮೇಲಕ್ಕೆ ತನ್ನ ಮಲವನ್ನು ಹಾಕಿತು. ಇದರಿಂದ ಕ್ರುದ್ಧನಾದ ಕೌಶಿಕನು ಕಣ್ಣೆತ್ತಿ ನೋಡುತ್ತಲೇ ಆ ಪಕ್ಷಿಯು ಧಗ್ಗೆಂದು ಉರಿದು ಬಿತ್ತು. ಇದನ್ನು ಕಂಡು ಕೌಶಿಕನಿಗೊಂದು ಬಗೆಯ ಅಭಿಮಾನವುಂಟಾಯಿತು. ಒಡನೆ ಅವನು ಆ ದಿನ ಹತ್ತಿರದ ಊರಿಗೆ ಹೋಗಿ ಒಂದು ಮನೆಯನ್ನು ಹೊಕ್ಕು ಭಿಕ್ಷೆಯನ್ನು ಬೇಡಿದನು. ಆ ಮನೆಯ ಯಜಮಾನಿಯು ಒಳಗೆ ಗಂಡನ ಸೇವೆಯಲ್ಲಿ ತೊಡಗಿದ್ದಳು. ಆದ್ದರಿಂದ ಭಿಕ್ಷೆಯನ್ನು ತರುವದು ಸ್ವಲ್ಪ ತಡವಾಯಿತು. ಆಗ ಆ ತಪಸ್ವಿಯು ಆಕೆಗೆ ತನ್ನ ಪ್ರಭಾವವನ್ನು ತೋರಿಸಬೇಕೆಂದು ಆಕೆಯ ಮುಂದೆ ತನ್ನ ಕಣ್ಣನ್ನು ಕಿಸಿದನು. ಆಗ ತನ್ನ ಕಣ್ಣೇ ಉರಿಯುವದಕ್ಕೆ ಮೊದಲಾಯಿತು. ಇದರ ಇಂಗಿತವನ್ನರಿತ ಆ ಯಜಮಾನಿಯು ತಾನು ಮರದ ಮೇಲಿನ ಹಕ್ಕಿಯಲ್ಲವೆಂದು ಭಿಕ್ಷೆಯನ್ನಿಕ್ಕಿದಳು. ಹಕ್ಕಿಯ ವಿಚಾರವು ಈಕೆಗೆ ಹೇಗೆ ತಿಳಿಯಿತೆಂದು ಕೌಶಿಕನು ಬೆರಗಾದನು. ಆಗ ಆ ಪತಿವ್ರತೆಯು ಕೌಶಿಕನಿಗೆ ಬುದ್ಧಿಯನ್ನು ಹೇಳಿ ಧರ್ಮದ ಮರ್ಮವನ್ನು ನೆರೆಯೂರಿನ ಧರ್ಮವ್ಯಾಧನಿಂದ ತಿಳಿದು ಅದರಂತೆ ನಡೆಯೆಂದು ದಾರಿಯನ್ನು ತೋರಿಸಿದಳು. ಕೌಶಿಕನು ಧರ್ಮವ್ಯಾಧನನ್ನು ಹುಡುಕಿಕೊಂಡು ಹೋದಾಗ ಧರ್ಮವ್ಯಾಧನು ಮಾಂಸವನ್ನು ಮಾರುತ್ತ ಕೂತಿದ್ದನು. ಇವನಿಂದ ತಿಳಿಯುವ ಧರ್ಮವಿನ್ನೆಂಥದ್ದಿರಬಹುದೆಂದು ಕೌಶಿಕನು ಅವನ ಸಮಯವನ್ನು ಕಾದು ಅವನ ಹಿಂದೆ ಅವನ ಮನೆಗೆ ಹೋದನು. ಧರ್ಮವ್ಯಾಧನು ಕೌಶಿಕನನ್ನು ಆದರಿಸಿ ಮಾತಾಪಿತೃಗಳ ಸೇವೆಯೇ ತನಗೆ ಜ್ಞಾನಸಾಧನವಾಗಿರುವದನ್ನು ತೋರಿಸಿ ತಿಳಿಯ ಹೇಳಿದನು. ಆಮೇಲೆ ಕೌಶಿಕನು ತನ್ನ ಮನೆಗೆ ಹೋಗಿ ತಂದೆತಾಯಿಗಳನ್ನು ಆದರಿಸಿ ಮುಂದೆ ತನ್ನ ಕಾರ್ಯವನ್ನು ಸಾಧಿಸಿಕೊಂಡನು. ಇದರಂತೆ ತಂದೆತಾಯಿಗಳ ಮನಸ್ಸನ್ನು ನೋಯಿಸದೆ ಅವರನ್ನೇ ದೇವರೆಂದು ಭಾವನೆ ಮಾಡುತ್ತಿದ್ದರೆ ಅವರ ಅನುಗ್ರಹದಿಂದಲೇ ಜ್ಞಾನಪ್ರಾಪ್ತಿಯಾಗುವದು.

## 'ಆಚಾರ್ಯದೇವೋ ಭವ'

"ಪಿತೃದೇವೋ ಭವ" ಎಂದು ಹೇಳಿದ ಮೇಲೆ ಶ್ರುತಿಯು "ಆಚಾರ್ಯದೇವೋ ಭವ" ಎಂದು ಹೇಳಿದೆ. ಆಚಾರ್ಯರನ್ನು ದೇವರಂತೆ ಭಾವಿಸಬೇಕೆಂದು ಅದರ ತಾತ್ಪರ್ಯ. ಆಚಾರ್ಯರೆಂಬ ಮಾತು ವೇದಗಳ ಎಲ್ಲಾ ರಹಸ್ಯಗಳನ್ನೂ ತಿಳಿಸತಕ್ಕವರಿಗಿರುವದು. ಆಚಾರ್ಯರನ್ನು ದೇವರಂತೆ ಭಾವಿಸಬೇಕೆಂದು ಹೇಳಿದಾಗ ವೇದರಹಸ್ಯವನ್ನು ಹೇಳುವವರನ್ನೇ ಅಲ್ಲದೆ ವೇದಾರ್ಥವನ್ನು ಗ್ರಹಿಸುವದಕ್ಕೆ ತಕ್ಕದ್ದಾಗುವ ಹಾಗೆ ಮನಸ್ಸಿನ ಮೇಲೆ ಸಂಸ್ಕಾರಗಳನ್ನುಂಟುಮಾಡತಕ್ಕವರನ್ನೆಲ್ಲಾ ಆಚಾರ್ಯ ಎಂಬ ಮಾತಿನ ಅರ್ಥದೊಳಕ್ಕೆ ಸೇರಿಸಿಕೊಳ್ಳಬಹುದು. ಇಂಗ್ಲೀಷಿನ ಶಾಲೆಗಳಲ್ಲಿ ಕಲಿಸುವವರಿಗೆ ಪ್ರೊಫೆಸರ್, ಲೆಕ್ಚರರ್, ಮಾಸ್ಟರ್, ಟೀಚರ್— ಮೊದಲಾದ ಬೇರೆ ಬೇರೆ ಹೆಸರುಗಳಿರುತ್ತವೆ. ಎಲ್ಲರೂ ಕಲಿಸುವವರೇ ಆದರೂ ಅವರವರ ಅಧಿಕಾರಭೇದದಿಂದ ಆಯಾಹೆಸರುಗಳು ಬಂದಿರುತ್ತವೆ. ನಮ್ಮಲ್ಲಿಯೂ ಆಚಾರ್ಯ, ಉಪಾಧ್ಯಾಯ, ಗುರು, ಸದ್ಗುರು-ಎಂದು ಬೇರೆ ಬೇರೆ ಹೆಸರುಗಳಿರುತ್ತವೆ. ಆಚಾರ್ಯರೆಂಬ ಹೆಸರು ವೇದಾರ್ಥರಹಸ್ಯವನ್ನು ತಿಳಿಸುವವರಿಗೆಂದು ಮೇಲೆ ಹೇಳಿದೆಯಷ್ಟೆ. ಸಾಮಾನ್ಯವಾಗಿ ವೇದಾಂಗಗಳನ್ನು-ಎಂದರೆ ವೇದಾರ್ಥವನ್ನು ಗ್ರಹಿಸುವದಕ್ಕೆ ಮನಸ್ಸನ್ನು ಸಿದ್ಧಗೊಳಿಸುವದಕ್ಕಾಗಿ ತರ್ಕವ್ಯಾಕರಣಾದಿಗಳನ್ನು- ಕಲಿಸುವವರು ಉಪಾಧ್ಯಾಯರು. ಮನಸ್ಸಿನಮೇಲೆ ವೈದಿಕಕರ್ಮಸಂಸ್ಕಾರವನ್ನು ಮಾಡುವವರು ಗುರುಗಳು. ವೇದದಲ್ಲಿ ಹೇಳಿರುವ ಪರಮಾತ್ಮನನ್ನು ಸಾಕ್ಷಾತ್ಕಾರಮಾಡಿಕೊಡುವವರು ಸದ್ಗುರುಗಳು. ಹೀಗಿದ್ದರೂ ರೂಢಿಯಲ್ಲಿ ಇವರೆಲ್ಲರನ್ನೂ ಗುರು ಎಂಬ ಮಾತಿನಿಂದಲೇ ಕರೆಯುವದುಂಟು. ಈ ಪ್ರಕರಣದಲ್ಲಿ ಗುರುವೆಂದರೆ ತಾನು ಯಾರಿಂದ ವಿದ್ಯೆಯನ್ನು ಕಲಿಯುವನೋ ಅವರೆಂದು ತಿಳಿದುಕೊಳ್ಳಬೇಕು.

ತಂದೆಯು ವಿದ್ಯಾವಂತನಾಗಿಲ್ಲದಿದ್ದರಂತು ವಿದ್ಯೆಯನ್ನು ಸಂಪಾದಿಸುವದಕ್ಕೆ ಮಗನು ಬೇರೆ ಗುರುವನ್ನು ಹುಡುಕಲೇ ಬೇಕಾಗುವದಷ್ಟೆ. ತಂದೆಯು ವಿದ್ಯಾವಂತನಾಗಿದ್ದರೂ ಕೂಡ ವಿದ್ಯಾರ್ಥಿಗೆ ಗುರು ಬೇರೆ

ಬೇಕೇ ಆಗುತ್ತದೆ. ಏಕೆಂದರೆ ಮಕ್ಕಳಿಗೆ ತಾಯಿತಂದೆಗಳಲ್ಲಿ ಬಹಳ ಸಲಿಗೆ ಇರುತ್ತದೆ.

"ಅತಿಪರಿಚಯಾದವಜ್ಞಾ ಸಂತತಗಮನಾದನಾದರೋ ಭವತಿ"

ಎಂಬದೊಂದು ವಾಕ್ಯವಿದೆ. ಒಬ್ಬರಿಗೊಬ್ಬರಿಗೆ ಪರಿಚಯವು ಬಹಳವಾಗಿದ್ದ ಕಡೆಯಲ್ಲಿ ಅನಾದರಣೆ ಇರುವದುಂಟು. ಅಳಿಯನು ಮಾವನ ಮನೆಗೆ ಹೋದಾಗ ಕೂಡ ಸ್ವಲ್ಪ ದಿನವೇ ಇರಬೇಕೆಂದು ಹೇಳುತ್ತಾರೆ. ಹೆಚ್ಚು ದಿನಗಳಿದ್ದರೆ ಅನಾದರವಾದೀತೆಂಬ ಭೀತಿ. ಯಾರ ಮನೆಗಾದರೂ ಯಾವಾಗಲೋ ಒಮ್ಮೆ ಹೋದರೆ ಬಹಳ ಆದರವನ್ನು ಮಾಡುತ್ತಾರೆ. ಪ್ರತಿದಿನವೂ ಹೋಗುತ್ತಿದ್ದರೆ ಆ ಆದರವಿರುವದಿಲ್ಲ. ಮಕ್ಕಳಿಗೆ ತಾಯಿತಂದೆಗಳ ಸ್ಥಿತಿಯು ಹಾಗೆ ಆಗುತ್ತದೆ. ಇದರ ಮೇಲೆ ತಾಯಿತಂದೆಗಳು ತಮ್ಮ ನಾನಾಪ್ರಕಾರಿಕ ಕೃತ್ಯಗಳ ನಡುವೆ ಮಕ್ಕಳ ಶಿಕ್ಷಣಕ್ಕೆ ಹೆಚ್ಚಾಗಿ ಮನಸ್ಸನ್ನು ಹಾಕುವ ಸಂಭವವೂ ಕಡಿಮೆ. ಅಂತು ಮಕ್ಕಳು ಮನೆಯನ್ನು ಬಿಟ್ಟು ಹೊರಗೆ ಕಲಿಯುವದೇ ಅವರ ಮನಸ್ಸಿಗೆ ಬಿಂಬಿಸುವದು. ಭಗವಾನ್ ವೇದವ್ಯಾಸರು ವೇದಾಂತಸೂತ್ರಗಳನ್ನು ರಚಿಸಿದವರು ಮತ್ತು ಹದಿನೆಂಟು ಪುರಾಣಗಳನ್ನು ಬರೆದವರು. ಇವರು ತಮ್ಮ ಮಕ್ಕಳಾದ ಶುಕಾಚಾರ್ಯರಿಗೆ ಬೇಕಾದಷ್ಟು ಉಪದೇಶಮಾಡಿದರು. ಆದರೂ ಹೊರಗಣಿಂದ ಬರಬೇಕಾದ ಉಪದೇಶದ ಅಗತ್ಯವು ಅವರಿಗೆ ತೋರಿತು. ಆಗ ಅವರು ಶುಕಾಚಾರ್ಯರನ್ನು ಜನಕಮಹಾರಾಜನ ಕಡೆಗೆ ಕಳುಹಿಸಿದರು. ಅಲ್ಲಿ ಶುಕಾಚಾರ್ಯರ ಸಂಶಯನಿವೃತ್ತಿಯಾಯಿತು.

ಗುರುವೆಂಬ ವಸ್ತುವಿನಲ್ಲಿ ದೇವರು ಯಾವ ಬಗೆಯ ಸಾಮರ್ಥ್ಯವನ್ನಿಟ್ಟಿದ್ದಾನೊ ತಿಳಿಯದು. ಗುರುವಿನ ಬೆಂಬಲವನ್ನು ಪಡೆದರೆ ವಿದ್ಯಾಸಿದ್ಧಿಯಾಗುವದಂತು ಖಂಡಿತ. ದ್ರೋಣಾಚಾರ್ಯರು ಕೌರವಪಾಂಡವರಿಗೆ ಧನುರ್ವಿದ್ಯೆಯನ್ನು ಕಲಿಸುತ್ತಿದ್ದಾಗ ಏಕಲವ್ಯನೆಂಬ ಶೂದ್ರನು ತಾನೂ ಅದನ್ನು ಕಲಿಯಬೇಕೆಂಬ ಇಚ್ಛೆಯಿಂದ ಆಚಾರ್ಯರ ಬಳಿಗೆ ಬಂದನು. ಶೂದ್ರರಿಗೆ ಧನುರ್ವೇದವನ್ನು ಹೇಳುವದು ಸಂಪ್ರದಾಯಕ್ಕೆ ವಿರೋಧವೆಂದು ಆಚಾರ್ಯರು ಅವನನ್ನು ನಿರಾಕರಿಸಿಬಿಟ್ಟರು. ಆಗ ಅವನು ಅಷ್ಟಕ್ಕೇ ನಿರಾಶನಾಗದೆ ಒಂದು ಏಕಾಂತಸ್ಥಲಕ್ಕೆ ಹೋಗಿ

ಮಣ್ಣಿನಿಂದ ಆಚಾರ್ಯರ ಮೂರ್ತಿಯನ್ನು ಮಾಡಿ ಅವರು ತನಗೆ ಹೇಳಿಕೊಡುತ್ತಿರುವರೆಂದು ತಾನೇ ಕಲ್ಪನೆ ಮಾಡಿಕೊಂಡು ಧನುರ್ವಿದ್ಯೆಯನ್ನು ಅಭ್ಯಾಸಮಾಡಿದನಂತೆ. ಆಗ ಅವನಿಗೆ ಧನುರ್ವಿದ್ಯೆಯಲ್ಲಿ ಅರ್ಜುನನನ್ನು ಕೂಡ ಬೆರಗುಮಾಡುವಂಥ ಯೋಗ್ಯತೆಯುಂಟಾಯಿತೆಂದು ಕಥೆ ಇದೆ. ಗುರುವೆಂಬ ವಸ್ತುವಿನಲ್ಲಿ ಈ ಬಗೆಯ ಸಾಮರ್ಥ್ಯವಿರುವದರಿಂದ ವಿದ್ಯಾರ್ಥಿಯಾದವನು ಗುರುವಿಗೆ ಶರಣು ಹೋಗುವದೇ ಶ್ರೇಯಸ್ಕರವು. ಅರ್ಜುನನು "ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ" ಎಂದರೆ "ನಿನಗೆ ನಾನು ಶಿಷ್ಯನಾಗಿ ಶರಣು ಬಂದಿರುವೆನೆಂದು ಹೇಳಿದ ಮೇಲೆಯೇ ಶ್ರೀಕೃಷ್ಣನು ಆತ್ಮವಿದ್ಯೆಯನ್ನು ಅವನಿಗೆ ಉಪದೇಶಮಾಡಿದ್ದಾನೆ. ಶ್ರೀಕೃಷ್ಣನು ಅವತಾರಪುರುಷನಷ್ಟೆ. ಅವನು ಗುರುಗಳಿಂದ ಕಲಿಯಬೇಕಾದ್ದೇನೂ ಇಲ್ಲದೆ ಇರಬಹುದಾದರೂ ಲೋಕಕ್ಕೆ ಉದಾಹರಣೆಯನ್ನು ತೋರಿಸಬೇಕೆಂದು ಸಾಂದೀಪನಿ ಎಂಬ ಗುರುಗಳಿಗೆ ಶರಣು ಹೋಗಿದ್ದಾನೆ. ಆದ್ದರಿಂದ ಎಲ್ಲರೂ ಗುರುವನ್ನು ಪಡೆಯಬೇಕು.

ಗುರುವೆಂಬ ಮಾತಿಗೆ ತೂಕವಾದ ವಸ್ತುವೆಂದರ್ಥ. ಇಲ್ಲಿ ತೂಕವೆಂದರೆ ದೇಹದ ತೂಕವಲ್ಲ; ಯೋಗ್ಯತೆಯ ತೂಕ ಯೋಗ್ಯತೆಯೊಂದು ಹೆಚ್ಚಾಗಿದ್ದರೆ ಚಿಕ್ಕವರು ಕೂಡ ದೊಡ್ಡವರಿಗೆ ಗುರುಗಳಾಗುವರು. ಮನುಸ್ಮೃತಿಯಲ್ಲಿ ಒಂದು ಶ್ಲೋಕವಿದೆ.

"ಅಧ್ಯಾಪಯಾಮಾಸ ಪಿತೄನ್ಶಿಶುರಾಂಗಿರಸಃ ಕವಿಃ ।
ಪುತ್ರಕಾ ಇತಿ ಹೋವಾಚ ಜ್ಞಾನೇನ ಪರಿಗೃಹ್ಯ ತಾನ್ ॥"

ಪ್ರತಿಭಾಶಾಲಿಯಾದ ಆಂಗಿರಸನು ಹಿರಿಯರಿಗೆ ಓದನ್ನು ಕಲಿಸುತ್ತಿರುವಾಗ ಅವರ ಜ್ಞಾನದ ಕೊರತೆಯ ಕಡೆಗೆ ಲಕ್ಷ್ಯವನ್ನು ಕೊಟ್ಟು "ಮಕ್ಕಳಿರಾ" ಎಂದು ಹೇಳಿದನಂತೆ. ಜ್ಞಾನರೂಪವಾದ ಯೋಗ್ಯತೆಗೆ ಈ ಅಧಿಕಾರವಿರುವದು ಯೋಗ್ಯವಾಗಿದೆ. ಏಕೆಂದರೆ ಲೋಕದಲ್ಲಿ ಬೇಕಾದಷ್ಟು ಐಶ್ವರ್ಯವನ್ನು ಸಂಪಾದಿಸುವದಕ್ಕೂ ವಿದ್ಯೆ ಬೇಕು. ಅಥವಾ ಹಿರಿಯರು ಗಳಿಸಿಟ್ಟಿರುವ ಧನರಾಶಿಯನ್ನು ಸಂರಕ್ಷಿಸಿಕೊಳ್ಳುವದಕ್ಕಾದರೂ ವಿದ್ಯೆ ಬೇಕು. ಆದ್ದರಿಂದ ವಿದ್ಯೆಯು ಸರ್ವಸಂಪತ್ತುಗಳಿಗಿಂತಲೂ ಮೇಲಾದುದು. ಶ್ರುತಿಯಲ್ಲಿ "ತತೋ ಮೇ ಶ್ರಿಯಮಾವಹ" ಎಂದಿದೆ.

ಎಂದರೆ " ನನಗೆ ಸಂಪತ್ತನ್ನು ಆ ಮೇಲೆ ಕೊಡು " ಎಂದರ್ಥ. ಮನುಷ್ಯನು ಮೊದಲು ಜ್ಞಾನವನ್ನು ಯಾಚಿಸಬೇಕು. ಸಂಪತ್ತಿನ ಮಾತು ಆಮೇಲೆ. ಏಕೆಂದರೆ ಜ್ಞಾನವಿಲ್ಲದೆ ಎಷ್ಟು ಸಂಪತ್ತಿದ್ದರೂ ವ್ಯರ್ಥ.

ವಿದ್ಯೆಯನ್ನು ಪುಸ್ತಕದ ಮೂಲಕವಾಗಿಯಾದರೂ ಕಲಿಯಬಹುದು ; ಆದರೆ ಗುರುಮೂಲಕವಾದ ವಿದ್ಯೆಯೇ ಪ್ರಯೋಜನಕರವಾಗುವದು. ಈ ವಿಷಯದಲ್ಲಿ ಒಬ್ಬ ಕವಿಯು ಹೇಳಿರುವದೇನೆಂದರೆ–

" ಯತ್ಸಾರಸ್ವತವೈಭವಂ ಗುರುಕೃಪಾಪೀಯೂಷಪಾಕೋದ್ಭವಂ ।
ತಲ್ಲಭ್ಯಂ ಕವಿನೈವ ನೈವ ಹಠತಃ ಪಾಠಪ್ರತಿಷ್ಠಾಜುಷಾ ॥
ಕಾಸಾರೇ ದಿವಸಂ ವಸನ್ನಪಿ ಪಯಃ ಪೂರಂ ಪರಂ ಪಂಕಿಲಂ ।
ಕುರ್ವಾಣಃ ಕಮಲಾಕರಸ್ಯ ಲಭತೇ ಕಿಂ ಸೌರಭಂ ಸೈರಿಭಃ ॥

ತಾತ್ಪರ್ಯವೇನೆಂದರೆ "ವಿದ್ಯೆಯ ವೈಭವವು ಗುರುವಿನ ಅನುಗ್ರಹಕ್ಕೆ ಪಾತ್ರನಾದವನಿಗೆ ದೊರೆಯುವದೇ ಹೊರತು ಸುಮ್ಮನೆ ಒರಲಿ ಒರಲಿ ಪಾಠ ಮಾಡಿದ ಮಾತ್ರಕ್ಕೇ ಬರುವದಿಲ್ಲ. ಕೋಣವು ದಿನವೆಲ್ಲಾ ಕೊಳದಲ್ಲಿದ್ದರೂ ನೀರನ್ನು ಕದಡಿ ಹೊಲಸು ಮಾಡುವದೇ ಹೊರತು ಸುವಾಸನೆಯನ್ನು ಪಡೆಯುವದಿಲ್ಲ " ಆದ್ದರಿಂದ ವಿದ್ಯಾರ್ಥಿಯು ಗುರುವನ್ನು ಪಡೆಯಬೇಕು. ಓದುಬರಹದ ಮಟ್ಟಿಗೆ ಗುರುಗಳ ಸಂಬಂಧವನ್ನಿಟ್ಟುಕೊಳ್ಳುವ ಈಗಿನ ಪದ್ಧತಿಯು ನಮ್ಮ ದೇಶದ್ದಲ್ಲ. ನಮ್ಮ ದೇಶದಲ್ಲಿ ವಿದ್ಯಾರ್ಥಿಯು ಗುರುಗಳಿದ್ದಕಡೆಗೆ ಹೋಗಿ ತನಗೆ ವಿದ್ಯೆ ಸಾಕಾಗುವವರೆಗೂ ಗುರುಗಳ ಆಶ್ರಯದಲ್ಲಿಯೇ ಇರುವದೇ ಪದ್ಧತಿ. ಇದಕ್ಕೆ ಗುರುಕುಲವಾಸವೆಂದು ಹೆಸರು. ಇದಲ್ಲದೆ ವಿದ್ಯೆಗೆ ಬೆಲೆಯನ್ನು ಕಟ್ಟುವದು ನಮ್ಮ ಸಂಪ್ರದಾಯವಲ್ಲವಾದ್ದರಿಂದ ಈಗಿನ ಕಾಲದಲ್ಲಿ ವಿದ್ಯಾರ್ಥಿಯು ತಿಂಗಳಿಗಿಷ್ಟೆಂದು ಕೊಡುವದು ಕೂಡ ನಮ್ಮ ಪದ್ಧತಿಯಲ್ಲ. ವಿದ್ಯೆಯನ್ನು ಕಲಿತ ಮೇಲೆ ಅಥವಾ ನಡುನಡುವೆ ಸಮಯ ಬಂದಾಗ ತನ್ನ ಯೋಗ್ಯತೆಗನುಸರಿಸಿ ವಿದ್ಯಾರ್ಥಿಯು ಗುರುಗಳಿಗೆ ದಕ್ಷಿಣಾದ್ರವ್ಯವನ್ನು ಮುಟ್ಟಿಸುವದು ನಮ್ಮ ಪದ್ಧತಿ. ಹಿಂದೆ ಶ್ರೀಮಂತರಾದ ವಿದ್ಯಾರ್ಥಿಗಳು ತಮ್ಮ ಮನೆಯಿಂದ ಬೇಕಾದಷ್ಟನ್ನು ತಂದು ಗುರುಗಳಿಗೆ ಕೊಡುತ್ತಿದ್ದರು. ಬಡ ವಿದ್ಯಾರ್ಥಿಗಳು ತಮ್ಮ ವಿದ್ವತ್ತಿನಿಂದ ಬೇಕಾದ

ಷ್ಟನ್ನು ಸಂಪಾದಿಸಿ ಕೊಡುತ್ತಿದ್ದರು ಅಥವಾ ಗುರುಗಳಾಜ್ಞಾಪಿಸಿದ ಏನಾದರೂ ಮಹತ್ಕಾರ್ಯವನ್ನು ಸಾಧಿಸಿ ತಮ್ಮ ಕೃತಜ್ಞತೆಯನ್ನು ತೋರಿಸುತ್ತಿದ್ದರು. ವರತಂತುಋಷಿಗಳ ಶಿಷ್ಯನೊಬ್ಬನು ಒಬ್ಬ ರಾಜನನ್ನು ಯಾಚಿಸಿ ಅಪಾರವಾದ ಧನವನ್ನು ತಂದು ಗುರುಗಳಿಗೆ ಕೊಟ್ಟನೆಂದು ರಘುವಂಶದಲ್ಲಿ ಹೇಳಿದೆ. ಅರ್ಜುನನು ತನ್ನ ಗುರುಗಳಿಗೆ ಅನಾದರವನ್ನು ತೋರಿಸಿದ್ದ ದ್ರುಪದರಾಜನನ್ನು ತನ್ನ ಬಾಹುಬಲದಿಂದ ಸೆರೆಹಿಡಿದು ತಂದು ದ್ರೋಣಾಚಾರ್ಯರ ಪಾದದ ಮೇಲೆ ಉರುಳಿಸುವದರ ರೂಪವಾದ ಗುರುದಕ್ಷಿಣೆಯನ್ನು ಕೊಟ್ಟನೆಂದು ಮಹಾಭಾರತದಲ್ಲಿದೆ. ಅಂತು ಇಷ್ಟೆ ವಿದ್ಯೆಗಿಷ್ಟು ಬೆಲೆಯೆಂಬುದಿರಲಿಲ್ಲ. ಗುರುದಕ್ಷಿಣೆಯು ವಿದ್ಯಾರ್ಥಿಯ ಯೋಗ್ಯತೆಗನುಗುಣವಾಗಿರುತ್ತಿತ್ತು.

"ಗುರವೇ ದಕ್ಷಿಣಾಂ ದತ್ವಾ ಸ್ನಾಯಾದ್ಗುರ್ವನುಮೋದಿತಃ"

ಎಂದು ಭಾಗವತದಲ್ಲಿದೆ. ಗುರುವಿಗೆ ದಕ್ಷಿಣೆಯನ್ನು ಕೊಟ್ಟು ಆ ಮೇಲೆ ಗುರುಗಳಪ್ಪಣೆಯನ್ನು ಪಡೆದು ಗೃಹಸ್ಥನಾಗಬೇಕೆಂದರ್ಥ. ಆದ್ದರಿಂದ ಶಿಷ್ಯನು ಗುರುಗಳಿಗೆ ಯಥಾಶಕ್ತಿ ಗುರುದಕ್ಷಿಣೆಯನ್ನು ಕೊಟ್ಟು ಕೃತಾರ್ಥನಾಗುವದು ಅವನಿಗೆ ಶ್ರೇಯಸ್ಕರವು.

ಗುರುವಿನ ಹೆಚ್ಚುಗಾರಿಕೆಯನ್ನು ಸೋಮೇಶ್ವರಕವಿಯು ಎಷ್ಟು ಹೊಗಳುತ್ತಾನೆ! ನೋಡಿರಿ—

"ಹರನಿಂದುರ್ವಿಗೆ ದೈವವೇ, ಕಿರಣಕಿಂದುಂ ಬಿಟ್ಟು ನೊಂಪುಂಟೆ, ಪೆ ।
ತ್ತರಿಗಿಂತುಂಟೆ ಹಿತರ್ಕಳುಂ, ಮಡದಿಯಿಂ ಬೇರಾಪ್ತರಿನ್ನಿರ್ಪರೇ, ।
ಸರಿಯೇ ವಿದ್ಯಕೆ ಬಂಧು, ಮಾರನಿದಿರೊಳ್ಬಿಲ್ಲಾಳಿ, **ಮೂಲೋಕದೊಳ್** ।
**ಗುರುವಿಂದುನ್ನತಸೇವ್ಯನೇ,** ಹರಹರಾ, ಶ್ರೀಚೆನ್ನಸೋಮೇಶ್ವರಾ ॥"

ನಮ್ಮ ದೇಶದಲ್ಲಿ ಗುರುಗಳ ಮೇಲಿನ ಪೂಜ್ಯಬುದ್ಧಿಯು ಸಾಕ್ಷಾದ್ಗುರುಶಿಷ್ಯರಲ್ಲಿಯೇ ಮುಗಿದು ಹೋಗುವದಿಲ್ಲ. ಅವರ ಸಂಬಂಧಿಗಳಿಗೂ ವ್ಯಾಪಿಸಿರುವದು. ಮಹಾಭಾರತದ ಯುದ್ಧದಲ್ಲಿ ದ್ರೋಣಾಚಾರ್ಯರ ಮಕ್ಕಳಾದ ಅಶ್ವತ್ಥಾಮಾಚಾರ್ಯರು ಪಂಚಪಾಂಡವರ ತಲೆಗಳನ್ನು ತಂದು ತೋರಿಸುವೆನೆಂದು ಕೌರವನಿಗೆ ಮಾತು ಕೊಟ್ಟು ಒಂದು ರಾತ್ರಿ ಪಾಂಡವರ ಪಾಳೆಯಕ್ಕೆ ನುಗ್ಗಿ ಎಲ್ಲರೂ ಮಲಗಿದ್ದಾಗ ಪಂಚ

ಪಾಂಡವರೆಂದು ಭ್ರಮಿಸಿ ಅವರ ಐವರು ಕುಮಾರರ ಶಿರಸ್ಸನ್ನು ಛೇದಿಸಿ ಕೊಂಡು ಹೋದನು. ಆಮೇಲೆ ಮಕ್ಕಳ ಮರಣದಿಂದ ದ್ರೌಪದಿಯು ಗೋಳಿಡಲು ಆ ಪುತ್ರಘಾತಕನಾದ ಅಶ್ವತ್ಥಾಮನ ತಲೆಯನ್ನು ತಂದು ತೋರಿಸುವೆನೆಂದು ಅರ್ಜುನನು ಅವನ ಮೇಲೆ ದಾಳಿಯಿಟ್ಟು ಅವನನ್ನು ಹಿಡಿದು ರಥದ ಕಂಬಕ್ಕೆ ಕಟ್ಟಿಕೊಂಡು ಬಂದನು. ಈ ಅವಮಾನದಿಂದ ತಲೆಯನ್ನು ಬಗ್ಗಿಸಿಕೊಂಡಿರುವ ತಮ್ಮ ಗುರುಪುತ್ರನನ್ನು ನೋಡುತ್ತಲೆ ದ್ರೌಪದಿಗೆ ಮನಸ್ಸು ಕರಗಿತು. ಗುರುಗಳ ಹೆಂಡತಿಯಾದ ಕೃಪಿಯು ತನ್ನ ಮಗನ ಮರಣಕ್ಕೆ ಮುಂದೆ ಬಹಳವಾಗಿ ದುಃಖಿಸಬಹುದಾದ್ದರಿಂದ ಗುರುಪತ್ನಿಗೆ ಆ ಸ್ಥಿತಿಯನ್ನು ತಂದುಕೊಡಬಾರದೆಂದು ದ್ರೌಪದಿಯು ತಾನಾಗಿಯೇ ತನ್ನ ಪುತ್ರಶೋಕವನ್ನು ನುಂಗಿಕೊಂಡು ಅಶ್ವತ್ಥಾಮರ ಮರಣಕ್ಕೆ ಅಡ್ಡಬಂದಳು. ಕೊನೆಗೆ ಶ್ರೀಕೃಷ್ಣನ ಸೂಚನೆಯಂತೆ ಅರ್ಜುನನು ಗುರುಪುತ್ರನೆಂದು ಅವನ ಜೀವವನ್ನು ಕಳೆಯದೆ ಅವನ ತಲೆಯ ಕೂದಲೊಡನೆ ತಲೆಯಲ್ಲಿ ಸಹಜವಾಗಿದ್ದ ಮಣಿಯನ್ನು ಕತ್ತಿಯಿಂದ ಕೊಯ್ದುಕೊಂಡು ಅವನನ್ನು ಅಟ್ಟಿಬಿಟ್ಟನು. ದ್ರೌಪದಿಯು ಹೀಗೆ ಅವನನ್ನು ಕೊಲ್ಲಿಸದೆ ಉಳಿಸಿದ್ದಕ್ಕೆ ಅವನು ಗುರುಪುತ್ರನೆಂಬ ಭಾವನೆಯೇ ಕಾರಣ. ಗುರುಗಳ ಮೇಲಿನ ಪೂಜ್ಯಬುದ್ಧಿಯು ನಮ್ಮಲ್ಲಿ ಇಷ್ಟು ವ್ಯಾಪಕವಾಗಿರುವದು.

ಈ ರೀತಿಯಲ್ಲಿ ತಾಯಿ, ತಂದೆ, ಗುರು— ಈ ಮೂವರನ್ನೂ ದೇವರೆಂದು ಭಾವಿಸುವ ವಿದ್ಯಾರ್ಥಿಯ ಏಳಿಗೆಯ ವಿಷಯದಲ್ಲಿ ನಮ್ಮ "ಪರಮಾತ್ಮ ಸ್ತುತಿ" ಯು ಹೇಳುವದೇನೆಂದರೆ—

ಧರಣಿಯೊಳ್ಪ್ರತ್ಯಕ್ಷರಾಗಿರು ।
ತಿರುವ ತಾಯಿಯುಂ ತಂದೆಯುಂ ಮೇ ||
ಣ್ಗುರುಗಳೆನಿಪಾ ಮೂರುದೇವತೆಗಳನು ಸೇವಿಸುತ ||
ಪರಮಹಿತದಿಂದೀ ತ್ರಿವರ್ಗವ ।
ಪೊರೆವ ನರಗೆ ಪರೋಕ್ಷದಲ್ಲಿಹ ।
ಹರಿವಿರಿಂಚಿವೃಷಧ್ವಜರ ದಾಕ್ಷಿಣ್ಯದಿಂದೇನು ? ||

# ಇಂದ್ರಿಯಸಂಯಮನ.

ಮಕ್ಕಳು ತಾಯಿ ಬಳಿಯಲ್ಲಿ ಗುಣಗಳನ್ನು ಕಲಿಯುವವು; ತಂದೆಯ ಬಳಿಯಲ್ಲಿ ವಿದ್ಯೆಯನ್ನು ಕಲಿಯುವವು; ಇನ್ನು ಗುರುವಿನ ಬಳಿಯಲ್ಲಿ ಹೊಸದಾಗಿ ಕಲಿಯತಕ್ಕದ್ದೇನೆಂಬ ವಿಚಾರವು ಬರಬಹುದು. ಗುರುವಿನಲ್ಲಿ ಸಾಮಾನ್ಯವಾಗಿ ತಂದೆಯಿಂದ ದೊರೆಯದೆ ಇದ್ದಂಥ ವಿದ್ಯಾವಿಶೇಷವು ದೊರೆಯುವದೆಂದರೂ ಅದು ದೊಡ್ಡ ವಿಷಯವಲ್ಲ. ತಾಯಿಯ ಬಳಿಯಲ್ಲಿಯಾಗಲಿ ತಂದೆಯ ಬಳಿಯಲ್ಲಿಯಾಗಲಿ ದೊರೆಯದೆ ಗುರುವಿನ ಬಳಿಯಲ್ಲಿಯೇ ದೊರೆಯುವಂಥ ಒಂದು ಮಹತ್ತ್ವದ ಸಂಪಾದನೆಯಿದೆ. ತಂದೆತಾಯಿಗಳ ಬಳಿಯಲ್ಲಿ ಇರುವಾಗ ಮಕ್ಕಳು ಬಹಳ ಸಲಿಗೆಯಿಂದ ಇರುತ್ತಾರೆ. ಎಷ್ಟಾದರೂ ಒಬ್ಬರಿಗೊಬ್ಬರಿಗೆ ರಕ್ತಸಂಬಂಧವಿರುವದರಿಂದ ಮಕ್ಕಳಿಗೆ ಅಲ್ಲಿ ಸ್ವೇಚ್ಛಾವಿಹಾರವೇ ಇರುತ್ತದೆ. ದೇವರು ಸ್ವಭಾವವಾಗಿಯೇ ಇಂದ್ರಿಯಗಳನ್ನು ಚಂಚಲಪ್ರಕೃತಿಗಳನ್ನಾಗಿ ಮಾಡಿ ಹೊರಮುಖವಾಗಿ ಬಿಟ್ಟಿರುತ್ತಾನೆ. ಪಶುಗಳಿಗೂ ಇದೇ ಸ್ಥಿತಿಯಿದೆ. ಆದರೆ ಪಶುಗಳು ಇದನ್ನು ತಮ್ಮ ಉನ್ನತಿಗೆ ಸಾಧಕವಾಗಿ ತಿದ್ದಿಕೊಳ್ಳಲಾರವು. ಮನುಷ್ಯನೂ ಆ ಇಂದ್ರಿಯಗಳ ಸ್ವೇಚ್ಛಾಪ್ರವೃತ್ತಿಯನ್ನು ತಿದ್ದಿಕೊಳ್ಳದೆ ಹೋದರೆ ಅವನಿಗೂ ಪಶುಗಳಿಗೂ ಭೇದವೇನು? ತಂದೆತಾಯಿಗಳ ಬಳಿಯಲ್ಲಂತು ಈ ಸ್ವೇಚ್ಛಾಪ್ರವೃತ್ತಿಗೆ ಪ್ರತಿಬಂಧಕವು ಬಹಳ ಕಡಿಮೆ. ಇದನ್ನು ಇನ್ನೆಲ್ಲಿ ಕಲಿಯಬೇಕು? ಇದಕ್ಕೆ ಗುರುವೇ ಗತಿ. ಮನುಷ್ಯನಲ್ಲಿರುವ ಪಶುತ್ವವನ್ನು ಹಿಮ್ಮೆಟ್ಟಿಸಿ ಮನುಷ್ಯತ್ವವನ್ನು ಪೂರ್ಣಗೊಳಿಸಿ ಅವನಿಗೆ ದೇವತ್ವದ ಪ್ರಾಪ್ತಿಯನ್ನು ಕೂಡ ಮಾಡಿಕೊಡುವದರಲ್ಲಿಯೇ ಗುರುವಿನ ಗುರುತ್ವ. ಪಶುತ್ವವನ್ನು ಹಿಮ್ಮೆಟ್ಟಿಸುವದೆಂದರೆ ಇಂದ್ರಿಯಸಂಯಮನವನ್ನು ಕಲಿಸುವದು. ಇದನ್ನು ಕಲಿಸದೆ ಎಷ್ಟು ವಿದ್ಯೆಯನ್ನು ಕಲಿಸಿದರೂ ಅದು ವಿದ್ಯೆ ಎನಿಸಿಕೊಳ್ಳುವದಿಲ್ಲ. ಏಕೆಂದರೆ ಹೊರಗೆ ಹರಿದು ಹೋಗುವದೇ ಇಂದ್ರಿಯಗಳ ಸ್ವಭಾವ. ಅವುಗಳನ್ನೇ ಮತ್ತಷ್ಟು ಮುಂದಕ್ಕೆ ಹರಿಸಿದರೆ ಏನು ಹೆಚ್ಚುಗಾರಿಕೆ? ಪ್ರವಾಹವು ಮುಮ್ಮುಖವಾಗಿ ಹೋಗುತ್ತಿರುವಾಗ ಅದರ ಪಾತ್ರವನ್ನು

ಇನ್ನಷ್ಟು ತಗ್ಗುಮಾಡಿ ಅದನ್ನು ಮತ್ತಷ್ಟು ವೇಗವಾಗಿ ಓಡಿಸುವದು ಹೆಚ್ಚಿನದೋ ಆ ಪ್ರವಾಹಕ್ಕೆ ಅಡ್ಡಗಟ್ಟೆಯನ್ನು ಹಾಕಿ ಅದನ್ನು ಹಿಮ್ಮುಖವಾಗಿ ಮಾಡಿ ತನ್ನ ಹೊಲದ ಮೇಲೆ ಹಾಯಿಸಿಕೊಂಡು ಅದರಿಂದ ಬೇಕಾದ ಬೆಳೆಯನ್ನು ಬೆಳೆಯುವದು ಹೆಚ್ಚಿನದೋ? ಇಂದ್ರಿಯಗಳ ಪ್ರವೃತ್ತಿಯನ್ನು ಹಿಮ್ಮುಖವಾಗಿ ಹರಿಸುವಂಥ ಮಹತ್ಕಾರ್ಯತ್ನವು ಸದ್ಗುರುಗಳಂಥ ದೊಡ್ಡವರಿಗೆ ಮಾತ್ರ ಸಾಧ್ಯವು. ಸಾಮಾನ್ಯರಾದ ವಿದ್ಯಾಗುರುಗಳು ಆ ಇಂದ್ರಿಯಗಳ ಪ್ರವೃತ್ತಿಯ ವೇಗವನ್ನು ತಗ್ಗಿಸಿ ಅದೊಂದು ಹಿಡಿತದಲ್ಲಿದ್ದು ಸಾಗುವಂತೆಯಾದರೂ ಮಾಡಲೇ ಬೇಕು. ಇದನ್ನು ಗುರುಗಳು ಮಾಡಬೇಕೆಂದರೆ ಇದರ ಭಾರವೆಲ್ಲಾ ಗುರುಗಳ ಮೇಲಿರುವದೆಂದರ್ಥವಲ್ಲ. ಹೀಗೆ ಮಾಡತಕ್ಕದ್ದೆಂದು ಗುರುಗಳು ತಿಳಿಯಹೇಳಬೇಕು. ಇಷ್ಟೆ. ಮಾಡುವ ಭಾರವೆಲ್ಲಾ ವಿದ್ಯಾರ್ಥಿಯ ಮೇಲೆಯೇ ಇದೆ. ಗುರುಗಳು ವಿದ್ಯಾರ್ಥಿಯನ್ನು ಈ ಬಗೆಯ ಕಷ್ಟದಲ್ಲಿ ಸೊರಗಿಸುವರೆಂದು ಅದನ್ನು ದೋಷದೃಷ್ಟಿಯಿಂದ ನೋಡಬಾರದು. ವಿದ್ಯಾರ್ಥಿಗಳ ಮೇಲೆ ಗುರುಗಳ ಪ್ರೇಮವಿಲ್ಲವೆಂದಲ್ಲ. ಮಕ್ಕಳ ಮೇಲೆ ತಾಯಿತಂದೆಗಳಿಗೆ ಹೇಗೆ ಪ್ರೇಮವೋ ಗುರುಗಳಿಗೆ ವಿದ್ಯಾರ್ಥಿಗಳ ಮೇಲೆಯೂ ಹಾಗೆಯೇ ಪ್ರೇಮವಿರುವದು. ಆದರೆ ತಾಯಿತಂದೆಗಳ ಬಳಿಯಲ್ಲಿ ಮಕ್ಕಳಿಗೆ ಶರೀರಸೌಖ್ಯದ ದೃಷ್ಟಿ ಹೆಚ್ಚು; ಗುರುಗಳ ಬಳಿಯಲ್ಲಿ ವಿದ್ಯಾರ್ಥಿಗಳಿಗೆ ಮಾನಸಿಕಶಿಕ್ಷಣದ ದೃಷ್ಟಿ ಹೆಚ್ಚು.

"ಏವಂ ವೃತ್ತೋ ಗುರುಕುಲೇ ವಸೇದ್ಭೋಗವಿವರ್ಜಿತಃ"

ಎಂದು ಭಾಗವತವು ಉಪದೇಶಿಸುತ್ತದೆ. ಗುರುಕುಲದಲ್ಲಿರುವಾಗ ಶರೀರಪುಷ್ಟಿಯ ಭೋಗಗಳು ಯೋಗ್ಯವಲ್ಲ. ಮನುಷ್ಯನ ಯೋಗ್ಯತೆಯ ತೂಕವನ್ನು ಹೆಚ್ಚಿಸುವದು ಮಾನಸಿಕಶಿಕ್ಷಣವೇ ಹೊರತು ಶರೀರಪುಷ್ಟಿಯಲ್ಲ. ಆದ್ದರಿಂದ ಮಾನಸಿಕಶಿಕ್ಷಣವನ್ನು ಪಡೆಯುವದಕ್ಕೆ ಗುರುಗಳ ಬಳಿಗೆ ಹೋದ ವಿದ್ಯಾರ್ಥಿಯು ಇಂದ್ರಿಯಸಂಯಮಕ್ಕೆ ಕೊಡಬೇಕಾದ ಲಕ್ಷ್ಯವನ್ನು ಕುರಿತು ಮನುಸ್ಮೃತಿಯಲ್ಲಿ ಹೇಳಿರುವದೇನೆಂದರೆ—

(೧) ಸುಖಸಾಧನಗಳನ್ನು ಪಡೆದುಕೊಳ್ಳಬೇಕೆಂದು ಇಂದ್ರಿಯಗಳು ತವಕಿಸುವಾಗ ಆ ಸಾಧನಗಳು ಇಂದಿಲ್ಲ ನಾಳೆ ಕಳೆದು ಹೋಗತ

ಕ್ಯವುಗಳೆಂಬ ಮುಂತಾದ ದೋಷಗಳನ್ನು ಮನಸ್ಸಿಗೆ ತಂದುಕೊಂಡು, ಗಾಡಿಯವನು ಕುದುರೆಗಳನ್ನು ಬಿಗಿಹಿಡಿಯುವಂತೆ, ಜ್ಞಾನಿಸು ಇಂದ್ರಿಯಗಳನ್ನು ಬಿಗಿಹಿಡಿಯಬೇಕು. (೨-೬೮).

(೨) ಇಂದ್ರಿಯಗಳು ಬಗೆಬಗೆಯ ಸುಖಸಾಧನಗಳಲ್ಲಿ ಆಸಕ್ತವಾದರೆ ಅದರಿಂದ ನಿಸ್ಸಂದೇಹವಾಗಿ ದೋಷವನ್ನು ಪಡೆಯುತ್ತವೆ. ಅವುಗಳನ್ನೆ ಬಿಗಿಹಿಡಿದರೆ ಅದರಿಂದ ಮನಸ್ಸಿಗೊಂದು ಹೆಚ್ಚಿನ ಯೋಗ್ಯತೆಯುಂಟಾಗುತ್ತದೆ. (೨-೯೩)

(೩) ಆಶೆಗಳನ್ನು ತೀರಿಸಿಕೊಳ್ಳುತ್ತ ಹೋದರೆ ಅವು ಎಂದಿಗೂ ಶಾಂತವಾಗುವದಿಲ್ಲ. ತುಪ್ಪವನ್ನು ಹಾಕುತ್ತ ಹೋದಷ್ಟು ಬೆಂಕಿಯು ಪ್ರಜ್ವಲಿಸುವಂತೆ ಅವು ಮತ್ತಷ್ಟು ಹೆಚ್ಚುವವು. (೨-೯೪)

(೪) ಒಬ್ಬನು ಸರ್ವಸುಖಸಾಧನಗಳನ್ನೂ ಪಡೆದರೆ ಮತ್ತು ಒಬ್ಬನು ಸರ್ವಸುಖಸಾಧನಗಳನ್ನೂ ತೊರೆದರೆ ಇವರಿಬ್ಬರಲ್ಲಿ ಪಡೆದವನಿಗಿಂತಲೂ ತೊರೆದವನೇ ಶ್ರೇಷ್ಠನು. (೨-೯೫)

(೫) ಸುಖಸಾಧನಗಳು ಕಣ್ಣಿಗೇ ಬೀಳದಂತೆ ಮಾಡುವದು ಸಾಧ್ಯವಲ್ಲ. ಆ ಸುಖಸಾಧನಗಳನ್ನು ಯಾವಾಗಲೂ ದೋಷದೃಷ್ಟಿಯಿಂದ ನೋಡುವದರಿಂದ ಮಾತ್ರ ಅವುಗಳ ಬಲೆಗೆ ಬೀಳದಂತೆ ಇರಬಹುದು. (೨-೯೭)

(೬) ಐದು ಇಂದ್ರಿಯಗಳಲ್ಲಿ ಸುಖಸಾಧನಗಳ ಕಡೆಗೆ ಒಂದು ಜೋಲುಬಿದ್ದರೂ- ಚರ್ಮದ ಬುದ್ದಲಿಯಲ್ಲಿ ಒಂದು ತೂತುಬಿದ್ದರೂ ಅದರಲ್ಲಿರುವ ದ್ರವವಸ್ತು ಸೋರುವಂತೆ- ಅವನ ಜ್ಞಾನವು ಸೋರಿ ಹೋಗುವದು. (೨-೯೯)

ವೀರಶೈವವಚನಶಾಸ್ತ್ರವು ಮೇಲಿನ ಅರ್ಥಗಳ ತಿರುಳನ್ನು ಒಂದೇ ಮಾತಿನಲ್ಲಿ ಹೇಳುತ್ತದೆ. ಅದೇನೆಂದರೆ—

“ ಶ್ರೋತ್ರದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ತ್ವಕ್ಕಿನಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ನಾಸಿಕದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ನೇತ್ರದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ಜಿಹ್ವೆಯಲ್ಲಿ ಬ್ರಹ್ಮಚಾರಿಯಾಗಿರ

ಬೇಕು ಶರಣನು. ಇಂತೀ ಪಂಚೇಂದ್ರಿಯುಗಳಲ್ಲಿ ಬ್ರಹ್ಮಚಾರಿಯಾಗಿ ಕೂಡಲ ಸಂಗಮ ದೇವರಲ್ಲಿ ಎನ್ನನಾಗುವಮಾಡಲಿಕ್ಕೆ ಬ್ರಹ್ಮಚಾರಿಯಾದರು ಪ್ರಭುದೇವರು. ”

ಇದು ಶರಣರಿಗೆ ಹೇಳಿದ ಮಾತಾದರೂ ಮುಂದೆ ಶರಣನಾಗ ಬೇಕೆಂಬ ದೃಷ್ಟಿಯಿಂದ ವಿದ್ಯಾರ್ಥಿಯು ತನ್ನ ಗುರುಕುಲವಾಸದಲ್ಲಿ ಈ ನಿಯಮಗಳನ್ನು ಪಾಲಿಸಬೇಕು.

## ಬಿಡಬೇಕಾದದು.

ಇಂದ್ರಿಯಸಂಯಮನವನ್ನು ಮಾಡಬೇಕೆಂದು ಹೇಳಿದ ಮಾತಿ ನಿಂದಲೇ ಎಲ್ಲವನ್ನೂ ಬಿಡಬೇಕೆಂದೇ ಹೇಳಿದಂತಾಯಿತು. ಎಲ್ಲವನ್ನೂ, ಎಂದರೆ ಸಂಯಮನವು ಕೆಟ್ಟವಿಷಯುಗಳ ದೆಸೆಯಿಂದಾದ್ದರಿಂದ ಕೆಟ್ಟವಿಷ ಯುಗಳನ್ನೆಲ್ಲಾ, ದೂರಮಾಡಬೇಕೆಂದಾಯಿತು. ಆದರೂ ವಿದ್ಯಾರ್ಥಿಗಳ ಲಕ್ಷ್ಯವನ್ನು ಹೆಚ್ಚಾಗಿ ಸೆಳೆಯುವದಕ್ಕಾಗಿ ಮನುಸ್ಮೃತಿಯನ್ನು ಹಿಡಿದು ಕೆಲವು ಬಿಡಬೇಕಾದ ವಿಷಯುಗಳನ್ನು ಇಲ್ಲಿ ಸೂಚಿಸುತ್ತೇವೆ. ಅದೇ ನೆಂದರೆ—

ಮದವನ್ನುಂಟುಮಾಡುವ ದ್ರವವಸ್ತು, ಮಾಂಸ, ಸುಗಂಧದ್ರವ್ಯ ಗಳು, ಹೂವಿನ ಹಾರ, ಹೆಚ್ಚಿನ ಸಿಹಿ ಕಾರ ಮೊದಲಾದವು, ಸ್ತ್ರೀಯರು, ಮೊದಲು ಸಿಹಿಯಾಗಿದ್ದು ಆ ಮೇಲೆ ಹುಳಿಗೆ ತಿರುಗಿದ ರಸವಸ್ತುಗಳು, ಪ್ರಾಣಿಹಿಂಸೆ– ಇವು ವಿದಾರ್ಥಿಗಳಿಗೆ ಯೋಗ್ಯವಲ್ಲ. (೨–೧೭೭).

ಭಗವಾನ್ ಮನುಮಹರ್ಷಿಗಳ ಕಾಲದಲ್ಲಿ ಈಗಿನ ನಾಗರಿಕ ತೆಯು ಘಾಟು ಕೂಡ ಅವರಿಗೆ ಬಡಿದಿರಲಿಲ್ಲವೆಂದು ತೋರುತ್ತದೆ. ಹಾಗೆ ಬಡಿದಿದ್ದರೆ ಚಹಾ, ಕಾಫಿ ಮೊದಲಾದ ಉಷ್ಣೋದಕಪಾನ, ಸೋಡಾ, ಲಿಮನೆಡ್ ಮುಂತಾದ ದುಂದಿನ ಪಾನ, ಬೀಡೀ, ಚುಟ್ಟಾ, ಸಿಗರೇಟು ಇವುಗಳ ಮೂಲಕವಾದ ಧೂಮಪಾನ, ಬಗೆಬಗೆಯಾದ ಕರಿದ ಪದಾರ್ಥಗಳ ಮಿತಿಮಿರಿದ ಸೇವನೆ, ಸಿನೀಮಾ ನಾಟಕ ಮೊದಲಾದವುಗಳ ಎಡಬಿಡದ ನೋಟ, ನಿತ್ಯಕ್ಷೌರ, ಅನವಶ್ಯಕವಾದ ಗಾಜಿನ ಕಣ್ಣುಗಳು, ವಿದ್ಯುದ್ದೀಪದ ಮುಂದೆ ಓದುವದು— ಇವುಗಳ ನ್ನೆಲ್ಲಾ ಅದರಲ್ಲಿ ಸೇರಿಸುತ್ತಿದ್ದರು. ಮುಖ್ಯ ತಾತ್ಪರ್ಯವೇನೆಂದರೆ ಇಂದ್ರಿ

ಯುಗಳನ್ನು ಹೊರಮುಖವಾಗಿ ಮಾಡುವಂಥ, ಒಮ್ಮೆಗೆ ಹುರಿಗೊಳಿಸಿ ಆಮೇಲೆ ಸೊರಗಿಸುವಂಥ ಮತ್ತು ಮತ್ತೆಮತ್ತೆ ಅವುಗಳನ್ನು ಬೇಕೆನಿಸಿ ಇಂದ್ರಿಯಸುಖದ ಕಡೆಗೆ ಮನಸ್ಸನ್ನು ತಿರುಗಿಸಿ ಮನಸ್ಸಿಗೊಂದು ಬಗೆಯ ಚಟವನ್ನು ಹುಟ್ಟಿಸುವಂಥ ಎಲ್ಲಾ ವಸ್ತುಗಳನ್ನೂ ವಿದ್ಯಾರ್ಥಿಗಳು ಅಗತ್ಯವಾಗಿ ದೂರಮಾಡಬೇಕು. ಏಕೆಂದರೆ ಇವುಗಳಿಂದ ಮನಸ್ಸು ವಿಕಾರಕ್ಕೆ ಪರವಶವಾಗುವದು. ಇದು ವಿದ್ಯಾರ್ಥಿಗಳಿಗೆಂದೂ ಆಗಬಾರದು. ಮೇಲೆ ಹೇಳಿದ ವರ್ಜ್ಯವಸ್ತುಗಳಲ್ಲಿ ಸ್ತ್ರೀಯರನ್ನು ಸೇರಿಸಿರುವದನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳಬೇಕು. ಸ್ತ್ರೀಯರಿಗೆ ಪುರುಷರೂ ಪುರುಷರಿಗೆ ಸ್ತ್ರೀಯರೂ ವಿಕಾರಕಾರಕವಸ್ತುಗಳು. ಆದ್ದರಿಂದ ಹುಡುಗರೂ ಹುಡುಗಿಯರೂ ಕೂಡಿ ಕಲಿಯುವದು ನಮ್ಮ ಸಂಸ್ಕೃತಿಗೆ ಸಮ್ಮತವಲ್ಲ. ಇದರಿಂದ ಪುರುಷರಿಗೂ ಹಾನಿ; ಸ್ತ್ರೀಯರಿಗೂ ಹಾನಿ. ಸುಗಂಧದ್ರವ್ಯಗಳು, ಹೂವಿನ ಹಾರ, ಹೆಜ್ಜಿನ ಸೀರ ಕಾರ—ಮೊದಲಾದವು ಇವುಗಳಿಂದಾಗಬಹುದಾದ ಪರಿಣಾಮಕ್ಕೇ ಹೆದರಿದ ನಮ್ಮ ಪೂರ್ವಿಕರು ವಿದ್ಯಾರ್ಥಿಗಳಿಗೆ ಸ್ತ್ರೀಯರು ವರ್ಜ್ಯವೆಂದು ಹೇಳಿದ್ದೇನು ದೊಡ್ಡಮಾತು! ಸ್ತ್ರೀಯರಿಗೆ ಪುರುಷರು ವರ್ಜ್ಯರು; ಪುರುಷರಿಗೆ ಸ್ತ್ರೀಯರು ವರ್ಜ್ಯರು. ಸ್ತ್ರೀಯರು ವರ್ಜ್ಯರೆಂಬ ಮಾತಿಗೆ ಪುರುಷರು ಸ್ತ್ರೀಯರೊಡನೆ ಕಲೆಯಬಾರದೆಂದು ಅರ್ಥವನ್ನು ಮಾಡಿದ್ದು ಈಗಿನ ಇಂಗ್ಲಿಷು ಶಾಲೆಗಳ ಪದ್ಧತಿಯನ್ನು ನೋಡಿದ್ದರಿಂದ ಬಂದದ್ದು. ಮನುಸ್ಮೃತಿಗೆ ಅರ್ಥವನ್ನು ಬರೆದಿರುವ ಕುಲ್ಲೂಕಭಟ್ಟರು "ಸ್ತ್ರೀಯರು ವರ್ಜ್ಯ"ವೆಂದರೆ ವಿದ್ಯಾರ್ಥಿಯು ಮದುವೆಯಾಗಬಾರದೆಂದು ಅರ್ಥವನ್ನು ಮಾಡಿದ್ದಾರೆ. ಏಕೆಂದರೆ ಹಿಂದೆ ವಿದ್ಯಾರ್ಥಿಗೆ ಗುರುಕುಲವಾಸವನ್ನು ಮುಗಿಸಿದ ಮೇಲೆಯೇ ಮದುವೆ. ಆದ್ದರಿಂದ ಆಗಿನ ಕಾಲಕ್ಕೆ ಇಷ್ಟೇ ಅರ್ಥವು ಸಾಕಾಗಿತ್ತು. ಏಕೆಂದರೆ ಕೂಡಿಕಲಿಯುವ ಪದ್ಧತಿ ಇರಲಿಲ್ಲ. ಈಗಿನ ಕಾಲದಲ್ಲಿ ಕೂಡಿ ಕಲಿಯುವ ಪದ್ಧತಿ ಹೊಸದಾಗಿ ಬಂದಿದೆ. ಇದರ ಜೊತೆಗೆ ಹಳೆಯದೂ ಇದ್ದೇ ಇದೆ. ಈಗ ಎಷ್ಟೋ ವಿದ್ಯಾರ್ಥಿಗಳು ಮದುವೆಯಾದವರೂ ಇರುತ್ತಾರೆ. ಮದುವೆಯಾಗುತ್ತಲೇ ವಿದ್ಯಾರ್ಥಿಯ ಅರ್ಧ ಮನಸ್ಸು ಹೆಂಡತಿಯ ಕಡೆಗೆ ಸೋರಿಯಾಗುತ್ತದೆ. ಒಂದು ಕೂಸು ಹುಟ್ಟುತ್ತಲೇ ಉಳಿದ

ಅರ್ಥದಲ್ಲರ್ಥವು ಅದರ ಪಾಲಾಗುತ್ತದೆ. ಇನ್ನುಳಿದದ್ದೆಲ್ಲಾ ಚಿಂತೆಗೆ ಕೊಳ್ಳೆಯಾಗುತ್ತದೆ ಹೀಗಾಗಿ ವಿದ್ಯಾರ್ಥಿಗೆ ತನ್ನ ಮನಸ್ಸೇ ತನ್ನ ಉಪಯೋಗಕ್ಕೆ ಇರುವದಿಲ್ಲ.

"ಸ್ತ್ರೀಣಾಂ ನಿರೀಕ್ಷಣಸ್ಪರ್ಶಸಂಲಾಪಕ್ಷ್ವೇಲನಾದಿಕಂ ।
ಪ್ರಾಣಿನೋ ಮಿಥುನೀಭೂತಾನಗೃಹಸ್ಥೋಽಗ್ರತಸ್ತ್ಯಜೇತ್ ॥"

ಎಂದು ಭಾಗವತವು ಹೇಳುತ್ತದೆ ಸ್ತ್ರೀಯರನ್ನು ನೋಡುವದು, ಮುಟ್ಟುವದು, ಮಾತಾಡುವದು ಮತ್ತು ಆಡುವದು ಕೂಡ ಕೆಟ್ಟದ್ದು. ಪರಾಶರರು ಮತ್ಸ್ಯೋದರಿಯೊಡನೆ ಮಾತುಕಥೆಗಳಾಡಿ ಅನರ್ಥವನ್ನು ಪಡೆದರು. ಗಂಡುಹೆಣ್ಣುಪ್ರಾಣಿಗಳ ಸಂಯೋಗವನ್ನು ಕೂಡ ನೋಡಬಾರದು. ಮೀನುಗಳ ಸಂಯೋಗವನ್ನು ನೋಡಿ ಸೌಭರಿಋಷಿಯು ತನ್ನ ತಪಸ್ಸನ್ನೆಲ್ಲ ಕಳೆದುಕೊಂಡನಂತೆ. ಆದ್ದರಿಂದ ವಿದ್ಯಾರ್ಥಿಯು ತನ್ನ ಗುರುಕುಲವಾಸಕಾಲದಲ್ಲಿ ಮದುವೆಗೂ ಮನಸ್ಸು ಕೊಡಬಾರದು. ವಿದ್ಯಾಭ್ಯಾಸದ ಕಾಲವು ದೇವರನ್ನು ಪಡೆಯುವ ತಪಶ್ಚರ್ಯೆಯ ಕಾಲದಂಥದ್ದು. ದೇವರನ್ನು ಪಡೆಯುವದೂ ಅದಕ್ಕೆ ಸಾಧನವಾಗಿ ಜಗತ್ತಿನ ಹಣೆಯ ಬರಹವನ್ನು ತಿಳಿಯುವದಕ್ಕೆ ಜಗತ್ತಿನ ಸ್ವರೂಪ ಮೊದಲಾದವುಗಳನ್ನು ಕುರಿತ ವಿಚಾರದೊಡನೆ ದೇವರ ವಿಚಾರವನ್ನು ತಿಳಿಯುತ್ತಿರುವದೂ ಎರಡೂ ಒಂದೇ. ದೇವರಿಗಾಗಿ ತಪಶ್ಚರ್ಯೆಯನ್ನು ಮಾಡುವ ಕಾಲದಲ್ಲಿರಬೇಕಾದ ಸ್ಥಿತಿಯನ್ನು ಹೇಳುವಾಗ ಭಾಗವತಕಾರರು "ನ ಸ್ಪೃಶೇದ್ದಾರವೀಮಪಿ" ಎಂದು ಹೇಳಿದ್ದಾರೆ. ಮರದಿಂದ ಮಾಡಿದ ಸ್ತ್ರೀಯನ್ನು ಕೂಡ ಮುಟ್ಟಬಾರದೆಂದರ್ಥ. ಅದನ್ನು ವಿದ್ಯಾರ್ಥಿವೃತ್ತಿಗೂ ಅನ್ವಯಿಸಿಕೊಳ್ಳಬಹುದು. ಈ ಮಾತಿನಿಂದ ಪೂರ್ವಿಕರು ಸ್ತ್ರೀಯರನ್ನು ತುಚ್ಛವಾಗಿ ಕಾಣುವಂಥ ಕುತ್ಸಿತರೆಂದು ಈಗಿನವರು ತಪ್ಪುತಿಳಿದುಕೊಳ್ಳುತ್ತಾರೆ. ಹಾಗೆಂದಿಗೂ ಅಲ್ಲ. ಪೂರ್ವಿಕರು ಸ್ತ್ರೀಯರನ್ನು ದೇವರೆಂದು ತಿಳಿಯುವರು. ಸ್ತ್ರೀಯರನ್ನು ಭೋಗೋಪಕರಣವಾಗಿ ತಿಳಿಯುವ ಈಗಿನವರು ಹಿಂದಿನವರ ಉದಾತ್ತವಿಚಾರವನ್ನು ಅರಿಯಲಾರರು. ಮೇಲಿನ ವಾಕ್ಯದಲ್ಲಿ ಯಾರ ತುಚ್ಛತೆಯ ಪ್ರಶ್ನೆಯೂ ಇಲ್ಲ. ಸಾಮಾನ್ಯವಾಗಿ ತಪಶ್ಚರ್ಯೆಯನ್ನು ಮಾಡುವವರು ಪುರುಷರೇ ಆದ್ದರಿಂದ ಅವರನ್ನು ಕುರಿತು ಅವರ

ಮನಸ್ಸು ಸ್ತ್ರೀಯರ ಕಡೆಗೆ ಹೋಗದೆ ಇರುವದಕ್ಕೆ ಹೇಳಿದ ಮಾತಾಗಿದೆ. ಸ್ತ್ರೀಯರನ್ನು ಕುರಿತು ಹೇಳಿದ್ದರೆ ಅವರು ಪುರುಷರನ್ನು ಮುಟ್ಟಬಾರದೆಂದೇ ಹೇಳುತ್ತಿದ್ದರು. ಸ್ತ್ರೀಪುರುಷರು ಒಬ್ಬರನ್ನೊಬ್ಬರು ಮುಟ್ಟಬಾರದೆಂದೇ ಅದಕ್ಕೆ ಅರ್ಥ. ಈ ಮರ್ಮವನ್ನರಿಯದೆ ಆಧುನಿಕರು ಪೂರ್ವಿಕರನ್ನು ದೂರುವದು ತಾವು ಮುಗ್ಗರಿಸಿ ಇತರರ ಮೂಸೆ ಮಣ್ಣಾಗಿರುವದೆಂದು ಹೇಳಿದ ಹಾಗಾಗುತ್ತದೆ. ಆದ್ದರಿಂದ ಸ್ತ್ರೀಯರನ್ನು ಮುಟ್ಟದೆ ಇರುವದು ತುಚ್ಛಬುದ್ಧಿಯಿಂದಲೆಂದು ತಿಳಿಯದೆ ಪೂಜ್ಯಬುದ್ಧಿಯಿಂದಲೆಂದು ತಿಳಿಯಬೇಕು.

## ನಿತ್ಯಕರ್ಮ.

ದೇವರ ಸೃಷ್ಟಿಯಲ್ಲಿ ಪ್ರಾತಃಕಾಲದಷ್ಟು ಪ್ರಶಸ್ತವಾದ ವಸ್ತುವಿನ್ನೊಂದಿಲ್ಲ. ಒಳ್ಳೇ ಉಷಃಕಾಲವಾಗುತ್ತಲೇ ಮನುಷ್ಯರಿಗೆಲ್ಲಾ ಸ್ವಭಾವವಾಗಿ ಎಚ್ಚರವಾಗಿಯೇ ಆಗುವದು. ಆದರೆ ಜನರು ತಮ್ಮಲ್ಲಿರುವ ಜಡತ್ವದಿಂದ ಹೊತ್ತೇರುವವರೆಗೂ ಹಾಸಿಗೆಯ ಮೇಲೆ ಹೊರಳಾಡುತ್ತ ಕನಸುಗಾಣುತ್ತಿರುವರು. ವಿವೇಕಿಯಾದವನು ಎಚ್ಚರವಾಗುತ್ತಲೇ ಎದ್ದುಬಿಡಬೇಕು. ವಿದ್ಯಾರ್ಥಿಗಳು ಈ ಅಭ್ಯಾಸವನ್ನು ಅಗತ್ಯವಾಗಿ ಮಾಡಿಯೇ ತೀರಬೇಕು. ಏಕೆಂದರೆ ಚಿಕ್ಕವರಾಗಿರುವಾಗ ಈ ಹೊತ್ತಿನಲ್ಲಿ ಮಲಗುವ ಚಟವನ್ನು ಮಾಡಿಕೊಂಡರೆ ಮುಂದೆ ಅದೇ ಪ್ರೈಯುಂಡು ಹೋಗಿ ಅವರು ಆಲಸರೇ ಆಗುತ್ತಾರೆ. ನಮ್ಮ ಪೂರ್ವದ ಬ್ರಾಹ್ಮಣ ವಿದ್ಯಾರ್ಥಿಗಳು ಆ ಉಷಃಕಾಲದಲ್ಲಿ ಎದ್ದು ಸ್ನಾನವನ್ನು ಮಾಡಿ ಸಂಧ್ಯೆಯನ್ನು ತೀರಿಸಿ ಸೂರ್ಯನು ಹುಟ್ಟುವವರೆಗೂ ಜಪವನ್ನು ಮಾಡುತ್ತಿದ್ದರೆಂದು ಉಲ್ಲೇಖಗಳಿವೆ. ಆ ಸಮಯದಲ್ಲಿ ಬ್ರಾಹ್ಮಣರು ತಮ್ಮ ವರ್ಣಾಶ್ರಮಪದ್ಧತಿಯಂತೆ ತಮ್ಮ ಸಂಧ್ಯೆಯನ್ನು ಮಾಡಿಕೊಂಡರೆ ಉಳಿದವರು ತಮ್ಮ ಪದ್ಧತಿಯಂತೆ ತಾವು ಮಾಡಿಕೊಳ್ಳುವದು ಶ್ರೇಯಸ್ಕರವಾದದ್ದು. ಆ ಉಷಃಕಾಲವು ಅತ್ಯಂತಪವಿತ್ರವಾದದ್ದು. ಎಲ್ಲೆಲ್ಲಿಯೂ ಶಾಂತತೆಯು ತುಂಬಿ ತುಳುಕುತ್ತಿರುವದು. ಗಾಳಿಯು ಅತ್ಯಂತಶುದ್ಧವಾಗಿ ಬೀಸುತ್ತಿರುವದು. ಆ ವಾಯುವನ್ನು ಉಚ್ಛ್ವಾಸಕ್ಕೆ ತೆಗೆದುಕೊಳ್ಳುವ

ದರಿಂದ ಮನುಷ್ಯನ ಆರೋಗ್ಯವು ಅಭಿವೃದ್ಧಿಯಾಗುವದು. ಅದರಿಂದ ಮನುಷ್ಯನ ಮನಸ್ಸು ಪರಮಾವಧಿಯ ಪ್ರಸನ್ನತೆಯನ್ನು ಪಡೆಯುವದು. ಇಂಥ ಸುಸಂಧಿಯನ್ನು ಕಳೆದುಕೊಳ್ಳುವದು ಎಂಥ ದುರ್ದೈವ! ಉದಯ ಕಾಲದಲ್ಲಿ ಮಲಗಿರುವವನನ್ನು ಲಕ್ಷ್ಮಿಯು ತೊರೆಯುವಳೆಂದು ನೀತಿ ಶಾಸ್ತ್ರಕಾರರು ಹೇಳುವರು. ಪಶುಪಕ್ಷಿಗಳು ಕೂಡ ಈ ಸುಸಮಯದಲ್ಲಿ ಒಳ್ಳೇ ಚಟುವಟಿಕೆಯನ್ನು ತೋರಿಸುವವು. ಗಡಿಯಾರವನ್ನು ನೋಡಿ ಹೊತ್ತನ್ನು ತಿಳಿದುಕೊಳ್ಳುವದಕ್ಕೆ ಬರದೆ ಇರುವ ಕೋಳಿಯು ಕೂಡ ಉಷಃಕಾಲಕ್ಕೆ ಸರಿಯಾಗಿ ಕೂಗಿಯೇ ತೀರುವದು. ಗಡಿಯಾರದ ಅಲಾರಮಿನ ಉರುಮೆಯಿಂದ ಕಿವಿ ಕಿವುಡಾದರೂ ಕುಂಭಕರ್ಣನೊಡನೆ ಐಕ್ಯ ಸುಖಾನುಭವವನ್ನು ಮಾಡುತ್ತಿರುವ ಮನುಷ್ಯರನ್ನೇನೆನ್ನಬೇಕು! ಆ ಕಾಲದಲ್ಲಿ ಬರೀ ಕೋಳಿಯೊಂದೇ ಅಲ್ಲ; ಹಕ್ಕಿಗಳೆಲ್ಲಾ ಒಮ್ಮೆಗೇ ಚಿಲಿಪಿಲಿಗುಟ್ಟುವದಕ್ಕಾರಂಭಿಸುವವು. ಅದ್ದರಿಂದ ಮನುಷ್ಯನು ಈಹೊತ್ತನ್ನು ಉಪೇಕ್ಷೆ ಮಾಡಬಾರದು.

ಈ ಹೊತ್ತಿನಲ್ಲಿ ಎದ್ದು ಪ್ರತಿದಿನವೂ ಮಾಡಬೇಕಾದ ಕೆಲಸವೇನೆಂಬುದನ್ನು ಮನುಷ್ಯನು ಅರಿಸಿಕೊಳ್ಳಬೇಕು. ಈ ಕಾಲವು ಬಹು ಪ್ರಶಸ್ತವಾದ್ದರಿಂದ ಈ ಕಾಲದಲ್ಲಿ ಮಾಡತಕ್ಕ ಕೆಲಸವೂ ಅಷ್ಟೇ ಪ್ರಶಸ್ತವಾದದ್ದಾಗಿರಬೇಕು. ಕ್ಷುದ್ರಕಾರ್ಯಗಳಿಗೆ ಈ ಸಮಯವನ್ನು ಉಪಯೋಗಮಾಡಿಕೊಳ್ಳಬಾರದು. ಮನುಷ್ಯನಿಗೆ ಪ್ರಶಸ್ತವಾದದ್ದು ದೇವರ ಧ್ಯಾನ. ಆದ್ದರಿಂದ ಅದಕ್ಕೇ ಈ ಹೊತ್ತನ್ನು ಮೀಸಲಾಗಿ ಮಾಡಿಕೊಳ್ಳುವದುತ್ತಮ. ಇನ್ನು ಉಳಿದ ವಿದ್ಯಾವ್ಯಾಸಂಗದ ಅವಶ್ಯಕತೆ ಹೆಚ್ಚಾಗಿ ತೋರಿದರೆ ಈ ಸಮಯದಲ್ಲಿ ಅದನ್ನಾದರೂ ಮಾಡಬಹುದು. ಆದರೆ ಆ ವ್ಯಾಸಂಗವನ್ನು ಮಾಡುವದಕ್ಕೆ ಅಗತ್ಯವಾದಷ್ಟು ಕಾಲವನ್ನು ಉಪಯೋಗಮಾಡಿಕೊಂಡು ಕೆಲವು ಹೊತ್ತನ್ನಾದರೂ ದೇವರ ವಿಚಾರಕ್ಕೆ ಕೊಟ್ಟೇ ತೀರಬೇಕು. ಆ ದೇವರ ಸ್ಮರಣೆಯಲ್ಲಿ ನಮ್ಮ ಕಲ್ಪನೆಗಳೇನೇನಿರಬೇಕೊ ಅವುಗಳನ್ನೊಳಕೊಂಡ ಎರಡು ಹಾಡುಗಳು ಕೆಳಗಿರುವವು. ಇವುಗಳ ಅರ್ಥವನ್ನು ಭಾವಿಸುತ್ತ ರಾಗವಾಗಿ ಹಾಡಿ ಕ್ಷಣ ಕಾಲವಾದರೂ ತಾನು ತನ್ನನ್ನು ದೇವರ ಪಾದದ ಮೇಲೆ ಹಾಕಿಕೊಳ್ಳಬೇಕು.

ರಾಗ— ಬಿಲಹರಿ. ಅಟತಾಳ.

( ಬೆಳಗಾಯಿತೇಳೊ ಮುರಾರಿ— ಎಂಬಂತೆ )

ದೇವ, ನಿನ್ನುಪಕಾರವನ್ನು । ನಾನು ।
ಭಾವಿಸಲಳವೆ ನೀ ತೋರೆದ ರೀತಿಯನು ॥ ಪ ॥

ಮರೆತು ಪ್ರಪಂಚವನೆಲ್ಲ । ಮುಕ್ತಿ ।
ತೊರೆದು ಬಿಟ್ಟಿದ್ದೆನು ಕರ್ಮದ ಸೊಲ್ಲ ॥
ಬರಿ ಅಜ್ಞಾನದೊಳಿದ್ದೆನಲ್ಲ ! ಜಪು ।
ಕರುಣದೊಳೆನ್ನನೆಚ್ಚರಿಸಿದೆ ನಲ್ಲ, ॥ ೧ ॥

ಜೀವದಿಂದಿದ್ದರೂ ನಾನು । ನನ್ನ ।
ಜೀವದರಿವ ಬಿಟ್ಟಂತಾದೆನಿನ್ನೇನು ॥
ಈ ವಿಧದನುಭತ್ವವನ್ನು । ದೇವ ।
ದೇವನೆ ಕಳೆದು ರಕ್ಷಿಸಿದೆ ನನ್ನನ್ನು ॥ ೨ ॥

ತಂದೆತಾಯ್ಗಳು ಬಂಧುಬಳಗ । ನಿದ್ರೆ ।
ಯುಂದ ವ್ಯಾಮರೆತಿರೆ ನೀನೊಬ್ಬನಾಗ ॥
ಬಂದಾಪತ್ತುಗಳ ವಿಯೋಗ । ಗೈದು ।
ಕಂದನಂದದೊಳೆನ್ನ ಕಾಯ್ದು ನೀ ಬೇಗ ॥ ೩ ॥

ಪಿತನಾದ ನಿನ್ನ ಸೇವೆಯನು । ಮಾನ ।
ವತಿಯಾದ ಭೂಮಾತೆಯುಳಿಗವನ್ನು ॥
ಮತಿಗೆಟ್ಟು ಬಿಟ್ಟಿದ್ದವನನು । ನಿದಾ ।
ಸ್ಥಿತಿಯಿಂದೆಚ್ಚರಿಸಿದೆ ಪೇಳಲಿನ್ನೇನು ॥ ೪ ॥

ಮರೆತಿದ್ದ ತಿಳಿವುಗಳೆಲ್ಲ । ಮತ್ತೆ ।
ಸ್ಮರಣೆಗೆ ಬರುವಂತೆ ಗೆಯ್ದುಕೊಯಲ್ಲ ॥
ಶರಣೆಂದು ಪೇಳ್ವರನೆಲ್ಲ । ಬಂದು ।
ಪೊರೆವ ಮಹಾತ್ಮ ನಿನ್ನಯ ಹೊರತಿಲ್ಲ ॥ ೫ ॥

ರಾಗ-ಭೂಪಾಳಿ. ಝಂಪೆತಾಳ.

( ಏಳಯ್ಯ ಹರಿಯೆ ಬೇಗ—ಎಂಬಂತೆ )

ಕೃಪೆ ಮಾಡೊ ನನ್ನ ಮೇಲೆ ॥ ಪ ॥
ಕೃಪೆದೋರೊ ಈ ಜನ್ಮ ಸಫಲವೆನಿಸೆ ಜಗದಲ್ಲಿ ।
ಸುಪವಿತ್ರವಾಗುವಂತೆ ದೇವಾ ॥ ಅ. ಪ ॥

ನಲ ಯುಧಿಷ್ಠಿರ ಜನಕ ಮೊದಲಾದ ನೃಪತಿಗಳು ।
ಸಲಹಿದೀ ಧರಣಿಗೆ ಸುಪುತ್ರನೆನಿಸಿ ॥
ನಲಿವಿಂದ ಸರ್ವಸದ್ಗುಣಿಯಾಗಿ ಭರತಭೂ ।
ಲಲನೆಯನು ಸಂತೋಷಗೊಳಿಸುತಿರುವಂತೆ ॥ ೧ ॥

ಅರಿಯುಲ್ಪ ತತ್ತ್ವಮಂ ಒಲಿವಾತ್ಮಸಹನುಮಂತ ।
ನೆರೆ ವಿಭೀಷಣಕೃಪರು ಪರಶುರಾಮ ॥
ಮೆರೆವ ಮಾರ್ಕಂಡೇಯರಂತೆ ಸತ್ಕೀರ್ತಿಯಲಿ ।
ಚಿರಜೀವಿಯಾಗಿ ನಾ ಬಾಳುತಿರುವಂತೆ ॥ ೨ ॥

ಧರೆಯೊಳಗಹಲ್ಯೆ ದ್ರೌಪದಿ ಸೀತೆ ತಾರೆ ಮೇ ।
ಲೆಯು ಮಂಡೋದರಿಯು ನೆನಪುಗೊಡುವ ॥
ವರಪತಿವ್ರತೆಯರನು ಪಡೆಯುತೆ ಮಹಾತ್ಮರನು ।
ನೆರೆ ಹೊಂದಿ ಚಿರಸುಖವನನುಭವಿಸುವಂತೆ ॥ ೩ ॥

ಈ ಪ್ರಾರ್ಥನೆಯನ್ನು ಮಾಡಿ ಒಡನೆ ಸ್ನಾನವನ್ನು ಮಾಡಬೇಕು. ನಿದ್ರಾಕಾಲದಲ್ಲಿ ಮನುಷ್ಯನು ಎಚ್ಚರವಿಲ್ಲದಂತೆ ಬಿದ್ದಿರುತ್ತಾನೆ. ಅಭಿಜ್ಞರು ಇದನ್ನೊಂದು ಅಮಂಗಲವೆಂದು ಭಾವಿಸುತ್ತಾರೆ. ಏಕೆಂದರೆ ಸರ್ವಮಂಗಲಗಳಿಗೂ ಮೂಲವಾದದ್ದು ಜ್ಞಾನ. ನಿದ್ರೆಯಲ್ಲಿ ಅದಕ್ಕೇ ಸಂಚಕಾರವು ಬಂದಿರುತ್ತದೆ. ಈ ಅಶುಚಿಯ ಜೊತೆಗೆ ಇನ್ನೊಂದೇನೆಂದರೆ ನಿದ್ರೆಯ ಜಾಡ್ಯವು ಇಸ್ನಾ ಮೈಯನ್ನೆಲ್ಲಾ ವ್ಯಾಪಿಸಿಕೊಂಡಿರುತ್ತದೆ. ಅದಕ್ಕೆ ಉತ್ತಮವಾದ ಔಷಧವು ಸ್ನಾನ. ಸ್ನಾನದಿಂದ ಎಲ್ಲ ಇಂದ್ರಿಯಗಳೂ ಒಳ್ಳೇ ಚಟುವಟಿಕೆಯುಳ್ಳವುಗಳಾಗುತ್ತವೆ. ಸ್ನಾನ

ವಾದ ಮೇಲೆ ವರ್ಣಾಶ್ರಮೋಚಿತವಾದ ಕರ್ಮವನ್ನು ಮಾಡಿ ಆಮೇಲೆ ವ್ಯಾಸಂಗದಲ್ಲಿ ತೊಡಗಬಹುದು.

ಸಂಧಿಕಾಲವೆಲ್ಲಾ ಬಹು ಪ್ರಶಸ್ತವಾದವುಗಳೆಂದು ಕಂಡುಹಿಡಿದು ನಮ್ಮ ಪೂರ್ವಿಕರು ಆ ಸಂಧಿಕಾಲಗಳಲ್ಲಿ "ಸಂಧ್ಯಾ" ಎಂಬ ಒಂದು ಕರ್ಮವನ್ನು ದ್ವಿಜರಿಗೆ ಗೊತ್ತುಮಾಡಿದ್ದಾರೆ. ಉಳಿದವರು ಕೂಡ ಈ ಸಂಧಿಕಾಲಗಳ ಪ್ರಯೋಜನವನ್ನು ಕಳೆದುಕೊಳ್ಳಬಾರದು. ಈ ಸಂಧಿಕಾಲಗಳು ಮುಖ್ಯವಾಗಿ ಮೂರು— ರಾತ್ರಿ ಹೋಗಿ ಹಗಲು ಬರುವ ಸಂಧಿಕಾಲ ಒಂದು; ಸೂರ್ಯನು ಆಕಾಶದಲ್ಲಿ ಏರುವ ಕಾಲ ಹೋಗಿ ಇಳಿಯುವ ಕಾಲ ಒಂದು; ಹಗಲು ಹೋಗಿ ರಾತ್ರಿ ಬರುವ ಕಾಲ ಒಂದು. ಈ ಮೂರು ಸಂಧ್ಯಾಕಾಲಗಳಲ್ಲಿಯೂ ಪ್ರತಿಯೊಬ್ಬರೂ ತಮ್ಮ ತಮ್ಮ ಇಷ್ಟದೇವತೆಯ ಸಂಬಂಧವಾದ ಜಪವನ್ನು ಮಾಡುವದೊಳ್ಳೆಯದು. ಇದರಿಂದ ತನ್ನ ಅಭಿವೃದ್ಧಿಗೆ ಇರುವ ಪ್ರತಿಬಂಧವು ಕ್ಷೀಣವಾಗಿ ಮನಸ್ಸಿನ ಮೇಲೆ ಉತ್ತಮವಾದ ಸಂಸ್ಕಾರ ಉಂಟಾಗಿ ಶಾಂತತೆ ತಲೆದೋರುವದು.

ಈ ಸಂಧಿಕಾಲಗಳ ಹೊರತು ಉಳಿದ ಕಾಲಗಳಲ್ಲಿ ವಿದ್ಯಾರ್ಥಿಯು ವಿದ್ಯಾವ್ಯಾಸಂಗವನ್ನೂ ಗುರುಸೇವೆಯನ್ನೂ ಮಾಡುತ್ತಿರಬೇಕು. ಹಿಂದಿನ ಕಾಲದಲ್ಲಿ ವಿದ್ಯಾರ್ಥಿಗಳು ಗುರುಗಳ ಮನೆಯಲ್ಲಿಯೇ ಇರುತ್ತಿದ್ದಾಗ ಬ್ರಾಹ್ಮಣವಿದ್ಯಾರ್ಥಿಗಳು ಮಾಧುಕರಿಯನ್ನು ಮಾಡುತ್ತಿದ್ದಂತೆಯೂ ಉಲ್ಲೇಖಗಳು ದೊರೆಯುತ್ತವೆ; ಉಪಾಧ್ಯಾಯರು ತಮ್ಮ ವಿದ್ಯಾಪ್ರಭಾವದಿಂದ ಪಡೆಯುತ್ತಿದ್ದ ಸಂಭಾವನೆಯ ಬಲದಿಂದಲೋ ಅಥವಾ ವಿದ್ಯಾಭಿಮಾನಿಗಳಾದ ರಾಜರ ಅಥವಾ ಪ್ರಜಾಪ್ರಮುಖರ ಸಹಾಯದಿಂದಲೋ ವಿದ್ಯಾರ್ಥಿಗಳ ಮತ್ತು ಉಪಾಧ್ಯಾಯರ ಜೀವನಯಾತ್ರೆ ನಡೆಯುತ್ತಿದ್ದಂತೆಯೂ ತೋರುತ್ತದೆ.

ರಾತ್ರಿಯಲ್ಲಿ ಮಲಗುವದಕ್ಕೆ ಮುಂಚೆಯೂ ಏಳುವಾಗ ಹೇಗೋ ಹಾಗೆ ದೇವರ ಕಲ್ಪನೆಯನ್ನು ತಂದುಕೊಂಡು ಆ ದಿನದ ತನ್ನ ದೋಷಗಳನ್ನೆಲ್ಲಾ ತಾನೇ ಪರೀಕ್ಷಿಸಿ ಅವುಗಳನ್ನು ದೇವರ ಮುಂದಿಟ್ಟು ಕ್ಷಮೆಯನ್ನು ಬೇಡಬೇಕು. ಇದಕ್ಕೆ ಸಾಧಕವಾದ ಪದ್ಯಗಳು ಕೆಳಗಿವೆ—

ರಾಗ— ಮುಖಾರಿ.　　ಝಂಪೆ ತಾಳ.

( ನಂಬದಿರು ಈ ದೇಹ ನಿತ್ಯವಲ್ಲ — ಎಂಬಂತೆ )

ಮನ್ನಿಸೆನ್ನಯ ತಪ್ಪನೆಲ್ಲ ಈಗ ।
ಮಾನ್ಯನೇ ಶರಣು ಬಂದಿಹೆ ಕಾಯೊ ಬೇಗ ॥ ಪ ॥

ಎಲ್ಲ ಜನಗಳ ಹೃದಯದಲ್ಲಿ ನೀನೇ ಇದ್ದು ।
ಎಲ್ಲವನು ಮಾಡಿಸುವೆಯೆಂಬುದನ್ನು ॥
ಬಲ್ಲೆನಾದೊಡಮೀಗಳದನು ನನ್ನಯ ಕಾರ್ಯ ।
ದಲ್ಲಿ ತೋರಿಸಲಿಲ್ಲ ದೇವ ಇನ್ನೂ ॥ ೧ ॥

ದುಂದುಗಾರಿಕೆ ಸಿಂದ್ಯವೆಂಬುದಲ್ಲದೆ ನಿನ್ನ ।
ಸುಂದರಪದಂಗಳೇ ವಂದ್ಯವೆಂದು ॥
ಸಂದೇಹವೆಳ್ಳಷ್ಟುಮಿಲ್ಲದೊಡಮದ ಮನಕೆ ।
ತಂದುಕೊಳ್ಳದೆ ಹೋದೆ ದೇವ ಇಂದು ॥ ೨ ॥

ಹಿರಿಯರಾಚರಣೆಯನು ಬಿಟ್ಟು ಮನಬಂದಂತೆ ।
ಪರಧರ್ಮಕೇ ಮನವ ಸೂರೆಗೊಟ್ಟು ॥
ಸೊರಗಿರುವೆನಯ್ಯ ಮತಿಗೆಟ್ಟು ಬಹುಪರಿಯೊಳದ ।
ಕಿರುಗಿಸೋ ದೇವ ಎನ್ನೊಳಗೆ ದಯವಿಟ್ಟು ॥ ೩ ॥

ಪಾಪವೆನ್ನಿಂದಾಗಬಾರದೆಂದೆನುತ ಬಹು ।
ರೂಪದಲಿ ಯತ್ನಗೆಯ್ದರೂ ಎನ್ನ ತಂದೆ ॥
ಆ ಪರಿಯು ಸಿದ್ಧಿಸದ ಕಾರಣದಿ ನಾ ನಿನ್ನ ।
ನೀ ಪರಿಯೊಳಗೆ ಬೇಡಿಕೊಳ್ಳಸೆಂದೇ ॥ ೪ ॥

ಸರ್ವವನು ನಿನಗೊಪ್ಪಿಸುವೆನು ದೇವನೆ ಎನ್ನ ।
ಗರ್ವವನು ಕಳೆದು ನಿನ್ನುದರದೊಳಗೆ ॥
ಸರ್ವೇಶನೇ ಸ್ಥಲವ ಕೊಟ್ಟು ಕಾಪಾಡಯ್ಯ ।
ಉರ್ವಿಯೊಳು ನೀನೇ ಮಹಾತ್ಮನೆನಗೆ ॥ ೫ ॥

ರಾಗ—ಶಂಕರಾಭರಣ. ಆದಿತಾಳ.

( ಈ ಜೀವ ಈ ದೇಹದೊಳಿದ್ದು ಫಲವೇನು— ಎಂಬಂತೆ )

ಈ ದುಃಖವೆನಗೆ ಬರಗೊಡಬೇಡ ದೇವ ।
ಆದರದೊಳಿರುವೆನೊ ನೀನೆನ್ನ ಜೀವ ॥ ಪ ॥

ದಿನದಿನವು ಮಲಗಿದೊಡನೆಯು ಸಮ್ಮನಾವರಿಸಿ ।
ಕನಸುಗಳು ಬಂದು ಕಂಗೆಡಿಸುತಿಹವು ॥
ವನಜಲೋಚನನೆ ಒರಬಯಲ ಸುಖದುಃಖಗಳು ।
ನೆನೆಯಲಸದಳವಾಗಿ ತೋರಿ ಬಾಧಿಪ್ಪವು ॥ ೧ ॥

ನಿದ್ರೆಯಿಂದಾನಂದವೆಂದು ನಾ ವಿಷಯಗಳ ।
ಸುದ್ದಿಯನು ಬಿಟ್ಟರೂ ತಾವಾಗಿಯೇ ॥
ಬಿದ್ದೆನ್ನ ಮೇಲೆ ನಿದ್ರೆಯು ಕೆಡಿಸುತೆನ್ನನ್ನು ।
ಮುದ್ದು ಮಾಡುತ್ತ ಬೇಸರಗೊಳಿಪುವಯ್ಯ ॥ ೨ ॥

ರಾಮಷಣ್ಮುಖರು ಹನುಮಂತಗರುಡರು ಮತ್ತೆ ।
ಭೀಮನಂಥವರ ಕುಲದವನು ನಾನು ॥
ಈ ಮಹಾದುಃಸ್ಥಿತಿಯೊಳಿರ್ಪೆನು ಮಹಾತ್ಮನೇ ।
ಸ್ವಾಮಿ ಮಾಡೆನ್ನ ಕುಲಕನುರೂಪನನ್ನು ॥ ೩ ॥

## ಊಟ.

ವಿದ್ಯಾರ್ಥಿಯು ಊಟದ ವಿಷಯದಲ್ಲಿ ಕೂಡ ಕೆಲವು ವಿಷಯಗಳನ್ನು ತಿಳಿದುಕೊಳ್ಳಬೇಕಾಗಿದೆ. ಸಾಮಾನ್ಯವಾಗಿ ಯಾವ ಪದಾರ್ಥಗಳನ್ನು ತಿಂದರೆ ನಿದ್ರೆ ಬರುವದೊ ಅಥವಾ ಯಾವ ಪದಾರ್ಥಗಳನ್ನು ತಿಂದರೆ ಒಮ್ಮೆಗೇ ಹುರುಪು ಬಂದಂತಾಗುವದೊ ಅಂಥ ಪದಾರ್ಥಗಳನ್ನು ವಿದ್ಯಾರ್ಥಿಯು ಸೇವಿಸಬಾರದು. ತಿಂದ ಪದಾರ್ಥಗಳು ಆಗಾಗಲೇ ಅರಗಿ ಹೋಗುವದರಿಂದ ಅದರ ಬಾಧಕವೇನೆಂದು ತೋರಬಹುದು. ತಿಂದ ಪದಾರ್ಥಗಳು ಅರಗುವದಕ್ಕೆ ಮುಂಚೆ ತಮ್ಮ ಗುಣವನ್ನೆಲ್ಲಾ ನಮ್ಮಲ್ಲಿಟ್ಟು ಹೋಗುವವು. ನಾವು ಉಂಡ ಊಟದ ಒಂದು ಭಾಗವು

ನಮ್ಮ ಮಾಂಸವಾಗುವದು. ನಾವು ಊಟವನ್ನೇ ಬಿಟ್ಟರೆ ಅಥವಾ ಊಟವನ್ನು ಕಡಿಮೆ ಮಾಡಿದರೆ ಸೊರಗುವದರಿಂದಲೇ ಅದನ್ನು ಗೊತ್ತುಮಾಡಿಕೊಳ್ಳ ಬಹುದು. ಯಾವದು ನಮ್ಮ ದೇಹದ ಒಂದಂಗವಾಗಿ ಉಳಿದುಕೊಳ್ಳುವದೊ ಅದು ಉತ್ತಮಪದಾರ್ಥವಾಗಿರಬೇಕೆಂದು ನಾವು ಬಯಸುವದು ಯೋಗ್ಯವಾಗಿದೆ. ಆದ್ದರಿಂದ ಆಹಾರವು ಪರಿಣಾಮದಲ್ಲಿ ಒಳ್ಳೇದನ್ನು ಮಾಡುವಂಥದ್ದೇ ಆಗಿರಬೇಕು.

ಊಟದ ವಿಷಯದಲ್ಲಿ ಲಕ್ಷ್ಯವನ್ನು ಕೊಡಬೇಕೆಂಬದಕ್ಕೆ ಅದು ಮಾಂಸವಾಗುವದೆಂಬುದೊಂದೇ ಕಾರಣವಲ್ಲ. ಹಾಗಿದ್ದರೆ ಅದನ್ನು ನಮ್ಮವರು ಹೇಳುತ್ತಲೇ ಇರಲಿಲ್ಲ. ಮಾಂಸದಿಂದ ಮಾಂಸವಾಗುವದು ಹೆಚ್ಚು. ಆದ್ದರಿಂದ ಶರೀರದ ಮಾಂಸವು ಬೆಳೆಯಬೇಕೆಂಬುದೇ ನಮ್ಮ ಇಷ್ಟಾರ್ಥವಾದರೆ ಮಾಂಸಾಹಾರವನ್ನು ಮಾಡುವದು ಯೋಗ್ಯವಾಗುವದು. ನಮ್ಮ ಸಂಸ್ಕೃತಿಯು ಮಾಂಸಾಹಾರವನ್ನು ನಿಷೇಧಿಸುವದು. ಇದಕ್ಕೆ ಕಾರಣವೇನೆಂದರೆ ಮಾಂಸವು ಬುದ್ಧಿಯ ತೀಕ್ಷ್ಣತೆಯನ್ನು ಕಡಿಮೆ ಮಾಡುವದು. ನಮ್ಮ ಊಟದ ಒಂದು ಭಾಗವು ಮಾಂಸವಾಗುವದಷ್ಟೆ. ಅದಕ್ಕಿಂತ ಸೂಕ್ಷ್ಮಭಾಗವು ಮನಸ್ಸಾಗುವದು. ಹೀಗೆ ಆಹಾರದಿಂದ ಮನಸ್ಸಾಗುವದರಿಂದ ಆ ಪದಾರ್ಥವು ಅತ್ಯಂತಶುದ್ಧವಾಗಿರಬೇಕಾಯಿತು. ಈ ಕಾರಣದಿಂದಲೇ ನಮ್ಮ ಶಾಸ್ತ್ರಕಾರರು ಸಮಾನ ಸಂಸ್ಕೃತಿಯವರಲ್ಲಿ ಹೊರತು ಕೀಳಾದ ಸಂಸ್ಕೃತಿಯವರಲ್ಲಿ ಊಟವನ್ನು ಮಾಡಬಾರದೆಂಬ ನಿಯಮವನ್ನು ಮಾಡಿದ್ದಾರೆ. ಆ ಊಟದಿಂದ ಮನಃಸ್ಥಿತಿ ಕೆಟ್ಟೀತೆಂಬ ಹೆದರಿಕೆಯೇ ಇದಕ್ಕೆ ಕಾರಣ. ಮನಸ್ಸಿನ ಪರಿಶುದ್ಧತೆಯನ್ನು ರಕ್ಷಿಸಿಕೊಳ್ಳಲಪೇಕ್ಷಿಸುವವರು ತಮ್ಮ ಆಹಾರಪದಾರ್ಥದಲ್ಲಿ ಎಳ್ಳಷ್ಟು ದೋಷವನ್ನೂ ಸಹನೆ ಮಾಡುವದಿಲ್ಲ. ಒಂದೂರಿನಲ್ಲಿ ಒಬ್ಬ ಸಂನ್ಯಾಸಿಯು ತನ್ನ ಮನಸ್ಸಿನ ವೃತ್ತಿಯನ್ನು ಚೆನ್ನಾಗಿಟ್ಟುಕೊಂಡು ಭಿಕ್ಷಾನ್ನದಿಂದ ಜೀವಿಸುತ್ತಿದ್ದನು. ಆ ಊರಿನ ಒಂದು ಮನೆಯ ಯ
ನಿಯು ಒಂದು ದಿನ ಆ ಸಂನ್ಯಾಸಿಗೆ ಉತ್ತಮವಾದ ಆಹಾ
ಕೊಟ್ಟು ಪುಣ್ಯವನ್ನು ಪಡೆದುಕೊಳ್ಳಬೇಕೆಂದು ಸಮಯವ

ತ್ತಿದ್ದಳು. ಸಮಯವನ್ನು ಕಾಯುತ್ತಿದ್ದದ್ದೇಕೆಂದರೆ ಆ ಸ್ವಾಮಿಯು ಪ್ರತಿ ದಿನವೂ ಎಲ್ಲರ ಮನೆಗೂ ಬರುತ್ತಿರಲಿಲ್ಲ. ಐದು ಮನೆಗಳಿಗಿಂತ ಹೆಚ್ಚಾಗಿ ಎಂದೂ ಹೋಗುತ್ತಲೇ ಇರಲಿಲ್ಲ. ಐದು ಮನೆಗಳಿಂದಲೂ ತನಗೆ ಸಾಕಾದಷ್ಟು ದೊರೆಯದಿದ್ದರೂ ಅಷ್ಟಕ್ಕೇ ನಿಂತುಬಿಡುತ್ತಿದ್ದನು. ಒಂದೇ ಮನೆಯಲ್ಲಿ ತನಗೆ ಬೇಕಾದಷ್ಟು ಸಿಕ್ಕಿದರೂ ಮುಂದಕ್ಕೆ ಕಾಲಿಡುತ್ತಿರಲಿಲ್ಲ. ಆದ್ದರಿಂದ ಆ ಮುದುಕಿ ಆತನು ತನ್ನ ಮನೆಗೆ ಬರುವ ದಾರಿಯನ್ನು ನೋಡುತ್ತಿದ್ದಳು. ಒಂದು ದಿನ ಆ ಸ್ವಾಮಿಯು ಆಕೆಯ ಮನೆಗೆ ಬಂದು ಭಿಕ್ಷೆಯನ್ನು ಬೇಡಿದನು. ಆ ದಿನ ಆ ಮುದುಕಿಯು ಒಂದು ಪಾತ್ರೆಯಲ್ಲಿ ಹಾಲನ್ನು ಚೆನ್ನಾಗಿ ಕಾಸಿಟ್ಟಿದ್ದಳು. ಆ ಹಾಲು ಮೇಲೆ ಮಂದವಾಗಿ ಕೆನೆಗಟ್ಟಿತ್ತು. ಪಾಪ! ಬಡಮುದುಕಿ. ಕೆನೆಯನ್ನುಳಿಸಿಕೊಂಡು ಹಾಲನ್ನು ಸ್ವಾಮಿಗಳ ಕಮಂಡಲಿಗೆ ಹಾಕಬೇಕೆಂದು ನಿಶ್ಚಯಿಸಿದಳು. ಆದರೆ ಸಾವಕಾಶವಾಗಿ ಆ ಕೆನೆಯನ್ನೆಲ್ಲಾ ಬೇರೆ ಪಾತ್ರೆಗೆ ತೆಗೆದುಕೊಂಡು ಬರೀ ಹಾಲನ್ನು ತರುವದಕ್ಕೆ ಕಾಲವಿರಲಿಲ್ಲ. ಏಕೆಂದರೆ ಮನೆಯವರು ಒಡನೆ ಭಿಕ್ಷೆಯನ್ನು ನೀಡದೆ ಇದ್ದರೆ ಆ ಸ್ವಾಮಿಗಳು ಅದಕ್ಕಾಗಿ ಕಾಯುತ್ತಿರಲಿಲ್ಲ. ಆ ದಿನ ಆ ಸ್ವಾಮಿಯವರನ್ನು ಹಾಗೇ ಕಳುಹಿಸಬಾರದೆಂದು ಆ ಮುದುಕಿಯು ಹಾಲು ಕಾಸಿದ್ದ ಪಾತ್ರೆಯನ್ನೇ ತಂದು ಕೆನೆಗೆ ತನ್ನ ಬೆಟ್ಟನ್ನು ಅಡ್ಡವಾಗಿಟ್ಟುಕೊಂಡು ಎಚ್ಚರಿಕೆಯಿಂದ ಹಾಲನ್ನೇ ಕಮಂಡಲುವಿನೊಳಕ್ಕೆ ಸುರಿಯುತ್ತಿದ್ದಳು. ಹೀಗಿರುವಾಗ ಆ ಕೆನೆ ಹೇಗೋ ನುಣುಚಿಕೊಂಡು ಕಮಂಡಲುವಿನೊಳಕ್ಕೆ ಬಿದ್ದುಬಿಟ್ಟಿತು. ಒಡನೆ ಕೆನೆ ಹೋಯಿತೆಂಬ ವಿಷಾದದಿಂದ ಆಕೆ ಚ್ ಚ್ ಚ್ ಎಂದಳು. ತತ್ಕ್ಷಣದಲ್ಲಿಯೇ ಆ ಸ್ವಾಮಿಗಳು ಆ ಹಾಲನ್ನೆಲ್ಲಾ ಅಲ್ಲಿಯೇ ಚೆಲ್ಲಿಬಿಟ್ಟರು. ಹೀಗೇಕೆಂದು ಆಕೆ ಕೇಳಲು ನಾವು ಬರೀ ಹಾಲನ್ನು ಕುಡಿಯುವರೇ ಹೊರತು ಚ್ ಚ್ ಚ್ ಕೂಡಿದಂಥದ್ದನ್ನು ಕುಡಿಯುವದಿಲ್ಲವೆಂದು ಹೇಳಿ ಸ್ವಾಮಿಗಳು ಮುಂದಿನ ಮನೆಯ ದಾರಿಯನ್ನು ಹಿಡಿದರು. ಸಮಾನಸಂಸ್ಕೃತಿಯವರ ಈ ದೋಷವೇ ಸ್ವಾಮಿಗಳಿಗೆ ಸಹನವಾಗಲಿಲ್ಲ. ವಿಷಮಸಂಸ್ಕೃತಿಯವರ ಸೇರಿಕೆಯಾದರಂತು ಇದರ ತಲೆಯನ್ನು ಮೆಟ್ಟಿ ಹಾರುವಂಥ ದೋಷನ್ನೆಷ್ಟುಂಟಾಗುತ್ತವೆ. ಕೊನೆಗೆ ಒಬ್ಬರ ಆಹಾರಪದ್ಧತಿಯು ಇನ್ನೊಬ್ಬರಿಗೆ

ಪ್ರಶಸ್ತವೆನಿಸದಿರುವದೇ ಸಾಕು. ಆದ್ದರಿಂದ ಆಹಾರದ ಶುದ್ಧತೆಯು ವಿಷಯಕ್ಕೆ ಹೆಚ್ಚು ಲಕ್ಷ್ಯವನ್ನು ಕೊಡಬೇಕು.

ಅನ್ನದಿಂದ ಮಾಂಸವಾಗುವದಂತು ಪ್ರತಿಯೊಬ್ಬರಿಗೂ ತಿಳಿದೇ ಇದೆಯಷ್ಟೆ. ಅನ್ನದಿಂದ ಮನಸ್ಸಾಗುವದೆಂಬುದು ಅಷ್ಟೇ ನಿಶ್ಚಯದ ಮಾತು. ಭೌತಿಕಶಾಸ್ತ್ರದವರು ವಸ್ತುಸ್ಥಿತಿಯನ್ನು ಪ್ರತ್ಯಕ್ಷಪ್ರಮಾಣದಿಂದ ತಿಳಿಯುವಂತೆ ಅನ್ನದಿಂದ ಮನಸ್ಸಾಗುವದನ್ನೂ ನಮ್ಮ ಮಹರ್ಷಿಗಳು ಪ್ರತ್ಯಕ್ಷಪ್ರಮಾಣದಿಂದ ಕಂಡುಹಿಡಿದಿದ್ದಾರೆ. ಉದ್ದಾಲಕನೆಂಬುವನು ಶ್ವೇತಕೇತುವೆಂಬ ಮಗನಿಗೆ ಈ ಅಭಿಪ್ರಾಯವನ್ನು ಮನಗಾಣಿಸಿದ್ದಾನೆ. ಶ್ವೇತಕೇತುವಿಗೆ ಉದ್ದಾಲಕನು ಊಟಕ್ಕಿಡುವದನ್ನು ಬಿಟ್ಟನು. ಮರುದಿನವೇ ಅವನು ಸೊರಗಿದನು. ಕ್ರಮಕ್ರಮವಾಗಿ ಇಂದ್ರಿಯಗಳು ಬಲಹೀನವಾದವು. ಹೀಗೆ ಹದಿನೈದು ದಿನಗಳಾದ ಮೇಲೆ ಹಿಂದೆ ಅವನು ಕಲಿತ ವೇದಪಾಠವನ್ನು ಕೇಳಲಾಗಿ ಎಲ್ಲವೂ ಮರೆತುಹೋಗಿತ್ತು. ಆಮೇಲೆ ಕ್ರಮಕ್ರಮವಾಗಿ ಊಟವನ್ನಿಡುತ್ತ ಬರಲಾಗಿ ಒಂದೊಂದಾಗಿ ನೆನಪಾಗುತ್ತ ಕೊನೆಗೆಲ್ಲವೂ ಮೊದಲಿನಂತೆ ಸ್ಮರಣೆಗೆ ಬಂದವು. ಇದರಿಂದ ಮನಸ್ಸು ಅನ್ನದಧೀನವೆಂದು ಶ್ವೇತಕೇತು ಗೊತ್ತುಮಾಡಿಕೊಂಡನು.

ಅನ್ನದಿಂದಾದ ಮನಸ್ಸು ಅನ್ನದ ಗುಣವನ್ನೇ ಪ್ರತ್ಯಕ್ಷವಾಗಿ ಪಡೆಯುವದೆಂಬದಕ್ಕೆ ಒಂದು ಕಥೆಯನ್ನು ಉದಾಹರಿಸಬಹುದು. ಒಂದೂರಿನಲ್ಲಿ ಬಡವನಾದ ಶ್ಯಾನುಭೋಗನಿದ್ದನು. ಅವನ ಮನೆಗೆ ಒಂದು ದಿನ ಸಾಯಂಕಾಲ ಒಬ್ಬ ಅತಿಥಿಯು ಬಂದನು. ಆ ಅತಿಥಿಯೂ ಶುದ್ಧಾಚರಣೆಯವನು. ಈ ಶ್ಯಾನುಭೋಗನೂ ಶುದ್ಧಾಚರಣೆಯವನು. ಇಬ್ಬರೂ ಪಾಪಭೀತರು. ಆದ್ದರಿಂದಲೇ ಅತಿಥಿಯು ಆ ಊರಲ್ಲಿ ಆ ಶ್ಯಾನುಭೋಗನ ಮನೆಯನ್ನೇ ಹುಡುಕಿಕೊಂಡು ಬಂದನು. ಮನೆಗೆ ಬಂದ ಅತಿಥಿಯು ದೇವರ ಸಮಾನವೆಂದು ಶ್ಯಾನುಭೋಗನೂ ಆ ಅತಿಥಿಯನ್ನು ಆದರದಿಂದ ಬರಮಾಡಿಕೊಂಡನು. ಆದರೆ ಆದಿನ ರಾತ್ರೆ ಅವನ ಮನೆಯಲ್ಲಿ ಅಡಿಗೆಗೆ ಅಕ್ಕಿ ಇರಲಿಲ್ಲ ಆದ್ದರಿಂದ ಅವನು ತನ್ನ ತಳವಾರನನ್ನು ಕರೆದು ಹೇಗಾದರೂ ಮಾಡಿ ಈದಿನ ಯಾವ ಅಂಗಡಿಯಲ್ಲಾದರೂ ಸಾಲವಾಗಿ ಒಳ್ಳೇ ಸಣ್ಣಕ್ಕಿಯನ್ನು ತರಬೇಕೆಂದು ಹೇಳಿದನು. ದುರ್ದೈ

ವದಿಂದ ಆ ತಳವಾರನು ಕಳ್ಳತನದ ಸ್ವಭಾವದವನಾಗಿದ್ದನು. ಶ್ಯಾನುಭೋಗನು ಹೇಳುತ್ತಲೇ ತಳವಾರನು ಹಾಗೆ ಮಾಡುತ್ತೇನೆಂದು ಒಂದು ದೊಡ್ಡ ಅಂಗಡಿಗೆ ಹೋದನು. ಕಾಲಕರ್ಮಸಂಯೋಗದಿಂದ ಅಂಗಡಿಯವನು ಬಾಗಿಲನ್ನು ಹಾಗೆಯೇ ತೆರೆದಿಟ್ಟು ಏನೋ ಒಂದು ಅವಸರದ ಕೆಲಸಕ್ಕೆ ಹೋಗಿದ್ದನು. ಆ ಸಮಯವನ್ನು ನೋಡಿಕೊಂಡು ತಳವಾರನು ಕನ್ನಕ್ಕೆ ಚಳಕವನ್ನು ತೋರಿಸಿ ಯಾರಿಗೂ ಕಾಣದಂತೆ ತನಗೆ ಬೇಕಾದಷ್ಟು ಸಣ್ಣಕ್ಕಿಯನ್ನು ಹೊತ್ತುಕೊಂಡು ಬಂದು ಶ್ಯಾನುಭೋಗನ ಮನೆಗೆ ಹಾಕಿದನು. ರಾತ್ರಿ ಅಡಿಗೆಯಾಯಿತು. ಆ ದಿನ ರಾತ್ರಿ ಆ ಶ್ಯಾನುಭೋಗನಿಗೆ ಯಾವದೋ ಒಂದು ವ್ರತದ ದೆಸೆಯಿಂದ ಉಪವಾಸವಿತ್ತು. ಶ್ಯಾನುಭೋಗನು ಬ್ರಾಹ್ಮಣನನ್ನು ಆದರಿಸಿ ಊಟಕ್ಕಿಟ್ಟನು. ಬ್ರಾಹ್ಮಣನು ಶಾಕಪಾಕಗಳೊಡನೆ ಅದನ್ನು ಉಂಡ ಮೇಲೆ ಶ್ಯಾನುಭೋಗನು ಆ ಬ್ರಾಹ್ಮಣನಿಗೆ ಆಗ ತಾನೆ ಕರೆದು ಕೆಂಪಗೆ ಕಾಸಿದಂಥ ಆಕಳ ಹಾಲನ್ನು ಬಡಿಸಿದನು. ಊಟವಾದ ಮೇಲೆ ಆ ಬ್ರಾಹ್ಮಣನು ಆ ಹಾಲನ್ನು ಬಹಳವಾಗಿ ಹೊಗಳಿದನು. ಆಗ ಶ್ಯಾನುಭೋಗನು ಅದೊಂದು ಒಳ್ಳೆ ಜಾತಿಯ ಕರೀ ಆಕಳದೆಂದು ಹೇಳಿ ಕೊಟ್ಟಿಗೆಗೆ ಕರೆದುಕೊಂಡು ಹೋಗಿ ಅವನಿಗೆ ಅದನ್ನು ತೋರಿಸಿದನು. ಸ್ವಲ್ಪ ಹೊತ್ತಾದಮೇಲೆ ಎಲ್ಲರೂ ಮಲಗಿದರು. ಆ ಬ್ರಾಹ್ಮಣನಿಗೆ ನಿದ್ರೆಯೇ ಹತ್ತದು. ಏನೇನೋ ಕಲ್ಪನೆಗಳು ಬರುತ್ತ ಬರುತ್ತ ಕೊನೆಗೆ ಬೆಳಗಾಗುತ್ತಲೇ ಎದ್ದು ಆ ಆಕಳನ್ನು ಕದ್ದುಕೊಂಡು ಹೋಗಬೇಕೆಂಬ ಕಲ್ಪನೆ ಮನಸ್ಸನ್ನು ಆವರಿಸಿತು. ಇದೇ ಕನವರಿಕೆಯಲ್ಲಿಯೇ ಇದ್ದು ಆ ಬ್ರಾಹ್ಮಣನು ಕೋಳಿ ಕೂಗುತ್ತಲೇ ಮನೆಯವರು ಏಳುವದಕ್ಕೆ ಮೊದಲೇ ಎದ್ದು ಸದ್ದು ಮಾಡದೆ ಕೊಟ್ಟಿಗೆಗೆ ಹೋಗಿ ಆ ಆಕಳನ್ನು ಬಿಚ್ಚಿಕೊಂಡು ಹೊರಬಿದ್ದು ತನ್ನ ಊರ ದಾರಿಯನ್ನು ಹಿಡಿದನು. ಹೊಸದಾಗಿ ಕಳ್ಳತನವನ್ನು ಮಾಡುವ ಗಡಿಬಿಡಿಯಲ್ಲಿ ಕರುವನ್ನು ತೆಗೆದುಕೊಂಡು ಹೋಗಬೇಕೆಂಬುವದು ಅವನಿಗೆ ತಿಳಿಯಲಿಲ್ಲ. ಹೀಗೆ ಅವನು ಸ್ವಲ್ಪದೂರ ಸಾಗಿದ ಮೇಲೆ ಅಷ್ಟು ಹೊತ್ತಿಗೆ ಅವನ ಹೊಟ್ಟೆಯಲ್ಲಿದ್ದ ಆಹಾರವೆಲ್ಲಾ ಅರಗಿ ಕಾಲಪ್ರವೃತ್ತಿಯಾಗಿ ಅನ್ನಶೇಷವೆಲ್ಲಾ ಹೋಯಿತು. ಸಮೀಪದಲ್ಲಿದ್ದ ಜಲಾಶಯದಲ್ಲಿ ಮುಖಪ್ರಕ್ಷಾಲನೆಯನ್ನು

ಮಾಡಿಕೊಂಡು ಆಕಳೊಡನೆ ಮುಂದಕ್ಕೆ ಸಾಗಬೇಕೆನ್ನುವಾಗ ಕಾಲೇ ಏಳದೆ ಅವನಿಗೇನೋ ತಳಮಳವಾಯಿತು. ತಾನು ಮಹಾಪಾಪವನ್ನು ಮಾಡಿದೆನೆಂದು ಅವನ ಮನಸ್ಸು ಬೆಂದು ಬೇಗುದಿಗೊಂಡಿತು. ಒಡನೆ ಅವನು ಆ ಆಕಳನ್ನು ಯಜಮಾನನಿಗೊಪ್ಪಿಸಿ ಆಮೇಲೆ ಪ್ರಾಯಶ್ಚಿತ್ತ ರೂಪವಾಗಿ ಕೆಲವು ದಿವಸ ಉಪವಾಸಾದಿಗಳನ್ನು ಮಾಡಬೇಕೆಂದು ಗೊತ್ತುಮಾಡಿಕೊಂಡು ಕೆಟ್ಟ ಮುಖವನ್ನು ಹಾಕಿಕೊಂಡು ಶ್ಯಾನುಭೋಗನ ಮನೆಯ ಕಡೆಗೆ ಹೊರಟನು.

ಇತ್ತ ಶ್ಯಾನುಭೋಗನು ಬೆಳಗಾಗುತ್ತಲೇ ಎದ್ದು ಆಕಳ ದರ್ಶನಕ್ಕೆ ಬಂದು ಅದನ್ನು ಕಾಣದೆ ಕರು ಮಾತ್ರ ಒರಲುತ್ತಿರುವದನ್ನೂ ಬ್ರಾಹ್ಮಣನು ಹೇಳದೇ ಹೋಗಿರುವದನ್ನೂ ಕೂಡಿಸಿ ನೋಡಿ ಆ ಬ್ರಾಹ್ಮಣನೇ ಅದನ್ನು ತೆಗೆದುಕೊಂಡು ನಡೆದಿರಬೇಕೆಂದು ನಿಶ್ಚಯಿಸಿ ಕರುವಿಲ್ಲದೆ ಆಕಳು ಅವನಿಗೆ ಹಾಲನ್ನು ಕೊಡಲಾರದಾದ್ದರಿಂದ ಆ ಬ್ರಾಹ್ಮಣನಿಗೆ ಆಕಳ ಉಪಯೋಗವಾಗುವಂತೆ ಕರುವನ್ನು ಕೊಟ್ಟು ಬರಬೇಕೆಂದು ಬ್ರಾಹ್ಮಣನ ಊರ ದಾರಿಯನ್ನು ಹಿಡಿದು ಹೊರಟನು. ನಡುಹಾದಿಯಲ್ಲಿ ಇಬ್ಬರೂ ಕಲೆತರು. ಇಬ್ಬರೂ ಒಬ್ಬರಿಗೊಬ್ಬರು ನಮಸ್ಕಾರವನ್ನು ಮಾಡಿದರು. ಆಕಳನ್ನು ತೆಗೆದುಕೊಂಡು ತನ್ನ ತಪ್ಪನ್ನು ಮನ್ನಿಸಬೇಕೆಂದು ಬ್ರಾಹ್ಮಣನು ಅಂಗಲಾಚಿದನು. ಕರುವನ್ನೂ ತೆಗೆದುಕೊಂಡು ನನ್ನನ್ನುದ್ಧಾರಮಾಡೆಂದು ಶ್ಯಾನುಭೋಗನೂ ಹೇಳಿಕೊಂಡನು. ಕೊನೆಗೆ ಶ್ಯಾನುಭೋಗನು ಆಕಳನ್ನು ಹಿಂದಕ್ಕೆ ತೆಗೆದುಕೊಂಡು ಇನ್ನುಮಧ್ಯಾಹ್ನದ ಆತಿಥ್ಯವನ್ನಾದರೂ ತೀರಿಸಿಕೊಂಡು ಹೋಗಬೇಕೆಂದು ಅತಿಥಿಗೆ ಅಕ್ಷತೆಯನ್ನು ಕೊಟ್ಟನು. ಅತಿಥಿಯು ಆತಿಥ್ಯವನ್ನು ಸ್ವೀಕರಿಸಲಿಲ್ಲ. ಇಷ್ಟೇ ಅಲ್ಲ. ಹಿಂದಿನ ದಿನದ ಅನ್ನದ ವೃತ್ತಾಂತವನ್ನು ತಿಳಿಯಬೇಕೆಂದು ಪಟ್ಟು ಹಿಡಿದನು. ಇಬ್ಬರೂ ಶ್ಯಾನುಭೋಗನ ಊರಿಗೆ ಬಂದು ತಳವಾರನನ್ನು ನಯಭಯಗಳಿಂದ ವಿಚಾರಮಾಡಿದಾಗ ನಿಜಸ್ಥಿತಿ ಹೊರಬಿತ್ತು. ಅನ್ನದ ಗುಣವು ಮನಸ್ಸಿನಲ್ಲಿ ತೋರಿದ್ದನ್ನು ನೋಡಿ ಶ್ಯಾನುಭೋಗನು ಬೆರಗಾದನು. ನಮ್ಮ ಹೊಟ್ಟೆಗೆ ಎಷ್ಟೋ ಬಗೆಯ ಅನ್ನವು ಬೀಳುತ್ತಿರಬಹುದು; ಅದರ ಪರಿಣಾಮವೂ ಮನಸ್ಸಿನ ಮೇಲೆ ಆಗಿರಬಹುದು. ಆದರೆ ಅದನು

ಕಂಡುಹಿಡಿದುಕೊಳ್ಳುವಷ್ಟು ಶುದ್ಧತೆ ನಮ್ಮಲ್ಲಿ ಸಾಲದು. ಬೆಳ್ಳಗಿರುವ ಗೋಡೆಯ ಮೇಲೆ ಸಣ್ಣದೊಂದು ಕಪ್ಪು ಚುಕ್ಕೆಯಾದರೂ ಅದು ಎದ್ದು ಕಾಣುತ್ತದೆ. ಕರೀಗೋಡೆಯ ಮೇಲೆ ಎಷ್ಟು ಕಪ್ಪು ಚುಕ್ಕೆಗಳಾದರೆ ಕಂಡಾವು? ಆದ್ದರಿಂದ ನಾವು ಮನಸ್ಸಿನ ಶುದ್ಧತೆಯನ್ನು ರಕ್ಷಣೆ ಮಾಡಿಕೊಂಡು ಪವಿತ್ರವಾದ ಆಹಾರ ಮಾತ್ರವೇ ನಮ್ಮ ಹೊಟ್ಟೆಗೆ ಹೋಗುವಂತೆ ಎಚ್ಚರದಿಂದಿರಬೇಕು.

ಅನ್ನದಿಂದ ಮನಸ್ಸಾಗುವದೆಂಬ ನಿಯಮವನ್ನು ಲಕ್ಷ್ಯದಲ್ಲಿಟ್ಟುಕೊಂಡು ಶುದ್ಧವಾದ ಆಹಾರವನ್ನೇ ತೆಗೆದುಕೊಳ್ಳುವಾಗಲೂ ಮನುಷ್ಯನು ತನ್ನ ಮನಸ್ಸಿನಲ್ಲಿ ಧಾರ್ಮಿಕಕಲ್ಪನೆಯನ್ನೇ ಇಟ್ಟುಕೊಂಡಿರಬೇಕು.

"ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತ: ।
ಪ್ರಾಣಾಪಾನಸಮಾಯುಕ್ತ: ಪಚಾಮ್ಯನ್ನಂ ಚತುರ್ವಿಧಂ ॥"

ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಳಿದ್ದಾನೆ. ಈ ಶ್ಲೋಕದಲ್ಲಿ ಶ್ರೀಕೃಷ್ಣನ ಅರ್ಥವು "ನಾನು ಪ್ರಾಣಿಗಳ ದೇಹದಲ್ಲಿ ಜಠರಾಗ್ನಿಯ ರೂಪದಲ್ಲಿದ್ದು ಪ್ರಾಣಾಪಾನಗಳಿಂದ ಕೂಡಿದವನಾಗಿ ಭಕ್ಷ್ಯ, ಭೋಜ್ಯ, ಲೇಹ್ಯ, ಚೋಹ್ಯ- ಎಂಬ ನಾಲ್ಕುಬಗೆಯ ಆಹಾರಪದಾರ್ಥಗಳನ್ನೂ ಅರಗಿಸುತ್ತೇನೆ" ಎಂದಾಗುತ್ತದೆ. ಈ ಅರ್ಥವನ್ನು ಪ್ರತಿಯೊಬ್ಬನೂ ಊಟಮಾಡುವಾಗ ನೆನಪಿಗೆ ತಂದುಕೊಳ್ಳಬೇಕು. ಇದರಿಂದ ಭಗವಂತನೇ ಒಳಗಿದ್ದು ಉಣ್ಣುವನೆಂಬ ಭಾವನೆಯಾಗಿ ತಾನು ತನ್ನ ದೇಹೇಂದ್ರಿಯಗಳ ಪೋಷಣೆಯನ್ನು ಮಾಡುವವನೆಂಬ ಕಲ್ಪನೆಯು ದೂರವಾಗುತ್ತದೆ. ಮನುಷ್ಯನು ತನ್ನ ದೇಹೇಂದ್ರಿಯಾದಿಗಳ ಪೋಷಣೆಗಾಗಿ ತತ್ಪರನಾಗಬಾರದಿಷ್ಟೇ ಅಲ್ಲ; ಅಂಥ ಕಲ್ಪನೆಯು ಕೂಡ ಬರಬಾರದೆಂದು ನಮ್ಮ ಪೂರ್ವಿಕರು ಊಟದ ಕಾಲಕ್ಕೆ ಕೂಡ ಈ ಭಾವನೆಯನ್ನು ಮುಂದು ಮಾಡಿರುತ್ತಾರೆ. ಇದು ಒಣಕಲ್ಪನೆಯೆಂದು ಕೂಡ ಯಾರೂ ತಿಳಿಯಬಾರದು. ಪೂರ್ವಿಕರು ಒಣಕಲ್ಪನೆಯನ್ನೆಂದಿಗೂ ಹೇಳುವದಿಲ್ಲ. ಒಣಕಲ್ಪನೆಗಳನ್ನು ಹೇಳಿ ಅವರು ಯಾವ ಪುರುಷಾರ್ಥಗಳನ್ನು ಸಾಧಿಸಬೇಕಾಗಿದೆ? ಯಾವ ಅಭಿಪ್ರಾಯಗಳನ್ನು ನಾವು ಸಾಕ್ಷಾತ್ತಾಗಿ ಗ್ರಹಿಸಲಾರೆವೋ ಅಂಥವುಗಳನ್ನು-ಮುಂದೆ ಅವುಗಳನ್ನು ಕಣ್ಣಾರೆ ಕಾಣುವ ನಿರೀ

ಕ್ಷಣೆಯಿಂದ– ಈಗ ಕಲ್ಪಿಸಿಕೊಳ್ಳಬೇಕೆಂದು ಅವರ ತಾತ್ಪರ್ಯ. ಸರ್ವ ವ್ಯಾಪಿಯಾದ ಪರಮಾತ್ಮನು ಜಠರಾಗ್ನಿಯಲ್ಲಿಲ್ಲವೇನು? ಜಠರಾಗ್ನಿಗೆ ಅನ್ನವನ್ನರಗಿಸುವ ಶಕ್ತಿಯನ್ನು ನಾವು ಕೊಟ್ಟಿರುವೆವೆ? ಎಂದಿಗೂ ಇಲ್ಲ. ಅದು ದೇವರ ಮಹಿಮೆ. ಅದ್ದರಿಂದ ಊಟದ ಕಾಲದಲ್ಲಿ ಅಗತ್ಯವಾಗಿ ದೇವರ ಸ್ಮರಣೆಯನ್ನು ಮಾಡಬೇಕು. ಆ ಕಾಲದಲ್ಲಿ ಹಾಳುಹರಟೆ ಯನ್ನು ಹೊಡೆಯುವದಂತು ಹೆಚ್ಚು ನಿಂದ್ಯವಾದದ್ದು. ನಾವು ಉಣ್ಣುವ ಊಟವು ನಮ್ಮ ದೇಹದಲ್ಲಿರುವ ಪರಮಾತ್ಮನಿಗೆ ಆಹುತಿಯ ರೂಪದಲ್ಲಿ ರುವದು. ಇದೊಂದು ದೇವರ ಸತ್ಕಾರದ ಬಗೆ. ಹೀಗೆ ದೇವರೊಡನೆ ವ್ಯವಹಾರವನ್ನು ಮಾಡುವ ಪವಿತ್ರವಾದ ಸಮಯವು ಮನಸ್ಸಿನಲ್ಲಿ ದೇವ ತಾಜ್ಞಾನವನ್ನು ಉದ್ಬೋಧಗೊಳಿಸುವದಕ್ಕೆ ತಕ್ಕದ್ದಾದ್ದರಿಂದ ಅಗತ್ಯ ವಾಗಿ ಆಗ ದೇವತಾಸ್ಮರಣೆಯನ್ನೇ ಮಾಡಬೇಕು. ಈ ವಿಷಯದಲ್ಲಿ ವೀರಶೈವರ ವಚನಶಾಸ್ತ್ರಕಾರರು ಹೇಗೆ ಒತ್ತಾಸೆಯನ್ನು ಕೊಟ್ಟಿದ್ದಾರೆ ನೋಡಿರಿ !

(೧) ಲಿಂಗಾರ್ಪಿತ ಮಾಡದ ಒಳಿಕ ತುತ್ತಿಗೊಮ್ಮೆ ಶಿವಶರಣೆನ್ನುತ್ತಿರಬೇಕು. ಕರಣವೃತ್ತಿಗಳಡಗುವವು, ಕೂಡಲ ಸಂಗಮದೇವನ ನೆನೆಯುತ್ತ ಉಂಡರೆ.

(೨) ನಾನೇ ಬಹಂಕಾರದಲ್ಲಿ ನಾನುಂಡೆನಾದರೆ, ಎನಗದೇ ಭಂಗ. ಸ್ತುತಿ ನಿಂದೆಗೆ ನೊಂದೆನಾದೊಡೆ, ಅಂಗೈಯಲ್ಲಿದ್ದ ಗುಹೇಶ್ವರ ಲಿಂಗಕ್ಕೆ ದೂರ.

## ಗುರುಗಳೊಡನೆ ಸಂಬಂಧ.

ಗುರುಕುಲವಾಸದಲ್ಲಿರುವವರು ಮೇಲೆ ಹೇಳಿದ ನಿಯಮಗಳ ಜೊತೆಗೆ ಗುರುಗಳೊಡನೆ ಸಾಕ್ಷಾತ್ತಾಗಿ ಹೇಗೆ ವರ್ತಿಸಬೇಕೆಂಬುದನ್ನು ಅಗತ್ಯವಾಗಿ ತಿಳಿದುಕೊಳ್ಳಬೇಕಾಗಿದೆ. ಈಗಿನ ಕಾಲದಲ್ಲಿ ಗುರುಗಳೆಂದರೆ ಹೆಚ್ಚು ವಿವೇಕಿಗಳಾದ ಮಿತ್ರರೆಂದು ಭಾವನೆಯುಂಟಾಗಿದೆ. ಇದು ನಮ್ಮ ದೇಶದ ಸಂಪ್ರದಾಯವಲ್ಲ. ನಮ್ಮಲ್ಲಿ ಗುರುಗಳೆಂದರೆ ಬಹಳ ಪೂಜ್ಯಬುದ್ಧಿ. ಯಾರಯಾರಲ್ಲಿ ನಮಗೆ ಪೂಜ್ಯಬುದ್ಧಿ ಇರುವದೋ ಅವ ರಲ್ಲೆಲ್ಲಾ ನಾವು ಭಯಭಕ್ತಿಯಿಂದ ನಡೆದುಕೊಳ್ಳಬೇಕೆಂದು ಶಾಸ್ತ್ರದಲ್ಲಿ ನಿಯಮವಿದೆ. ತಂದೆತಾಯಿಗಳು ಪೂಜ್ಯರು. ಅವರಲ್ಲಿಯೂ ಭಯಭಕ್ತಿ

ಯಿಂದ ನಡೆದುಕೊಳ್ಳಬೇಕು. ಗುರುಗಳು ಅವರಿಗಿಂತ ಪೂಜ್ಯರು. ಸದ್ಗುರುಗಳು ಎಲ್ಲಾ ಪೂಜ್ಯರಿಗಿಂತಲೂ ಪೂಜ್ಯರು. ಮನುಸ್ಮೃತಿಯನ್ನು ನೋಡಿ

“ ಲೌಕಿಕಂ ವೈದಿಕಂ ವಾಪಿ ತಥಾಧ್ಯಾತ್ಮಿಕಮೇವ ಚ ।

ಆದದೀತ ಯತೋ ಜ್ಞಾನಂ ತಂ ಪೂರ್ವಮಭಿವಾದಯೇತ್ ॥ ” (೨–೧೧೭)

ಎಂದರೆ ಲೌಕಿಕವಿದ್ಯೆಯನ್ನಾಗಲಿ, ವೈದಿಕವಿದ್ಯೆಯನ್ನಾಗಲಿ, ದೇವರ ವಿಚಾರವನ್ನಾಗಲಿ, ಯಾರಿಂದ ನಾವು ಪಡೆಯುತ್ತೇವೋ ಅವರಿಗೆ ಮೊದಲು ನಮಸ್ಕಾರವನ್ನು ಮಾಡಬೇಕೆಂದರ್ಥ. ಅವರ ಪೂಜ್ಯತೆ ಇಷ್ಟು ದೊಡ್ಡದಾದ್ದರಿಂದ ನಾವು ಅವರ ಮುಂದೆ ಭಯಭಕ್ತಿಯಿಂದ ನಡೆದುಕೊಳ್ಳುವದಗತ್ಯವು. ಪೂಜ್ಯರಿಗೆ ಭಕ್ತಿಯನ್ನು ತೋರಿಸುವದು ಯೋಗ್ಯವೆನಿಸಿದರೂ ಭಯಪೂರ್ವಕವಾದ ಭಕ್ತಿಯನ್ನು ತೋರಿಸಬೇಕೆಂಬ ವಿಷಯಕ್ಕೆ ಮನಸ್ಸು ಒಮ್ಮೆಗೇ ಒಪ್ಪದೇ ಹೋಗಬಹುದು. ಹೀಗಾಗುವದಕ್ಕೆ ಭಯಶಬ್ದದ ಯಥಾರ್ಥಜ್ಞಾನವಿಲ್ಲದಿರುವದೇ ಕಾರಣವು. ಭಯದಿಂದ ಕೂಡಿದ ಭಕ್ತಿಯೆಂದರೆ ಅವರು ನಮ್ಮಲ್ಲಿ ಕ್ರೂರತನವನ್ನು ತೋರಿಸಬಹುದೆಂಬ ಹೆದರಿಕೆಯಿಂದ ಅದನ್ನು ತಪ್ಪಿಸಿಕೊಳ್ಳುವದಕ್ಕಾಗಿ ಭಕ್ತಿಯ ನಟನೆಯನ್ನು ಮಾಡುವದೆಂದು ನಮ್ಮ ಕಲ್ಪನೆ ಇರುವದು. ಇಂಥ ಭಕ್ತಿಯು ನಿಂದ್ಯವೇ ಸರಿ. ಈ ಭಯಭಕ್ತಿಯಿಂದ ಒಮ್ಮನಿಗೆ ಅವನತಿಯೇ ಸರಿ. ಭಯಭಕ್ತಿಯೆಂದರೆ ಪೂಜ್ಯರ ವಿಷಯದಲ್ಲಿ ನನ್ನಿಂದ ಎಲ್ಲಿ ಅಪಚಾರವು ನಡೆದೀತೋ ಎಂಬ ಅಂಜಿಕೆಯಿಂದ ಬಹಳ ಎಚ್ಚರವುಳ್ಳವನಾಗಿ ಭಕ್ತಿಯನ್ನು ಮಾಡುವದು. ಈ ಭಕ್ತಿಯನ್ನು ಎಲ್ಲರೂ ಮಾಡಲೇಬೇಕು. ವಿದ್ಯಾರ್ಥಿಗಳಂತು ಇದನ್ನು ಮೊದಲು ಚೆನ್ನಾಗಿ ಕಲಿಯಬೇಕು. ಪೂಜ್ಯರ ವಿಷಯದಲ್ಲಿ ನಾವು ಅನಾದರವನ್ನು ತೋರಿಸಿದರೆ ಅದರಿಂದ ಆ ಪೂಜ್ಯರು ಅಸಂತುಷ್ಟರಾಗಿ ನಮ್ಮ ಅಶ್ರೇಯಸ್ಸನ್ನು ಬಯಸದೆ ಇದ್ದರೂ ದೇವರು ನಮಗೆ ತಕ್ಕ ಶಾಸನವನ್ನು ಮಾಡುವನು. ಏಕೆಂದರೆ ಎಲ್ಲಿ ಪೂಜ್ಯತ್ವವಿದೆಯೊ ಅಲ್ಲಿ ದೇವತ್ವವಿದೆ. ದೇವತಾಂಶವಿಲ್ಲದೆ ಪೂಜ್ಯತ್ವವು ಬರುವದಿಲ್ಲ. ಆ ದೇವತಾಂಶಕ್ಕೆ ಅಪಚಾರವನ್ನು ಮಾಡಿದರೆ ದೇವರು ಕ್ರುದ್ಧನಾಗದೆ ಬಿಡುವದಿಲ್ಲ. ಆದರೆ ಮನುಷ್ಯರು ಪೂಜ್ಯತೆ

ಯನ್ನು ತಕ್ಕ ಹಾಗೆ ಗೌರವಿಸಬೇಕೆಂದೇ ವೇದವು "ಮಾತೃದೇವೋ ಭವ" ಮುಂತಾದ ಧರ್ಮಗಳನ್ನುಪದೇಶ ಮಾಡಿರುವದು. ಭಗವಾನ್ ಮನುಮಹರ್ಷಿಗಳು ಗುರುಗಳ ಪೂಜ್ಯತೆಗೆ ತಕ್ಕ ಭಯಭಕ್ತಿಯ ಸ್ವರೂಪವನ್ನು ತಮ್ಮ ಸ್ಮೃತಿಯಲ್ಲಿ ವಿಸ್ತಾರವಾಗಿ ನಿರೂಪಿಸಿರುತ್ತಾರೆ. "ಯದ್ವೈ ಕಿಂ ಚ ಮನುರವದತ್ತದ್ಭೇಷಜಂ" ಎಂದು ಶ್ರುತಿ ಕೂಡ ಇದೆ. ಮನು ವಿನು ಹೇಳಿದ್ದರೂ ಅದು ಪಥ್ಯವೆಂದು ಶ್ರುತಿಯ ತಾತ್ಪರ್ಯ. ಆದ್ದರಿಂದ ಆ ಉಪದೇಶದಲ್ಲಿ ಕೆಲವು ವಿಷಯಗಳನ್ನು ಈ ಕೆಳಗೆ ಉದ್ಧರಿಸುತ್ತೇವೆ.

(೧) ಶಿಷ್ಯನು ಗುರುಗಳ ಸಮೀಪದಲ್ಲಿರುವಾಗ ಯಾವಾಗಲೂ ಗುರುಗಳುಪಯೋಗಿಸುವ ವಸ್ತ್ರಗಳಿಗಿಂತ ಕಡಿಮೆಯ ತರದವುಗಳನ್ನು ಉಪಯೋಗಿಸಬೇಕು; ಗುರುಗಳುಪಯೋಗಿಸುವ ಆಹಾರಕ್ಕಿಂತ ಕಡಿಮೆಯ ತರದ್ದನ್ನು ಉಣ್ಣಬೇಕು; ಉಡಿಗೆತೊಡಿಗೆ ಮೊದಲಾದ ತೋರಿಕೆಯಲ್ಲಿಯೂ ಗುರುಗಳಿಗಿಂತ ಕಡಿಮೆಯ ತರದವನಾಗಿರಬೇಕು. ಬೆಳಗಿನ ಜಾವದಲ್ಲಿ ಗುರುಗಳು ಏಳುವದಕ್ಕಿಂತ ಮುಂಚೆ ಏಳಬೇಕು. ರಾತ್ರಿಯಲ್ಲಿ ಗುರುಗಳು ಮಲಗಿದ ಮೇಲೆ ಮಲಗಬೇಕು. (೨-೧೯೪)

(೨) ಗುರುಗಳೊಡನೆ ಮಾತಾಡುವದನ್ನೂ ಗುರುಗಳಾಜ್ಞೆಗೆ ಒಪ್ಪಿಗೆಯನ್ನು ತೋರಿಸುವದನ್ನೂ ಶಿಷ್ಯನು ಮಲಗಿಕೊಂಡಾಗಲಿ, ಕುಳಿತುಕೊಂಡಾಗಲಿ, ಊಟಮಾಡುತ್ತಲಾಗಲಿ, ನಿಂತುಕೊಂಡಾಗಲಿ, ಬೇರೆ ಕಡೆಗೆ ಮುಖವನ್ನು ತಿರುಗಿಸಿಕೊಂಡಾಗಲಿ ಮಾಡಬಾರದು. (೨-೧೯೫)

(೩) ಗುರು ಕುಳಿತುಕೊಂಡು ಅಪ್ಪಣೆಯನ್ನು ಕೊಡುತ್ತಿದ್ದರೆ ತಾನು ನಿಂತುಕೊಂಡು ಆಲಿಸಬೇಕು. ಗುರು ನಿಂತುಕೊಂಡು ಆಜ್ಞಾಪಿಸುತ್ತಿದ್ದರೆ ಎರಡು ಹೆಜ್ಜೆ ಅವರ ಕಡೆಗೆ ಹೋಗಿ ಕೇಳಬೇಕು. ಗುರು ಬರುತ್ತ ಹೇಳಿದರೆ ತಾನು ಎದುರಿಗೆ ಹೋಗಿ ತಿಳಿಯಬೇಕು. ಗುರು ಮುಂದೆ ನಡೆಯುತ್ತ ಹೇಳಿದರೆ ತಾನು ಹಿಂಬಾಲಿಸಿ ಹೋಗಿ ಕಿವಿಗೊಡಬೇಕು. (೨-೧೯೬)

(೪) ಗುರು ಹಿಮ್ಮುಖವಾಗಿ ನಿಂತು ಹೇಳುತ್ತಿದ್ದರೆ ತಾನು ಎದುರಿಗೆ ಹೋಗಿ ಗ್ರಹಿಸಬೇಕು. ಗುರು ದೂರದಲ್ಲಿದ್ದು ಹೇಳಿದರೆ

ತಾನು ಹತ್ತಿರಕ್ಕೆ ಹೋಗಿ ಅರಿಯಬೇಕು. ಗುರು ಮಲಗಿಕೊಂಡು ಅಥವಾ ನಿಂತು ಹೇಳಿದರೆ ತಾನು ಬಗ್ಗಿ ಲಾಲಿಸಬೇಕು. (೨-೧೯೬)

(೫) ಗುರುಗಳ ಬಳಿಯಲ್ಲಿರುವಾಗ ಯಾವಾಗಲೂ ತನ್ನ ಹಾಸಿಗೆಯೂ ವೇಷವೂ ಗುರುಗಳಿಗಿಂತ ಕೀಳಾದದ್ದಾಗಿರಬೇಕು. ಗುರುಗಳೆದುರಿಗೆ ಕಾಲು ನೀಡಿಕೊಂಡು ಮುಂತಾಗಿ ಮನಸ್ಸು ಬಂದ ಹಾಗೆ ಕುಳಿತುಕೊಳ್ಳಬಾರದು. (೨-೧೯೮)

(೬) ಗುರುಗಳ ಹೆಸರಿಗೆ ಬಹುವಚನಸ್ವರೂಪವನ್ನು ಕೊಡದೆ ಎಂದೂ ಆಡಬಾರದು. ಅವರ ನಡೆ, ನುಡಿ- ಮೊದಲಾದವುಗಳನ್ನು ಅಣಕಿಸಬಾರದು. (೨-೧೯೯)

ಒಟ್ಟಿನ ಮೇಲೆ

"ಶುಶ್ರೂಷಮಾಣ ಆಚಾರ್ಯಂ ಸದೋಪಾಸೀತ ನೀಚವತ್ ||"

ಎಂದು ಭಾಗವತದಲ್ಲಿ ಹೇಳಿರುವಂತೆ ಗುರುಗಳಲ್ಲಿ ಯಾವಾಗಲೂ ವಿನೀತ ಭಾವದಿಂದ ಇರಬೇಕು. ಈ ರೀತಿಯಲ್ಲಿ ವರ್ತಿಸುತ್ತ ಗುರುಗಳಾಜ್ಞಾಪಿಸಿದ ಪ್ರತ್ಯಕ್ಷರವನ್ನೂ ಪಾಲಿಸುತ್ತಿರಬೇಕು. ಪೂರ್ವದಲ್ಲಿ ಶಿಷ್ಯರು ಮಾಡುತ್ತಿದ್ದ ಆಜ್ಞಾಪರಿಪಾಲನೆಯು ಈಗ ನಮ್ಮನ್ನು ಬೆರಗುಗೊಳಿಸುತ್ತಿದೆ. ಅವರಂತೆ ಆಚರಿಸುವ ಸಾಮರ್ಥ್ಯವು ಈಗ ನಮಗೆ ಇಲ್ಲವಾದರೂ ಅದನ್ನು ಧ್ಯೇಯವಾಗಿಯಾದರೂ ಇಟ್ಟುಕೊಳ್ಳಬೇಕು. ಅಷ್ಟಕ್ಕೂ ಮನಸ್ಸಿನ ಸಿದ್ಧತೆ ಇಲ್ಲದಿದ್ದರೆ ನಮ್ಮ ಪೂರ್ವಿಕರ ಗುರುಶಿಷ್ಯಸಂಬಂಧದ ವೈಭವವನ್ನು ಕೇಳಿಯಾದರೂ ಒಮ್ಮೆ ಆನಂದಾಶ್ರುವನ್ನು ಸುರಿಸಿ ಕೃತಕೃತ್ಯರಾಗಬೇಕೆಂದು ಗ್ರಹಿಸಿದರೂ ಆಗಬಹುದು. ಆಯೋದಧೌಮ್ಯನೆಂಬ ಗುರುವಿನಲ್ಲಿ ಆರುಣಿಪಾಂಚಾಲನೆಂಬುವನು ಶಿಷ್ಯವೃತ್ತಿಯನ್ನು ಮಾಡಿಕೊಂಡಿದ್ದನು. ಒಮ್ಮೆ ಒಂದು ರಾತ್ರಿ ಅಲ್ಲಿದ್ದ ಕೆರೆಗೆ ತೂತು ಬಿದ್ದು ನೀರೆಲ್ಲಾ ಜಲ್ಲಿಸುವ ಸಡಗರದಲ್ಲಿ ಅದು ಒಡೆದೇ ಹೋಗುವ ಭಯವುಂಟಾಯಿತು. ಈ ಅನರ್ಥವನ್ನು ತಪ್ಪಿಸುವದಕ್ಕಾಗಿ ಕೆರೆಯ ತೂತಿಗೆ ಏನನ್ನಾದರೂ ಅಡ್ಡಹಾಕಿ ಕೆರೆಯೊಡೆಯದಂತೆ ಮಾಡಿಬಾರೆಂದು ಗುರು ಶಿಷ್ಯನಿಗಾಜ್ಞಾಪಿಸಿದನು. ಇದು ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟ ಉದ್ಯೋಗವೇನೂ ಆಗಿರಲಿಲ್ಲ. ಆದರೂ ಗುರುವಿನ ಪ್ರತ್ಯಾಜ್ಞೆಯನ್ನೂ ಪರಿಪಾಲಿಸುವದೇ ಶಿಷ್ಯನ

ಕರ್ತವ್ಯ. ಅಥವಾ ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟಿದ್ದಲ್ಲವೆಂದು ಏಕೆ ತಾನೆ ಹೇಳಬೇಕು! ಜನರಿಗೆಲ್ಲಾ ಆಗುತ್ತಿದ್ದ ಅನರ್ಥವನ್ನು ತಪ್ಪಿಸುವಂಥ ಪರಹಿತಕಾರ್ಯಕ್ಕೆ ತೊಡಗಿಸುವದು ಸರ್ವವಿದ್ಯಾಭ್ಯಾಸಕ್ಕೂ ಶಿರೋಮಣಿ ಪ್ರಾಯವಾದದ್ದು. ಪಾಂಚಾಲನು ಒಡನೆ ಕೆರೆಯ ಬಳಿಗೆ ಹೋಗಿ ನೋಡಿದನು. ಕ್ಷಣಕ್ಷಣಕ್ಕೂ ನೀರು ಹೆಚ್ಚು ಹೆಚ್ಚಾಗಿ ನುಗ್ಗಿ ಬರುತ್ತ ಕೆರೆಯ ತೂತು ದೊಡ್ಡದಾಗುತ್ತ ಬರುತ್ತಿತ್ತು. ಆಗ ಅವನು ಬೇಗಬೇಗ ಕಲ್ಲು ಮಣ್ಣುಗಳನ್ನು ತುಂಬಿತುಂಬಿ ಎಡೆಬಿಡದೆ ಆ ತೂತಿಗೆ ಸುರಿದನು. ಆ ನೀರಿನ ವೇಗದ ಮುಂದೆ ಪಾಂಚಾಲನ ಕಲ್ಲುಮಣ್ಣು ನಿಲ್ಲಲಿಲ್ಲ. ಎಲ್ಲವೂ ಕೊಚ್ಚಿಕೊಂಡು ಹೋದವು. ಆಗ ಪಾಂಚಾಲನು ಉಪಾಯಾಂತರವನ್ನರಿಯದೆ ತಾನೇ ಹೋಗಿ ನೀರಿನಲ್ಲಿಳಿದು ಆ ತೂತಿಗೆ ಅಡ್ಡವಾಗಿ ಗಟ್ಟಿಯಾಗಿ ಕೂತುಬಿಟ್ಟನು. ಸ್ವಲ್ಪ ಹೊತ್ತಿನಲ್ಲಿಯೇ ಅವನ ಮೈಗೆಲ್ಲಾ ಶೀತವಡರಿತು. ಏನಾದರೂ ಅವನು ಕದಲಲಿಲ್ಲ. ಅಷ್ಟರಲ್ಲಿ ಬೆಳಕು ಹರಿಯಿತು. ಆಗ ಗುರುಗಳು ಶಿಷ್ಯನನ್ನು ಹುಡುಕಿಕೊಂಡು ಬಂದು ಅವನ ಹೆಸರನು ಹಿಡಿದು ಕರೆದಾಗ ಪಾಂಚಾಲನು ಅಲ್ಲಿ ಕುಳಿತೇ ತನ್ನ ಉತ್ತರವನ್ನು ಹೇಳಿದನು. ಆಗ ಗುರುಗಳು ಅವನ ಶಿಷ್ಯಸಂಪತ್ತಿಗೆ ಬೆರಗಾಗಿ ಅವನನ್ನು ಅಲ್ಲಿಂದ ಎಬ್ಬಿಸಿ ಆದರಿಸಿ ಊರ ಜನರಿಂದ ಆ ತೂತನ್ನು ಮುಚ್ಚಿಸಿ ಆ ಶಿಷ್ಯನ ಮೇಲೆ ಹೆಚ್ಚಿನ ಅನುಗ್ರಹವನ್ನು ಮಾಡಿದರು.

ಈ ರೀತಿಯಾಗಿ ಅಪಾಯಕ್ಕೆ ತಲೆಗೊಡುವದು ವಿವೇಕದ ಲಕ್ಷಣವಲ್ಲವೆಂದು ಆಧುನಿಕರು ಹೇಳಬಹುದು. ಒಬ್ಬರ ಮೇಲೆ ಪೂಜ್ಯಬುದ್ಧಿಯನ್ನಿಟ್ಟು ಯಾರು ಎಂಥ ಅಪಾಯಕ್ಕೆ ತಲೆಗೊಟ್ಟರೂ ಎಂದಿಗೂ ಅವರಿಗೆ ಕೇಡಾಗಲಾರದೆಂದು ತೋರುತ್ತದೆ. ಹಾಗೆ ಕೇಡಿಗೀಡಾದವರ ಉದಾಹರಣೆಯು ಎಲ್ಲಿಯೂ ಕಂಡುಬಂದಿಲ್ಲ. ಕೇಡಿಗೀಡಾಗುವದಿಲ್ಲವೆಂಬುದನ್ನು ಕಾರ್ಯಕಾರಣಭಾವದಿಂದ ಸಿದ್ಧಮಾಡಿ ತೋರಿಸುವದಕ್ಕೆ ಬರುವದಿಲ್ಲ. ಧರ್ಮದ ಪ್ರಭಾವದ ಮುಂದೆ ಕಾರ್ಯಕಾರಣದ ಬಿಡಗು ನಡೆಯುವದಿಲ್ಲ. ಸಾಧುಸತ್ಪುರುಷರ ಚರಿತ್ರೆಗಳನ್ನು ನೋಡಿದರೆ ಅವರ ಮೇಲಿನ ಪೂಜ್ಯಬುದ್ಧಿಯಿಂದ ಎಲ್ಲರೂ ಎಲ್ಲಾ ಬಗೆಯ ಕೇಡಿನಿಂದ ಪಾರಾದ ಉದಾಹರಣೆಗಳೇ ಸಿಕ್ಕುತ್ತವೆ. ಈ ಉದಾಹರಣೆಗಾಗಿ

ಗ್ರಂಥಕ್ಕೆ ಕೂಡ ಹೋಗಬೇಕಾಗಿಲ್ಲ. ಸಾಧುಸತ್ಪುರುಷರ ಸಹವಾಸದಲ್ಲಿ ಇದನ್ನು ಈಗಲೂ ಅನುಭವಕ್ಕೆ ತೆಗೆದುಕೊಳ್ಳಬಹುದು. ಆದರೆ ಅವರ ಮೇಲಿನ ಪೂಜ್ಯಬುದ್ಧಿ ಮಾತ್ರ ದೃಢವಾದುದಾಗಿರಬೇಕು. ಶುದ್ಧ ಮನಸ್ಸಿನಿಂದ ಪೂಜ್ಯಬುದ್ಧಿಯನ್ನಿಟ್ಟರೆ ಅವರ ಮೇಲಿನ ಅಪಾಯುಗಳು ಹಾರಿಹೋಗುವದಿಷ್ಟೇ ಅಲ್ಲ; ಅವರಿಗೆ ಉತ್ತಮವಾದ ಶ್ರೇಯಸ್ಸು ಪ್ರಾಪ್ತವಾಗುವದು. ಆ ಶ್ರದ್ಧೆಗೆ ಹೀಗಾಗುವದು ಯೋಗ್ಯವಾಗುತ್ತದೆ. ಏಕೆಂದರೆ ಶಿಷ್ಯನು ಗುರುವಿನ ಮೇಲೆ ಪೂಜ್ಯಬುದ್ಧಿಯನ್ನಿಡುವನಷ್ಟೆ. ಪೂಜ್ಯಬುದ್ಧಿಯು ದೇವತಾಂಶವಿರುವ ಕಡೆ ಮಾತ್ರ ಇರುವದು. ಪೂಜ್ಯತೆಯು ದೇವರ ಅಂಶ. ಆದ್ದರಿಂದ ಶಿಷ್ಯನು ದೇವರ ಮೇಲೆಯೇ ಭಾರವನ್ನಿಟ್ಟಂತಾಗುವದು. ಇದರಿಂದ ಒಂದುಪಕ್ಷ ಗುರುಗಳಲ್ಲಿ ಸಾಮರ್ಥ್ಯದ ಕೊರತೆಯಿದ್ದರೂ ದೇವರು ಸರ್ವಸಮರ್ಥನಾದ್ದರಿಂದ ಅವನು ತನ್ನನ್ನು ನಂಬಿದವರನ್ನು ಮುಳುಗಿಸುವದಿಲ್ಲವೆಂಬುದಿಷ್ಟೇ ಅಲ್ಲ; ಅವರಿಗೆ ತನ್ನ ಸರ್ವಸ್ವವನ್ನೂ ಕೊಡುವನು.

ಗುರ್ವಾಜ್ಞಾಪರಿಪಾಲನೆಯ ಫಲದ ವಿಷಯವಾಗಿ ಒಂದು ಇತಿಹಾಸವಿದೆ. ಉಪಮನ್ಯುವೆಂಬುವನೂ ಆದೇ ಗುರುವಿನ ಬಳಿಯಲ್ಲಿ ಸೇವೆಯನ್ನು ಮಾಡಿಕೊಂಡಿದ್ದನು. ಗುರು ಅವನನ್ನು ದನಾಕಾಯುವ ಕೆಲಸಕ್ಕೆ ಹಚ್ಚಿದ್ದನು; ಹೊಟ್ಟೆಗೆ ಮಾತ್ರ ಹಾಕಲಿಲ್ಲ. ಉಪಮನ್ಯು ಹೊಟ್ಟೆಬಾಕನು. ಅಥವಾ ಅವನನ್ನು ಹೊಟ್ಟೆಬಾಕನೆಂದು ಬಯ್ಯುವದೇನು? ಯಾರಿಗಾದರೂ ಆಹಾರವು ಬೇಕೇಬೇಕಾಗುವದು. ಆದರೆ ಉಪಮನ್ಯುವಿಗೆ ಹೊಟ್ಟೆಯ ಕಡೆಯ ಚಿಂತೆಯೇ ಹೆಚ್ಚಾಗಿದ್ದದರಿಂದ ಗುರು ಅವನ ಆ ಅಭ್ಯಾಸವನ್ನು ತಪ್ಪಿಸುವದಕ್ಕಾಗಿ ಅವನಿಗೆ ಹೊಟ್ಟೆಗೆ ಹಾಕದೆ ಅನಾದರವನ್ನು ಮಾಡಿದನು. ಉಪಮನ್ಯು ದನಗಳನ್ನು ಅಡವಿಯಲ್ಲಿ ಮೇಯಲಿಕ್ಕೆ ಬಿಟ್ಟು ಹತ್ತಿರದ ಹಳ್ಳಿಯಲ್ಲಿ ಭಿಕ್ಷಾನ್ನವನ್ನು ತಂದು ಹೊಟ್ಟೆಗೆ ತುಂಬಿಕೊಳ್ಳುತ್ತಿದ್ದನು. ತಾನು ಅನ್ನವನ್ನು ಹಾಕದಿದ್ದರೂ ಸೊರಗದಿರುವ ಉಪಮನ್ಯುವನ್ನು ನೋಡಿ ಗುರು ಅವನ ಯೋಗಕ್ಷೇಮವನ್ನು ವಿಚಾರಿಸಿದನು. ಭಿಕ್ಷಾನ್ನವನ್ನು ತಂದು ತಿನ್ನುವೆನೆಂದು ಉಪಮನ್ಯು ಹೇಳಿದನು. ಇನ್ನುಮೇಲೆ ಭಿಕ್ಷಾನ್ನವನ್ನು ತಂದು ತನಗೇ ಕೊಡೆಂದು ಗುರುವಿನಾಜ್ಞಾ

ಯಾಯಿತು. ಆಮೇಲೆ ಅವನು ಒಂದು ಸಲ ಭಿಕ್ಷಾನ್ನವನ್ನು ತಂದು ಗುರು ವಿಗೆ ಕೊಟ್ಟು ಮತ್ತೆ ಭಿಕ್ಷಾನ್ನವನ್ನು ತಂದು ತನ್ನ ಹಸಿವನ್ನು ಅಡಗಿಸಿಕೊಳ್ಳುತ್ತಿದ್ದನು. ಆಮೇಲೆ ಇದೂ ಗುರುವಿಗೆ ತಿಳಿಯಿತು. ಎರಡನೇ ಸಲ ಭಿಕ್ಷಾನ್ನವನ್ನು ತರಬಾರದೆಂದು ಗುರು ನಿಷೇಧಿಸಿದನು. ಗುರುಭಕ್ತಿಪರಾಯಣನಾದ ಉಪಮನ್ಯು ಭಿಕ್ಷಾನ್ನದ ತೊಡಕನ್ನು ಬಿಟ್ಟು ಗುರುಗಳ ಆಕಳನ್ನೇ ಕರೆದು ಆ ಹಾಲಿನಿಂದ ತನ್ನ ಆಶೆಯನ್ನು ತೀರಿಸಿಕೊಳ್ಳುತ್ತಿದ್ದನು. ಗುರು ಅದನ್ನೂ ಕೂಡ ಮಾಡಕೂಡದೆಂದು ವಿಧಿಸಿದನು. ಆ ಸಚ್ಛಿಷ್ಯನು ಅದಕ್ಕೂ ಸಮ್ಮತಿಸಿ ಅಂದಿನಿಂದ ಎಕ್ಕೆದೆಲೆಯನ್ನು ತಿನ್ನುವದಕ್ಕಾರಂಭಿಸಿದನು. ಇದರಿಂದ ಅವನ ಕಣ್ಣು ಕುರುಡಾಯಿತು. ಒಂದು ದಿನ ಸಂಜೆಯಾದ ಮೇಲೆ ಬರುತ್ತಿರುವಾಗ ಅವನು ಒಂದು ಆಳವಾದ ಹಳ್ಳಕ್ಕೆ ಬಿದ್ದನು. ಈ ಬಗೆಯ ಅವನ ವಿಲಕ್ಷಣವಾದ ಗುರುಭಕ್ತಿಯ ಫಲವಾಗಿ ದೇವರ ದಯೆಯಿಂದ ಆ ಮಾರ್ಗವಾಗಿ ಅಶ್ವಿನೀದೇವತೆಗಳು ಬಂದು ನೇತ್ರ ವ್ಯಾಧಿಯ ಪರಿಹಾರಕ್ಕಾಗಿ ಅವನಿಗೊಂದು ಕಜ್ಜಾಯವನ್ನು ತಿನ್ನುವದಕ್ಕೆ ಕೊಡಹೋದರು. ಅವನು ಮತ್ತೊಬ್ಬರು ಕೊಡುವದನ್ನು ನಾನು ತಿನ್ನುವದಿಲ್ಲವೆಂದನು. ನಿನ್ನ ಗುರು ಕೂಡ ನಾವು ಕೊಟ್ಟದ್ದನ್ನು ತಿಂದನೆಂದು ಅವರು ಹೇಳಿದರು. ಆದರೂ ತನ್ನ ವ್ರತದಲ್ಲಿ ತಾನು ಕೊಂಕು ಬರಗೊಡಲಾರೆನೆಂದು ಉಪಮನ್ಯು ಹೇಳಿಬಿಟ್ಟನು. ಆಮೇಲೆ ಅಶ್ವಿನೀದೇವತೆಗಳು ಅವನ ಗುರುಭಕ್ತಿಗೆ ಮೆಚ್ಚಿ ಅವನ ದೇಹವನ್ನೆಲ್ಲಾ ಸುವರ್ಣಮಯವಾಗಿ ಮಾಡಿ ಅವನಿಗೆ ಕಣ್ಣುಗಳನ್ನು ಕೊಟ್ಟು ಆಶೀರ್ವದಿಸಿದರು. ಪೂಜ್ಯಬುದ್ಧಿಯನ್ನು ನಿಶ್ಚಲವಾಗಿಡುವದರ ಫಲವು ಈ ರೀತಿಯಲ್ಲಿರುವದು.

ಉಪಮನ್ಯು ಆ ಕಜ್ಜಾಯವನ್ನು ತಿನ್ನದೆ ಅಶ್ವಿನೀದೇವತೆಗಳ ಮಾತನ್ನು ಮೀರಿದ್ದಕ್ಕಾಗಿ ಅವನಿಗೆ ಪಾಪ ಬಂದೀತೆಂಬ ಸಂಶಯಕ್ಕೇನೂ ಕಾರಣವಿರಲಿಲ್ಲ. ಗುರುವಿನಲ್ಲಿ ಶ್ರದ್ಧೆಯುಳ್ಳ ಶಿಷ್ಯನು ಪಾಪಬಂದೀತೆಂಬ ಸಂಶಯಕ್ಕೆ ಅವಕಾಶವಿದ್ದರೂ ಕೂಡ ಆ ಸಂದರ್ಭದಲ್ಲಿ ತನ್ನ ವಿಚಾರಕ್ಕೆ ಹೆಚ್ಚು ಬೆಲೆಯನ್ನು ಕೊಡದೆ ಗುರ್ವಾಜ್ಞೆಯನ್ನು ನಡೆಸಿಯೇ ಬಿಡುವನು. ವಿಶ್ವಾಮಿತ್ರ ಋಷಿಗಳು ತಮ್ಮ ಯಜ್ಞದ ರಕ್ಷಣೆಗಾಗಿ ಶ್ರೀರಾಮಚಂದ್ರ

ನನ್ನು ಕರೆದುಕೊಂಡು ಹೋಗುವಾಗ ದಾರಿಯಲ್ಲಿ ಅವನಿಗೆ ತಾಟಕಿಯನ್ನು ತೋರಿಸಿ ಅವಳ ಮೇಲೆ ಬಾಣಪ್ರಯೋಗವನ್ನು ಮಾಡೆಂದರು. ತಾಟಕಿಯು ರಾಕ್ಷಸಿಯಾದರೂ ಸ್ತ್ರೀ. ರಾಮನ ಬಾಣಪ್ರಯೋಗಕ್ಕೂ ಅದೇ ಮೊದಲು. ಇದರಿಂದ ಶ್ರೀರಾಮಚಂದ್ರನಿಗೆ ಈ ಕಾರ್ಯವನ್ನು ಮಾಡುವದಕ್ಕೆ ಮನಸ್ಸಿಗೆ ಸಂಕೋಚವು ತೋರಬಹುದಾಗಿತ್ತು. ಅವನ ಶ್ರದ್ಧೆಯು ಲೋಕಕ್ಕೆ ಆದರ್ಶಸ್ವರೂಪವಾದ್ದರಿಂದ ಅವನು ತನ್ನ ವಿಚಾರವನ್ನು ಮುಂದು ಮಾಡಲೇ ಇಲ್ಲ. ಗುರ್ವಾಜ್ಞೆಯನ್ನು ಪಾಲಿಸುವದೊಂದೇ ತನ್ನ ಕರ್ತವ್ಯವೆಂದು ತನ್ನ ಕಾರ್ಯವನ್ನು ತಾನು ಮಾಡಿದನು.

ಈ ರೀತಿಯಲ್ಲಿ ಗುರ್ವಾಜ್ಞೆಯನ್ನು ಪರಿಪಾಲನೆಮಾಡುವದರಿಂದ ಉತ್ತಮವಾದ ಶ್ರೇಯಸ್ಸು ಪ್ರಾಪ್ತವಾಗುವದು. ಗುರುದ್ರೋಹವನ್ನು ಮಾಡಿದರಂತು ಅದರ ದುಷ್ಫಲವು ಎಂದಿಗೂ ತಪ್ಪುವದಿಲ್ಲ. ಯಾರಲ್ಲಿ ಪೂಜ್ಯತೆ ಇರುವದೋ ಅಂಥವರಿಗೆ ದ್ರೋಹವನ್ನು ಮಾಡುವದೆಂದರೆ ಅದು ದೇವದ್ರೋಹವೇ. ಸರ್ವಸಮರ್ಥನಾದ ದೇವರಿಗೆ ದ್ರೋಹವನ್ನು ಮಾಡಿ ಯಾರು ಜಯಿಸಿಕೊಳ್ಳುವರು? ಹಿಂದೆ ಅಯೋಧ್ಯೆಯಲ್ಲಿ ತ್ರಿಶಂಕುವೆಂಬ ರಾಜನಿದ್ದನು. ಅವನಿಗೆ ಸಶರೀರನಾಗಿ ಸ್ವರ್ಗಕ್ಕೆ ಹೋಗಬೇಕೆಂಬ ಒಂದು ಆಶೆಯುಂಟಾಯಿತು. ಅದಕ್ಕೆ ತಕ್ಕ ಯಜ್ಞವನ್ನು ಮಾಡಿಸಿರೆಂದು ಅವನು ತನ್ನ ಕುಲಗುರುಗಳಾದ ವಸಿಷ್ಠರ ಬಳಿಗೆ ಹೋದನು. ಅವನಿಗೆ ಆ ಯೋಗ್ಯತೆ ಇಲ್ಲದುದರಿಂದಲೋ ಏನೋ ವಸಿಷ್ಠರು ಅದಕ್ಕೊಪ್ಪಲಿಲ್ಲ. ಆಗ ತ್ರಿಶಂಕು ವಸಿಷ್ಠರ ಮಕ್ಕಳ ಕಡೆಗೆ ಹೋಗಿ ತನಗೆ ಯಜ್ಞವನ್ನು ಮಾಡಿಸಿ ಕುಲಪುರೋಹಿತತ್ವವನ್ನು ಳಿಸಿಕೊಳ್ಳಿರೆಂದು ಹೇಳಿದನು. ತಂದೆಯು ಬಿಟ್ಟ ಕೆಲಸಕ್ಕೆ ಕೈಹಾಕುವದು ಮಕ್ಕಳ ಮನಸ್ಸಿಗೆ ಬರಲಿಲ್ಲ. ಅವರೂ ಅವನ ಪ್ರಾರ್ಥನೆಯನ್ನು ನಿರಾಕರಿಸಿದರು. ಆಗ ತ್ರಿಶಂಕುವು ಮತ್ತೊಬ್ಬರ ಸಹಾಯದಿಂದಾದರೂ ಆ ಕೆಲಸವನ್ನು ಸಾಧಿಸಿಯೇ ತೋರಿಸುವೆನೆಂದು ಅಭಿಮಾನಯುಕ್ತನಾಗಿ ಅವರ ಮುಂದೆಯೆ ಹಟವನ್ನು ತೊಟ್ಟನು. ಈ ರೀತಿ ಕುಲಗುರುಗಳಾದ ತಮ್ಮನ್ನು ಅಪಚಾರಮಾಡಿದ್ದಕ್ಕಾಗಿ ಚಂಡಾಲನಾಗಿ ಹೋಗೆಂದು ಅವರು ಶಾಪವನ್ನು ಕೊಟ್ಟರು. ಹೀಗೆ ಚಂಡಾಲತ್ವ

ವನ್ನು ಪಡೆದ ತ್ರಿಶಂಕು ವಸಿಷ್ಠರ ದ್ವೇಷಿಗಳೆಂದು ಪ್ರಸಿದ್ಧರಾಗಿದ್ದ ವಿಶ್ವಾಮಿತ್ರರಿಗೆ ಶರಣುಹೊಕ್ಕನು. ಮಹಾಕ್ಷಾತ್ರತೇಜಸ್ಸಿನಿಂದ ಕೂಡಿದ ವಿಶ್ವಾಮಿತ್ರರು ವಸಿಷ್ಠರಿಗೆ ಅಸಾಧ್ಯವೆಂದು ತೋರಿದ ಆ ಕೆಲಸವನ್ನು ಸಾಧಿಸಿ ತೋರಿಸುತ್ತೇನೆಂದು ಪ್ರತಿಜ್ಞೆಯನ್ನು ಮಾಡಿ ತಾವು ಆ ಯಜ್ಞದ ಪೌರೋಹಿತ್ಯವನ್ನು ಸ್ವೀಕರಿಸಿದರು. ಯಜ್ಞದಲ್ಲಿ ಅವರು ದೇವತೆಗಳನ್ನು ಎಷ್ಟೆಷ್ಟು ಕರೆದರೂ ಯಾವ ದೇವತೆಗಳೂ ಬರಲಿಲ್ಲ. ಆಗ ಕ್ರುದ್ಧರಾದ ವಿಶ್ವಾಮಿತ್ರರು ದೇವತೆಗಳ ದಾಕ್ಷಿಣ್ಯವಿಲ್ಲದೆ ತಮ್ಮ ತಪಃಪ್ರಭಾವದಿಂದಲೇ ಸ್ವರ್ಗವನ್ನು ಕೊಡುತ್ತೇನೆಂದು ತಮ್ಮ ತಪಃಸಾಮರ್ಥ್ಯವನ್ನು ತ್ರಿಶಂಕುವಿಗೆ ಧಾರೆಯೆರೆದರು. ಒಡನೆ ತ್ರಿಶಂಕುವಿನ ಶರೀರವು ಮೇಲಮೇಲಕ್ಕೇರಿತು. ಅದು ಸ್ವರ್ಗವನ್ನು ಮುಟ್ಟುವದಕ್ಕೆ ಬರುತ್ತಲೇ ನಿನಗೆ ಯೋಗ್ಯತೆ ಇಲ್ಲವೆಂದು ದೇವತೆಗಳು ಅವನನ್ನು ತಲೆಕೆಳಗಾಗಿ ಬೀಳುವಂತೆ ಹಿಂದಕ್ಕೆ ತಳ್ಳಿಬಿಟ್ಟರು. ಅವನು ಬೀಳುವ ಭರದಲ್ಲಿ ಭಯದಿಂದ ಪ್ರಾರ್ಥಿಸಿದಾಗ ವಿಶ್ವಾಮಿತ್ರರು ತಮ್ಮ ತಪಃಸಾಮರ್ಥ್ಯದಿಂದ ಅವನಿಗೆ ಅಲ್ಲಿಯೇ ಹೊಸಸ್ವರ್ಗವನ್ನು ಮಾಡಿಕೊಟ್ಟರು. ಅಲ್ಲಿಯಾದರೂ ತಾನು ಮಾಡಿದ ಗುರುದ್ರೋಹದ ಫಲವಾಗಿ ಈಗಲೂ ಅವನು ತಲೆ ಕೆಳಗಾಗಿಯೇ ಇರುವನೆಂದು ಕಥೆಯಿದೆ.

ಇಂಥ ಗುರುದ್ರೋಹಕ್ಕೆ ಮನಸ್ಸಿನಲ್ಲಿ ಅವಕಾಶವನ್ನು ಕೊಡದೆ ಗುರುಗಳು ತನ್ನಲ್ಲಿ ಯಾವಾಗಲೂ ಪ್ರಸನ್ನರಾಗಿರುವಂತೆ ಪ್ರಯತ್ನಿಸುತ್ತಿರಬೇಕಲ್ಲದೆ ಗುರುಗಳು ಹೇಳಲಿ, ಹೇಳದೆ ಇರಲಿ, ಓದುಬರಹದ ಅಭ್ಯಾಸವನ್ನು ಸಾಗಿಸುತ್ತಿರಬೇಕು. ಗುರುವಿನ ಹೃದಯದಲ್ಲಿರುವ ವಿದ್ಯೆ ಶಿಷ್ಯನ ಹೃದಯದೊಳಕ್ಕೆ ಹೇಗೆ ಇಳಿಯುವದೆಂಬ ವಿಷಯಕ್ಕೆ ಭಗವಾನ್ ಮನುಮಹರ್ಷಿಗಳು ಹೇಳುವದೇನೆಂದರೆ—

"ಯಥಾ ಖನನ್ ಖನಿತ್ರೇಣ ನರೋ ವಾರ್ಯಧಿಗಚ್ಛತಿ ।
ತಥಾ ಗುರುಗತಾಂ ವಿದ್ಯಾಂ ಶುಶ್ರೂಷುರಧಿಗಚ್ಛತಿ ॥" ( ೨–೨೧೮ )

ಮನುಷ್ಯನು ಗುದ್ದಲಿಯಿಂದ ಅಗೆದು ನೀರನ್ನು ಪಡೆಯುವಂತೆ ಶಿಷ್ಯನು ತನ್ನ ಪ್ರಯತ್ನದಿಂದ ಗುರುಗತವಾದ ವಿದ್ಯೆಯನ್ನು ಕಲಿಯುತ್ತಾನೆ. ಹಿಂದಿನ ಕಾಲದಲ್ಲಿ ವಿದ್ಯಾಭ್ಯಾಸವನ್ನು ಮಾಡುವವರ ಸಂಖ್ಯೆ ಬಹಳ

ಕಡಿಮೆಯಾಗಿತ್ತು. ಆದರೂ ಪಂಡಿತರ ಸಂಖ್ಯೆ ಹೆಚ್ಚಾಗಿತ್ತು. ಈಗ ಕೋಳಿ ಕೂಗಿದ ಹಳ್ಳಿಗಳಲ್ಲೆಲ್ಲಾ ವಿದ್ಯಾಶಾಲೆಗಳಾಗಿ ವಿದ್ಯಾರ್ಥಿಗಳೆನಿಸಿಕೊಂಡಿರುವವರ ಸಂಖ್ಯೆ ಹೆಚ್ಚಾಗಿದೆ. ಆದರೆ ಹಿಂದಿನ ಪಂಡಿತರ ಸರಿಜೋಡಿಯುವರು ಬಹು ಕಡಿಮೆ. ಇದಕ್ಕೆ ಕಾರಣವೇನೆಂದರೆ ಹಿಂದೆ ವಿದ್ಯಾಭ್ಯಾಸವನ್ನು ಮಾಡುತ್ತಿದ್ದವರೆಲ್ಲಾ ಆದನ್ನು ಪಡೆಯುವದಕ್ಕೆ ಬೇಕಾದಷ್ಟು ಪ್ರಯತ್ನವನ್ನು ಮಾಡುತ್ತಿದ್ದರು. ಈಗ ವಿದ್ಯಾಶಾಲೆಗಳು ಅಗ್ಗವಾಗಿರುವದರಿಂದ ವಿದ್ಯೆಯ ಮೇಲಿನ ಆಶೆ ಇರಲಿ; ಇಲ್ಲದಿರಲಿ; ಎಲ್ಲರೂ ಅಕ್ಷರಾಭ್ಯಾಸಕ್ಕೆ ತೊಡಗುತ್ತಾರೆ. ಹಿಂದೆ ಕಲಿಯುವವರ ಉತ್ಸಾಹವು ಹೆಚ್ಚಾಗಿತ್ತು. ಎಂದರೆ ಅವರು ತಮ್ಮ ಪ್ರಯತ್ನದಿಂದ ವಿಷಯಗಳನ್ನು ಸಂಗ್ರಹಿಸುತ್ತಿದ್ದರು. ಈಗ ಕಲಿಸುವವರ ಉತ್ಸಾಹವು ಹೆಚ್ಚಾಗಿದೆ; ಎಂದರೆ ಬಹುಜನರು ವಿದ್ಯಾವಂತರಾದರೆನಿಸಬೇಕೆಂಬ ಕಡೆಗೆ ಈಗಿನವರ ಪ್ರವೃತ್ತಿ ಹೆಚ್ಚು. ಇದು ನಮ್ಮ ಪದ್ಧತಿಯಲ್ಲ. ಯಾವನು ವಿದ್ಯಾವಂತನಾಗಬೇಕೊ ಅವನೇ ಪ್ರಯತ್ನವನ್ನು ಮಾಡಬೇಕು. ಉಪಾಧ್ಯಾಯನು ಕೇವಲ ಮಾರ್ಗದರ್ಶಕನು. ಈಗಿನ ಕಾಲದಲ್ಲಿಯಾದರೂ ತಮ್ಮ ತಮ್ಮ ಪ್ರಯತ್ನವನ್ನು ಮಾಡುವವರು ಪಂಡಿತರಾಗಿಯೇ ಆಗುತ್ತಾರೆ. ಹೀಗೆ ವಿದ್ಯೆಯ ಲಾಭಕ್ಕೆ ವಿದ್ಯಾರ್ಥಿಯ ಪ್ರಯತ್ನವು ಅಗತ್ಯವಾದದ್ದು.

ಗುರುಕುಲವಾಸವೂ ತನ್ನ ಪ್ರಯತ್ನವೂ ಎರಡೂ ಸೇರಿದರೆ ಚಿನ್ನಕ್ಕೆ ಕುಂದಣವಿಟ್ಟಂತೆ ಅದು ಶೋಭಿಸುವದೆಂಬ ವಿಷಯದಲ್ಲಿ ಮುರಾರಿ ಕವಿಯ ಒಂದು ಶ್ಲೋಕವು ಸಯುಕ್ತಿಕವಾಗಿದೆ.

“ ದೇವೀಂ ವಾಚಮುಪಾಸತೇ ಹಿ ಬಹವಃ ಸಾರಂ ತು ಸಾರಸ್ವತಂ ।
ಜಾನೀತೇ ನಿತರಾಮಸೌ ಗುರುಕುಲಕ್ಲಿಷ್ಟೋ ಮುರಾರಿಃ ಕವಿಃ ॥
ಅಬ್ಧಿರ್ಲಂಘಿತ ಏವ ವಾನರಭಟ್ಟೈಃ ಕಿಂ ತ್ವಸ್ಯ ಗಂಭೀರತಾ ।
ಮಾಪಾತಾಲನಿಮಗ್ನಪೀವರತನುರ್ಜಾನಾತಿ ಮಂಥಾಚಲಃ ॥ ”

ಎಂದರೆ—ಎಷ್ಟೋ ಜನರು ಸರಸ್ವತಿಯುಪಾಸನೆಯನ್ನು ಮಾಡುತ್ತಾರೆ; ಆದರೆ ಗುರುಕುಲದ ಕಷ್ಟಗಳನ್ನೆಲ್ಲಾ ಅನುಭವಿಸಿದಂಥ ಮುರಾರಿಯೆಂಬ

ಕವಿಗೆ ಮಾತ್ರ ಅದು ಚೆನ್ನಾಗಿ ತಿಳಿಯುವದು. ವಾನರಸೇನೆಯು ಸಮುದ್ರವನ್ನು ದಾಟಿತು; ಆದರೆ ಅದರ ಆಳವು ಪಾತಾಲದವರಿಗೆ ಒಳಹೊಕ್ಕಂಥ ಆ ಮಂಥರಾಚಲಕ್ಕೆ ಮಾತ್ರ ಗೊತ್ತು. ಆದ್ದರಿಂದ ವಿದ್ಯೆಯು ಸಂಪೂರ್ಣ ರಸಾಸ್ವಾದವನ್ನು ಮಾಡಬೇಕಾದರೆ ಗುರುಕುಲವಾಸವು ಅಗತ್ಯ. ಇದನ್ನು ಚೆನ್ನಾಗಿ ನಡೆಸಿ ವಿದ್ಯಾರ್ಥಿಗಳು ಧನ್ಯರಾಗಬೇಕು.

ಈ ವಿಷಯುವನ್ನು ಇಲ್ಲಿಗೆ ಮುಗಿಸುವದಕ್ಕೆ ಮೊದಲು ಮೇಲಿನ ಎಲ್ಲಾ ಉಪದೇಶಗಳ ಸಾರಸಂಗ್ರಹಭೂತವಾಗಿರುವ ತೈತ್ತಿರೀಯೋಪನಿಷತ್ತಿನ ಶಿಕ್ಷಾಧ್ಯಾಯುದ ಹನ್ನೊಂದನೇ ಅನುವಾಕದ ತಾತ್ಪರ್ಯವನ್ನು ಇಲ್ಲಿ ಉಲ್ಲೇಖಿಸುತ್ತೇವೆ. "ನಿಜವನ್ನು ನುಡಿ; ಧರ್ಮದಂತೆ ನಡೆ; ವಿದ್ಯಾಭ್ಯಾಸದ ವಿಷಯುದಲ್ಲಿ ಉಪೇಕ್ಷೆಮಾಡಬೇಡ; ಗುರುಗಳಿಗೆ ಪ್ರಿಯುವಾದ ದಕ್ಷಿಣೆಯುನ್ನು ಕೊಟ್ಟಮೇಲೆ ಪ್ರಜಾತಂತುವನ್ನು ಬೆಳೆಸದೆ ಇರಬೇಡ; ಸತ್ಯದ ವಿಷಯಲ್ಲಿ ತಪ್ಪಿ ನಡೆಯಬೇಡ; ಧರ್ಮದ ವಿಷಯುದಲ್ಲಿ ತಪ್ಪಿ ನಡೆಯಬೇಡ; ಆತ್ಮಸಂರಕ್ಷಣಾರ್ಥವಾದ ಕರ್ಮದ ವಿಷಯುದಲ್ಲಿ ತಪ್ಪಿ ನಡೆಯಬೇಡ; ಮಂಗಲಕರ್ಮಗಳ ವಿಷಯುದಲ್ಲಿ ತಪ್ಪಿ ನಡೆಯಬೇಡ; ಪಾಠಪ್ರವಚನಗಳ ವಿಷಯದಲ್ಲಿ ತಪ್ಪಿ ನಡೆಯಬೇಡ; ದೇವಕಾರ್ಯಪಿತೃಕಾರ್ಯಗಳಲ್ಲಿ ತಪ್ಪಿ ನಡೆಯಬೇಡ: ತಾಯಿಯುನ್ನು ದೇವರೆಂದು ತಿಳಿ; ತಂದೆಯುನ್ನು ದೇವರೆಂದು ತಿಳಿ; ಗುರುಗಳನ್ನು ದೇವರೆಂದು ತಿಳಿ; ಅತಿಥಿಯುನ್ನು ದೇವರೆಂದು ತಿಳಿ; ಅನಿಂದ್ಯವಾದ ಕರ್ಮಗಳನ್ನು ಮಾಡು; ಉಳಿದ ಕರ್ಮಗಳನ್ನು ಮಾಡಬೇಡ; ನಮ್ಮ ಸತ್ಕರ್ಮಗಳನ್ನೇ ಅನುಕರಣ ಮಾಡು; ಉಳಿದವುಗಳ ಅನುಕರಣವನ್ನು ಮಾಡಬೇಡ; ನಮಗಿಂತ ಶ್ರೇಷ್ಠರಾದವರು ಬಂದಾಗ ಅವರಿಗೆ ಆಸನ ಮೊದಲಾದ್ದನ್ನು ಕೊಟ್ಟು ಸತ್ಕರಿಸು; ಕೊಡತಕ್ಕದ್ದೇನಾದರೂ ಇದ್ದರೆ ಶ್ರದ್ಧೆಯಿಂದ ಕೊಡಬೇಕು; ಅಶ್ರದ್ಧೆಯಿಂದ ಕೊಡಬಾರದು; ಗೌರವದಿಂದ ಕೊಡಬೇಕು; ಲಜ್ಜೆಯಿಂದ ಕೊಡಬೇಕು; ಭಯುದಿಂದ ಕೊಡಬೇಕು; ಪರಿಚಯುವನ್ನು ಮಾಡಿಕೊಂಡು ಕೊಡಬೇಕು; ಯಾವದಾದರೊಂದಾಚರಣೆಯು ವಿಷಯುದಲ್ಲಿ ಸಂಶಯುವು ಬಂದರೆ ಕ್ರೂರಬುದ್ಧಿರಹಿತರಾದಂಥ, ಧರ್ಮೇಚ್ಛುಗಳಾದಂಥ ಜನರು ಮಾಡುವಂತೆ ಮಾಡಬೇಕು; ಒಂದು ದೋಷ

ಯುಕ್ತಕರ್ಮದ ಆಚರಣೆಯ ಪ್ರಸಂಗವು ಬಂದಾಗಲೂ ಮೇಲೆ ಹೇಳಿದಂಥ ಯೋಗ್ಯರ ಅನುಕರಣವನ್ನೇ ಮಾಡು; ಇದು ಆಜ್ಞೆ; ಇದು ಪರಂಪರಾಗತವಾದ ಉಪದೇಶ; ಇದು ವೇದದ ರಹಸ್ಯವು; ಇದು ಗುರುಗಳ ಆಜ್ಞೆಯು; ಇದರಂತೆಯೇ ನಡೆಯಬೇಕು; ಇದರಂತೆಯೇ ನಡೆಯಬೇಕು.

---

ಆರನೇ ಕಿರಣ.

# ಗೃಹಸ್ಥವೃತ್ತಿ.

## ಗೃಹಸ್ಥನ ಪ್ರಾಶಸ್ತ್ಯ.

ಮನುಷ್ಯನ ವಿದ್ಯಾರ್ಥಿವೃತ್ತಿಯು ಕಾಲವು ಮುಗಿಯುವ ಹೊತ್ತಿಗೆ ಅವನಿಗೆ ಗೃಹಸ್ಥವೃತ್ತಿಗೆ ತಕ್ಕ ಕಾಲವು ಬರುತ್ತದೆ. ಗೃಹಸ್ಥನೆಂದರೆ ಮನೆಯಲ್ಲಿರುವವನೆಂದರ್ಥ. ಇದುವರೆಗೆ ವಿದ್ಯಾರ್ಥಿಯು ವಿದ್ಯೆಯನ್ನು ಸಂಪಾದಿಸುವದಕ್ಕಾಗಿ ಮನೆಯನ್ನು ಬಿಟ್ಟು ಗುರುಗಳಿದೆಯಲ್ಲಿದ್ದು ಹೊರಗೆ ಕಾಲವನ್ನು ಕಳೆಯುತ್ತಿರುತ್ತಾನೆ. ವಯಸ್ಸು ಬರುತ್ತ ಬರುತ್ತ ಮನುಷ್ಯನಿಗೆ ಸಹಜವಾಗಿ ತಾನಿನ್ನು ಗೃಹಸ್ಥನಾಗಿ ವ್ಯವಹಾರವನ್ನು ಮಾಡಬೇಕೆಂಬ ಬಯಕೆಯುಂಟಾಗುತ್ತದೆ. ಇಲ್ಲಿ ಗೃಹವೆಂಬ ಮಾತಿಗೆ ಬರೀ ಮನೆಯೆಂದರ್ಥವನ್ನು ಮಾಡಿಕೊಳ್ಳಬಾರದು. ಬರೀ ಮನೆಯಲ್ಲಿರುವದು ಗೃಹಸ್ಥಾಶ್ರಮವಲ್ಲ. " ಗೃಹಿಣೀ ಗೃಹಮುಚ್ಯತೇ " ಎಂಬದೊಂದು ವಾಕ್ಯವಿದೆ. ಹೆಂಡತಿಯೇ ಮನೆಯೆಂದರ್ಥ. ಗೃಹಸ್ಥನಾಗುವದೆಂದರೆ ತನುಗನುರೂಪಳಾದ ಸ್ತ್ರೀಯೊಡನೆ ಮದುವೆಯಾಗಿ ಧರ್ಮಾರ್ಥಕಾಮಗಳನ್ನು ಸಂಪಾದನೆ ಮಾಡುತ್ತ ವ್ಯವಹಾರವನ್ನು ಮಾಡುವದು. ಇದುವರೆಗೆ ತಮ್ಮ ಯೋಗಕ್ಷೇಮದ ಯೋಚನೆ ಕೂಡ ತಮಗಿಲ್ಲದೆ ನಿಶ್ಚಿಂತೆಯಿಂದ ಓದುಬರಹದಲ್ಲಿ ಕಾಲವನ್ನು ಕಳೆಯುತ್ತಿದ್ದ ವಿದ್ಯಾರ್ಥಿಗಳು ತಮ್ಮ ಉಪಾಧ್ಯಾಯರಿಂದ ಅಪ್ಪಣೆಯನ್ನು ಪಡೆದು ಬಂದು ತಮ್ಮ ತಮ್ಮ ಹೆಂಡತಿಯ ಮತ್ತು ಆಶ್ರಿತವರ್ಗದ ಯೋಗಕ್ಷೇಮದ ಭಾರವನ್ನೆಲ್ಲಾ ಹೊರಬೇಕಾಗುತ್ತದೆ. ಮನುಷ್ಯನ ನಿಜವಾದ ಪ್ರಪಂಚ ವ್ಯವಹಾರವೆಲ್ಲಾ ಇಲ್ಲಿಯೇ. ಮನುಷ್ಯನು ತನ್ನ ನಿಜವಾದ ಮನುಷ್ಯತ್ವವನ್ನು ಒರೆಗಲ್ಲಿಗೆ ಹಚ್ಚಿ ನೋಡಿ ಅದರ ಬಣ್ಣದ ಬೆಡಗನ್ನು ಬೀರುವದು ಇಲ್ಲಿಯೇ. ಮನುಷ್ಯನಿಗೆ ಪರಮಧ್ಯೇಯವಾದ ಪಾರ

ವಾರ್ಥಿಕವೃತ್ತಿಗೆ ಬೇಕಾದ ಸಾಮರ್ಥ್ಯವನ್ನು ಸಂಪಾದಿಸುವದಕ್ಕೆ ಇದೇ ಗರಡಿಯ ಮನೆ ಮನುಷ್ಯನು ತನ್ನಲ್ಲಿರುವ ಪಶುಸ್ವಭಾವವನ್ನು ಹಿಡಿತದಲ್ಲಿಟ್ಟುಕೊಳ್ಳುವದನ್ನು ಕಲಿಯುವದಕ್ಕೆ ಇದೇ ಶಿಕ್ಷಣಶಾಲೆ. ಮನುಷ್ಯನು ತನ್ನ ಇಂದ್ರಿಯಾರ್ಥಗಳನ್ನು ಧರ್ಮಕ್ಕೆ ವಿರುದ್ಧವಾಗದಂತೆ ಉಪಭೋಗಮಾಡುವದಕ್ಕೆ ಇದೇ ಭೋಗಭೂಮಿ. ಪ್ರಾಪಂಚಿಕಸುಖವೆಂಬ ತಿರುಳಿನ ತೂಕವೆಷ್ಟೆಂಬುದನ್ನು ತಿಳಿಯುವದಕ್ಕೆ ಇದೇ ಅಳೆಯುವ ಪಾತ್ರೆ. ಮನುಷ್ಯನು ಗೃಹಸ್ಥನಾಗುತ್ತಲೇ ಅವನ ಕೊರಳಿಗೆ ಹೆಂಡತಿಮಕ್ಕಳಷ್ಟೇ ಅಲ್ಲ; ಸಮಸ್ತಪ್ರಾಣಿಗಳೂ ಗಂಟುಬೀಳುವರು. ಗೃಹಸ್ಥನೆಂದರೆ ಸರ್ವಜನರ ಹಿತಕ್ಕಾಗಿ ದುಡಿಯುವದಕ್ಕೆ ತಲೆಗೊಟ್ಟವನಾಗಿರುವನು. ಗೃಹಸ್ಥನು ತನ್ನ ಮೈ ಕಟ್ಟುಬಿಚ್ಚಿಡುವಂತೆ ದುಡಿದು ಆ ದ್ರವ್ಯವನ್ನೆಲ್ಲಾ ಸಾರ್ವಜನಿಕದ್ರವ್ಯಸ್ವರೂಪವಾಗಿ ರಕ್ಷಿಸುತ್ತ ಅದರಿಂದ ಸರ್ವಜನೋಪಕಾರವನ್ನು ಮಾಡುತ್ತಿರುವವನಾಗಬೇಕಾಗುತ್ತದೆ. ಆದ್ದರಿಂದಲೇ

"ಯಥಾ ವಾಯುಂ ಸಮಾಶ್ರಿತ್ಯ ವರ್ತಂತೇ ಸರ್ವಜಂತವಃ ।
ತಥಾ ಗೃಹಸ್ಥಮಾಶ್ರಿತ್ಯ ವರ್ತಂತೆ ಸರ್ವ ಆಶ್ರಮಾಃ ॥"

ಎಂದು ಭಗವಾನ್ ಮನುಮಹರ್ಷಿಗಳು ಹೇಳಿದ್ದಾರೆ. ಎಲ್ಲಾ ಪ್ರಾಣಿಗಳೂ ಹೇಗೆ ವಾಯುವನ್ನಾಶ್ರಯಿಸಿಕೊಂಡಿರುತ್ತವೆಯೋ ಹಾಗೆ ಎಲ್ಲ ಆಶ್ರಮದವರೂ ಗೃಹಸ್ಥನನ್ನು ಆಶ್ರಯಿಸಿಕೊಂಡಿರುತ್ತಾರೆ. ಹೇಗೆಂದ್ರರೆ ಗೃಹಸ್ಥವೃತ್ತಿಯ ಹಿಂದಿನ ವಿದ್ಯಾರ್ಥಿವೃತ್ತಿಯು ಬ್ರಹ್ಮಚರ್ಯಾಶ್ರಮ. ಆ ಆಶ್ರಮದಲ್ಲಿರುವಾಗ ವಿದ್ಯಾರ್ಥಿಗಳು ಯಾರೂ ತಮ್ಮ ದುಡಿತದಿಂದ ತಾವು ಜೀವಿಸಿಕೊಂಡಿರುವವರಾಗಿರುವದಿಲ್ಲ. ಶ್ರೀಮಂತರ ಮನೆಯವರು ತಮ್ಮ ಮನೆಯ ಹಣದಿಂದ ತಮ್ಮ ವೃತ್ತಿಯನ್ನು ಸಾಗಿಸಬಹುದು. ಉಳಿದ ಸಾಮಾನ್ಯರ ವಿದ್ಯಾರ್ಥಿಗಳೆಲ್ಲರೂ ಆಯಾ ಊರಿನ ಗೃಹಸ್ಥರ ಆಶ್ರಯದಿಂದಲೇ ಅನ್ನವನ್ನು ಪಡೆಯಬೇಕಾಗುವದು. ಆದ್ದರಿಂದ ಗೃಹಸ್ಥನು ಬ್ರಹ್ಮಚಾರಿಗಳಿಗೆ ಆಶ್ರಯನಾದನು. ಇನ್ನು ಗೃಹಸ್ಥರಲ್ಲಿಯೇ ಬಡವರಾದವರು ಹಣಗಾರರ ಆಶ್ರಯವನ್ನು ಪಡೆಯಲೇ ಬೇಕಾಗುವದು. ಹೀಗೆ ಗೃಹಸ್ಥನು ಗೃಹಸ್ಥರನ್ನೂ ಪೋಷಿಸುವವನಾಗು

ವನು. ಇನ್ನೊಂದು ವಾನಪ್ರಸ್ಥಾಶ್ರಮವೆಂಬುದೊಂದುಂಟು. ಅದು ಈಗ ಗ್ರಂಥದಲ್ಲಿ ಮಾತ್ರ ಇದೆ. ಪೂರ್ವದಲ್ಲಿ ಗೃಹಸ್ಥರು ತಮ್ಮ ಅಪರವಯಸ್ಸಿನಲ್ಲಿ ಕಾಡಿನಲ್ಲಿದ್ದು ಶರೀರದಂಡನೆಯನ್ನು ಮಾಡುತ್ತಿದ್ದರು. ಆಗಿನ ಗೃಹಸ್ಥರು ಅಂಥವರನ್ನು ಕಂಡಾಗ ಕನಿಕರದಿಂದ ಅವರಿಗೆ ಅಲ್ಲಿಯೇ ಏನಾದರೂ ಸೌಕರ್ಯಗಳನ್ನು ಕಲ್ಪಿಸಿ ಕೊಡುತ್ತಿದ್ದರು. ಈ ರೀತಿಯಲ್ಲಿ ವಾನಪ್ರಸ್ಥರ ಭಾರವೂ ಗೃಹಸ್ಥರ ಮೇಲೆಯೇ ಬೀಳುತ್ತಿತ್ತು. ಸಂನ್ಯಾಸಾಶ್ರಮವೆಂಬುದೊಂದು ಕೊನೆಯದಿದೆ. ಅವರು ತಮ್ಮದೆಂದು ಹೇಳಿಕೊಳ್ಳುವಂಥ ಯಾವದನ್ನೂ ಇಟ್ಟುಕೊಳ್ಳದೆ ನಿರಾತಂಕದಿಂದ ದೇವರ ವಿಚಾರದಲ್ಲಿಯೇ ತೊಡಗಿರುವರು. ಅವರ ಯೋಗಕ್ಷೇಮವೆಲ್ಲಾ ಗೃಹಸ್ಥರಿಗೇ ಸೇರಿರುವದು. ಹೀಗೆ ಗೃಹಸ್ಥರು ಎಲ್ಲಾ ಆಶ್ರಮದವರಿಗೂ ಆಶ್ರಯಭೂತರಾಗಿರುವರು. ಗೃಹಸ್ಥಾಶ್ರಮದಲ್ಲಿ ಮನುಷ್ಯನ ಮನಸ್ಸು ಪ್ರಾಪಂಚಿಕವಾದ ದ್ರವ್ಯಾರ್ಜನೆ ಮೊದಲಾದವುಗಳಲ್ಲಿಯೇ ತೊಳಲುತ್ತ ಭಗವದನುಗ್ರಹಕ್ಕೆ ದೂರವಾದೀತೆಂದು ತೋರುವ ಸಂಭವವುಂಟು. ಆ ದ್ರವ್ಯಾರ್ಜನೆ ಮೊದಲಾದವುಗಳು ಕೇವಲ ಆತ್ಮಾರ್ಥವಾಗಿದ್ದರೆ ಮಾತ್ರ ಹಾಗೆಯೇ ಆಗುವದು. ಹಾಗಿಲ್ಲದೆ ಪರಾರ್ಥವಾದರೆ ಯಾರು ಆ ಅರ್ಥಕ್ಕೆ ಭಾಗಿಗಳಾಗುವರೊ ಅವರ ಸತ್ಕರ್ಮಾನುಷ್ಠಾನದ ಫಲವು ತಪ್ಪದೆ ಗೃಹಸ್ಥನ ಮಡಿಲಿಗೆ ಬೀಳುವದು. ಇದರಿಂದ ಗೃಹಸ್ಥನು ಬಹು ಕಷ್ಟಸಾಧ್ಯವಾದಂಥ ಧ್ಯಾನಾದಿಗಳ ಫಲವನ್ನು ಅನಾಯಾಸವಾಗಿ ಪಡೆಯುವನು. ಧರ್ಮಕ್ಕೆ ಅವಿರುದ್ಧವಾಗಿ ಇಂದ್ರಿಯಾರ್ಥಗಳನ್ನೂ ಭೋಗಿಸುತ್ತ ಸುಲಭವಾಗಿ ಮಹತ್ಪುಣ್ಯವನ್ನೂ ಪಡೆಯುವ ಸುಯೋಗಕ್ಕೆ ಅವಕಾಶವಿರುವದೇ ಗೃಹಸ್ಥಾಶ್ರಮದ ವಿಶೇಷಲಕ್ಷಣ.

ಮಹಾಭಾರತದ ಶಾಂತಿಪರ್ವದಲ್ಲಿ ಬಂದಿರುವ ಒಂದು ವಿಚಾರವು ಇಲ್ಲಿ ಹೇಳುವದಕ್ಕೆ ತಕ್ಕದ್ದಾಗಿದೆ. ಒಂದಾನೊಂದು ಕಾಲದಲ್ಲಿ ಕೆಲವರು ವಿದ್ಯಾರ್ಥಿಗಳು ತಮ್ಮ ವಿದ್ಯಾರ್ಥಿವೃತ್ತಿ ಮುಗಿಯುತ್ತಲೇ ದೇವರನ್ನು ಒಮ್ಮೆಗೇ ಬುಟ್ಟಿಯೊಳಕ್ಕೆ ಹಾಕಿಕೊಳ್ಳಬೇಕೆಂದು ವಾನಪ್ರಸ್ಥಾಶ್ರಮಕ್ಕೆ ಹೊರಟರು. ಗೃಹಸ್ಥಾಶ್ರಮವನ್ನು ಸ್ವೀಕರಿಸಿದರೆ ಹೆಂಡತಿಮಕ್ಕಳಿಗೆ ದೇಹವನ್ನು ಮಾರಿಕೊಂಡಂತಾಗಿ ಅವರಿಗಾಗಿ ಸಾಯುವವರೆಗೂ ದುಡಿ

ಯು ಬೇಕಾದೀತೆಂದು ಅವರಿಗೆ ಗಾಬರಿಯಾಗಿತ್ತು. ಆಗ ಇಂದ್ರನು ಪಕ್ಷಿ ರೂಪವನ್ನು ತಾಳಿ ಅವರೆದುರಿಗೆ ಬಂದು ಅವರಿಗೆ ಹೇಳುತ್ತಾನೆ-- "ಎಲೋ ಹುಡುಗರಿರಾ, ನೀವು ಮನಸ್ಸಿನ ಉತ್ಸಾಹದ ಭರದಲ್ಲಿ ಆತುರ ದಿಂದ ಹೀಗೆ ಹೊರಟಿರುತ್ತೀರಿ. ಶಾಂತರೀತಿಯಿಂದ ವಿಚಾರಮಾಡಿರಿ. ನೀವು ವಾನಪ್ರಸ್ಥಾಶ್ರಮಕ್ಕೆ ಹೊರಟಿರುವದು ದೇವರ ಮೇಲಿನ ಉತ್ಕಟ ಪ್ರೇಮದಿಂದಲ್ಲ; ಪ್ರಪಂಚದ ದುಡಿತವನ್ನು ತಪ್ಪಿಸಿಕೊಳ್ಳಬೇಕೆಂಬ ಹೇಡಿ ತನದಿಂದ. ಗೃಹಸ್ಥಾಶ್ರಮವು ನಿಮಗೆ ಅಡ್ಡದಾರಿಗೆ ಹೋಗಗೊಡದಂತೆ ಸಹಾಯಕವಾಗುವದು. ಸದ್ಗುಣಗಳನ್ನು ಬೆಳೆಸಿಕೊಳ್ಳುವದಕ್ಕೆ ಅದು ಒಳ್ಳೇ ಹುಲುಸಾದ ಭೂಮಿ. ಅದು ಬಹು ಪವಿತ್ರವಾದದ್ದು. ಅಲ್ಲಿದ್ದು ನೀವು ದೇವತೆಗಳ ಪೂಜೆಯನ್ನು ನಡೆಸಬಹುದು; ವಿದ್ಯೆಯನ್ನು ಹೆಚ್ಚಿಸಿ ಕೊಳ್ಳಬಹುದು; ವಂಶವನ್ನು ಅಭಿವೃದ್ಧಿಮಾಡಿ ಪಿತೃಋಣವನ್ನು ತೀರಿಸ ಬಹುದು; ಮತ್ತು ಚಿಕ್ಕಂದಿನಲ್ಲಿ ಇತರರಿಂದ ಪಡೆದ ಉಪಕಾರಕ್ಕೆ ಪ್ರತಿ ಯಾಗಿ ಅವರಿಗೆ ನೆರವಾಗಬಹುದು. ಇವೆಲ್ಲಾ ಒಂದೊಂದು ಬಗೆಯ ತಪಶ್ಚರ್ಯೆಗಳೇ. ಗೃಹಸ್ಥಾಶ್ರಮದ ಭಾರವು ಬಹು ತೂಕವಾದರೂ ಅದನ್ನು ಹೊರುವದಕ್ಕೆ ನಿಮ್ಮ ಹೆಗಲನ್ನು ಕೊಡಿ. ಈ ಬಗೆಯ ಕರ್ತ ವ್ಯಕ್ಕೆ ತಪ್ಪಿಸಿಕೊಳ್ಳುವವರು ಪಾಪಕ್ಕೆ ಭಾಗಿಗಳಾಗುವರು." ವೈಮುರಿ ಯುವಂತೆ ದುಡಿದು ಅತಿಥಿಗಳಿಗೂ ಬಡವರಿಗೂ ಹಾಕಿ ಉಳಿದದ್ದನ್ನು ತಾನು ತಿನ್ನುವದು ನಿಜವಾದ ಯಜ್ಞಶೇಷವು.

"ಯಜ್ಞಶಿಷ್ಟಾಶಿನಸ್ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ"

ಎಂದು ಗೀತೆಯಲ್ಲಿದೆ. ಯಜ್ಞಶೇಷವನ್ನು ಉಣ್ಣುವವರ ಸರ್ವಪಾಪಗಳೂ ಮಾಯವಾಗುತ್ತವೆ. ಆದ್ದರಿಂದ ಗೃಹಸ್ಥಾಶ್ರಮವು ಸರ್ವೋತ್ತಮ ವಾದದ್ದು.

## ಮದುವೆ.

ಮನುಷ್ಯನಿಗೆ ಮದುವೆಯು ಇಂದ್ರಿಯತೃಪ್ತಿಗಾಗಿ ಅಲ್ಲವೆಂಬು ದನ್ನು ಯಾವಾಗಲೂ ಚೆನ್ನಾಗಿ ನೆನಪಿನಲ್ಲಿಡಬೇಕು. ಇಂದ್ರಿಯತೃಪ್ತಿ ಗಾಗಿ ಸ್ತ್ರೀಯ ಕಡೆಗೆ ದೀನದೃಷ್ಟಿಯನ್ನು ಹಾಕುವದು ಪಶುತ್ವವೇ

ಸರಿ. ಈ ಮಾತು ಗಂಡಸರಿಗೆ ಮಾತ್ರವೇ ಹೇಳಿದ್ದೆಂದು ಯಾರೂ ತಿಳಿಯಬಾರದು. ಇದು ಸ್ತ್ರೀಯರಿಗೂ ಅನ್ವಯಿಸುವದು. ಹಾಗಾದರೆ ಮದುವೆಯೇತಕ್ಕೆಂದರೆ ಸತ್ಸಂತತಿಯನ್ನು ಪಡೆಯುವದೇ ಮದುವೆಯ ಉದ್ದೇಶ. ಸತ್ಸಂತತಿಯೆಂದರೆ ದೇವರಲ್ಲಿ ಭಕ್ತಿಯುಳ್ಳವರಾಗಿ ತಮ್ಮ ಕುಲದಲ್ಲಿ ಬಹುದಿನಗಳಿಂದ ನಡೆದು ಬಂದಿರುವ ಧರ್ಮಕರ್ಮಗಳನ್ನು ಮುಂದೆ ಸಾಗಿಸುತ್ತ ಅತಿಥಿಗಳಿಗೆ ಆಶ್ರಯದಾತರಾಗಿ ಮನೆತನದ ಕೀರ್ತಿಯನ್ನು ಬೆಳೆಸುವ ಮಕ್ಕಳಿಗೆ ಸತ್ಸಂತತಿಯೆಂದು ಹೆಸರು. ಮನುಷ್ಯರ ಈ ಬಗೆಯ ಧರ್ಮಾಚರಣೆಯಿಂದಲೇ ದೇವರು ಕಾಲಕಾಲಕ್ಕೆ ಮಳೆಬೆಳೆಗಳನ್ನು ಕೊಡುವನೆಂದು ಶಾಸ್ತ್ರಗಳೂ ಹೇಳುತ್ತವೆ; ಹಿರಿಯರೂ ನಂಬುತ್ತಾರೆ. ಮನುಷ್ಯರು ಕೇವಲ ಇಂದ್ರಿಯಾರ್ಥಿಗಳಾದರೆ ಮಳೆಬೆಳೆಗಳ ಸಂಕೋಚವಾಗಬಹುದೆಂಬ ಮಾತೂ ಇರಲಿ; ಜಗತ್ತಿನಲ್ಲಿ ಸುಖವೆಂಬುದು ತಲೆಯೆತ್ತುವದಕ್ಕೇ ಅವಕಾಶವಿಲ್ಲದೆ ಹೋದೀತು. ಸ್ವಾರ್ಥಿಗಳ ಸಮುದಾಯದಲ್ಲಿ ಯಾರಿಗೂ ಸುಖವಿಲ್ಲ. ಏಕೆಂದರೆ ಅವರವರಿಗೆ ತಮ್ಮ ತಮ್ಮ ಇಂದ್ರಿಯಾರ್ಥಗಳು ಸಿಕ್ಕಿದರೂ ಸ್ವಾರ್ಥತೆಯೆಂಬ ಉಪ್ಪು ಅದರಲ್ಲಿ ಸೇರಿದ್ದು ಅದು ಹೊಟ್ಟೆಯಲ್ಲಿ ತಳಮಳವನ್ನೇ ಉಂಟುಮಾಡುತ್ತಿರುವದು. ಮನುಷ್ಯನಿಗೆ ಧರ್ಮಾಚರಣೆಯ ಬರೀ ಕಲ್ಪನೆಯು ಬಂದರೂ ಸಾಕು; ಅವನ ಮನಸ್ಸು ಉದಾರವಾಗಿ ಪರಾರ್ಥದ ಕಡೆಗೆ ತಿರುಗುವದು. ಇಷ್ಟಾಯಿತೆಂದರೆ ಎಲ್ಲರಿಗೂ ಸುಖವಾಗುವದು. ಏಕೆಂದರೆ ಪರಾರ್ಥತೆಯ ಸ್ವಭಾವವೇ ಅಂಥದ್ದು. ಆದ್ದರಿಂದ ಧಾರ್ಮಿಕಪ್ರವೃತ್ತಿಯುಳ್ಳ ಜನರ ಆವಶ್ಯಕತೆಯು ಲೋಕಕ್ಕೆ ಬಹಳವಾಗಿರುವದು. ಈ ಉದ್ದೇಶವು ನೆರವೇರುವದಕ್ಕಾಗಿ—ಜಗಚ್ಚಕ್ರವು ಸುಸೂತ್ರವಾಗಿ ಸಾಗುವದಕ್ಕಾಗಿ–ಪ್ರತಿಯೊಬ್ಬನೂ ಸತ್ಸಂತತಿಯನ್ನು ಪಡೆಯಲೇ ಬೇಕು. ಈ ಕರ್ತವ್ಯವನ್ನು ನೆರವೇರಿಸುವದಕ್ಕಾಗಿ ಮನುಷ್ಯನು ಮದುವೆಯಾಗಬೇಕು.

ಮದುವೆಯ ಉದ್ದೇಶವು ನಿಶ್ಚಯವಾದ ಮೇಲೆ ಮದುವೆಯ ಸ್ವರೂಪವು ತಾನೇ ವ್ಯಕ್ತವಾಗುವದು. ಮದುವೆಯು ಇಂದ್ರಿಯಾರ್ಥಕ್ಕಾಗಿ ಇದ್ದರೆ ವಧೂವರರ ರೂಪಲಾವಣ್ಯಕ್ಕೆ ಹೆಚ್ಚಿನ ಬೆಲೆ ಇರುತ್ತಿತ್ತು. ಸತ್ಸಂತತಿಯ ಉದ್ದೇಶದಲ್ಲಿ ಅದಕ್ಕೆ ಸ್ಥಲವಿಲ್ಲ. ಹೀಗೆನ್ನುವದರಿಂದ

ವಧೂವರರಲ್ಲಿ ರೂಪಲಾವಣ್ಯಸಂಪತ್ತು ಇರಬಾರದೆಂದು ಯಾರೂ ಅರ್ಥವನ್ನು ಮಾಡಬಾರದು. ವಧೂವರರಿಗೆ ರೂಪಲಾವಣ್ಯಸಂಪತ್ತು ಇದ್ದರೆ ಅದು ಚಿನ್ನದ ಹೂವಿಗೆ ಸುವಾಸನೆ ಇದ್ದಂತೆ ಹೆಚ್ಚು ಮನೋಹರವೇ ಆಗುವದು. ವಧೂವರರಲ್ಲಿ ರೂಪಲಾವಣ್ಯಸಂಪತ್ತಿಗೆ ಮಿತಿಮೀರಿದ ಪ್ರಾಶಸ್ತ್ಯವನ್ನು ಕೊಡಬಾರದು. ರೂಪಲಾವಣ್ಯಸಂಪತ್ತಿಗೆ ಕೊರತೆಯಾದರೂ ಗುಣಸಂಪತ್ತಿನ ಕೊರತೆ ಇರಬಾರದು. ಪುರುಷನಾಗಲಿ ಸ್ತ್ರೀಯಾಗಲಿ ಕುಲಶೀಲಗಳಲ್ಲಿ ತನತನಗೆ ಅನುರೂಪರಾದವರನ್ನು ವರಿಸಬೇಕು.

ಉಳಿದ ದೇಶಗಳಲ್ಲಿ ವರನು ವಧುವನ್ನು ವರಿಸುವದಾಗಲಿ, ವಧು ವರನನ್ನು ವರಿಸುವದಾಗಲಿ, ಅವರವರ ಸ್ವಾತಂತ್ರ್ಯಕ್ಕೆ ಬಿಟ್ಟಿರುವದೇ ಬಹಳ. ನಮ್ಮ ದೇಶದಲ್ಲಿ ಹಾಗಿಲ್ಲ. ವಧುವೂ ವರನೂ ಯೌವನವನ್ನು ಪಡೆದಿದ್ದರೂ ಕೂಡ ಅವರ ವಿಚಾರಶಕ್ತಿಯು ಪರಿಪಕ್ವವಾಗಿರದೆ ಅವರ ಮನಸ್ಸು ಸಹಜವಾಗಿ ವಿಷಯಸುಖದ ಕಡೆಗೆ ಹರಿಯುತ್ತಿರುವದರಿಂದ ವಧೂವರರಲ್ಲಿರಬೇಕಾದ ಗುಣಗ್ರಹಣಶಕ್ತಿಯು ಅವರಲ್ಲಿ ಎದ್ದು ಕಾಣಲಾರದೆಂದು ಅವರ ಸಂಬಂಧವನ್ನು ಬೆಳೆಸುವ ಸ್ವಾತಂತ್ರ್ಯವನ್ನು ಹಿರಿಯರು ತಮ್ಮಲ್ಲಿಟ್ಟುಕೊಂಡಿರುವರು. ಇಂದ್ರಿಯಾರ್ಥವಾಗಿ ಬೆಳೆಸುವ ಸಂಬಂಧದಲ್ಲಿ ಸತ್ಸಂತತಿಯು ಆರೆ ಇಲ್ಲವಾದ ಕಾರಣ ನಮ್ಮವರು ತಮ್ಮ ಲಕ್ಷ್ಯವನ್ನೆಲ್ಲಾ ಗುಣದ ಕಡೆಗೆ ಹೆಚ್ಚಾಗಿ ಹಾಕುವರು. ಕುಲದಲ್ಲಿಯಾಗಲಿ ಶೀಲದಲ್ಲಿಯಾಗಲಿ ಅನನುರೂಪವಾದ ಸಂಬಂಧವನ್ನು ಹಿರಿಯರೆಂದಿಗೂ ಸಮ್ಮತಿಸುವದಿಲ್ಲ. ಕುಲಶೀಲಗಳನ್ನು ನೋಡುವದಿಷ್ಟೇ ಅಲ್ಲದೆ ಆ ವಧೂವರರ ಯೋಗವು ಮುಂದೆ ಒಂದಕ್ಕೊಂದು ಎಷ್ಟರಮಟ್ಟಿಗೆ ಹೊಂದಿಕೊಂಡಿರಬಹುದೆಂಬುದನ್ನು ಕೂಡ ಹಿರಿಯರು ಜ್ಯೋತಿಃಶಾಸ್ತ್ರದ ದೃಷ್ಟಿಯಿಂದ ನೋಡುತ್ತಾರೆ. ಇಷ್ಟೆಲ್ಲ ಸೂಕ್ಷ್ಮದೃಷ್ಟಿಯು ಉಪಯೋಗವು ಸತ್ಸಂತತಿಗಾಗಿಯೇ.

ನಮ್ಮ ದೇಶದಲ್ಲಿಯಾದರೂ ವಧೂವರರನ್ನು ಆರಿಸಿಕೊಳ್ಳುವದಕ್ಕೆ ಸ್ತ್ರೀಪುರುಷರಿಗೆ ಸ್ವಾತಂತ್ರ್ಯವಿರುವದೂ ಉಂಟು. ಅದು ಕ್ಷತ್ರಿಯರಲ್ಲಿ. ಕ್ಷತ್ರಿಯರಾದರೂ ರೂಪಲಾವಣ್ಯಗಳಿಗೆ ಮರುಳಾಗುವ ಪದ್ಧತಿ

ಇಲ್ಲ. ಶೌರ್ಯ,ಧೈರ್ಯ- ಮೊದಲಾದ ಕ್ಷತ್ರಿಯೋಚಿತವಾದ ಗುಣಗಳ ಮೇಲೆಯೇ ಅವರ ಆರಿಸುವಿಕೆ. ಹೀಗೆ ಆರಿಸುವುದರಲ್ಲಿಯೂ ಕುಲ ಶೀಲಗಳ ವಿರುದ್ಧಪರಿಸ್ಥಿತಿಗೆ ಒಪ್ಪಿಗೆ ಇಲ್ಲ. ಅವರು ಆರಿಸುವದು ಕುಲ ಶೀಲಗಳೊಡನೆ ಶೌರ್ಯ, ಧೈರ್ಯ-ಮೊದಲಾದ ಗುಣಗಳುಳ್ಳವರನ್ನು. ಈ ನಿಯ ಮಗಳಿಗೊಳಪಟ್ಟು ಕ್ಷತ್ರಿಯಕನ್ಯೆಯರು ತಮ್ಮ ವರರನ್ನು ತಾವು ವರಿಸಿ ಕೊಳ್ಳಬಹುದಾದರೂ ಆ ಕನ್ಯೆಯರು ತಮ್ಮ ವರನೀಧರ್ಮಕ್ಕೆ ಸೋತು ಬರೀ ರೂಪಲಾವಣ್ಯಗಳ ಬಲೆಗೆ ಬಿದ್ದಾರೆಂದು ಹೆದರಿ ಅವರ ಹಿರಿಯರು ಕುಲೀನರಾದ ರಾಜರನ್ನೆಲ್ಲಾ ಸೇರಿಸಿ ಅವರ ಪೌರುಷವನ್ನು ಒರೇ ಹಚ್ಚಿ ನೋಡುವದಕ್ಕೆ ಏನಾದರೊಂದು ಮಹತ್ತ್ವವುಳ್ಳ ಪಣವನ್ನೊಡ್ಡುತ್ತಿದ್ದರು. ಸೀತೆಯ ಪಾಣಿಗ್ರಹಣಕ್ಕೆ ಶಿವಧನುರ್ಭಂಗವನ್ನು ಮಾಡುವಂಥ ಮಹಾ ಪರಾಕ್ರಮಿಯೊಬ್ಬನೇ ತಕ್ಕವನೆಂದು ಜನಕರಾಜನು ಅದನ್ನು ಪಣವಾಗಿ ಟ್ಟನು. ದ್ರೌಪದಿಯ ಪಾಣಿಗ್ರಹಣಕ್ಕೆ ಮತ್ಸ್ಯಯಂತ್ರವನ್ನು ಭೇದಿ ಸುವಂಥ ಶೂರನೊಬ್ಬನೇ ಯೋಗ್ಯನೆಂದು ದ್ರುಪದರಾಜನು ಅದನ್ನು ಪಣವಾಗಿಟ್ಟನು. ಹೀಗೆ ಪುರುಷರು ಪಣವನ್ನು ಗೆದ್ದು ಬೇಕಾದ ಸ್ತ್ರೀಯರನ್ನು ಮಾಡಿಕೊಳ್ಳಬಹುದಾದರೂ ಅಗಲೂ ಹಿರಿಯರ ಅನುಜ್ಞೆ ಯನ್ನು ಪಡೆಯುವದೇ ಶಿಷ್ಟಸಂಪ್ರದಾಯವಾಗಿರುವದು. ಶ್ರೀರಾಮ ಚಂದ್ರಮೂರ್ತಿಯು ಶಿವಧನುಸ್ಸನ್ನು ಭಂಗಮಾಡಿದನು. ಇದರಿಂದಲೇ ಅವನು ಸೀತೆಯನ್ನು ಗೆದ್ದಂತೆಯೇ ಆಯಿತು. ಆದರೂ ಶ್ರೀರಾಮನು ಆ ಸ್ಥಲಕ್ಕೆ ತನ್ನ ತಂದೆಯು ಬಂದು ಆಜ್ಞೆಯನ್ನು ಕೊಟ್ಟ ಮೇಲೆಯೇ ಮದುವೆಯ ಜಗುಲಿಯನ್ನೇರಿರುವನು. ಈ ಸಂದರ್ಭದಲ್ಲಿ ಶ್ರೀರಾಮನ ಅಮಾನುಷಪರಾಕ್ರಮವು ವ್ಯಕ್ತವಾಗಿದ್ದರೂ ಕೂಡ ಆ ಸಭೆಯಲ್ಲಿ ವಧೂ ವರರ ವಂಶದ ಕುಲಶೀಲಗಳ ವಿಚಾರವೂ ನಡೆದಿರುವದು. ಆದ್ದರಿಂದ ವಿವಾಹವಾಗುವ ಸಂದರ್ಭದಲ್ಲಿ ಕುಲಶೀಲಗಳ ವಿಚಾರಕ್ಕೂ ಹಿರಿಯರ ಸಮ್ಮತಿಗೂ ನಮ್ಮ ದೇಶದಲ್ಲಿ ಬೆಲೆ ಹೆಚ್ಚು.

ಪರದೇಶದವರು ನಮ್ಮ ದೇಶದವರ ಮೇಲೆ ಆರೋಪಿಸುವ ದೋಷದಲ್ಲಿ ಸ್ತ್ರೀಪುರುಷರಿಗೆ ತಮತಮಗೆ ಬೇಕುಬೇಕಾದವರನ್ನು ವರಿಸಿ ಕೊಳ್ಳುವ ಸ್ವಾತಂತ್ರ್ಯವಿಲ್ಲವೆಂಬುವದೊಂದು. ಇದರ ಸಮಾಧಾನವನ್ನು

ಮೇಲೆ ಹೇಳಿದ್ದಾಯಿತಷ್ಟೆ. ನಮ್ಮ ದೇಶದಲ್ಲಿ ಸ್ತ್ರೀಯರಿಗೆ ಪ್ರಾಶಸ್ತ್ಯ ವಿಲ್ಲವೆಂಬುದು ಅವರ ಎರಡನೆಯ ಆಕ್ಷೇಪಣೆ. ಅವರ ದೃಷ್ಟಿಯಿಂದ ನೋಡಿದರೆ ನಮ್ಮವರಲ್ಲಿ ಇದೊಂದು ದೋಷವಾಗಿ ಕಾಣುವದು ನಿಜ. ಯುರೋಪಿನಲ್ಲಿ ಸ್ತ್ರೀಯರು ಹೊರಗೆ ವ್ಯವಹಾರದಲ್ಲಿ ಕೂಡ ಪುರುಷ ರಂತೆ ವರ್ತಿಸುತ್ತಿರುವ ಹಾಗೆ ಸಾಮಾನ್ಯವಾಗಿ ನಮ್ಮಲ್ಲಿ ಪದ್ಧತಿ ಇಲ್ಲ. ಈಗೀಗ ಪಾಶ್ಚಾತ್ಯಪದ್ಧತಿಯಿಂದ ಇದೂ ನಮ್ಮ ದೇಶಕ್ಕೆ ಹರಿದುಬರುತ್ತಿ ದ್ದರೂ ಇದು ಆರ್ಯಸಂಸ್ಕೃತಿಯೆನಿಸಿಕೊಳ್ಳಲಾರದು. ಆರ್ಯಸಂಸ್ಕೃತಿಯಲ್ಲಿ ಸ್ತ್ರೀಪುರುಷರಿಗೆ ಶ್ರಮವಿಭಾಗವಾಗಿದೆ. ಮನೆಯ ಹೊರಗಣ ಕೆಲಸ ವೆಲ್ಲಾ ಪುರುಷರದು; ಮನೆಯ ಒಳಗಣ ವ್ಯವಸ್ಥೆಯೆಲ್ಲಾ ಸ್ತ್ರೀಯರದು. ಸಂಪಾದನೆಯ ಕೆಲಸ ಗಂಡಸರದು; ರಕ್ಷಣೆಯ ಕೆಲಸ ಹೆಂಗಸರದು. ಈ ದೃಷ್ಟಿಯಿಂದ ನಮ್ಮ ಸ್ತ್ರೀಯರು ಹೊರಗಣ ವ್ಯವಹಾರಗಳಿಗೆ ಹೋಗ ದಿರುವರೆಂಬದನ್ನು ಬಿಟ್ಟರೆ ಉಳಿದ ವಿಷಯದಲ್ಲಿ ಯುರೋಪಿಗಿಂತಲೂ ನಮ್ಮಲ್ಲಿಯೇ ಪ್ರಾಜ್ಯತೆ ಹೆಚ್ಚು. ಪೂರ್ವದೇಶವನ್ನೂ ಪಶ್ಚಿಮದೇಶವನ್ನೂ ತಕ್ಕಡಿಗೆ ಹಾಕಿ ತೂಗಿ ನೋಡಿದ ಶ್ರೀಸ್ವಾಮಿವಿವೇಕಾನಂದರು ಸ್ತ್ರೀಯ ರಿಗೆ ಯೂರೋಪಿನಲ್ಲಿ ಹೊರಗೆ ಮಾತ್ರ ಪ್ರಾಜ್ಯತೆಯ ನಟನೆ ನಡೆಯುವ ದೆಂದು ಹೇಳಿರುತ್ತಾರೆ. ನಮ್ಮಲ್ಲಿ ಹಾಗಿಲ್ಲ. ಹೊರಗಣ ನಟನೆಯಲ್ಲಿ ಹುರುಳಿಲ್ಲ. ಒಳಗಣ ಸ್ಥಿತಿಯನ್ನು ನೋಡಿದರೆ ಅವರ ಪ್ರಾಶಸ್ತ್ಯಕ್ಕೇ ನೇನೂ ಕೊರತೆಯಿಲ್ಲ. ಮನೆಯ ಸರ್ವಾಧಿಪತ್ಯವು ಆಕೆಯದೇ ಆಗಿರು ವದು. ಪುರುಷನು ಬೇಕಾದಷ್ಟು ಸಂಪಾದಿಸಿದರೂ ಅದನ್ನು ಅವನು ದಾನಧರ್ಮಗಳಲ್ಲಿ ವಿನಿಯೋಗಿಸುವಾಗ ಹೆಂಡತಿಯ ಸಮ್ಮತಿಯನ್ನು ಪಡೆ ಯಬೇಕಾಗುವದು. ಗೃಹಸ್ಥಾಶ್ರಮದ ಸರ್ವಶ್ರೇಯಸ್ಸಿನಲ್ಲಿಯೂ ಹೆಂಡ ತಿಯು ಭಾಗಿನಿಯಾಗುವಳು. ಇದಕ್ಕಿಂತ ಇನ್ನೇನು ಪ್ರಾಶಸ್ತ್ಯವು ಬೇಕು! ಮನುಸ್ಮೃತಿಯಲ್ಲಿ ನೋಡಿರಿ—

"ಪ್ರಜನಾರ್ಥಂ ಮಹಾಭಾಗಾಃ ಪೂಜಾರ್ಹಾ ಗೃಹದೀಪ್ತಯಃ ।
ಸ್ತ್ರೀಯಃ ಶ್ರಿಯಶ್ಚ ಗೇಹೇಷು ನ ವಿಶೇಷೋऽಸ್ತಿ ಕಶ್ಚನ ॥"

ತಾತ್ಪರ್ಯವೇನೆಂದರೆ— ಸತ್ಸಂತತಿಯನ್ನು ಕೊಡುವಂಥ ಉತ್ತಮಕಲ್ಯಾಣ ಗುಣಾಢ್ಯರಾದಂಥ ಸ್ತ್ರೀಯರು ವಸಾಲಂಕಾರಾದಿಗಳಿಂದ ಪೂಜೆಯನ್ನು

ಪಡೆಯುವದಕ್ಕೆ ಯೋಗ್ಯರಾಗಿದ್ದಾರೆ; ಅವರಿಂದಲೇ ಮನೆಯು ಶೋಭಾಯಮಾನವಾಗಿರುವದು; ಮನೆಯ ಸರ್ವಸಂಪತ್ಸಮೃದ್ಧಿ ಮತ್ತು ಸ್ತ್ರೀಸಾನ್ನಿಧ್ಯ- ಇವೆರಡಕ್ಕೂ ಏನೂ ಭೇದವಿಲ್ಲ. ಇದರಿಂದ ಸ್ತ್ರೀಯರನ್ನೇ ಸರ್ವಸಂಪತ್ಸಮೃದ್ಧಿಯೆಂದು ಸಂಭಾವಿಸಿದಂತಾಯಿತು; ಸ್ತ್ರೀಯರಿಲ್ಲದ ಮನೆಯು ಮನೆಯೇ ಅಲ್ಲವೆಂದು ಹೇಳಿದ ಹಾಗಾಯಿತು; ಮನೆಯಲ್ಲಿ ಇವರು ಸನ್ಮಾನಕ್ಕೆ ಯೋಗ್ಯರೆಂದು ಒಪ್ಪಿದಂತಾಯಿತು. ಸ್ತ್ರೀಯರು ಶರೀರದೃಷ್ಟಿಯಿಂದ ಅಬಲೆಯರಾದ ಕಾರಣ ಹೊರಗೆ ಅವರು ವ್ಯವಹಾರದಲ್ಲಿ ತೊಡಗದೆ ಹೋದ ಮಾತ್ರದಿಂದಲೇ ಅವರಿಗೆ ಹಿಂದುಸ್ಥಾನದಲ್ಲಿ ಸ್ವಾತಂತ್ರ್ಯವಿಲ್ಲವೆಂದು ಹೇಳಬಾರದು. ಪಶುಗಳಿಗೂ ತಿರುಗಾಡುವ ಸ್ವಾತಂತ್ರ್ಯವಿದೆ. ಇಲ್ಲಿ ಈ ಬಗೆಯ ಸ್ವಾತಂತ್ರ್ಯಕ್ಕೇನೂ ಮಹತ್ತ್ವವಿಲ್ಲ. ಪೂಜ್ಯತೆಯಿಲ್ಲದ ಸ್ವಾತಂತ್ರ್ಯವೇನು ಬೆಲೆ! ನಮ್ಮ ದೇಶದಲ್ಲಿ ಸ್ತ್ರೀಯರಿಗೆ ಪೂಜ್ಯತೆಯಿಂದ ಪ್ರಾಶಸ್ತ್ಯ.

## ಸಂಸಾರವನ್ನು ಮಾಡುವ ರೀತಿ.

ಸ್ತ್ರೀಪುರುಷರು ಮದುವೆಯಾಗಿ ಮನೆಯಲ್ಲಿ ನಿಂತಮೇಲೆ ಅವರ ಉದ್ಯೋಗವೇನೆಂಬ ವಿಚಾರವು ವಿವೇಕಿಗಳಿಗೆ ಬರುವದು. ಮನೆಯತುಂಬ ಮಕ್ಕಳನ್ನು ಪಡೆಯುವದೆಂದು ಬಹುಜನರು ಭಾವಿಸುವರು. ಇದು ತಪ್ಪು. ಇದೇ ಧ್ಯೇಯವಾದರೆ ಪೂಜ್ಯತೆಯು ಪಶುಗಳಿಗೇ ಹೆಚ್ಚಾಗಿ ಬರುವದು. ಏಕೆಂದರೆ ಎಷ್ಟೋ ಪಶುಗಳು ಒಂದೇ ವರ್ಷದಲ್ಲಿ ಅನೇಕಸಾರಿ ಹೆರುವವು ಮತ್ತು ಒಂದೇ ಸಲಕ್ಕೆ ಅನೇಕಮಕ್ಕಳನ್ನು ಪಡೆಯುವವು. ಆದುದರಿಂದ ಈ ವಿಷಯದಲ್ಲಿ ಮನುಷ್ಯನಿಗೆ ಪೂಜ್ಯತೆಯು ಸಿಕ್ಕಲಾರದು. ಮನುಷ್ಯನಿಗೆ ಇರುವ ಪೂಜ್ಯತೆಯು ಈ ಪಶುಸ್ವಭಾವದ ಬಯಕೆಯನ್ನು ಬಿಗಿಹಿಡಿದು ಮನಸ್ಸನ್ನು ದೇವರ ಕಡೆಗೆ ಹಾಕುವದರಲ್ಲಿರುವದು. ಪಾರ್ವತಿಯು ಒಮ್ಮೆ ಪರಮೇಶ್ವರನನ್ನು ಕೇಳುತ್ತಾಳೆ—

" ಪೃಚ್ಛಾಮಿ ತತ್ತ್ವಂ ಪುರುಷೋತ್ತಮಸ್ಯ "

ಎಂದರೆ " ಹೇ ದೇವ, ಪರಮಾತ್ಮಸ್ವರೂಪವನ್ನು ಕೇಳಬಿಚ್ಛಿಸುತ್ತೇನೆ " ಎಂದು ತಾತ್ಪರ್ಯ. ಇಲ್ಲಿ ಪಾರ್ವತಿಯು ಆದಿಶಕ್ತಿಯಾದ್ದರಿಂದ ಆಕೆಗೆ

ಪರಮಾತ್ಮತತ್ತ್ವವು ತಿಳಿಯದೆ ಇದ್ದ ಸಂಭವವು ಕಡಿಮೆ. ಆದರೆ ಲೋಕದಲ್ಲಿರುವ ಗಂಡಹೆಂಡಿರು ತಮ್ಮ ವಿರಾಮಕಾಲವನ್ನು ಹೇಗೆ ಕಳೆಯಬೇಕೆಂಬುವದಕ್ಕೆ ಪಾರ್ವತಿಯ ಪ್ರಶ್ನೆಯು ಮೇಲುನಾಲಾಗಿದೆ. ಸುಮ್ಮನೆ ಕುಳಿತಿರುವಾಗ ಸ್ತ್ರೀಯರಾಗಲಿ ಪುರುಷರಾಗಲಿ ಸಾಮಾನ್ಯವಾಗಿ ಹೊಟ್ಟೆಬಟ್ಟೆಗಳ ಮಾತನ್ನು ಇಲ್ಲದಿದ್ದರೆ ನೆರಮನೆಯ ಹುಳುಕನ್ನು ಇಲ್ಲವಿದ್ದರೆ ಕೆಲಸಕ್ಕೆ ಬಾರದ ಕಾಡುಹರಟೆಯನ್ನು ಆಡುತ್ತಿರುವರು; ಅಥವಾ ಚದರಂಗ ಮುಂತಾದ ಆಟಪಾಟಗಳಲ್ಲಿ ತೊಡಗುವರು. ಇಂಥವರು ಪಾರ್ವತಿಯ ನಡವಳಿಕೆಯ ಕಡೆಗೆ ಒಮ್ಮೆಯಾದರೂ ಕಣ್ಣು ಹಾಕಬೇಕು. ಹಾಗಿಲ್ಲದೆ ತಮ್ಮ ದುಂದಿನಲ್ಲಿಯೇ ತಾವಿದ್ದರೆ ಮದುವೆಯು ಮನುಷ್ಯನ ಆತ್ಮೋನ್ನತಿಗೆ ಪ್ರತಿಬಂಧಕವೇ ಆಗುವದು. ಹಾಗಾಗುವದು ಆರ್ಯಸಂಸ್ಕೃತಿಯಲ್ಲ. ಆತ್ಮೋನ್ನತಿಗೆ ಪ್ರತಿಬಂಧಕವಾಗುವ ವ್ಯವಹಾರಕ್ಕೆ ಆರ್ಯಸಂಸ್ಕೃತಿಯು ಉತ್ತೇಜನವನ್ನು ಕೊಡುವದಿಲ್ಲ. ಮನುಷ್ಯನು ಮದುವೆಯಾಗದೆ ಉಳಿದುಕೊಂಡರೆ ಅವನ ಮನೋವ್ಯಾಪಾರವು ಅವನ ಹಿಡತದೊಳಗೆ ಅಡಗೀತೆಂಬ ಭರವಸವು ತೋರದೆ ಇರುವ ಸಂದರ್ಭದಲ್ಲಿ ಒಂದು ನಿಯಮಕ್ಕೊಳಪಟ್ಟು ಇಂದ್ರಿಯಾರ್ಥವನ್ನು ಪೂರ್ಣ ಮಾಡಿಕೊಳ್ಳುತ್ತ ದೇವರ ಅನುಗ್ರಹದ ಹಾದಿಯಲ್ಲಿ ಮುಂದಡಿಯಿಡುತ್ತಿರಲೆಂಬುದೇ ಮದುವೆಯ ಉದ್ದೇಶ. ಮದುವೆಯಾದ ಪುರುಷನು ತಾನೂ ಪರಮಾರ್ಥಮಾರ್ಗದಲ್ಲಿ ಮುಂದಾಗುತ್ತ ತನ್ನ ಸ್ತ್ರೀಯನ್ನೂ ಅದೇ ದಾರಿಯಲ್ಲಿ ಮುಂದುವರಿಸಬೇಕು.

ಪಾರ್ವತಿಯು ದೇವತಾಸ್ವರೂಪಳಾದ್ದರಿಂದ ಆ ಉದಾಹರಣೆಯು ಮನುಷ್ಯರಿಗೆ ಹೇಗೆ ಸುಲಭವಾಗಿ ಅನುಕರಣೀಯವಾದೀತೆಂದು ಕೇಳಬಹುದು. ಮನುಷ್ಯರಲ್ಲಿಯೂ ಇದು ಕಂಡುಬಂದಿದೆ. ಉಪನಿಷತ್ತಿನಲ್ಲಿ ಇದರ ಕಥೆಯಿದೆ. ಯಾಜ್ಞವಲ್ಕ್ಯರೆಂಬ ಮುನಿಗಳು ಜನಕರಾಜನ ಸಭೆಯಲ್ಲಿ ಬೇಕಾದಷ್ಟು ವೇದಾಂತವಿಚಾರಗಳನ್ನು ಹೇಳುತ್ತಿದ್ದಾಗ ಅವರ ಹೆಂಡತಿಯರಾದ ಕಾತ್ಯಾಯನಿ ಮತ್ತು ಮೈತ್ರೇಯಿ-ಎಂಬ ಇಬ್ಬರು ಅವುಗಳನ್ನೆಲ್ಲಾ ಕೇಳುತ್ತಿದ್ದು ಮನೆಗೆ ಬಂದ ಮೇಲೆ ವಿರಾಮಕಾಲದಲ್ಲೆಲ್ಲಾ ಅದೇ ವಿಚಾರವನ್ನೇ ಮಾಡುತ್ತಿದ್ದಂತೆ ಉಲ್ಲೇಖವಿದೆ.

ದೇವರ ವಿಚಾರವನ್ನು ಮಾಡಬೇಕೆಂಬುವದು ಸಂಸಾರಿಗಳ ವಿರಾಮಕಾಲದ ಮಾತಾಯಿತು. ಇನ್ನು ಸಂಸಾರವನ್ನು ಮಾಡುವ ಬಗೆಯಲ್ಲಿಯೇ ತಿಳಿದುಕೊಳ್ಳಬೇಕಾದುದೂ ಇದೆ. ಅದನ್ನು ಸಂಗ್ರಹವಾಗಿ ಒಂದು ಕಥೆಯಿಂದ ಬಹು ಚೆನ್ನಾಗಿ ತಿಳಿಯಬಹುದು. ಶ್ರೀಕೃಷ್ಣನು ದ್ವಾರಕೆಯಲ್ಲಿದ್ದಾಗ ಒಂದು ದಿನ ನಾರದರು ಬಂದರು. ಬಂದ ಕಾರ್ಯವೇನೆಂದು ಶ್ರೀಕೃಷ್ಣನು ಅವರನ್ನು ಕೇಳಿದನು. ಅವರು ತಮ್ಮದೊಂದು ಪ್ರಶ್ನೆಯನ್ನು ಮುಂದಿಟ್ಟರು. ಅದೇನೆಂದರೆ—" ಹೇ ದೇವ, ನಿನಗೆ ಹದಿನಾರು ಸಾವಿರ ಹೆಂಡತಿಯರಿದ್ದಾರೆ; ಅವರ ಮಕ್ಕಳೂ ಮೊಮ್ಮಕ್ಕಳೂ ನಿನ್ನ ಬಾಂಧವರೂ— ಈ ಎಲ್ಲರನ್ನೂ ಒಟ್ಟಾಗಿ ಇಟ್ಟುಕೊಂಡು ಇದರಿಂದ ಯಾವ ತೊಂದರೆಯೂ ಒದಗದಂತೆ ನೀನು ಹೇಗೆ ಸಂಸಾರವನ್ನು ಮಾಡುತ್ತಿ?" ಹೀಗೆಂದು ಪ್ರಶ್ನೆಯನ್ನು ಹಾಕುತ್ತಲೇ ಶ್ರೀಕೃಷ್ಣನು ನಸುನಗುತ್ತ ಹೇಳುತ್ತಾನೆ—" ಸ್ವಾಮಿ, ಲೋಕದಲ್ಲಿ ಇಬ್ಬರಿರುವ ಸಂಸಾರವನ್ನು ನಡೆಸುವದೇ ಎಷ್ಟೋ ಕಷ್ಟ. ಇಷ್ಟು ಮಂದಿ ಇರುವ ಸಂಸಾರವನ್ನು ಕಟ್ಟಿಕೊಂಡಿರುವ ನನ್ನ ಪೇಚಾಟವನ್ನು ಹೇಳತೀರದು. ನನ್ನ ಹೆಂಡತಿಯರಲ್ಲಿ ಯೋಗ್ಯರಾದ ಕೆಲವರ ಹೊರತು ಉಳಿದವರು ಸುಮ್ಮನೆ ಒಬ್ಬರಿಗೊಬ್ಬರು ಜಗಳವಾಡುವರು; ಯಾವ ಅವಿವೇಕಕ್ಕಾದರೂ ನನ್ನನ್ನೇ ಕಾರಣನೆಂದು ತೋರಿಸುವರು. ಇವರಲ್ಲಿ ಸತ್ಯಭಾಮೆಯು ಅಗ್ರೇಸರಳು. ಅಣ್ಣನಾದ ಬಲರಾಮನು ಶಕ್ತಿಯಲ್ಲಿ ತನ್ನ ಸಮಾನರು ಯಾರೂ ಇಲ್ಲವೆಂದು ಗರ್ವಿಸುತ್ತ ನನ್ನನ್ನು ಲಕ್ಷ್ಯಮಾಡದೆ ಇರುವನು. ಒಬ್ಬ ಮಗನು ತಾನು ಬಹುರೂಪವಂತನೆಂದೂ ಇನ್ನೊಬ್ಬನು ತಾನು ವಿದ್ಯಾವಂತನೆಂದೂ ಮತ್ತೊಬ್ಬನು ಅತಿಯುಕ್ತಿವಂತನೆಂದೂ ಮಗದೊಬ್ಬನು ರಣಧೀರನೆಂದೂ— ಹೀಗೆ ಬಗೆಬಗೆಯಾಗಿ ಹೆಮ್ಮೆಯಿಂದ ಮೆರೆಯುತ್ತ ನನ್ನನ್ನು ಲೆಕ್ಕಕ್ಕೆ ತಂದುಕೊಳ್ಳದೇ ಇರುವರು. ಉಳಿದ ಬಾಂಧವರೂ ಸೇನಾಪತಿಗಳೂ ತಮ್ಮಿಂದಲೇ ಈ ಪಟ್ಟಣವು ಉಳಿದಿರುವದೆಂದು ಬಿಂಕಪಡುವರು. ಇವರೆಲ್ಲರೂ ನನ್ನ ಮೇಲೆ ದೋಷಾರೋಪಣೆಯನ್ನು ಮಾಡುತ್ತಲೇ ಇರುವರು. ನಾನು ಇದೆಲ್ಲವನ್ನೂ ಕೇಳಿ ಸಹನದಿಂದ ಸುಮ್ಮನಿರುತ್ತೇನೆ. ಯಾರಾದರೂ ತಮ್ಮ ಅವಿವೇಕದಿಂದ ಕೆಟ್ಟು

ಹೋಗುವ ಸಮಯವು ಬಂದರೆ ತಕ್ಕ ಉಪಾಯವನ್ನು ಮಾಡಿ ಅವರನ್ನು ರಕ್ಷಿಸುತ್ತೇನೆ" ಈ ಉಪದೇಶದ ಸಾರಾಂಶವನ್ನು ಮಹಾಭಾರತದ ಒಂದು ಶ್ಲೋಕದಿಂದ ಹೇಳಬಹುದು. ಅದೇನೆಂದರೆ—

"ಅನಾಯಸೇನ ಶಸ್ತ್ರೇಣ ಮೃದುನಾ ಹೃದಯಚ್ಛಿದಾ ।
ಜಿಹ್ವಾಮುದ್ಧರ ಸರ್ವೇಷಾಂ ಪರಿಮೃಜ್ಯಾನುಮೃಜ್ಯ ಚ ॥"

ತಾತ್ಪರ್ಯವೇನೆಂದರೆ— ಮನಸಿಗೆ ನಾಟುವಂಥ ಮೃದುವಾದ ಒಳ್ಳೇ ಮಾತುಗಳಿಂದ ಅನ್ಯರ ನಾಲಿಗೆಯನ್ನು ಸಿಲ್ಲಿಸು; ನಿನ್ನ ಕ್ಷಮಾಗುಣದಿಂದ ಇತರರ ದೋಷಾರೋಪಣೆಯನ್ನು ಹೋಗಲಾಡಿಸು; ನಿನ್ನ ಒಳ್ಳೇ ನಡತೆಯಿಂದ ಇತರರಿಗೆ ನಿನ್ನಲ್ಲಿ ಪ್ರೀತಿಯುಂಟಾಗುವಂತೆ ಮಾಡು.

## ಅನ್ನಸಂಸ್ಕಾರ.

ಮನುಷ್ಯನು ತನ್ನ ಪಶುವೃತ್ತಿಗಳನ್ನು ಬಿಗಿಹಿಡಿಯುತ್ತ ಮನುಷ್ಯತ್ವದಲ್ಲಿ ಮುಂದುವರಿಯುತ್ತಿರುವದಕ್ಕೆ ಸಾಧನವಾಗಿ ಗೃಹಸ್ಥಾಶ್ರಮವನ್ನು ಹೇಳಿದ ಶಾಸ್ತ್ರವು ಅನ್ನಕ್ಕೆ ಕೂಡ ಒಂದು ಬಗೆಯ ಪವಿತ್ರತೆಯನ್ನು ತರದೆ ಹೋದರೆ ಮನುಷ್ಯನು ಸ್ವಾರ್ಥಿಯಾದಾನೆಂದು ಹೆದರಿದಂತೆ ಕಾಣುವದು. ಸರ್ವವಿಧದಲ್ಲಿಯೂ ಮನುಷ್ಯನನ್ನು ಅಸ್ವಾರ್ಥಿಯಾಗಿ ಮಾಡುವದೇ ಶಾಸ್ತ್ರದ ಉದ್ದೇಶವು. ಗೃಹಸ್ಥನು ಕಟ್ಟಿಕೊಳ್ಳತಕ್ಕ ಮನೆಯು ಕೂಡ ಸ್ವಾರ್ಥಕ್ಕಾಗಿ ಇರಬಾರದೆಂದು ಹಿರಿಯರ ಕಲ್ಪನೆ ಇದೆ. ಪಶುಪಕ್ಷಿಗಳು ಸ್ವಾರ್ಥಕ್ಕಾಗಿ ಗೂಡನ್ನು ಕಟ್ಟಿಕೊಳ್ಳುವವು. ಮನುಷ್ಯನು ತನ್ನ ಸುಖೋಪಭೋಗಕ್ಕಾಗಿ ಮನೆಯನ್ನು ಕಟ್ಟಿ ಪಶುಗಳ ಸಾಲಿಗೆ ಸೇರಬಾರದು. ಹಾಗಾದರೇನುಮಾಡಬೇಕೆಂದರೆ ಮನುಷ್ಯನು ಕಟ್ಟುವ ಮನೆಯಲ್ಲಿ ಒಂದು ಪ್ರಧಾನವಾದ ಭಾಗವನ್ನು ದೇವರಿಗಾಗಿ ಮೀಸಲುಮಾಡಿ ಅಲ್ಲಿ ದೇವರನ್ನು ಸ್ಥಾಪಿಸಬೇಕು. ಮನೆಯ ಉಳಿದ ಕಡೆಯಲ್ಲೆಲ್ಲಾ ತಾನು ಆ ದೇವರ ಪರಿಚಾರಕನಾಗಿ ವಾಸಮಾಡಬೇಕು. ಒಂದು ಪಕ್ಷ ತಾನು ಯಾವ ಬಾಹ್ಯಮೂರ್ತಿಯ ಕಲ್ಪನೆಯನ್ನೂ ಮಾಡದೆ ಭಗವತ್ತತ್ತ್ವವನ್ನು ಅನುಸಂಧಾನಮಾಡಬಲ್ಲಂಥ ನಿಪುಣನಾಗಿರಬಹುದು. ಆದರೆ ತನ್ನ ಹೆಂಡತಿಗೂ ಮಕ್ಕಳಿಗೂ ಕಡಿಮೆಯ ತಿಳಿವಳಿಕೆಯ ನೆರೆಹೊರೆಯವರಿಗೂ

ಆದರ್ಶವಾಗಿಯಾದರೂ ಗೃಹಸ್ಥನು ಆ ದೇವರ ಅರ್ಚನೆಯಲ್ಲಿ ತಾನು ಆದರವನ್ನು ತೋರಿಸುವವನಾಗಬೇಕು. ಹೀಗೆ ಕಟ್ಟಿದ ಮನೆಗಳು ಇನ್ನೂ ಅಲ್ಲಲ್ಲಿ ಕಣ್ಣಿಗೆ ಬೀಳುತ್ತಿರುವವು. ಮನೆಯಲ್ಲೊಂದು ದೇವಾಗಾರವನ್ನು ಮಾಡುವದರಿಂದ ಮನೆಯು ಸ್ವಾರ್ಥವು ನಿವೃತ್ತಿಯಾಗಿ ಮನೆಗೆ ಪವಿತ್ರತೆಯುಂಟಾಗುವಂತೆ ಅನ್ನಕ್ಕೂ ಒಂದು ಬಗೆಯ ಪವಿತ್ರತೆಯನ್ನು ತರುವದು ಶ್ರೇಯಸ್ಕರವಾದದ್ದು. ಈ ವಿಷಯದಲ್ಲಿ ಭಗವಾನ್ ಮನು ಮಹರ್ಷಿಗಳು ಹೇಳುವದೇನೆಂದರೆ—

“ ಅಘಂ ಸ ಕೇವಲಂ ಭುಂಕ್ತೇ ಯಃ ಪಚತ್ಯಾತ್ಮಕಾರಣಾತ್ |
ಯಜ್ಞಶಿಷ್ಟಾಶನಂ ಹ್ಯೇತತ್ಸತಾಮನ್ನಂ ವಿಧೀಯತೇ || ”

ಎಂದರೆ “ತನ್ನ ಹೊಟ್ಟೆಗೆಂದು ಯಾವನು ಪಾಕಮಾಡುತ್ತಾನೋ ಅವನು ಬರೀ ಪಾಪವನ್ನುಣ್ಣುತ್ತಾನೆ. ಅದನ್ನು ಯಜ್ಞಶೇಷವಾಗಿ ಮಾಡಿದರೆ ಅದು ಸಜ್ಜನರಿಗೆ ಯೋಗ್ಯವಾದ ಅನ್ನವಾಗುತ್ತದೆ.” ತನ್ನ ಹೊಟ್ಟೆಗೆಂದು ಪಾಕವನ್ನು ಮಾಡುವದಾದರೆ ಚೇತನನಾದ ತಾನು ಜಡವಾದ ಹೊಟ್ಟೆಯ ಆಳಾದಂತಾಯಿತು. ಇದು ಯಾರಿಗೆ ತಾನೇ ಚೆನ್ನಾಗಿ ಕಾಣುತ್ತದೆ! ಹಾಗೆ ಮಾಡುವದು ಪಾಪಕ್ಕೇ ಕಾರಣವಾಗುವದು. ಅದನ್ನು ಯಜ್ಞಶೇಷವಾಗಿ ಮಾಡಿದರೆ ಅದು ಪವಿತ್ರವಾಗಿ ಊಟಕ್ಕೆ ತಕ್ಕದ್ದಾಗುವದು. ಯಜ್ಞಶೇಷವೆಂದರೇನು? “ಯಜ್ಞೋ ವೈ ವಿಷ್ಣುಃ” ಎಂದು ಶ್ರುತಿಯಿದೆ. ಯಜ್ಞವೆಂದರೆ ವಿಷ್ಣು. ವಿಷ್ಣುವೆಂದರೆ ಸರ್ವವ್ಯಾಪಿಯಾದ ಪರಮಾತ್ಮನು. ಯಜ್ಞಶೇಷವನ್ನು ಮಾಡುವದೆಂದರೆ ಆದ ಅಡಿಗೆಯನ್ನು ಪರಮಾತ್ಮನಿಗೆ ನಿವೇದನಮಾಡಿ ಅವನು ಅದನ್ನು ಉಂಡನೆಂದು ಭಾವಿಸಿದರಾಯಿತು. ಆ ಮೇಲೆ ಅದು ಭಗವಂತನ ಪ್ರಸಾದವೆನಿಸಿ ಉಳಿದವರ ಊಟಕ್ಕೆ ಪವಿತ್ರವಾಗುವದು. ಇದೇ ಅರ್ಥವನ್ನೆ ಭಗವದ್ಗೀತೆಯ

“ ಯಜ್ಞಶಿಷ್ಟಾಶಿನಸ್ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ |
ಭುಂಜತೇ ತೇತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ || ”

ಎಂಬ ಶ್ಲೋಕವೂ ಪ್ರತಿಪಾದಿಸುವದು. ದೇವರಿಗೆ ನಿವೇದಿಸಿದ ಪ್ರಸಾದವನ್ನು ಉಂಡರೆ ಸರ್ವಪಾಪಗಳೂ ಪರಿಹಾರವಾಗುವವೆಂದು ಇದರಲ್ಲಿ ಸ್ಪಷ್ಟವಾಗಿರುವದು.

## ಅತಿಥಿಸೇವೆ.

ಗೃಹಸ್ಥನ ಮೇಲೆ ಇನ್ನೊಂದು ದೊಡ್ಡಭಾರವಿದೆ. ಅದು ಯಾವದೆಂದರೆ ಅತಿಥಿಸೇವೆ. ಅತಿಥಿಗಳೆಂದರೇನೆಂಬುದು ಮನುಸ್ಮೃತಿಯಲ್ಲಿ ಉಕ್ತವಾಗಿದೆ.

“ ಏಕರಾತ್ರಂ ತು ನಿವಸನ್ನತಿಥಿರ್ಬ್ರಾಹ್ಮಣಃ ಸ್ಮೃತಃ ।

ಅನಿತ್ಯಂ ಹಿ ಸ್ಥಿತೋ ಯಸ್ಮಾತ್ತಸ್ಮಾದತಿಥಿರುಚ್ಯತೇ ॥ ”

ಮತ್ತೊಬ್ಬರ ಮನೆಯಲ್ಲಿ ಒಂದು ದಿನ ( ತಿಥಿ ) ಮಾತ್ರವಿದ್ದು ಹೋಗುವ ಬ್ರಾಹ್ಮಣನಿಗೆ ಅತಿಥಿಯೆಂದು ಹೆಸರು. ಎರಡನೆಯ ದಿನ ( ತಿಥಿ ) ಕೂಡ ಅವನು ಅಲ್ಲಿರುವದಿಲ್ಲವಾದ್ದರಿಂದ ಅವನು ಅತಿಥಿಯೆನಿಸಿಕೊಳ್ಳುವನು. ಇಂಥ ಅತಿಥಿಗಳನ್ನೆಲ್ಲಾ ಆದರಿಸುವದು ಗೃಹಸ್ಥನ ಕರ್ತವ್ಯವು. ಈಗಿನ ಕಾಲದಲ್ಲಿ ಪರಸ್ಥಲದವರ ಸೌಕರ್ಯಕ್ಕಾಗಿ ಅನ್ನವಿಕ್ರಯಮಂದಿರ ( ಹೋಟಲು ) ಗಳು ಏರ್ಪಟ್ಟಿರುವವಷ್ಟೆ. ಈ ಪದ್ಧತಿಯು ಸಮ್ಮತದಲ್ಲ. ಅನ್ನವನ್ನು ಮಾರುವದು ನಮ್ಮ ಧರ್ಮದ ದೃಷ್ಟಿಯಿಂದ ನಿಂದ್ಯಕರ್ಮ. ಬೇಯಿಸಿದ ಯಾವ ವಸ್ತುವನ್ನು ಮಾರುವದೂ ಪಾಪವೇ. ಇರಲಿ. ಹಿಂದಿನ ಕಾಲದಲ್ಲಿ ಈ ಅನ್ನವಿಕ್ರಯಮಂದಿರಗಳಿರಲಿಲ್ಲ. ಪರಸ್ಥಲದ ಸೌಕರ್ಯಕ್ಕಾಗಿ ಶ್ರೀಮಂತರು ಬೇರೆ ಬೇರೆ ಕಡೆಗಳಲ್ಲಿ ಅನ್ನಸತ್ರಗಳನ್ನಿಡುತ್ತಿದ್ದರು. ಇಂಥ ಎಷ್ಟೋ ಅನ್ನಸತ್ರಗಳು ಈಗಲೂ ಬಹುಮಟ್ಟಿಗೆ ಜೀರ್ಣಾವಸ್ಥೆಯಲ್ಲಿಯೇ ಇವೆ. ಪರಸ್ಥಲದವರಿಗೆ ಎರಡು ಮೂರು ದಿವಸಗಳವರೆಗಾದರೂ ಅನ್ನವನ್ನು ಹಾಕುವದೇ ಇದರ ಉದ್ದೇಶ. ಅತಿಥಿಸೇವೆಯೆಂಬುವದು ಅತ್ಯುತ್ಕೃಷ್ಟವಾದ ಪುಣ್ಯವೆಂಬ ಭಾವನೆಯು ನಮ್ಮವರಲ್ಲಿ ಬೇರೂರಿದ್ದದರಿಂದ ಅವರು ತಮ್ಮ ತಮ್ಮ ಧನವನ್ನು ವಿನಿಯೋಗಿಸಿ ಆ ಪುಣ್ಯವನ್ನು ಸೂರೆಮಾಡಿಕೊಳ್ಳಬೇಕೆಂದು ಯಾತ್ರಿಕರು ಉಳಿದುಕೊಳ್ಳುವಂಥ ಸ್ಥಲಗಳನ್ನು ನೋಡಿ ನೋಡಿ ಅಲ್ಲೆಲ್ಲಾ ಸತ್ರಗಳನ್ನಿಟ್ಟಿದ್ದಾರೆ. ಧರ್ಮಶ್ರದ್ಧೆಯನ್ನು ಚೆನ್ನಾಗಿ ಹೊಂದಿರುವ ಅವರು ಬೇರೆ ಬೇರೆ ಊರುಗಳಲ್ಲಿ ತಮ್ಮ ಧರ್ಮಸತ್ರಗಳನ್ನು ಇಟ್ಟಿರುವಾಗ ನಾನಾನ್ಯಗೃಹಸ್ಥರು ತಮ್ಮ ಮನೆಗೆ ಬಂದ ಅತಿಥಿಗಳನ್ನು ಎಷ್ಟು ಆದರದಿಂದ ನೋಡಿಕೊಳ್ಳಬೇಕೆಂಬುದನ್ನು ಹೇಳಬೇಕಾದ್ದೇ ಇಲ್ಲ.

ಅತಿಥಿಸತ್ಕಾರದ ಕಲ್ಪನೆಯು ಪಶ್ಚಿಮದೇಶದಲ್ಲಿ ತಲೆ ಎತ್ತಿದಂತೆ ಕಾಣುವದಿಲ್ಲ. ದೃಷ್ಟಿಯೆಲ್ಲಾ ದುಡ್ಡಿನ ಚೀಲದಲ್ಲಿ ಸಿಕ್ಕಿಕೊಂಡಿರುವದೇ ಇದಕ್ಕೆ ಕಾರಣ. ಆ ದೇಶದಲ್ಲಿ ಭಿಕ್ಷುಕರೇ ಇರಬಾರದಂತೆ. ಅತಿಥಿ ಸತ್ಕಾರದ ಕಲ್ಪನೆ ಇಲ್ಲದವರ ದೇಶದಲ್ಲಿ ಭಿಕ್ಷುಕರಿರಬಾರದೆಂಬುದು ಯೋಗ್ಯವೇ ಆಗಿದೆ. ಅಲ್ಲಿ ಭಿಕ್ಷುಕರೇನು ತಿನ್ನಬೇಕು? ನಮ್ಮಲ್ಲಿ ಹಾಗಿಲ್ಲ. ನಮ್ಮ ಶಾಸ್ತ್ರವು ಕೆಲಕೆಲವರಿಗೆ ಭಿಕ್ಷಕ್ಕೆ ಅಧಿಕಾರವನ್ನೇ ಕೊಟ್ಟಿದೆ. ಯಾವಾಗಲೂ ದೇವರ ಧ್ಯಾನದಲ್ಲಿಯೇ ಕಾಲವನ್ನು ಕಳೆಯುವ ಸಂನ್ಯಾಸಿಗಳು ಭಿಕ್ಷಕ್ಕೆ ಬರಬಹುದು. ಏಕೆಂದರೆ ಅವರು ಹೊಟ್ಟೆಗಾಗಿ ದುಡಿಯುವ ಕಾಲವನ್ನೆಲ್ಲಾ ಅದಕ್ಕಿಂತ ಪವಿತ್ರವಾದ ಉದ್ಯೋಗದಲ್ಲಿ ತೊಡಗಿಸುವರು. ಬಡವರಾದ ವಿದ್ಯಾರ್ಥಿಗಳೂ ಭಿಕ್ಷಕ್ಕೆ ಬರಬಹುದು. ಏಕೆಂದರೆ ಅವರು ತಮ್ಮ ಕಾಲವನ್ನೆಲ್ಲಾ ವಿದ್ಯೆಗಾಗಿ ವಿನಿಯೋಗಿಸುವರು. ಆ ಸಂನ್ಯಾಸಿಗಳಿಗೂ ವಿದ್ಯಾರ್ಥಿಗಳಿಗೂ ಭಿಕ್ಷೆಯನ್ನು ಹಾಕುವದು ದೇಶಹಿತಕ್ಕೆ ಸಾಧಕವಾಗುವದು. ಹೇಗೆಂದರೆ ಸಂನ್ಯಾಸಿಗಳ ಧ್ಯಾನಾದಿಗಳಿಂದ ದೇಶದಲ್ಲಿ ಮಳೆಬೆಳೆಗಳಾಗುವವು ಮತ್ತು ಅವರ ಉಪದೇಶದಿಂದ ಜನರ ಧಾರ್ಮಿಕವೃತ್ತಿ ಹೆಚ್ಚುವದು. ವಿದ್ಯಾರ್ಥಿಗಳ ವಿದ್ಯಾಭ್ಯಾಸದಿಂದ ದೇಶದಲ್ಲಿ ವಿದ್ಯಾಭಿವೃದ್ಧಿಯಾಗುವದಲ್ಲದೆ ಆ ಗುಂಪಿನಿಂದ ದೇಶೋದ್ಧಾರಕರಾದ ಪ್ರಾಜ್ಞರು ಹೊರಬೀಳುವರು. ಹೀಗೆ ಸಂನ್ಯಾಸಿಗಳ ಮತ್ತು ವಿದ್ಯಾರ್ಥಿಗಳ ಉದ್ಯೋಗವು ದೇಶಾಭ್ಯುದಯಕ್ಕೆ ಸಾಧನವಾಗಿ ಪರಿಣಮಿಸುವದೆಂದ ಮೇಲೆ ಅವರಿಗೆ ದೇಶದ ಗೃಹಸ್ಥರು ಭಿಕ್ಷೆಯನ್ನು ಹಾಕದಿರುವದು ಯಾವ ನ್ಯಾಯ? ಎಲ್ಲ ಸಂನ್ಯಾಸಿಗಳಿಂದಲೂ ಎಲ್ಲ ವಿದ್ಯಾರ್ಥಿಗಳಿಂದಲೂ ದೇಶವು ಮುಗಿಲು ಮುಟ್ಟದಿದ್ದರೂ ಆ ಗುಂಪಿನಲ್ಲಿ ಅಂಥವರೊಬ್ಬಿಬ್ಬರಾದರೂ ಇದ್ದೇ ಇರುವರು. ಇನ್ನು ಕುರುಡರು ಕುಂಟರು ಮೊದಲಾದವರು ಹೇಗೆ ದುಡಿಯಬೇಕು? ನಮ್ಮ ಮನೆಯಲ್ಲಿಯೇ ಒಬ್ಬ ಕುರುಡನು ಹುಟ್ಟಿದರೆ ಅವನಿಂದ ಮನೆಗಾದಾಯವಿಲ್ಲವೆಂದು ಅವನನ್ನು ಕೊಂದುಬಿಡುವೆವೇನು? ದೇಶದಲ್ಲಿರುವ ಎಲ್ಲ ಕುರುಡರ ಮತ್ತು ಕುಂಟರ ವಿಚಾರವೂ ಹಾಗೆಯೇ. ಅವರನ್ನು ಮನೆಯಲ್ಲಿ ರಕ್ಷಿಸುವವರು ಬೇರೆ ಇದ್ದರೆ ಅವರು ಭಿಕ್ಷಕ್ಕೇಕೆ ಬರುತ್ತಾರೆ? ಆದ್ದರಿಂದ ಅವರಿಗೂ

ಭಿಕ್ಷಕ್ಕೆ ಅಧಿಕಾರ ಉಂಟು. ಇನ್ನೂ ಎಷ್ಟೋ ಜನ ದೃಢಾಂಗರೂ ಭಿಕ್ಷೆಗೆ ಬರುತ್ತಿರಬಹುದು. ಆದರೆ ಭಿಕ್ಷವನ್ನು ಹಾಕದೆ ಇರುವದು ನಮ್ಮ ಧರ್ಮವಲ್ಲ. ಅವನು ಭಿಕ್ಷವನ್ನು ಅಧಿಕಾರಿಯಾಗಿ ಬೇಡುವನೋ ಅನಧಿಕಾರಿಯಾಗಿ ಬೇಡುವನೊ ಅದರ ವಿಚಾರವು ನಮಗೆ ಬೇಕಿಲ್ಲ. ಭಿಕ್ಷೆಯನ್ನು ನೀಡುವದು ನಮ್ಮ ಧರ್ಮ. ಸೋಮಾರಿತನದಿಂದ ಭಿಕ್ಷೆಯನ್ನು ಬೇಡುವದು ಶಾಸ್ತ್ರಕ್ಕೆ ಸಮ್ಮತವಲ್ಲ. ಹಾಗೆ ಮಾಡಬಾರದೆಂದು ಶಾಸ್ತ್ರವು ಅವರಿಗೆ ಆಜ್ಞೆಯನ್ನು ಮಾಡುವದು. ಆದರೂ ಅವರು ಜೇಷ್ಠಲಕ್ಷ್ಮಿಯ ಪ್ರಭಾವದಿಂದ ಶಾಸ್ತ್ರದ ಮಾತನ್ನು ಮೀರಿ ನಡೆದರೆ ಅವರು ಅದಕ್ಕೆ ತಕ್ಕ ಫಲವನ್ನು ಅನುಭವಿಸುವರು. ನಾವು ಮಾತ್ರ ಭಿಕ್ಷವನ್ನು ಹಾಕಲಿಕ್ಕೇಬೇಕು.

ಇದು ಪ್ರಸಂಗಾನುಸಾರವಾಗಿ ಬಂದ ಭಿಕ್ಷೆಯ ಮಾತಾಯಿತು. ಅತಿಥಿಗಳು ಭಿಕ್ಷುಕರಲ್ಲ; ದಾರಿಹೋಕರು. ದಾರಿಹೋಕರು ನಮ್ಮ ಮನೆಗೆ ಬರುವಾಗ ಒಂದೊಂದು ವೇಳೆ ದೇವರೇ ಅರೀತಿಯಾದ ರೂಪಾಂತರದಲ್ಲಿ ಬಂದು ನಮ್ಮ ಗೃಹಸ್ಥಧರ್ಮವನ್ನು ಪರೀಕ್ಷೆಮಾಡುವನೆಂದು ಕೂಡ ನಮ್ಮವರ ಭಾವನೆ ಮುಂದೆ ಹೋಗಿದೆ. ಆದ್ದರಿಂದ ಬಂದವರನ್ನು ದೇವರಂತೆ ಭಾವಿಸಿ ಸತ್ಕರಿಸುವದು ನಮ್ಮ ಧರ್ಮವಾಗಿದೆ. ಅತಿಥಿಗಳನ್ನು ಸತ್ಕರಿಸದೆ ಹೋದರೆ ದೇವರನ್ನೇ ಅನಾದರ ಮಾಡಿದಂತೆ ಆಗಿ ಆದರಿಂದ ತುಂಬ ಅಶ್ರೇಯಸ್ಸಾದೀತೆಂದು ಹಿಂದಿನ ಜನರು ಇನ್ನೂ ಧರ್ಮಶ್ರದ್ಧೆಯನ್ನಿಟ್ಟಿರುತ್ತಾರೆ. ಹಿಂದೆ ಪಾಂಡವರು ವನವಾಸಕ್ಕೆ ಹೋಗಿದ್ದರಷ್ಟೆ. ಆ ಸಮಯದಲ್ಲಿ ಅವರಿಂದ ಅತಿಥಿಸತ್ಕಾರವಾಗಲಿಲ್ಲವೆನಿಸಿ ಅದರಿಂದ ಅವರ ನಾಶವಾಗುವಂತೆ ಮಾಡಬೇಕೆಂದು ದುರ್ಯೋಧನನು ಕುಯುಕ್ತಿಯನ್ನು ಮಾಡಿದ್ದು ಭಾರತದಲ್ಲಿ ಪ್ರಸಿದ್ಧವಾಗಿದೆ. ಅವನು ದೂರ್ವಾಸರನ್ನು ಅಲ್ಲಿಗೆ ಅವೇಳೆಯಲ್ಲಿ ಹೋಗಹೇಳಿ ಆಗ ಆತಿಥ್ಯವು ದೊರೆಯದಿರಲು ಪಾಂಡವರನ್ನು ನಿಗ್ರಹಿಸಬೇಕೆಂದು ಅವರ ಕಿವಿಯಲ್ಲಿ ಊದಿದ್ದನು. ದೂರ್ವಾಸರು ಬಹುಕಾಲ ಅವನ ಆತಿಥ್ಯದಲ್ಲಿದ್ದ ದಾಕ್ಷಿಣ್ಯದಿಂದ ಆ ಮಾತಿಗೆ ಕಟ್ಟುಬಿದ್ದು ಅದರಂತೆ ಮಾಡಬೇಕೆಂದು ಹೋದರು. ಆದರೆ ಕೃಷ್ಣನನುಗ್ರಹದಿಂದ ಪಾಂಡವರು ಪಾರಾದರು. ದೂರ್ವಾಸರು ಹೋದದ್ದು ಅರ್ಧರಾತ್ರಿಯಾಗಿತ್ತು. ದ್ರೌಪದಿಯು ಅಕ್ಷಯಪಾತ್ರೆಯನ್ನು ತೊಳೆದಿಟ್ಟಿದ್ದಳು.

ತೊಳೆದ ಮೇಲೆ ಅದರಲ್ಲಿ ಏನೂ ಸಿಕ್ಕುತ್ತಿರಲಿಲ್ಲ. ಆಗ ದ್ರೌಪದಿಯು ಕೃಷ್ಣನಿಗೆ ಮರೆಹೊಕ್ಕಳು. ಕೃಷ್ಣನು ಬಂದು ಆ ಪಾತ್ರೆಯಲ್ಲಿ ಕಂಡ ಒಂದು ಸೊಪ್ಪನ್ನು ತಿಂದು ಅದರಿಂದ ದೂರ್ವಾಸರೂ ಅವರ ಬ್ರಾಹ್ಮಣ ಸೇನೆಯೂ ತೇಗುವಂತೆ ಮಾಡಿದನು.

ಅತಿಥಿಸತ್ಕಾರದಲ್ಲಿ ಕೊರತೆಯಾದರೆ ಅಧರ್ಮವು ಗಂಟುಬಿದ್ದೀತೆಂಬ ಭಯವು ಮನುಷ್ಯರಿಗೆ ಮಾತ್ರವೇ ಅಲ್ಲ; ದೇವತೆಗಳಲ್ಲಿಯೂ ಕಂಡು ಬಂದಿರುವದು. ತಂದೆಯು ಯಜ್ಞದಲ್ಲಿ ದಾನಗಳನ್ನು ಮಾಡುವ ಗಡಿಬಿಡಿ ಯಲ್ಲಿದ್ದಾಗ ನಚಿಕೇತನೆಂಬ ಮಗನು ಬಂದು ತನ್ನನ್ನು ಯಾರಿಗೆ ಕೊಡು ತ್ತೀಯೆಂದು ಕೇಳಲು ಮೃತ್ಯುವಿಗೆಂದು ತಂದೆಯು ಕೋಪದಿಂದ ನುಡಿ ದನು. ಮಗನು ತಂದೆಯ ಮಾತನ್ನು ಹುಸಿಯಾಗಿ ಮಾಡಬಾರದೆಂದು ಯಮಲೋಕಕ್ಕೆ ಹೋದನು. ಯಮನು ಊರಲ್ಲಿರಲಿಲ್ಲ. ನಚಿಕೇ ತನು ಅವನಿಗಾಗಿ ಮೂರು ದಿನಗಳು ಕಾದನು. ಯಮನನ್ನು ಕಾಣದೆ ಯಾವ ಆಹಾರವನ್ನೂ ತೆಗೆದುಕೊಳ್ಳುವದಿಲ್ಲವೆಂದು ಅವನ ವ್ರತವಿತ್ತು. ಹೀಗೆ ಮೂರು ದಿನಗಳಿದ್ದ ಮೇಲೆ ಯಮನು ಊರಿಗೆ ಬಂದನು. ಒಡನೆ ಅವನ ಮಂತ್ರಿಗಳೂ ಮತ್ತು ಹೆಂಡತಿಯರೂ ಬಂದು ಯಮನಿಗೆ ಹೇಳು ತ್ತಾರೆ—

"ವೈಶ್ವಾನರಃ ಪ್ರವಿಶತಿ ಅತಿಥಿರ್ಬ್ರಾಹ್ಮಣೋ ಗೃಹಾನ್ ।
ತಸ್ಯೈತಾಂ ಶಾಂತಿಂ ಕುರ್ವಂತಿ ಹರ ವೈವಸ್ವತೋದಕಂ ॥
ಆಶಾಪ್ರತೀಕ್ಷೇ ಸಂಗತಂ ಸೂನೃತಾಂ ಚೇಷ್ಟಾಪೂರ್ತೇ ಪುತ್ರಪಶೂಂಶ್ಚ
ಸರ್ವಾನ್ । ಏತತ್ ವೃಂಕ್ತೇ ಪುರುಷಸ್ಯಾಲ್ಪಮೇಧಸೋ
ಯಸ್ಯಾನಶ್ನನ್ವಸತಿ ಬ್ರಾಹ್ಮಣೋ ಗೃಹೇ ॥

ತಾತ್ಪರ್ಯವೇನೆಂದರೆ—"ಅಗ್ನಿಯೇ ಸಾಕ್ಷಾತ್ತಾಗಿ ಅತಿಥಿರೂಪದಿಂದ ಮನೆಗೆ ಬಂದಿರುತ್ತಾನೆ. ಅವನ ದಾಹವನ್ನು ಶಮನಮಾಡುವದಕ್ಕಾಗಿ ಸಜ್ಜ ನರು ಅವನಿಗೆ ಸತ್ಕಾರವನ್ನು ಮಾಡುತ್ತಾರೆ. ಆದ್ದರಿಂದ ಹೇ ಯಮ, ಅತಿ ಥಿಗೆ ಕಾಲುತೊಳೆಯುವ ನೀರನ್ನು ತೆಗೆದುಕೊ. ನಮ್ಮ ಆಶೆಯೂ ಪ್ರತೀ ಕ್ಷೆಯೂ ಅವೆರಡೂ ದೊರೆತ ಫಲವೂ ಸತ್ಯದ ಫಲವೂ ಮತ್ತು ಯಾಗದ ಫಲವೂ ಕೆರೆಬಾವಿಮೊದಲಾದವುಗಳನ್ನು ಕಟ್ಟಿಸಿದ ಫಲವೂ ಮಕ್ಕಳೂ ದನ

ಕರುಗಳೂ— ಇವುಗಳೆಲ್ಲವೂ ಬುದ್ಧಿಯಿಲ್ಲದ ಯಾವನ ಮನೆಯಲ್ಲಿ ಅತಿಥಿಯು ಉಣ್ಣದೆ ಇರುವನೋ ಅವನ ಭಾಗಕ್ಕೆ ನಾಶವಾಗುವವು. ಈ ಮಾತು ಕಠೋಪನಿಷತ್ತಿನಲ್ಲಿ ಬಂದಿರುವದು.” ಆಗ ಯಮನು ಅತಿಥಿಸತ್ಕಾರವನ್ನು ಮಾಡದ್ದಲ್ಲದೆ ಮೂರುದಿನದ ಉಪವಾಸಕ್ಕಾಗಿ ಮೂರು ವರಗಳನ್ನು ಬೇರೆ ಕೊಟ್ಟು ಅವನನ್ನು ತೃಪ್ತಿಗೊಳಿಸಿರುವನು.

ಧನಿಕರು ತಾವಾಗಿ ಒಂದು ಸಮಾರಂಭವನ್ನು ಹೂಡಿ ಅನೇಕರಿಗೆ ಆಮಂತ್ರಣವನ್ನು ಕೊಟ್ಟು ಬಹಳ ವಿಜೃಂಭಣೆಯಿಂದ ಅನ್ನಸಂತರ್ಪಣೆಯನ್ನು ಮಾಡಬಹುದು. ಮನೆಗೆ ತಾನಾಗಿ ಬಂದ ಅತಿಥಿಗೆ ನಿರಾತಂಕವಾದ ಮನಸ್ಸಿನಿಂದ ನೀಡಿದ ಫಲವು ದೊರೆಯುವ ಸಂಭವವು ಕಡಿಮೆ. ಧರ್ಮರಾಯನು ಅಶ್ವಮೇಧಯಾಗವನ್ನು ಹೂಡಿದನು. ಅಸಹಾಯಶೂರರಾದ ಅವನ ತಮ್ಮಂದಿರು ಹತ್ತು ಕಡೆಗಳಿಂದಲೂ ಹಣವನ್ನು ತಂದು ಗುಪ್ಪೆಯನ್ನು ಹಾಕಿದರು. ಯಜ್ಞವು ಬಹು ಚೆನ್ನಾಗಿ ನಡೆಯಿತು. ಲೆಕ್ಕವಿಲ್ಲದಷ್ಟು ಜನರು ಉಂಡು ಉಟ್ಟು ತಿಂದು ತೇಗಿ ಹೋದರು. ಯಜ್ಞವೆಲ್ಲಾ ಮುಗಿದಮೇಲೆ ಅಲ್ಲಿ ನೆರೆದಿದ್ದ ಜನರೆಲ್ಲಾ ಉಂಡ ಸ್ಥಲಕ್ಕೆ ಬಂದು ಒಂದು ಕೀರವು ಸುಮ್ಮನೆ ಉರುಳಾಡಿ ಕೊನೆಗೆ ನಿಟ್ಟುಸಿರುಬಿಟ್ಟಿತಂತೆ. ನಿಟ್ಟುಸಿರಿಗೆ ಕಾರಣವೇನೆಂದು ಕೇಳಿದಾಗ ಅದು ಹೇಳಿದ್ದೇನೆಂದರೆ—“ಹಿಂದೆ ಶಕ್ತುಪ್ರಸ್ಥನೆಂಬುವನು ಉಂಛವೃತ್ತಿಯಿಂದ ಜೀವಿಸುತ್ತಿದ್ದನು. ಒಂದು ದಿನ ಅವನು ಎಲ್ಲಿಯೋ ಸ್ವಲ್ಪಧಾನ್ಯವನ್ನು ತಂದು ಪ್ರಾಣಧಾರಣೆಗಾಗಿ ಆಹಾರವನ್ನು ಮಾಡಿಕೊಂಡಿರುವಾಗ ಒಬ್ಬ ಅತಿಥಿಯು ಬಂದನು. ತಾನೂ ತನ್ನ ಹೆಂಡತಿಯೂ ತನ್ನ ಮಗನೂ ಮತ್ತು ತನ್ನ ಸೊಸೆಯೂ ಕೂಡ ಎಲ್ಲರೂ ತಮ್ಮ ಪ್ರಾಣವು ಹೋದರೂ ಚಿಂತೆಯಿಲ್ಲವೆಂದು ನಿರ್ಧರ ಮಾಡಿಕೊಂಡು ತಮ್ಮ ಭಾಗವನ್ನೆಲ್ಲಾ ಅತಿಥಿಗೆ ಕೊಟ್ಟುಬಿಟ್ಟರು. ಆ ಅತಿಥಿಯು ಅದನ್ನು ತಿಂದು ನೀರನ್ನು ಕುಡಿದಾಗ ತೊಟ್ಟಿಕ್ಕಿದ ನೀರಿನಿಂದ ಕೆಸರಾದ ಕಡೆಯಲ್ಲಿ ನಾನು ಒಮ್ಮೆ ಉರುಳಾಡಲಾಗಿ ನನ್ನ ಅರ್ಧ ಮೈ ಎಲ್ಲಾ ಬಂಗಾರವಾಯಿತು. ಈಚೆಗೆ ಇನ್ನರ್ಧವನ್ನೂ ಬಂಗಾರವಾಗಿ ಮಾಡಿಕೊಳ್ಳಬೇಕೆಂದು ಅಂದಿನಿಂದಲೂ ಭೂರಿಭೋಜನವಾದೆಡೆಯಲ್ಲೆಲ್ಲಾ ನನ್ನ ಮೈಯನ್ನು ತಿಕ್ಕುತ್ತಲೇ ಇರುವೆನು. ಧರ್ಮರಾಯನ ಯಾಗವು

ಬಹು ದೊಡ್ಡದೆಂಬ ಕೀರ್ತಿಯನ್ನು ಕೇಳಿ ಇಲ್ಲಿಯಾದರೂ ನನ್ನ ಉಳಿದ ಅರ್ಧ ಮೈ ಬಂಗಾರವಾದೀತೆಂದು ಎಷ್ಟೋ ಸಾರಿ ತಿಕ್ಕಿ ನೋಡಿದೆನು. ಒಂದು ರೋಮವು ಕೂಡ ಹೊಂಬಣ್ಣವಾಗಲಿಲ್ಲ. ಅದನ್ನು ನೋಡಿ ನಿಟ್ಟುಸಿರಿಟ್ಟೆನು— ಹೀಗೆಂದು ಕೀರವು ಓಡಿಹೋಯಿತು. ಶಕ್ತುಪ್ರಸ್ಥನ ಅತಿಥಿಸತ್ಕಾರದ ಪ್ರಭಾವವು ಅಷ್ಟು ಪವಿತ್ರವಾಗಿತ್ತು. ಧರ್ಮರಾಯನ ಯಾಗದಲ್ಲಿ ಸಂಪಾದನೆಯು ಕಷ್ಟವಿಲ್ಲ ಮತ್ತು ತನಗೆ ಅದರಿಂದ ಬಾಧಕವಿಲ್ಲ. ಶಕ್ತುಪ್ರಸ್ಥನ ಸಂಪಾದನೆಯು ಬಹು ಕಷ್ಟಸಾಧ್ಯವಾದುದಾಗಿತ್ತು ಮತ್ತು ಅವನು ಇದ್ದದ್ದನ್ನೆಲ್ಲಾ ಅತಿಥಿಗೆ ಕೊಡುವದರ ಮೂಲಕ ಮರಣಕ್ಕೆ ಗುರಿಯಾಗುವ ಹೊತ್ತು ಬಂದಿತ್ತು. ಇಂಥ ಬಿಕ್ಕಟ್ಟಿನ ಪ್ರಸಂಗದಲ್ಲಿಯೂ ಹಿಂದುಮುಂದು ನೋಡದೆ ಮಾಡಿದ ಸತ್ಕಾರವೇ ನಿಜವಾದ ಅತಿಥಿಸತ್ಕಾರ. ಆದ್ದರಿಂದ ಶ್ರೀಮಂತರು ಆಮಂತ್ರಣವನ್ನು ಕೊಟ್ಟು ಪಂಚಪಕ್ವಾನ್ನಗಳನ್ನು ಉಣ್ಣಿಸುವದರ ಫಲಕ್ಕಿಂತಲೂ ಬಡವನು ಮನೆಗೆ ಬಂದ ಅತಿಥಿಗೆ ಗಂಜಿಯನ್ನು ಕೊಟ್ಟರೂ ಅದರ ಫಲವು ಅಪಾರವಾಗಿರುವದು. ಆದ್ದರಿಂದ ಅತಿಥಿಸತ್ಕಾರವನ್ನುಪೇಕ್ಷಿಸಬಾರದು.

“ಅತಿಥಿಸ್ತಿಷ್ಠತಿ ದ್ವಾರೇ ಯೋ ಭುಙ್ಕ್ತೇಽನ್ನಂ ಪಿಪಾಸಯಾ ತು ।
ಗೋಮಾಂಸಸಮಮನ್ನಂ ತತ್ಸ ಚಂಡಾಲಸಮೋ ನರಃ ॥”

ಎಂಬ ವಾಕ್ಯವುಂಟು. “ಮನೆಯ ಬಾಗಿಲಲ್ಲಿ ಅತಿಥಿ ಇರುವಾಗ ಅವನನ್ನು ಬಿಟ್ಟು ಒಳಗೆ ತಿನ್ನುವ ಅನ್ನವು ಗೋಮಾಂಸಕ್ಕೆ ಸಮವಾಗುವದು; ಆ ಗೃಹಸ್ಥನು ಚಂಡಾಲಸಮನಾಗುವನು” ಎಂದು ಅದರ ಅರ್ಥ. ಪೂರ್ವದಲ್ಲಿ ರಂತಿದೇವನೆಂಬ ದೊರೆಯು ನಲವತ್ತೆಂಟು ದಿನ ನಿರಶನವ್ರತದಿಂದ ತಪಶ್ಚರ್ಯೆಯನ್ನು ಮಾಡಿದಾಗ ಪಾರಣೆಯ ದಿವಸ ಊಟದ ಹೊತ್ತಿಗೆ ಒಬ್ಬ ಬ್ರಾಹ್ಮಣನು ಹಸಿವೆಯಾಗುವದೆಂದು ಬಂದನು. ರಾಜನು ಮೊದಲು ಅವನಿಗೆ ಊಟವನ್ನು ಮಾಡಿಸಿ ಆಮೇಲೆ ತಾನು ಊಟಕ್ಕೆ ಕುಳಿತನು. ಆಹೊತ್ತಿಗೆ ಒಬ್ಬ ಶೂದ್ರನು ಬಂದು ತನಗೂ ತನ್ನ ನಾಯಿಗಳಿಗೂ ಅನ್ನವಿಲ್ಲದೆ ಸಂಕಟವಾಗಿರುವದೆಂದನು. ರಾಜನು ಇದ್ದದ್ದರಲ್ಲಿ ಅವನನ್ನೂ ನಾಯಿಗಳನ್ನೂ ತೃಪ್ತಿಪಡಿಸಿ ತಾನಿನ್ನು ಊಟದ ಶಾಸ್ತ್ರವನ್ನು ಮಾಡಬೇಕೆನ್ನುವಾಗ ಒಬ್ಬ ಜಾತಿಕೆಟ್ಟವನು ಬಂದು ದೀನತೆಯಿಂದ ಒದರಿದನು.

ರಂತಿದೇವನು ಇದ್ದದ್ದನ್ನೆಲ್ಲಾ ಅವನಿಗಿಟ್ಟು ತಾನು ಉಂಡದ್ದಕ್ಕಿಂತ ಹೆಚ್ಚಾಗಿ ಆನಂದಪಡಲು ಆಗ ಬ್ರಹ್ಮಾದಿದೇವತೆಗಳು ಅವನ ಮುಂದೆ ಬಂದು ಅವನನ್ನು ಹಾಡಿ ಹರಸಿ ಅವನಿಗೆ ಸದ್ಗತಿಯನ್ನು ಕೊಟ್ಟರು.

## ಗೃಹಸ್ಥನ ಭೋಜನ.

ಗೃಹಸ್ಥಾಶ್ರಮವು ಎಲ್ಲಾ ಆಶ್ರಮಗಳಿಗಿಂತಲೂ ಮೇಲಾದದ್ದೆಂದು ಶಾಸ್ತ್ರಗಳು ಬಾಯಿತುಂಬ ಹೊಗಳಿರುವವಷ್ಟೆ. ಗೃಹಸ್ಥನಿಗೆ ಅದಕ್ಕೆ ತಕ್ಕ ಕಷ್ಟವೂ ಇದೆ. ಉತ್ಕೃಷ್ಟವಾದ ಪದಾರ್ಥವು ಸುಲಭವಾದ ಬೆಲೆಗೆ ಹೇಗೆ ಸಿಕ್ಕೀತು? ಬರಿಗಯ್ಯಾಗಿರತಕ್ಕ ಇತರಾಶ್ರಮದವರು ಕಾಲಕಾಲಕ್ಕೆ ತಮ್ಮ ಆಹಾರವನ್ನು ಪಡೆಯುತ್ತಿರುವಾಗ ಕೈತುಂಬ ಸಂಪಾದಿಸುವ ಗೃಹಸ್ಥನು ತನ್ನ ಜಠರಾಗ್ನಿಗೆ ಆಹುತಿಯನ್ನು ಹಾಕುವದಕ್ಕೆ ಕಾಲವನ್ನು ನಿರೀಕ್ಷಿಸಬೇಕಾಗಿರುತ್ತದೆ. ಅವನು ಮನೆಯಲ್ಲಿ ತನಗೆಂದು ಅಡಿಗೆಯನ್ನು ಮಾಡುವ ಹಾಗಿಲ್ಲ. ಆದ ಅಡಿಗೆಯನ್ನಾದರೂ ಒಡನೆ ಹೊಟ್ಟೆಗೆ ತುಂಬಿಕೊಳ್ಳುವ ಹಾಗಿಲ್ಲ. ಅಡಿಗೆಯು ಮೊದಲು ದೇವರಿಗೆ ನಿವೇದನವಾಗಬೇಕು. ಆಮೇಲೆ ಹೊರಗಣ ತಿರ್ಯಕ್ಪ್ರಾಣಿಗಳಿಗೆ ಕೆಲವು ತುತ್ತುಗಳು ಸಲ್ಲಬೇಕು. ಆಮೇಲೆ ಅತಿಥಿಗಳಿಗಾಗಿ ಕೆಲವು ಹೊತ್ತು ದಾರಿಯನ್ನು ಕಾಯಬೇಕು. ಶಿಷ್ಟಸಂಪ್ರದಾಯದ ಜನರು ಈಗಲೂ ಕೂಡ ಈ ಆಚರಣೆಯನ್ನಿಟ್ಟುಕೊಂಡಿರುವರು. ಮನೆಯಲ್ಲಿ ಅಡಿಗೆಯಾಗಿರುವದೆಂದು ತಾವು ಉಂಡು ಕುಳಿತರೆ ಆಮೇಲೆ ಅತಿಥಿಗಳು ಬಂದು ನಿಟ್ಟುಸಿರುಬಿಡಬೇಕಾದೀತೆಂದು ಪಾಪಭೀತಿ. ಪರಸ್ಥಲದಿಂದ ಜನರು ಮಾರ್ಗಸ್ಥರಾಗಿ ಬಂದು ಅಲ್ಲಿ ನಿಲ್ಲುವ ಹೊತ್ತು ಕಳೆದ ಮೇಲೆ ಗೃಹಸ್ಥನಿಗೆ ಭೋಜನ. ಅದಾದರೂ ಹೇಗೆ?

"ಭುಕ್ತವತ್ಸ್ವಥ ವಿಪ್ರೇಷು ಸ್ವೇಷು ಭೃತ್ಯೇಷು ಚೈವ ಹಿ ।
ಭುಂಜೀಯಾತಾಂ ತತಃ ಪಶ್ಚಾದವಶಿಷ್ಟಂ ತು ದಂಪತೀ ॥"

ಎಂದು ಮನುಸ್ಮೃತಿಯಲ್ಲಿದೆ. ಅತಿಥಿಗಳ ಭೋಜನವೆಲ್ಲಾ ಆಗಿರಬೇಕು; ತನ್ನ ಆಳುಮಕ್ಕಳ ಊಟವು ಕೂಡ ಮುಗಿದಿರಬೇಕು; ಆಮೇಲೆ ಉಳಿದದ್ದನ್ನು ಗಂಡಹೆಂಡಿರು ಭೋಜನಮಾಡಬೇಕು. ತಾತ್ಪರ್ಯವೇನೆಂದರೆ

ಇತರರ ತೃಪ್ತಿಯನ್ನು ನೋಡುವದು ಮೊದಲನೆಯ ಕೆಲಸ. ತನ್ನ ತೃಪ್ತಿಯು ಆಮೇಲಿನದು. ಮನೆಯಲ್ಲಿ ಈ ಮನೋವೃತ್ತಿಯನ್ನು ಮೈಗೂಡಿಸಿಕೊಂಡ ಗೃಹಸ್ಥನು ಆಮೇಲೆ ತನ್ನ ಊರಿನ ಸುಖವನ್ನು ತನ್ನದಕ್ಕಿಂತ ಹೆಚ್ಚಿನದಾಗಿಯೂ ಅದರಿಂದ ಮುಂದೆ ಅಖಂಡಭೂಮಂಡಲದ ಸುಖವನ್ನು ತನ್ನದಕ್ಕಿಂತ ಶ್ರೇಷ್ಠವಾದದ್ದಾಗಿಯೂ ಭಾವಿಸುವದಕ್ಕೆ ಮಾರ್ಗವಾಗುವದು. ಇಂಥ ಭಾವನೆಯು ಬೇರೂರಿತೆಂದರೆ ಅವನ ಉದ್ಧಾರಕ್ಕೆ ಅಡ್ಡಿ ಏನು? ಹೀಗೆ ಎಷ್ಟೆಷ್ಟು ಗೃಹಸ್ಥನ ಮನಸ್ಸು ವಿಕಾಸವಾಗುತ್ತ ಹೋಗುವದೋ ಅಷ್ಟಷ್ಟು ಅವನ ಮನಸ್ಸಿನಲ್ಲಿ ದೇವರ ಸಾನ್ನಿಧ್ಯವು ಆವಿರ್ಭವಿಸುವದು.

## ಬ್ರಹ್ಮಚರ್ಯ.

ಗೃಹಸ್ಥರು ಪಾಲಿಸತಕ್ಕ ವ್ರತಗಳಲ್ಲಿ ಬ್ರಹ್ಮಚರ್ಯವ್ರತವು ಒಂದಾಗಿರುವದು. ಗೃಹಸ್ಥನಾಗಿದ್ದು ಬ್ರಹ್ಮಚರ್ಯವ್ರತವನ್ನು ಪಾಲಿಸಬೇಕೆಂಬ ಮಾತು ವಿಲಕ್ಷಣವಾಗಿ ತೋರಬಹುದು. ಏಕೆಂದರೆ ಬ್ರಹ್ಮಚರ್ಯವೆಂದರೆ ರೂಢಿಯಲ್ಲಿ ಸ್ತ್ರೀಸಂಪರ್ಕವಿಲ್ಲದಿರುವದೆಂದರ್ಥ. ಗೃಹಸ್ಥರು ಸಂತಾನಾರ್ಥವಾಗಿ ಮದುವೆಯಾಗಿರುವದರಿಂದ ಈ ಅರ್ಥದ ಬ್ರಹ್ಮಚರ್ಯವು ಅವರಿಗೆ ಅನ್ವಯಿಸುವದೇ ಇಲ್ಲ. ಆದರೂ ಶಾಸ್ತ್ರಕಾರರು ಗೃಹಸ್ಥರಿಗೂ ಬ್ರಹ್ಮಚರ್ಯವುಂಟೆಂದು ಹೇಳುತ್ತಾರೆ. ಇಲ್ಲಿ ಬ್ರಹ್ಮಚರ್ಯವೆಂದರೆ ತನ್ನ ಸ್ತ್ರೀಯಲ್ಲಿ ಇಂದ್ರಿಯಾರ್ಥಗಳನ್ನು ಉಪಭೋಗಮಾಡುವಾಗಲೂ ಕೂಡ ಶಾಸ್ತ್ರದಲ್ಲಿ ಹೇಳಿದ ನಿಯಮಗಳನ್ನು ಪಾಲಿಸುವದು. ಸತ್ಸಂತಾನದ ಉತ್ಪತ್ತಿಗೆ ಕೆಲಕೆಲವು ಕಾಲಗಳು ನಿಷಿದ್ಧಗಳೆಂದು ಶಾಸ್ತ್ರಕಾರರು ನಿಶ್ಚಯಿಸಿರುತ್ತಾರೆ. ಸತ್ಸಂತಾನವೇ ಗೃಹಸ್ಥನ ಧ್ಯೇಯವು. ಆದ್ದರಿಂದ ಪ್ರತಿಯೊಬ್ಬ ಗೃಹಸ್ಥನೂ ಸಂತಾನೋತ್ಪತ್ತಿಯ ವಿಷಯದಲ್ಲಿ ಶಾಸ್ತ್ರದ ನಿಯಮವನ್ನು ದಾಟುವದು ಪಾಪವಾಗುವದು. ಏಕೆಂದರೆ ಇಂದ್ರಿಯಾರ್ಥಕ್ಕಾಗಿ ಶಾಸ್ತ್ರದ ಎಲ್ಲೆಯನ್ನು ಮೀರುವದು ಪಶುತ್ವ. ಮನುಷ್ಯಜನ್ಮವನ್ನು ಪಡೆದಿದ್ದೂ ಪಶುತ್ವಕ್ಕೆ ಅವಕಾಶವನ್ನು ಕೊಡುವದು ಪಾಪ. ಆದ್ದರಿಂದ ಸಂತಾನೋತ್ಪತ್ತಿಯ ಸಂಬಂಧವಾದ ಶಾಸ್ತ್ರ

ವಚನಗಳ ಪ್ರತ್ಯಕ್ಷರವನ್ನೂ ಪಾಲಿಸುವದು ಪ್ರತಿಯೊಬ್ಬ ಗೃಹಸ್ಥನ ಕರ್ತವ್ಯ.

ಶಾಸ್ತ್ರವು ಗೃಹಸ್ಥಾಶ್ರಮದ ಮುಖವಾಗಿ ಮನುಷ್ಯನಿಗೆ ಇಂದ್ರಿಯಾರ್ಥಗಳನ್ನು ಉಪಭೋಗಮಾಡುವದಕ್ಕೆ ಅವಕಾಶವನ್ನು ಕೊಟ್ಟಿದ್ದರೂ ಇಂದ್ರಿಯಾರ್ಥಗಳ ಉಪಭೋಗವು ಮನುಷ್ಯನಿಗೆ ಶೋಭಿಸುವದೆಂದು ಮಾತ್ರ ಅರ್ಥವಲ್ಲ. ಗೃಹಸ್ಥಾಶ್ರಮವೆಂಬುವದು ಇಂದ್ರಿಯಾರ್ಥಗಳನ್ನು ಬಿಗಿಹಿಡಿಯುವದಕ್ಕೆ ಶಿಕ್ಷಣಶಾಲೆ. ಆದ್ದರಿಂದಲೇ ಅದರಲ್ಲಿ ಸಂತಾನೋತ್ಪತ್ತಿಗೆ ಅಲ್ಲಲ್ಲಿಗೆ ನಿಯಮಗಳಿರುವವು. ಕೊನೆಗೆ ಅವನಿಗೆ ಅದರ ಬಾಯಾರಿಕೆ ತಪ್ಪಬೇಕೆಂಬುದೇ ಅದರ ಧ್ಯೇಯ. ಪುರೂರವನೆಂಬ ರಾಜನು ಊರ್ವಶಿಯಲ್ಲಿ ಆಸಕ್ತನಾಗಿ ಕುರುಕ್ಷೇತ್ರದಲ್ಲಿ ಹೋಮವನ್ನು ಮಾಡಿ ಆಕೆಯ ಲೋಕಕ್ಕೆ ಹೋಗಿ ಎಷ್ಟೋಕಾಲ ಆಕೆಯೊಡನೆ ಸುಖಾನುಭವವನ್ನು ಮಾಡಿಕೊಂಡಿದ್ದು ಕೊನೆಗೆ ಅದರಿಂದ ಶಾಂತಿ ದೊರೆಯದೆಂದು ಮನಗಂಡು ಪಶ್ಚಾತ್ತಾಪವನ್ನು ಹೊಂದಿದನೆಂದು ಐಲಗೀತೆಯಲ್ಲಿ ಹೇಳಿದೆ. ಈ ಸ್ಥಿತಿಯನ್ನು ತಂದುಕೊಡುವದೇ ಗೃಹಸ್ಥಾಶ್ರಮದ ಉದ್ದೇಶ.

ಸ್ವಸ್ತ್ರೀಪುರುಷರ ಇಂದ್ರಿಯಾರ್ಥಗಳ ಉಪಭೋಗಕ್ಕೇ ಹಿಡಿತವೆಯಿದ್ದ ಮೇಲೆ ಪುರುಷರಾಗಲಿ ಸ್ತ್ರೀಯರಾಗಲಿ ಇತರರ ಮೇಲೆ ತಮ್ಮ ಅನುರಾಗದೃಷ್ಟಿಯನ್ನು ಪ್ರಸರಿಸುವದಂತು ಅತ್ಯಂತನಿಂದ್ಯವೆಂದು ಹೇಳಬೇಕಾದ್ದೇ ಇಲ್ಲ. ಸ್ತ್ರೀಪುರುಷರಲ್ಲಿ ಪುರುಷನ ಪ್ರಕೃತಿಯೇ ಬೇಗ ಕರಗತಕ್ಕದ್ದೆಂದು ಮನಸ್ಸಿನಲ್ಲಿಟ್ಟುಕೊಂಡು ಶಾಸ್ತ್ರಗಳು ಈ ವಿಷಯದಲ್ಲಿ ಪುರುಷನನ್ನುದ್ದೇಶಮಾಡಿಯೇ ಬಹಳವಾಗಿ ಹೇಳಿವೆ. ಆದ್ದರಿಂದ ಪುರುಷರು ಈ ವಿಷಯಕ್ಕೆ ಹೆಚ್ಚು ಲಕ್ಷ್ಯವನ್ನು ಕೊಡಬೇಕು. ವಿವೇಕಿಗಳಾದ ಪುರುಷರು ಸ್ತ್ರೀಯರನ್ನು ಕಣ್ಣುತುಂಬ ನೋಡುವದು ಕೂಡ ಇಲ್ಲ. ಇದಕ್ಕೆ ಲಕ್ಷ್ಮಣನು ಉದಾಹರಣೆಯಾಗಿದ್ದಾನೆ. ರಾವಣನು ಸೀತೆಯನ್ನು ಕದ್ದುಕೊಂಡು ಹೋಗುವಾಗ ಸೀತೆಯು ತನ್ನ ಆಭರಣಗಳನ್ನೆಲ್ಲಾ ಸೀರೆಯ ಸೆರಗಿನಲ್ಲಿ ಕಟ್ಟಿ ಅದನ್ನು ಹರಿದು ಋಷ
[illegible] ವರಿಗೆ ಪ್ರಥಮ

ಪರಿಚಯವಾದಾಗ ಸುಗ್ರೀವನು ಆ ಗಂಟನ್ನು ತಂದು ರಾಮನ ಮುಂದೆ ಬಿಚ್ಚಿದನು. ಆಗ ರಾಮನು ಆ ಒಡವೆಗಳನ್ನು ನೋಡಿ ಅವು ತನ್ನ ಪತ್ನಿಯವೆಂದು ಗುರ್ತಿಸಿ ಆ ಅರ್ಥವನ್ನು ಗಟ್ಟಿಮಾಡಿಕೊಳ್ಳುವದಕ್ಕಾಗಿ ಆ ಒಡವೆಗಳಲ್ಲೊಂದೊಂದನ್ನಾಗಿ ಎತ್ತಿ ಲಕ್ಷ್ಮಣನೆದುರಿಗೆ ಹಿಡಿದು "ಇವು ಸೀತೆಯವುಗಳೋ ಅಲ್ಲವೋ?" ಎಂದು ಕೇಳಿದಾಗ ಲಕ್ಷ್ಮಣನು "ಅಣ್ಣಾ, ಇರಬಹುದು; ಆದರೆ ಆ ನನ್ನ ಅತ್ತಿಗೆಯ ಕೈಬಳೆಗಳನ್ನಾಗಲಿ ಕಿವಿಯೋಲೆಗಳನ್ನಾಗಲಿ ಇದುವರೆಗೆ ನಾನು ಕಣ್ಣಿಟ್ಟು ನೋಡಿದವನಲ್ಲ. ಆದ್ದರಿಂದ ಅವುಗಳ ಗುರುತು ನನಗಿಲ್ಲ. ನಾನು ಆಕೆಗೆ ಪಾದಾಭಿವಂದನವನ್ನು ಮಾಡುತ್ತಿದ್ದವನಾದ್ದರಿಂದ ಆಕೆಯ ಕಾಲುಂದುಗೆಗಳ ಗುರುತನ್ನು ಮಾತ್ರ ಚೆನ್ನಾಗಿ ಬಲ್ಲೆನು" ಎಂದು ಹೇಳಿದ್ದಾನೆ. ಇದರಿಂದ ಲಕ್ಷ್ಮಣನು ತನ್ನ ಅತ್ತಿಗೆಯೊಡನೆ ಎಷ್ಟೋ ದಿನಗಳು ವಾಸ ಮಾಡಿದ್ದರೂ ಕೂಡ ಅವನು ಆಕೆಯ ಮುಖವನ್ನು ಪೂರ್ಣವಾಗಿ ನಿಟ್ಟಿಸಿದವನಾಗಲಿಲ್ಲ. ನಮ್ಮ ಆರ್ಯಸಂಸ್ಕೃತಿಯೇ ಹೀಗೆ.

ಲಕ್ಷ್ಮಣನ ಬ್ರಹ್ಮಚರ್ಯವು ಈರೀತಿಯಾಗಿ ವ್ಯಕ್ತವಾಯಿತಷ್ಟೆ. ಅರ್ಜುನನು ತನ್ನ ಬ್ರಹ್ಮಚರ್ಯಪ್ರಭಾವವನ್ನು ಎಂಥ ಬಿಕ್ಕಟ್ಟಿನ ಪ್ರಸಂಗದಲ್ಲಿ ಉಳಿಸಿಕೊಂಡನೆಂಬುದು ತಿಳಿಯತಕ್ಕ ವಿಷಯವಾಗಿದೆ. ಅರ್ಜುನನು ಇಂದ್ರನ ಅನುಗ್ರಹದಿಂದ ಕುಂತಿಯ ಹೊಟ್ಟೆಯಲ್ಲಿ ಹುಟ್ಟಿದನು. ಒಮ್ಮೆ ಅವನು ತನ್ನ ಸತ್ತ್ವಗುಣಪ್ರಭಾವದಿಂದ ಸಶರೀರನಾಗಿ ಇಂದ್ರಲೋಕಕ್ಕೆ ಹೋದನು. ದೂರದಿಂದ ಮಗನು ಬಂದನೆಂಬ ಆನಂದದಿಂದ ಇಂದ್ರನು ಅವನಿಗೆ ಅರ್ಧಾಸನವನ್ನಿತ್ತು ಆದರಿಸಿ ಅವನ ಮುಂದೆ ಊರ್ವಶಿ ಮೊದಲಾದವರ ನರ್ತನವನ್ನು ಮಾಡಿಸಿದನು. ಆ ಸಮಯದಲ್ಲಿ ಅರ್ಜುನನು ಊರ್ವಶಿಯನ್ನು ಎವೆಯಿಕ್ಕದೆ ನೋಡುತ್ತಿದ್ದನು. ಇದನ್ನು ಕಂಡ ಇಂದ್ರನು ಅರ್ಜುನನಿಗೆ ಆಕೆಯಲ್ಲಿ ಅನುರಾಗವುಂಟಾಗಿರುವದೆಂದು ತಿಳಿದು ಆದಿನ ಆಕೆಯು ಅರ್ಜುನನನ್ನು ಏಕಾಂತದಲ್ಲಿ ಆನಂದಗೊಳಿಸುವಂತೆ ನಿಯಮಿಸಿದನು. ಊರ್ವಶಿಯು ಇಂದ್ರನಾಜ್ಞೆಯಂತೆ ಅರ್ಜುನನ ಏಕಾಂತಗೃಹಕ್ಕೆ ಬಂದಳು. ಆದರೆ ಊರ್ವಶಿಯ ಉದ್ದೇಶವು ಅರ್ಜುನನಿಗೆ ತಿಳಿಯಲಿಲ್ಲ. ಸಭೆಯಲ್ಲಿ ಅರ್ಜುನನು ಆಕೆಯ ಕಡೆಗೆ

ನಿಟ್ಟಿಸಿದ್ದು ಆಕೆಯ ನರ್ತನದ ಚಮತ್ಕಾರದ ಮೆಚ್ಚಿಗೆಯಿಂದಲೇ ಹೊರತು ರೂಪಲಾವಣ್ಯಗಳ ಮೇಲಿನ ಮೋಹದಿಂದ ಆಗಿರಲಿಲ್ಲ. ಈ ಭಾವವು ಇಂದ್ರನಿಗೆ ಹೊಳೆಯಲಿಲ್ಲ. ಮನುಷ್ಯಲೋಕದ ಅರ್ಜುನನು ದೇವಲೋಕದ ನಾಟ್ಯಕಲೆಯನ್ನು ಅಷ್ಟು ಚಿರಗಾಗಿ ನೋಡಿದ್ದೇನೂ ಆಶ್ಚರ್ಯವಲ್ಲ. ಸ್ತ್ರೀಯರನ್ನು ಇಂದ್ರಿಯಾರ್ಥದ ದೃಷ್ಟಿಯಿಂದ ನೋಡಬಾರದೇ ಹೊರತು ಕಲಾದೃಷ್ಟಿಯಿಂದ ನೋಡುವದೇನು ತಪ್ಪು? ಕಲೆಯು ಎಲ್ಲೆಲ್ಲಿಯೂ ಗೌರವಾರ್ಹವಾದದ್ದು. ಹೀಗೆ ಅರ್ಜುನನ ಭಾವವು ಶುದ್ಧವಾಗಿದ್ದದರಿಂದ ಅವನು ಆಕೆಯನ್ನು ತಾಯಿಯೆಂದು ತಿಳಿದು ಶುಭಾಗಮನವನ್ನು ಬಯಸಿದನು. ಊರ್ವಶಿಯು ಅಪ್ಸರೆಯಾಗಿ ಇಂದ್ರನ ಉಪಭೋಗಸಾಮಗ್ರಿಯಾಗಿದ್ದದರಿಂದ ಅರ್ಜುನನು ಆಕೆಯನ್ನು ತಾಯಿಯೆಂದು ಭಾವಿಸಿದ್ದು ಸರ್ವವಿಧದಿಂದಲೂ ಯೋಗ್ಯವೇ ಆಗಿತ್ತು. ಆದರೆ ಆಕೆಯು ಏಕಾಂತಕ್ಕೆ ತಾನಾಗಿ ಬಂದಿದ್ದರೂ ಕೂಡ ಧರ್ಮದೃಷ್ಟಿಯ ಮೇಲೆ ಪರೆಯನ್ನು ತಂದುಕೊಳ್ಳದೆ ಅರ್ಜುನನು ತನ್ನ ಮನಸ್ಸಿನಲ್ಲಿ ಆಕೆ ತಾಯಿಯೆಂಬ ಕಲ್ಪನೆಯನ್ನೇ ತಂದುಕೊಂಡದ್ದು ಮಾತ್ರ ಅವನ ಬ್ರಹ್ಮಚರ್ಯವ್ರತದ ದಾರ್ಢ್ಯವನ್ನು ತೋರಿಸುತ್ತದೆ. ಲೋಕರೂಢಿಯಿಂದ ನೋಡಿದರೆ ಯಾರ ಮನಸ್ಸು ಸೋದಲು ಕರಗಬೇಕಾಗಿತ್ತೋ ಆ ಅರ್ಜುನನು ತನ್ನ ಮನಃಸ್ಥಿತಿಯನ್ನು ಕಾದುಕೊಂಡನು. ಊರ್ವಶಿಯು ದೇವಲೋಕದವಳಾಗಿದ್ದರೂ ಕೂಡ ಅರ್ಜುನನ ರೂಪಲಾವಣ್ಯಗಳ ಮೋಹಕತ್ವಕ್ಕೆ ಮರುಳಾಗಿ ತನ್ನ ಮನಸ್ಸಿನಲ್ಲಿ ಹೊಯ್ದಾಟವನ್ನೆಬ್ಬಿಸಿಕೊಂಡು ಕೊನೆಗೆ ಅರ್ಜುನನ ಮನೋದಾರ್ಢ್ಯದ ಮುಂದೆ ತನ್ನ ಆಟವೇನೂ ಸಾಗದ್ದರಿಂದ ಅವನಿಗೆ ಷಂಡತ್ವವು ಬರಲೆಂದು ಶಾಪವನ್ನು ಕೊಟ್ಟಳು. ಅವಳು ದೇವಕುಲದವಳಾದ್ದರಿಂದ ಅವಳ ಶಾಪವು ಅರ್ಥಕಾರಿಯಾಯಿತು. ಆದರೇನು! ಅರ್ಜುನನ ಬ್ರಹ್ಮಚರ್ಯವ್ರತಪ್ರಭಾವವು ಮಹಾಭಾರತದಲ್ಲಿ ಸುವರ್ಣಾಕ್ಷರಗಳಿಂದ ಮೂಡಿದೆ. ಆಮೇಲೆ ಇದನ್ನು ತಿಳಿದ ಇಂದ್ರನು ಮುಂದೆ ಅರ್ಜುನನಿಗೆ ಆ ಶಾಪವು ಅನುಕೂಲಕಾರಿಯಾಗಲೆಂದನುಗ್ರಹಿಸಿದನೆಂದೂ ಇದರಿಂದ ಅರ್ಜುನನು ಅಜ್ಞಾತವಾಸಕಾಲದಲ್ಲಿ ವಿರಾಟನಗರದಲ್ಲಿ ಬೃಹನ್ನಳೆಯಾಗಿದ್ದನೆಂದೂ ಮುಂದೆ ಕಥೆಯು ಸಾಗಿದೆ. ಪರವಾ

ದರೂ ಬರಲಿ, ಶಾಪವಾದರೂ ಬರಲಿ, ಮನುಷ್ಯನು ತನ್ನ ವ್ರತವನ್ನು ತಾನು ಮೀರಬಾರದು. ವಿವಾಹನಿಯಮವಿಲ್ಲದ ದೇವಲೋಕದವರು ಮೇಲೆ ಬಿದ್ದು ಬಂದರೂ ವಿವಾಹನಿಯಮವುಳ್ಳ ಮನುಷ್ಯಲೋಕದ ಅರ್ಜುನನು ಅಲ್ಲಿಯೂ ತನ್ನ ವ್ರತವನ್ನು ಪಾಲಿಸಿದ್ದು ಅತ್ಯಂತಶ್ಲಾಘಾಸ್ಪದವಾಗಿರುವದು.

ದೇವಲೋಕವಾದರೂ ಆಗಲಿ, ಮನುಷ್ಯಲೋಕವಾದರೂ ಆಗಲಿ, ಇಂದ್ರಿಯಾರ್ಥಕ್ಕಾಗಿ ಸ್ತ್ರೀಯರ ಮೇಲೆ ಕಣ್ಣುಹಾಕುವದೆಂದರೆ ಅದೊಂದು ದೊಡ್ಡ ಅವನತಿಯ ಸಾಧನವೇ ಸರಿ. ಇಂದ್ರಿಯಾರ್ಥವನ್ನಪೇಕ್ಷಿಸುವದು ಪಶುತ್ವ. ಪಶುತ್ವವು ಅವನತಿಯಲ್ಲದೆ ಮತ್ತೇನು! ಈ ಕಾಮದೃಷ್ಟಿಯ ಪರಿಣಾಮವು ದೇವಲೋಕದಲ್ಲಿ ಕೂಡ ಎಷ್ಟು ಭಯಂಕರ ಸ್ವರೂಪವನ್ನು ತಾಳಿರುವದೆಂದು ನೋಡಿರಿ. ಒಮ್ಮೆ ಇಂದ್ರನು ಕಾರ್ಯಾಂತರದಿಂದ ತಪಶ್ಚರ್ಯೆಗಾಗಿ ಸ್ಥಳಾಂತರಕ್ಕೆ ಹೋಗಿದ್ದನು. ಅವನಿಲ್ಲದಿರುವಾಗ ಅವನ ಸ್ಥಾನಕ್ಕೆ ತಕ್ಕವರೊಬ್ಬರು ಶಾಸನಕರ್ತರಾಗಿರಬೇಕೆಂದು ದೇವತೆಗಳೆಲ್ಲರೂ ಸೇರಿ ನಹುಷನನ್ನು ಆ ಪದವಿಗೆ ಆರಿಸಿದರು. ಈ ದೊಡ್ಡ ಅಧಿಕಾರವು ಬರುತ್ತಲೇ ನಹುಷನ ತಲೆ ಅಟ್ಟಕ್ಕೇರಿ ಹೋಯಿತು. ಅವನು ಒಂದೊಂದಾಗಿ ಭೋಗಗಳನ್ನು ಅನುಭವಿಸುವದಕ್ಕೆ ಮೊದಲು ಮಾಡುತ್ತಲೇ ಅವನ ಆಶಾದೃಷ್ಟಿಯು ಶಚೀದೇವಿಯ ಮೇಲೆಯೂ ಹರಿಯಿತು. ತಾನು ಇಂದ್ರನ ಅಧಿಕಾರವನ್ನು ಮಾಡುವಾಗ ಶಚಿಯು ತನ್ನ ಉಪಭೋಗಕ್ಕೆ ವಿಷಯಳೇ ಆಗಬೇಕೆಂದು ಅವನು ಆಕೆಗೆ ಹೇಳಿಕಳುಹಿಸಿದನು. ದೇವಸ್ತ್ರೀಯಾದ ಆಕೆ ಏನು ಮಾಡಬೇಕು? ಶಚಿಯು ನಹುಷನ ಪ್ರಾರ್ಥನೆಗೆ ಸಮ್ಮತಿಸಿದಳು. ಆದರೆ ನಹುಷನು ಪಲ್ಲಕ್ಕಿಯಲ್ಲಿ ಕುಳಿತು ಋಷಿಗಳಿಂದ ಹೊರಿಸಿಕೊಂಡು ಬರಲೆಂದು ನಿಯಮವನ್ನಿಟ್ಟಳು. ಸೊಕ್ಕಿನ ನಹುಷನು ಅದೆಷ್ಟರ ದೊಡ್ಡ ಮಾತೆಂದು ತಾನು ಪಲ್ಲಕ್ಕಿಯಲ್ಲಿ ಕುಳಿತು ಋಷಿಗಳನ್ನು ಹೊರಹೇಳಿದನು. ಋಷಿಗಳು ಹೊತ್ತರು. ಆದರೆ ದೈವಯೋಗದಿಂದ ಮಾರ್ಗದಲ್ಲಿ ನಹುಷನು ಬೇಗ ಹೋಗಿರೆಂದು ಗದರಿಸಿ ಸ್ವಲ್ಪ ಕಾಲು ನೀಡಿದನು. ಅದು ಅಗಸ್ತ್ಯರಿಗೆ ತಾಕಿತು. ಒಡನೆ ಅವರು ಸರ್ಪವಾಗಿಹೋಗೆಂದು ಶಾಪವನ್ನು ಕೊಟ್ಟು ಪಲ್ಲಕ್ಕಿಯನ್ನು

ಚೆಲ್ಲಿಬಿಟ್ಟರು. ನಹುಷನಿಗೆ ಇಂದ್ರಪದವಿ ಹೋಗಿ ಹಾವಾಗಿ ಹರಿದು ಹೋಗುವ ಹೊತ್ತು ಬಂತು. ಸ್ತ್ರೀಯರನ್ನು ಕೆಟ್ಟಕಣ್ಣಿನಿಂದ ನೋಡುವದು ಎಂದಿದ್ದರೂ ಅವನನ್ನು ಅಧಃಪಾತಾಲಕ್ಕೆ ಹಾಕಿ ತುಳಿಯದೆ ಬಿಡುದಿಲ್ಲ.

ನೆರೆಹೊರೆಯ ಸ್ತ್ರೀಯರ ಮಾತೆಂದು ಹಾಗೆ ಇರಲಿ ತಮ್ಮ ಅನುಬಂಧಿಗಳಾದ ಸ್ತ್ರೀಯರೊಡನೆ ಕೂಡ ಪುರುಷನು ಎಚ್ಚರಿಕೆಯಿಂದ ನಡೆದುಕೊಳ್ಳತಕ್ಕದ್ದೆಂದು ನಮ್ಮಲ್ಲಿ ನಿಯಮವಿದೆ.

"ಮಾತ್ರಾ ಸ್ವಸ್ರಾ ದುಹಿತ್ರಾ ವಾ ನ ವಿವಿಕ್ತಾಸನೋ ಭವೇತ್ ।
ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ ॥"

ಎಂದು ಮನುಸ್ಮೃತಿಯು ಹೇಳುತ್ತದೆ. "ತಾಯಿ, ತಂಗಿ, ಮಗಳು– ಇವರೊಡನೆ ಕೂಡ ಪುರುಷನು ಏಕಾಂತದಲ್ಲಿ ಕುಳಿತುಕೊಳ್ಳಬಾರದು. ಇಂದ್ರಿಯಗಳ ಗುಂಪಿನ ಬಲವು ಬಲು ಹೆಚ್ಚಿನದು. ಅದು ಎಷ್ಟುತಿಳಿದವನನ್ನಾದರೂ ಸೆಳೆದು ಬಿಡುವದು"– ಎಂದು ಅದರ ತಾತ್ಪರ್ಯ. ತಾಯಿ, ತಂಗಿ, ಮಗಳು– ಇವರಿಗಿಂತ ಸಮೀಪದ ಬಂಧುಗಳು ಇನ್ನಾರು? ಬಹುಮಟ್ಟಿಗೆ ಇಂಥವರ ಸಾಮೀಪ್ಯದಿಂದ ಯಾರಿಗೂ ಮನಸ್ಸು ವಿಕಾರವಾಗಲಾರದು. ಹೀಗಿದ್ದರೂ ಕೂಡ ಶಾಸ್ತ್ರವು ಅವರ ಏಕಾಂತವಾಸವನ್ನು ನಿಷೇಧಿಸುತ್ತದೆ. ಕಾರಣವೇನೆಂದರೆ—

"ಅಗ್ನಿಕುಂಡಸಮಾ ನಾರೀ ಘೃತಕುಂಭಸಮಃ ಪುಮಾನ್"

ಎಂದು ಒಬ್ಬ ಕವಿಯು ಹೇಳಿದ್ದಾನೆ. ಸ್ತ್ರೀಯು ಅಗ್ನಿಷ್ಟಿಕೆಯಂತೆ; ಪುರುಷನು ತುಪ್ಪದ ಗಡಿಗೆಯಂತೆ. ಅಗ್ನಿಷ್ಟಿಕೆಯ ಬಳಿಯಲ್ಲಿಟ್ಟ ತುಪ್ಪದ ಗಡಿಗೆಯು ಕರಗದೆ ಹೇಗೆ ಬಿಟ್ಟೀತು? ಆದ್ದರಿಂದ ಪುರುಷನು ಸ್ವಸ್ತ್ರೀಯರ ಹೊರತು ಉಳಿದ ಯಾರೊಡನೆಯೂ ಏಕಾಂತದಲ್ಲಿರಲೇ ಬಾರದು.

ಭರತಖಂಡದ ಪುರುಷರು ಸ್ತ್ರೀಯರ ಸಾನ್ನಿಧ್ಯಕ್ಕೆ ಇಷ್ಟು ಹೆದರುವದರಿಂದ ಇವರ ಮನಸ್ಸು ಬಹು ದುರ್ಬಲವಾದದ್ದೆಂದು ಪರದೇಶೀಯರು ಹೇಳಬಹುದು. ದುರ್ಬಲವಾಗಿರುವದೇನೋ ನಿಜ. ಭರತಖಂಡದಲ್ಲಿ ಭರತಖಂಡದವರ ಮನಸ್ಸೂ ದುರ್ಬಲವೆ; ಪರದೇಶೀಯರ ಮನಸ್ಸೂ ದುರ್ಬಲವೆ. ಇಲ್ಲಿಯ ವಾಯುಗುಣವೇ ಮನಸ್ಸನ್ನು ದುರ್ಬ

ಲವಾಗಿ ಮಾಡುವದು. ವಾತಾವರಣದ ಉಷ್ಣತೆಯು ಮನಸ್ಸಿನಲ್ಲಿ ವಿಕಾರವನ್ನು ಹುಟ್ಟಿಸುವಂಥದ್ದು. ಆ ದೋಷವು ಭರತಖಂಡದಲ್ಲಿದೆ. ಏಕೆಂದರೆ ಇದು ಉಷ್ಣದೇಶ. ಪಶ್ಚಿಮದೇಶವು ಶೀತದೇಶವಾದ್ದರಿಂದ ಈ ದೋಷದ ವೇಗವು ಅಲ್ಲಿ ಕಡಿಮೆಯಾಗಿರಬಹುದು. ಆದರೆ ಅಲ್ಲಿ ಉಷ್ಣತಾವರ್ಧಕಪೇಯ ಮೊದಲಾದವುಗಳು ವಿಕಾರಕಾರಕಗಳಾಗಿರುವವು. ಭರತಖಂಡದಲ್ಲಿ ವಿಕಾರಕಾರಕವಾಗಿ ವಾತಾವರಣದಲ್ಲಿರುವ ಉಷ್ಣತೆಯು ದೈವಕಲ್ಪಿತವಾಗಿರುವದು; ಪಶ್ಚಿಮದೇಶದಲ್ಲಿ ವಿಕಾರಕಾರಕವಾಗಿ ಪೇಯರೂಪದಲ್ಲಿರುವ ಉಷ್ಣತೆಯು ಮನುಷ್ಯಕಲ್ಪಿತವಾಗಿರುವದು. ಒಂದು ಪಕ್ಷ ಮನುಷ್ಯಕಲ್ಪಿತವಾದವುಗಳನ್ನು ಕೈಬಿಟ್ಟರೂ ಸ್ತ್ರೀಪುರುಷರ ಸಾನ್ನಿಧ್ಯವು ಅಗ್ನಿಶಿಖೆಯ ಮತ್ತು ತುಪ್ಪದ ಕೊಡದ ಉಪಮಾನವನ್ನು ಹೋಲುವದೆಂಬ ವಿಷಯದಲ್ಲಿ ಎಳ್ಳಷ್ಟು ಸಂಶಯವಿಲ್ಲ. ಅಗ್ನಿಶಿಖೆಯ ಹತ್ತಿರದಲ್ಲಿರುವ ತುಪ್ಪದ ಕೊಡವು ಉಷ್ಣದೇಶದಲ್ಲಿ ಬೇಗ ಕರಗಿದರೆ ಶೀತದೇಶದಲ್ಲಿ ಸ್ವಲ್ಪ ತಡವಾಗಿ ಕರಗಬಹುದು. ಕರಗುವದು ತಪ್ಪಿದ್ದಲ್ಲ. ಹೀಗೆ ಕರಗುವದನ್ನು ತಪ್ಪಿಸಿಕೊಳ್ಳುವ ಸಾಮರ್ಥ್ಯವನ್ನು ದೇವರು ಯಾವ ದೇಶಕ್ಕಾದರೂ ಕೊಟ್ಟಿದ್ದರೆ ಅದು ಭರತಖಂಡಕ್ಕೇ ಸರಿ. ಏಕೆಂದರೆ ಇಲ್ಲಿ ಅಗ್ನಿಯ ಉಷ್ಣತೆಗೆ ಕೂಡ ತಡೆಯನ್ನು ಕಟ್ಟುವ ಮಂತ್ರತಂತ್ರಗಳುಂಟು. ಪರದೇಶೀಯರು ಮಂತ್ರತಂತ್ರಗಳೆಂಬ ಮಾತಿಗೆ ನಗುವರು. ಅವರಿಗೆ ಇದರ ಅನುಭವವಿಲ್ಲದಿರುವದೇ ಇದಕ್ಕೆ ಕಾರಣ. ಮನುಷ್ಯನ ಬ್ರಹ್ಮಚರ್ಯವನ್ನು ರಕ್ಷಣೆಮಾಡಿಕೊಳ್ಳುವದಕ್ಕಾಗಿ ಭರತಖಂಡದಲ್ಲಿ ಪ್ರಸಿದ್ಧವಾಗಿರುವ ಯೋಗಶಾಸ್ತ್ರದಲ್ಲಿ ವಜ್ರೋಳಿಯೆಂಬ ಕ್ರಿಯೆಯಿದೆ. ಇದನ್ನು ವಿವರಿಸುವದಕ್ಕೆ ಇದು ಸಮಯವಲ್ಲ. ಬೇಕಾದವರು ಪಾತಂಜಲಯೋಗಶಾಸ್ತ್ರವನ್ನೋದಿ ತಿಳಿಯಬಹುದು. ಹೀಗೆ ಬ್ರಹ್ಮಚರ್ಯವನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುವ ವಿಷಯಕವಾದ ಶಾಸ್ತ್ರವು ಇದುವರೆಗೂ ಭರತಖಂಡಕ್ಕೇ ಮೀಸಲಾಗಿದೆ. ಇದನ್ನು ಪ್ರತ್ಯಕ್ಷವಾಗಿ ಮಾಡಿ ತೋರಿಸಬಲ್ಲ ಯೋಗಿಗಳು ಈಗಲೂ ಸಿಕ್ಕುತ್ತಾರೆ. ಈ ಯೋಗದ ಬಲದಿಂದಲೇ ಮಹಾಯೋಗೇಶ್ವರನಾದ ಶ್ರೀಕೃಷ್ಣನು ಅರವತ್ತುಸಾವಿರ ಸ್ತ್ರೀಯರಿಗೆ ಪತಿಯಾಗಿದ್ದರೂ ಬ್ರಹ್ಮಚಾರಿಯೆನಿಸಿಕೊಂಡನು. ಪರದೇಶೀಯರು ಈ

ಸಾಧನವನ್ನು ತಿಳಿಯದೆ ತಮ್ಮ ಮನಸ್ಸಿನ ದಾರ್ಢ್ಯವನ್ನೇ ಅವಲಂಬಿಸಿ ಸ್ತ್ರೀಯರೊಡನೆ ವಿಶೇಷವಾಗಿ ಕಲೆಯುವ ಪದ್ಧತಿಯು ನಮಗೆ ಅನುಕರಣೀಯವಲ್ಲ. ನಾವು ನಮ್ಮ ಬ್ರಹ್ಮಚರ್ಯದ ನಷ್ಟವಾಗದಂತೆ ಸರ್ವವಿಧದಿಂದಲೂ ಎಚ್ಚರಿಕೆಯನ್ನು ತೆಗೆದುಕೊಳ್ಳಬೇಕು.

ಈ ವ್ರತದ ವಿಷಯದಲ್ಲಿ ವೀರಶೈವವಚನಶಾಸ್ತ್ರಕಾರರ ಶಾಸನಕ್ಕೆ ಅಗತ್ಯವಾಗಿ ಕಿವಿಗೊಡಿರಿ—

(೧) ಸ್ತ್ರೀಯರ ಕಂಡು ಅಳುಪದಿರಾ ಮನವೇ, ಉದ್ದಂಡತನದಿ ನಡೆವ ಭಂಡರನು ಹುಳುಗೊಂಡದಲ್ಲಿಕ್ಕದೆ ಬಿಡುವನೇ ನಮ್ಮ ದೇವರಾಯ ಸೊಡ್ಡಳಾ?

(೨) ಎಲ್ಲಿ ನೋಡಿದಲ್ಲಿ ಮನವೆಳಸಿದರೆ ಆಣೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ, ಪರವಧುವನು ಮಹಾದೇವಿ ಎಂದು ಕಾಂಬೆನು ಕೂಡಲ ಸಂಗಮದೇವಾ.

(೩) ಗಂಡನುಳ್ಳವಳನ ಗೌರಿ ಎಂದು ಕಂಡರೆ, ಭೂಮಂಡಲಕ್ಕೆ ಅರಸಾಗಿ ಪುಟ್ಟುವನಾತನು. ಗಂಡನುಳ್ಳವಳನ ಕಂಡು ಒಡಬಡೆದಾತ ನರಕದಲ್ಲಿ ಬಿಂದುಗೆಡದಿಪ್ಪನೈ ರಾಮನಾಥಾ.

## ಸ್ತ್ರೀಧರ್ಮಪ್ರಭಾವ.

ಭರತಖಂಡದಲ್ಲಿ ಸ್ತ್ರೀಯರಿಗೆ ಪ್ರಾಶಸ್ತ್ಯವಿಲ್ಲವೆಂದು ಹೇಳುವ ಪರದೇಶೀಯರಿಗೆ ಭಾರತೀಯ ಸ್ತ್ರೀಧರ್ಮಪ್ರಭಾವದ ಅರಿವೇ ಇದ್ದಂತೆ ಕಾಣುವದಿಲ್ಲ. ನಮ್ಮ ದೇಶದಲ್ಲಿ ಸ್ತ್ರೀಧರ್ಮಪ್ರಭಾವದ ಉಜ್ಜ್ವಲತೆಯೇ ಬಹು ಹೆಚ್ಚು. ನಮ್ಮ ದೇಶವೆಲ್ಲಾ ಸ್ತ್ರೀಧರ್ಮವನ್ನವಲಂಬಿಸಿಕೊಂಡಿರುವದೆಂದು ಹೇಳಿದರೂ ಅತ್ಯುಕ್ತಿಯಾಗಲಾರದು.

“ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ”

ಎಂದು ಭಗವದ್ಗೀತೆಯು ಹೇಳುತ್ತದೆ. ಸ್ತ್ರೀಯರು ದುಷ್ಟರಾದರೆ ಆಗ ವರ್ಣಸಂಕರವಾಗುವದೆಂದು ಅದರ ತಾತ್ಪರ್ಯ. ಪುರುಷರ ದುಷ್ಟತ್ವದಿಂದಲೂ ವರ್ಣಸಂಕರವಾಗುವದಾದರೂ ಅದು ಸ್ತ್ರೀಯರ ದುಷ್ಟತ್ವವನ್ನು ಹೆಚ್ಚಾಗಿ ಅವಲಂಬಿಸಿಕೊಂಡಿರುವದು. ಪಾಶ್ಚಾತ್ಯಸಂಸ್ಕೃತಿಯ ಕಾಳ್ಗಿಚ್ಚು ಈಗ ನಮ್ಮ ದೇಶದಲ್ಲಿ ಎಷ್ಟೋ ವೇಗವಾಗಿ ಹರಡಿಕೊಳ್ಳುತ್ತಿದ್ದರೂ ಅದು ನಮ್ಮ ಸ್ತ್ರೀಯರ ಮನೋಭೂಮಿಯಲ್ಲಿರುವ ಧರ್ಮಶ್ರದ್ಧೆಯೆಂಬ

ತಾಪನ್ನು ಇಂಗಿಸುವದಕ್ಕೆ ಇನ್ನೂ ಸಮರ್ಥವಾಗಿಲ್ಲ. ಕೊನೆಗೆ ನಮ್ಮ ದೇಶದಲ್ಲಿ ಧರ್ಮವು ಉಳಿದುಕೊಳ್ಳುವದಕ್ಕೆ ಆಶ್ರಯಸ್ಥಾನವು ನಮ್ಮ ಸ್ತ್ರೀಯರೆ. ಆದ್ದರಿಂದ ಸ್ವಭಾವವಾಗಿಯೇ ನಮಗೆ ಅವರಲ್ಲಿ ಪೂಜ್ಯಬುದ್ಧಿ ಇರುವದು. ಆ ಪೂಜ್ಯಬುದ್ಧಿಯ ಪ್ರಭಾವದಿಂದಲೇ ಇಲ್ಲಿಯ ಪುರುಷರು ತಮ್ಮ ಸ್ತ್ರೀಯರನ್ನು ಅಗ್ಗವಾಗಿ ತಿರುಗಗೊಡದೆ ಅವರನ್ನು ಮನೆಯಲ್ಲಿ ಮಾನ್ಯಬುದ್ಧಿಯಿಂದ ಆದರಿಸುತ್ತಿರುವರು. ಇಷ್ಟೇ ಹೊರತು ಅವರು ತಮ್ಮ ಅಧೀನರೆಂಬ ಅಧಿಕಾರದರ್ಪದಿಂದ ಪುರುಷರ ಪ್ರವೃತ್ತಿಯಿರುವದಿಲ್ಲ. ಎಲ್ಲಿಯಾದರೂ ಒಂದು ಕಡೆ ಅಂಥ ಪ್ರವೃತ್ತಿಯು ಕಂಡುಬಂದರೆ ಅದನ್ನು ತಪ್ಪೆಂದು ತಿಳಿಯಬೇಕು. ಪೂಜ್ಯಬುದ್ಧಿಯಿಂದ ಅವರನ್ನು ರಕ್ಷಣೆಮಾಡುವದೆಂಬ ಭಾವನೆಯ ಅರ್ಥವು ಕಾಲಕ್ರಮದಿಂದ ಮರೆಯುತ್ತ ಬಂದು ಅಧೀನರೆಂಬ ಭಾವನೆಯುಂಟಾಗಿರಬಹುದು. ಅದು ಉದಾಹರಣೆಗೆ ಯೋಗ್ಯವಲ್ಲ. ಪೂಜ್ಯತೆಗಾಗಿ ರಕ್ಷಿಸುವದು ಆರ್ಯಸಂಸ್ಕೃತಿ.

ಧರ್ಮದೇವತಾಸ್ವರೂಪರಾದಂಥ ನಮ್ಮ ಸ್ತ್ರೀಯರ ನಡವಳಿಕೆಯು ಜಗತ್ತಿಗೇ ಆದರ್ಶವಾಗಿದೆ. ಜಗತ್ತಿಗಾದರ್ಶವಾಗಿರುವದಕ್ಕೆ ಕಾರಣವೇನೆಂದರೆ ಇಲ್ಲಿಯ ವಿವಾಹವು ಇಂದ್ರಿಯಾರ್ಥವಾಗಿ ಇರದೆ ಧರ್ಮವೃದ್ಧ್ಯರ್ಥವಾಗಿಯೇ ಇರುವದು. ಪರದೇಶಗಳಲ್ಲಿ ಸ್ತ್ರೀಯರು ತಮ್ಮ ಗಂಡಂದಿರನ್ನು ಸಮಾನಸ್ಕಂಧರನ್ನಾಗಿ ಭಾವಿಸುವರು. ಬ್ರಹ್ಮಸೃಷ್ಟಿಯಲ್ಲಿಯೇ ಪುರುಷನೂ ಸ್ತ್ರೀಯೂ ಸಮಾನಸ್ಕಂಧರಲ್ಲ. ಆದ್ದರಿಂದ ನಮ್ಮಲ್ಲಿ ಆ ಭಾವನೆ ಇಲ್ಲ. ಸ್ವಭಾವವಾಗಿಯೇ ಪುರುಷರು ಬಲಿಷ್ಠರು. ಆದ್ದರಿಂದ ಇಲ್ಲಿಯ ಸ್ತ್ರೀಯರು ತಮ್ಮ ತಮ್ಮ ಗಂಡಂದಿರನ್ನು ದೇವರಂತೆ ಕಾಣುವ ರೂಢಿ ಇದೆ. ಸರ್ವವಿಧದಲ್ಲಿಯೂ ಪತಿಯನ್ನನುವರ್ತಿಸುವದೇ ಇಲ್ಲಿಯ ಸ್ತ್ರೀಯರ ಕರ್ತವ್ಯ. ಚೇದಿರಾಜ್ಯದ ಅರಸನಾದ ಭೀಮನೃಪಾಲನಿಗೆ ಲೋಪಾಮುದ್ರೆಯೆಂಬ ಮಗಳಿದ್ದಳು. ಆಕೆ ರಾಜಾಧಿರಾಜನ ಕೈಹಿಡಿದು ಅನೇಕದಾಸಿಯರಿಂದ ಸೇವೆಗೊಳ್ಳುವಂಥ ಯೋಗ್ಯತೆಯನ್ನು ಪಡೆದಿದ್ದಳು. ಹೀಗಿರುವಾಗ ಮಹರ್ಷಿಗಳಾದ ಅಗಸ್ತ್ಯರಿಗೆ ಒಮ್ಮೆ ತಪಶ್ಚರ್ಯೆಯ ಸೌಕರ್ಯಕ್ಕಾಗಿ ಗೃಹಸ್ಥರಾಗಬೇಕೆಂಬ ಇಚ್ಛೆಯುಂಟಾಯಿತು. ಈ ಸಮಯದಲ್ಲಿ ಲೋಪಾಮುದ್ರೆಯ ಗುಣಾತಿಶಯಗಳು

ಅವರ ಮನಸ್ಸನ್ನು ಆಕರ್ಷಿಸಿದವು. ಅಗಸ್ತ್ಯರು ಕನ್ಯಾರ್ಥಿಗಳಾಗಿ ಭೀಮರಾಜನ ಬಳಿಗೆ ಬಂದರು. ರಾಜಪುತ್ರಿಯಾದ ಆಕೆಯನ್ನು ಮುನಿಪತ್ನಿಯಾಗಿ ಮಾಡುವದಕ್ಕೆ ಆ ರಾಜನ ಮನಸ್ಸಿಗೆ ಸ್ವಲ್ಪ ಸಂಕೋಚವುಂಟಾಯಿತು. ಆ ರಾಜನು ಈ ಪ್ರಶ್ನೆಯನ್ನು ತನ್ನ ಮಗಳ ಮುಂದೆ ಇಟ್ಟನು. ಐಶ್ವರ್ಯಕ್ಕಿಂತಲೂ ಸಾಧುತ್ವವನ್ನು ಬಹುಮಾನಿಸುವ ಭರತಭೂದೇವಿಯ ಸ್ವಭಾವವು ಲೋಪಾಮುದ್ರೆಯಲ್ಲಿ ಚೆನ್ನಾಗಿ ರೂಪುಗೊಂಡಿತ್ತು. ಆದ್ದರಿಂದ ಆಕೆಯು ಒಡನೆ ಸಮ್ಮತಿಸಿದಳು. ಮದುವೆಯಾಯಿತು. ಹೀಗೆ ತಾನು ಮುನಿಪತ್ನಿಯಾಗುತ್ತಲೇ ಆಕೆ ತನ್ನ ಶ್ರೀಮಂತಿಕೆಯ ಉಡಿಗೆತೊಡಿಗೆಗಳನ್ನೆಲ್ಲಾ ತೆಗೆದೊಗೆದು ಮುನಿಗಳಿಗೆ ಯೋಗ್ಯವಾದ ನಾರುಬಟ್ಟೆಗಳನ್ನುಟ್ಟು ಪತಿಯ ಹಿಂದೆ ಸಾಗಿದಳು. ಅಗಸ್ತ್ಯರು ತಪಸ್ಸಿಗೆ ಕುಳಿತರು. ಲೋಪಾಮುದ್ರೆಯು ತನ್ನ ಸರ್ವಸನ್ನಾಹದಿಂದಲೂ ಅವರ ಪರಿಚರ್ಯೆಯನ್ನು ಮಾಡಿಕೊಂಡಿದ್ದು ಅವರ ಪೂರ್ಣಾನುಗ್ರಹಕ್ಕೆ ಪಾತ್ರಳಾದಳು.

ಮುನಿಯು ರಾಜಪುತ್ರಿಯನ್ನು ವರಿಸಿದ ಕಥೆ ಹೀಗಿದೆಯಷ್ಟೆ. ರಾಜನು ಒಬ್ಬ ಬಡಕನ್ಯೆಯನ್ನು ವರಿಸಿದ ಒಂದು ಕಥೆಯನ್ನು ಸ್ವಾಮಿ ರಾಮತೀರ್ಥರು ಹೇಳಿದ್ದಾರೆ. ಒಬ್ಬ ರಾಜನನ್ನು ವಂಶೋದ್ಧಾರಕ್ಕಾಗಿ ಮದುವೆಯಾಗಬೇಕೆಂದು ಪ್ರಜೆಗಳು ನಿರ್ಬಂಧಿಸಿದರು. ಆಗ ಅವನು ಕನ್ಯೆಯನ್ನು ನಾನೇ ವರಿಸುತ್ತೇನೆಂದು ಒಂದು ದಿನ ಬೇಟೆಗೆ ಹೋದಾಗ ಕಾಡಿನಲ್ಲಿ ಮುದುಕನಾದ ತಂದೆಯನ್ನು ತೊಟ್ಟಿಲಲ್ಲಿಟ್ಟು ಆನಂದದಿಂದ ದೇವರ ನಾಮವನ್ನು ಹಾಡುತ್ತ ತೂಗುತ್ತಿದ್ದ ಒಬ್ಬ ಶೂದ್ರಕನ್ಯೆಯನ್ನು ನೋಡಿ ಆಕೆಯ ಗುಣಕ್ಕೆ ಮೆಚ್ಚಿ ಆಕೆಯನ್ನು ಅರಮನೆಗೆ ಕರೆದು ತಂದು ರಾಜಯೋಗ್ಯವಾದ ಉಡಿಗೆತೊಡಿಗೆಗಳನ್ನಿಟ್ಟು ಮದುವೆಯಾದನು. ಆದರೂ ಆ ಹುಡುಗಿಯು ಆ ಉಡಿಗೆತೊಡಿಗೆಗಳನ್ನಿಟ್ಟುಕೊಂಡು ಪತಿಸೇವೆಯನ್ನು ಮಾಡಿ ತಾನು ಒಂಟಿಯಾಗಿರುವಾಗ ತನ್ನ ಹರಕುಚಿಂದಿಗಳನ್ನೆ ಮೈಮೇಲೆ ಹಾಕಿಕೊಂಡು ತನ್ನ ಭಜನೆಯನ್ನು ಸಾಗಿಸುತ್ತಿದ್ದಳು. ಹೀಗಿರುವಾಗ ಆಕೆಗೆ ಒಂದು ಹೆಣ್ಣುಕೂಸು ಹುಟ್ಟಿತು. ಆ ರಾಜ್ಯದಲ್ಲಿ ಹೆಂಗಸರೂ ಪಟ್ಟಕ್ಕೆ ಬರುವ ರೂಢಿ ಇತ್ತು. ಶೂದ್ರಿತಿಯ ಹೊಟ್ಟೆಯಲ್ಲಿ ಹುಟ್ಟಿದ

ಹೆಣ್ಣನ್ನು ಪಟ್ಟಕ್ಕೆ ತರಬಾರದೆಂಬ ಕುಹಕಾಲೋಚನೆಯಿಂದ ಪ್ರಜೆಗಳೆಲ್ಲರೂ ಆ ಕೂಸಿನ ತಲೆಯನ್ನು ಹೊಯ್ದು ಹಾಕಿಬಿಡಬೇಕೆಂದು ಸೂಚನೆಯನ್ನು ತಂದರು. ಹಾಗೆಯೇ ಆಗಲೆಂದು ರಾಜನೂ ಒಪ್ಪಿದನು. ಆ ಬಡ ಹೆಂಗಸೂ ಆನಂದದಿಂದ ರಾಜನ ಹಿಮ್ಮೇಳವನ್ನೇ ಹಾಡಿದಳು. ಆಮೇಲೆ ಒಂದು ಗಂಡು ಹುಟ್ಟಿತು. ಪ್ರಜೆಗಳು ಅದಕ್ಕೂ ಅದೇ ದಾರಿಯನ್ನು ಹೇಳಿದರು. ಅದಕ್ಕೂ ರಾಜನೊಪ್ಪಿದ್ದಷ್ಟೇ ಅಲ್ಲ; ಪತಿಯ ಇಷ್ಟವೇ ತನ್ನ ಇಷ್ಟವೆಂದು ಆ ಬಡವಿಯೂ ನಗೆಮೊಗದಿಂದ ಒಪ್ಪಿದಳು. ಮತ್ತೆ ಯೋಚಿಸಿ ಆ ಬಡವಿಯನ್ನು ಕಾಡಿಗೇ ತಿರುಗಿ ಕಳುಹಿಸಿಬಿಡಬೇಕೆಂದು ಜನರು ಸೂಚಿಸಿದರು. ರಾಜನು ಹಾಗೆಯೇ ಆಗಲೆಂದನು. ಆ ಬಡವಿಯು ರಾಜನ ಇಷ್ಟವೇ ತನ್ನ ಇಷ್ಟವೆಂದು ತನ್ನ ಹರಕುಬಂದಿಗಳೊಡನೆ ಹೊರಬಿದ್ದು ಕಾಡಿಗೆ ಹೋಗಿ ಎಂದಿನಂತೆ ತಂದೆಯನ್ನು ತೂಗುತ್ತ ತನ್ನ ಹಾಡಿನಲ್ಲಿ ತಾನು ಆನಂದದಿಂದಿದ್ದಳು. ಆಮೇಲೆ ಕುಲೀನಸಂತತಿಯಾಗುವಂತೆ ಇನ್ನೊಂದು ಮದುವೆಯನ್ನು ಮಾಡುವೆವೆಂದು ಕೆಲವು ಕಾಲದ ಮೇಲೆ ಪ್ರಜೆಗಳು ಒಬ್ಬ ರಾಜನ ಮಗಳನ್ನು ಗೊತ್ತುಮಾಡಿ ಆಕೆಗೆ ಆರತಿ ಮೊದಲಾದವುಗಳನ್ನು ಮಾಡುವದಕ್ಕೆ ಈ ಬಡವಿಯನ್ನು ಮತ್ತೆ ಕರೆದುಕೊಂಡು ಬಂದು ನಿಯಮಿಸಿದರು. ಪತಿಯ ಸೇವಾರೂಪವಾಗಿ ದೊರೆಯುವದೆಲ್ಲಾ ತನ್ನ ಸುದೈವವೆಂದು ಆಕೆಯು ಅದನ್ನೂ ಆದರದಿಂದ ವಹಿಸಿದಳು. ಆದರೆ ಹೊಸಕನ್ಯೆಯನ್ನು ನೋಡುತ್ತಲೇ ಆದರ ಮೇಲೆ ರಾಜನಿಗೂ ಬಡವಿಗೂ ಏಕಕಾಲದಲ್ಲಿಯೇ ಏಕರೀತಿಯಾದ ಪ್ರೇಮವುಂಟಾಯಿತು. ಆ ಕನ್ಯೆಗೂ ಇವರ ಮೇಲೆ ಅತ್ಯಾದರವುಂಟಾಯಿತು. ಈ ವಿಲಕ್ಷಣಮನೋಭಾವದ ಮೂಲವನ್ನು ವಿಚಾರಮಾಡಿದಾಗ ಆ ಕನ್ಯೆಯು ಈ ರಾಜದಂಪತಿಗಳ ಮಗಳೆಂದೂ ಕಟಕರು ತಲೆಯನ್ನು ಹೊಯ್ಯಲಾರದೆ ಹಿಂದೆಗೆದು ಬಿಟ್ಟಿದ್ದರೆಂದೂ ದೈವಯೋಗವು ಈ ರೀತಿಯಿಂದ ಸಂಘಟನೆಯನ್ನು ತಂದುಕೊಟ್ಟಿತೆಂದೂ ವ್ಯಕ್ತವಾಯಿತು. ಈ ಕಥೆಯಲ್ಲಿ ರಾಜನು ಗುಣೈಕಪಕ್ಷಪಾತಿಯಾಗಿ ಆ ಬಡವಿಯನ್ನು ಮದುವೆಯಾದದ್ದು ಸ್ತೋತ್ರಾರ್ಹವಾಗಿರುವದಲ್ಲದೆ ಆ ಬಡವಿಯು ತನ್ನ ಪತಿಯನ್ನು ಪರದೈವವೆಂದು ತಿಳಿಯುವ ಭರದಲ್ಲಿ ತನ್ನ

ಮಕ್ಕಳನ್ನು ಬಲಿಗೊಡುವದಕ್ಕೂ ತಾನು ಮತ್ತೆ ಬಡತನಕ್ಕೇ ತಿರುಗುವದಕ್ಕೂ ತನ್ನ ಸವತಿಯಾಗುವವಳನ್ನು ಆದರಿಸುವದಕ್ಕೂ ಹಿಂದುಮುಂದೆ ನೋಡದೆ ತನ್ನ ಮನಸ್ಸನ್ನು ಸಂಪೂರ್ಣವಾಗಿ ಪತಿಯ ಮನಸ್ಸಿಗೆ ಅಧೀನವಾಗಿ ಮಾಡಿದ್ದು ಪ್ರಶಂಸನೀಯವಾಗಿದೆ.

ನಮ್ಮ ದೇಶದಲ್ಲಿ ಸ್ತ್ರೀಯರ ಪತಿಭಕ್ತಿಯು ಅತಿವಿಲಕ್ಷಣವಾಗಿದೆ. ಹರಿಶ್ಚಂದ್ರನ ಹೆಂಡತಿಯು ತನ್ನ ಗಂಡನನ್ನು ಋಣಮುಕ್ತನನ್ನಾಗಿ ಮಾಡುವದಕ್ಕಾಗಿ ತಾನೇ ತನ್ನನ್ನು ಮಾರಿಕೊಂಡು ದಾಸಿಯಾದಳು. ದಮಯಂತಿಯು ದುರ್ದೈವದಿಂದ ಗಂಡನನ್ನು ಅಗಲಿದ ಮೇಲೆ ಆ ತನ್ನ ಗಂಡನಿರುವ ಸ್ಥಲವನ್ನು ತಿಳಿದು ತನ್ನ ಪುನರ್ವಿವಾಹವೆಂಬ ಸುಳ್ಳುಸುದ್ದಿಯನ್ನು ಹುಟ್ಟಿಸಿ ಋತುಪರ್ಣನೆಂಬ ರಾಜನೊಡನೆ ಅವನು ತಾನಿದ್ದಲ್ಲಿಗೆ ಬರುವಂತೆ ಮಾಡಿ ವೇಷಾಂತರದಲ್ಲಿದ್ದ ಅವನನ್ನು ಪರೀಕ್ಷೆಯಿಂದ ಕಂಡುಹಿಡಿದು ಕೊನೆಗೂ ಅವನನ್ನೇ ಪತಿಯಾಗಿ ಪಡೆದ ಚರಿತ್ರೆಯು ಕಲಿಕಲ್ಮಷಾಪಹಾರಕವೆಂದು ಭಾರತದಲ್ಲಿ ಪ್ರಸಿದ್ಧವಾಗಿದೆ.

ಸಾವಿತ್ರಿ, ಅನಸೂಯೆ—ಇವರ ವಿಚಾರವನ್ನು ತೆಗೆದುಕೊಂಡರಂತು ಸ್ತ್ರೀಧರ್ಮಪ್ರಭಾವವು ಮುಗಿಲುಮುಟ್ಟಿಹೋಗಿದೆ. ಸಾವಿತ್ರಿಯು ಮದ್ರದೇಶದ ಅಶ್ವಪತಿಯೆಂಬ ರಾಜನ ಮಗಳು. ಆಕೆಯು ಗುಣಲುಬ್ಧಳಾಗಿ ತಾನಾಗಿಯೇ ಸತ್ಯವಾನನೆಂಬ ಒಬ್ಬ ದುರ್ದೈವಿಯನ್ನು ಮದುವೆಯಾದ ಒಂದು ವರ್ಷದಲ್ಲಿಯೇ ಒಂದುದಿನ ಸತ್ಯವಾನನು ಕಾಡಿಗೆ ಹೋಗಿ ಆಯಾಸಗೊಂಡು ಅಲ್ಲಿಯೇ ಸಾವಿತ್ರಿಯ ತೊಡೆಯ ಮೇಲೆ ತಲೆಯನ್ನಿಟ್ಟುಕೊಂಡಿರುವಾಗ ಯಮನು ಅವನ ಪ್ರಾಣಗಳನ್ನು ಹರಣಮಾಡಿದನು. ಸಾವಿತ್ರಿಯೂ ಆ ಪ್ರಾಣಗಳ ಹಿಂದೆಯೇ ಹೊರಟಳು. ಏಕೆಂದರೆ ಪತಿ ಇರುವ ಕಡೆ ಇರುವದೇ ಸತಿಯರ ಧರ್ಮ. ಸತ್ಯವಾನನನ್ನು ಬಿಟ್ಟುಹೋಗುವಂತೆ ಯಮನು ಸಾವಿತ್ರಿಗೆ ಎಷ್ಟೋ ಬಗೆಯಾಗಿ ಹೇಳಿದನು ಸಾವಿತ್ರಿಯ ಪತಿಭಕ್ತಿಯು ಕೂದಲೆಳೆಯಷ್ಟು ಕೊಂಕಲಿಲ್ಲ. ಆಗ ಯಮನು ಆಕೆಯ ಪತಿಭಕ್ತಿಗೆ ಮೆಚ್ಚಿ ಸತ್ಯವಾನನನ್ನು ಬದುಕಿಸಿ ಅವರಿಬ್ಬರನ್ನೂ ಆಶೀರ್ವದಿಸಿದನು. ಅನಸೂಯೆಯು

ಸಪ್ತರ್ಷಿಗಳಲ್ಲಿ ಒಬ್ಬರಾದ ಅತ್ರಿಋಷಿಗಳ ಹೆಂಡತಿ. ಅತ್ರಿಋಷಿಗಳಿಗೆ ಒಂದು ದಿನ ದೇಹದಲ್ಲಿ ಆಲಸ್ಯವುಂಟಾಗಿ ನಡೆಯಲಾರದಂತಾಯಿತು. ಆದ್ದರಿಂದ ಅನಸೂಯೆಯು ಅವರನ್ನು ಎತ್ತಿಕೊಂಡು ಬರುತ್ತಿದ್ದಳು. ಸಂಜೆಗತ್ತಲೆ. ಹೀಗೆ ಬರುವಾಗ ಅತ್ರಿಋಷಿಗಳ ಕಾಲು ದಾರಿಯಲ್ಲಿ ಬರುತ್ತಿದ್ದ ಒಬ್ಬ ಬ್ರಾಹ್ಮಣನಿಗೆ ತಾಕಿತು. ಆ ಬ್ರಾಹ್ಮಣನು ತನಗೆ ಅಪಚಾರವಾಯಿತೆಂದು ನೊಂದುಕೊಂಡು ಅತ್ರಿಋಷಿಗಳಿಗೆ ಸೂರ್ಯೋದಯದೊಳಗಾಗಿ ಮರಣವಾಗಲೆಂದು ಶಾಪವನ್ನು ಕೊಟ್ಟನು. ಇದನ್ನು ತಿಳಿದ ಅನಸೂಯೆಯು ಬೇಗಬೇಗ ಹೆಜ್ಜೆಯನ್ನಿಡುತ್ತ ಆಶ್ರಮಕ್ಕೆ ಬಂದು ಪತಿಯನ್ನು ಇಳಿಸಿ ಶಾಪಕ್ಕೇನು ಪ್ರತೀಕಾರವನ್ನು ಮಾಡಬೇಕೆಂದು ಯೋಚಿಸಿದಳು. ಬ್ರಾಹ್ಮಣನ ಮಾತು ಸುಳ್ಳಾಗಲಾರದೆಂದು ಆಕೆಗೆ ತೋರಿತು. ಆದ್ದರಿಂದ ಸೂರ್ಯನು ಉದಿಸಿದರೆ ತನ್ನ ಪತಿಯು ಮೃತನಾಗುವನೆಂದು ಯೋಚಿಸಿ ಸೂರ್ಯನೇ ಉದಿಸದಿರುವಂತೆ ಆಜ್ಞೆಯನ್ನು ಮಾಡಿದಳು. ತಪಸ್ವಿಯಾದ ಬ್ರಾಹ್ಮಣನ ಮಾತು ಹೇಗೆ ನಿಜವಾಗಬೇಕೋ ಪತಿವ್ರತೆಯಾದ ಸ್ತ್ರೀಯ ಮಾತೂ ಹಾಗೆಯೇ ನಿಜವಾಗಲೇ ಬೇಕು. ಪರಸ್ಪರ ವಿರುದ್ಧವಾದ ಈ ಎರಡು ಮಾತನ್ನೂ ಹೇಗೆ ನಿಜವಾಗಿ ಮಾಡಬೇಕೆಂದು ದೇವರಿಗೂ ಯೋಚನೆಯುಂಟಾಯಿತು. ದೇವರು ಅವೆರಡನ್ನೂ ತೂಕಮಾಡಿ ನೋಡಿದಾಗ ತಪಸ್ವಿಯ ಮಾತಿಗಿಂತಲೂ ಪತಿವ್ರತೆಯ ಮಾತು ಭಾರವಾಗಿ ಕಂಡಿತು. ಆದ್ದರಿಂದ ಅದಕ್ಕೇ ಜಯವು ದೊರೆಯಿತು. ಆದ್ದರಿಂದ ಸೂರ್ಯನು ಹುಟ್ಟಲೇ ಇಲ್ಲ. ಇದರಿಂದ ಜಗತ್ತಿಗೇ ತೊಂದರೆಯುಂಟಾಯಿತು. ಆಗ ದೇವತೆಗಳು ಇದನ್ನು ತಿಳಿದು ಆಕೆಯ ಬಳಿಗೆ ಬಂದು ಆಕೆಯನ್ನು ಸಂತಯಿಸಿ ಅತ್ರಿಋಷಿಗಳಿಗೆ ಆ ಶಾಪವು ತಟ್ಟದಂತೆ ವರವನ್ನು ಕೊಟ್ಟು ಸೂರ್ಯೋದಯವಾಗುವಂತೆ ಮಾಡಿದರು. ಈ ಕಥೆಯಲ್ಲಿ ನೋಡಿದರೆ ತಪಸ್ವಿಯಾದ ಬ್ರಾಹ್ಮಣನ ಮಾತಿನ ತೂಕವೆ ಕಡಿಮೆಯಾಯಿತೇ ಹೊರತು ಪತಿವ್ರತೆಯಾದ ಅನಸೂಯೆಯ ಮಾತಿನ ಒಂದಕ್ಷರವೂ ವ್ಯರ್ಥವಾಗಲಿಲ್ಲ. ಇದರಿಂದ ಭರತಖಂಡದಲ್ಲಿ ಪುರುಷಧರ್ಮಪ್ರಭಾವಕ್ಕಿಂತ ಸ್ತ್ರೀಧರ್ಮಪ್ರಭಾವದ ಮೇಲ್ಮೆಯು ಚೆನ್ನಾಗಿ ವ್ಯಕ್ತವಾಗುವದು.

ಧರ್ಮವಿರುದ್ಧರಾದ ಪುರುಷರ ವಿಚಾರದಲ್ಲಿ ಸೀತೆಯ ಉದಾಹರಣೆಯು ಬಹು ಚೆನ್ನಾಗಿರುವದು. ರಾವಣನು ಸೀತೆಯನ್ನು ಕದ್ದುಕೊಂಡು ಹೋಗಿ ಅಶೋಕವನದಲ್ಲಿಟ್ಟನಷ್ಟೆ. ಒಂದು ದಿನ ಅವನು ಮಾಯೆಯಿಂದ ರಾಮಲಕ್ಷ್ಮಣರ ತಲೆಗಳನ್ನು ಮಾಡಿ ತಂದು ಸೀತೆಯ ಮುಂದಿಟ್ಟು ಇನ್ನಾದರೂ ತನ್ನನ್ನು ವರಿಸೆಂದು ನಯಭಯಗಳಿಂದ ಹೇಳಿದಾಗ ಸೀತೆಯು ತಲೆಯನ್ನು ಬಗ್ಗಿಸಿಕೊಂಡೇ ಅವನಿಗೆ ಧಿಟ್ಟತನದಿಂದ ಉತ್ತರವನ್ನು ಕೊಟ್ಟಿದ್ದಾಳೆ. ಆ ಉತ್ತರದ ಮಾತು ಇಲ್ಲಿ ಪ್ರಕೃತವಲ್ಲ. ಸೀತೆಯು ರಾವಣನೊಡನೆ ಮಾತಾಡುವಾಗ ನಡುವೆ ಒಂದು ಕಡ್ಡಿಯನ್ನಿಟ್ಟಿದ್ದು ಅದನ್ನು ನೋಡಿ ಉತ್ತರವನ್ನು ಕೊಡುತ್ತಿದ್ದಳೆಂದು ರಾಮಾಯಣದಲ್ಲಿ ಹೇಳಿದೆ. ನಡುವೆ ಕಡ್ಡಿಯೇಕೆಂದರೆ ಪತಿವ್ರತಾಸ್ತ್ರೀಯರು ಪರಪುರುಷರೊಡನೆ ಮಾತಾಡಬಾರದೆಂದು ಒಂದು ನಿಯಮವಿದೆ. ಸೀತೆಗೆ ರಾವಣನು ಪರಪುರುಷ. ಅವನೊಡನೆ ತಾನು ಸಾಕ್ಷಾತ್ತಾಗಿ ಮಾತಾಡಬಾರದೆಂದು ಸೀತೆಯು ನಡುವೆ ಒಂದು ಕಡ್ಡಿಯನ್ನಿಟ್ಟಿದ್ದಳು. ಸಂಭಾಷಣೆಯು ಸಮಾನರಾದವರಿಗೆ ಮಾತ್ರ ಒಪ್ಪುವದು; ಅಸಮಾನರಲ್ಲಿ ಅದು ನಿಂದ್ಯವಾಗುವದು. ತನ್ನೊಡನೆ ಸಂಭಾಷಣೆಯನ್ನು ಮಾಡುವ ಯೋಗ್ಯತೆಯು ರಾವಣನಿಗೆ ಇಲ್ಲವೆಂಬುದನ್ನು ತೋರಿಸುವದೇ ಸೀತೆಯು ನಡುವೆ ಕಡ್ಡಿಯನ್ನಿಟ್ಟ ಉದ್ದೇಶ. ಸೀತೆಯು ಕಡ್ಡಿಯೊಡನೆ ಮಾತಾಡಿದಂತೆ ತೋರಿಸಿ ರಾವಣನನ್ನು ದೂರಮಾಡಿದ್ದರಿಂದ ಆಕೆಯ ಭಾಗಕ್ಕೆ ಅವನು ಕಡ್ಡಿಗಿಂತ ಕಡಿಮೆಯಾದನೆಂದು ಬೇರೆ ಹೇಳಬೇಕಾದ್ದೇ ಇಲ್ಲ. ಪತಿವ್ರತೆಯರ ಮೃದುವಾಕ್ಯವೆಂಬ ಅಮೃತವನ್ನು ಪಾನಮಾಡುವದಕ್ಕೂ ಸುದೈವವು ಬೇಕು. ದುರ್ದೈವಿಯಾದ ರಾವಣನಿಗೆ ಅದು ಹೇಗೆ ಲಭ್ಯವಾದೀತು! ಇಲ್ಲಿ ಇನ್ನೊಂದು ವಿಷಯವನ್ನು ತಿಳಿದುಕೊಳ್ಳಬೇಕಾಗಿದೆ. ಪತಿವ್ರತೆಯರು ಪರಪುರುಷರನ್ನು ನೋಡಬಾರದೆಂಬ ಮಾತಿಗೆ ಜನರು ಅಕ್ಷರಾರ್ಥವನ್ನು ಮಾಡಿಕೊಂಡು ಈ ನಿಯಮವನ್ನು ಹಳಿಯುತ್ತಾರೆ. ಪರಪುರುಷರನ್ನು ನೋಡಬಾರದೆಂದರೆ ಯಾರನ್ನೂ ನೋಡಲೇ ಬಾರದೆಂದರ್ಥವೆ? ಪತಿಯು ಮನೆಯಲ್ಲಿಲ್ಲದಿರುವಾಗ ಅತಿಥಿಯು ಬಂದರೆ ಕಣ್ಣಿಗೆ ಬಟ್ಟೆಯನ್ನು ಕಟ್ಟಿಕೊಂಡು ಗೋಡೆಯ ಕಡೆಗೆ ಮುಖವಾಗಿ ಎಲ್ಲಿಯೋ

ಅಡಗಿಕೊಳ್ಳಬೇಕೆಂದು ಆರ್ಯಸಂಸ್ಕೃತಿಯು ಹೇಳುವದೆಂದು ತಿಳಿದಿರು ವಿರೋ? ವಸ್ತುಸ್ಥಿತಿ ಹಾಗಿಲ್ಲ. ತಂದೆ, ಅಣ್ಣ, ತಮ್ಮ—ಮೊದಲಾದವರು ಪತಿಗಿಂತ ಪರರಲ್ಲವೇ? ಅವರನ್ನು ಪತಿವ್ರತೆಯು ನೋಡಬಾರದೇ? ವಿಚಾರಮಾಡಿದರೆ ಹಾಗೇನೂ ಇಲ್ಲ. ಧಾರ್ಮಿಕವೃತ್ತಿಯವರೆಲ್ಲಾ ತಮ್ಮ ವರು; ಅಧಾರ್ಮಿಕವೃತ್ತಿಯವರೆಲ್ಲಾ ಪರರು. "ಮಾತೃವತ್ಪರದಾರೇಷು" ಎಂಬ ವಚನದಂತೆ ಪರಸ್ತ್ರೀಯರನ್ನು ತಾಯಿಯಂತೆ ಕಾಣುವ ಧಾರ್ಮಿಕ ಪ್ರವೃತ್ತಿಯವರು ಬಂದರೆ ಆಗ ಪತಿವ್ರತೆಯರು ಕಣ್ಣುಮುಚ್ಚಿಕೊಳ್ಳಬೇ ಕಾದ್ದಿಲ್ಲ. ಆದರೆ ವಿಷಯಾಸಕ್ತಿಯ ದೃಷ್ಟಿಯವರು ಬಂದರೆ ಮಾತ್ರ ಅವರ ಮುಖವನ್ನು ನೋಡಬಾರದು. ಇಲ್ಲಿ ಮುಖವನ್ನು ನೋಡಬಾರ ದೆಂಬ ಮಾತಿಗೆ ಕೂಡ ತಾತ್ಪರ್ಯಾರ್ಥವನ್ನೇ ಗ್ರಹಿಸಬೇಕು. ಮುಖ ವನ್ನು ನೋಡಬಾರದೆಂದರೆ ಅವರ ಕಡೆಗೆ ಮನಸ್ಸೊಲಿಯಬಾರದೆಂದರ್ಥ. ಈ ಅರ್ಥವೇ ಸರಿಯೆಂಬದಕ್ಕೆ ಸಾಧನಗಳಿವೆ. ರಾವಣನ ಮುಖವನ್ನು ನೋಡಬಾರದೆಂದು ಸಡುಪೆ ಕಟ್ಟಿಯನ್ನಿಟ್ಟ ಸೀತೆಯೇ ಅದ್ಭುತರಾಮಾ ಯಣದಲ್ಲಿ ಸಹಸ್ರಕಂಠರಾವಣನನ್ನು ಕೊಂದಿರುವಳು. ಅವನ ಮುಖ ವನ್ನು ನೋಡದೆ ಅವನೊಡನೆ ಯುದ್ಧವು ಹೇಗೆ ನಡೆಯುವದು! ದ್ರೌಪ ದಿಯು ಕೀಚಕನಿಗೆ ಬುದ್ಧಿಯನ್ನು ಹೇಳುವಾಗ ಅವನ ಮುಖವನ್ನು ನೋಡಲಿಲ್ಲವೆಂದು ಹೇಳುವದಕ್ಕೆ ಆಧಾರವೇನಿದೆ? ತಾತ್ಪರ್ಯವೇನೆಂದರೆ— ಕೆಟ್ಟ ಉದ್ದೇಶದಿಂದ ಬರುವ ಪುರುಷರು ಪತಿವ್ರತೆಯರ ಭಾಗಕ್ಕೆ ವರ್ಜ್ಯರು. ಇಲ್ಲಿ ರಾವಣನು ವಿಷಯಾಸಕ್ತನಾಗಿ ಕೆಟ್ಟದೃಷ್ಟಿಯಿಂದ ಬಂದಿದ್ದನಾದಕಾರಣ ಅವನು ವರ್ಜ್ಯನೆಂದು ತಿಳಿಯಬೇಕು.

ಯಾವ ಸ್ತ್ರೀ ತನ್ನ ಮೇಲೆ ವಿಷಮದೃಷ್ಟಿಯನ್ನು ಹಾಕಿದಂಥ ಕೌರವನ ಮತ್ತು ಕೀಚಕನ ಮೇಲೆ ಇದಿರಾಗಿ ನಿಂತೇ—ಅದೂ ದೊಡ್ಡ ಸಭೆಯ ಇದಿರಿನಲ್ಲಿ—ವಾಗ್ಬಾಣಗಳ ಸುರಿಮಳೆಯನ್ನು ಸುರಿಸಿದಳೋ ಆ ವೀರಭಾರತಮಹಿಳೆಯಾದ ದ್ರೌಪದಿಯ ಪಾತಿವ್ರತ್ಯಕ್ಕೆ ಆ ಪರಪುರು ಷರ ದರ್ಶನದಿಂದ ಏನಾದರೂ ಭಂಗವಾಯಿತೆ? ಪರಪುರುಷನನ್ನು ಪುರು ಷತ್ವದೃಷ್ಟಿಯಿಂದ ನೋಡದಿದ್ದರಾಯಿತು. ಈ ವ್ರತವು ದ್ರೌಪದಿಯಲ್ಲಿ ಒಡೆದು ಮೂಡಿದ್ದದರಿಂದ ಆಕೆಯ ಪ್ರಭಾವವು ಭಾರತದಲ್ಲಿ ಲೋಕೋ

ತ್ತರವಾಗಿ ವರ್ಣಿತವಾಗಿದೆ. ಪಾಂಡವರ ವನವಾಸಕಾಲದಲ್ಲಿ ಕೌರವನು ತನ್ನ ಅಟ್ಟಹಾಸವನ್ನು ಅವರಿಗೆ ತೋರಿಸಬೇಕೆಂಬ ನಿಂದ್ಯವಾದ ಉದ್ದೇಶದಿಂದ ಕಾಡಿಗೆ ಹೋದಾಗ ಒಬ್ಬ ಯಕ್ಷನು ಗಂಟುಬಿದ್ದು ಅವನನ್ನು ಕೈಕಾಲು ಕಟ್ಟಿ ತನ್ನ ಊರಿಗೆ ಸೆರೆಯಾಗಿ ತೆಗೆದುಕೊಂಡು ಹೋದನು. ಎಲ್ಲರೂ ನಿರುಪಾಯರಾಗಿರಲು ಕೌರವಪತ್ನಿಯರ ದೀನತೆಯನ್ನು ನೋಡಿ ಕನಿಕರದಿಂದ ಧರ್ಮರಾಯನು ಆಜ್ಞಾಪಿಸಿದಾಗ ಅರ್ಜುನನು ತನ್ನ ಬಾಹುಬಲದಿಂದ ಕೌರವನನ್ನು ಬಿಡಿಸಿಕೊಂಡು ತಂದನು. ಆದರೆ ಅವನು ತಂದಾಗ ಯಕ್ಷನು ಅವನನ್ನು ಕಟ್ಟಿದ ಕಟ್ಟು ಹಾಗೆಯೇ ಇತ್ತು. ಇದರಿಂದ ಕೌರವನಿಗೆ ಅಲುಗುವದಕ್ಕೆ ಕೂಡ ಆಗುತ್ತಿರಲಿಲ್ಲ. ಆ ಕಟ್ಟಿನ ಗಂಟನ್ನು ಬಿಚ್ಚುವದಕ್ಕೆ ಯಾರಿಂದಲೂ ಆಗಲಿಲ್ಲ. ಅದರ ರಹಸ್ಯವು ಧರ್ಮರಾಯನಿಗೆ ಗೊತ್ತಿತ್ತು. ಯಕ್ಷರ ಗಂಟು ಪತಿವ್ರತೆಯರ ಸ್ಪರ್ಶದಿಂದ ಮಾತ್ರ ಕಳಚಿಕೊಳ್ಳುವದಾದ್ದರಿಂದ ಧರ್ಮರಾಯನು ಆ ಗಂಟನ್ನು ಬಿಚ್ಚಲು ದ್ರೌಪದಿಗೆ ಹೇಳಿದನು. ಕೌರವನು ಯಾವಾತೆಯ ಮೇಲೆ ವಿಷಮದೃಷ್ಟಿಯನ್ನು ಬೀರಿದ್ದನೊ ಆಕೆಯಿಂದ ತನ್ನ ಬಿಡುಗಡೆಯನ್ನು ಮಾಡಿಸಿಕೊಳ್ಳಬೇಕಾದ ಹೊತ್ತು ಬಂತು. ಪತಿವ್ರತೆಯನ್ನು ಕೆಟ್ಟ ಕಣ್ಣಿನಿಂದ ನೋಡಿದಂಥ ಪಾಪಿಯನ್ನು ತಾನು ಕೈಯಿಂದ ಮುಟ್ಟಲಾರೆನೆಂದು, ಕೊನೆಗೆ ಪತ್ಯಾಜ್ಞೆಯನ್ನು ನಡೆಸದೆ ಗತ್ಯಂತರವಿಲ್ಲದ್ದರಿಂದ, ತನ್ನ ಎಡಗಾಲ ಅಂಗುಷ್ಟದಿಂದ ಆ ಗಂಟನ್ನು ಬಿಚ್ಚಿದಳು. ಆಮೇಲೆ ಕೌರವನು ಹೋದ ಜೀವವನ್ನು ಪಡೆದವನಾಗಿ ಜೋಲುಮುಖವನ್ನು ಹಾಕಿಕೊಂಡು ಊರ ಕಡೆಗೆ ಹೊರಟನು. ಈಗ ಅವನ ಮಾತು ಇರಲಿ. ಇಲ್ಲಿ ನೋಡಬೇಕಾದ್ದು ದ್ರೌಪದಿಯ ಸ್ತ್ರೀಧರ್ಮಪ್ರಭಾವ. ದ್ರೌಪದಿಯು ಕೌರವನನ್ನು ಮುಟ್ಟಿದರೂ ಆಕೆಯ ಪಾತಿವ್ರತ್ಯವು ಕೆಡಲಿಲ್ಲ.

ಸ್ತ್ರೀಯರ ಪ್ರಾಶಸ್ತ್ಯವನ್ನು ನಮ್ಮ ದೇಶದಲ್ಲಿ ಯಾವ ಯಾವ ದೃಷ್ಟಿಯಿಂದ ಬೇಕಾದರೂ ನೋಡಬಹುದು. ಸೀತೆಯು ಇತರಸ್ತ್ರೀಯರಂತೆ ಮನುಷ್ಯರ ಹೊಟ್ಟೆಯಲ್ಲಿ ಹುಟ್ಟಿದವಳಲ್ಲವಷ್ಟೆ. ಇದರ ಜೊತೆಗೆ ಆಕೆ ವಿಷ್ಣುವಿನ ಅವತಾರವಾದ ಶ್ರೀರಾಮನ ಧರ್ಮಪತ್ನಿ. ಆಕೆಯನ್ನು ಸಾಕ್ಷಾಲ್ಲಕ್ಷ್ಮಿಯವತಾರವೆಂದೇ ಹೇಳುತ್ತಾರೆ. ಆ ಸೀತೆಯು ತನ್ನ ಪತ್ತಿ

ಯೊಡನೆ ವನವಾಸಕ್ಕೆ ಹೋಗಿದ್ದಾಳೆ. ಅಲ್ಲಿ ಅತ್ರಿಋಷಿಗಳ ಆಶ್ರಮದಲ್ಲಿ ಅನಸೂಯಾದೇವಿಯು ಪರಿಚಯವಾಗಿದೆ. ಅನಸೂಯಾದೇವಿ ಮುನಿಪತ್ನಿ. ಆದರೂ ಸೀತಾದೇವಿಯು ದೇಹಕಾಂತಿಯು ವನವಾಸದಿಂದ ಕಂದದಂತೆ ಅನಸೂಯೆಯು ಆಕೆಗೆ ಅರಿಸಿನ, ಕುಂಕುಮ– ಮೊದಲಾದ್ದನ್ನು ಕೊಟ್ಟಿದ್ದಾಳೆ. ಸಾಕ್ಷಾದಾದಿಮಾತೆಗೆ ಕೂಡ ಒಬ್ಬ ಪತಿವ್ರತೆಯು ಆಶೀರ್ವದಿಸಿ ತೇಜಸ್ಸನ್ನು ರಕ್ಷಣೆಮಾಡಿಕೊಡಬೇಕಾದರೆ ಆ ಪತಿವ್ರತೆಯ ಪ್ರಭಾವವೆಷ್ಟಿರಬಹುದು!

## ಗೃಹಸ್ಥನ ಭಗವಚ್ಚಿಂತನ.

ಮನುಷ್ಯನು ಹೆಂಡತಿಮಕ್ಕಳನ್ನು ಕಟ್ಟಿಕೊಂಡು ಗೃಹಸ್ಥನಾಗಿ ವ್ಯವಹಾರದಲ್ಲಿ ತೊಡಗಿದರೆ ದೇವರ ಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ಆತನ ಧ್ಯೇಯವು ಸಾಧ್ಯವಾಗುವದೇತೆಂದು ಯೋಚಿಸಬಹುದು. ಇದಕ್ಕೆ ಒಬ್ಬ ಕವಿಯು ಹೇಳುವದೇನೆಂದರೆ—

ನ್ಯಾಯಾರ್ಜಿತಧನಸ್ತತ್ತ್ವಜ್ಞಾನನಿಷ್ಠೋಽತಿಥಿಪ್ರಿಯಃ ।
ಶಾಸ್ತ್ರವಿತ್ಸತ್ಯವಾದೀ ಚ ಗೃಹಸ್ಥೋಽಪಿ ವಿಮುಚ್ಯತೇ ॥

ನ್ಯಾಯವಾದ ಮಾರ್ಗದಿಂದ ಧನವನ್ನು ಸಂಪಾದಿಸುವದು, ವೇದಾಂತ ವಿಚಾರದಲ್ಲಿ ತತ್ಪರನಾಗುವದು, ಅತಿಥಿಗಳಲ್ಲಿ ಪ್ರೇಮವುಳ್ಳವನಾಗಿರುವದು, ಶಾಸ್ತ್ರವನ್ನು ತಿಳಿದಿರುವದು, ಸತ್ಯವನ್ನು ಹೇಳುವದು–ಇವುಗಳಿದ್ದರೆ ಗೃಹಸ್ಥನಾದರೂ ಮೋಕ್ಷವನ್ನು ಪಡೆಯುವನೆಂದು ತಾತ್ಪರ್ಯ. “ಇವುಗಳಲ್ಲಿ ಧನಸಂಪಾದನೆ, ಅತಿಥಿಪ್ರೇಮ– ಮೊದಲಾದವುಗಳನ್ನು ಹೇಗಾದರೂ ಸಾಧಿಸಬಹುದು; ಈ ಬಗೆಯ ಪ್ರಾಪಂಚಿಕವೃತ್ತಿಯ ಜೊತೆಗೆ ವೇದಾಂತವಿಚಾರದ ತತ್ಪರತೆ ಹೇಗುಂಟಾದೀತು?” ಎಂದು ಮನಸ್ಸು ಹಿಂದುಮುಂದು ನೋಡುವದಾದರೆ ಅದನ್ನು ಧೈರ್ಯಗೊಳಿಸುವದಕ್ಕೆ ಸಾಧನವಾಗಿ ಶ್ರೀರಾಮಕೃಷ್ಣಪರಮಹಂಸರ ಒಂದೆರಡು ವಾಕ್ಯಗಳನ್ನು ಈ ಕೆಳಗೆ ಉದಾಹರಿಸುತ್ತೇನೆ.

(೧) ಪ್ರ. ಪ್ರಪಂಚವನ್ನೂ ದೇವರನ್ನೂ ಜೊತೆಗೊಳಿಸುವದು ಹೇಗೆ ಸಾಧ್ಯ?

೮. ಒಕ್ಕಲಿಗನ ಹೆಂಡತಿಯನ್ನು ನೋಡಿರಿ. ಆಕೆಯು ಎಷ್ಟು ಕೆಲಸದಲ್ಲಿ ತೊಡಗುವಳು! ಆಕೆಯು ಒಂದು ಕೈಯಲ್ಲಿ ಒಸಕೆಯ ಪೆಟ್ಟಿನ ದೆಸೆಯಿಂದ ಒರಳಿನಿಂದ ಹಾರುತ್ತಿರುವ ಅಕ್ಕಿಯನ್ನು ಒಟ್ಟುಗೂಡಿಸಿ ಒರಳೊಳಕ್ಕೆ ಸೂಕುವಳು; ಇನ್ನೊಂದು ಕೈಯಲ್ಲಿ ಎದೆಯನ್ನು ತಬ್ಬಿಕೊಂಡಿರುವ ಮಗುವನ್ನು ಹಿಡಿದುಕೊಂಡು ಮೊಲೆಯನ್ನು ಕುಡಿಸುವಳು; ಇದರ ಜೊತೆಗೆ ಆಕೆಯು ಕೊಂಡುಕೊಳ್ಳುವದಕ್ಕೆ ಬಂದವನೊಡನೆ ಅಕ್ಕಿಯ ಕ್ರಯವನ್ನೂ ಗೊತ್ತುಮಾಡುತ್ತಿರುವಳು. ಹೀಗೆ ಆಕೆಯು ನಾನಾಮುಖವಾದ ಉದ್ಯೋಗದಲ್ಲಿದ್ದರೂ ಅವಳ ಮನಸ್ಸೆಲ್ಲ ಒಸಕೆಯ ಪೆಟ್ಟು ತನ್ನ ಕೈಯ ಮೇಲೆ ಬಿದ್ದು ಜಜ್ಜದಂತೆ ನೋಡಿಕೊಳ್ಳುವದರಲ್ಲಿಯೇ ಇರುತ್ತದೆ. ಪ್ರಪಂಚದಲ್ಲಿಯೇ ತೊಡಗಿದ್ದರೂ ಯಾವಾಗಲೂ ಪರಮಾತ್ಮನ ನಾಮಸ್ಮರಣೆಯನ್ನು ಮಾಡುತ್ತಿರಬೇಕು; ಅದನ್ನು ಬಿಟ್ಟು ಅಡ್ಡದಾರಿಗೆಂದೂ ತಿರುಗಬಾರದು.

( ೨ ) ತಿರುಕನಾದ ಭಟ್ಟಂಗಿಯು ಒಂದು ಕೈಯನ್ನು ಸಿತಾರಿನ ಮೇಲೆ ಆಡಿಸುತ್ತ ಇನ್ನೊಂದು ಕೈಯನ್ನು ಮೃದಂಗದ ಮೇಲೆ ಹಾಕುತ್ತ ಯಾವಾಗಲೂ ಹಾಡುತ್ತಿರುವಂತೆ ಪ್ರಾಪಂಚಿಕರಾದ ಜನರೆ, ಕೈಗಳಿಂದ ಪ್ರಾಪಂಚಿಕಕರ್ತವ್ಯಗಳನ್ನೆಲ್ಲ ಮಾಡುತ್ತ ಇರಿ; ಆದರೆ ಮನಃಪೂರ್ವಕವಾಗಿ ಪರಮಾತ್ಮನ ನಾಮಸಂಕೀರ್ತನೆ ಮಾಡುವದನ್ನು ಎಂದೆಂದಿಗೂ ಮರೆಯಬೇಡಿರಿ.

( ೩ ) ಮಹಾವಿಷಪ್ರಾಣಿಗಳಾದ ಹಾವುಗಳು ಸೇರಿಕೊಂಡಿರುವ ಮನೆಯಲ್ಲಿ ವಾಸಮಾಡುವವರು ಯಾವಾಗಲೂ ಎಚ್ಚರಿಕೆಯಿಂದಿರುವಂತೆ ಪ್ರಪಂಚದಲ್ಲಿ ವ್ಯವಹರಿಸುತ್ತಿರುವವರೆಲ್ಲರೂ ವಿಷಯಾಸಕ್ತಿಗೆ ಮತ್ತು ಆತ್ಯಾಶೆಗಳಿಗೆ ಮರುಳಾಗದಂತೆ ಎಚ್ಚರಿಕೆಯಿಂದಿರಬೇಕು.

———

## ಏಳನೇ ಕಿರಣ.

# ಕರ್ಮಯೋಗ.

---

### ಕರ್ಮಯೋಗದ ಪ್ರಾಶಸ್ತ್ಯ.

ಗೃಹಸ್ಥವೃತ್ತಿಯಲ್ಲಿ ಭಗವದ್ವಿಚಾರದ ಕಡೆಗೆ ಮನಸ್ಸನ್ನು ಹಾಕುವದಕ್ಕೆ ಅನೇಕ ಅಡಚಣೆಗಳೊದಗುವವೆಂದರಿತು ಶಾಸ್ತ್ರಕಾರರು ಗೃಹಸ್ಥಾಶ್ರಮವಾದ ಮೇಲೆ ದೇವತಾಜ್ಞಾನದ ಸಂಪಾದನೆಯ ಸೌಲಭ್ಯಕ್ಕಾಗಿ ಇನ್ನೆರಡು ಆಶ್ರಮಗಳನ್ನು ಕಲ್ಪಿಸಿದ್ದಾರೆ. ಅವುಗಳಲ್ಲೊಂದಕ್ಕೆ ವಾನಪ್ರಸ್ಥಾಶ್ರಮವೆಂದು ಹೆಸರು; ಇನ್ನೊಂದಕ್ಕೆ ಸಂನ್ಯಾಸವೆಂದು ಹೆಸರು. ಗೃಹಸ್ಥನಿಗೆ ಸಾಮಾನ್ಯವಾಗಿ ಎಲ್ಲಾ ವಿಷಯೋಪಭೋಗಗಳ ಸೌಕರ್ಯವಿರುವದಷ್ಟೆ. ಅವುಗಳು ಎದುರಿಗೆ ಇರುವಾಗ ಅವುಗಳನ್ನು ಬಳಸದೆ ಇಂದ್ರಿಯಗಳನ್ನು ಬಿಗಿಹಿಡಿಯುವದು ಕಷ್ಟವಾಗುವದೆಂದರಿತು ಅವುಗಳು ದೂರವಾಗುವಂತೆ ಕಾಡಿಗೆ ಹೋಗಿ ಗೆಡ್ಡೆಗೆಣಸುಗಳನ್ನು ತಿಂದುಕೊಂಡು ಶರೀರದಂಡನೆಯನ್ನು ಮಾಡುವದು ವಾನಪ್ರಸ್ಥಾಶ್ರಮ. ಆದರಲ್ಲಿ ಪಳಗಿದ ಮೇಲೆ ಆ ಆಶ್ರಮದಲ್ಲಿ ಆದ ಅಭ್ಯಾಸದ ಬಲದಿಂದ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡು ಊರುಗಳಲ್ಲಿ ಭಿಕ್ಷೆಯನ್ನೆತ್ತಿ ಜೀವಿಸುತ್ತ ಭಗವದ್ವಿಚಾರವನ್ನು ಮೆಯ್ಗೂಡಿಸಿಕೊಳ್ಳುವದರಲ್ಲಿಯೇ ತನ್ನ ಕಾಲವನ್ನೆಲ್ಲಾ ವಿನಿಯೋಗಿಸುವದು ಸಂನ್ಯಾಸಾಶ್ರಮ. ಈ ಕಲಿಯುಗದಲ್ಲಿ ಶಾಸ್ತ್ರಕಾರರು ವಾನಪ್ರಸ್ಥಾಶ್ರಮವನ್ನು ನಿಷೇಧಮಾಡಿದ್ದಾರೆ. ಈಗ ಯಾರೂ ಅಡವಿಯಲ್ಲಿ ಕುಳಿತು ಶರೀರದಂಡನೆಯನ್ನು ಮಾಡುತ್ತ ಇಂದ್ರಿಯನಿಗ್ರಹವನ್ನು ಸಾಧಿಸುವವರಿಲ್ಲ. ಸಂನ್ಯಾಸಿಗಳು ಮಾತ್ರ ಬೇಕಾದಷ್ಟು ಜನರಿದ್ದಾರೆ. ಆದರೆ ತಾವು ನಿಜವಾದ ಸಂನ್ಯಾಸಿಗಳಿರುವೆವೆ ಹೇಗೆ? ಎಂಬುದನ್ನು ಅವರು ತಮ್ಮತಮ್ಮಲ್ಲಿಯೇ ನೋಡಿಕೊಳ್ಳಬೇಕು. ಸಂನ್ಯಾಸಾಶ್ರಮದ ಪರಿಪೂರ್ಣಸ್ಥಿತಿಯು ದಕ್ಕದಿದ್ದರೂ ಅದರಲ್ಲಿ ಅಡ್ಡ

ದಾರಿಯನ್ನು ತುಳಿಯದೆ ಇದ್ದರೂ ಸಾಕು. ಅಂಥವರು ಕೂಡ ಈಗಿನ ಕಾಲದಲ್ಲಿ ದುರ್ಲಭರಾಗಿದ್ದಾರೆ. ಈ ಸ್ಥಿತಿಯನ್ನು ಮುಂದಾಲೋಚನೆ ಮಾಡಿಯೇ ಶಾಸ್ತ್ರಕಾರರು ಒಂದು ಕಡೆ ಸಂನ್ಯಾಸವು ಕಲಿಯುಗದಲ್ಲಿ ನಿಷಿದ್ಧವೆಂದು ನುಡಿದಿದ್ದಾರೆ. ಕಲಿಯುಗದ ಜನರ ಮನಸ್ಸು ಸಂನ್ಯಾಸ ವೆಂಬ ವ್ರತವನ್ನು ಸರಿಯಾಗಿ ಪಾಲಿಸುವಷ್ಟು ದಾರ್ಢ್ಯವುಳ್ಳದ್ದಾಗಿರಲಾರ ದೆಂಬ ಸಂಶಯವೇ ಅದಕ್ಕೆ ಕಾರಣ. ಆದಕಾರಣ ನಾವು ನಮ್ಮ ಯೋಗ್ಯ ತೆಯನ್ನು ನೋಡಿಕೊಳ್ಳದೆ ದುಡುಕಿ ಆಳವಾದ ನೀರಿಗೆ ಇಳಿಯ ಬಾರದೆಂದು ಇಲ್ಲಿ ಆ ಎರಡು ಆಶ್ರಮಗಳ ವಿಚಾರವನ್ನು ಬಿಟ್ಟು ಗೃಹಸ್ಥ ನಾಗಿದ್ದೇ ಪರಮಾರ್ಥವನ್ನು ಸಾಧಿಸುವ ಒಂದು ಸುಲಭವಾದ ಸಾಧನ ವನ್ನು ವಿಚಾರ ಮಾಡುತ್ತೇವೆ.

ಈಗ ನಾವು ಹೇಳಹೋಗುವ ಸಾಧನವು ಕರ್ಮಯೋಗ. ಗೃಹ ಸ್ಥನು ಸಾಮಾನ್ಯವಾಗಿ ಎಷ್ಟೋ ಕರ್ಮಗಳನ್ನು ಮಾಡುತ್ತಲೇ ಇರುವನಾ ದ್ದರಿಂದ ಇಲ್ಲೇನು ವಿಶೇಷವೆಂಬ ವಿಚಾರವು ಬರಬಹುದು. ಗೃಹಸ್ಥನು ಸಾಮಾನ್ಯವಾಗಿ ಮಾಡುವದು ಕರ್ಮ. ಇಲ್ಲಿ ನಾವು ಹೇಳಹೋಗುವದು ಕರ್ಮಯೋಗ. ಕರ್ಮವೆಂಬ ಮಾತಿಗಿಂತ ಕರ್ಮಯೋಗವೆಂಬ ಮಾತಿನಲ್ಲಿ ಯೋಗವೆಂಬ ಒಂದು ಮಾತು ಹೆಚ್ಚಾಗಿರುವದಷ್ಟೆ. ಯೋಗವೆಂದರೇನು? ಇದರರ್ಥವನ್ನು ಭಗವದ್ಗೀತೆಯು ತಾನೇ ಹೇಳಿರುವದು.

“ ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ”

ಕರ್ಮಯೋಗವನ್ನು ಮಾಡುವವನು ಸಿದ್ಧಿ ಮತ್ತು ಅಸಿದ್ಧಿ ಇವೆರಡನ್ನೂ ಸಮವಾಗಿ ಭಾವಿಸಬೇಕು. ಈ ಸಮತ್ವಕ್ಕೇ ಯೋಗವೆಂದು ಹೆಸರು. ಸಮತ್ವಬುದ್ಧಿಯುಕ್ತನಾಗಿ ಮಾಡಿದರೆ ಯೋಗವಾಯಿತು. ಅದಿಲ್ಲದೆ ಮಾಡಿದರೆ ಸಾಧಾರಣಕರ್ಮವಾಯಿತು. ಸಿದ್ಧಿ ಮತ್ತು ಅಸಿದ್ಧಿ ಇವೆರ ಡನ್ನೂ ಸಮವಾಗಿ ಭಾವಿಸುವದೆಂದರೆ, ಅದರ ಆಗಲೆಂದೂ ಹೋದರೆ ಹೋಗಲೆಂದೂ, ಅನಾದರದಿಂದ ಮಾಡುವದೆಂದರ್ಥವಲ್ಲ. ಸಿದ್ಧಿಯಾದರೆ ಹರ್ಷದಿಂದ ಉಬ್ಬದೆ ಅಸಿದ್ಧಿಯಾದರೆ ವಿಷಾದದಿಂದ ತಗ್ಗದೆ ಇರುವದೇ ಸಮತ್ವಬುದ್ಧಿ. ಈ ಸಮತ್ವಬುದ್ಧಿಯಿಂದ ಮಾಡುವಾಗ ಅನಾದರಕ್ಕೆ ಳ್ಳಷ್ಟೂ ಸ್ಥಲವಿರಬಾರದು. ಸಿಧ್ಯಸಿದ್ಧಿಗಳಂತೆ ಲಾಭಾಲಾಭ, ಜಯಾ

ಪಜಯ, ಮಾನಾಪಮಾನ— ಮೊದಲಾದ ಯಾವ ದ್ವಂದ್ವದಿಂದಲೂ ಯಾವ ಮನೋವಿಕಾರವನ್ನೂ ಪಡೆಯದೆ ಮಾಡುವ ಕರ್ಮಕ್ಕೆ ಕರ್ಮಯೋಗ ವೆಂದು ಹೆಸರು.

ಸಂನ್ಯಾಸಾಶ್ರಮವು ಈಗಿನ ಕಾಲದಲ್ಲಿ ಅಸಾಧ್ಯವೆಂದು ಶಾಸ್ತ್ರಕಾರರು ಮೊದಲೇ ಭವಿಷ್ಯತ್ತನ್ನು ಊಹಿಸಿರುವರೆಂದು ಕಾರಣವನ್ನು ಕೊಟ್ಟು ಅದನ್ನು ಹಿಂದಿಟ್ಟು ಸುಲಭವಾದ ಸಾಧನವನ್ನು ಹೇಳುವದಾಗಿ ಪ್ರತಿ ಜ್ಞೆಯನ್ನು ಮಾಡಿ ಕರ್ಮಯೋಗವನ್ನು ಮುಂದಕ್ಕೆ ಚಾಚುವದನ್ನು ನೋಡಿ ದರೆ ಕರ್ಮಯೋಗವು ಸಂನ್ಯಾಸಕ್ಕಿಂತ ಕಡಿಮೆಯ ಯೋಗ್ಯತೆಯದೆಂದು ಸಹಜವಾಗಿ ತೋರಬಹುದು. ಈ ಸಂಶಯವನ್ನು ಶ್ರೀಕೃಷ್ಣನು ಗೀತೆಯಲ್ಲಿ ಸ್ವಕಂಠದಿಂದ ಪರಿಹಾರಮಾಡಿದ್ದಾನೆ.

“ ಸನ್ನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।
ತಯೋಸ್ತು ಕರ್ಮಸಂನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ ॥ ”

ಎಂದರೆ ಸಂನ್ಯಾಸವೂ ಕರ್ಮಯೋಗವೂ ಎರಡೂ ಮೋಕ್ಷಕ್ಕೆ ಸಾಧಕಗಳೆ; ಅವೆರಡರಲ್ಲಿ ಕರ್ಮಸಂನ್ಯಾಸಕ್ಕಿಂತಲೂ ಕರ್ಮಯೋಗವು ಹೆಚ್ಚಿನದು. ಇದ ರಿಂದ ಕರ್ಮಯೋಗವು ಸಂನ್ಯಾಸಕ್ಕಿಂತ ಕಡಿಮೆಯದಲ್ಲವೆಂದಿಷ್ಟೇ ಅಲ್ಲ; ಹೆಚ್ಚಿನದೆಂದು ಕೂಡ ಸಿದ್ಧವಾಯಿತು. ನಿಜವಾಗಿ ನೋಡಿದರೆ ಸಂನ್ಯಾ ಸದ ಅಧಿಕಾರಿಗಳೇ ಬೇರೆ; ಕರ್ಮಯೋಗದ ಅಧಿಕಾರಿಗಳೇ ಬೇರೆ ಅವ ರವರಿಗೆ ಅದದು ಹೆಚ್ಚಿನದು. ಈ ಅಧಿಕಾರವಿಭಾಗವೂ ಗೀತೆಯಲ್ಲಿಯೇ ಹೇಳಿದೆ.

“ ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।
ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥ ”

ಇನ್ನೂ ಪರಮಾರ್ಥದ ಹಾದಿಯನ್ನು ಹತ್ತಬೇಕೆಂಬುವವನಿಗೆ ಕರ್ಮವು ಬೇಕು; ಹತ್ತಿದ ಮೇಲೆ ಅವನಿಗೇ ಸಂನ್ಯಾಸವು ಒಪ್ಪುವದು. ಹತ್ತಿದವ ರಾಗಿದ್ದರೆ ನಮಗೆ ಸಂನ್ಯಾಸವು ಒಪ್ಪೀತು; ನಾವಿನ್ನೂ ಹತ್ತುವವರು. ಆದ್ದರಿಂದ ನಮಗೆ ಕರ್ಮವೇ ಹೆಚ್ಚಿನದು.

ನಾವಿನ್ನೆಷ್ಟು ಕಲಿತರೆ ಸಂನ್ಯಾಸಕ್ಕೆ ತಕ್ಕವರಾಗುವೆವೆಂದು ಒಬ್ಬನು ಯೋಚಿಸಬಹುದು. ಇದನ್ನು ಮಾತಿನಿಂದ ಹೇಳುವದಕ್ಕೆ ಬರುವಹಾಗಿಲ್ಲ;

ಉದಾಹರಣೆಯಿಂದ ಈ ಸಮಸ್ಯೆಯನ್ನು ಬಿಡಿಸಬಹುದು. ಶ್ರೀಕೃಷ್ಣನ ಮತ್ತು ಅರ್ಜುನನ ವಿಷಯವನ್ನು ಎಲ್ಲರೂ ಕೇಳಿರುತ್ತಾರೆ. ಶ್ರೀಕೃಷ್ಣನು ತನ್ನ ತಂಗಿಯಾದ ಸುಭದ್ರೆಯನ್ನು ಅರ್ಜುನನಿಗೆ ಕೊಟ್ಟು ಮದುವೆಯನ್ನು ಮಾಡಿಸಿರುವನು. ಅರ್ಜುನನಿಗೆ ತಾಯಿಯ ಕಡೆಯಿಂದಲೂ ಶ್ರೀಕೃಷ್ಣನ ಸಂಬಂಧವಿರುವದು. ಇದರ ಮೇಲೆ ಶ್ರೀಕೃಷ್ಣನ ಮತ್ತು ಅರ್ಜುನನ ಸ್ನೇಹವು ಜಗದ್ವಿಖ್ಯಾತವಾಗಿರುವದು ಈ ಸ್ನೇಹವು ಎಷ್ಟು ಆಳವಾಗಿ ವ್ಯಾಪಿಸಿತ್ತೆಂಬದಕ್ಕೆ ಶ್ರೀಕೃಷ್ಣನು ಅವನ ಸಾರಥ್ಯವನ್ನು ಮಾಡುತ್ತಿದ್ದದ್ದೇ ನಿದರ್ಶನವಾಗಿದೆ. ಶ್ರೀಕೃಷ್ಣನು ಮಹಾವಿಷ್ಣುವಿನ ಅವತಾರವೆಂದು ಎಲ್ಲರೂ ನಂಬುತ್ತಾರೆ. ಇಂಥ ಭಗವಂತನಲ್ಲಿ ಅರ್ಜುನನಿಗೆ ಇಷ್ಟು ಬಗೆಯ ಸಂಬಂಧವಿತ್ತು. ಇನ್ನು ಕೃಷ್ಣನ ವಿಚಾರವನ್ನು ಬಿಟ್ಟು ಅರ್ಜುನನೊಬ್ಬನನ್ನೇ ವಿಚಾರಕ್ಕೆ ತೆಗೆದುಕೊಂಡರೂ ಅವನು ಇಂದ್ರನ ಅಂಶದಿಂದ ಉತ್ಪನ್ನನಾದವನು; ಅಯೋನಿಜೆಯಾದ ದ್ರೌಪದಿಗೆ ಪತಿಯಾದವನು ಮತ್ತು ಮೂರ್ತಿಮಂತಧರ್ಮಸ್ವರೂಪನಾದ ಧರ್ಮರಾಯನ ತಮ್ಮನು. ಧರ್ಮರಾಯನ ಸಂಬಂಧವನ್ನು ಉಪೇಕ್ಷೆಮಾಡಿದರೂ ಅರ್ಜುನನು ಸಶರೀರನಾಗಿ ಸ್ವರ್ಗಕ್ಕೆ ಹೋಗಿ ಇಂದ್ರನ ಅರ್ಧಾಸನದ ವೈಭವವನ್ನನುಭವಿಸಿ ಬಂದವನು. ಸಶರೀರನಾಗಿ ಸ್ವರ್ಗಕ್ಕೆ ಹೋಗುವದೆಂಬುದು ಸಾಮಾನ್ಯರಿಗೆ ಸಾಧ್ಯವೆ? ವಿಶ್ವಾಮಿತ್ರರ ಮಹತ್ತರವಾದ ತಪಸ್ಸಿನ ಬಲದಿಂದ ತ್ರಿಶಂಕುರಾಜನು ಸಶರೀರನಾಗಿ ಸ್ವರ್ಗಕ್ಕೆ ಹೋದರೂ ಅಲ್ಲಿ ಒಳಗೆ ಕಾಲಿಡಲರಿಯದೆ ತಲೆಕೆಳಗಾಗಿ ಬೀಳಬೇಕಾಯಿತು. ಹೀಗಿರುವಾಗ ಅರ್ಜುನನು ದೇವೇಂದ್ರನ ಅರ್ಧಾಸನದ ಸುಖವನ್ನು ಅನುಭವಿಸುವದೆಂದರೆ ಅವನ ಮನಃಶುದ್ಧಿಯು, ಅವನ ಸಾತ್ತ್ವಿಕಪ್ರಭಾವವು, ಎಷ್ಟು ಪ್ರಬಲವಾಗಿರಬಹುದು! ಹೀಗಿದ್ದರೂ ಇಂಥ ಅರ್ಜುನನಿಗೆ ಶ್ರೀಕೃಷ್ಣನು ತನ್ನ ಅಂತರಂಗವನ್ನು ಬಿಚ್ಚಿ ಹೇಳುವಾಗ ಏನು ಹೇಳಿದ್ದಾನೆ? " ಕುರು ಕರ್ಮೈವ ತಸ್ಮಾತ್ತ್ವಂ " ಎಂದರೆ " ಅನೇಕ ಕಾರಣಗಳಿಂದ ನೋಡಿದರೂ ನೀನು ಕರ್ಮವನ್ನೇ ಮಾಡು " ಎಂದು ಅರ್ಥ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನ ಮುಂದೆ ಸಂನ್ಯಾಸದ ವಿಚಾರವನ್ನು ಸೂರೆಮಾಡಿದ್ದಾನೆ. ಆದರೆ ಮಾತುಮಾತಿಗೂ ನೀನು ಕರ್ಮಯೋಗವನ್ನು ಹಿಡಿ

ಯೆಂದು ಅವನಿಗೆ ಹೇಳಿದ್ದಾನೆ. ಅರ್ಜುನನ ಅಧಿಕಾರವೇ ಹೀಗಿರುವಾಗ ನಮ್ಮ ವಿಷಯಕ್ಕಿನ್ನೇನು ಹೇಳಬೇಕು! ಆದ್ದರಿಂದ ನಮಗೆ ಕರ್ಮಯೋಗವೇ ಶ್ರೇಯಸ್ಕರವು.

ಅರ್ಜುನನಿಗೆ ಕರ್ಮಯೋಗವ್ರತವನ್ನು ಹಿಡಿಸಬೇಕೆಂಬ ಸಡಗರದಲ್ಲಿ ಭಗವಂತನು

"ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ"

ಎಂದು ಹೇಳಿದ್ದಾನೆ. ಕರ್ಮವನ್ನು ಮಾಡದೆ ಹೋದರೆ ದೇಹದ ಇರುವಿಕೆಗೇ ಭಂಗಬಂದೀತೆಂದು ಅದರ ತಾತ್ಪರ್ಯ. ಶರೀರವು ಯಾವ ಕರ್ಮವನ್ನೂ ಮಾಡದೇ ಬದುಕುವದು ಹೇಗೆ? ಉಳಿದ ಯಾವ ಕರ್ಮವನ್ನೂ ಮಾಡದೆ ಇದ್ದರೂ ಉಸಿರಾಡುವ ಕರ್ಮವನ್ನಾದರೂ ಮಾಡಲೇ ಬೇಕು. ಹೀಗೆಂದು ಶ್ರೀಕೃಷ್ಣನ ಅಭಿಪ್ರಾಯವಿದ್ದರೂ ಇದಕ್ಕೆ ಈಗಿನ ಕಾಲಕ್ಕೆ ಅನುಗುಣವಾಗಿ ಇನ್ನೊಂದರ್ಥವನ್ನು ಕಲ್ಪಿಸುವದಕ್ಕೆ ಬರುತ್ತದೆ. ಅದೇನೆಂದರೆ— ಪೂರ್ವಕಾಲದಲ್ಲಿ ಒಬ್ಬನು ಸಂನ್ಯಾಸಿಯಾದರೆ ಅವನ ಸೇವೆಯು ದೊರೆತರೆ ಸಾಕೆಂದು ಗೃಹಸ್ಥರೆಲ್ಲರೂ ದಾರಿಯನ್ನು ಕಾಯುತ್ತಿದ್ದರು. ಹೀಗೆ ಗೃಹಸ್ಥರೆಲ್ಲರೂ ಸಂನ್ಯಾಸಿಯ ಯೋಗಕ್ಷೇಮಕ್ಕೆ ಕಂಕಣವನ್ನು ಕಟ್ಟಿಕೊಂಡಿದ್ದದರಿಂದಲೂ ಹಿಂದಿನ ರಾಜರು ವೈದಿಕಧರ್ಮದ ಪ್ರೋತ್ಸಾಹಕರಾಗಿದ್ದುದರಿಂದಲೂ ಆಗಿನ ಸಂನ್ಯಾಸಿಗಳು ನಿರಾತಂಕದಿಂದ ತಮ್ಮ ನಿವೃತ್ತಿಮಾರ್ಗದಲ್ಲಿಯೇ ಮುಂದುವರಿಯಬಹುದಾಗಿತ್ತು. ಈಗಿನ ಕಾಲಸ್ಥಿತಿ ವಿಪರೀತವಾಗಿದೆ. ಸಂನ್ಯಾಸಿಗಳೆಂದರೆ ಸೋಮಾರಿಗಳೆಂದು ತಿಳಿಯುವ ಹೊತ್ತು ಬಂದಿದೆ. ಹೀಗೆ ಅನಾದರಕ್ಕೆ ಪಾತ್ರವಾದ ಪರಿಸ್ಥಿತಿಯನ್ನು ಮೈಮೇಲೆ ಹಾಕಿಕೊಳ್ಳುವದು ವಿವೇಕವಲ್ಲ. ಆದ್ದರಿಂದಲೂ ಸಂನ್ಯಾಸದ ಹಾದಿಯು ಸುಗಮವಲ್ಲ

ಕರ್ಮಯೋಗವು ಸಂನ್ಯಾಸಕ್ಕಿಂತ ಸುಗಮವೆಂಬುದಾದರೂ ಹೇಗೆಂದರೆ ಹೇಳಬಹುದು. ಸಂನ್ಯಾಸವು ನಮ್ಮ ಸ್ವಭಾವಕ್ಕೆ ವಿರುದ್ಧವಾದದ್ದು. ಸಂನ್ಯಾಸವೆಂದರೆ ಎಲ್ಲವನ್ನೂ ಬಿಟ್ಟು ತಟಸ್ಥನಾಗಿ ಕೂಡುವದು. ಬಹಿರ್ಮುಖವಾದ ಇಂದ್ರಿಯಗಳುಳ್ಳ ನಾವು ಆ ಪರಿಸ್ಥಿತಿಯಲ್ಲಿರುವದಕ್ಕೆ ಹೇಗೆ ಬಂದೀತು? ಧೀರರಾದವರು ಆಸ್ಥಿತಿಯನ್ನು ತಂದುಕೊಳ್ಳಬಹುದು,

ಅವರಿಗೆ ನಮ್ಮ ನಮಸ್ಕಾರ. ಆದರೆ ಇದು ಸರ್ವಸಾಮಾನ್ಯರಿಗೆ ದಕ್ಕುವ ಮಾತಲ್ಲ. ಕರ್ಮಯೋಗವು ನಮ್ಮ ಸ್ವಭಾವಕ್ಕೆ ತಕ್ಕ ಸಾಧನ. ನಮ್ಮ ಸ್ವಭಾವವೆಂಥದ್ದು?

"ನ ಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್"

ಯಾವನೂ ಒಂದುಗಳಿಗೆಯಾದರೂ ಯಾವ ಕರ್ಮವನ್ನೂ ಮಾಡದೆ ಇರುವದಕ್ಕೆ ಆಗುವದಿಲ್ಲ. ಈ ಸ್ಥಿತಿಯು ನಮ್ಮ ಅನುಭವದಲ್ಲಿದೆ. ಇದನ್ನೇ ಸದುಪಯೋಗ ಮಾಡಿಕೊಂಡರಾಯಿತು. ಅದೇ ಕರ್ಮಯೋಗ. ಆದ್ದರಿಂದ ಅದು ಸಂನ್ಯಾಸಕ್ಕಿಂತ ಸುಲಭವಾದದ್ದು. ಕರ್ಮವನ್ನು ಮಾಡುವದೇ ನಮ್ಮ ಸ್ವಭಾವವಾಗಿರುವಾಗ ಅದನ್ನು ಬಲಾತ್ಕಾರದಿಂದ ಬಿಗಿಹಿಡಿದು ಸುಮ್ಮನೇ ಕುಳಿತುಕೊಂಡರೇನು ಮಾಡಿದಂತಾಯಿತು?

"ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।
ಇಂದ್ರಿಯಾರ್ಥಾನ್ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥"

ಎಂದು ಭಗವದ್ಗೀತೆಯು ಹೇಳುವಂತೆ ನಾವು ಮನಸ್ಸಿನಲ್ಲಿಯೇ ವಿಷಯಚಿಂತೆಯನ್ನು ಮಾಡುವಂಥ ಕಳ್ಳಾಟದವರಾಗುತ್ತೇವೆ.

ಇದನ್ನು ಪರಿಹಾರಮಾಡಿಯೇ ಭಗವಂತನು ಗೀತೆಯಲ್ಲಿ

"ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್"

ಎಂಬ ಮಾತಿನಿಂದ ಕರ್ಮಯೋಗವನ್ನು ಬಾಯಿತುಂಬ ಹೊಗಳಿದ್ದಾನೆ. ಕರ್ಮಯೋಗವನ್ನು ಸ್ವಲ್ಪಮಟ್ಟಿಗೆ ಆಚರಣೆಯಲ್ಲಿ ತಂದರೂ ಅದರಿಂದ ಮಹದ್ಭಯವು ನಿವಾರಣೆಯಾಗುವದು. ಆದ್ದರಿಂದ ಕರ್ಮಯೋಗವನ್ನು ಹಿಡಿಯುವದು ಉತ್ತಮ.

## ಕರ್ಮದ ಬಂಧಕತ್ವ

ಕರ್ಮವನ್ನು ಮಾಡುತ್ತಿರುವದು ನಮ್ಮ ಸ್ವಭಾವವೆಂದು ನಾವು ಯಾವಾಗಲೂ ಕರ್ಮದಲ್ಲಿಯೇ ತೊಡಗಿದ್ದರೆ ಮುಂದೆ ಅದು ಸುಖವನ್ನೋ ದುಃಖವನ್ನೋ ಕೊಟ್ಟೇ ಕೊಡುವದರಿಂದ ಕರ್ಮವು ಮನುಷ್ಯನಿಗೆ ಬಂಧಕವೆಂದು ಶಾಸ್ತ್ರಗಳಲ್ಲಿ ಹೇಳಿರುವದು ನಿಜ. ಸಾಮಾನ್ಯವಾಗಿ ಕರ್ಮದಲ್ಲಿ ಬಂಧಕವನ್ನುಂಟುಮಾಡುವಂಥ ದೋಷವಿದೆ. ಆದರೆ ಆ ದೋಷವನ್ನು

ಮುರಿದು ನಾವು ಅದರ ಪ್ರಯೋಜನವನ್ನು ಮಾಡಿಕೊಳ್ಳಬೇಕಾಗಿದೆ. ಆ ದೋಷವನ್ನು ಮುರಿಯುವದು ಹೇಗೆ? ಕರ್ಮವನ್ನು ಕರ್ಮಯೋಗವಾಗಿ ಮಾಡುವದು. ಕರ್ಮದ ಸಿದ್ಧಿಯಲ್ಲಿ ಹರ್ಷವನ್ನೂ ಅಸಿದ್ಧಿಯಲ್ಲಿ ವಿಷಾದವನ್ನೂ ಪಡದೆ ಸಮತ್ವಬುದ್ಧಿಯಿಂದ ಮಾಡಿದ ಕರ್ಮವು ಕರ್ಮಯೋಗವೆನಿಸುವದೆಂದು ಹಿಂದೆಯೇ ಹೇಳಿದೆ. ಆ ಸಮತ್ವವು ಸಾಮಾನ್ಯವಾಗಿ ನಮಗೆ ಏಕೆ ಬರುವದಿಲ್ಲ? ವಿಚಾರಮಾಡಿ ನೋಡಿದರೆ ಯಾವದಾದರೊಂದು ಕರ್ಮದಲ್ಲಿ ಕೈಹಾಕಿದವರಿಗೆ ಅದರಿಂದ ಪಡೆಯಬೇಕಾದ ಒಂದು ಫಲದ ಕಡೆ ದೃಷ್ಟಿ ಇದ್ದರೆ ಸಾಮಾನ್ಯವಾಗಿ ಅವರಿಗೆ ಅದರ ಹರ್ಷವಿಷಾದಗಳು ತಪ್ಪುವದಿಲ್ಲ. ಅಪೇಕ್ಷಿಸಿದ ಫಲವು ಕೈಸೇರಿದರೆ ಹರ್ಷವಾಗಿಯೇ ಆಗುವದು; ಅಪೇಕ್ಷಿಸಿದ ಫಲವು ಕೈಸೇರದೆ ಹೋದರೆ ವಿಷಾದವಾಗಿಯೇ ಆಗುವದು. ಮನಸ್ಸು ಹರ್ಷವಿಷಾದಗಳನ್ನು ಪಡೆಯುವದಕ್ಕೆ ಅದು ಪೂರ್ವದಲ್ಲಿ ಫಲದ ಆಶೆಯನ್ನಿಟ್ಟುಕೊಂಡದ್ದೇ ಕಾರಣವು. ನಾವು ಒಂದು ವಸ್ತುವನ್ನು ತೀವ್ರವಾಗಿ ತರಹೇಳಿ ಅಂಗಡಿಗೆ ಆಳನ್ನು ಅಟ್ಟುತ್ತೇವೆ. ಅದರ ನಿರೀಕ್ಷಣೆಯಲ್ಲಿಯೇ ನಾವು ಕಣ್ಣುಕಣ್ಣುಬಿಡುತ್ತ ಕುಳಿತಿರುವಾಗ ಆ ವಸ್ತು ದೊರೆಯಲಿಲ್ಲವೆಂದು ಆಳು ಓಡಿಬಂದು ಹೇಳುತ್ತಾನೆ. ನಮಗೆ ಅದರ ನಿರೀಕ್ಷಣೆ ಎಷ್ಟು ಹೆಚ್ಚಾಗಿ ಇತ್ತೋ ಅದರ ಪ್ರಮಾಣಕ್ಕೆ ತಕ್ಕಂತೆ ಅಷ್ಟು ಹೆಚ್ಚು ವಿಷಾದವಾಗುತ್ತದೆ. ಆಳಿಗೆ ಓಡಿ ಹೋಗಿ ಬಂದ ಆಯಾಸವಾಗಿದ್ದರೂ ಆ ಫಲದ ನಿರೀಕ್ಷಣೆ ಇರಲಿಲ್ಲವಾದ್ದರಿಂದ ಅವನಿಗೆ ವಿಷಾದವಿಲ್ಲ. ಆದ್ದರಿಂದ ಹರ್ಷವಿಷಾದಗಳ ತಾಯಿಬೇರು ಫಲಾಶೆ. ನಾವು ಫಲಾಶೆಯನ್ನುಬಿಟ್ಟರೆ ಸಿದ್ಧ್ಯಸಿದ್ಧಿಗಳಲ್ಲಿ ಸಮತ್ವವು ತಾನಾಗಿಯೇ ಹುಡುಕಿಕೊಂಡು ಬರುವದು ಒಟ್ಟು ತಾತ್ಪರ್ಯವೇನೆಂದರೆ ಫಲಾಶಾಪೂರ್ವಕವಾಗಿ ಮಾಡುವದು ಕರ್ಮ: ಫಲಾಶೆಯಿಲ್ಲದೆ ಮಾಡುವದು ಕರ್ಮಯೋಗ.

ಆಶೆಯನ್ನು ವಿವೇಕಿಗಳಾದವರು ಯಾರೂ ಬಹುಮಾನಿಸುವದಿಲ್ಲ. ಧರ್ಮಗ್ರಂಥಗಳಂತು ಆಶೆಯನ್ನು ಬಹುಬಗೆಯಿಂದ ಹೀಯಾಳಿಸುವವು. ಏಕೆಂದರೆ ಮನುಷ್ಯನ ಸ್ವಾಭಾವಿಕಪ್ರವೃತ್ತಿಯಾದ ಕರ್ಮದಲ್ಲಿ ಏನೂ ದೋಷವಿಲ್ಲದಿದ್ದರೂ ಆಶೆಯು ಅದರೊಳಗೆ ಸೇರಿಕೊಂಡು ಅದನ್ನು ವಿಷ

ಮಯವಾಗಿ ಮಾಡುವದು. ಆಶೆಯೆಂಬುದೊಂದಿಲ್ಲದಿದ್ದರೆ ಮನುಷ್ಯನು ಪಾಪವನ್ನೇ ಮಾಡುತ್ತಿರಲಿಲ್ಲವೆಂದು ಹೇಳಬೇಕಾಗುತ್ತದೆ. ಹೇಗೆಂದರೆ ಮನುಷ್ಯನು ಪಾಪವನ್ನು ಮಾಡಬೇಕೆಂಬಿಚ್ಛೆಯಿಲ್ಲದೆ ಪಾಪಕರ್ಮದಲ್ಲಿ ಹೇಗೆ ಪ್ರವೃತ್ತನಾಗುತ್ತಾನೆಂದು ಅರ್ಜುನನು ಕೇಳಿದಾಗ ಶ್ರೀಕೃಷ್ಣನು ಹೇಳುತ್ತಾನೆ—

"ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥"

"ಅರ್ಜುನ, ಕೇಳು, ಈ ಕಾಮವೇ— ಈ ಕ್ರೋಧವೇ–ರಜೋಗುಣದಿಂದ ಹುಟ್ಟಿದ ಇದೇ ಶತ್ರುವೆಂದು ತಿಳಿ; ಇದಕ್ಕೆ ಎಷ್ಟಾದರೂ ತೃಪ್ತಿಯಿಲ್ಲ; ಇದೇ ಮಹಾಪಾಪಿಯು; ಇದೇ ಈ ಲೋಕದಲ್ಲಿ ಹಗೆಯು. ತಾತ್ಪರ್ಯವೇನೆಂದರೆ ರಜೋಗುಣದ ಪ್ರಭಾವದಿಂದ ಮನುಷ್ಯನಲ್ಲಿ ಮೊದಲು ಕಾಮವು ಎಂದರೆ ಆಶೆಯು ತಲೆ ಎತ್ತುತ್ತದೆ. ಅದರ ಬಯಕೆಯು ಕೈಸೇರದೆ ಹೋಗುತ್ತಲೇ ಆ ಆಶೆಯೇ ಕೋಪವಾಗಿ ಪರಿಣಮಿಸುತ್ತದೆ. ಆಶೆಯು ಹೊಟ್ಟೆಗೆ ಹಾಕಿ ಅದಕ್ಕೆ ಸಾಕೆನಿಸುವದು ಯಾರಿಂದಲೂ ಆಗುವದಿಲ್ಲ. ಉರಿಯುತ್ತಿರುವ ಅಗ್ನಿಗೆ ತುಪ್ಪವನ್ನು ಹಾಕಿ ಆರಿಸುವದು ಯಾರಿಂದಾದೀತು! ಆ ಆಶೆಯೇ ಈ ಪಾಪಕ್ಕೆ ಕಾರಣವು.

ಹೀಗೆ ಅರ್ಜುನನು ಕೇಳಿದಾಗ ಆಶೆಯನ್ನು ನಿಂದಿಸಿದ ಪರಮಾತ್ಮನು ಆ ಅಭಿಪ್ರಾಯವನ್ನು ಅವನ ಮನಸ್ಸಿನಲ್ಲಿ ಬೇರುಬಿಟ್ಟುಕೊಳ್ಳುವಂತೆ ಮಾಡಲು ನಡುನಡುವೆ ಪಲ್ಲವಿಯಂತೆ ಅದನ್ನು ಹಾಡುತ್ತ ಕೊನೆಯಲ್ಲಿ ಕೂಡ

"ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥"

ಎಂದರೆ— ಕಾಮ, ಕ್ರೋಧ, ಲೋಭ– ಇವು ಮೂರೂ ತನ್ನ ನಾಶವನ್ನು ಮಾಡತಕ್ಕವುಗಳಾಗಿದ್ದು ನರಕದ ಮೂರು ಬಾಗಿಲುಗಳಂತಿರುವವು. ಆದ್ದರಿಂದ ಈ ಮೂರೂ ಬಿಡತಕ್ಕವುಗಳು–ಎಂದು ಹೇಳಿರುವನು.

ಕಾಮಕ್ರೋಧಲೋಭಗಳು ನಮ್ಮನ್ನು ಹೇಗೆ ನಾಶಮಾಡುತ್ತವೆಂಬುದನ್ನು ವಿಚಾರದಿಂದ ಊಹಿಸಬಹುದು.

“ ಆಶಾಯಾ ಯೇ ದಾಸಾಸ್ತೇ ದಾಸಾಸ್ಸರ್ವಲೋಕಸ್ಯ ”

ಎಂಬ ಉಕ್ತಿಯಂತೆ ಆಶೆಗೆ ಯಾರು ದಾಸರಾಗುತ್ತಾರೊ ಅವರು ಸರ್ವಲೋಕಕ್ಕೂ ದಾಸರಾದಂತೆಯೇ. ದಾಸತ್ವವು ಆತ್ಮನಾಶವಲ್ಲದೆ ಮತ್ತೇನು? ಆಶೆಯಿಂದ ದಾಸನಾದವನು ಧನಿಕನ ಬಳಿಗೆ ಹೋಗುವಾಗ ತನ್ನ ಎಂಟು ಗೇಣಿನ ದೇಹವನ್ನು ಒಂದು ಹಿಡಿಯಾಗಿ ಕುಗ್ಗಿಸಿಕೊಂಡು ಹೋಗಬೇಕಾಗುವದು. ಸರ್ವವ್ಯಾಪಿಯಾದ ವಿಷ್ಣು ಕೂಡ ಮೂರು ಹೆಜ್ಜೆ ಭೂಮಿಯ ಆಶೆಯನ್ನು ಮಾಡಿದಾಗ ತನ್ನ ಸರ್ವೇಶ್ವರತ್ವವನ್ನು ಮೂಲೆಯಲ್ಲಿಟ್ಟು ವಾಮನಾವತಾರವನ್ನು ಮಾಡಬೇಕಾಯಿತು. ಇನ್ನು ಪಾಮರರಾದ ಮನುಷ್ಯರ ಪಾಡೇನು? ಲೋಕದಲ್ಲಿ ದಾಸ್ಯವೂ ಮರಣವೂ ಎರಡೂ ಒಂದೇ. ಆಶೆಗೊಳಗಾದ ಮನುಷ್ಯನು ಎಂತಹ ದಾಸ್ಯಕ್ಕೂ ಹಿಂದು ಮುಂದು ನೋಡುವದಿಲ್ಲ. ಆದ್ದರಿಂದ ಆಶೆಯು ಆತ್ಮನಾಶಕವೆಂದು ಸಿದ್ಧವಾಯಿತು. ಕ್ರೋಧವೂ ಲೋಭವೂ ಆಶೆಯ ರೂಪಾಂತರಗಳೇ ಆದ್ದರಿಂದ ಕಾಮಕ್ರೋಧಲೋಭಗಳು ಆತ್ಮನಾಶಕಗಳೆಂಬ ವಿಷಯದಲ್ಲಿ ಸಂದೇಹವಿಲ್ಲ. ಈ ಅಭಿಪ್ರಾಯವನ್ನು ವೀರಶೈವರ ವಚನಶಾಸ್ತ್ರಕಾರರು ಹೇಗೆ ಅನುಮೋದಿಸಿರುವರು ನೋಡಿರಿ—

“ ಆಶೆಯುಳ್ಳಾತ ಒಬ್ಬರಾಧೀನದಲ್ಲಿಪ್ಪನು. ಆಶೆಯ ಮನದ ಕೊನೆಯನರಿದಾತ ಕೈಲಾಸದಾಚೆಯಲ್ಲಿಪ್ಪನೆಂದಾತ ನಮ್ಮ ಅಂಬಿಗರ ಚೌಡಯ್ಯನು.”

ಆಶೆಯೊಂದಕ್ಕೆ ದಾಸರಾದರೆ ಸಮಸ್ತಲೋಕಕ್ಕೂ ದಾಸರಾದಂತಾಯಿತೆಂಬುದನ್ನು ಸಂಬುವದಕ್ಕೆ ಸಾಧಕವಾಗಿ ಆಶೆಯನ್ನು ಒಬ್ಬ ಕವಿಯು ತನ್ನ ಆಲಂಕಾರಿಕಭಾಷೆಯಲ್ಲಿ ವರ್ಣಿಸಿರುವದೇನೆಂದರೆ—

“ ಗಿರಿರ್ಮಹಾನ್ಗಿರೇರಬ್ಧಿರ್ಮಹಾನಬ್ಧೇರ್ನಭೋ ಮಹತ್ ।
ನಭಸೋऽಪಿ ಮಹದ್ಬ್ರಹ್ಮ ತತೋಽಪ್ಯಾಶಾ ಗರೀಯಸೀ ॥ ”

ನಮಗೆ ಕಾಣುವ ವಸ್ತುಗಳಲ್ಲಿ ಸಾಮಾನ್ಯವಾಗಿ ಪರ್ವತವು ದೊಡ್ಡದು; ಪರ್ವತಕ್ಕಿಂತಲೂ ಸಮುದ್ರವು ದೊಡ್ಡದು; ಸಮುದ್ರಕ್ಕಿಂತಲೂ ಆಕಾಶವು ದೊಡ್ಡದು; ಇದು ಎಲ್ಲರಿಗೂ ಗೊತ್ತೇ ಇದೆ. ಆಕಾಶಕ್ಕಿಂತಲೂ ಬ್ರಹ್ಮ ದೊಡ್ಡದು; ಏಕೆಂದರೆ ಬ್ರಹ್ಮವು ಆಕಾಶದ ಜನ್ಮಸ್ಥಾನ; ಆಶೆಯೆಂಬುವದು ಆ ಬ್ರಹ್ಮಕ್ಕಿಂತ ದೊಡ್ಡದು. ಹೀಗೆಂದಮೇಲೆ ಆಶೆಗೆ

ದಾಸನಾದವನು ಸರ್ವಲೋಕಕ್ಕೂ ದಾಸನೆಂಬುವದಕ್ಕಡ್ಡಿಯೇನು ? ಆಶೆಯ ಈ ಅಪಾರತ್ವವನ್ನು ಶ್ರೀಸರ್ಪಭೂಷಣಶಿವಯೋಗಿಗಳೂ ತಮ್ಮ ಕೈವಲ್ಯಕಲ್ಪವಲ್ಲರಿಯಲ್ಲಿ ವರ್ಣಿಸಿದ್ದಾರೆ.

ರಾಗ—ಭೂಪಾಳಿ.

ಎಲ್ಲಿಗಾಶೆಗೆ ಪಾರವೆತ್ತ ಮನುಜ ಬಾರದುದ ।
ಕೆಲ್ಲ ಹರಿಯುವ ಮನವ ಸೆಳೆದಾಳು ಕಂಡ್ಯಾ ॥ ಪ ॥

ಒಂದು ಬರೆ ಪತ್ತನದು ಬರೆ ನೂರನದು ಬರಲು ।
ಮುಂದೆ ಸಾವಿರಲಕ್ಷಕೋಟಿಗೆಳಸುವದು ॥
ಎಂದಿಗೂ ತನಗಂತ್ಯವಿಲ್ಲೆನಿಸುತಾ ಯಕ್ಷ ।
ನೊಂದೊಂದು ನಿಧಿಯ ಧನಗಳನೆಣಿಸುತಿಹುದು ॥ ೧ ॥

ತುರಗವನು ಬಯಸುವುದದು ದೊರಕೆ ದಂಡಿಗೆಗೆಳಸು ।
ತಿರುವದದು ಬರಲು ರಥಕೊಲಿವುದದು ಸಿಕ್ಕೆ ॥
ಕರಿಯನಿಚ್ಛಿಸುವುದದ ಶಿವನೀಯ ಪುಷ್ಪಕದಿ ।
ಮೆರೆಯಬೇಕೆಂದು ಯೋಚನೆಯ ಮಾಡುವದು ॥ ೨ ॥

ತಿರಿಯಲಾರದೆ ಧೊರೆತನವ ಬೇಳ್ಪುದೊದಗಲದು ।
ಸುರಪತಿಯ ನೆನೆವುದದನುಣ್ಣುತಜಪದಕೆ ॥
ಹರಿವುದದ ಜರಿದು ವೈಕುಂಠವಾಳುತ ಮುಂದೆ ।
ಹರಪಟ್ಟದಾಚೆಗೇನಿಹುದೆನ್ನುತಿಹುದು ॥ ೩ ॥

ಕರಣದೊಳು ಹುದುಗಿರ್ದ ಸಂಕಲ್ಪಗಳು ಮುಳಿಗಿ ।
ಮುರಳ್ದೀಳೆ ಮೊರೆವಪೊಲು ಬರಿದೆ ಮೆರೆವೀ ॥
ಪರಿವಿಷಯವಾಸನೆಯ ಕಲ್ಪವರೆಗಳಿಯದೆನೆ ।
ಪರಿಭವಕೆ ಬೀಜವಾಶೆಯ ಬಿಟ್ಟರುಂಟೆ? ॥ ೪ ॥

ಆಶೆಯಂ ತೊರೆಯುತೆ ನಿರಾಶೆಯಿಂ ಸುಖವನುಣು ।
ವಾಸರ್ವಮುನಿಜನವ ನೆನೆದು ಮನವಿಡದೀ ॥
ಯಾಶೆಗೆ ಯಥಾಲಾಭಸಂತುಷ್ಟನಾಗಿ ಬಳಿ ।
ಕಾಶೆಯನು ಗುರುಸಿದ್ಧನೊಳಗಿಟ್ಟು ಸುಖಿಸೈ ॥ ೫ ॥

ಇಂದ್ರಿಯಾರ್ಥವಾದ ಆಶೆಯುಳ್ಳ ಮನುಷ್ಯನನ್ನು ಜನರು ಬಹು ದರಿದ್ರನೆಂದು ತಿಳಿಯುವರು. ಒಬ್ಬ ಮನುಷ್ಯನ ಐಶ್ವರ್ಯವು ಅವನಲ್ಲಿರುವ ಸಂಪತ್ತಿನ ಪ್ರಮಾಣದ ಮೇಲೆ ಸಿದ್ಧವಾಗುವದಿಲ್ಲ. ಒಬ್ಬನು ಲಕ್ಷಾಧೀಶನಾದರೂ ಅವನಿಗೆ ಇಂದ್ರಿಯಾರ್ಥವಾಗಿ ಹೆಚ್ಚಿನ ಆಶೆ ಇದ್ದರೆ ಅವನು ದರಿದ್ರನೆ. ಯಾರುಯಾರಿಗೆ ಎಷ್ಟೆಷ್ಟು ಹೆಚ್ಚಿನ ಆಶೆ ಇರುವದೋ ಅವರವರು ಅಷ್ಟಷ್ಟು ದರಿದ್ರರೆಂದು ಒಂದು ಭಾವನೆ ಇದೆ. ಇಂದ್ರಿಯಾರ್ಥವಾದ ಆಶೆಯು ದರಿದ್ರದ ಚಿಹ್ನೆ. ಒಂದೂರಲ್ಲಿ ಒಬ್ಬ ಧನಿಕಗೃಹಸ್ಥನಿದ್ದನು. ಅವನಿಗೆ ಒಂದು ದಿನ ಒಬ್ಬ ಸಂನ್ಯಾಸಿಯ ಅನುಗ್ರಹವನ್ನು ಸಂಪಾದಿಸಬೇಕೆಂಬ ಇಚ್ಛೆಯುಂಟಾಯಿತು. ಆ ಊರಲ್ಲಿದ್ದ ಒಬ್ಬ ಸಂನ್ಯಾಸಿಯು ಅಲ್ಲಲ್ಲಿ ಬಡವರ ಮನೆಗಳಲ್ಲಿಯೇ ತನ್ನ ಭಿಕ್ಷವನ್ನು ಪಡೆಯುತ್ತ ಒಳ್ಳೇ ಮಹಾತ್ಮನೆಂದು ಹೆಸರುಗೊಂಡಿದ್ದನು. ಧನಿಕಗೃಹಸ್ಥನು ಆ ಸಂನ್ಯಾಸಿಯನ್ನು ಒಂದು ದಿನ ಆದರಪೂರ್ವಕವಾಗಿ ಕರೆದು ಉಚ್ಚಾಸನದಲ್ಲಿ ಕೂಡಿಸಿ ಪೂಜಾಸಾಮಗ್ರಿಗಳನ್ನು ಸಿದ್ಧಮಾಡಿಕೊಂಡು ಪಾದಪೂಜೆಗಾರಂಭಿಸಿ ಪ್ರಾಣಾಯಾಮವನ್ನು ಮಾಡಿ ಕೊನೆಯಲ್ಲಿ

> “ ಆಯುರಾರೋಗ್ಯೈಶ್ವರ್ಯಾಭಿವೃದ್ಧ್ಯರ್ಥಂ, ಪುತ್ರಪೌತ್ರಾದಿಸಂತಾನ ಪ್ರಾಪ್ತ್ಯರ್ಥಂ, ಧರ್ಮಾರ್ಥಕಾಮಮೋಕ್ಷಾತ್ಮಕಚತುರ್ವಿಧಪುರುಷಾರ್ಥ ಸಿದ್ಧ್ಯರ್ಥಂ ”

ಎಂದು ಹೇಳಿ ಇನ್ನೂ ತನ್ನ ಆಶೆಗಳನ್ನೆಲ್ಲಾ ನೆನಪಿಗೆ ತಂದುಕೊಳ್ಳುವದಕ್ಕಾಗಿ ಮಾಳಿಗೆಯ ಕಡೆಗೆ ನೋಡುತ್ತಿದ್ದನು. ಆ ಸಂನ್ಯಾಸಿಯು ಒಡನೆ ಎದ್ದು ಅಲ್ಲಿಂದ ತನ್ನ ಹಾದಿಯನ್ನು ಹಿಡಿದನು. ಆಗ ಗೃಹಸ್ಥನು ಎದ್ದು ಬಂದು ಅವರನ್ನು ತಡೆದು ತನ್ನಿಂದಾದ ಅಪಚಾರವೇನೆಂದು ಕೇಳಲು ಆ ಸಂನ್ಯಾಸಿಯು “ ಈಗ ಅಪಚಾರದ ಪ್ರಶ್ನೆ ಇಲ್ಲ. ಭಿಕ್ಷುಕರ ಮನೆಯಲ್ಲಿ ಭಿಕ್ಷವನ್ನು ತೆಗೆದುಕೊಳ್ಳಬಾರದೆಂದು ನನ್ನ ಪ್ರತವಿದೆ. ನೀನು ನನ್ನೆದುರಿಗೇ ಲೆಕ್ಕವಿಲ್ಲದಷ್ಟು ಭಿಕ್ಷಗಳನ್ನು ಬೇಡುತ್ತೀಯಾದ್ದರಿಂದ ನಾನಿಲ್ಲಿರಲಾರೆನು ” ಎಂದು ಹೇಳಿ ಹೋದನಂತೆ. ನಾವು ಒಬ್ಬರಿಗೆ ಪೂಜ್ಯಬುದ್ಧಿಯನ್ನು ತೋರಿಸಬೇಕಾದರೆ ಅವರಲ್ಲಿರುವ ಪೂಜ್ಯತೆಗಾಗಿ ತೋರಿಸಬೇಕೇ

ಹೊರತು ನಮಗೆ ಅವರಿಂದ ಆಗಬೇಕಾದ ಐಹಿಕವಾದ ಫಲಗಳಿಗಾಗಿ ಅಲ್ಲ. ಫಲಗಳಿಗಾಗಿ ಪೂಜಿಸುವದು ವ್ಯಾಪಾರ. ದೇವರೊಡನೆ ನಮಗೆ ವ್ಯಾಪಾರವು ಸಲ್ಲದು. ದೇವರ ಮುಂದೆ ಕ್ಷುದ್ರವಾದ ಭೌತಿಕಫಲಕ್ಕಾಗಿ ಬಾಯಿನೀರು ಕರೆಯುವದು ಕೀಳುತನ. ದೇವರ ಪೂಜ್ಯತೆಗಾಗಿ ಪೂಜೆಯನ್ನು ಮಾಡಿದರೆ ಐಹಿಕಫಲಗಳು ತಾವಾಗಿ ಬಂದೇ ಬರುವವು. ಇದಕ್ಕಾಗಿ ದೇವರನ್ನು ಬೇಡುವದು ದಾರಿದ್ರ್ಯದ ಚಿಹ್ನವೆಂಬುದು ಮೇಲೆ ಹೇಳಿದ ಒಂದು ಕಟ್ಟುಕಥೆಯಿಂದ ತೆಗೆದ ನೀತಿಯಿಂದು ತಿಳಿಯಬಾರದು. “ ಕೃಪಣಾಃ ಫಲಹೇತವಃ ” ಎಂದು ಭಗವದ್ಗೀತೆಯು ಉದ್ಘೋಷಿಸುತ್ತದೆ. ತಾವು ಮಾಡುವ ಕರ್ಮಕ್ಕೆ ಫಲಾಶೆಯನ್ನು ಮಾಡುವವರೆಲ್ಲ ದೀನರೆಂದು ಆದರ ತಾತ್ಪರ್ಯ.

ಆಶೆಯ ವಿಷಯಕ್ಕೆ ಶ್ರೀರಾಮಕೃಷ್ಣಪರಮಹಂಸರು ಹೇಳಿರುವದೇನೆಂದರೆ—

(೧) ಆಶೆ ಎಂಬುದು ಒಂದು ಎಳ್ಳಷ್ಟು ಇದ್ದರೂ ದೇವರು ಕಾಣುವದಿಲ್ಲ. ಆದುದರಿಂದ ಅಪರಿಹಾರ್ಯವಾದ ಸಣ್ಣ ಸಣ್ಣ ಆಶೆಗಳನ್ನೆಲ್ಲಾ ಪೂರ್ತಿಮಾಡಿಕೊಂಡು ದೊಡ್ಡ ದೊಡ್ಡ ಆಶೆಗಳನ್ನು ಸಕಾರಣವಾದ ವಿಚಾರದಿಂದ ಬಿಟ್ಟುಬಿಡಬೇಕು.

(೨) ದಾರದ ಕೊನೆಯಲ್ಲಿ ಒಂದೆರಡು ಜುಂಗುಗಳು ಹೊರಟು ಕೊಂಡಿದ್ದರೂ ಅದು ಎಂದಿಗೂ ಸೂಜಿಯ ಕಣ್ಣಿನಲ್ಲಿ ಹೇಗೆ ತೂರಲಾರದೊ ಹಾಗೆ ಆಶೆಯ ವಾಸನೆ ಸ್ವಲ್ಪವಿದ್ದರೂ ಅವನಿಗೆ ಮುಕ್ತಿರಾಜ್ಯದ ದ್ವಾರದಲ್ಲಿ ಪ್ರವೇಶಿಸುವದಕ್ಕೆ ಆಗುವದಿಲ್ಲ.

ಆದ್ದರಿಂದ ಮನುಷ್ಯನು ಆಶೆಯನ್ನು ಮನಸ್ಸಿನಲ್ಲಿ ಬರಗೊಡದೆ ಇರಬೇಕು. ಮನಸ್ಸಿನಲ್ಲಿ ಆಶೆಗೆ ಅವಕಾಶವನ್ನು ಕೊಡದಿರುವದು ಸತ್ತ ಮೇಲೆಯೇ ಸರಿಯೆಂದು ತೋರಬಹುದು. ಅದಂತು ಸ್ವಭಾವವಾಗಿ ಆಗುವದಷ್ಟೆ. ನಾವು ಮನುಷ್ಯರಾದ್ದಕ್ಕೆ ಬದುಕಿರುವಾಗಲೇ ಆಶೆಯನ್ನು ಬಿಗಿಹಿಡಿಯುವದರಲ್ಲಿ ನಮ್ಮ ಪೌರುಷವನ್ನು ತೋರಿಸಬೇಕು.

“ ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ ।
ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥ ”

ಎಂದು ಭಗವದ್ಗೀತೆಯಲ್ಲಿದೆ. ದೇಹವು ಬಿದ್ದುಹೋಗುವದಕ್ಕೆ ಮುಂಚೆಯೇ ಕಾಮಕ್ರೋಧಗಳ ವೇಗವನ್ನು ತಡೆಯುವವನೇ ಯೋಗಿಯು; ಅವನೇ ಸುಖಿಯು; ಅವನೇ ಮನುಷ್ಯನು—ಎಂದು ಅದರ ತಾತ್ಪರ್ಯ. ಈ ರೀತಿಯಲ್ಲಿ ಆಶೆಯನ್ನು ತೊರೆದವನನ್ನು ಗೀತೆಯು "ತಮಾಹುಃ ಪಂಡಿತಂ ಬುಧಾಃ" ಎಂಬ ವಾಕ್ಯದಿಂದ ಪಂಡಿತನೆಂದು ಹೊಗಳಿರುವದು. ಅನೇಕಗ್ರಂಥಗಳ ಅರ್ಥವನ್ನು ತಿಳಿಯುವ ಪಾಂಡಿತ್ಯವು ಪಾಂಡಿತ್ಯವಲ್ಲ. ಅಂಥ ಪಂಡಿತರು ಬಹುಜನರಿರುವರು. ಇಂದ್ರಿಯಾರ್ಥವಾದ ಆಶೆಯನ್ನು ಬಿಗಿಹಿಡಿಯುವದೇ ನಿಜವಾದ ಪಾಂಡಿತ್ಯ. ಮನುಷ್ಯರಲ್ಲಿ ಪಂಡಿತನೆನಿಸಿಕೊಳ್ಳಬೇಕೆಂಬುವನು ಈ ಯೋಗ್ಯತೆಯನ್ನು ಪಡೆಯಬೇಕು.

## ಫಲತ್ಯಾಗದ ಹೆಚ್ಚುಗಾರಿಕೆ.

ಮನುಷ್ಯನು ಹಠದಿಂದ ಅನೇಕಬಗೆಯ ಅಭ್ಯಾಸಗಳನ್ನು ಸಾಧಿಸಬಹುದು; ವೇದಾಂತಶಾಸ್ತ್ರವನ್ನೆಲ್ಲಾ ನೀರುಕುಡಿದಂತೆ ಕಲಿಯಬಹುದು; ಮನಸ್ಸನ್ನು ಎಲ್ಲ ಕಡೆಯಿಂದಲೂ ಹಿಮ್ಮೆಟ್ಟಿಸಿ ಇಷ್ಟದೇವತೆಯಲ್ಲಿ ಏಕಾಗ್ರವಾಗಿ ಮಾಡಲೂಬಹುದು; ಕರ್ಮಫಲದ ಆಶೆಯನ್ನು ಬಿಡುವದೆಂದರೆ ಕಠಿನವಾಗುವದು. ಆದ್ದರಿಂದಲೇ ಭಗವದ್ಗೀತೆಯು—

ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।
ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಮ್ ॥

ಎಂದು ಹೇಳಿದೆ. ಹಠದಿಂದ ಮಾಡುವ ಅಭ್ಯಾಸಕ್ಕಿಂತಲೂ ವೇದಾಂತಶಾಸ್ತ್ರಜ್ಞಾನವು ಹೆಚ್ಚಿನದು; ಬರೀ ವೇದಾಂತಶಾಸ್ತ್ರಜ್ಞಾನಕ್ಕಿಂತಲೂ ಅದರಿಂದ ಕೂಡಿದ ಇಷ್ಟದೇವತೆಯ ಉಪಾಸನೆ ದೊಡ್ಡದು; ಆ ಉಪಾಸನೆಗಿಂತಲೂ ಕರ್ಮಫಲತ್ಯಾಗವು ಮೇಲಾದುದು. ಏಕೆಂದರೆ ಕರ್ಮಫಲತ್ಯಾಗವಾದ ಮೇಲೆ ಶಾಂತಿಗೆ ತಡವೇ ಇಲ್ಲ. ಅಭ್ಯಾಸ ಮೊದಲಾದವುಗಳೆಲ್ಲಾ ಕೈಗೂಡಿದರೂ ಶಾಂತಿಯುಂಟಾಗುವದಕ್ಕೆ ಮೊದಲು ಕರ್ಮಫಲತ್ಯಾಗವಾಗಬೇಕು. ಮುಖ್ಯವಾದ ಆ ತ್ಯಾಗವು ಸಾಧ್ಯವಾಗಿಬಿಟ್ಟರೆ ಶಾಂತಿಯು ಕರತಲಾಮಲಕವಾಗುವದು. ಇದು ಸಾಮಾನ್ಯವಾಗಿ ಕರ್ಮದ ಸ್ವಭಾವವು. ಕರ್ಮವು ಬಂಧ

ಕವಾಗಿದ್ದರೂ ಫಲಾಶೆಯನ್ನು ಬಿಟ್ಟರೆ ಅದರ ಬಂಧಕತ್ವವು ಹಾರಿಹೋಗುವದು. ಹಾವಿನ ಸ್ವಭಾವವು ಕಡಿಯುವದೆಂಬುದು ಸಹಜವಾಗಿದೆ. ಆದರೆ ಅದರ ವಿಷದ ಹಲ್ಲನ್ನು ಕಿತ್ತಮೇಲೆ ಅದರ ಬಂಧಕಗುಣವು ಹೋಗಿ ಅದು ಹಾವಾಡಿಗನ ಜೀವನೋಪಾಯಕ್ಕೆ ಸಾಧಕವಾಗುತ್ತದೆ. ಕರ್ಮವು ಹಾವಿನಂತೆ. ಫಲಾಶೆಯುಳ್ಳವರಿಗೆ ಅದು ತನ್ನ ವಿಷವನ್ನೇರಿಸದೆ ಬಿಡುವದಿಲ್ಲ.

“ ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಃ ಕರ್ಮಣಃ ಫಲಮ್ ।

ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥ ”

ಎಂದು ಗೀತೆಯು ಹೇಳಿರುವದು. ಒಳ್ಳೆಯ ಫಲವಾಗಲಿ ಕೆಟ್ಟ ಫಲವಾಗಲಿ ಎರಡೂ ಬೆರೆತ ಫಲವಾಗಲಿ ಈ ಮೂರುಬಗೆಯ ಫಲಗಳೂ ಫಲಾಶೆಯುಳ್ಳವರಿಗೆ ಗಂಟುಬೀಳುವವೇ ಹೊರತು ಫಲತ್ಯಾಗಿಗಳಿಗೆ ಎಳ್ಳಷ್ಟೂ ಇಲ್ಲ.

ನಿಷ್ಕಾಮಕರ್ಮದ ವಿಷಯದಲ್ಲಿ ನಮ್ಮ ವೀರಶೈವವಚನಶಾಸ್ತ್ರಕಾರರ ಉಪದೇಶವನ್ನು ಕೇಳಿರಿ—

(೧) ಫಲಪದದ ಆಶೆವಾಡಲಾಗದು ನಿನ್ನ ಕ್ರಿಯೆಯಲ್ಲಿ. ಅದೇನು ಕಾರಣವೆಂದರೆ ಬಯಕೆಯು ಭಕ್ತಿಯ ಪೂರ್ವಪುರಾತನರು ಮೆಚ್ಚರು. ನಮ್ಮ ಅಖಂಡೇಶ್ವರ ದೇವರು ಹಂಗಿನ ಭಕ್ತರನೊಲ್ಲ ನೋಡಾ.

(೨) ಒಕ್ಕಿ ಹಣ್ಣುಮಾಡಿದಡೆ ಅದೆತ್ತಣ ರುಚಿಯಪ್ಪುದೋ? ಕಾಸಿಸಿ, ಕಲ್ಪಿಸಿ ಭಾವಿಸಿದಡೆ ಭಂಗ. ಭಾವಿಸುವ ಭಾವನೆಯಿಂದ ಸಾವುದೇ ಲೇಸು ಗುಹೇಶ್ವರಾ.

(೩) ಮಾಡಿ, ನೀಡಿ, ಹೋಹನೆ ಬಾಗ, ಕೈಲಾಸವೇನು ಕೈಕೂಲಿಯೋ ? ಮುಂದೊಂದು ಕಲ್ಪಿಸದೆ, ಹಿಂದೊಂದು ಭಾವಿಸದೆ, ನಲೆ ನಿಂದಿದ್ದಾಗಳೇ, ಮಾರಯ್ಯಪ್ರಿಯ ಅಮಲೇಶ್ವರಲಿಂಗವಿದ್ದ ಕೈಲಾಸ.

(೪) ಫಲಪದಾದಿಗಳ ಭಕ್ತರಿಗೆ ಕೊಟ್ಟಹೆನೆಂಬೆ. ಅವರದನೊಲ್ಲರು. ಅವರು ನಿನಗೆ ನಿನ್ನ ರೂಪಿಂಗೆ ತನುಮನಧನಗಳ ಕೊಡುವರು. ಎಲೆ ವಂಚಕನಾದ ಶಿವನೇ, ನಿರ್ವಂಚಕರೆನ್ನುವರು ನಿನ್ನನೇನ ಬೇಡುವರು? ನೀನೇನವರಿಗೆ ಕೊಡುವೆ? ನಿನ್ನ ಕುಡ ನಮ್ಮವರೊಲ್ಲರು ಕಾಣಾ. ಕುಡಕೊಡದೆ ಹೋಗು. ಕಪಿಲಸಿದ್ಧಮಲ್ಲಿಕಾರ್ಜುನಾ.

## ಕರ್ಮದ ಮೋಕ್ಷಕಾರಣತ್ವ.

ಮೊದಲು ಬಂಧಕವೆಂದು ಹೇಳಿದ್ದ ಕರ್ಮವೇ ಈಗ ಮೋಕ್ಷಕ್ಕೆ ಕಾರಣವಾಗುವದೆಂಬ ಮಾತು ವಿಚಿತ್ರವಾಗಿ ತೋರಬಹುದು. ಇದು ಬರೀ ನಿರಾಧಾರವಾದ ಮಾತಲ್ಲ.

"ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ"

ಎಂದು ಗೀತೆಯೂ ಹೇಳುತ್ತದೆ. ಎಲ್ಲಾ ಶಾಸ್ತ್ರವಚನಗಳೂ ಈ ಅರ್ಥವನ್ನು ಪೋಷಿಸುತ್ತವೆ. ಇಲ್ಲಿ ಸಂನ್ಯಾಸವೆಂದರೆ ಫಲತ್ಯಾಗವೆಂದರ್ಥ. ಫಲತ್ಯಾಗದಿಂದ ಮುಕ್ತಿ ದೊರೆಯುವದು. ಕರ್ಮದಿಂದಾದ ಬಂಧವನ್ನು ಕರ್ಮಯೋಗವು ಕಳೆಯುವದೆಂಬ ಭಾವನೆಯು ಯುಕ್ತಿಗೂ ಹೊಂದುತ್ತದೆ. ಒಬ್ಬನಿಗೆ ಅತಿಸಾರವೆಂಬ ರೋಗವು ಬಂದಿದ್ದರೆ, ಅವನಿಗೆ ಭೇದಿಯೇ ಮಿತಿಮೀರಿ ಆಗುತ್ತಿದ್ದರೂ, ಮರ್ಮಜ್ಞನಾದ ವೈದ್ಯನು ಆ ಅತಿಸಾರವನ್ನು ಕಳೆಯುವದಕ್ಕೆ ಮತ್ತೆ ಭೇದಿಯ ಔಷಧವನ್ನೇ ಕೊಡುತ್ತಾನೆ. ಪಾತ್ರೆಯ ಮೇಲೆ ಹೊಲಸು ಹತ್ತಿದ್ದರೆ ಅದರ ಮೇಲೆ ಮತ್ತಷ್ಟು ಬೂದಿಯನ್ನು ಹಾಕಿ ತಿಕ್ಕಿದರೆ ಆ ಬೂದಿಯು ಮೊದಲಿನ ಕೊಳೆಯನ್ನು ಕಳೆಯುತ್ತದೆ.

ಬೂದಿಯಿಂದ ತಿಕ್ಕೋಣವು ಪಾತ್ರೆಗೆ ಹತ್ತಿಕೊಂಡಿದ್ದ ಕೊಳೆಯನ್ನು ಹೇಗೆ ಕಳೆಯುವದೋ ಹಾಗೆ ನಿಷ್ಕಾಮಕರ್ಮವೆಂಬುವದು ಶರೀರಕ್ಕೂ ಮನಸ್ಸಿಗೂ ಹತ್ತಿಕೊಂಡಿದ್ದ ಕೊಳೆಯನ್ನು ಕಳೆಯುವದು. ನಿಷ್ಕಾಮಕರ್ಮವೆಂಬುದೊಂದು ತಪಶ್ಚರ್ಯೆ. ಅದರಿಂದ ಮನಸ್ಸಿನಲ್ಲಿರುವ ದೋಷಗಳೆಲ್ಲಾ ಸುಟ್ಟುಹೋಗಿ ಮನಸ್ಸು ಮೊದಲಿಗಿಂತ ಹೆಚ್ಚು ಸ್ವಚ್ಛವಾಗುವದು. ಮನಸ್ಸು ಸ್ವಚ್ಛವಾಗುತ್ತಲೇ ಅದರಲ್ಲಿ ಸತ್ಯವಾದ ತತ್ತ್ವಗಳು ಒಡೆದು ಮೂಡುವವು. ಈಗ ನಮ್ಮ ಮನಸ್ಸಿನಲ್ಲಿ ಕಾಮಕ್ರೋಧರೂಪವಾದ ಕಲ್ಮಷಗಳು ಹತ್ತಿಕೊಂಡಿರುವದರಿಂದ ನಾವು ಪಶುತ್ವದಿಂದ ಮೇಲಕ್ಕೇರಲು ಅಡ್ಡಿಯಾಗಿದೆ. ಫಲತ್ಯಾಗರೂಪವಾದ ತಪಶ್ಚರ್ಯೆಯಿಂದ ಮನಸ್ಸು ಶುದ್ಧವಾಗುವದರಿಂದ ಆ ಕರ್ಮವು ಮೋಕ್ಷಕ್ಕೆ ಕಾರಣವಾಗುವದು.

## ನಿತ್ಯಕರ್ಮಗಳು.

ನಿಷ್ಕಾಮಕರ್ಮವು ಮೋಕ್ಷಕ್ಕೆ ಸಾಧನವಾಗುವದಾದರೆ ಆ ಕರ್ಮವು ಯಾವದೆಂಬದನ್ನು ತಿಳಿದುಕೊಳ್ಳಬೇಕು. ಯಾವ ಕರ್ಮಕ್ಕೆ ಸಾಮಾನ್ಯವಾಗಿ ಫಲೇಚ್ಛೆಯುಂಟಾಗುವ ಸಂಭವವುಂಟೋ ಆ ಕರ್ಮವನ್ನು ಫಲೇಚ್ಛೆಯಿಲ್ಲದೆ ಮಾಡುವದೇ ನಿಷ್ಕಾಮಕರ್ಮ. ಕರ್ಮಗಳಲ್ಲಿ ಲೌಕಿಕವೆಂದೂ ವೈದಿಕವೆಂದೂ ಎರಡುಬಗೆಗಳಿವೆ. ಲೌಕಿಕವೆಂದರೆ ಜಗತ್ತಿನಲ್ಲಿ ನಮ್ಮ ಬಾಳು ನೆಟ್ಟಗೆ ನಡೆಯುವದಕ್ಕಾಗಿ-ನಮ್ಮ ಹೊಟ್ಟೆಬಟ್ಟೆಗಳ ಸಮೃದ್ಧಿಗಾಗಿ- ನಡೆಸುವ ಕೆಲಸಗಳು. ತನ್ನ ಜೀವನಕ್ಕಾಗಿ ಉದ್ಯೋಗವನ್ನು ಮಾಡುವ ಪ್ರವೃತ್ತಿಯು ಸಹಜವಾಗಿಯೇ ಪ್ರತಿಯೊಬ್ಬನಿಗೂ ಉಂಟಾಗುವದರಿಂದ ಜೀವನಾರ್ಥವಾದ ಉದ್ಯೋಗವನ್ನು ಮಾಡಬೇಕೆಂಬ ವಿಷಯದಲ್ಲಿ ವೇದವು ವಿಧಿಸುವದಕ್ಕೆ ಹೋರಟಿಲ್ಲ. ವೈದಿಕವೆಂದರೆ ಮನಸ್ಸು ಶುದ್ಧವಾಗಿ ಮನುಷ್ಯನು ದೇವರ ಅನುಗ್ರಹಕ್ಕೆ ಪಾತ್ರನಾಗಬೇಕಾದರೆ ಯಾವ ಬಗೆಯ ಕರ್ಮಗಳನ್ನು ಮಾಡಬೇಕೆಂದು ವೇದಶಾಸ್ತ್ರಗಳಲ್ಲಿ ಹೇಳಿದೆಯೋ ಅದು. ಇದರ ವಿಚಾರವು ಸಾಮಾನ್ಯವಾಗಿ ಜನರ ಮನಸ್ಸಿಗೆ ಹೊಳೆಯುವ ಸಂಭವವಿರುವದಿಲ್ಲವಾದ್ದರಿಂದ ಇದನ್ನು ಹೇಳುವ ಭಾರವನ್ನು ವೇದವು ತೆಗೆದುಕೊಂಡಿರುವದು. ಹೀಗೆ ಕರ್ಮಗಳಲ್ಲಿ ಎರಡುಬಗೆಗಳಿದ್ದರೂ ಎರಡನ್ನೂ ಫಲೇಚ್ಛೆಯಿಲ್ಲದೆ ಮಾಡುವ ಅಭ್ಯಾಸವನ್ನು ಮಾಡಬೇಕು. ಲೌಕಿಕ ಕರ್ಮವನ್ನು ಫಲೇಚ್ಛೆಯಿಲ್ಲದೆ ಮಾಡಿದರೂ ಅದರಿಂದ ಚಿತ್ತಶುದ್ಧಿಯಾಗಿಯೇ ಆಗುವದು. ಆದರೆ ಶಾಸ್ತ್ರದ ಒಲವು ವೈದಿಕಕರ್ಮಗಳ ಕಡೆಗೆ ಹೆಚ್ಚು. ಏಕೆಂದರೆ ಅದರ ವಿಷಯವು ಧರ್ಮವೇ ಹೊರತು ವ್ಯವಹಾರವಲ್ಲ. ವೈದಿಕಕರ್ಮಗಳಲ್ಲಿ ಎಷ್ಟೋ ಕರ್ಮಗಳು ಫಲೇಚ್ಛೆಯುಳ್ಳವುಗಳಿವೆ. ಸ್ವರ್ಗವನ್ನಪೇಕ್ಷಿಸುವವನು ಅಗ್ನಿಷ್ಟೋಮವನ್ನು ಮಾಡಬೇಕು. ಮಕ್ಕಳನ್ನಪೇಕ್ಷಿಸುವವನು ಪುತ್ರಕಾಮೇಷ್ಟಿಯನ್ನು ಮಾಡಬೇಕು. ಇವೆಲ್ಲಾ ಆ ಜಾತಿಯವುಗಳು. ಇನ್ನೂ ಎಷ್ಟೋ ವ್ರತಗಳಿವೆ. ಇವೆಲ್ಲಾ ಫಲೇಚ್ಛೆಯಿಂದ ಮಾಡತಕ್ಕವುಗಳೇ. ಇವುಗಳಿಗೆಲ್ಲಾ ಕಾಮ್ಯಕರ್ಮಗಳೆಂದು ಹೆಸರು. ಹೀಗೆ ಈ ಕರ್ಮಗಳಿಗೆ ಫಲಗಳಿದ್ದರೂ ಫಲದ ಕಡೆಗೆ ಕಣ್ಣುಹಾಕದೆ ಅವುಗಳನ್ನು ಮಾಡುವದೂ ಉಂಟು. ಆಗ ಅವು ನಿಷ್ಕಾ

ು ಕರ್ಮಗಳೆನಿಸುವವು.

ವೇದದಲ್ಲಿ ಇನ್ನೊಂದು ಬಗೆಯ ಕರ್ಮಗಳಿವೆ. ಅವು ಸ್ವಭಾವ ಾಗಿಯೇ ನಿಷ್ಕಾಮಕರ್ಮಗಳಿದ್ದ ಹಾಗೆ ಇವೆ. ಅವುಗಳಿಗೆ ಯಾವ ಾಕಿಕಫಲವೂ ಇಲ್ಲ. ಅವು ದೇವರ ಮೇಲಿನ ಪೂಜ್ಯಬುದ್ಧಿಯಿಂದ ಾತ್ರ ಮಾಡತಕ್ಕವುಗಳು. ಇವುಗಳಿಗೆ ನಿತ್ಯಕರ್ಮಗಳೆಂದು ಹೆಸರು. ತ್ಯಕರ್ಮಗಳೆಂದರೆ ಪ್ರತಿದಿನವೂ ಮಾಡಬೇಕಾದ ಕರ್ಮಗಳೆಂದೂ ಎಂದೂ ಡಬಾರದ ಕರ್ಮಗಳೆಂದೂ ಅರ್ಥ. ಇವುಗಳಿಗೆ ಲೌಕಿಕವಾದ ಪ್ರಯೋ ನವು ಇಲ್ಲವಾದ ಕಾರಣ ಪ್ರಾಪಂಚಿಕಜನರು ಇದನ್ನು ಉಪೇಕ್ಷೆಮಾ ಬಹುದೆಂದು ಯೋಚಿಸಿ ವೇದಶಾಸ್ತ್ರಗಳು ಈ ವಿಷಯದಲ್ಲಿ ಎಚ್ಚರಿಕೆ ುನ್ನು ಕೊಡುವವು.

"ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ"

ಂದು ಗೀತೆಯು ಹೇಳುವದು. ನಿತ್ಯಕರ್ಮವನ್ನು ಬಿಡುವದು ಯೋಗ್ಯ ಲ್ಲವೆಂದು ಇದರ ತಾತ್ಪರ್ಯ. ನಿತ್ಯಕರ್ಮಗಳು ಬೇರೆಬೇರೆ ವರ್ಣಾಶ್ರಮ ವರಿಗೆ ಬೇರೆ ಬೇರೆ ಇವೆ. ಇವುಗಳನ್ನು ಶಾಸ್ತ್ರದಿಂದ ತಿಳಿದುಕೊಳ್ಳ ೇಕು ಅಥವಾ ಮನೆಗಳಲ್ಲಿ ಸಂಪ್ರದಾಯಪ್ರಿಯರಾದ ಹಿರಿಯರ ಆಚರ ಗಳಿಂದ ಗ್ರಹಿಸಬಹುದು. ಈ ನಿತ್ಯಕರ್ಮಗಳು ಮನುಷ್ಯನೊಡನೆಯೇ ುಟ್ಟಿಬಂದವುಗಳು.

"ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।
ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥"

ಂದು ಗೀತೆಯು ಹೇಳಿರುವದು. ಬ್ರಹ್ಮನು ದೇವತಾರ್ಥವಾಗಿ ಮಾಡ ೇಕಾದ ಕರ್ಮಗಳೊಡನೆ ಪ್ರಜೆಗಳನ್ನು ಸೃಷ್ಟಿಮಾಡಿದಾಗಲೆ "ಹೆ, ಪ್ರಜೆ ಳಿರಾ, ಈ ದೇವಪ್ರೀತ್ಯರ್ಥವಾದ ಯಜ್ಞಗಳಿಂದ ನೀವು ಇಷ್ಟಾರ್ಥಗ ನ್ನೆಲ್ಲಾ ಪಡೆಯಿರಿ" ಎಂದು ಹೇಳಿದ್ದಾನೆ. ಪ್ರತಿದಿನವೂ ನಾವು ನಮ್ಮ ರ್ತವ್ಯವೆಂದು ದೇವತೆಗಳನ್ನು ಆರಾಧಿಸಬೇಕು; ದೇವತೆಗಳು ತಮ್ಮ ರ್ತವ್ಯವೆಂದು ಮಳೆಬೆಳೆಗಳನ್ನು ಕೊಡಬೇಕು. ಹೀಗೆ ಒಬ್ಬರಿಗೊಬ್ಬರು ಹಾಯಕರಾಗಿ ಹೆಚ್ಚಿನ ಶ್ರೇಯಸ್ಸನ್ನು ಪಡೆಯಬೇಕು. ಈ ಯಜ ಳು ಮನುಷ್ಯನ ಚಿತ್ತಶುದ್ಧಿಗಾಗಿಯೇ ಏರ್ಪಟ್ಟಿದ್ದರೂ ಇವುಗಳನ್ನು

ಬಿಡುವದರಿಂದ ಆ ಚಿತ್ತಶುದ್ಧಿಯಾಗುವದು ಹಿಂದುಳಿಯುವದೆಂಬುದಂತು ಸರಿಯಷ್ಟೆ.

"ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ"

ಎಂಬ ಗೀತೋಕ್ತ್ಯನುಸಾರವಾಗಿ ಯಜ್ಞವನ್ನು ಮಾಡದವನಿಗೆ ಈ ಲೋಕದ ಸುಖವೇ ಇಲ್ಲ; ಪರಲೋಕದ ಸುಖವೆಲ್ಲಿಯದು? ಯಜ್ಞಗಳು ಐದು. (೧) ಬ್ರಹ್ಮಯಜ್ಞ– ದೇವರ ವಿಷಯಕವಾದ ವಿದ್ಯೆಯನ್ನು ತಾನೂ ಓದುವದು ಮತ್ತು ಇತರರಿಗೂ ಹೇಳಿಕೊಡುವದು. (೨) ದೇವಯಜ್ಞ–ದೇವರ ಧ್ಯಾನ ಮತ್ತು ಪೂಜೆ. (೩) ಪಿತೃಯಜ್ಞ– ಸತ್ತು ಹೋಗಿರುವ ತಾಯ್ತಂದೆಗಳ ಆರಾಧನೆ. (೪) ಮನುಷ್ಯಯಜ್ಞ - ಮನೆಗೆ ಬಂದವರನ್ನು ಆದರಿಸುವದು ಮತ್ತು ಬಡಬಗ್ಗರಿಗೆ ಸಹಾಯಮಾಡುವದು. (೫) ಭೂತಯಜ್ಞ– ಪಶುವರ್ಗಕ್ಕೆ ಗ್ರಾಸವನ್ನು ಹಾಕುವದು.

ಶಾಸ್ತ್ರದಲ್ಲಿ ಹೇಳಿದ ಕೆಲವು ವರ್ಣಾಶ್ರಮೋಚಿತಕರ್ಮಗಳನ್ನು ತಪ್ಪದೆ ನಡೆಸಬೇಕೆಂದರೆ ತಕ್ಕ ಅನುಕೂಲಪರಿಸ್ಥಿತಿ ಇಲ್ಲವೆಂದು ಯಾರಾದರೂ ಹೇಳಬಹುದು. ಇದೂ ನಿಜ. ಬ್ರಾಹ್ಮಣನು ಮಾಡಬೇಕಾದ ತಪಸ್ಸಿಗೂ ಕ್ಷತ್ರಿಯನು ಮಾಡಬೇಕಾದ ಯುದ್ಧಕ್ಕೂ ವೈಶ್ಯನು ಮಾಡಬೇಕಾದ ಗೋರಕ್ಷಣೆ, ವ್ಯಾಪಾರ- ಮೊದಲಾದವುಗಳಿಗೂ ಈಗ ಗ್ರಹಣಕಾಲವೆಂಬುದೂ ಎಲ್ಲರೂ ಒಪ್ಪತಕ್ಕದ್ದೆ. ಆದರೆ ವಿಶೇಷವಾಗಿ ವ್ಯವಹಾರಕ್ಕೆ ಸಂಬಂಧಪಟ್ಟ ಈ ಉದ್ಯೋಗಗಳ ವಿಷಯವಾಗಿ ಶಾಸ್ತ್ರದಲ್ಲಿ ವಿಧಿಸಿರುವ ಪದ್ಧತಿಯು ಆದರ್ಶಸ್ವರೂಪವಾದದ್ದು. ಆದಷ್ಟು ಮಟ್ಟಿಗೆ ಅದರಂತೆ ನಡೆಯುವದೇ ಶ್ರೇಯಸ್ಕರವು. ಪರಿಸ್ಥಿತಿಯು ಬದಲಾಗಿರುವಾಗ ಮನುಷ್ಯನು ಆಯಾಕಾಲದ ಪರಿಸ್ಥಿತಿಗೆ ತನಗೆ ತನಗೆ ಹೊಂದುವಂತೆ ಬೇಕುಬೇಕಾದ ಉದ್ಯೋಗವನ್ನು ಮಾಡಬಹುದು. ವ್ಯಾವಹಾರಿಕವಾದ ಉದ್ಯೋಗಗಳಿಗೆ ಶಾಸ್ತ್ರದ ವಿಧಿಯು ಕಟ್ಟು ಮಣಿಸಂಟಾಗಿರುವದಿಲ್ಲ. ಪರಾಶರಸ್ಮೃತಿಯಲ್ಲಿ ನೋಡಿರಿ–

"ಕುಸೀದಕೃಷಿವಾಣಿಜ್ಯಂ ಪ್ರಕುರ್ವೀತ ಸ್ವಯಂಕೃತಂ ।
ಆಪತ್ಕಾಲೇ ಸ್ವಯಂ ಕುರ್ವನ್ನೈನಸಾ ಯುಜ್ಯತೇ ದ್ವಿಜಃ॥"

"ದ್ವಿಜನಾದವನು ಆಪತ್ಕಾಲದಲ್ಲಿ ನಿರ್ದಾಕ್ಷಿಣ್ಯದ ಬಡ್ಡಿಯ ಸಂಪಾದನೆ,

ವ್ಯವಸಾಯ, ವ್ಯಾಪಾರ- ಇವುಗಳನ್ನು ತಾನೇ ಮಾಡಬಹುದು; ಇದರಿಂದ ಅವನಿಗೇನೂ ದೋಷವಿಲ್ಲ." ಇದೇ ಅರ್ಥವನ್ನೇ ಭಾಗವತಕಾರರ

"ಸೀದನ್ವಿಪ್ರೋ ವಣಿಗ್ವೃತ್ತ್ಯಾ ಪಣ್ಯೈರೇವಾಪದಂ ತರೇತ್ ।
ಖಡ್ಗೇನ ವಾ ಪದಾಕ್ರಾಂತೋ ನ ಶ್ವವೃತ್ತ್ಯಾ ಕಥಂ ಚ ನ ॥"

ಎಂಬ ಶ್ಲೋಕದಿಂದ ಹೇಳಿದ್ದಾರೆ. ಬ್ರಾಹ್ಮಣನು ಆಪತ್ಕಾಲದಲ್ಲಿ ಅಹಿಂಸಾಪ್ರಧಾನವಾದಂಥ ವ್ಯಾಪಾರಾದಿಗಳಿಂದ ಜೀವನವನ್ನು ಸಾಗಿಸಬೇಕು; ಅದೂ ಸಾಲದೆ ಹೋದರೆ ಹಿಂಸಾಪ್ರಧಾನವಾದ ಕ್ಷಾತ್ರಧರ್ಮದಿಂದ ಬಾಳಿದರೂ ಬಾಧಕವಿಲ್ಲ. ನಾಯಂತೆ ತನ್ನ ಮನಸ್ಸನ್ನೇ ಕಳೆದುಕೊಂಡು ಇತರರ ಮನಸ್ಸನ್ನೆ ಅನುವರ್ತಿಸುತ್ತಾ ಸೇವೆಯನ್ನು ಮಾಡಿಕೊಂಡು ಬದುಕಬಾರದು. ಜಗತ್ತು ಬದಲಾಗುತ್ತ ಹೋಗುವ ಸ್ವಭಾವದ್ದಾದ್ದರಿಂದ ವ್ಯಾವಹಾರಿಕವಾದ ಉದ್ಯೋಗಗಳಲ್ಲಿ ಹೀಗೆ ಬದಲುಮಾಡಿಕೊಳ್ಳಬಹುದು. ದೇವರು ಯಾವಾಗಲೂ ಏಕರೂಪವಾಗಿರುವದರಿಂದ ದೇವತಾಪ್ರೀತ್ಯರ್ಥವಾದ ಕರ್ಮಗಳಲ್ಲಿ ಹೆಚ್ಚುಕಡಿಮೆಯನ್ನು ಮಾಡುವದಕ್ಕೆ ಬರುವದಿಲ್ಲ. ಆದ್ದರಿಂದ ನಿತ್ಯಕರ್ಮಗಳನ್ನು ಪ್ರತಿಯೊಬ್ಬನೂ ಅಗತ್ಯವಾಗಿ ಮಾಡಬೇಕು.

ನಿತ್ಯಕರ್ಮಗಳ ಅಗತ್ಯವು ಇನ್ನೂ ಹೆಚ್ಚು ಒತ್ತಿ ಹೇಳತಕ್ಕದ್ದಾಗಿದೆ. ಒಬ್ಬನು ನಿತ್ಯಕರ್ಮಗಳನ್ನು ಮಾಡಿಮಾಡಿ ಚಿತ್ತಶುದ್ಧಿಯನ್ನು ಸಂಪಾದಿಸಿ ಮನುಷ್ಯತ್ವವನ್ನು ಸಾರ್ಥಕಮಾಡಿಕೊಂಡಿದ್ದಾನೆಂದು ಭಾವಿಸೋಣ. ಅವನಿಗೆ ನಿತ್ಯಕರ್ಮಗಳ ಅಗತ್ಯವೇನೂ ತೋರದೆ ಹೋಗಬಹುದು. ಆದರೂ ಕೂಡ ಅವನು ಮಾಡುತ್ತಿರುವದುತ್ತಮವೆಂದು ಶಾಸ್ತ್ರದ ತಾತ್ಪರ್ಯವಿದೆ. ಮಹಾಭಾರತಯುದ್ಧದ ಆರಂಭದಲ್ಲಿ ಅರ್ಜುನನು ಕೌರವಸೇನೆಯನ್ನೆಲ್ಲಾ ಕಣ್ಣಿಟ್ಟು ನೋಡಿ ಅಲ್ಲಿ ಗುರುಹಿರಿಯರನ್ನೂ ಇತರಬಂಧುಗಳನ್ನೂ ಕಂಡು ಅವರನ್ನು ಕೊಲ್ಲಲಾರೆನೆಂದು ಧನುಸ್ಸನ್ನು ಕೆಳಗಿಟ್ಟು ಕೈಮುದುರಿಕೊಂಡು ಕುಳಿತಾಗ ಶ್ರೀಕೃಷ್ಣನು ಅವನನ್ನು ಕರ್ಮದಲ್ಲಿ ತೊಡಗಿಸುವದಕ್ಕೆ ತನ್ನ ವಿಚಾರಶಕ್ತಿಯನ್ನೆಲ್ಲಾ ವೆಚ್ಚವನ್ನು ಮಾಡಿ ಹೇಳುವದಕ್ಕೆ ಹೊರಟು ಮೊದಲು ಆತ್ಮನ ನಿತ್ಯತ್ವವನ್ನು ಕುರಿತು ಸೂರೆಮಾಡಿದನು. ಆಮೇಲೆ ಒಂದು ಪಕ್ಷ ಆತ್ಮನು

ಅನಿತ್ಯನಾದರೆ ಒಂದಿಲ್ಲೊಂದು ದಿನ ಹೋಗಲೇಬೇಕೆಂದು ಬೋಧಿಸಿದನು; ಗುರುಹಿರಿಯರು ಮೊದಲಾದವರ ದೇಹೇಂದ್ರಿಯರೂಪವಾದ ಕಾರ್ಯಕಾರಣಸಂಘಾತವೆಲ್ಲಾ ಮೊದಲಲ್ಲಿಯೂ ಕೊನೆಯಲ್ಲಿಯೂ ಇಲ್ಲದೆ ನಡುವೆ ಮಾತ್ರ ಕಾಣುವವುಗಳೆಂದು ಸಾಧಿಸಿದನು; ಯುದ್ಧವನ್ನು ಮಾಡುವದು ನಿನ್ನ ಧರ್ಮವೆಂದು ತಿಳಿದಾದರೂ ನೀನು ಆ ಕರ್ಮದಲ್ಲಿ ತೊಡಗೆಂದನು; ಯುದ್ಧವನ್ನು ಮಾಡದೆ ಬಿಟ್ಟರೆ ಪಾಪವು ಬರುವದೆಂದು ಹೆದರಿಕೆಯನ್ನು ಹಾಕಿದನು; ಯುದ್ಧವನ್ನು ಮಾಡಿದರೆ ಆಗುವ ಮಹತ್ಫಲವನ್ನು ವರ್ಣಿಸಿದನು; ಫಲಾಶೆಯಿಲ್ಲದ ಕರ್ಮವು ಕರ್ಮಯೋಗವಾಗಿ ಮೋಕ್ಷಕ್ಕೆ ಕಾರಣವಾಗುವದೆಂದು ಸಾಧಿಸಿದನು; ಮತ್ತು ಜನಕನೇ ಮೊದಲಾದ ಮಹಾ ಮಹಾವಿಭೂತಿಗಳು ಕರ್ಮಯೋಗದಲ್ಲಿದ್ದದ್ದನ್ನುದಾಹರಿಸಿದನು. ಇಷ್ಟೆಲ್ಲಾ ಆದಮೇಲೆ

"ಲೋಕಸಂಗ್ರಹಮೇವಾಪಿ ಸಂಪಶ್ಯನ್ಕರ್ತುಮರ್ಹಸಿ"

ಎಂದು ಹೇಳಿರುವನು. ಕೊನೆಗೆ ಇತರರಿಗೆ ಉದಾಹರಣೆಯಾಗಿರಬೇಕೆಂದಾದರೂ ಕರ್ಮವನ್ನು ಮಾಡಬೇಕೆಂದು ತಾತ್ಪರ್ಯ. ಏಕೆಂದರೆ ಲೋಕದಲ್ಲಿ ಒಬ್ಬ ಪ್ರಸಿದ್ಧವ್ಯಕ್ತಿಯನ್ನು ಇತರರೆಲ್ಲರೂ ಅನುಕರಿಸುತ್ತಿರುತ್ತಾರೆ. ಆ ವ್ಯಕ್ತಿಯು ತನಗೆ ಅಗತ್ಯವಿಲ್ಲದ್ದನ್ನು ಕಂಡು ಕರ್ಮವನ್ನು ಬಿಟ್ಟರೆ ಅನುಕರಣಶೀಲರಾದ ಇತರರು ಆ ವ್ಯಕ್ತಿಗೆ ಅಗತ್ಯವಿಲ್ಲದ ಸ್ಥಿತಿಯನ್ನು ತಿಳಿಯಲಾರದವರಾಗಿ ಕರ್ಮದ ಬಿಡುವಿಕೆಯನ್ನು ಮಾತ್ರ ಹಿಂಬಾಲಿಸುತ್ತಾರೆ. ಇದರಿಂದ ಆ ವ್ಯಕ್ತಿಗೇನೂ ಹಾನಿ ಇಲ್ಲವಾದರೂ ಅಂಥಾನುಕರಣಶೀಲರಿಗೆ ಹಾನಿ ತಪ್ಪುವದಿಲ್ಲ. ಹೀಗೆ ತನ್ನಿಂದ ಇತರರಿಗೆ ಹಾನಿಯಾಗುವದು ಸರಿಯಲ್ಲವಾದ್ದರಿಂದ ಯಾರೂ ತಮ್ಮ ನಿತ್ಯಕರ್ಮವನ್ನು ಬಿಡಬಾರದು.

ಅನುಷ್ಠಾನಗಳ ಮತ್ತು ಆಚಾರಗಳ ವಿಷಯವಾಗಿ ಶ್ರೀರಾಮಕೃಷ್ಣಪರಮಹಂಸರು ಹೇಳಿರುವದೇನೆಂದರೆ—

(೧) ಈಗಿನ ಕಾಲದ ಜನರು ಪ್ರತಿಯೊಂದರ ಸಾರದ ಕಡೆಗೆ ಲಕ್ಷ್ಯವನ್ನು ಕೊಡುತ್ತಾರೆ. ಮತದ ಸಾರವನ್ನು ಅಂಗೀಕರಿಸುತ್ತಾರೆ; ಅಪ್ರಧಾನವೆಂದು ಅದರ ಆಚಾರಗಳ ಮತ್ತು ಅನುಷ್ಠಾನಗಳ ಕಡೆಗೆ ಲಕ್ಷ್ಯವನ್ನು ಕೊಡುವದಿಲ್ಲ.

( ೨ ) ಭತ್ತದ ಉತ್ಪತ್ತಿಗೆ ಅದರೊಳಗಣ ಅಕ್ಕಿ ಮುಖ್ಯವೇ ಹೊರತು ಅದರ ಮೇಲಿನ ಸಿಪ್ಪೆ ಅಷ್ಟು ಮುಖ್ಯವಲ್ಲದಿದ್ದರೂ ಸಿಪ್ಪೆಯಿಂದ ಬೇರೆಮಾಡಿದ ಅಕ್ಕಿಯನ್ನೇ ಬಿತ್ತಿದರೆ ಅದು ಮೊಳಕೆಯಾಗಿ ಭತ್ತವಾಗುವದಿಲ್ಲ. ಬೆಳೆ ಬರಬೇಕಾದರೆ ಸಿಪ್ಪೆಯೊಡನೆಯೇ ಬಿತ್ತಬೇಕು. ಅಕ್ಕಿ ಬೇಕಾದಾಗ ಮಾತ್ರ ಸಿಪ್ಪೆಯನ್ನು ಬೇರೆ ಮಾಡಬೇಕು. ಹಾಗೆ ಧರ್ಮವು ಬೆಳೆಯಬೇಕಾದರೆ ಅನುಷ್ಠಾನಗಳೂ ಆಚಾರಗಳೂ ಬೇಕು. ಅವು ಸತ್ಯವೆಂಬ ಬೀಜದ ಸಿಪ್ಪೆಯಂತೆ ಇವೆ. ಆದುದರಿಂದ ಪ್ರತಿಯೊಬ್ಬನೂ ಸತ್ಯದ ಕೇಂದ್ರಸ್ಥಾನವನ್ನು ಪಡೆಯಬೇಕಾದರೆ ಅನುಷ್ಠಾನಗಳನ್ನೂ ಆಚಾರಗಳನ್ನೂ ಅಂಗೀಕರಿಸಬೇಕು.

ಈ ನಿತ್ಯವ್ರತಗಳ ವಿಷಯವಾಗಿ ವೀರಶೈವವಚನಶಾಸ್ತ್ರಕಾರರು ಅಭಿಪ್ರಾಯಪಟ್ಟಿರುವದೇನೆಂದರೆ—

“ ವ್ರತವೆಂಬುದು ನಾಯಕರತ್ನ. ವ್ರತವೆಂಬುದು ಸುಜ್ಞಾನಿಯ ಮುತ್ತು. ವ್ರತವೆಂಬುದು ಜೀವದ ಕಳೆ. ವ್ರತವೆಂಬುದು ಸುಯಿಧಾನ, ಸುಯಿಧಾನ, ಸುಯಿಧಾನ. ವ್ರತ ತಪ್ಪಲು ಉರಿಲಿಂಗಪೆದ್ದಿಗಳರಸ ಒಲ್ಲನವ್ವಾ.

## ಕಾಮ್ಯಕರ್ಮಗಳ ಬೆಲೆ

“ ನಿಷ್ಕಾಮಕರ್ಮವು ಮೋಕ್ಷಕ್ಕೆ ಸಾಧನವಾದ್ದರಿಂದ ಶಾಸ್ತ್ರದಲ್ಲಿ ಅದನ್ನು ಹೇಳಿದ್ದು ಸರಿ; ಮೋಕ್ಷಕ್ಕೆ ಸಾಧನವಲ್ಲದ ಕಾಮ್ಯಗಳನ್ನು ಶಾಸ್ತ್ರದಲ್ಲಿ ಹೇಳಿದ್ದೇಕೆ? ” ಎಂಬದೊಂದು ವಿಚಾರವು ಹುಟ್ಟಬಹುದು. ನಿಜ. ಕಾಮ್ಯಕರ್ಮಗಳ ವಿಚಾರವು ಅಷ್ಟೇನೂ ಅಗತ್ಯವಲ್ಲ; ಆದರೂ ಅದೂ ಒಂದಿಲ್ಲೊಂದು ರೀತಿಯಿಂದ ದೇವರ ಕಡೆಗೇ ಶರಣುಬಂದಂತಾಗುವದರಿಂದ ಶಾಸ್ತ್ರಕಾರರು ಅದಕ್ಕೂ ಸ್ಥಲವನ್ನು ಕೊಟ್ಟಿದ್ದಾರೆ. ತನ್ನನ್ನು ಲೋಕದಲ್ಲಿ ಯಾರುಯಾರು ಭಜಿಸುವರೆಂಬುದನ್ನು ಅರ್ಜುನನಿಗೆ ಹೇಳಬೇಕಾಗಿ ಬಂದಾಗ ಶ್ರೀಕೃಷ್ಣನು—

“ ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ ”

ಎಂದು ಗೀತೆಯಲ್ಲಿ ಹೇಳಿದ್ದಾನೆ. “ ಹೇ, ಅರ್ಜುನ, ಯಾವದಾದ

ರೊಂದುಬಗೆಯಿಂದ ದೀನತೆಯನ್ನು ಹೊಂದಿದವನು, ದೇವರ ವಿಚಾರವನ್ನು ತಿಳಿಯಬೇಕೆಂಬುವನು, ಧನಾದಿಗಳನ್ನು ಬಯಸುವವನು, ನನ್ನನ್ನು ತಿಳಿದವನು,–ಈ ನಾಲ್ಕುಬಗೆಯ ಪುಣ್ಯಶಾಲಿಗಳು ನನ್ನನ್ನು ಭಜಿಸುತ್ತಾರೆ” ಎಂದು ಅದರ ತಾತ್ಪರ್ಯ. ಈ ಮಾತನ್ನು ಹೇಳುವಾಗ ದೇವರು ನಿಜವಾಗಿ ತನ್ನನ್ನು ತಿಳಿದವನನ್ನು ಮಾತ್ರವಲ್ಲದೆ ಏನಾದರೊಂದುಬಗೆಯ ದೀನತೆಯಿಂದ ಶರಣುಬಂದವರೇ ಮೊದಲಾದವರನ್ನೂ ತನ್ನ ಭಕ್ತರ ಸಾಲಿನಲ್ಲಿಯೇ ಸೇರಿಸಿದ್ದಾನೆ. ಇಷ್ಟೇ ಅಲ್ಲ. ಅವರನ್ನೆಲ್ಲಾ ಮೇಲಿನ ಶ್ಲೋಕದಲ್ಲಿ ಸುಕೃತಿಗಳೆಂಬ ವಿಶೇಷಣದಲ್ಲಿ ಸೇರಿಸಿದ್ದಾನೆ. ಒಂದು ಸಲ ಹಾಗೆ ಹೇಳಿದ್ದಲ್ಲದೆ “ಉದಾರಾಸ್ಸರ್ವ ಏವೈತೇ” ಎಂಬ ಮಾತಿನಿಂದ ಇನ್ನೊಂದುಸಲ ಅವರೆಲ್ಲರನ್ನೂ ಉದಾರರೆಂದು ಹೊಗಳಿದ್ದಾನೆ. ಸುಕೃತಿ ಮತ್ತು ಉದಾರ ಎಂಬ ವಿಶೇಷಣಗಳು ದೇವರ ಸ್ವರೂಪವನ್ನು ತಿಳಿದವರಿಗಂತು ಚೆನ್ನಾಗಿ ಒಪ್ಪುವವು. ದೇವರ ವಿಚಾರವನ್ನು ತಿಳಿಯಬೇಕೆಂಬುವರಿಗೂ ಒಂದುಪಕ್ಷ ಅದು ಹೊಂದಬಹುದು. ಏಕೆಂದರೆ ಮನಸ್ಸು ಪ್ರಾಪಂಚಿಕಪದಾರ್ಥಗಳ ವಿಚಾರವನ್ನು ಬಿಟ್ಟು ದೇವರ ವಿಚಾರವನ್ನು ತಿಳಿಯಬೇಕೆನ್ನುವದು ಒಂದು ಸುಕೃತದ ಫಲವೇ. ಆದರೆ ಈ ವಿಶೇಷಣಗಳು ರೋಗ ಮೊದಲಾದವುಗಳಿಂದ ಅಥವಾ ಧನ ಮೊದಲಾದವುಗಳ ಆಶೆಯಿಂದ ದೀನರಾಗಿ ಬಂದವರಿಗೆ ಹೇಗೆ ಶೋಭಿಸುವವು? ಇದಕ್ಕೆ ಮತ್ತೇನೂ ಕಾರಣವಿಲ್ಲ. ಮನುಷ್ಯನು ತನ್ನ ದೀನತೆಯನ್ನು ಕಳೆದುಕೊಳ್ಳುವದಕ್ಕೆ ತನ್ನ ಲೌಕಿಕವಾದ ಉಪಾಯದ ಮೇಲೆ ಭರವಸವನ್ನಿಡದೆ ದೇವರ ಕಡೆಗೆ ತಿರುಗಿದ್ದೇ ಅವನ ಸುಕೃತದ ಫಲ. ಹೇಗೆಂದರೆ ಲೌಕಿಕವಾದ ಉಪಾಯವನ್ನು ನಂಬಿದರೆ ಆ ಕೆಲಸವಾದರೂ ಆಗಬಹುದು; ಹೋದರೂ ಹೋಗಬಹದು. ದೇವರಿಗೆ ಶರಣುಹೊಕ್ಕರೆ ಅದು ಆಗಿಯೇ ಆಗುವದು.

ಬರೇ ಇಷ್ಟಾರ್ಥವು ನೆರವೇರುವದೆಂಬ ಮಾತ್ರದಿಂದ ಕಾಮ್ಯಕರ್ಮಕ್ಕೆ ಶಾಸ್ತ್ರದಲ್ಲಿ ಸ್ಥಲವು ದೊರೆತಿಲ್ಲ. ಮನುಷ್ಯನು ಒಂದಿಷ್ಟಾರ್ಥಕ್ಕಾಗಿ ದೇವರಿಗೆ ಶರಣುಹೋದರೆ ದೇವರು ಆ ಇಷ್ಟಾರ್ಥವನ್ನು ಪೂರ್ಣಮಾಡುವದಂತು ಸರಿಯಷ್ಟೆ; ತನ್ನ ಬಳಿಗೆ ಅವನು ಬಂದದ್ದು

ಕ್ಕಾಗಿ ತಾನಾಗಿ ಅವನಿಗೆ ಒಂದು ಹೆಚ್ಚಿನ ಶ್ರೇಯಸ್ಸನ್ನೂ ಕೊಟ್ಟೇ ಕೊಡುವನು. ಇದು ದೊಡ್ಡವರ ಲಕ್ಷಣ. ಧ್ರುವನು ತನ್ನನ್ನು ತಂದೆಯು ತೊಡೆಯ ಮೇಲೆ ಕೂಡಿಸಿಕೊಳ್ಳಲಿಲ್ಲವೆಂಬ ಒಂದು ಕ್ಷುದ್ರವಾದ ಕಾರಣ ದಿಂದ ಕಾಡಿಗೆ ಹೋಗಿ ಉಗ್ರವಾದ ತಪಶ್ಚರ್ಯವನ್ನು ಮಾಡಿದನು. ಧ್ರುವನು ಮಾಡಿದ್ದು ಸಕಾಮವಾದ ತಪಶ್ಚರ್ಯೆ. ಇದಕ್ಕೆ ಒಲಿದ ಮಹಾ ವಿಷ್ಣು ಧ್ರುವನಿಗೆ ತಂದೆಯ ತೊಡೆಯನ್ನೇರುವ ಲಾಭವನ್ನು ಅನುಗ್ರಹಿಸಿ ದರೆ ಮುಗಿಯುತ್ತಿತ್ತು. ಆದರೆ ವಿಷ್ಣು ಹಾಗೆ ಮಾಡಲಿಲ್ಲ. ಸಾಮಾನ್ಯ ವಾಗಿ ಮನುಷ್ಯರಿಗೆ ಏನನ್ನು ಕೇಳಿಕೊಳ್ಳಬೇಕೆಂಬುದು ತಿಳಿಯುವದಿಲ್ಲ ವೆಂದು ಅವನಿಗೆ ಗೊತ್ತಿತ್ತು. ಮನುಷ್ಯರು ಸಾಮಾನ್ಯವಾಗಿ ದೀನರು. ದೀನರ ಬುದ್ಧಿಯು ಸಂಕುಚಿತವಾಗಿರುವದು. ಆದ್ದರಿಂದ ಅವರ ಇಚ್ಛೆಯು ಕ್ಷುದ್ರವಾಗಿರುವದು. ದಾನಿಗಳ ಬುದ್ಧಿಯು ಉದಾರವಾಗಿ ರುವದು. ಆದ್ದರಿಂದ ನಿಜವಾದ ದಾನಿಗಳು ದೀನರಿಗೆ ಅವರು ಕೇಳಿದ್ದ ಕ್ಕಿಂತ ಹೆಚ್ಚಾಗಿಯೇ ಕೊಡುವರು. ಇಲ್ಲಿ ಮಹಾವಿಷ್ಣು ಬಾಲನಾದ ಧ್ರುವನ ಭಕ್ತಿಗೆ ಮೆಚ್ಚಿದಾಗ ಅವನಿಗೆ ಸಮಸ್ತಜ್ಯೋತಿಶ್ಚಕ್ರದ ಅಧಿಪತಿ ಯಾದ ಮಹತ್ಪದವಿಯನ್ನು ಕೊಟ್ಟು ಮೋಕ್ಷದವರೆಗಿನ ಶ್ರೇಯಸ್ಸನ್ನು ಅನುಗ್ರಹಿಸಿದನೆಂದು ಕಥೆಯಿದೆ. ಮಹಾವಿಷ್ಣು ಈ ರೀತಿಯಲ್ಲಿ ಅನು ಗ್ರಹಿಸಿ ಹೋದ ಮೇಲೆ ಧ್ರುವನು ತನ್ನ ಕ್ಷುದ್ರಕಾಮನೆಯ ಅವಿವೇಕ ಕ್ಕಾಗಿ ಎಷ್ಟು ಪಶ್ಚಾತ್ತಾಪಪಟ್ಟಿದ್ದಾನೆ! ದೇವರ ಎದುರಿಗೆ ಕ್ಷುದ್ರ ವಾದ ಬಯಕೆಗಾಗಿ ಬಾಯಿಬಿಡುವ ವಿಷಯದಲ್ಲಿ ಶ್ರೀಸಮರ್ಥ ರಾಮ ದಾಸರು ತಮ್ಮ "ಮನಾಚೆ ಶ್ಲೋಕ" ಎಂಬ ಗ್ರಂಥದಲ್ಲಿ ಬರೆದಿ ರುವ ಒಂದು ಶ್ಲೋಕದ ಸಮ್ಮ ಭಾಷಾಂತರವೇನೆಂದರೆ—

"ಸುರತರುವಿರೆ ಮಜ್ಜಿಗೆಯ ಬೇಡುವಂತೆ ಶ್ರೀ ।
ಹರಿಯ ಬಿಟ್ಟಿತರ ಮಾತಾಡೆ ॥
ಮಿರುಗುವ ಮಣಿಯಿತ್ತು ಗಾಜು ಬೇಕೆಂಬಗೆ ।
ಅರಿವೀವರಾರೊ ಮೂರ್ಖನಿಗೆ ॥"

ಇರಲಿ. ಹೀಗೆ ಫಲೇಚ್ಛೆಯಿಂದಲೇ ಕರ್ಮವನ್ನು ಮಾಡಿದರೂ ಅವರ ಶ್ರದ್ಧೆಯ ಪ್ರಮಾಣಕ್ಕನುಸರಿಸಿ ದೇವರು ಅವರಿಗೆ ಪರಮಪದವಿ

ಯನ್ನು ಕೂಡ ಕೊಡುವನಾದ್ದರಿಂದ ಮನುಷ್ಯನು ಫಲೇಚ್ಛೆಯಿಂದಲಾದರೂ ದೇವರ ಕಡೆಗೆ ಹೋಗಲೆಂಬುವದೇ ಕಾಮ್ಯಕರ್ಮಗಳ ಉದ್ದೇಶ.

## ವಿಹಿತವಾದ ಇಚ್ಛೆ.

ಮನುಷ್ಯನು ಫಲೇಚ್ಛೆಯಿಲ್ಲದೆ ನಿಷ್ಕಾಮಕರ್ಮವನ್ನು ಮಾಡುವದು ಶ್ರೇಯಸ್ಕರವೆಂದು ತೋರಿದರೂ ಇಚ್ಛೆಯನ್ನು ಮಾಡದಿರುವದು ಅಸಾಧ್ಯವೆನಿಸಬಹುದು.

“ಯದ್ಯದ್ಧಿ ಕುರುತೇ ಜಂತುಸ್ತತ್ತತ್ಕಾಮಸ್ಯ ಚೇಷ್ಟಿತಮ್ ॥”

ಎಂಬ ವಾಕ್ಯದಂತೆ ಯಾರುಯಾರು ಏನೇನು ಮಾಡಿದರೂ ಅವೆಲ್ಲಾ ಏನಾದರೊಂದು ಇಚ್ಛೆಯಿಂದಲೇ ಆಗುತ್ತಿರುವದು.

“ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ”

ಎಂಬ ವಾಕ್ಯದಂತೆ ಎಂಥ ದಡ್ಡನಾದರೂ ಪ್ರಯೋಜನದ ಮೇಲಿನ ದೃಷ್ಟಿ ಇಲ್ಲದೆ ಮಾಡುವದಿಲ್ಲ. ಪ್ರಯೋಜನದ ಇಚ್ಛೆಯನ್ನು ಮಾಡುವದೇ ಮನುಷ್ಯನ ಸ್ವಭಾವ.

“ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।
ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥”

ಎಂದು ಭಗವದ್ಗೀತೆಯಲ್ಲಿ ಹೇಳಿದೆ. ಸೃಷ್ಟಿಯಾಗುವಾಗಲೇ ಎಲ್ಲ ಪ್ರಾಣಿಗಳೂ ಇಚ್ಛೆ, ದ್ವೇಷ– ಮೊದಲಾದ ಜೋಡಿಗಳ ಮಂಕುಬೂದಿಗೆ ಮರುಳಾಗಿ ಹುಟ್ಟುವವೆಂದು ಅದರ ತಾತ್ಪರ್ಯ. ಆದುದರಿಂದಲೇ ಮಗು ಹುಟ್ಟಿದ ಕೂಡಲೇ ಹಸಿವೆಯಿಂದ ಮೊದಲು ಅಳುವದು. ಇದರಿಂದ ಆಹಾರದ ಮೇಲಿನ ಅದರ ಇಚ್ಛೆಯು ಅಭಿವ್ಯಕ್ತವಾಗುವದು. ಆದ್ದರಿಂದ ಮನುಷ್ಯನಲ್ಲಿ ಸಾಮಾನ್ಯವಾಗಿ ಇಚ್ಛೆ, ದ್ವೇಷ– ಮೊದಲಾದ ಜೋಡಿಗಳು ಇರಲೇ ಅರದೆಂಬುದು ಆಗದ ಮಾತು. ಸ್ವಭಾವಕ್ಕೆ ವಿರುದ್ಧವಾಗಿ ಹೋಗುವದು ಯಾರಿಂದ ಆದೀತು! ಈ ಅರ್ಥವನ್ನು

“ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ”

ಎಂಬ ಗೀತಾವಾಕ್ಯವೂ ಪ್ರತಿಪಾದಿಸುತ್ತದೆ. ಇಚ್ಛೆಯನ್ನು ಬಿಗಿಹಿಡಿಯು

ಬೇಕೆಂಬ ನಮ್ಮ ಪ್ರಯತ್ನವೇನು ಮಾಡೀತು! ಮನುಷ್ಯನನ್ನು ಸ್ವಭಾವವು ಸೆಳೆದುಕೊಂಡು ಹೋಗುವದು. ಇದೇ ಅರ್ಥವನ್ನೇ

" ಕರ್ತುಂ ನೇಚ್ಛಸಿ ಯನ್ಮೋಹಾತ್ಕರಿಷ್ಯಸ್ಯವಶೋಽಪಿ ತತ್ "

ಎಂಬ ವಾಕ್ಯವೂ

" ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ "

ಎಂಬ ವಾಕ್ಯವೂ ಬಲವತ್ತರವಾಗಿ ಅನುಮೋದಿಸುತ್ತವೆ. ಮಾಡಲಿಚ್ಛಿಸುವದಿಲ್ಲವೆಂದು ಮೋಹಗೊಂಡವನು ಅರಿಯಿಲ್ಲದೆ ಅದನ್ನು ಮಾಡುವನೆಂದೂ ಬಿಗಿಹಿಡಿಯುವ ಪ್ರಯತ್ನವು ವ್ಯರ್ಥವಾಗಿ ಅವನು ಸ್ವಭಾವದ ಬಲೆಗೆ ಬೀಳುವನೆಂದೂ ಅವುಗಳ ತಾತ್ಪರ್ಯವು. ಮಹಾಭಾರತಯುದ್ಧದ ಆರಂಭದಲ್ಲಿ ಅರ್ಜುನನು ಯುದ್ಧವನ್ನು ಮಾಡಲೊಲ್ಲೆನೆಂದು ಸುಮ್ಮನೆ ಕುಳಿತನಷ್ಟೆ. "ನೀನು ಮಾಡುವದಿಲ್ಲವೆಂದರೂ ನಿನ್ನ ಸ್ವಭಾವವು ಮಾಡಿಸಿಯೇ ಬಿಡುವದು" ಎಂದು ಶ್ರೀಕೃಷ್ಣನು ಹೇಳಿರುವನು. ಅರ್ಜುನನಿಗೆ ಯುದ್ಧವನ್ನು ಮಾಡುವದು ಹೇಗೆ ಸ್ವಭಾವವಾಗಿತ್ತೋ ಹಾಗೆ ಮನುಷ್ಯರಿಗೆಲ್ಲರಿಗೂ ಇಚ್ಛೆ, ದ್ವೇಷ-ಮೊದಲಾದವುಗಳು ಸ್ವಭಾವವಾಗಿರುವವು. ಆದ್ದರಿಂದ ನಾವು ಅದನ್ನು ಬಿಡಬೇಕೆಂದರೂ ಅದು ನಮ್ಮನ್ನು ಬೆನ್ನುಬಿಡುವದಿಲ್ಲ. ಹೀಗಿರುವಾಗ ನಿಷ್ಕಾಮಕರ್ಮವಾಗುವದು ಹೇಗೆ? ನಮ್ಮನ್ನು ಬೆನ್ನುಹತ್ತಿದ ಆ ಇಚ್ಛೆಗೆ ನಾವು ಏನು ಹೇಳಬೇಕು?

ಇದಕ್ಕೆ ಉತ್ತರವೇನೆಂದರೆ- ಇಚ್ಛೆಯನ್ನೇ ಇಲ್ಲದಂತೆ ಮಾಡುವದು ನಮ್ಮಿಂದಾಗದ ಕಾರಣ ಅದನ್ನು ಬೇರೆ ದಾರಿಗೆ ತಿರುಗಿಸಬೇಕು. ಶ್ರೀರಾಮಚಂದ್ರಮೂರ್ತಿಯು ಸೀತೆಯನ್ನು ಮದುವೆಯಾಗಿ ಅಯೋಧ್ಯಾಪಟ್ಟಣಕ್ಕೆ ಬರುವಾಗ ತನ್ನನ್ನು ಎದುರಿಸಿದ ಪರಶುರಾಮನ ಮೇಲೆ ಪ್ರಯೋಗಿಸುವದಕ್ಕಾಗಿ ಬಾಣವನ್ನು ಹೂಡಿ 'ಎಲೈ ಪರಶುರಾಮನೆ, ನನ್ನ ಬಾಣವು ಹುಸಿಯಾಗಲಾರದು. ಈಗ ನಾನು ಈ ಬಾಣವನ್ನು ನಿನ್ನ ಸಂಚಾರಶಕ್ತಿಯ ಧ್ವಂಸಕ್ಕಾಗಿ ಉಪಯೋಗಿಸಲೋ ಅಥವಾ ನಿನ್ನ ಪುಣ್ಯಲೋಕಗಳನ್ನು ನಿರ್ಮೂಲಮಾಡಲೋ" ಎಂದು ಕೇಳಿ ಪರಶುರಾಮನ ಸಮ್ಮತಿಯಂತೆ ಅವನ ಪುಣ್ಯ

ಲೋಕಗಳಿಗೆ ಸೇರುತ್ತಿದ್ದನು. ಈ ಉದಾಹರಣೆಯಲ್ಲಿ ರಾಮಬಾಣವು ಹೇಗೆ ವ್ಯರ್ಥವಾಗದೋ ಹಾಗೆ ನಮ್ಮ ಇಚ್ಛೆಯು ಅದಕ್ಕೇನನ್ನಾದರೂ ಕೊಟ್ಟ ಹೊರತು ಬಿಡುವದಿಲ್ಲ. ಪರಶುರಾಮನು ತನ್ನ ಸಂಹಾರ ಶಕ್ತಿಯ ಧ್ವಂಸದಿಂದ ತನಗಾಗುತ್ತಿದ್ದ ಹಾನಿಯನ್ನು ತಪ್ಪಿಸಿಕೊಳ್ಳುವದಕ್ಕಾಗಿ ಆ ಬಾಣದ ಗುರಿಗೆ ತನ್ನ ಪುಣ್ಯಲೋಕಗಳನ್ನಿಟ್ಟು ಮುಂದೆ ತನ್ನ ತಪಶ್ಶಕ್ತಿಯಿಂದ ತಾನು ಮುಕ್ತನಾದಂತೆ ನಾವು ನಮ್ಮ ಇಚ್ಛೆಗೀಗ ಏನಾದರೊಂದು ಬೇರೆ ವಿಷಯವನ್ನು ತೋರಿಸಬೇಕು. ಬೇರೆ ದಾರಿಯನ್ನು ತೋರಿಸಹೋಗುವದಕ್ಕೆ ಮೊದಲು ಈಗ ಅದು ಯಾವದಾರಿಯಲ್ಲಿದೆಯೆಂಬುದನ್ನು ತಿಳಿಯಬೇಕು. ಸಾಮಾನ್ಯವಾಗಿ ನೋಡಿದರೆ—

"ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ"

ಎಂಬ ಗೀತಾವಚನದಂತೆ ಈಗಿನ ನಮ್ಮ ಇಚ್ಛೆಗಳೆಲ್ಲಾ ರಜೋಗುಣದಿಂದ ಹುಟ್ಟಿದವುಗಳು. ಈ ಇಚ್ಛೆಗಳು ನಮಗೆ ಹಾನಿಕರಗಳಾಗಿ ನಮ್ಮ ಅನುಭವದಲ್ಲಿ ಕಂಡುಬಂದಿವೆ. ಶಾಸ್ತ್ರಕಾರರು ಇಚ್ಛೆಗಳನ್ನು ನಿಂದಿಸುವಾಗಲೆಲ್ಲಾ ರಜೋಗುಣದಿಂದ ಹುಟ್ಟಿದ ಇಚ್ಛೆಗಳನ್ನೇ ನಿಂದಿಸಿರುತ್ತಾರೆ. ರಜೋಗುಣದಿಂದ ಹುಟ್ಟಿದ ಇಚ್ಛೆಗಳು ಸಾಮಾನ್ಯವಾಗಿ ತನ್ನ ದೇಹೇಂದ್ರಿಯಾದಿಗಳ ಸುಖದ ದೃಷ್ಟಿಯಿಂದ ಹುಟ್ಟಿದವುಗಳಾಗಿರುವವು. ಈ ಬಗೆಯ ಇಚ್ಛೆಯೇ ಮುಖ್ಯವಾಗಿರುವದು ಶಾಸ್ತ್ರಕ್ಕೆ ಇಷ್ಟವಿಲ್ಲ. ಆದ್ದರಿಂದ ಈ ಇಚ್ಛೆಯನ್ನು ಸತ್ತ್ವಗುಣದ ಕಡೆಗೆ ತಿರುಗಿಸಬೇಕು. ಸತ್ತ್ವಗುಣದಿಂದ ಹುಟ್ಟಿದ ಇಚ್ಛೆಗಳು ವಿಶೇಷವಾಗಿ ಪರಹಿತವನ್ನು ಬಯಸುವಂಥವುಗಳಾಗಿರುವವು. ದೇಹೇಂದ್ರಿಯಾದಿಗಳ ಗತಿಯೇನೆಂದರೆ ಹೆದರಬೇಕಾಗಿಲ್ಲ. ಹಣ್ಣಿಗಾಗಿ ಬಾಳೆಯ ಗಿಡವನ್ನು ಬೆಳೆಸಿದರೆ ಊಟಕ್ಕೆ ಅನುಕೂಲವಾಗಿ ಬಾಳೆಯ ಎಲೆಯೂ ಸಿಕ್ಕುವಂತೆ ಪರಹಿತದ ಇಚ್ಛೆಯನ್ನು ಮಾಡಿದರೆ ತನ್ನ ದೇಹೇಂದ್ರಿಯಾದಿಗಳ ಪೋಷಣೆಯೂ ಅದರೊಳಗೇ ಸೇರಿರುವದು. ತನ್ನ ದೇಹೇಂದ್ರಿಯಾದಿಗಳಿದ್ದರಷ್ಟೇ ಅವನು ಪರಹಿತವನ್ನು ಮಾಡುವದು. ಆದ್ದರಿಂದ ಪರಹಿ

ತದ ಕಡೆಗೆ ದೃಷ್ಟಿಯನ್ನು ತಿರುಗಿಸಿದರೆ ತಮ್ಮ ದೇಹೇಂದ್ರಿಯಾದಿಗಳು ನಿರ್ಮೂಲವಾದೀತೆಂದು ಗಾಬರಿಗೊಳ್ಳಬೇಕಾಗಿಲ್ಲ.

ಇಚ್ಛೆಗಳನ್ನು ಪರಿಪರಿಯಿಂದ ಹೀಯಾಳಿಸುವ ಶಾಸ್ತ್ರವೇ ಸಾತ್ತ್ವಿಕವಾದ ಇಚ್ಛೆಯನ್ನು ಬಾಯತುಂಬ ಹೊಗಳಿರುತ್ತದೆ. ಶಾಸ್ತ್ರಗಳು ಹೊಗಳುವ ಮಾತು ಇರಲಿ.

“ ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ”

ಎಂಬ ಗೀತಾವಾಕ್ಯದಿಂದ ಶ್ರೀಕೃಷ್ಣನು ಸಾತ್ತ್ವಿಕವಾದ ಇಚ್ಛೆಯನ್ನು ತನ್ನ ಸ್ವರೂಪವೆಂದು ಅದಕ್ಕೆ ಬಹು ಹೆಚ್ಚಿನ ಗೌರವವನ್ನು ಕೊಟ್ಟಿದ್ದಾನೆ. ಸಾತ್ತ್ವಿಕವಾದ ಇಚ್ಛೆಯು ಧರ್ಮಕ್ಕೆ ಅವಿರುದ್ಧವಾದದ್ದು. ಧರ್ಮವೆಂದರೇನು? ಜಗತ್ತಿನ ಸ್ಥಿತಿಗತಿಗೆ ಸಾಧಕವಾದ ವ್ಯವಹಾರ. ಪ್ರತಿಯೊಬ್ಬನೂ ತನ್ನ ತನ್ನ ದೇಹೇಂದ್ರಿಯಗಳ ಯೋಗಕ್ಷೇಮವನ್ನೇ ತನ್ನ ಸರ್ವಸ್ವವಾಗಿ ಭಾವಿಸುವವನಾದರೆ ಜಗತ್ತು ಹೇಗೆ ಸಾಗಬೇಕು? ಪರಹಿತಕಾರಿಗಳಿಂದಲೇ ಜಗತ್ತಿನ ಸುಸ್ಥಿತಿ. ಅದ್ದರಿಂದಲೇ ಅದು ಧರ್ಮಕ್ಕೆ ಅವಿರುದ್ಧವಾದದ್ದು. ಇನ್ನೊಂದೇನೆಂದರೆ ಪರಮಾತ್ಮನ ಧ್ಯಾನವೇ ಪರಮಧರ್ಮವೆಂದು ಹಿಂದೆ ಬಂದಿದೆ. ತನ್ನ ದೇಹೇಂದ್ರಿಯಗಳ ಸಲುವಾಗಿ ಮೇಲಿನ ಸಂಕುಚಿತಬುದ್ಧಿಯು ಅತಿವಿಶಾಲವಾದ ಪರಮಾತ್ಮಸ್ವರೂಪದ ವಿಚಾರವನ್ನು ಹೇಗೆ ಒಳಗೊಂಡೀತು? ದೊಡ್ಡ ವಸ್ತುವನ್ನು ಒಳಗೊಳ್ಳಬೇಕಾದರೆ ದೊಡ್ಡ ಬಾಯಿಬೇಕು. ಪರಮಾತ್ಮ ವಿಚಾರವನ್ನು ಒಳಗೊಳ್ಳಬೇಕಾದರೆ ಮನಸ್ಸು ಅರಳಿಕೊಂಡು ಅಗಲವಾಗಿರಬೇಕು. ಮನಸ್ಸು ಅಗಲವಾಗುವದೆಂದರೇನು? ಕ್ಷುದ್ರವಾದ ತನ್ನ ದೇಹೇಂದ್ರಿಯಗಳ ಮತ್ತು ತನ್ನ ಸಣ್ಣ ಕುಟುಂಬದ ಮೇಲಿನ ಅಭಿಮಾನವನ್ನು ಹಿಗ್ಗಿಸಿ ಜಗತ್ತಿನ ಯೋಗಕ್ಷೇಮದ ಮೇಲೆಲ್ಲಾ ಅಭಿಮಾನವನ್ನು ವಹಿಸುವದು. ಅದ್ದರಿಂದ ಇಂಥ ಇಚ್ಛೆಯನ್ನು ಎಲ್ಲರೂ ಮಾಡಬೇಕು. ಜಗತ್ತಿನ ಯೋಗಕ್ಷೇಮಕ್ಕಾಗಿ ಕೈಲಾದಷ್ಟು ಹೆಣಗುವ ಮಾತೊಂದು ಕಡೆ ಇರಲಿ. ನಮ್ಮ ಪೂರ್ವಿಕರ ಚರಿತ್ರೆಯನ್ನು ನೋಡಿದರೆ ಪರಹಿತಕ್ಕಾಗಿ ದೇಹವನ್ನು ತುಂಡುತುಂಡಾಗಿ ಮಾಡಿಕೊಟ್ಟ ಉದಾಹರಣೆಗಳು ಸಿಕ್ಕುವವು. ಹಿಂದೆ ಜಗತ್ತಿಗೆ ವೃತ್ರಾಸುರನ ಬಾಧೆ ಹೆಚ್ಚಿ

ದಾಗ ದೇವತೆಗಳು ದಧೀಚಿಋಷಿಯ ಬಳಿಗೆ ಬಂದು ಅವನ ಮೂಳೆ ಯನ್ನು ಬೇಡಿದರು. ದಧೀಚಿಋಷಿಯು ಲೋಕಕ್ಷೇಮಕ್ಕಾಗಿ ನಿರಂತರವಾದ ತಪಸ್ಸನ್ನು ಮಾಡಿದ್ದನಾದ್ದರಿಂದ ಅವನ ದೇಹದಲ್ಲೆಲ್ಲಾ ಲೋಕಕ್ಷೇಮವನ್ನು ಮಾಡುವಂಥ ಸಾಮರ್ಥ್ಯವು ಉಂಟಾಗಿತ್ತು. ದೇವತೆಗಳು ಇದನ್ನರಿತೇ ಅವನ ಮೂಳೆಯನ್ನಪೇಕ್ಷಿಸಿದರು. ಹೀಗೆ ಮನಃಪೂರ್ವಕವಾಗಿ ಪರಹಿತಕ್ಕಾಗಿ ತನ್ನ ಜೀವನಯಾತ್ರೆಯನ್ನು ಮುಗಿಸುವದು ಎಷ್ಟು ಕಷ್ಟವೆಂಬುದು ಎಲ್ಲರಿಗೂ ತಿಳಿಯಬಹುದು. ಆದರೂ ದಧೀಚಿಯು ಪರಹಿತಕ್ಕಾಗಿ ಅದನ್ನು ಸಹಿಸಿ ತನ್ನ ಮೂಳೆಯನ್ನು ದೇವತೆಗಳಿಗೆ ಕೊಟ್ಟನು. ವಜ್ರಾಯುಧದಿಂದ ಕೂಡ ಭೇದಿಸಲಾರದ ವೃತ್ರಾಸುರನ ಶಿರಸ್ಸು ಪರಹಿತಪರನಾದ ದಧೀಚಿಯ ಮೂಳೆಯಿಂದ ಮಾಡಿದ ಆಯುಧದಿಂದ ಛಿದ್ರಹೋಯಿತು.

ಯಾವ ಸೌಕರ್ಯಸಮೃದ್ಧಿಯೂ ಇಲ್ಲದ ನಾವು ಪರಹಿತದ ಅಭಿಮಾನವನ್ನು ವಹಿಸುವದು ಯೋಗ್ಯತೆಗೆ ಮೀರಿದ ಮಾತೆಂದು ತೋರಬಹುದು. ಸಾಮಾನ್ಯವಾಗಿ ಮನುಷ್ಯಮಾತ್ರದವರಿಗೆ ಪರಹಿತವು ಕಷ್ಟಸಾಧ್ಯವೇ ಸರಿ. ಆದರೆ ಯಾವನಾಗಲಿ ಪರಹಿತದ ಕಲ್ಪನೆಯನ್ನು ತಂದುಕೊಳ್ಳುತ್ತಲೇ ಅವನಲ್ಲಿ ದೇವತ್ವವು ಆವಿರ್ಭವಿಸಿ ಎಲ್ಲ ಸೌಕರ್ಯಸಮೃದ್ಧಿಯೂ ಅವನನ್ನು ತಾನಾಗಿಯೇ ಹುಡುಕಿಕೊಂಡು ಬಂದು ಕಾರ್ಯವನ್ನು ಸಾಧಿಸುವವು. ಮನುಷ್ಯನು ಪರಹಿತವನ್ನು ಮಾಡಬೇಕೆಂಬ ಮನಸ್ಸನ್ನು ಮಾಡಿದರೆ ಸಾಕು; ಅದನ್ನು ದೇವರು ಕೊನೆಗಾಣಿಸುವನು. ಮನುಷ್ಯನು ನಿಮಿತ್ತಮಾತ್ರ. ಸಾರ್ವಜನಿಕಕಾರ್ಯವು ದೇವರಿಗೆ ಬಹು ಹಿತವಾದದ್ದು ನೋಡಿರಿ—

“ ಪರಹಿತವುಂ ಕೈವಲ್ಯಮು | ಸುರೆ ತೂಗುತೆ ಪರಹಿತಮುಸೆ ಪೆರ್ಚನದೆಂದಾ ||
ಪರಿ ಕೈವಲ್ಯಮಿನಿಳಿಯುತೆ | ಪರಹಿತಕೆ ದಶಾವತಾರಮುಂ ತಳೆದಿರ್ಪಂ ||

ತನ್ನ ಧರ್ಮವನ್ನು ರಕ್ಷಿಸುವದಕ್ಕಾಗಿ ಮನುಷ್ಯನು ದೃಢಸಂಕಲ್ಪವನ್ನು ಮಾಡಿದನೆಂದರೆ ಅದಕ್ಕೆ ತಕ್ಕ ಪರಿಸ್ಥಿತಿಯು ತಾನಾಗಿಯೇ ಒದಗುವದೆಂಬುದನ್ನು ಶ್ರೀರಾಮಾಯಣವು ಬಹು ಚೆನ್ನಾಗಿ ನಮ್ಮ ಕಣ್ಣಮುಂದೆ ಇಟ್ಟಿರುವದು. ರಾಕ್ಷಸರು ಮನುಷ್ಯರನ್ನು ತಿನ್ನತಕ್ಕ

ವರು. ರಾವಣನು ರಾಕ್ಷಸತ್ವದ ಪರಮಾವಧಿಯನ್ನು ಮುಟ್ಟಿದವನು. ರಾಮನು ಒಬ್ಬ ಮನುಷ್ಯ. ಈ ಸ್ಥಿತಿಯಲ್ಲಿ ರಾಮನು ರಾವಣನ ಮೇಲೆ ಕೈಮಾಡುವದು ಶಕ್ಯವೆ? ತನ್ನ ಧರ್ಮಪತ್ನಿಯನ್ನು ಕಳ್ಳತನದಿಂದ ಅಪಹಾರಮಾಡಿದಂಥ ರಾವಣನ ಹತ್ತು ತಲೆಗಳನ್ನು ಚೆಂಡಾಡಬೇಕೆಂದು ರಾಮನು ದೃಢಸಂಕಲ್ಪಮಾಡುತ್ತಲೇ ಸುಗ್ರೀವನ ಸೇನೆಯು ತಾನಾಗಿ ಸಹಾಯಕ್ಕೆ ಒದಗಿತು. ಸಮುದ್ರರಾಜನು ದಾರಿಯನ್ನು ಬಿಟ್ಟುಕೊಟ್ಟನು. ವಿಭೀಷಣನು ರಾವಣನ ಪಕ್ಷವನ್ನು ಬಿಟ್ಟು ರಾಮನಿಗೆ ಶರಣುಬಂದನು. ಈ ಪರಿಸ್ಥಿತಿಗಳುಂಟಾಗುವದಕ್ಕೆ ರಾಮನು ಯಾವ ಪ್ರಯತ್ನವನ್ನೂ ಮಾಡಿಲ್ಲ. ಅವೆಲ್ಲಾ ತಾವಾಗಿಯೇ ಒದಗಿದವುಗಳು. ಮನುಷ್ಯರು ರಾಕ್ಷಸರ ಮೇಲೆ ತಾವಾಗಿ ಯುದ್ಧಕ್ಕೆ ಹೊರಡುವದೇನು! ಕಪಿಗಳು ರಾಜರ ಆಜ್ಞೆಯನ್ನು ತಲೆಯಲ್ಲಿ ಹೊತ್ತು ನಡೆಸುವದೇನು! ಇವೆಲ್ಲಾ ದೈವವಿಲಾಸ. ಇದನ್ನು ನೋಡಿಯೇ ಅನರ್ಘರಾಘವಕವಿಯು

"ಯಾಂತಿ ನ್ಯಾಯಪ್ರವೃತ್ತಸ್ಯ ತಿರ್ಯಂಚೋಽಪಿ ಸಹಾಯತಾಂ ।
ಅಪಂಥಾನಂ ತು ಗಚ್ಛಂತಂ ಸೋದರೋಽಪಿ ವಿಮುಂಚತಿ ॥"

ಎಂದು ಹೇಳಿದ್ದಾನೆ. ನ್ಯಾಯಮಾರ್ಗದಲ್ಲಿ ಹೊರಟವನಿಗೆ ಪಶುಪಕ್ಷಿಗಳೂ ನೆರವಾಗುವವೆಂದೂ ಅನ್ಯಾಯದಲ್ಲಿ ಮುಂದುವರಿಯುವವನನ್ನು ಒಡಹುಟ್ಟಿದವನೂ ಬಿಟ್ಟು ತೊಲಗುವನೆಂದೂ ಅದರ ತಾತ್ಪರ್ಯ. ಆದ್ದರಿಂದ ಪ್ರತಿಯೊಬ್ಬನೂ ಸಾರ್ವಜನಿಕಹಿತದ ಯೋಚನೆಯನ್ನು ತಕ್ಕಷ್ಟು ಹಚ್ಚಿಕೊಳ್ಳತಕ್ಕದ್ದು.

ಈ ರೀತಿಯಲ್ಲಿ ಮನಸ್ಸು ಅರಳುವ ಸಾಮರ್ಥ್ಯವನ್ನು ಪಡೆಯುವದಕ್ಕೆ ಸಾಧನವಾಗಿ ನಮ್ಮವರು ಹಬ್ಬಗಳನ್ನು ಏರ್ಪಡಿಸಿದ್ದಾರೆ. ಪ್ರತಿಯೊಂದು ಹಬ್ಬದ ರಹಸ್ಯವನ್ನು ತಿಳಿದುಕೊಂಡು ಅವುಗಳನ್ನು ಅರ್ಥವತ್ತಾಗಿ ಆಚರಿಸುವದರಿಂದ ಮನುಷ್ಯನ ಮನಸ್ಸು ಶುದ್ಧವಾಗಿ ಬೇಕಾದಷ್ಟು ಹಿಗ್ಗುತ್ತದೆ. ದಿಕ್ಪ್ರದರ್ಶನಾರ್ಥವಾಗಿ ಇಲ್ಲಿ ಕೆಲವು ಹಬ್ಬಗಳನ್ನು ಸೂಚಿಸುವೆವು.

ಹಿಂದಿನ ವರ್ಷವು ಕಳೆದು ಎರಡನೇ ವರ್ಷದ ಪ್ರಥಮ ದಿನವು ಚೈತ್ರಶುದ್ಧಪ್ರತಿಪದೆ. ಪ್ರತಿದಿನವೂ ಉದಯಕಾಲದಲ್ಲಿ

ಉದಯರಾಗವನ್ನು ಹೇಳುವಂತೆ ಹಿಂದಿನ ವರ್ಷದ ಕುತ್ತದಿಂದ ಪಾರಾಗಿ ಪಡೆದ ಹೊಸವರ್ಷದ ಮೊದಲನೆಯ ಈ ದಿನವು ಮುಖ್ಯವಾದ ಹಬ್ಬವಾಗಿದೆ. ಇದಕ್ಕೆ ಯುಗಾದಿಯೆಂದು ಹೆಸರು. ಈ ದಿನ ದೇವತಾರಾಧನೆಯನ್ನು ಮಾಡಿ, ಮುಂದೆ ಬರುವ ಸುಖದುಃಖಗಳನ್ನೆಲ್ಲಾ ಸಮತ್ವಬುದ್ಧಿಯಿಂದ ಕಾಣುತ್ತ ಕರ್ಮಯೋಗದಲ್ಲಿ ಮುಂದುವರಿಯುವ ಯೋಗ್ಯತೆಯನ್ನು ಕೊಡೆಂದು ದೇವರನ್ನು ಪ್ರಾರ್ಥಿಸಿ, ಇದರ ಸೂಚಕವಾಗಿ ಬೇವುಬೆಲ್ಲವನ್ನು ತಿನ್ನುವದುಂಟು. ಇದಲ್ಲದೆ ಇದು ರಾಮರಾಜ್ಯ ಪ್ರಾರಂಭವಾದಂಥ ದಿನವಾದ್ದರಿಂದ ಅಂಥ ರಾಜ್ಯವನ್ನು ಕಾಣುವ ಸುಯೋಗವು ನಮಗೆ ಮತ್ತೊಮ್ಮೆ ಉಂಟಾಗಲೆಂದೂ ಆ ದಿನದ ಉತ್ಸವದಲ್ಲಿ ಉತ್ಸಾಹಗೊಳ್ಳಬೇಕು.

ಚೈತ್ರಶುದ್ಧನವಮಿಯು ಪ್ರಸಿದ್ಧವಾದ ಶ್ರೀರಾಮನವಮಿ; ಪಿತೃಭಕ್ತಿಪರಾಯಣನಾದ ಶ್ರೀರಾಮಚಂದ್ರಮೂರ್ತಿಯು ಮನುಷ್ಯಕೋಟಿಯ ಸದಾಚಾರಕ್ಕೆ ಮೇಲುಪಂಕ್ತಿಯನ್ನು ಹಾಕಿಕೊಟ್ಟು ದುಷ್ಟನಾದ ರಾವಣನೇ ಮೊದಲಾದವರನ್ನು ಸಂಹರಿಸಿ ಭಕ್ತರನ್ನೆಲ್ಲಾ ಉದ್ಧಾರಮಾಡುವದಕ್ಕಾಗಿ ಅವತಾರವನ್ನು ಮಾಡಿದ ದಿನ. ನಮ್ಮಲ್ಲಿಯೂ ಆ ಬಗೆಯ ಕಲ್ಯಾಣಗುಣಗಳುಂಟಾಗುವದಕ್ಕಾಗಿ ನಾವು ಆ ದಿನದ ಉತ್ಸವವನ್ನು ನಡೆಸಬೇಕು.

ಚೈತ್ರಶುದ್ಧದ ಹುಣ್ಣಿಮೆಯು ಹನುಮಜ್ಜಯಂತಿಯ ಹಬ್ಬ; ಹುಟ್ಟಿದಂದಿನಿಂದ ಬ್ರಹ್ಮಚರ್ಯೆಯನಿಷ್ಠೆಯಲ್ಲಿದ್ದು ಚಿರಂಜೀವಿಯೆಂಬಪದವಿಯನ್ನು ಪಡೆದು ವಜ್ರಶರೀರಿಯಾಗಿ ದಾಸ್ಯಭಕ್ತಿಯಿಂದ ಶ್ರೀರಾಮಚಂದ್ರನನ್ನು ಸಂಪ್ರೀತಿಗೊಳಿಸಿದಂಥ ಮಾರುತಿಯ ಜನ್ಮದಿನ. ಶರೀರಸಾಮರ್ಥ್ಯವನ್ನೂ ಬುದ್ಧಿಸಾಮರ್ಥ್ಯವನ್ನೂ ಬಯಸುವವರು ಆ ಹಬ್ಬವನ್ನು ಸಾಧಿಸಬೇಕು.

ವೈಶಾಖಶುದ್ಧ ಚತುರ್ದಶಿಯು ನೃಸಿಂಹಜಯಂತಿಯು; ಇದು ತನ್ನ ಹೊರತು ಬೇರೆ ದೇವರಿಲ್ಲವೆಂದು ಆಸುರೀಸ್ವಭಾವದಿಂದ ಮೆರೆಯುತ್ತಿದ್ದ ಹಿರಣ್ಯಕಶಿಪುವನ್ನು ಕೊಲ್ಲುವದಕ್ಕಾಗಿ ಮಹಾವಿಷ್ಣು ನರಸಿಂಹವತಾರವನ್ನು ಮಾಡಿದ ದಿನ. ದೇವರಿದ್ದಾನೆಂಬ ಭಾವನೆಯು ಉಜ್ಜೀವನವಾಗುವದಕ್ಕೆ ಈ ಹಬ್ಬವು ಅಗತ್ಯ.

ಶ್ರಾವಣಶುದ್ಧ ಪಂಚಮಿಯು ನಾಗರಪಂಚಮಿ; ಮೇಲೆ ಸಿಕ್ಕಿದ್ದ ಚೆಂಡನ್ನು ತರುವದಕ್ಕಾಗಿ ಮರವನ್ನು ಹತ್ತಿದಾಗ ಕೊಂಬೆಯು ಮುರಿದು ಮಡುವಿನಲ್ಲಿ ಬಿದ್ದ ಶ್ರೀಕೃಷ್ಣನಿಂದ ಅಲ್ಲಿದ್ದ ಕಾಲಿಯವೆಂಬ ಕ್ರೂರಸರ್ಪವು ಹಣ್ಣಾಗಿ ತನ್ನ ಕ್ರೂರತನವನ್ನು ಬಿಟ್ಟ ದಿವಸವು. ಆಸುರೀಸ್ವಭಾವವನ್ನು ಬಿಡುತ್ತಲೇ ಎಂಥ ವಸ್ತುವಾದರೂ ದೈವೀ ಸಂಪತ್ತನ್ನು ಹೊಂದಿ ಪೂಜ್ಯತೆಯನ್ನು ಪಡೆಯುವದೆಂಬುದನ್ನು ತೋರಿಸುವದಕ್ಕಾಗಿ ಈದಿನ ಆ ಹಾವಿನ ಜಾತಿಗೆಲ್ಲಾ ಹಾಲುತುಪ್ಪವನ್ನಿಟ್ಟಾದರಿಸುವ ಪದ್ಧತಿಯುಂಟು. ಇನ್ನೊಂದೇನೆಂದರೆ ಹಾವಿನಂಥ ದುಷ್ಟಪ್ರಾಣಿಗಳಲ್ಲಿ ಕೂಡ ಭೂತದಯೆಯನ್ನು ಮಾಡಬೇಕೆಂಬ ಧರ್ಮಬೋಧೆಗೆ ಈದಿನವು ಸುದಿನ.

ಶ್ರಾವಣಬಹುಳ ಅಷ್ಟಮಿಯು ಶ್ರೀಕೃಷ್ಣಾಷ್ಟಮಿ. ಲೋಕದಲ್ಲಿ ಕ್ಷುದ್ರಜನಗಳ ಪ್ರಾಬಲ್ಯವು ಹೆಚ್ಚಾಗಿ ಎಲ್ಲೆಲ್ಲಿಯೂ ಅನ್ಯಾಯವೂ ಅನೀತಿಯೂ ಅನಾಚಾರವೂ ಹುಟ್ಟಿದಾಗ ಅವರನ್ನೆಲ್ಲಾ ನೆಲಕ್ಕೆ ತುಳಿದು ತನ್ನ ಯೋಗಮಾಯಾಶಕ್ತಿಯನ್ನು ಪ್ರಕಟಮಾಡುವದಕ್ಕಾಗಿ ಪರಮಾತ್ಮನು ಶ್ರೀಕೃಷ್ಣಾವತಾರವನ್ನು ಮಾಡಿದ ದಿನ. ದುಷ್ಟಶಿಕ್ಷಣೆಯನ್ನು ಶಿಷ್ಟರಕ್ಷಣೆಯನ್ನು ಬಹುಮಾನಿಸುವವರು ಈದಿನ ಅವಶ್ಯಕವಾಗಿ ಶ್ರೀಕೃಷ್ಣನ ಉಪಾಸನೆಯನ್ನು ಮಾಡಬೇಕು.

ಭಾದ್ರಪದಶುದ್ಧ ಚತುರ್ಥಿಯು ಗಣೇಶನ ಹಬ್ಬ. ಗಣಪತಿಯು ಗಜಾಸುರನೆಂಬ ಉನ್ಮತ್ತನಾದ ರಾಕ್ಷಸನನ್ನು ಲೀಲೆಯಿಂದ ಸಂಹರಿಸಿ ಸಮಸ್ತವಿಘ್ನಗಳ ಮೇಲಿನ ನಾಯಕತ್ವವನ್ನು ಪಡೆದ ಪವಿತ್ರ ದಿನ. ಧರ್ಮರಾಯನು ಕೂಡ ತನ್ನ ಸ್ವರಾಜ್ಯಪ್ರಾಪ್ತಿಗೆ ಇದ್ದ ಪ್ರತಿಬಂಧಕಗಳನ್ನು ಕಳೆದುಕೊಳ್ಳುವದಕ್ಕಾಗಿ ಗಣಪತಿಯನ್ನು ಪೂಜಿಸಿರುವದರಿಂದ ನಮ್ಮ ಶ್ರೇಯಃಪ್ರಾಪ್ತಿಗೆ ಅಡ್ಡವಾಗಿರುವ ವಿಘ್ನಗಳನ್ನು ದೂರಮಾಡುವದಕ್ಕಾಗಿ ನಾವೆಲ್ಲರೂ ಈ ವ್ರತವನ್ನು ಹಿಡಿಯಲೇ ಬೇಕು.

ಆಶ್ವಿನಶುದ್ಧ ದಶಮಿಯು ವಿಜಯಾದಶಮಿಯು; ಪಾಂಡವರು ೧೨ ವರ್ಷ ವನವಾಸವನ್ನೂ ೧ ವರ್ಷ ಅಜ್ಞಾತವಾಸವನ್ನೂ ತೀರಿಸಿ ತಮ್ಮ ದುರ್ದೈವವನ್ನೆಲ್ಲಾ ಕಳೆದುಕೊಂಡು ತಮ್ಮ ಹಿಂದಿನ ಧನುರ್ಬಾಣಗಳನ್ನೆಲ್ಲಾ ನಿರಾ

ಟನಗರದ ಮುಂದಿನ ಶಮೀವೃಕ್ಷದಿಂದ ತಿರುಗಿ ತೆಗೆದುಕೊಂಡು ದಿಗ್ವಿಜಯಕ್ಕೆ ಹೊರಟ ದಿನ. ಆ ದಿನದ ಮುಹೂರ್ತಪ್ರಭಾವದಿಂದ ಅವರಿಗೆ ಮುಂದೆ ಸಂಗ್ರಾಮಜಯವಾದ್ದರಿಂದ ಅದನ್ನು ಜ್ಞಾಪಕಮಾಡಿಕೊಂಡು ಪಾಂಡವರಂತೆ ನಮಗೂ ಮುಂದಿನ ಸುಯೋಗದ ಕಾಲವು ಬರುವದೆಂಬ ಭರವಸವನ್ನಿಟ್ಟುಕೊಳ್ಳುವದಕ್ಕೆ ಈ ಹಬ್ಬವು ಒಳ್ಳೇ ಅನುಕೂಲವಾಗುತ್ತದೆ.

ಆಶ್ವಿನ ಬಹುಳತ್ರಯೋದಶಿಯಿಂದ ಎಡಬಿಡದೆ ಕಾರ್ತಿಕಶುದ್ಧ ಬಿದಿಗೆಯ ವರೆಗೆ ಐದು ದಿನ ದೀಪಾವಳಿಯ ಹಬ್ಬ. ಇವುಗಳಲ್ಲಿ ಮೊದಲನೆಯ ಮೂರು ದಿನಗಳು ಬಲಿಚಕ್ರವರ್ತಿಯಿಂದ ದಾನವಾಗಿ ಬಂದ ಮೂರು ಹೆಜ್ಜೆಯ ಭೂಮಿಯನ್ನು ವಾಮನನು ಆಳಿದ ದಿನಗಳು. ಮೂರುಲೋಕವನ್ನಾದರೂ ಕೊಟ್ಟು ಆಡಿದ ಮಾತನ್ನುಳಿಸಿಕೊಂಡ ಬಲಿಚಕ್ರವರ್ತಿಯೆಂಬ ಮಹಾಭಕ್ತನ ನೆನಪಿಗಾಗಿ ಈ ಉತ್ಸವವನ್ನು ಮಾಡಿ ಬಲಿಚಕ್ರವರ್ತಿಯ ಅಂಶವನ್ನು ನಮ್ಮೊಳಕ್ಕೆ ಬರಮಾಡಿಕೊಳ್ಳಬೇಕು. ಬಲಿಯು ತನ್ನ ಪ್ರಜೆಗಳ ಐಶ್ವರ್ಯವನ್ನು ನೋಡಿ ಸಂತೋಷಿಸುವಂಥ ರಾಜನಾಗಿದ್ದದರಿಂದ ಅವನ ಹಿಂದಿನ ಉಪಕಾರವನ್ನು ನೆನೆಯುವದಕ್ಕಾಗಿ ಮತ್ತು ಅಂಥ ಸುಯೋಗವನ್ನು ಮತ್ತೆ ಪಡೆಯುವದಕ್ಕಾಗಿ ಅಮಾವಾಸ್ಯೆಯ ದಿನ ಧನಲಕ್ಷ್ಮಿಯ ಪೂಜೆಯಾಗುವದು. ಬಲಿರಾಜನು ಗೋಗಳ ಮೇಲೆ ಬಹು ಪ್ರೀತಿಯುಳ್ಳವನಾಗಿದ್ದದರಿಂದ ಅವನ ತೃಪ್ತಿಗಾಗಿ ಮತ್ತು ಅವನ ಗುಣವನ್ನು ಅನುಕರಿಸುವದಕ್ಕಾಗಿ ನಾವು ಪ್ರತಿಪದೆಯ ದಿವಸ ಗೋಪೂಜೆಯನ್ನು ಮಾಡಬೇಕು. ಬಲಿಚಕ್ರವರ್ತಿಯ ರಾಜ್ಯವು ಆನಂದಮಯವಾಗಿತ್ತೆಂಬದನ್ನು ಸ್ಮೃತಿಗೆ ತಂದುಕೊಳ್ಳುವದಕ್ಕಾಗಿ ಈ ಹಬ್ಬದಲ್ಲಿ ದೀಪಗಳನ್ನು ಹಚ್ಚುವದು ಬಹಳ.

ಮಾಘಬಹುಳಚತುರ್ದಶಿಯು ಶಿವರಾತ್ರಿ; ಒಂದು ದಿನ ವಿಷ್ಣುವೂ ಬ್ರಹ್ಮನೂ ಈಶ್ವರನ ಆದ್ಯಂತಗಳನ್ನು ಕಂಡುಹಿಡಿಯಬೇಕೆಂದು ತಮ್ಮ ಸರ್ವಸಾಹಸವನ್ನು ಮಾಡಿದರೂ ಈಶ್ವರನ ಆಳವು ಅವರಿಗೆ ತಿಳಿಯಲಿಲ್ಲ. ಈ ಉದ್ಯೋಗದಲ್ಲಿ ಅವರು ಸೊರಗಿ ನಿರಾಶರಾಗಿ ಆ ದಿನದ ಆಹಾರವನ್ನು ಕೂಡ ಬಿಟ್ಟು ಅರ್ಧರಾತ್ರಿಯವರೆಗೂ ಮನಸ್ಸಿಗೆ ಅದೇ ಯೋಚ

ನೆಯನ್ನು ಹಚ್ಚಿಕೊಂಡಿದ್ದರು. ಇದರಿಂದ ಸಂತುಷ್ಟನಾದ ಈಶ್ವರನು ಆ ನಡುರಾತ್ರಿಯಲ್ಲಿ ಅವರ ಮುಂದೆ ತಾನೇ ಆವಿರ್ಭೂತನಾಗಿ ಅವರನ್ನು ಸಂತಯಿಸಿದ್ದಲ್ಲದೆ ಪ್ರತಿವರ್ಷದ ಆ ದಿವಸ ಆ ರೀತಿಯಾಗಿ ನಿರಾಹಾರಿಗಳಾಗಿ ಈಶ್ವರೋಪಾಸನೆಯನ್ನು ಮಾಡುವವರಿಗೆಲ್ಲಾ ತಾನು ಅನುಗ್ರಹವನ್ನು ತೋರಿಸುವೆನೆಂದು ಹೇಳಿದನು. ಆದ್ದರಿಂದ ಎಲ್ಲರೂ ಆ ವ್ರತವನ್ನು ಮಾಡತಕ್ಕದ್ದು. ಶಿವರಾತ್ರಿಯ ವಿಷಯಕ್ಕೆ ಇನ್ನೊಂದು ಕಥೆಯೂ ಇದೆ. ತ್ರಿಪುರಾಸುರನ ಹಾವಳಿಯಿಂದ ಬೆಂದು ಬೆಂಡಾದ ಬ್ರಹ್ಮನು ಅವನ ನಾಶಕ್ಕೋಸುಗ ಮಾಡಬೇಕೆಂದು ಏಕಾಗ್ರಚಿತ್ತನಾಗಿ ಪರಮಾತ್ಮನನ್ನು ಧ್ಯಾನಿಸುತ್ತಿದ್ದನಂತೆ. ಅವನ ವಿಚಾರಸಾಮರ್ಥ್ಯವೆಲ್ಲಾ ಒಟ್ಟುಗೂಡಿ ಈಶ್ವರರೂಪನಾಗಿ ಅವನ ಲಲಾಟವನ್ನು ಒಡೆದುಕೊಂಡು ಹೊರಟಿದ್ದು ತ್ರಿಪುರಾಸುರನಿಗೆ ಮೃತ್ಯುವಾಯಿತಂತೆ. ಆ ದಿನವು ಮಾಘ ಬಹುಳಚತುರ್ದಶಿಯಾಗಿದ್ದುದರಿಂದ ಅವರ ಸ್ಮರಣಾರ್ಥವಾಗಿಯಾಗಲಿ ಅಥವಾ ಜಗತ್ಕಂಟಕನ ವಿನಾಶಕ್ಕಾಗಿ ನಮ್ಮ ವಿಚಾರಗಳೆಲ್ಲಾ ಮೂರ್ತೀಭವಿಸುವದಕ್ಕಾಗಲಿ ಈ ವ್ರತವು ಸಹಕಾರಿಯಾಗುವದು.

ಫಾಲ್ಗುನಶುದ್ಧಪೂರ್ಣಿಮೆಯು ಹೋಳೀಕೋತ್ಸವ. ಇದು ಈಶ್ವರನಿಂದ ಕಾಮದಹನವಾದ ದಿನ. ವಿಷಯವಾಸನೆಗಳನ್ನು ಹೋಗಲಾಡಿಸಬೇಕೆಂದು ತಿಳಿದುಕೊಳ್ಳುವದಕ್ಕೆ ನಾವು ಕೂಡ ಈ ಹಬ್ಬವನ್ನು ನಡಿಸಬೇಕು.

ಇಂಥ ಹಬ್ಬಗಳು ನಮ್ಮ ಹಿಂದುಸ್ಥಾನದಲ್ಲಿ ಪ್ರತಿ ತಿಂಗಳಲ್ಲಿಯೂ ಏಕೆ, ಪ್ರತಿದಿನವೂ ಇದ್ದೇ ಇರುವವು. ಈ ದೇವತಾಸಂಬಂಧವಾದ ಉತ್ಸವಗಳ ಜೊತೆಗೆ ದೇವತಾಂಶಸಂಭೂತರಾದ ಆಚಾರ್ಯಪುರುಷರ ಜಯಂತ್ಯುತ್ಸವಗಳೂ ಇರುವವು. ಅನೇಕ ಆಚಾರ್ಯಪುರುಷರು ನಮ್ಮ ದೇಶದಲ್ಲಿ ಜನ್ಮವನ್ನೆತ್ತಿ ಧರ್ಮವನ್ನುದ್ಧರಮಾಡಿ ತಮ್ಮ ದೇವತ್ವವನ್ನು ಪ್ರಕಟಿಸಿ ಕೀರ್ತಿಶರೀರದಿಂದ ಅಜರಾಮರರಾಗಿ ಉಳಿದಿರುವದರಿಂದ ಶ್ರೀರಾಮನವಮಿ, ಶ್ರೀಕೃಷ್ಣಾಷ್ಟಮಿ ಮೊದಲಾದ ದೇವತಾಜನ್ಮದಿನಗಳಂತೆ ದೇವತಾಂಶಸಂಭೂತರ ಜನ್ಮದಿನಗಳನ್ನು ಯಥಾವಿಧಿಯಾಗಿ ನೆರವೇರಿಸಬೇಕು. ನಮ್ಮ ಹಿಂದುಸ್ಥಾನವು ಅನೇಕಧರ್ಮಸ್ಥಾಪಕರ

ತೌರುಮನೆ ಮತ್ತು ಅನೇಕ ಧರ್ಮಸಂಘದವರ ಸಂಗಮಸ್ಥಾನ. ಆದ್ದರಿಂದ ನಮ್ಮ ದೇಶದಲ್ಲಿ ಎಲ್ಲಾ ಧರ್ಮಸ್ಥಾಪಕರ ಜಯಂತಿಯೂ ನಡೆಯಬೇಕು.

ಯಾವ ಯಾವ ಹಬ್ಬಗಳನ್ನು ಯಾವ ಯಾವ ಪದ್ಧತಿಯಿಂದ ಮಾಡಬೇಕೆಂಬುದು ಪ್ರತಿಯೊಬ್ಬರ ಮನೆಗಳಲ್ಲಿಯೂ ಈಗ ಸ್ಪಷ್ಟಿಗೊಂಡಿಲ್ಲದಿದ್ದರೂ ಹಾಗೂ ಹೀಗೂ ಇನ್ನೂ ಅರ್ಧಾರ್ಧ ಕಣ್ಣುಬಿಟ್ಟುಕೊಂಡಾದರೂ ಇರುವವು. ಸೇರಿಸಿಬಿಟ್ಟಿರುವ ಅವಕ್ಕೆ ಸಂಜೀವನವನ್ನೆರೆದು ಬದುಕಿಸುವದಾಗಲಿ ಕತ್ತುಹಿಸುಕಿ ಕೊಲ್ಲುವದಾಗಲಿ ಈಗಿನ ಜನತೆಯ ಪಾಲಿಗೆ ಬಂದಿದೆ. ಆ ಹಬ್ಬಗಳ ಉದ್ದೇಶವನ್ನು ಸಾರ್ಥಕಗೊಳಿಸುವದು ಅತ್ಯಂತಶ್ರೇಯಸ್ಕರವಾದದ್ದು. ಅನಾದಿಕಾಲದಿಂದ ಇಂಥ ಪದ್ಧತಿಗಳಿಗೆ ಆಶ್ರಯವನ್ನು ಕೊಟ್ಟು ಪ್ರಾಚೀನಸಂಪ್ರದಾಯವನ್ನು ಪೋಷಿಸುತ್ತ ಧರ್ಮವನ್ನು ಕುಲಕ್ರಮಾಗತವಾಗಿ ನಡೆಸಿಕೊಂಡು ಬಂದಿರುವ ನಮ್ಮ ಹಿರಿಯರ ಉಪಕಾರವು ನಮಗೆ ಚಿರಸ್ಮರಣೀಯವಾಗಿದೆ. ನಮ್ಮ ಹಿರಿಯರು ಎಂಥೆಂಥ ಬಿಕ್ಕಟ್ಟಿನ ಪ್ರಸಂಗಗಳು ಬಂದರೂ ತಮ್ಮ ಸರ್ವಸಂಪತ್ತನ್ನು ಸೂರೆಗೊಟ್ಟರೂ ಧರ್ಮವನ್ನು ಮಾತ್ರ ಕೈಬಿಡದೆ ಅದನ್ನು ನಮಗೆ ಮೂಲಧನವಾಗಿ ಕಾಪಾಡಿಟ್ಟು ಅದನ್ನು ನಾವು ಮುಂದೆ ಬೆಳೆಸುವದಕ್ಕೆ ಆಗತ್ಯವಾದ ದೇಹವನ್ನೂ ಅನುಕೂಲತೆಗಳನ್ನೂ ನಮ್ಮ ಪಾಲಿಗೆ ಬಿಟ್ಟಿರುವದರಿಂದ ನಾವು ಪ್ರತಿವರ್ಷವೂ ಅವರ ತೃಪ್ತ್ಯರ್ಥವಾಗಿ ಅಥವಾ ಸ್ಮರಣಾರ್ಥವಾಗಿ ಅವರವರ ಪದ್ಧತಿಯಂತೆ ಅವರ ಮೃತತಿಥಿಯನ್ನು ಆಚರಿಸಬೇಕು. ದೇವತಾಂಶಸಂಭೂತರು ಕೀರ್ತಿಶರೀರಿಗಳಾಗಿ ಚಿರಜೀವಿಗಳಾಗಿರುವದರಿಂದ ಅವರ ಉತ್ಸವಕ್ಕೆ ಜನ್ಮತಿಥಿಯು ಮುಖ್ಯ. ಸಾಮಾನ್ಯಮನುಷ್ಯರ ವಿಚಾರವು ದೇವತಾಂಶಸಂಭೂತರಿಂದ ಬೇರೆಯಾಗಿ ಕಾಣುವಂತೆ ಅಂಥವರ ಉತ್ಸವಕ್ಕೆ ಮೃತತಿಥಿಯನ್ನು ಹಿಡಿಯುವ ರೂಢಿಯಿದೆ. ಇದಕ್ಕೆ ಶ್ರಾದ್ಧವೆಂದು ಹೆಸರು. ಹಬ್ಬಗಳಾಗಲಿ, ಜಯಂತಿಗಳಾಗಲಿ, ಶ್ರಾದ್ಧಗಳಾಗಲಿ— ಎಲ್ಲವನ್ನೂ ಎಲ್ಲರೂ ತಮ್ಮ ತಮ್ಮ ಸಂಪ್ರದಾಯವನ್ನನುಸರಿಸಿ ನಡೆಸಬೇಕು. ಸಾರ್ವಜನಿಕಹಿತವನ್ನುಂಟುಮಾಡುವ ಬುದ್ಧಿಗೆ ದಾರಿಯನ್ನು ಮಾಡಿ

ಕೊಳ್ಳಬೇಕೆಂಬ ಈ ಕಾಮನೆಯು ಧರ್ಮಕ್ಕೆ ಅನುಗುಣವಾದ್ದರಿಂದ ವಿಹಿತವಾದದ್ದು.

ವಿಹಿತವಾದ ಇಚ್ಛೆಯ ವಿಷಯವಾಗಿ ಶ್ರೀರಾಮಕೃಷ್ಣಪರಮಹಂಸರು ಹೇಳಿರುವ ಒಂದು ಮಾತು ಈ ಸಂದರ್ಭದಲ್ಲಿ ಹೇಳತಕ್ಕದ್ದಾಗಿದೆ. ಅದೇನೆಂದರೆ:—“ಇಚ್ಛೆ, ಹಗೆತನ— ಮೊದಲಾದವುಗಳು ಪ್ರಾಪಂಚಿಕವಸ್ತುಗಳ ಸಂಬಂಧವಾಗಿರುವವರೆಗೂ ಶತ್ರುಗಳಾಗಿರುವುವು. ಆದರೆ ಅವು ದೇವರ ಕಡೆಗೆ ತಿರುಗಿದಾಗ ಮನುಷ್ಯನಿಗೆ ಉತ್ತಮಸ್ನೇಹಿತರೇ ಆಗುವುವು. ಏಕೆಂದರೆ ಅವು ಅವನನ್ನು ದೇವರ ಕಡೆಗೆ ತೆಗೆದುಕೊಂಡು ಹೋಗುವುವು. ಪ್ರಾಪಂಚಿಕಪದಾರ್ಥಗಳ ಮೇಲಿರುವ ಅತ್ಯಾಶೆಯನ್ನು ದೇವರ ಮೇಲೆ ತಿರುಗಿಸಬೇಕು. ನೀವು ನಿಮ್ಮ ನೆರೆಹೊರೆಯವರ ಮೇಲೆ ತೋರಿಸುವ ಕೋಪವನ್ನು ಭಗವಂತನು ನಮಗೆ ದರ್ಶನವನ್ನು ಕೊಡಲಿಲ್ಲವಲ್ಲ!— ಎಂಬುದರ ಕಡೆಗೆ ತಿರುಗಿಸಬೇಕು. ಇಚ್ಛೆ, ಹಗೆತನ— ಮೊದಲಾದವುಗಳನ್ನು ನಿರ್ಮೂಲಮಾಡಲಾಗದು; ಅವುಗಳನ್ನು ಸುಶಿಕ್ಷಿತವಾಗಿ ಮಾಡಬೇಕು.”

## ಕರ್ಮದ ಅವಿನಾಶಿತ್ವ.

ಕರ್ಮವನ್ನು ಮಾಡುತ್ತ ಮಾಡುತ್ತ ಇರುವಾಗಲೇ, ನಮಗೆ ದೇವರು ಕಾಣುವದಕ್ಕೆ ಮುಂಚೆಯೇ, ನಮ್ಮ ಜೀವನಯಾತ್ರೆಯು ಮುಗಿದುಬಿಟ್ಟರೆ ನಾವು ಮಾಡಿದ ಕರ್ಮದ ಉಪಯೋಗವೇನಾಯಿತೆಂಬ ಶಂಕೆಯುಂಟಾಗಬಹುದು. ಕರ್ಮವು ಎಂದಿಗೂ ನಾಶವಾಗತಕ್ಕದ್ದಲ್ಲ. ಅದು ಇಂದಿಲ್ಲದಿದ್ದರೆ ನಾಳೆಯಾದರೂ ಫಲವನ್ನು ಕೊಟ್ಟೇ ಮುಗಿಯುವದು. ನಮಗೆ ಅನಿರೀಕ್ಷಿತವಾಗಿ ಒದಗುವ ಸುಖಕಷ್ಟಗಳೆಲ್ಲಾ ನಮ್ಮ ಹಿಂದಿನ ಯಾವುದೋ ಒಂದು ಕರ್ಮದ ಫಲಗಳೇ. ಒಡನೆ ಫಲಗಳನ್ನು ಕೊಡಲಾರದಂಥ ಕೆಲವು ಕರ್ಮಗಳು ಸಮಯವನ್ನು ಕಾದಿದ್ದು ಮುಂದೆ ಎಂದೋ ಒಂದುದಿನ ತಮ್ಮ ಫಲವನ್ನು ಮುಂದಕ್ಕೆ ಚಾಚುವವು. ಈ ವಿಷಯದಲ್ಲಿ ಶ್ರೀಮತ್ಪರಮಹಂಸ ರಾಮತೀರ್ಥರು ಹೇಳಿರುವ ಒಂದು ಕಥೆಯು ಬಹು ಚೆನ್ನಾಗಿ ಹೊಂದುತ್ತದೆ. ಕಲ್ಲನೆಂಬುವನು ಮಲ್ಲನೆಂಬುವನನ್ನು ಒಂದು

ದಿನ ಹೀಯಾಳಿಸಿ ಪಾತಕನಾಗುತ್ತಾನೆ. ಇಷ್ಟರಿಂದಲೇ ಮಲ್ಲನು ಕೋಪಾವೇಶದಿಂದ ಪರವಶನಾಗಿ ಕಲ್ಲನ ತಲೆಯನ್ನು ಹಾರಿಸಿಬಿಡುತ್ತಾನೆ. ಒಂದು ಹೀಯಾಳಿಸಿದ ಪಾತಕಿಗಾಗಿ ತಲೆಯನ್ನು ತೆಗೆಯುವಷ್ಟು ಕೋಪವು ಬರುವದನ್ನು ನಾವು ಎಲ್ಲಿಯೂ ಕಂಡಿಲ್ಲ. ಈಗ ಮಲ್ಲನಿಗೆ ಅಷ್ಟು ಕೋಪವು ಎಲ್ಲಿಂದ ಬಂತು? ಕಲ್ಲನ ಮರಣಕ್ಕೆ ಕಾರಣರು ಯಾರು? ಈ ವಿಷಯವು ವಿಚಾರಾಸ್ಪದವಾಗಿದೆ. ಲೌಕಿಕನ್ಯಾಯಾಧಿಪತಿಯು ಮಲ್ಲನನ್ನೇ ಕೊಲೆಗಾರನೆಂದು ನಿರ್ಧರಿಸಬಹುದು; ಒಳಹೊಕ್ಕು ನೋಡಿದವರಿಗೆ ತಿಳಿಯಬರುವದೇನೆಂದರೆ ಕಲ್ಲನು ಈ ಜನ್ಮದಲ್ಲಿಯೋ ಹಿಂದಿನ ಜನ್ಮದಲ್ಲಿಯೋ ಅನೇಕಸಲ ಅನೇಕರಿಗೆ ಹೀಗೆಯೇ ಹೀಯಾಳಿಸಿದ್ದನು. ಅವರು ಇವನ ಮೇಲೆ ವೈರಮಾಡಲಾರದೆ ತಮ್ಮ ಕೋಪವನ್ನು ತಮ್ಮಲ್ಲಿಯೇ ನುಂಗಿಕೊಂಡು ಇವನಿಗಾಪತ್ತೊದಗಲೆಂದು ಒಂದೊಂದು ಹರಕೆಯನ್ನು ಹಾಕಿದ್ದರು. ಕಲ್ಲನ ಪ್ರತಿಯೊಂದು ಹೀಯಾಳಿಸುವಿಕೆಯೂ ಹೀಗೆ ತನ್ನ ಫಲವನ್ನು ಕೂಡಿಹಾಕುತ್ತಿತ್ತು. ಈಗ ಅವನು ಮಲ್ಲನನ್ನು ಹೀಯಾಳಿಸುತ್ತಲೇ ಅದುವರೆಗಿನ ಎಲ್ಲಾ ಫಲಗಳೂ ಒಟ್ಟುಗೂಡಿ ಅನೇಕ ಪಾಲುದಾರರ ಹಣಗಳೆಲ್ಲಾ ಕೂಡಿ ಒಂದು ವ್ಯಾಪಾರವನ್ನಾರಂಭಿಸುವದಕ್ಕೆ ತಕ್ಕಷ್ಟಾದೊಡನೆಯೇ ಒಬ್ಬ ಸಮರ್ಥನಾದ ವ್ಯವಸ್ಥಾಪಕನು ಆ ವ್ಯಾಪಾರವನ್ನು ನಡೆಸಿಬಿಡುವಂತೆ— ಕಲ್ಲನ ಮರಣಕ್ಕೆ ಕಾರಣವಾದವು. ಕಲ್ಲನ ಮರಣಕ್ಕೆ ಮಲ್ಲನು ವ್ಯವಸ್ಥಾಪಕನ ಹಾಗೆ. ಪಾಲಿನ ವ್ಯಾಪಾರದಲ್ಲಿ ಹಣವೆಲ್ಲಾ ವ್ಯವಸ್ಥಾಪಕನದೇ ಆಗಿರುವದಿಲ್ಲ. ಅವನೊಬ್ಬ ಪಾಲುದಾರನಾಗಿ ವ್ಯವಸ್ಥೆಯನ್ನು ಮಾಡುವ ಸಾಮರ್ಥ್ಯವನ್ನುಳ್ಳವನಾಗುವನು. ಅದ್ದರಿಂದ ಆ ವ್ಯಾಪಾರದ ಆದಾಯವಷ್ಟಕ್ಕೆ ಮಲ್ಲನೊಬ್ಬನೇ ಭಾಗಿಯಲ್ಲ; ಪಾಲುದಾರರೆಲ್ಲಾ ಭಾಗಿಗಳು. ಹಾಗೆಯೇ ಕಲ್ಲನ ಮರಣಕ್ಕೆ ಮಲ್ಲನೊಬ್ಬನೇ ಕಾರಣನಲ್ಲ; ಯಾರು ಯಾರು ಹೀಯಾಳಿಸಿಕೊಂಡು ಅವನ ನಾಶವನ್ನು ಬಯಸಿದ್ದರೋ ಅವರೆಲ್ಲರೂ ಕಲ್ಲನ ಕೊಲೆಗಾರರೇ. ಹೀಗೆ ಕಲ್ಲನ ಸಣ್ಣ ಸಣ್ಣ ದುಷ್ಕರ್ಮಗಳು ಆಗಲೇ ಫಲವನ್ನು ಕೊಡಲಾರದಿದ್ದರೂ ಅವನ ಮರಣದೊಡನೆ ತಾವೂ ಮರಣವನ್ನು ಪಡೆಯದೆ ತಮ್ಮ ಸಾಮರ್ಥ್ಯವನ್ನು ಕೂಡಿಸಿಕೊಂಡು ಒಟ್ಟಿಗೆ ಫಲವನ್ನು ಕೊಟ್ಟವು. ದುಷ್ಕರ್ಮಗಳೂ ಹೀಗೆ

ಯೇ; ಸತ್ಕರ್ಮಗಳೂ ಹೀಗೆಯೇ. ಫಲವನ್ನು ಕೊಟ್ಟ ಹೊರತು ಅವು ಎಂದಿಗೂ ನಾಶವಾಗುವದಿಲ್ಲ.

ಸೀತಾದೇವಿಯಿಂದಲೂ ಈ ಅರ್ಥವನ್ನು ನಾವು ಮನಗಾಣಬಹುದು. ಸೀತಾದೇವಿಯು ತನ್ನ ಹಿಂದಿನ ಜನ್ಮದಲ್ಲಿ ಮುದ್ದಿಗಾಗಿ ಒಂದು ಅರಗಿಳಿಯನ್ನು ಪಂಜರದಲ್ಲಿಟ್ಟುಕೊಂಡಿದ್ದಳಂತೆ. ಅರಗಿಳಿಯನ್ನು ಪಂಜರದಲ್ಲಿಟ್ಟುಕೊಂಡು ಅದಕ್ಕೆ ಮಾತನ್ನು ಕಲಿಸಿ ಅದನ್ನು ಕೇಳುತ್ತ ಕಾಲವನ್ನು ಕಳೆಯುವದು ನಮಗೆ ವಿನೋದಕರವಾಗಬಹುದು. ಆದರೆ ಬೆಕ್ಕಿನ ಚೆಲ್ಲಾಟವು ಇಲಿಯ ಪ್ರಾಣಸಂಕಟಕ್ಕೇ ಆಗುವದು. ಕಾಡಿನಲ್ಲಿ ಸ್ವತಂತ್ರವಾಗಿ ಹಾರಿಕೊಂಡು ಮರದ ಮೇಲೆ ಸ್ವಭಾವವಾಗಿ ಕಳಿತ ಹಣ್ಣುಗಳನ್ನು ಸವಿಯುತ್ತ ತನ್ನ ಬಂಧುವರ್ಗದವರೊಡನೆ ಆನಂದದಿಂದ ಇರುವ ಸುಯೋಗವನ್ನು ಕಳೆದುಕೊಂಡ ಗಿಳಿಗೆ ಪಂಜರದವಾಸವು ಹೇಗೆ ಹಿತಕರವಾದೀತು! ನನ್ನ ಪರಿಸ್ಥಿತಿಯೇ ನಿನಗೂ ಬರಲೆಂದು ಆಗ ಆ ಗಿಳಿ ಶಾಪವನ್ನು ಕೊಟ್ಟಿತ್ತಂತೆ. ಆ ಶಾಪಕ್ಕೆ ಆಗಲೇ ಫಲವನ್ನು ಕೊಡುವ ಸಾಮರ್ಥ್ಯವಿರಲಿಲ್ಲ. ಅದನ್ನು ಪ್ರಯೋಗಕ್ಕೆ ತರಲು ಸಮರ್ಥನಾದ ಒಬ್ಬ ನ್ಯಾಯಸ್ಥಾಪಕನ ದಾರಿಯನ್ನು ಕಾದಿದ್ದು ಆ ಶಾಪವು ರಾವಣನನ್ನು ಆಶ್ರಯಿಸಿ ತನ್ನ ಫಲವನ್ನು ಕೊಟ್ಟೇಬಿಟ್ಟಿತು. ಫಲವನ್ನು ಕೊಟ್ಟ ಹೊರತು ಕರ್ಮಕ್ಕೆ ನಾಶವಿಲ್ಲವಾದ್ದರಿಂದ ನಾವು ಸದಾಚಾರರಾಗಿ ಧರ್ಮನಿಷ್ಠರಾಗಿ ಮಾಡುವ ಕೆಲಸಗಳು ನಮಗೆ ಈಗಲೇ ಫಲವನ್ನು ಕೊಡದಿದ್ದರೂ ಸಮಯವನ್ನು ಕಾದಿದ್ದು ಮುಂದೆ ನಮಗೆ ಕೊಟ್ಟೇ ಕೊಡುವವು.

ಹಿಂದಿನ ಜನ್ಮಗಳ ಕರ್ಮಸಂಸ್ಕಾರವು ಈ ಜನ್ಮಕ್ಕೂ ಬೆನ್ನುಹತ್ತಿರುವದೆಂಬದನ್ನು ಅನುಭವದಿಂದಲೂ ತಿಳಿಯಬಹುದು. ಈ ಪ್ರಪಂಚದಲ್ಲಿ ಒಬ್ಬೊಬ್ಬರಿಗೆ ಒಮ್ಮೆ ಓದುವದರೊಳಗೇ ಎಲ್ಲವೂ ತಿಳಿದಂತಾಗುತ್ತದೆ; ಒಬ್ಬೊಬ್ಬರಿಗೆ ಹೇಳಿಕೊಡದೆ ಗಾಯನವು ಬರುತ್ತಿರುತ್ತದೆ; ಒಬ್ಬೊಬ್ಬರು ಚೇಷ್ಟೆಗಾಗಿ ಬರೆದರೂ ಚಿತ್ರವಾಗಿ ಪರಿಣಮಿಸುತ್ತದೆ. ಇವಕ್ಕೆಲ್ಲಾ ಏನು ಕಾರಣ? ಪೂರ್ವಜನ್ಮದ ಕರ್ಮಗಳ ಸಂಸ್ಕಾರವನ್ನು ಬಿಟ್ಟರೆ ಇದಕ್ಕೆ ಸಮಾಧಾನವಿಲ್ಲ. ಆದ್ದರಿಂದ ನಾವು ಮಾಡುವ ಕರ್ಮಗಳು ವ್ಯರ್ಥವಾಗುವವೆಂಬ ಭಯವಿಲ್ಲ. ಆದರೆ ಹೀಗೆ ನಮ್ಮ ಈಗಿನ

ಪ್ರವೃತ್ತಿಗಳೆಲ್ಲ ನಮ್ಮ ಹಿಂದಿನ ಕರ್ಮವೇ ಕಾರಣವೆಂದೂ ಅವನ್ನು ಮೀರುವದು ಶಕ್ಯವಾಗುವದಿಲ್ಲವೆಂದೂ ತಲೆಯ ಮೇಲೆ ಕೈ ಹೊತ್ತುಕೊಂಡು ಕೂತುಕೊಳ್ಳಬಾರದು. ಪೂರ್ವಜನ್ಮದ ಸಂಸ್ಕಾರವೂ ನಮ್ಮ ಕರ್ಮವೇ ಅಷ್ಟೆ. ಪೂರ್ವಜನ್ಮದ ಸಂಸ್ಕಾರದಲ್ಲಿ ಏನಾದರೂ ಕೆಟ್ಟದ್ದಿದ್ದು ಅದು ಈಗ ನಮಗೆ ಫಲವನ್ನು ಕೊಡುವದಕ್ಕೆ ಬರುತ್ತಿದ್ದರೆ ನಾವು ಈಗ ಎಚ್ಚೆತ್ತು ಅದನ್ನು ಹಿಮ್ಮೆಟ್ಟಿಸುವಂಥ ಪ್ರಬಲವಾದ ಸಂಸ್ಕಾರವನ್ನು ಹುಟ್ಟಿಸಿಕೊಂಡರಾಯಿತು. ಒಳ್ಳೇ ಸಂಸ್ಕಾರವಿದ್ದರಂತು ಉತ್ತಮವೇ ಆಯಿತು. ಕೆಟ್ಟದಿದ್ದರೆ ಈಗ ನಮ್ಮ ಪ್ರಯತ್ನದಿಂದ ಅದನ್ನು ಗೆಲ್ಲಬಹುದು. ಮನುಷ್ಯನಿಗೆ ಅದರ ಸ್ವಾತಂತ್ರ್ಯವುಂಟು. ಪುರುಷಪ್ರಯತ್ನಕ್ಕೆ ಮೀರಿದ್ದು ಯಾವದೂ ಇಲ್ಲ. ಆದ್ದರಿಂದ ಮನುಷ್ಯನು ಪ್ರಾರಬ್ಧವನ್ನು ಪೌರುಷದಿಂದ ಹಿಮ್ಮೆಟ್ಟಿಸಬಹುದು. ಮನುಷ್ಯನ ಕರ್ಮದ ಪ್ರಾಬಲ್ಯಕ್ಕೆ ಅಪಜಯವಿಲ್ಲ.

## ಜನತೆಯ ಸೇವೆಯು ಜನಾರ್ದನನ ಸೇವೆ.

ಕರ್ಮಗಳಿಗೆ ನಾಶವಿಲ್ಲವೆಂದು ಭಗವಂತನ ಸೇವೆಯನ್ನು ಮಾಡಿದರೆ ಅದರಿಂದ ನಮ್ಮ ಉದ್ಧಾರವಾದೀತೇ ಹೊರತು ಸ್ವಾರ್ಥವಿಲ್ಲದಿದ್ದರೂ ಸಾರ್ವಜನಿಕವಾದ ವ್ಯವಹಾರದಲ್ಲಿಯೇ ತೊಡಗಿದರೆ ಪ್ರಯೋಜನವೇನೆಂದೂ ಸಂಶಯವು ಹುಟ್ಟಬಹುದು. ನಿಜವಾಗಿ ವಿಚಾರಮಾಡಿದರೆ ಸಾರ್ವಜನಿಕಸೇವೆಗೂ ಭಗವತ್ಸೇವೆಗೂ ವ್ಯತ್ಯಾಸವೇ ಇಲ್ಲ. ಜನತೆಯೇ ಜನಾರ್ದನ. ಭಗವಂತನ ಸೃಷ್ಟಿಯ ಪ್ರತಿಯೊಂದು ವಸ್ತುವೂ ಪರಹಿತಕ್ಕಾಗಿಯೇ ಇರುವದು. ಮಣ್ಣು ಒಡ್ಡೊತ್ತು ಕಲ್ಲಾಗುವದರಿಂದ ಕಲ್ಲಿಗೆ ಉಪಕಾರಕವಾಗುವದು. ಕಲ್ಲು ಕೂಡ ಮಣ್ಣಾಗುವದರಿಂದ ಮಣ್ಣಿಗೆ ಉಪಕಾರಕವಾಗುವದು. ಸಸ್ಯಗಳಲ್ಲಿಯೂ ಒಂದು ಕೊಳೆತು ಇನ್ನೊಂದಕ್ಕೆ ಗೊಬ್ಬರವಾಗುವದು. ಪ್ರಾಣಿವರ್ಗದಲ್ಲಿ ನೋಡಿರಿ. ಕಪ್ಪೆ ಹಾವಿಗೆ ಆಹಾರ; ಹಾವು ಮುಂಗಲಿಗೆ ಆಹಾರ; ಮುಂಗಲಿ ಇನ್ನೊಂದಕ್ಕೆ ಆಹಾರ; ಇನ್ನೊಂದು ಮತ್ತೊಂದಕ್ಕೆ ಆಹಾರ. “ಜೀವೋ ಜೀವಸ್ಯ ಜೀವನಂ” ಎಂಬಂತೆ ಸೃಷ್ಟಿಯ ನಿಯಮವೇ ಹೀಗಿರುವದು.

ಮನುಷ್ಯನೂ ಹೀಗೆಯೇ ಇರಬೇಕು. ಹೀಗೆಂದು ಬುದ್ಧಿಗೆಟ್ಟ ಪಶುಗಳಂತೆ ಆಹಾರವಾಗಬೇಕೆಂದು ಅರ್ಥವನ್ನು ಮಾಡಿಕೊಳ್ಳಬಾರದು. ಪಶುಗಳು ಒಂದಕ್ಕೊಂದು ಆಹಾರವಾಗುವುದು ಅವಿವೇಕಪೂರ್ವಕವಾದ ಪಶುತ್ವದ ಚಿಹ್ನೆ. ಮನುಷ್ಯನು ವಿವೇಕಪೂರ್ವಕವಾದ ಆಹಾರವಾಗಬೇಕು. ಇಲ್ಲಿ ಆಹಾರವಾಗುವುದೆಂದರೇನು? ಒಬ್ಬನು ತನ್ನ ಶರೀರಬಲವನ್ನಾಗಲಿ ವಿದ್ಯಾಬಲವನ್ನಾಗಲಿ ಇತರರ ಉನ್ನತಿಗಾಗಿ ವಿನಿಯೋಗಿಸುವುದು. ತನ್ನ ಜೀವನವೆಲ್ಲಾ ಸಾರ್ವಜನಿಕಹಿತಕ್ಕಾಗಿ ಅರ್ಪಿಸಿ ಅವನು ಇತರರಿಗೆ ವಿವೇಕಪೂರ್ವಕವಾಗಿ ಆಹಾರವಾದಂತಾಗಿ ಸೃಷ್ಟಿಯ ನಿಯಮವು ಸಾರ್ಥಕವಾಗುವುದು. ಕ್ರಿಮಿಕೀಟಗಳಿಗೂ ಸರ್ಪಗಳಿಗೂ ಪಶುಪಕ್ಷಿಗಳಿಗೂ ವಿವೇಕವಿಲ್ಲವಾದ್ದರಿಂದ ಅವು ಪರವಶತೆಯಿಂದ ತಮ್ಮ ನಾಶವನ್ನು ಮಾಡಿಕೊಂಡು ಒಂದಕ್ಕೊಂದು ಆಹಾರವಾಗುವುವು. ಇವುಗಳನ್ನೆಲ್ಲಾ ಅರಿತ ಮನುಷ್ಯನು ವಿವೇಕಪೂರ್ವಕವಾಗಿ ತನ್ನ ತನುಮನಧನಗಳನ್ನು ಸಾರ್ವಜನಿಕಹಿತಕ್ಕೆ ವಿನಿಯೋಗಿಸುವುದರ ಮೂಲಕ ತಾನು ಇತರರಿಗೆ ಆಹಾರವಾಗಿ ತನ್ನ ಏಳಿಗೆಯನ್ನು ಮಾಡಿಕೊಳ್ಳಬೇಕು. ಇದೇ ವಿವೇಕದ ಫಲ.

ಜನತೆಯೇ ಜನಾರ್ದನನೆಂಬರ್ಥವನ್ನು ಒಂದು ಕಥೆಯು ವ್ಯಕ್ತಗೊಳಿಸುತ್ತದೆ. ಒಬ್ಬ ಸಾರ್ವಜನಿಕಹಿತಕಾರಿಯಾದ ಮನುಷ್ಯನು ನಿದ್ರೆ ಮಾಡುತ್ತಿದ್ದನು. ಅವನಿಗೆ ಈ ಕೆಳಗೆ ಕಂಡಂತೆ ಕನಸಾಯಿತು.

ಮನುಷ್ಯ—( ಎದುರಿಗೆ ಬರೆಯುವುದಕ್ಕೆ ನಿಂತಿದ್ದವನನ್ನು ನೋಡಿ ) ನೀನು ಯಾರು?

ಚಿತ್ರ—ನಾನು ಚಿತ್ರಗುಪ್ತನು.

ಮನುಷ್ಯ—ನೀನು ಏನನ್ನು ಬರೆಯುತ್ತಿ?

ಚಿತ್ರ—ಈ ಲೋಕದಲ್ಲಿರುವ ಭಗವದ್ಭಕ್ತರ ಹೆಸರುಗಳನ್ನೆಲ್ಲಾ ಬರೆಯುತ್ತೇನೆ.

ಮನುಷ್ಯ—( ತಾನು ದೇವರ ಸಂಬಂಧವಾದ ಉದ್ಯೋಗಗಳನ್ನು ಬಿಟ್ಟು ವ್ಯಾವಹಾರಿಕವಾದ ಉದ್ಯೋಗದಲ್ಲಿರುವುದರಿಂದ ತನ್ನ ಹೆಸರು ಭಕ್ತರ ಸಾಲಿನಲ್ಲಿ ಸೇರಲಾರದೆಂದು ಸಂಶ

ಯುಗೊಂಡು ) ಅದರಲ್ಲಿ ನನ್ನ ಹೆಸರು ಬರಬಾರದಲ್ಲವೆ? ಜನತೆಯ ಸೇವೆಯುವರನ್ನು ಅಲ್ಲಿ ಬರೆಯುವದಿಲ್ಲವೋ?

ಚಿತ್ರ—ಜನತೆಯ ಸೇವೆಯುವರು ಜನಾರ್ದನನ ಸೇವೆಯುವರೆನಿಸುವರೆಂ ಇಲ್ಲಿಯೊ ಧರ್ಮಶಾಸ್ತ್ರವನ್ನು ನೋಡಿ ಬರೆಯುತ್ತೇನೆ. ( ಎಂದು ಒಳಗೆ ಹೋಗಿ ಬಂದು ತಾನು ತಂದ ಪಟ್ಟಿಯನ್ನು ಮನುಷ್ಯನ ಮುಂದೆ ಹಿಡಿದು ) ಈಗ ನೋಡು; ಸತ್ಕಾರಪೂರ್ವಕವಾಗಿ ಬರೆದುಕೊಂಡು ಬಂದಿದ್ದೇನೆ.

ಮನುಷ್ಯನು ಅದನ್ನು ನೋಡಿದಾಗ ಅದರಲ್ಲಿ ತನ್ನ ಹೆಸರು ಮೊದಲನೆಯದಾಗಿ ಸುವರ್ಣಾಕ್ಷರಗಳಿಂದ ಸ್ಪಷ್ಟವಾಗಿ ಹೊಳೆಯುತ್ತಿತ್ತು. ಜನತೆಯ ಸೇವೆಯೂ ಜನಾರ್ದನನ ಸೇವೆಯೂ ಒಂದೇ. ಜನಾರ್ದನನು ನಮ್ಮ ಕಣ್ಣಿಗೆ ಸ್ಥೂಲವಾಗಿ ಸಿಕ್ಕುವದಿಲ್ಲ. ಜನತೆಯು ನಮ್ಮ ಕಣ್ಣೆದುರಿಗಿದೆ. ಆದ್ದರಿಂದ ಜನತಾರೂಪಿಯಾದ ಜನಾರ್ದನನ ಸೇವೆಯು ಮನುಷ್ಯನಿಗೆ ಉತ್ತಮವಾದ ಸಾಧನ. ಇದನ್ನು ನಿಷ್ಠೆಗೆ ಮಾಡಿದರೆ ಕರ್ಮದ ಫಲವಾದ ಚಿತ್ತಶುದ್ಧಿಯಾಗಿಯೇ ತೀರುವದು.

## ತ್ರಿಗುಣಗಳ ಸಂಬಂಧ.

ಚಿತ್ತಶುದ್ಧಿಯೆಂದರೇನು? ಗುಣೋತ್ಕರ್ಷ. ಈ ಜಗತ್ತೆಲ್ಲಾ ಸತ್ತ್ವ, ರಜ, ತಮ—ಎಂಬ ಮೂರು ಗುಣಗಳಿಂದ ಆಗಿರುವದೆಂದು ಸಾಂಖ್ಯರೆಂಬ ಶಾಸ್ತ್ರಜ್ಞರು ಹೇಳುತ್ತಾರೆ. ಆ ನಿಯಮದಂತೆ ನೋಡಿದರೆ ಮನುಷ್ಯನೂ ತ್ರಿಗುಣಾತ್ಮಕನಾದವನೆ. ಮನುಷ್ಯನ ದೇಹವೂ ತ್ರಿಗುಣಾತ್ಮಕವಾದದ್ದು; ಮನುಷ್ಯನ ಮನಸ್ಸೂ ತ್ರಿಗುಣಾತ್ಮಕವಾದದ್ದು. ಚಿತ್ತಶುದ್ಧಿಯೆಂದರೆ ಮನಸ್ಸಿನ ಗುಣವು ಉತ್ಕರ್ಷಸ್ಥಿತಿಯನ್ನು ಹೊಂದುವದೆಂದರ್ಥ. ಗುಣಗಳ ಉತ್ಕರ್ಷಸ್ಥಿತಿಯನ್ನೂ ಅಪಕರ್ಷಸ್ಥಿತಿಯನ್ನೂ ತಿಳಿದುಕೊಳ್ಳಬೇಕಾದರೆ ಅವುಗಳ ಸ್ವರೂಪವೇ ಮೊದಲಾದವುಗಳ ವಿಚಾರಮಾಡಬೇಕಾಗುವದು.

ಸತ್ತ್ವ, ರಜ, ತಮ—ಎಂಬ ಈ ಮೂರು ಗುಣಗಳೇ ಮನುಷ್ಯನನ್ನು ತೊಡಕಿನಲ್ಲಿ ಕೆಡಹುವವು (ಗೀ. ೧೪-೫). ಹೇಗೆಂದರೆ ಅವುಗಳಲ್ಲಿ

ಸತ್ತ್ವಗುಣವು ಸ್ಫಟಿಕಮಣಿಯಂತೆ ನಿರ್ಮಲವಾದದ್ದಾದಕಾರಣ ಪ್ರಕಾಶ ಸ್ವಭಾವವುಳ್ಳದ್ದು ಮತ್ತು ನಿರುಪದ್ರವಕಾರಿಯಾದದ್ದು; ಇದು ಮನುಷ್ಯನನ್ನು ನಾನು ಸುಖಿಯಾಗಿದ್ದೇನೆಂಬ ಮತ್ತು ಜ್ಞಾನಿಯಾಗಿದ್ದೇನೆಂಬಹಂಕಾರದಲ್ಲಿ ತೊಡಕಿಸುವದು (ಗೀ.೧೪-೬). ರಜೋಗುಣವು ಮನಸ್ಸಿನಲ್ಲಿ ಆಸಕ್ತಿಯನ್ನು ಹುಟ್ಟಿಸುವಂಥದ್ದು; ಇಲ್ಲದ್ದನ್ನು ಬಯಸುವ ಮತ್ತು ದೊರೆತದ್ದರಲ್ಲಿ ಅತ್ಯಾಸಕ್ತಿಯನ್ನು ವಹಿಸುವ ರೂಪದಲ್ಲಿರುವ ರಜೋಗುಣವು ಕರ್ಮವನ್ನು ಮಾಡಬೇಕೆಂಬ ತೊಡಕಿನಲ್ಲಿ ಮನುಷ್ಯನನ್ನು ಕೆಡಹುವದು (ಗೀ. ೧೪-೭) ಮೂರನೇ ತಮೋಗುಣವು ಎಲ್ಲರಲ್ಲಿಯೂ ತಿಳುವಳಿಕೆಯಿಲ್ಲದ್ದರಿಂದುಂಟಾದ ಅವಿವೇಕರೂಪವಾಗಿ ಮರವು, ಜಡತ್ವ, ನಿದ್ರೆ-ಇವುಗಳಲ್ಲಿ ಮನುಷ್ಯನನ್ನು ಕಟ್ಟಿಹಾಕುವದು (ಗೀ. ೧೪-೮).

ಇವುಗಳ ವ್ಯಾಪಾರದ ಸ್ವರೂಪವೇನೆಂದರೆ—ಸತ್ತ್ವಗುಣವು ಸುಖದಲ್ಲಿಯೂ ರಜೋಗುಣವು ಕರ್ಮದಲ್ಲಿಯೂ ತಮೋಗುಣವು ತಿಳುವಳಿಕೆಯನ್ನು ಮುಚ್ಚಿಹಾಕಿ ಮಾಡಬೇಕಾದ್ದನ್ನು ಮಾಡದೆ ಇರುವದರಲ್ಲಿಯೂ ಮನುಷ್ಯನನ್ನು ಸಿಲುಕಿಸುವದು (ಗೀ. ೧೪-೯). ಇದರಂತೆ ಶ್ರದ್ಧೆಯೂ ಮೂರು ಬಗೆಯಾಗಿರುವದು. ಸತ್ತ್ವಗುಣದವರು ದೇವತೆಗಳನ್ನೂ ರಾಜಸರು ಯಕ್ಷರಾಕ್ಷಸರನ್ನೂ ತಾಮಸರು ಪ್ರೇತಗಳನ್ನೂ ಭೂತಗಣಗಳನ್ನೂ ಪೂಜಿಸುವರು. (ಗೀ. ೧೭-೪). ನಂದಗೋಪಾದಿಗಳು ಇಂದ್ರನನ್ನೂ ಸತ್ರಾಜಿತನು ಸೂರ್ಯನನ್ನೂ ಪೂಜಿಸಿದ ಸಾತ್ತ್ವಿಕ ಪೂಜೆಯು ಭಾಗವತದಲ್ಲಿ ಪ್ರಸಿದ್ಧವಾಗಿದೆ.

ಈ ಗುಣಗಳು ಶರೀರದಲ್ಲಿ ಉದ್ಭೂತವಾದದ್ದನ್ನು ಆಯಾ ಚಿಹ್ನೆಗಳಿಂದ ನಿಶ್ಚಯಿಸಬಹುದು. ಕಣ್ಣು, ಕಿವಿ-ಮೊದಲಾದ ಇಂದ್ರಿಯಸ್ಥಾನಗಳಲ್ಲೆಲ್ಲಾ ಮನಸ್ಸು ಪ್ರವಹಿಸಿ ವಿಷಯಗಳನ್ನು ಗ್ರಹಿಸುವ ಕಾಲದಲ್ಲಿ ಸತ್ತ್ವಗುಣವೂ (ಗೀ, ೧೪-೧೧). ಪರದ್ರವ್ಯದ ಆಶೆಯೂ ಕೆಲಸದಲ್ಲಿ ತೊಡಗಬೇಕೆಂಬ ಲವಲವಿಕೆಯೂ ಕೆಲಸವನ್ನಾರಂಭಿಸುವಿಕೆಯೂ ಹರ್ಷಶೋಕಾದಿಗಳಲ್ಲಿ ಪ್ರವೃತ್ತಿಯೂ ಆಶೆಯೂ ತೋರುವ ಕಾಲದಲ್ಲಿ ರಜೋಗುಣವೂ(೧೪-೧೨) ಅವಿವೇಕವೂ ಯಾವ ಕೆಲಸದಲ್ಲಿಯೂ ತೊಡಗದಿರುವದೂ ಮಾಡಬೇಕಾದ್ದನ್ನು ಬಿಡುವದೂ ಮೂಢತೆಯೂ ಹೆಚ್ಚಿದ ಕಾಲ

ದಲ್ಲಿ ತಮೋಗುಣವೂ (೧೪-೧೩) ಉದ್ಭೂತವಾಗಿರುವದೆಂದು ತಿಳಿಯಬೇಕು. ಮನುಷ್ಯನ ಭವಿಷ್ಯದ್ಯೋಗವೂ ಮರಣಕಾಲದಲ್ಲಿ ಆಗುವ ಇವುಗಳ ಉದ್ಭೂತಿಯನ್ನವಲಂಬಿಸಿರುವದೆಂದು ಗೀತೆಯು ಹೇಳಿರುವದು. ಮನುಷ್ಯನ ಮರಣಕಾಲದಲ್ಲಿ ಸತ್ತ್ವಗುಣವು ಮೇಲೆ ಬಂದಿದ್ದರೆ ನಿರ್ಮಲವಾದ ಪುಣ್ಯಲೋಕಪ್ರಾಪ್ತಿಯೂ (ಗೀ. ೧೪-೧೪) ರಜೋಗುಣದ ಉಪಟಳವು ಹೆಚ್ಚಾಗಿದ್ದರೆ ಕರ್ಮಾಸಕ್ತರಾದ ಜನರಲ್ಲಿ ಜನ್ಮವೂ ತಮೋಗುಣದಲ್ಲಿ ಮುಳುಗಿದ್ದರೆ ಪಶುಪಕ್ಷಿಜನ್ಮವೂ (ಗೀ. ೧೪-೧೫). ಉಂಟಾಗುವದು.

## ಯಜ್ಞಾದಿಗಳ ತ್ರೈವಿಧ್ಯ.

ವ್ಯಾವಹಾರಿಕಕರ್ಮಗಳನ್ನು ನಡೆಸುವಾಗ ಗುಣಗಳ ವಿಷಯವಾಗಿ ಮೇಲೆ ಹೇಳಿದ ಲಕ್ಷಣಗಳನ್ನು ತಿಳಿದುಕೊಂಡು ಹೆಚ್ಚಿನ ದಾರಿಯನ್ನು ಹಿಡಿಯಬೇಕೆಂಬುದಂತು ಸರಿಯಷ್ಟೆ. ಮನುಷ್ಯನಿಗೆ ಧಾರ್ಮಿಕಕರ್ಮಗಳ ಕಡೆಯ ಪ್ರವೃತ್ತಿ ಕಡಿಮೆಯಾಗಿರುವದರಿಂದ ಅದರ ವಿಷಯವಾಗಿ ಹೆಚ್ಚು ಎಚ್ಚರಿಕೆಯನ್ನು ಕೊಡಬೇಕೆಂದು ಭಗವಂತನು ಗೀತೆಯಲ್ಲಿ—

"ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥"

ಎಂಬ ಶ್ಲೋಕದ ಮೂಲಕ ಚಿತ್ತಶುದ್ಧಿಕರಗಳಾದ ಯಜ್ಞದಾನತಪಸ್ಸುಗಳನ್ನು ಮಾಡಲೇಬೇಕೆಂದು ಒತ್ತಿ ಹೇಳಿ ಅವುಗಳನ್ನು ಬಿಡುವದರಲ್ಲಿಯೂ ಗುಣಭೇದಗಳನ್ನು ತೋರಿಸುತ್ತಾನೆ. ನಿತ್ಯಕರ್ಮಗಳ ಸ್ವರೂಪಜ್ಞಾನವಿಲ್ಲದೆ ಅವುಗಳನ್ನು ಬಿಟ್ಟುಬಿಡುವದು ತಾಮಸತ್ಯಾಗ ( ಗೀ ೧೮ - ೭ ). ಶರೀರಕ್ಕೆ ಆಯಾಸವಾಗುವದೆಂದು ಅವುಗಳನ್ನು ದೂರಮಾಡುವದು ರಾಜಸತ್ಯಾಗ ( ಗೀ ೧೮ - ೮ ) ಅದು ತನ್ನ ಕರ್ತವ್ಯವೆಂದು ತಿಳಿದು ಅದರಲ್ಲಿ ಅತ್ಯಾಸಕ್ತಿಯನ್ನೂ ಫಲಾಶೆಯನ್ನೂ ಬಿಟ್ಟುಬಿಡುವದು ಸಾತ್ತ್ವಿಕತ್ಯಾಗ ( ಗೀ ೧೮ - ೯ ). ಹೀಗೆ ಹೇಳಿದ ಭಗವಂತನು ಆ ಯಜ್ಞಾದಿಕರ್ಮಗಳನ್ನು ಮಾಡುವದರಲ್ಲಿಯೂ ಗುಣಭೇದಗಳನ್ನು ಹೇಳಿರುತ್ತಾನೆ. ಫಲಾಪೇಕ್ಷೆಯಿಲ್ಲದೆ ತನ್ನ ಕರ್ತವ್ಯವೆಂದು ತಿಳಿದು

ಶಾಸ್ತ್ರದಲ್ಲಿ ಹೇಳಿರುವಂತೆ ಸರಿಯಾಗಿ ಮಾಡುವ ಯಜ್ಞವು ಸಾತ್ತ್ವಿಕ ( ಗೀ ೧೭ ೧೧ ). ಧರ್ಮರಾಯನು ಶ್ರೀಕೃಷ್ಣನಿಗೇ ಅಗ್ರಪೂಜೆಯನ್ನು ಮಾಡಿ ನಿರ್ವಹಿಸಿದ ರಾಜಸೂಯಯಜ್ಞವು ಇದಕ್ಕುದಾಹರಣೆ. ಫಲವನ್ನು ಪಡೆಯಬೇಕೆಂದೂ ತನ್ನ ಕರ್ಮತತ್ತ್ವವನ್ನು ತೋರಿಸಿಕೊಳ್ಳಬೇಕೆಂದೂ ಮಾಡುವ ಯಜ್ಞವು ರಾಜಸ ( ಗೀ ೧೭ – ೧೨ ) ಧರ್ಮರಾಯನಂತೆ ತಾನೂ ಯಶಸ್ಸನ್ನು ಪಡೆಯಬೇಕೆಂದು ದುರ್ಯೋಧನನು ಅಸೂಯೆಯಿಂದ ಮಾಡಿದ ಪೌಂಡರೀಕಯಾಗವು ಇದಕ್ಕುದಾಹರಣೆ. ಶಾಸ್ತ್ರದಲ್ಲಿ ಹೇಳಿದ ಮಾರ್ಗಕ್ಕೆ ವಿರುದ್ಧವಾಗಿಯೂ ಅನ್ನಸಂತರ್ಪಣೆಯನ್ನು ಮಾಡದೆಯೂ ಮಂತ್ರಗಳನ್ನು ಉಚ್ಚರಿಸದೆಯೂ ದಕ್ಷಿಣೆಯನ್ನು ಕೊಡದೆಯೂ ಶ್ರದ್ಧೆ ಇಲ್ಲದೆಯೂ ಮಾಡುವ ಯಜ್ಞವು ತಾಮಸ (ಗೀ ೧೭-೧೩)

ಇನ್ನು ದಾನದಲ್ಲಿಯೂ ಗುಣಭೇದಗಳಿವೆ. ಪ್ರತ್ಯುಪಕಾರವನ್ನು ಪಡೆಯುವ ದೃಷ್ಟಿ ಇಲ್ಲದೆ ಇದನ್ನು ನಾನು ಕೊಟ್ಟು ಕೃತಾರ್ಥನಾಗಬೇಕೆಂದು, ದಾನಮಾಡುವುದಕ್ಕೆ ಯೋಗ್ಯವಾದ ಸ್ಥಲದಲ್ಲಿ, ಯೋಗ್ಯವಾದ ಕಾಲದಲ್ಲಿ ಯೋಗ್ಯರಾದವರಿಗೆ ಕೊಡುವುದು ಸಾತ್ತ್ವಿಕದಾನ ( ೧೭—೨೦ ) ಧರ್ಮರಾಜನು ಕೊಡುತ್ತಿದ್ದ ದಾನಗಳು ಇದಕ್ಕುದಾಹರಣೆ. ಫಲಾಪೇಕ್ಷೆಯಿಂದ ಅಥವಾ ಪ್ರತ್ಯುಪಕಾರದ ನಿರೀಕ್ಷಣೆಯಿಂದ ಮನಸ್ಸಿನಲ್ಲಿ, ನೊಂದುಕೊಂಡು ಕೊಡುವುದು ರಾಜಸದಾನ. ( ೧೭ — ೨೧ ). ದುರ್ಯೋಧನನು ಪಾಂಡವರ ಕೇಡನ್ನು ಬಯಸಿ ದೂರ್ವಾಸರನ್ನು ಮನೆಯಲ್ಲಿಟ್ಟುಕೊಂಡು ಅವರನ್ನು ಅನೇಕದಾನಗಳಿಂದ ಒಲಿಸಿಕೊಂಡದ್ದು ಇದಕ್ಕುದಾಹರಣೆ. ಅಶುಚಿಯಾದ ಸ್ಥಲದಲ್ಲಿ ಉಕ್ತವಲ್ಲದ ಕಾಲದಲ್ಲಿ ಆದರವಿಲ್ಲದೆ ಅವಮಾನಪೂರ್ವಕವಾಗಿ ಅಯೋಗ್ಯರಿಗೆ ಕೊಡುವುದು ತಾಮಸದಾನ ( ಗೀ ೧೭—೨೨)

ಈ ದಾನದಂತೆ ತಪಸ್ಸಿನಲ್ಲಿಯೂ ಗುಣಭೇದಗಳಿವೆ. ಅವುಗಳನ್ನು ತಿಳಿದುಕೊಳ್ಳುವುದಕ್ಕೆ ಮೊದಲು ತಪಸ್ಸಿನ ಸ್ವರೂಪವನ್ನು ತಿಳಿಯಬೇಕು. ದೇವರು, ದ್ವಿಜರು, ಗುರುಗಳು, ಪ್ರಾಜ್ಞರು-- ಇವರನ್ನು ಪೂಜಿಸುವುದೂ ಶುಚಿಯಾಗಿರುವುದೂ ಋಜುತ್ವದಿಂದಿರುವುದೂ ಬ್ರಹ್ಮಚರ್ಯವೂ ಅಹಿಂಸೆಯೂ—ಇವೆಲ್ಲಾ ಶಾರೀರತಪಸ್ಸುಗಳು ( ಗೀ ೧೭–೧೪).

ಮತ್ತೊಬ್ಬರಿಗೆ ನೋವನ್ನು ಕೊಡದಂಥದ್ದೂ ಸತ್ಯವೂ ಪ್ರಿಯವೂ ಹಿತವೂ ಆದಂಥ ಮಾತೂ ವೇದಾಧ್ಯಯನವೂ- ಇವೆಲ್ಲಾ ವಾಙ್ಮಯ ತಪಸ್ಸುಗಳು (೧೭ ೧೫ -- ೧೫). ಮನಸ್ಸಿನ ಶಾಂತಿಯೂ ಒಳಗಿನ ಅಂತಃಕರಣದ ಪ್ರಸನ್ನತೆಯನ್ನು ತೋರಿಸುವಂಥ ಮುಖಮುದ್ರೆಯೂ ಮಿತಭಾಷಣವೂ ಮನಸ್ಸನ್ನು ಬಿಗಿಹಿಡಿಯುವುದೂ ಮತ್ತೊಬ್ಬರೊಡನೆ ವ್ಯವಹಾರವನ್ನು ಮಾಡುವಾಗ ಒಳಗೊಂದು ಹೊರಗೊಂದು ಇಲ್ಲದಿರುವುದೂ — ಇವು ಮಾನಸಿಕತಪಸ್ಸುಗಳು. ಇನ್ನು ಇವುಗಳ ಗುಣಭೇದವನ್ನು ತಿಳಿದುಕೊಳ್ಳಬೇಕು. ಫಲಾಕಾಂಕ್ಷೆಯನ್ನು ಬಿಟ್ಟು ಒಳ್ಳೇ ಶ್ರದ್ಧೆಯಿಂದ ಮಾಡುವ ತಪಸ್ಸು ಸಾತ್ತ್ವಿಕ (೧೭-೧೭-೧೭). ವಸಿಷ್ಠರ ತಪಸ್ಸು ಇದಕ್ಕುದಾಹರಣೆ. ತಾನೊಬ್ಬ ತಪಸ್ವಿಯೆನಿಸಿಕೊಳ್ಳಬೇಕೆಂದೂ ತನಗೆಲ್ಲರೂ ನಮಸ್ಕಾರವನ್ನು ಮಾಡಲೆಂದೂ ತನ್ನನ್ನು ಇತರರು ಪೂಜ್ಯನೆಂದು ತಿಳಿಯಲೆಂದೂ ಮಾಡುವ ತಪಸ್ಸು ರಾಜಸ (೧೭ ೧೭-೧೮). ಬ್ರಾಹ್ಮಣ್ಯವನ್ನು ಪಡೆಯಬೇಕೆಂದು ಮಾಡಿದ ವಿಶ್ವಾಮಿತ್ರರ ತಪಸ್ಸು ಇದಕ್ಕುದಾಹರಣೆ. ಹಿಂದುಮುಂದು ವಿಚಾರವಾಡದೆ ತಾನೂ ಕಷ್ಟವನ್ನು ಸಹಿಸುತ್ತ ಇತರರ ನಾಶಕ್ಕಾಗಿ ಮಾಡುವ ತಪಸ್ಸು ತಾಮಸ (೧೭ ೧೭ – ೧೯). ದೇವತೆಗಳನ್ನು ಹಿಂಸಿಸಬೇಕೆಂಬ ಉದ್ದೇಶದಿಂದ ರಾವಣ, ಹಿರಣ್ಯಕಶಿಪು- ಮೊದಲಾದವರು ಮಾಡಿದ ತಪಸ್ಸು ಇದಕ್ಕುದಾಹರಣೆ.

## ಜ್ಞಾನಾದಿಗಳ ತ್ರಿವಿಧತ್ವ.

ಲೌಕಿಕವಾದ ಅಥವಾ ವೈದಿಕವಾದ ಕರ್ಮಗಳನ್ನು ಮಾಡುವವರು ಜ್ಞಾನ, ಕರ್ಮ, ಕರ್ತೃ, ಬುದ್ಧಿ, ಧೃತಿ, ಸುಖ- ಇವುಗಳ ಸ್ವರೂಪವನ್ನು ಗುಣಭೇದದ ದೃಷ್ಟಿಯಿಂದ ತಿಳಿದುಕೊಂಡಿದ್ದರೆ ಗುಣೋತ್ಕರ್ಷತೆಯ ಪ್ರಯತ್ನಕ್ಕೆ ನೆರವಾಗುವದೆಂದು ಗೀತೆಯು ಈ ವಿಷಯಗಳನ್ನು ಹೇಳಿರುವದು.

ನಾಶವಾಗುವ ಸ್ವಭಾವವುಳ್ಳ ಎಲ್ಲಾ ವಸ್ತುಗಳಲ್ಲಿಯೂ ನಾಶರಹಿತವಾದ ಒಂದು ವಸ್ತುವನ್ನು ನೋಡುತ್ತ ದೇಹಭೇದದಿಂದ ಬೇರೆಬೇರೆಯಾದವುಗಳಲ್ಲಿ ಅಖಂಡವಾದ ವಸ್ತುವನ್ನು ತಿಳಿಯುವದು ಸಾತ್ತ್ವಿಕಜ್ಞಾನ

( ಗೀ. ೧೮ ೨೦ ). ಎಲ್ಲ ವಸ್ತುಗಳನ್ನು ಬೇರೆಬೇರೆಯಾಗಿಯೇ ತಿಳಿಯುವದು ರಾಜಸಜ್ಞಾನ ( ಗೀ ೧೮-೨೧ ). ದೇಹವೇ ಮೊದಲಾದ ಹೊರಗಣ ರೂಪಕ್ಕೇ ಮಹತ್ವವನ್ನು ಕೊಟ್ಟು ಅದರ ಹೊರತು ಅದರೊಳಗೆ ನಿಯಾಮಕನೊಬ್ಬನು ಬೇರೆ ಇಲ್ಲವೆಂದು ತಿಳಿಯುತ್ತ ಕ್ಷುದ್ರವಾದ ತಪ್ಪು ತಿಳಿವಳಿಕೆಯನ್ನು ಹೊಂದುವದು ತಾಮಸಜ್ಞಾನ ( ಗೀ ೧೮-೨೨ ).

ಆತ್ಯಾಸಕ್ತಿಯಿಲ್ಲದೆ, ಒಬ್ಬರ ಮೇಲಿನ ಪ್ರೇಮಕ್ಕಾಗಿ ಅಥವಾ ದ್ವೇಷಕ್ಕಾಗಿ ಮಾಡತಕ್ಕದ್ದಾಗದೆ, ಫಲೇಚ್ಛೆಯಿಲ್ಲದೆ, ತಾನು ಯಾವಾಗಲೂ ಮಾಡತಕ್ಕದ್ದೆಂದು ಮಾಡುವದು ಸಾತ್ವಿಕಕರ್ಮ ( ಗೀ ೧೮-೨೩ ). ತಾನು ಇದನ್ನು ನಿರ್ವಹಿಸುವೆನೆಂಬ ಅಹಂಕಾರದೊಡನೆ ಅನೇಕ ಬಗೆಯ ಆಯಾಸಗಳನ್ನು ಸಹಿಸಿ ಯಾವದೋ ಒಂದು ಫಲಕ್ಕಾಗಿ ಮಾಡುವದು ರಾಜಸಕರ್ಮ (ಗೀ. ೧೮-೨೪). ತನಗೂ ಮುಂದೆ ದೊರೆಯುವ ವಸ್ತುವಿಗೂ ಇರುವ ಸಂಬಂಧವನ್ನೂ ತನಗಾಗುವ ಶಕ್ತಿಕ್ಷಯವನ್ನು ಅರ್ಥಕ್ಷಯವನ್ನೂ ತನ್ನಿಂದಾದೀತೋ ಇಲ್ಲವೋ ಎಂಬುದನ್ನು ನೋಡಿಕೊಳ್ಳದೆ ಅವಿವೇಕದಿಂದ ಮಾಡುವ ಕೆಲಸವು ತಾಮಸ ( ಗೀ. ೧೮-೨೫ ).

ತಾನು ಮಾಡುತ್ತೇನೆಂದು ಭಾವಿಸದೆ, ಫಲಾಶೆಯನ್ನು ಮಾಡದೆ, ಧೈರ್ಯದಿಂದಲೂ ಉತ್ಸಾಹದಿಂದಲೂ ಕೂಡಿ ಸಿದ್ಧಿಸಿದರೆ ಹರ್ಷಕ್ಕೂ ಅಸಿದ್ಧಿಯಾದರೆ ವಿಷಾದಕ್ಕೂ ಒಳಗಾಗದವನಾಗಿ ಮಾಡುವವನು ಸಾತ್ವಿಕನು ( ಗೀ ೧೮-೨೬ ). ಕೆಲಸದ ಮೇಲೆ ಬಹಳ ಪ್ರೇಮವನ್ನಿಟ್ಟು ಅದರಿಂದೊಂದು ಫಲವನ್ನು ಬಯಸಿ, ಪರಪೀಡಾಸ್ವಭಾವದವನಾಗಿ, ಒಳಗೂ ಹೊರಗೂ ಶುಚಿತ್ವವಿಲ್ಲದೆ, ಹರ್ಷವಿಷಾದಗಳನ್ನು ಪಡೆಯತಕ್ಕವನಾಗಿ ಮಾಡುವವನು ರಾಜಸನು ( ಗೀ. ೧೮-೨೭ ). ಮನಸ್ಸಿನ ಸಮತ್ವವಿಲ್ಲದೆ, ತಕ್ಕ ಬುದ್ಧಿಯಿಲ್ಲದೆ, ಯಾರಿಗೂ ಬಗ್ಗ ನಡೆಯದೆ, ಮಾಯಾವಿಯಾಗಿ, ಮತ್ತೊಬ್ಬರ ವೃತ್ತಿಯನ್ನು ಹರಣಮಾಡುವವನಾಗಿ, ಜಡನಾಗಿ, ಯಾವಾಗಲೂ ಕೊರಗುವವನಾಗಿ, ಎಂದಿಗೂ ಮುಗಿಸದವನಾಗಿ ಮಾಡುವವನು ತಾಮಸನು ( ಗೀ. ೧೮-೨೮ ).

ಯಾವ ಕೆಲಸಕ್ಕೆ ಕೈಹಾಕಬೇಕು, ಯಾವದಕ್ಕೆ ಹಿಮ್ಮೆಟ್ಟಬೇಕು, ಯೋಗ್ಯವು ಯಾವದು, ಅಯೋಗ್ಯವು ಯಾವದು, ಯಾವದರಿಂದ ಭಯ

ಉಂಟಾಗುವದು, ಯಾವದರಿಂದ ಬಂಧ, ಯಾವದರಿಂದ ಮೋಕ್ಷ—ಇವುಗಳನ್ನು ತಿಳಿಯುವ ಬುದ್ಧಿಯು ಸಾತ್ತ್ವಿಕ ( ಗೀ. ೧೮-೩೦ ). ಯಾವದು ಶಾಸ್ತ್ರಸಮ್ಮತವೆಂದೂ ಯಾವದು ಶಾಸ್ತ್ರಕ್ಕೆ ಅಸಮ್ಮತವೆಂದೂ ಮಾಡಬಹುದಾದದ್ದು ಯಾವದೆಂದೂ ಮಾಡಬಾರದ್ದು ಯಾವದೆಂದೂ ಎಲ್ಲಾ ಬಗೆಯಿಂದ ವಿಚಾರಮಾಡಿದರೂ ತಿಳಿಯದೆ ಇರುವ ಬುದ್ಧಿಯು ರಾಜಸ ( ಗೀ. ೧೮-೩೧ ). ಅಜ್ಞಾನದಿಂದ ಅಧರ್ಮವನ್ನೇ ಧರ್ಮವೆಂದು ಒಂದನ್ನು ಇನ್ನೊಂದನ್ನಾಗಿಯೇ ತಿಳಿಯುವ ಬುದ್ಧಿಯು ತಾಮಸ ( ಗೀ. ೧೮-೩೨ ).

ಮನಸ್ಸು, ಪ್ರಾಣ, ಇಂದ್ರಿಯ—ಇವುಗಳನ್ನು ಎಡೆಬಿಡದ ಪ್ರಯತ್ನದಿಂದ ಬಿಗಿಹಿಡಿಯುವ ಧೈರ್ಯವು ಸಾತ್ತ್ವಿಕ ( ಗೀ. ೧೮-೩೩ ). ಧರ್ಮ, ಅರ್ಥ, ಕಾಮ,- ಇವುಗಳನ್ನು ನಿತ್ಯವೂ ಆಚರಿಸಬೇಕೆಂದು ನಿಶ್ಚಯಿಸಿದ್ದು ಒಂದೊಂದುಸಮಯದಲ್ಲಿ ಫಲವನ್ನು ಅಪೇಕ್ಷಿಸುವ ಧೈರ್ಯವು ರಾಜಸ ( ಗೀ. ೧೮-೩೪ ). ನಿದ್ರೆ, ಭಯ, ದುಃಖ, ಕೊರಗು, ಮದ—ಇವುಗಳನ್ನು ಬಿಡಲಾರದ ಕ್ಷುದ್ರವಾದ ಧೈರ್ಯವು ತಾಮಸ ( ಗೀ. ೧೮-೩೫ ).

ಮೊದಲು ವಿಷದಂತೆ ತೋರಿ ಆಮೇಲೆ ಅಮೃತದಂತೆ ಪರಿಣಮಿಸುವಂಥ ಆತ್ಮಾನುಭವಜನ್ಯಸುಖವು ಸಾತ್ತ್ವಿಕ ( ಗೀ. ೧೮-೩೭ ). ವಿಷಯ ಮತ್ತು ಇಂದ್ರಿಯ-- ಇವುಗಳ ಸಂಯೋಗದಿಂದ ಮೊದಲು ಅಮೃತದಂತೆ ಇದ್ದು ಕೊನೆಗೆ ವಿಷವಾಗುವ ಸುಖವು ರಾಜಸ ( ಗೀ. ೧೮-೩೮ ). ಮೊದಲೂ ಕೊನೆಗೂ ಕೂಡ ಮಂಕುಮಾಡುವಂಥ ನಿದ್ರೆ, ಆಲಸ್ಯ, ಪ್ರಮಾದ—ಇವುಗಳಿಂದಾದ ಸುಖವು ತಾಮಸ ( ಗೀ. ೧೮-೩೯ ).

## ಆಹಾರದ ತ್ರಿವಿಧತ್ವ.

ಕರ್ಮಕ್ಕೆ ಸಂಬಂಧಪಟ್ಟ ಅನೇಕವಿಚಾರಗಳ ಗುಣಭೇದಗಳನ್ನು ಹೇಳಿದ ಗೀತೆಯು ಆಹಾರದ ವಿಷಯದಲ್ಲಿಯೂ ಗುಣಭೇದಗಳನ್ನು ಹೇಳಿದೆ. ಏಕೆಂದರೆ ಮೇಲೆ ಹೇಳಿದ ಗುಣಭೇದಗಳನ್ನು ತಿಳಿದುಕೊಂಡು ತಾಮಸವನ್ನು ರಾಜಸದಿಂದಲೂ ರಾಜಸತಾಮಸಗಳನ್ನು ಸಾತ್ತ್ವಿಕದಿಂದಲೂ ಗೆದ್ದು ತನ್ನ ದೇಹೇಂದ್ರಿಯಗಳನ್ನು ಸಾತ್ತ್ವಿಕಕಾರ್ಯದಲ್ಲಿ ತೊಡಗಿಸುವವನು ತನ್ನ ಅಧಿಕಾರವನ್ನು ಪ್ರತ್ಯೇಕವಾಗಿ ಮನಸ್ಸಿನ ಮೇಲೆಯೂ

ನಡೆಸಿ ಅದನ್ನು ಹಿಡಿಯಲಿಕ್ಕೆ ತೆಗೆದುಕೊಳ್ಳುವದು ಆತ್ಮೋನ್ನತಿಗೆ ಹೆಚ್ಚು ಸಹಾಯವಾಗುವದು. ಆ ರೀತಿಯಲ್ಲಿ ಮನಸ್ಸನ್ನು ನಿಯೋಗಿಸಬೇಕೆನ್ನುವವನು ಆಹಾರದ ಕಡೆಗೆ ಹೆಚ್ಚು ಲಕ್ಷ್ಯವನ್ನು ಕೊಡಬೇಕಾಗುತ್ತದೆ. ಏಕೆಂದರೆ ಆಹಾರದಿಂದ ಮನಸ್ಸಾಗುತ್ತದೆ. ಸಿಕ್ಕಿದುದನ್ನೆಲ್ಲ ಸಿಕ್ಕಿದ ಹಾಗೆ ತಿನ್ನುವವನ ಮನಸ್ಸು ಹಿಡಿತಕ್ಕೆ ಬರಲಾರದು. ಆದ್ದರಿಂದ ಆಹಾರದ ಗುಣಭೇದಗಳನ್ನು ತಿಳಿದುಕೊಳ್ಳಬೇಕು. ಆಯುಸ್ಸನ್ನೂ ಸಾತ್ತ್ವಿಕವೃತ್ತಿಯನ್ನೂ ಬಲವನ್ನೂ ಆರೋಗ್ಯವನ್ನೂ ಸುಖವನ್ನೂ ಪ್ರೀತಿಯನ್ನೂ ಹೆಚ್ಚಿಸುವಂಥವುಗಳಾಗಿ ರಸಮಯವೂ ಜಿಡ್ಡುಳ್ಳದ್ದೂ ಬೇಗ ಕೆಡದಂಥದ್ದೂ ಮನಸ್ಸಿಗೆ ಆನಂದಕರವಾದದ್ದೂ ಆದ ಆಹಾರವು ಸಾತ್ತ್ವಿಕರಿಗೆ ಪ್ರಿಯವಾದದ್ದು ( ಗೀ೧೭-೮ ). ಖಾರ, ಹುಳಿ, ಉಪ್ಪು-ಇವುಗಳಿಂದ ಕೂಡಿ, ಬಿಸಿಬಿಸಿಯಾಗಿ, ತುರುಕಾಗಿ, ಒಣಕಲಾಗಿ, ಹೊಟ್ಟೆಯಲ್ಲಿ ಉರಿಯೇಳುವಂಥದಾಗಿ, ದುಃಖವನ್ನೂ ಶೋಕವನ್ನೂ ರೋಗವನ್ನೂ ಉಂಟುಮಾಡುವಂಥ ಆಹಾರಗಳು ರಾಜಸರಿಗೆ ಪ್ರಿಯವಾದವುಗಳು ( ಗೀ. ೧೭-೯ ). ಚೆನ್ನಾಗಿ ಅರಿದ್ದೂ ರಸವು ಒಣಗಿಹೋದದ್ದೂ ದುರ್ವಾಸನೆಯುಳ್ಳದ್ದೂ ತಂಗಳಾದದ್ದೂ ಎಂಜಲಾದದ್ದೂ ಅಶುದ್ಧವಾದದ್ದೂ ಆದ ಆಹಾರವು ತಾಮಸರಿಗೆ ಪ್ರಿಯವು.

ಆದಕಾರಣ ಮನುಷ್ಯನು ಚಿತ್ತಶುದ್ಧಿಗಾಗಿ ಕರ್ಮಯೋಗದ ಮೂಲಕ ತನ್ನ ದೇಹೇಂದ್ರಿಯಗಳನ್ನು ಮಾತ್ರವೇ ಅಲ್ಲದೆ ಚಿತ್ತಸ್ಥೈರ್ಯಕ್ಕಾಗಿ ರಾಜಯೋಗದ ಮೂಲಕ ತನ್ನ ಮನಸ್ಸನ್ನು ಕೂಡ ಪ್ರತ್ಯೇಕವಾಗಿ ಆತ್ಮೋನ್ನತಿಯಲ್ಲಿ ತೊಡಗಿಸಿ ಕೃತಾರ್ಥನಾಗಬೇಕು.

---

# ಎಂಟನೇ ಕಿರಣ.

# ರಾ ಜ ಯೋ ಗ.

## ರಾಜಯೋಗದ ಅವಶ್ಯಕತೆ.

ಕರ್ಮಯೋಗದ ಮೂಲಕವಾಗಿ ವಿಶೇಷವಾಗಿ ದೇಹೇಂದ್ರಿಯಾದಿಗಳಿಗೆ ಒಂದುಬಗೆಯ ಸುಶಿಕ್ಷಣವನ್ನು ಕೊಟ್ಟಂತೆ ರಾಜಯೋಗದ ಮೂಲಕವಾಗಿ ಪ್ರತ್ಯೇಕವಾಗಿ ಮನಸ್ಸಿಗೆ ಒಂದುಬಗೆಯ ಸುಶಿಕ್ಷಣವನ್ನು ಕೊಡುವದು ಮಹತ್ವದ ಕೆಲಸವಾಗಿದೆ. ಒಂದುದೃಷ್ಟಿಯಿಂದ ನೋಡಿದರೆ ಮನಸ್ಸಿಗೆ ಶಿಕ್ಷಣವನ್ನು ಕೊಡುವದರಲ್ಲಿ ಒಂದುಬಗೆಯ ಹೆಚ್ಚುಗಾರಿಕೆ ಇರುವದು. ಹೇಗೆಂದರೆ—

" ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ "

ಎಂಬ ವಚನದಂತೆ ನಮ್ಮ ಬಂಧಕ್ಕೂ ಮೋಕ್ಷಕ್ಕೂ ಮನಸ್ಸೇ ಕಾರಣವು. ಇದರ ಕಾರಣವೇನೆಂದರೆ—

" ಬಂಧಾಯ ವಿಷಯಾಸಕ್ತಂ ಮುಕ್ತ್ಯೈ ನಿರ್ವಿಷಯಂ ಸ್ಮೃತಮ್ "

ಎಂಬಂತೆ ಮನಸ್ಸು ಬಗೆಬಗೆಯ ಇಂದ್ರಿಯಸುಖಸಾಧನಗಳಲ್ಲಿ ಆಸಕ್ತವಾದರೆ ಅದೇ ಸಮಗೆ ಬಂಧ; ಯಾವ ಸುಖಸಾಧನಗಳನ್ನೂ ಮನಸ್ಸಿಗೆ ತಂದುಕೊಳ್ಳದೆ ಇರುವದಾದರೆ ಅದೇ ನಮಗೆ ಮೋಕ್ಷ. ಈ ರೀತಿಯಲ್ಲಿ ಬಂಧಮೋಕ್ಷಗಳೆರಡೂ ಮನಸ್ಸಿಗೆ ಸಂಬಂಧಪಟ್ಟವುಗಳು. ಆದ್ದರಿಂದ ಬಂಧವನ್ನು ಬಿಡಿಸಿಕೊಂಡು ಮೋಕ್ಷವನ್ನು ಪ್ರಾಪ್ತಮಾಡಿಸಿಕೊಳ್ಳುವ ಶಿಕ್ಷಣವನ್ನು ಮನಸ್ಸಿಗೆ ಕೊಡುವದು ಹೆಚ್ಚು ಅಗತ್ಯವಾದದ್ದು.

ಮನುಷ್ಯನು ಕಾಮಕ್ರೋಧಗಳಿಗೊಳಗಾಗುವದರಿಂದ ಬಲೆಯಲ್ಲಿ ಸಿಕ್ಕಿಕೊಳ್ಳುವನೆಂದು ಹಿಂದೆ ಹೇಳಿದೆಯಷ್ಟೆ. ಆ ಕಾಮಕ್ರೋಧಗಳ ಆವಾಸಸ್ಥಾನವು ಮನಸ್ಸಿನ ಹೊರತು ಬೇರೆ ಇಲ್ಲ. ಕೆಲವರು ತಮ್ಮ ಕಾಮಕ್ರೋಧಗಳನ್ನು ಕೆಲಕೆಲವು ವೇಳೆ ತಮ್ಮತಮ್ಮಲ್ಲಿಯೇ ನುಂಗಿಕೊಳ್ಳುತ್ತಾರೆ; ಆದರೆ ಆಗ ಆ ಕಾಮಕ್ರೋಧಗಳು ನಾಶವಾಗುವದಿಲ್ಲ. ಅವು

ಆಗಿನ ಮಟ್ಟಿಗೆ ತಲೆ ಮರೆಸಿಕೊಂಡು ಮನಸ್ಸಿನೊಳಗೇ ಎಲ್ಲಿಯೋ
ಒಂದುಮೂಲೆಯಲ್ಲಿ ಹೊಂಚುಹಾಕುತ್ತ ಅಡಗಿದ್ದು ಯಾವಾಗಲಾದ
ರೊಮ್ಮೆ ಹೊರಬಿದ್ದು ತನ್ನ ಉಗ್ರಸ್ವರೂಪವನ್ನು ತೋರಿಸಿಯೇ ಬಿಡು
ತ್ತದೆ. ಧರ್ಮರಾಜನ ಸಭಾಮಂಟಪಕ್ಕೆ ಬಂದಿದ್ದಾಗ ದುರ್ಯೋಧನನು
ಆ ಮಂಟಪದ ಬೆಡಗಿಗೆ ಮರುಳಾಗಿ ನೆಲವನ್ನು ಜಲವೆಂದೂ ಜಲವನ್ನು
ನೆಲವೆಂದೂ ಭ್ರಾಂತಿಗೊಂಡನಷ್ಟೆ. ಆಗ ದ್ರೌಪದಿ ಮೊದಲಾದ ರಾಜ
ಸ್ತ್ರೀಯರು ತನ್ನನ್ನು ನೋಡಿ ನಕ್ಕದ್ದು ಅವನಲ್ಲಿ ಅಪ್ರತಿಹತವಾದ
ಕ್ರೋಧವನ್ನೇ ಉಂಟುಮಾಡಿತ್ತು. ಆದರೆ ಅವನು ಆ ಕೋಪವನ್ನು ಆಗ
ಬಯಲಿಗೆ ಬಿಡಲಿಲ್ಲ. ಇಷ್ಟು ಮಾತ್ರದಿಂದ ಆ ಕೋಪಕ್ಕೇನೂ ಅಳಿವಾಗ
ಲಿಲ್ಲ. ಅದು ಅವನ ಮನಸ್ಸಿನ ಒಂದುಪಕ್ಕೆಯಲ್ಲಿ ಕೊರೆಯುತ್ತಲೇ
ಇತ್ತು. ಆಮೇಲೆ ಆ ಕೋಪವೇ ಮುಂದೆ ಪಗಡೆಯಾಟಕ್ಕೂ ಪಾಂಡ
ವರ ವನವಾಸಕ್ಕೂ ಕೌರವರ ನಾಶಕ್ಕೂ ಕಾರಣವಾಯಿತು. ಆದ್ದರಿಂದ
ಕಾಮಕ್ರೋಧಗಳನ್ನು ಆಯಾಕಾಲದಲ್ಲಿ ಬಲಾತ್ಕಾರದಿಂದ ತಡೆದ ಮಾ
ತ್ರಕ್ಕೇ ಸಾಲದು. ಆದರೆ ಹಾಗೆ ತಡೆಯುವದು ಕೂಡ ಸಾಮಾನ್ಯವಲ್ಲ.
ಆದರಿಂದಲೂ ಎಷ್ಟೋ ಲಾಭವಾಗುವದು. "ಸಿಟ್ಟು ಬಂದಾಗ ಹತ್ತೆ
ಣಿಸು" ಎಂದು ಗಾದೆಯುಂಟು. ಸಿಟ್ಟು ಬಂದಾಗ ಹತ್ತು ಸಂಖ್ಯೆಗಳನ್ನು
ಎಣಿಸಿದರೆ ಅಷ್ಟು ಹೊತ್ತಿನಲ್ಲಿ ಅದು ಸ್ವಲ್ಪಮಟ್ಟಿಗಾದರೂ ಇಳಿಯುವದು
ಎಲ್ಲರ ಅನುಭವದಲ್ಲಿಯೂ ಇದೆ. ಸಿಟ್ಟಿನ ಸ್ವಭಾವವೇ ಅಂಥದ್ದು.
ಸಿಟ್ಟಿನ ಸಂಪೂರ್ಣನಾಶವಾಗಬೇಕಾದರೆ ಆ ಸಿಟ್ಟಿನ ಆಶ್ರಯಸ್ಥಾನ
ವಾದ ಮನಸ್ಸನ್ನು ಚೆನ್ನಾಗಿ ತಿಕ್ಕಬೇಕು. ಮನಸ್ಸಿನಲ್ಲಿದ್ದ ಅದರ ಕಲೆ
ಯೆಲ್ಲಾ ಚೆನ್ನಾಗಿ ಅಳಿಸಿ ಹೋದರೆ ಆಗ ಸಿಟ್ಟು ಸಂಪೂರ್ಣವಾಗಿ ನಾಶ
ವಾದಂತಾಯಿತು. ಆದ್ದರಿಂದ ಕಾಮಕ್ರೋಧಗಳ ಸಂಪೂರ್ಣನಾಶವಾ
ಗುವದಕ್ಕಾಗಿ ಮನಸ್ಸಿಗೆ ಪ್ರತ್ಯೇಕವಾದ ಶಿಕ್ಷಣವನ್ನು ಕೊಡುವದು
ಅವಶ್ಯಕವು.

ಇನ್ನೊಂದೇನೆಂದರೆ ಮನುಷ್ಯನು ಕಣ್ಣು, ಕಿವಿ—ಮೊದಲಾದ ಇಂದ್ರಿ
ಯಗಳನ್ನು ಬಿಗಿಹಿಡಿಯಬೇಕೆಂದು ಹಿಂದೆ ಅನೇಕವೇಳೆ ಬಂದಿದೆ
ಯಷ್ಟೆ. ಅವುಗಳನ್ನು ಕೂಡ ಬಲಾತ್ಕಾರದಿಂದ ಬಿಗಿಹಿಡಿಯುವದರಿಂದ

ತಾತ್ಕಾಲಿಕಪ್ರಯೋಜನವೇ ಹೊರತು ಹೆಚ್ಚಿಗೆ ಇಲ್ಲ. ಮನಸ್ಸು ಇಂದ್ರಿಯಗಳ ರಾಜನು. ಮನಸ್ಸಿಲ್ಲದೆ ಬರೀ ಇಂದ್ರಿಯಗಳು, ಹೊರಮುಖವಾಗಿದ್ದರೂ, ಏನೂ ಮಾಡಲಾರವು. ನಾವು ಮನಸ್ಸಿನಲ್ಲಿ ಏನೋ ಒಂದನ್ನು ವಿಚಾರಮಾಡುತ್ತಿರುವಾಗ ಕಣ್ಣುಬಿಟ್ಟುಕೊಂಡಿದ್ದರೂ ಕಿವಿಯನ್ನು ತೆರೆದುಕೊಂಡಿದ್ದರೂ ಹೊರಗಣ ವಿಷಯಗಳು ನಮಗೆ ಕಾಣುವದೂ ಇಲ್ಲ; ಕೇಳುವದೂ ಇಲ್ಲ. ಆದ್ದರಿಂದ ಮನಸ್ಸಿನ ಅಧೀನವಾದ ಇಂದ್ರಿಯಗಳೊಡನೆಯೇ ಯಾವಾಗಲೂ ಹೋರಾಡುವದಕ್ಕಿಂತಲೂ ಮನಸ್ಸಿನ ಮೇಲೆಯೇ ಕೈಮಾಡಿ ಜಯವನ್ನು ಪಡೆದರೆ ಆ ಜಯವು ಕಾರ್ಯಕಾರಿಯಾಗುವದು. ಬರೀ ಆಳುಗಳೊಡನೆಯೇ ಹೋರಾಡುವದರಲ್ಲೇನಿದೆ? ಶೂರನು ಆಳುಗಳನ್ನು ಒಮ್ಮೆ ಝುಂಕಾರಮಾತ್ರದಿಂದ ಮೂಲೆಗೆ ಕೂಡಿಸಿ ಆಮೇಲೆ ರಾಜನ ಮೇಲೆಯೇ ತನ್ನ ದೃಷ್ಟಿಪಾತವನ್ನು ಮಾಡುತ್ತಾನೆ. ಆ ರೀತಿಯಲ್ಲಿ ಸಮರ್ಥನಾದ ಸಾಧಕನು ದೇಹೇಂದ್ರಿಯಗಳ ಉಪಟಳವನ್ನು ಬಗಿಹಿಡಿಯುತ್ತ ಮೆಲ್ಲಮೆಲ್ಲಗೆ ಮನಸ್ಸಿನ ಮೇಲೆಯೂ ತನ್ನ ಅಧಿಕಾರವನ್ನು ಸಾಗಿಸಬೇಕು. ಮನಸ್ಸನ್ನು ಗೆದ್ದರೆ ಇಂದ್ರಿಯಗಳು ತಾವಾಗಿಯೇ ಶರಣೆಂದು ಬಂದೇಬರುವವು.

ಮನಸ್ಸನ್ನು ಶೋಧಿಸಬೇಕೆಂಬ ವಿಷಯದಲ್ಲಿ ಶ್ರೀಪುರಂದರದಾಸರು ಉಪದೇಶಮಾಡಿರುವದೇನೆಂದರೆ—

ರಾಗ— ನಾದರಾಮಕ್ರಿಯೆ — ಝಾಪುತಾಳ.

ಮನವ ಶೋಧಿಸಬೇಕು ನಿಚ್ಚ । ದಿನ ।
ದಿನದಿ ಮಾಡುವ ಪಾಪಪುಣ್ಯದ ವೆಚ್ಚ ॥ ಪ ॥
ಧರ್ಮ ಅಧರ್ಮ ವಿಂಗಡಿಸಿ । ಅ ।
ಧರ್ಮದ ಸರಗಳ ಬೇರ ಕತ್ತರಿಸಿ ॥
ನಿರ್ಮಲಾಚಾರದಿ ಬೆರಸಿ । ವರ
ಬೊಮ್ಮ ಮೂರುತಿ ಪಾದಕಮಲವ ಭಜಿಸಿ ॥೧॥
ಮನವ ಖಂಡಿಸಿ ಒಮ್ಮೆ ಮಾಣೋ । ನಿನ್ನ ।
ತನುವ ದಂಡಿಸಿ ಪರಮಾತ್ಮನ್ನ ಕಾಣೋ ॥
ಕೊನೆಗೆ ನಿನ್ನೊಳಗೆ ನೀ ಜಾಣೋ । ಮುಕ್ತಿ ।

ನಿನಗೆ ದೊರಿಲ್ಲವು ಒಂದೇ ಗೇಹೊ ॥ ೨ ॥
ಆತನವರಿಗೆ ಕೇಡಿಲ್ಲ । ಅವ ।
ಪಾತಕಪತಿತಸಂಗವ ಮಾಳ್ಪನಲ್ಲ ॥
ನೀತಿವಂತರು ಕೇಳಿರೆಲ್ಲ । ನವ ।
ಗಾತನ ಗತಿಯೂವ ಪುರಂದರ ವಿಠಲ ॥ ೩ ॥

ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಮನೋನಿಗ್ರಹದ ವಿಚಾರವನ್ನೆಲ್ಲಾ ಅರ್ಜುನನಿಗೆ ಹೇಳಿದಾಗ ಅರ್ಜುನನು ಅದನ್ನು ಅಸಾಧ್ಯವಾಗಿ ಭಾವಿಸಿ -

"ಚಞ್ಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥"

ಎಂದು ಹೇಳಿದ್ದಾನೆ. ಮನಸ್ಸು ಚಂಚಲವಾಗಿಯೂ ಬಹಳ ಕೋಟಲೆಗೊಳಿಸುವಂಥದ್ದಾಗಿಯೂ ಬಲವುಳ್ಳದ್ದಾಗಿಯೂ ಗಟ್ಟಿಯಾಗಿಯೂ ಇರುವದರಿಂದ ಅದನ್ನು ಹಿಡಿದು ಕಟ್ಟುವದೆಂದರೆ ಗಾಳಿಯ ಮೂಟೆಯನ್ನು ಕಟ್ಟಿದಂತೆಯೆಂದರ್ಥ. ಅರ್ಜುನನಂಥ ಮಹಾನುಭಾವನಿಗೇ ಮನೋನಿಗ್ರಹವು ಇಷ್ಟು ಕಠಿನವೆನಿಸಿರುವಾಗ ಸಾಮಾನ್ಯಮನುಷ್ಯರ ಪಾಡೇನು? ಶ್ರೀಸರ್ವಭೂಷಣಕವಿಯೋಗಿಗಳು ಮನಸ್ಸಿನ ಹಾವಳಿಯನ್ನು ಬಹು ಚೆನ್ನಾಗಿ ಬಣ್ಣಿಸಿರುವರು.

ರಾಗ— ಕೇತಾರ ಗೌಳ.

ಮನವೆಂಬ ಮರ್ಕಟನ ತವೆಯಬಾರೆನು ದೇವ ।
ವನೀದರ ಚಪಲಚೇಷ್ಟೆಗಳ ವರ್ಣಿಸಲಿ ॥ಪ॥
ಧರೆಯನೆಲ್ಲವನೊಂದೆ ಕೊಡೆಯಿಂದಲಾಳುವದು ।
ಗಿರಿಯ ಗುಹೆಯೊಳು ಕುಳಿತು ತಪವ ಮಾಡುವದು ।
ತರುಣಿಯರ ಕುಚಗಳೊಳು ಕೈಯಿಕ್ಕಿ ನಗಿಸುವದು ।
ಕರಿಯ ಮೇಲಂಬಾರಿಯಲ್ಲಿ ಮೆರೆಯುವದು ॥ ॥೧॥
ಅನುಭವದಿ ಜೀವೇಶರೈಕ್ಯವನು ತಿಳಿಯುವದು ।
ಧನವ ದಶಲಕ್ಷವನು ಗಳಿಸಿ ಹೂಳುವದು ॥
ಮನೆಯ ಮಕ್ಕಳ ಬಿಟ್ಟು ವಿರತಿಯಿಂ ಪೊರಡುವದು ।
ವನಪೋಷ್ಕನಾಂದಿಂದೊಂದನಂಗೈಸುವದು ॥ ॥೨॥

ಅರಿಗಳನು ಹಿಡಿದು ದಡೆಮುರಿಗಟ್ಟಿ ಹೊಸಗುವದು ।
ಸುರಲೋಕಕ್ಕೆಡಿ ರಂಭೆಯೊಳು ರಮಿಸುವದು
ಬರಿದೆ ನೀನೇಕಿನಿತು ಚೇಷ್ಟಿಸುವೆಯು ಭ್ರಾಂತಿಯೊ ।
ಇರುವ ಕೋಟಿಗಳಿಂತ ಹಿಸ್ಸರಿಂಬುವದು ॥೧॥
ಹಿಡಿಸನಿಸಿ ನೋಡಲಿ ಮುಮ್ಮರ ದಾರಾಪಹುದು ।
ಪ್ರಪಂಚನಲಾ ನುಡಿಯುದಾರವೇಡುವದು ॥
ತುಮುಗದನಪಿನ ಕೊರಳ ಗುಣ್ಣಿಯುದದೊಳ್ಳ ।
ನಡೆಪಿಡಪೆ ಮೂಜಗವೊಳ್ಳದುತಿಹುದು ॥೨॥
ದರೆಯ ನಿಕ್ಷೇಪವನು ಕದ್ದೆಲ್ಲಿಗೋಡುವದು ।
ಧರೆಯುದಲ್ಲಲ್ಲಿ ಕಳ್ಳನ ಕಾಣುವ ಕೆ ॥
ಗುರುಸಿದ್ಧ ನನ್ನ ಮನವಾವಾವ ವಿಷಯಗಳೊ ।
ಳಿಗಲಲ್ಲಲ್ಲಿ ನೀಂ ತಾಡಿಸಪೆ ಹರಿಸ್ತೆ ॥೩॥

ಮನಸ್ಸು ಇಷ್ಟು ಚಪಲವಾಗಿದ್ದರೂ ಕೂಡ ಬಿಡಿಸಿದರೆ ಹಿಡಿತಕ್ಕೆ ಸಿಕ್ಕುವಂಥದ್ದು. ಅದನ್ನೇ ಮುದ್ದು ಮಾಡುತ್ತ ಅದರ ಬೆನ್ನು ಹತ್ತಿ ಹೋದರೆ ಮಾತ್ರ ಅದು ನಮ್ಮನ್ನು ಕೊನೆಕಾಲಿಗೆ ಕೆಡಹದೆ ಬಿಡುವದಿಲ್ಲ. ಹೀಗೆ ಅದರ ಕೈಗೆ ನಾವು ಸಿಕ್ಕಿದರೆ ಅದು ನಮಗೆ ಹಾನಿಯನ್ನು ಮಾಡುವಂತೆ ಅದನ್ನು ನಮ್ಮ ಕೈಯೊಳಗೆ ಇಟ್ಟುಕೊಂಡರೆ ಅದೇ ನಮ್ಮ ಉನ್ನತಿಯನ್ನು ಮಾಡುವದು. ಹೀಗೆ ನಮ್ಮಲ್ಲಿ ಅನೇಕರು ಪ್ರಯತ್ನವನ್ನು ಮಾಡಿ ಅದನ್ನು ವಶಮಾಡಿಕೊಂಡು ಕೃತಾರ್ಥರಾದವರಿದ್ದಾರೆ. ಹಾಗೆ ಮನಸ್ಸನ್ನು ಬಿಗಿಹಿಡಿಯುವ ಪ್ರಯತ್ನದ ಶಾಸ್ತ್ರಕ್ಕೇ ರಾಜಯೋಗವೆಂದು ಹೆಸರು.

ಯೋಗವೆಂಬ ಮಾತು ಹಠಯೋಗವೆಂಬ ಅರ್ಥದಲ್ಲಿ ಬಹಳವಾಗಿ ಬಳಕೆಯಲ್ಲಿದೆ. ಹಠಯೋಗವೆಂದರೆ ಶರೀರದ ಪ್ರತಿಯೊಂದು ನರವನ್ನೂ ತನ್ನ ಆಜ್ಞೆಗೊಳಗುಮಾಡಿಕೊಳ್ಳುವದನ್ನು ಅಭ್ಯಾಸಮಾಡುವದು. ಈ ಅಭ್ಯಾಸದಿಂದ ಮನುಷ್ಯನು ಮುಪ್ಪಿಗೆ ದಾರಿಯನ್ನು ಕೊಡದೆ ಇರಬಹುದು; ಇಷ್ಟೇಕಾಲ ಮರಣವನ್ನು ಕೂಡ ತಪ್ಪಿಸಿಕೊಳ್ಳಬಹುದು; ಬದುಕಿರುವವರೆಗೂ ಪೂರ್ಣಾರೋಗ್ಯವನ್ನು ಅನುಭವಿಸಬಹುದು.

ಇಷ್ಟೆಲ್ಲಾ ಗುಣಗಳಿದ್ದರೂ ಮನುಷ್ಯನಿಗೆ ಎಂದಿದ್ದರೂ ಒಂದುದಿನ ಮರಣವು ತಪ್ಪಿದ್ದಲ್ಲವಾದ್ದರಿಂದ ಆ ಗುಣಗಳೆಲ್ಲಾ ಹೆಣಕ್ಕೆ ಮಾಡಿದ ಅಲಂಕಾರದಂತೆ ಭಾಸವಾಗುತ್ತವೆ. ಆ ಹಠಯೋಗವನ್ನು ಸಾಧಿಸುವದರಲ್ಲಿ ಶ್ರಮವೂ ಹೆಚ್ಚು. ತಕ್ಕ ಅನುಭವಿಗಳ ಸಹಾಯವಿಲ್ಲದೆ ಆ ದಾರಿಯಲ್ಲಿ ಮುಂದೆ ಹೆಜ್ಜೆಯನ್ನಿಡುವದಕ್ಕಾಗುವದಿಲ್ಲ. ಆದ್ದರಿಂದ ಇಲ್ಲಿ ನಾವು ಅದರ ವಿಚಾರವನ್ನು ಮಾಡುವದಿಲ್ಲ. ಈ ಪ್ರಕರಣದ ವಿಚಾರವು ರಾಜಯೋಗ ಎಂದರೆ ಯೋಗಗಳಲ್ಲೆಲ್ಲಾ ರಾಜನಾದ ಯೋಗವು. ಯೋಗ ಶಬ್ದಕ್ಕೆ ಶ್ರೀಪತಂಜಲಿಮಹರ್ಷಿಗಳು "ಯೋಗಶ್ಚಿತ್ತವೃತ್ತಿನಿರೋಧಃ" ಎಂಬರ್ಥದ ಸೂತ್ರವನ್ನು ಮಾಡಿದ್ದಾರೆ. ಯೋಗವೆಂದರೆ ಮನಸ್ಸಿನ ವೃತ್ತಿಗಳನ್ನು ಬಿಗಿಹಿಡಿಯುವದೆಂದರ್ಥ. ಮನಸ್ಸು ಇಂದ್ರಿಯಗಳ ದ್ವಾರಗಳಿಂದ ನುಸಿದು ಹೊರಬಿದ್ದು ಇಂದ್ರಿಯಗಳ ಬೆನ್ನುಹಿಡಿದು ಹೋಗಿ ಅನೇಕವಿಷಯಗಳನ್ನು ಆವರಿಸಿ ಅದರ ಆಕಾರವನ್ನು ಪಡೆಯುತ್ತದೆ. ಹಾಗೆ ಪಡೆದ ಆಕಾರಕ್ಕೆ ವೃತ್ತಿಯೆಂದು ಹೆಸರು. ನಮಗೆ ಒಂದುವಸ್ತು ಕಾಣಬೇಕಾದರೆ ನಮ್ಮ ಮನಸ್ಸು ಕಣ್ಣಿನ ಮೂಲಕ ಹೊರಬಿದ್ದು ಅಲ್ಲಿರುವ ಪದಾರ್ಥದ ಮೇಲೆ ಮುಸುಕಿ ಆ ಆಕಾರವಾಗುತ್ತದೆ. ಆಗ ನಮಗೆ ಆ ಪದಾರ್ಥವು ಕಾಣುವದು. ಹೀಗೆ ಮನಸ್ಸು ಬೇರೆ ಬೇರೆ ಆಕಾರಗಳನ್ನು ಪಡೆಯಗೊಡದಂತೆ ಮಾಡುವದೇ ರಾಜಯೋಗ.

## ಆಹಾರವಿಹಾರ.

ಮನಸ್ಸನ್ನು ಬಿಗಿಹಿಡಿಯಬೇಕೆನ್ನುವವರು ಸಾತ್ವಿಕಾಹಾರವನ್ನೇ ತೆಗೆದುಕೊಳ್ಳಬೇಕೆಂದು ಹಿಂದೆ ಸೂಚಿತವಾಯಿತಷ್ಟೆ. ಆಹಾರದ ನಿಯಮವು ಇದರಲ್ಲಿ ಹೆಚ್ಚು ಪ್ರಧಾನವಾದ್ದರಿಂದ ಭಗವದ್ಗೀತೆಯು ಅದರ ವಿಷಯದಲ್ಲಿ ಇನ್ನೂ ಹೆಚ್ಚಾಗಿ ಎಚ್ಚರಿಕೆಯನ್ನು ಕೊಡುವದೇನೆಂದರೆ—

"ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ ।
ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥"

ರಾಜಯೋಗವು ಮಿತಿಯನ್ನು ಮೀರಿ ತಿನ್ನುವವನ ಪಾಲಿಗೆ ದಕ್ಕುವದಿಲ್ಲ. ತಿನ್ನುವದನ್ನೇ ಸಂಪೂರ್ಣವಾಗಿ ಬಿಟ್ಟವನಿಗೂ ಅದು ಬರುವದಿಲ್ಲ. ಬಹಳವಾಗಿ ನಿದ್ರೆಯನ್ನು ಮಾಡುವವನಿಗೂ ಅದು ಸಿಕ್ಕುವದಿಲ್ಲ.

ನಿದ್ರೆಯನ್ನು ಬಿಟ್ಟವನಿಗೂ ಅದು ಸಿದ್ಧಿಸುವದಿಲ್ಲ— ಹೀಗೆಂದು ಅದರ ತಾತ್ಪರ್ಯ. ಅನ್ನದಿಂದ ವಾಯುವೂ ಆಗುವದು ಮತ್ತು ಮನಸ್ಸೂ ಆಗುವದು. ಮಿತಿಯನ್ನು ಮೀರಿ ತಿನ್ನುವದರಿಂದ ವಾಯುವೂ ಮನಸ್ಸೂ ಸೊಕ್ಕುವವಾದ ಕಾರಣ ಹಾಗೆ ತಿನ್ನಬಾರದು. ಬಹಳವಾಗಿ ನಿದ್ರೆಯನ್ನು ಮಾಡುವವನ ಮನಸ್ಸು ಹೆಚ್ಚು ಮಂಕಾಗಿರುವದು ಮತ್ತು ನಿದ್ರೆಯನ್ನೇ ಬಿಟ್ಟವನ ಮನಸ್ಸು ಹೆಚ್ಚು ತಳಮಳಗೊಳ್ಳುತ್ತಿರುವದು. ಅದರಿಂದ ಅವರಿಗೆ ರಾಜಯೋಗವು ಸಿದ್ಧಿಸುವ ಆಶೆಯಿಲ್ಲ.

ಮನಸ್ಸಿನ ಹರಿದಾಟಕ್ಕೆ ಆಹಾರವು ಒಂದೇ ಕಾರಣವಲ್ಲ; ವಿಹಾರವೂ ಕಾರಣವಾಗಿರುವದು. ಹೆಚ್ಚಾಗಿ ಓಡಾಡಿ ಅಥವಾ ಹೆಚ್ಚಾಗಿ ಕೆಲಸವನ್ನು ಮಾಡಿ ದಣಿದವನ ಮನಸ್ಸು ಸೊರಗಿ ಯೋಗಕ್ಕೆ ಮುಂದೋಡದೆ ಇರುವದು. ಇದನ್ನರಿತು ಭಗವದ್ಗೀತೆಯು ಇನ್ನೂ ಮುಂದೆ ಹೇಳುವದೇನೆಂದರೆ —

“ ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।
ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ ”

ಎಷ್ಟು ಬೇಕೋ ಅಷ್ಟೇ ಮಾತ್ರ ಆಹಾರವನ್ನುಂಡು ಎಷ್ಟು ಹಗುರವೋ ಅಷ್ಟೇ ಉದ್ಯೋಗವನ್ನು ಮಾಡಿ ತಕ್ಕಷ್ಟೇ ನಿದ್ರೆಯೂ ತಕ್ಕಷ್ಟೇ ಎಚ್ಚರವೂ ಉಳ್ಳವರಿಗೆ ರಾಜಯೋಗವು ದುಃಖಪರಿಹಾರಕವಾಗಿ ಪರಿಣಮಿಸುತ್ತದೆ.

## ಏಕಾಂತಸ್ಥಲ.

ಈ ರೀತಿಯಲ್ಲಿ ಮನಸ್ಸನ್ನು ರಾಜಯೋಗಕ್ಕೆ ತಕ್ಕ ಪರಿಸ್ಥಿತಿಯಲ್ಲಿ ಕಾಪಾಡಿಕೊಂಡು ಆಮೇಲೆ ಅದನ್ನು ರಾಜಯೋಗಮಾರ್ಗದಲ್ಲಿ ಮುಂದುವರಿಸಲು ಪ್ರಯತ್ನಿಸುವ ಸಾಧಕನು ತನ್ನ ಸಾಧನೆಗೆ ಒಂದು ಏಕಾಂತಸ್ಥಲವನ್ನು ಮಾಡಿಕೊಳ್ಳಬೇಕು. ಏಕಾಂತಸ್ಥಲವೆಂದರೆ ತಾನೊಬ್ಬನು ಮಾತ್ರವೇ ಇರುವ ಸ್ಥಲವೆಂದರ್ಥ. ಜನರ ಗುಂಪು ಸೇರಿದರೆ ಸ್ವಭಾವವಾಗಿ ಮನುಷ್ಯನ ಮನಸ್ಸು ಎಲ್ಲರ ಕಡೆಗೂ ತನಗೆ ತಾನೇ ಹರಿದು ಹೋಗುವದು. ತನಗೆ ಬೇಕಾಗಿ ಅಥವಾ ಬೇಕಾಗದೆ ಯಾರೊಡನೆಯೂ

ದರೂ ಹರಟೆಯನ್ನು ಹೊಡೆಯಬೇಕಾಗುವದು. ಆದರಿಂದ ಮನಸ್ಸು ಮತ್ತಷ್ಟು ಹೊರಮುಖವಾಗಿ ನುಗ್ಗುವದು. ಇಬ್ಬರಿದ್ದರೂ ಕೂಡ ಗದ್ದಲವಾಗಿಯೇ ಆಗುವದೆಂಬುದಕ್ಕೆ ಭಾಗವತದ ಒಂದು ಕಥೆಯು ಒಳ್ಳೇ ನಿದರ್ಶನವಾಗಿದೆ. ಒಂದು ಮನೆಯಲ್ಲಿ ಒಬ್ಬ ಕನ್ಯೆ ಇದ್ದಳು. ಒಂದು ದಿನ ಆಕೆಯ ತಂದೆತಾಯಿಗಳು ಕಾರ್ಯಾಂತರದಿಂದ ಹೊರಗೆ ಹೋಗಿದ್ದಾಗ ಆ ಕನ್ಯೆಯನ್ನು ತಮ್ಮ ಮನೆಗೆ ತಂದುಕೊಳ್ಳಬೇಕೆಂಬ ಇಚ್ಛೆಯಿಂದ ಮಾತಾಡುವದಕ್ಕಾಗಿ ನೆರೆಯೂರಿಂದ ಇಬ್ಬರು ಗೃಹಸ್ಥರು ಬಂದು ಕುಳಿತರು. ಆ ಸಮಯದಲ್ಲಿ ಆ ಕನ್ಯೆಯು ಒಳಗೆ ಬತ್ತವನ್ನು ಕುಟ್ಟಬೇಕಾಗಿತ್ತು. ಆಗ ಆಕೆಯು ಬತ್ತ ಒಂದು ಏರನ್ನು ಹಾಕಿದಳು. ಆಕೆಯ ಬಳೆಗಳ ಸದ್ದು ಬಹಳವಾಯಿತು. ಇದರಿಂದ ಆ ಗೃಹಸ್ಥರು ತಮ್ಮ ಮನೆಯ ಬಡತನದ ಮರ್ಮವನ್ನರಿಯುವರೆಂದು ಸಂಕೋಚಗೊಂಡು ಆ ಕನ್ಯೆಯು ಒಂದೊಂದನ್ನಾಗಿ ಬಳೆಗಳನ್ನೊಡೆದು ಹಾಕಿ ಏರು ಹಾಕುತ್ತ ಬಂದಳು. ಆದರೂ ಗದ್ದಲವಾಗಿಯೇ ಆಯಿತು. ಆಗ ಒಂದೊಂದು ಕೈಗೆ ಎರಡೆರಡನ್ನೇ ಉಳಿಸಿಕೊಂಡು ಉಳಿದವುಗಳನ್ನೆಲ್ಲಾ ಒಡೆದು ಬಿಟ್ಟಳು. ಆಗಲೂ ಸದ್ದಾಗದೆ ಹೋಗಲಿಲ್ಲ. ಆಗ ಆಕೆಯು ಇನ್ನೊಂದೊಂದನ್ನು ಒಡೆದು ಹಾಕಿ ಒಂದೊಂದನ್ನೇ ಉಳಿಸಿಕೊಂಡು ಏರು ಹಾಕಿದಳು. ಏನೂ ಗದ್ದಲವಾಗಲಿಲ್ಲ. ಇದರಿಂದ ತಿಳಿಯಬೇಕಾದುದೇನೆಂದರೆ ಮನಸ್ಸನ್ನು ಬಿಗಿಹಿಡಿಯುವ ಸಾಧನವನ್ನು ನಡೆಸುವವರಿಗೆ ಏಕಾಂತಸ್ಥಲವು ಆವಶ್ಯಕ.

ಯಾವದೋ ಒಂದು ಕೋಣೆಯಲ್ಲಿ ತಾನೊಬ್ಬನೇ ಇದ್ದಮಾತ್ರಕ್ಕೇ ಅದು ತಕ್ಕ ಏಕಾಂತಸ್ಥಲವಾಯಿತೆಂದು ಮಾತ್ರ ತಿಳಿಯಬಾರದು. ಶಬ್ದಾರ್ಥದ ದೃಷ್ಟಿಯಿಂದ ಅದು ಏಕಾಂತಸ್ಥಲವಾದರೂ ರಾಜಯೋಗದ ದೃಷ್ಟಿಯಿಂದ ಅದರಲ್ಲಿ ಇನ್ನೂ ಎಷ್ಟೋ ಗುಣಗಳಿರಬೇಕಾಗುವದು. ಅದು, ಜನರು ಆಗಾಗ ಓಡಾಡುವ ದಾರಿಯಲ್ಲಿರಬಾರದು. ಅಥವಾ ದಾರಿಯಲ್ಲಿದ್ದರೂ ಹೊರಗಣ ಯಾವ ಗದ್ದಲವೂ ಒಳಗೆ ತಲೇಹಾಕಬಾರದು. ಗದ್ದಲವು ಕೇಳಿಸಿದರೆ ಅಲ್ಲಿ ತಾನೊಬ್ಬನೇ ಇದ್ದರೂ ಬಹುಜನಗಳಿದ್ದಂತೆಯೇ. ಇದರ ಮೇಲೆ ಗಾಳಿಯೂ ಬೆಳಕೂ ತಕ್ಕಷ್ಟು ಇರಬೇಕು.

ಇಲ್ಲದಿದ್ದರೆ ಮನಸ್ಸು ನಿಷ್ಕಾರಣವಾಗಿ ಚೆದರಿ ಹೊರಮುಖವಾಗುವದು. ಕೋಣೆಯು ಸುತ್ತುಮುತ್ತು ಯಾವ ಹೊಲಸೂ ಇರಬಾರದಲ್ಲದೆ ಕೋಣೆಯ ನೆಲವು ತೇವವಾಗಿರದೆ ಹೊರಗಣ ನೆಲದ ಮಟ್ಟಕ್ಕಿಂತ ಎತ್ತರವಾಗಿರಬೇಕು. ಅಲ್ಲಿ ಬಹಳ ಹೊತ್ತು ಕುಳಿತುಕೊಳ್ಳುವ ಸಂಭವವಿರುವದರಿಂದ ನೆಲದಿಂದ ಶರೀರಕ್ಕೆ ಯಾವ ಅಪಾಯವೂ ಆಗದಂತೆ ಇರಬೇಕು. ಶರೀರಕ್ಕೆ ಅಪಾಯವಾದೊಡನೆ ಅದು ಮನಸ್ಸಿನ ಮೇಲೆ ಪರಿಣಮಿಸುವದು. ನೆಲವು ಯಾವಾಗಲೂ ಸಾರಿಸಿ ಗುಡಿಸಿ ಬಗೆಬಗೆಯ ರಂಗವಲ್ಲಿಗಳಿಂದ ಅಲಂಕೃತವಾಗಿರಬೇಕು. ಗೋಡೆಗಳು ಶುಭ್ರವಾಗಿರಬೇಕಲ್ಲದೆ ಮನಸ್ಸಿಗೆ ಆನಂದಕರವಾದ ಚಿತ್ರಪಟಗಳಿಂದ ಶೋಭಿಸುತ್ತಿರಬೇಕು. ಮನಸ್ಸನ್ನು ಸೆಳೆಯುವಂಥ ಸ್ತ್ರೀರೂಪದ ಅಥವಾ ಮೋಹಕವಾದಂಥ ಪುರುಷರೂಪದ ಚಿತ್ರಗಳಿಗೆ ಅಲ್ಲಿ ಎಡೆಗೊಡಬಾರದು. ದೇವರ ಬಗೆಬಗೆಯ ಅವತಾರಮೂರ್ತಿಗಳನ್ನು ನೆನಪುಗೊಡುವಂಥ ದೇವತಾವಿಗ್ರಹಗಳ ಮತ್ತು ವೈರಾಗ್ಯದ ಪರಮಾವಧಿಯನ್ನು ಒಡೆದುಮೂಡಿಸುವಂಥ ಸಾಧುಸತ್ಪುರುಷರ, ಅಲ್ಲದೆ ಮನಸ್ಸನ್ನು ಉಲ್ಲಾಸಗೊಳಿಸುವಂಥ ಪವಿತ್ರವಾದ ಪರ್ವತ, ನದಿ, ಆಶ್ರಮ ದೇಶ — ಮೊದಲಾದವುಗಳ ಚಿತ್ರಗಳು ಆ ಸ್ಥಲಕ್ಕೆ ಒಪ್ಪುವವು. ಕೋಣೆಯಲ್ಲಿ ತನ್ನದೊಂದು ಇಷ್ಟದೇವತಾವಿಗ್ರಹವೂ ಪರಮಾತ್ಮಜ್ಞಾನವಿಷಯಕವಾದ ಪವಿತ್ರಗ್ರಂಥಗಳೂ ಇರುವದೊಳ್ಳೆಯದು. ಇವುಗಳ ಜೊತೆಗೆ ಹೊಸಹೊಸ ಹೂ, ತುಲಸಿ, ಶ್ರೀಗಂಧ, ಕರ್ಪೂರ — ಮೊದಲಾದ ದೇವಪೂಜಾಸಾಮಗ್ರಿಗಳೂ ಅಲ್ಲಿಗೆ ಒಪ್ಪುವವು. ಮುಖ್ಯವಾಗಿ ಕೋಣೆಯೊಳಗೆ ತಲೆ ಹಾಕಿದೊಡನೆಯೇ ಅಲ್ಲಿಯ ವಾತಾವರಣವು ಅವನ ಮನಸ್ಸನ್ನು ಸೆಳೆಯುವಂತೆ ಇರಬೇಕು. ಈ ಪರಿಸ್ಥಿತಿಯೇ ಮನಸ್ಸಿನ ಹೊಯ್ದಾಟವನ್ನು ಎಷ್ಟೋ ಮಟ್ಟಿಗೆ ಕಡಿಮೆ ಮಾಡಿಬಿಡುವದು.

ಕೋಣೆಯಲ್ಲಿ ಇರುವೆಗಳಾಗಲಿ, ಮುಖಕ್ಕೆ ಮುತ್ತುವ ಹುಳುಗಳಾಗಲಿ, ಹೊಗೆಯಾಗಲಿ, ಬೆಂಕಿಯಾಗಲಿ-ಏನೂ ಇರಬಾರದು. ಗಾಳಿ ಕೂಡ ಮೈಮೇಲೆ ಭರದಿಂದ ಬೀಸಬಾರದು. ಇವೆಲ್ಲಾ ಮನಸ್ಸನ್ನು ಬಹು ಬೇಗ ಎಚ್ಚಿಸಿ ಬಿಡುವವು. ಮನಸ್ಸನ್ನು ಹಿಮ್ಮುಖವಾಗಿ ಮಾಡಿ ನಿಲ್ಲಿಸುವದೇ

ಎಷ್ಟೋ ಕಷ್ಟ. ಬಲವಾದ ಪ್ರಯತ್ನದಿಂದ ಅದನ್ನು ಸಾಧಿಸುತ್ತಿರುವಾಗ ಕ್ಷುದ್ರವಾದ ಕಾರಣಗಳು ಬಂದು ಅದನ್ನು ಕದಲಿಸಿದರೆ ಅದು ಬಹು ದೊಡ್ಡ ನಷ್ಟವಲ್ಲವೆ? ಆದ್ದರಿಂದ ರಾಜಯೋಗವನ್ನಭ್ಯಾಸಮಾಡಬೇಕೆನ್ನುವವರು ಅತಿರಮಣೀಯವಾದ ಒಂದು ಏಕಾಂತಸ್ಥಲವನ್ನು ಮಾಡಿಕೊಳ್ಳುವದಗತ್ಯವೆಂದು ಗೀತೆಯು

"ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ"

ಎಂದರೆ ಯೋಗಿಯು ಯಾವಾಗಲೂ ಏಕಾಂತಸ್ಥಲದಲ್ಲಿದ್ದು ತನ್ನ ಸಾಧನವನ್ನು ನಡೆಸತಕ್ಕದ್ದೆಂದು ಹೇಳಿರುವದು.

## ಯಮ.

ಶ್ರೀಪತಂಜಲಿಮಹರ್ಷಿಗಳು ತಾವು ಹೇಳುವ ರಾಜಯೋಗದ ಸಾಧನಗಳನ್ನು ಎಂಟು ಬಗೆಯಾಗಿ ಮಾಡಿದ್ದಾರೆ. ಅವು ಯಾವವೆಂದರೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ ಮತ್ತು ಸಮಾಧಿ. ಇವುಗಳಲ್ಲಿ ಮೊದಲನೆಯದನ್ನು ಈಗ ವಿಚಾರ ಮಾಡುವೆವು. ಮೊದಲನೆಯ ಸಾಧನವು ಯಮ. "ಯಮ" ಎಂಬ ಮಾತು ಅಯೋಗ್ಯವಾದ ಕೆಲಸಗಳಿಂದ ಹಿಮ್ಮೆಟ್ಟುವದೆಂಬ ಅರ್ಥವನ್ನು ಕೊಡುತ್ತದೆ. ಒಂದು ಕೋಣೆಯಲ್ಲಿ ದೇವರನ್ನು ಕೂಡಿಸಬೇಕಾದರೆ ಅದರ ಹೊಲಸನ್ನು ಮೊದಲು ಹೊರಗೆ ಹಾಕಬೇಕಾಗುತ್ತದೆ. ಸಾಮಾನ್ಯವಾಗಿ ಯಾರಾದರೊಬ್ಬ ದೊಡ್ಡವರನ್ನು ಮನೆಗೆ ಕರೆದರೆ ಅವರನ್ನು ಕೂಡಿಸುವ ಸ್ಥಲದಲ್ಲಿ ಕ್ಷುದ್ರಪದಾರ್ಥಗಳಿರದಂತೆ ಎಚ್ಚರಿಕೆಯನ್ನು ತೆಗೆದುಕೊಳ್ಳುತ್ತಿರುವದು ಎಲ್ಲರ ಅನುಭವದಲ್ಲಿಯೂ ಇದೆ. ಅದರಂತೆ ಈ ಶರೀರವೆಂಬ ಕೋಣೆಯಲ್ಲಿ ದೇವರ ಸಾನ್ನಿಧ್ಯದ ಅಭಿಮಾನವನ್ನು ಮಾಡಿಕೊಳ್ಳಬೇಕಾದರೆ ಅದಕ್ಕೆ ತಕ್ಕ ಸ್ಥಾನವು ಮನಸ್ಸು. ಆ ಮನಸ್ಸು ಅದಕ್ಕೆ ಯೋಗ್ಯವಾಗಬೇಕಾದರೆ ಅದರಲ್ಲಿರುವ ಕ್ಷುದ್ರಕಲ್ಪನೆಗಳನ್ನೆಲ್ಲಾ ಹೊರಕ್ಕೆ ತಳ್ಳಿಬಿಡಬೇಕು. ಇದು ಮೊದಲನೆಯ ಕೆಲಸ. ಇದರ ಹೊರತು ಗತ್ಯಂತರವೇ ಇಲ್ಲ. ಈ ಅಭಿಪ್ರಾಯವನ್ನು "ನಾವಿರತೋ ದುಶ್ಚರಿತಾತ್" ಎಂಬ ಕಠೋಪನಿಷದ್ವಾಕ್ಯವು ನೆನಪುಗೊಡುತ್ತದೆ. ಕೆಟ್ಟನಡವಳಿಕೆಗಳನ್ನು ದೂರಮಾಡದವನು ದೇವರನ್ನು ಪಡೆಯಲಾರನೆಂದು

ಆದರ ತಾತ್ಪರ್ಯ. ಮನಸ್ಸಿನಿಂದ ಮೊದಲು ಹೊರಕ್ಕೆ ಹಾಕಬೇಕಾದ ಕ್ಷುದ್ರಕಲ್ಪನೆಗಳು ಯಾವವೆಂದರೆ—

" ಅಹಿಂಸಾಸತ್ಯಾಸ್ತೇಯಬ್ರಹ್ಮಚರ್ಯಾಪರಿಗ್ರಹಾ ಯಮಾಃ "

ಎಂಬ ಪಾತಂಜಲಸೂತ್ರದಂತೆ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ. ಈ ಐದಕ್ಕೂ ಯಮಗಳೆಂದು ಹೆಸರು.

ಅಹಿಂಸೆಯೆಂದರೆ ಹಿಂಸೆಯ ಕಲ್ಪನೆಯನ್ನು ಮನಸ್ಸಿನಿಂದ ಹೊರಕ್ಕೆ ಹಾಕುವದು. ಹಿಂಸೆಯ ಕಲ್ಪನೆಯನ್ನು ಮನಸ್ಸಿನಿಂದ ಬೇರುಸಹಿತವಾಗಿ ಕಿತ್ತುಹಾಕಿದರೆ ಲೋಕದಲ್ಲಿ ಗೃಹಸ್ಥರು ಬಾಳುವೆಮಾಡುವದೇ ಕಷ್ಟವಾದೀತೆಂದು ತೋರಬಹುದು. ಅದೇನೂ ಸುಳ್ಳಲ್ಲ. ಲೋಕದಲ್ಲಿ ಜನರೆಲ್ಲರೂ ಸತ್ತ್ವಸಂಪನ್ನರಾಗಿ ಪಾಪಭೀತರೇ ಆದರೆ ಹಿಂಸೆಯ ನೆಲೆಯನ್ನೇ ನೀಗಿಬಿಡಬಹುದು. ಆದರೆ ಲೋಕಸ್ಥಿತಿ ಹಾಗಿರುವದಿಲ್ಲ. ಇತರರ ಸಾಧುವೃತ್ತಿಯನ್ನು ದುರುಪಯೋಗಮಾಡಿಕೊಂಡು ಸ್ವಾರ್ಥವನ್ನು ಸಾಧಿಸುವ ಕುಹಕಾಲೋಚನೆಯವರು ಬಹುಮಂದಿ ಇರುವರು. ಅವರ ಮನಸ್ಸು ಸಾಧುವೃತ್ತಿಯವರ ಸದುಪದೇಶಗಳನ್ನು ಗ್ರಹಿಸಲಾರದಷ್ಟು ತಮೋಮಯವಾಗಿರುವದು. ಅಂಥವರ ಪರಿಸ್ಥಿತಿಯನ್ನಾಲೋಚನೆಮಾಡಿಯೇ ನೀತಿಶಾಸ್ತ್ರಕಾರರು ಅವರನ್ನು ದಾರಿಗೆ ತರುವದಕ್ಕೆ ನಾಲ್ಕು ಉಪಾಯಗಳನ್ನು ಕಂಡುಹಿಡಿದಿರುವರು. ಮೊದಲನೇದು ಸಾಮೋಪಾಯ. ಸಾಮವೆಂದರೆ ಧರ್ಮವನ್ನು ತಿಳಿಯಹೇಳಿ ದಾರಿಗೆ ತರುವದು. ಎರಡನೇದು ದಾನೋಪಾಯ. ದಾನವೆಂದರೆ ಏನಾದರೂ ಲಾಭವನ್ನು ಮಾಡಿಕೊಟ್ಟು ದಾರಿಗೆ ತರುವದು. ಮೂರನೇದು ಭೇದೋಪಾಯ. ಭೇದವೆಂದರೆ ಶತ್ರುಪಕ್ಷದಲ್ಲಿ ಅವರವರೊಳಗೇ ಒಡಕನ್ನು ಹುಟ್ಟಿಸಿ ದಾರಿಗೆ ತರುವದು. ಈ ಮೂರು ಉಪಾಯಗಳಲ್ಲಿ ಯಾವದು ನಡೆದರೂ ಅಹಿಂಸೆಯಿಂದಲೇ ಕೆಲಸವನ್ನು ಸಾಧಿಸಿದಂತಾಗುವದು. ಆದರೆ ಈ ಉಪಾಯಗಳಿಗೆಲ್ಲಾ ಮೀರಿದಂಥ ತಾಮಸರಿಗಾಗಿ ಶಾಸ್ತ್ರಕಾರರು ದಂಡೋಪಾಯವನ್ನೇ ಹೇಳಿದ್ದಾರೆ. ವ್ಯಾವಹಾರಿಕರು ಎಷ್ಟೋ ವೇಳೆ ದಂಡೋಪಾಯವನ್ನು ಮಾಡಬೇಕಾಗಿಯೇ ಬರುತ್ತದೆ. ಆದ್ದರಿಂದ ಪ್ರವೃತ್ತಿಧರ್ಮವನ್ನು ಹೇಳುವವರು—ಅಂದರೆ ಪ್ರಪಂಚವ್ಯವಹಾರ

ವನ್ನು ಸಾಗಿಸುವ ಧರ್ಮವನ್ನು ಹೇಳುವವರು — ಸಮಯಾನುಸಾರವಾಗಿ ಹಿಂಸೆಯನ್ನು ಮಾಡಬಹುದೆಂದು ಒಪ್ಪಿಕೊಂಡಿದ್ದಾರೆ. ಆ ಸಮಯವು ಯಾವದೆಂಬದನ್ನು ಅವರು ತಮ್ಮ ಶಾಸ್ತ್ರದಲ್ಲಿ ಹೇಳುತ್ತಾರೆ.

ಸಾಮಾನ್ಯವಾಗಿ ಹಿಂಸೆಯು ಪಾಪಕರವೆಂದು ಶಾಸ್ತ್ರಗಳು ಹೇಳುತ್ತವೆ. ಅಥವಾ ಶಾಸ್ತ್ರಗಳ ತನಕ ಏಕೆ? ಕೈಹುಣ್ಣಿಗೆ ಕನ್ನಡಿ ಬೇಕೆ? ನಮಗೆ ಮತ್ತೊಬ್ಬರಿಂದ ಹಿಂಸೆಯಾದರೆ ಅದು ಬೇಡವೆನಿಸುವದಿಲ್ಲವೆ? ಹಾಗೆಯೇ ಹಿಂಸೆಯು ಯಾರಿಗೆ ತಾನೆ ಬೇಕೆನಿಸುತ್ತದೆ? ಆದ್ದರಿಂದ ಇತರರ ಮನಸ್ಸಿಗೆ ದುಃಖವನ್ನುಂಟುಮಾಡುವ ಹಿಂಸೆಯು ಪಾಪಕರವಲ್ಲದೆ ಮತ್ತೇನಾದೀತು? ಹೀಗಿದ್ದರೂ ಕೆಲಕೆಲವು ಸಂದರ್ಭಗಳಲ್ಲಿ ಹಿಂಸೆಗೆ ಅವಕಾಶವನ್ನು ಕೊಟ್ಟಿರುವದನ್ನು ನೋಡಿದರೆ ಶಾಸ್ತ್ರವಾಕ್ಯಗಳು ಪಾಪಕರ್ಮಕ್ಕೆ ಉತ್ತೇಜಕಗಳೆಂಬ ಕಲ್ಪನೆಯುಂಟಾಗಬಹುದು. ಶಾಸ್ತ್ರಗಳೆಂದಿಗೂ ಅಂಥ ಕೆಲಸವನ್ನು ಮಾಡುವದಿಲ್ಲ. ನಮ್ಮ ಸಾಮಾನ್ಯಬುದ್ಧಿಯಿಂದ ಶಾಸ್ತ್ರವನ್ನು ನಿಂದಿಸುವದಕ್ಕೆ ಹೋಗುವದು ಅನುಚಿತವು. ಪಾಪಪುಣ್ಯಗಳ ಧರ್ಮಸೂಕ್ಷ್ಮಗಳನ್ನು ಗ್ರಹಿಸುವ ವಿಷಯದಲ್ಲಿ ನಮ್ಮ ಸಾಮಾನ್ಯಬುದ್ಧಿಯು ಶಾಸ್ತ್ರಕಾರರ ಬುದ್ಧಿಯಷ್ಟು ತೀಕ್ಷ್ಣವಾಗಿಲ್ಲ. ನಮ್ಮ ಬುದ್ಧಿಯು ಅನೇಕವ್ಯವಹಾರಗಳಲ್ಲಿಯೇ ನಿರಂತರವೂ ಇದ್ದು ಬರೀ ಅದರ ರಾಗದ್ವೇಷಗಳ ಕಲೆಯಿಂದಲೇ ತುಂಬಿರುವದು. ಶಾಸ್ತ್ರಕಾರರ ಬುದ್ಧಿಯಲ್ಲಿ ಆ ಕಲೆಗಳು ಬಹುಕಡಿಮೆಯಾಗಿ ಧರ್ಮಾಚರಣೆಯ ಸಂಸ್ಕಾರದ ಕಲೆಗಳೇ ತುಂಬಿತುಳುಕುತ್ತಿರುವವು. ಆದ್ದರಿಂದ ಧರ್ಮಸೂಕ್ಷ್ಮವು ಅವರ ಮನಸ್ಸಿಗೆ ಹೊಳೆದಂತೆ ನಮ್ಮ ಮನಸ್ಸಿಗೆ ಗೋಚರಿಸುವದಿಲ್ಲ. ಧರ್ಮಮರ್ಮವನ್ನು ತಿಳಿಯುವದಕ್ಕೆ ಧರ್ಮಾಚರಣೆಗಾಗಿ ತನುಮನಧನಗಳನ್ನು ಕಳೆದವರೇ ಅರ್ಹರು; ಉಳಿದವರಲ್ಲ. ಆದ್ದರಿಂದ ಶಾಸ್ತ್ರಕಾರರ ಮೇಲೆ ಶ್ರದ್ಧೆಯನ್ನಿಡಬೇಕು.

"ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ"

ಎಂದು ಭಗವಂತನು ಗೀತೆಯಲ್ಲಿ ಹೇಳಿದ್ದಾನೆ. ಇದನ್ನು ಮಾಡಬಹುದೆಂದೂ ಇದನ್ನು ಮಾಡಬಾರದೆಂದೂ ನಿಶ್ಚಯಿಸುವದರಲ್ಲಿ ಶಾಸ್ತ್ರವೇ ಪ್ರಮಾಣವೆಂದು ಅದರ ತಾತ್ಪರ್ಯ. ಆದ್ದರಿಂದ ಶಾಸ್ತ್ರವು ಒಂದು ಹಿಂಸೆ

ಯನ್ನು ಧರ್ಮವೆಂದು ಹೇಳಿದ್ದರೆ ತಿಳಿಯನ್ನು ಬಗ್ಗಿಸಿಕೊಂಡು ಅದರಂತೆ ಆಚರಿಸಬೇಕು. ಮನಸ್ಸಿನಲ್ಲಿ ವಿಚಾರವನ್ನು ಮಾಡುತ್ತ ಹೋದರೆ ಕಾಲಾನುಕಾಲದಲ್ಲಿ ಅದಕ್ಕೆ ಕಾರಣವು ದೊರೆತೀತು.

ವೇದವು ಯಜ್ಞಯಾಗಾದಿಗಳಲ್ಲಿ ಪಶುಹಿಂಸೆಯನ್ನುಪದೇಶಿಸಿರುತ್ತದೆ. ವೈದಿಕಕರ್ಮಗಳ ವಿಚಾರದ ಮಾತಿರಲಿ. ಚಾತುರ್ವರ್ಣ್ಯದಲ್ಲಿ ಕ್ಷತ್ರಿಯನ ಕರ್ಮವನ್ನು ಧರ್ಮವೆನ್ನಬೇಕೋ ಅಧರ್ಮವೆನ್ನಬೇಕೋ? ಸ್ಥೂಲದೃಷ್ಟಿಯಿಂದ ನೋಡಿದರೆ ಅದು ಅಧರ್ಮವೇ. ಏಕೆಂದರೆ ಅದರಿಂದ ಅನೇಕರಿಗೆ ಪ್ರಾಣಹಾನಿಯಾಗುತ್ತದೆ. ಆದರೆ ಒಬ್ಬ ಕ್ಷತ್ರಿಯನು ಧರ್ಮಯುದ್ಧವನ್ನು ಮಾಡಿ ಜಯಶಾಲಿಯಾದಾಗ ಆದ ಪರಿಣಾಮವನ್ನು ಲಕ್ಷ್ಯದಲ್ಲಿಟ್ಟುಕೊಂಡು ನೋಡಿದರೆ ಅವನಿಂದ ಜಗತ್ತಿಗೇ ಹೆಚ್ಚಿನ ಹಿತವಾಗಿರುತ್ತದೆ. ಆ ದೃಷ್ಟಿಯಿಂದ ಅವನು ಮಾಡಿದ ಹಿಂಸೆಯು ಧರ್ಮವೆನಿಸುತ್ತದೆ. ಕ್ಷತ್ರಿಯತ್ವವು ಮನುಷ್ಯಕಲ್ಪಿತವಲ್ಲ. "ಬಾಹೂ ರಾಜನ್ಯಃ ಕೃತಃ" ಎಂಬ ಪುರುಷಸೂಕ್ತವಚನದಂತೆ ಅದು ಪರಮಾತ್ಮನ ಬಾಹುವಿನಿಂದ ಹುಟ್ಟಿದ್ದಾಗಿದೆ. ಕ್ಷಾತ್ರತೇಜಸ್ಸಿನ ಬಿಸಿಯು ಬೆದರಿಕೆ ಇಲ್ಲದೆ ಇದ್ದರೆ ಲೋಕದಲ್ಲಿ ದುರ್ಜನರ ದುಷ್ಟಪ್ರವೃತ್ತಿಗೆ ತಡೆಯೇ ಇರುವದಿಲ್ಲ. ಅದ್ದರಿಂದ ಧರ್ಮಯುದ್ಧದಲ್ಲಿ ಆಗುವ ಹಿಂಸೆಯು ಹಿಂಸೆಯಲ್ಲ.

ಲೋಕಸ್ವಭಾವದಲ್ಲಿ ತೊಡಗಿರುವವರು ಅಹಿಂಸಾವ್ರತವನ್ನು ಸಂಪೂರ್ಣವಾಗಿ ಪಾಲಿಸುವದು ಎಷ್ಟು ಮಾತ್ರವೂ ಶಕ್ಯವಲ್ಲ. ಅವರು ಸ್ವಭಾವವಾಗಿ ಆಡಿಸುವ ಉಸಿರಿನ ಬಿಸಿಗೇ ಎಷ್ಟೋ ಸಣ್ಣ ಜೀವಿಗಳು ಬೆಂದು ಬೆಂಡಾಗುವವು. ಅವರ ಪ್ರತಿಯೊಂದು ಹೆಜ್ಜೆಗೂ ಎಷ್ಟೋ ಸಣ್ಣ ಜೀವಿಗಳು ಜಜ್ಜಿ ಒಜ್ಜಿಯಾಗುವವು. ಬಹಳವಾಗಿ ಹೇಳುವದೇನು? ಅವರ ಇರುವಿಕೆಯೇ ಜಗತ್ತಿಗೆ ಹಿಂಸೆಯಾಗಿರುವದು. ಅವರು ಜಗತ್ತಿನಲ್ಲಿರಬೇಕಾದರೆ ತಮ್ಮ ಇರುವಿಕೆಗಾಗಿಯಾದರೂ ಅವರು ಅಹಿಂಸಾವ್ರತದ ತೀವ್ರತೆಯನ್ನು ಅಷ್ಟಿಷ್ಟು ಇಳಿಸಲೇ ಬೇಕು. ಶಾಸ್ತ್ರಗಳು ಈ ಕೆಲಸವನ್ನು ಮಾಡಿರುತ್ತವೆ. ಆದರೆ ದಂಡೋಪಾಯವೂ ಒಂದುಪಾಯವೆಂದು ಅದನ್ನು ಒಮ್ಮೆಗೇ ಬಳಸಬಾರದು. ಅದು ನಾಲ್ಕನೆಯದೆಂಬದನ್ನು ಮಾತ್ರ ನೆನಪಿನಲ್ಲಿಡಬೇಕು. ಮೊದಲನೆಯ ಮೂರಾದ ಮೇಲೆಯೇ

ಅದರ ಫಲಾತು. ಮಹಾಭಾರತದ ಕಥೆಯನ್ನು ನೋಡಿರಿ. ದುರ್ಯೋಧನನಿಗೆ ಶ್ರೀಕೃಷ್ಣನು ಮೊದಲು ಧರ್ಮಸೂಕ್ಷ್ಮವನ್ನು ಹೇಳಿ ನೋಡಿದನು. ಅದು ನಾಟಲಿಲ್ಲ. ಆಮೇಲೆ ಬಹುಭಾಗದ ರಾಜ್ಯದ ಲಾಭವನ್ನು ತೋರಿಸಿ ಪಾಂಡವರಿಗೆ ಐದೂರನ್ನೋ ಕೊನೆಗೊಂದೇ ಒಂದೂರನ್ನೋ ಕೈಬಿಡ ಹೇಳಿದನು. ಅದೂ ಫಲಿಸಲಿಲ್ಲ. ಇನ್ನೂ ನೋಡಬೇಕೆಂದು ಭೀಷ್ಮ ದ್ರೋಣರಿಂದ ಹೇಳಿಸಿ ನೋಡಿದನು. ಅದರಿಂದಲೂ ಕೆಲಸವಾಗಲಿಲ್ಲ. ಆಮೇಲೆ ಯುದ್ಧವನ್ನು ಹೂಡಿ ದುರ್ಜನರೆಲ್ಲರ ಹುಟ್ಟಡಗಿಸಿಬಿಟ್ಟನು.

ವ್ಯವಹಾರದಲ್ಲಿ ತೊಡಗಿದವನು ಅಹಿಂಸಾವ್ರತವನ್ನು ಗಟ್ಟಿಯಾಗಿ ಹಿಡಿದರೆ ಎಷ್ಟು ಅನರ್ಥಕ್ಕೆ ಕಾರಣವಾಗುವದೆಂಬುದನ್ನು ಒಂದು ಕಥೆಯು ತಿಳಿಸುತ್ತದೆ. ಒಂದು ಕಾಡಿನಲ್ಲಿ ನಾರದರು ಹೋಗುತ್ತಿರುವಾಗ ಒಂದು ಹಾವು ಕಡಿಯುವದಕ್ಕೆ ಬಂತು. ಅವರು ಅದಕ್ಕೆ ಅಹಿಂಸಾವ್ರತವನ್ನು ಉಪದೇಶಮಾಡಿ ಪಾರಾಗಿ ಹೋದರು. ಆಮೇಲೆ ಅದು ಪೂರ್ಣಶಾಂತತೆಯನ್ನು ವಹಿಸಿತು. ಇದರ ಮರ್ಮವನ್ನರಿತ ದನಕಾಯುವವರು ಕೂಡ ಅದನ್ನು ಹೊಡೆದು ಬಡಿದು ಬೇಹಶನನಾಗಿ ಮಾಡಿದರು. ಅದು ಈ ಸ್ಥಿತಿಯಲ್ಲಿರುವಾಗ ನಾರದರು ಹಿಂದಿರುಗಿ ಅದೇ ದಾರಿಯಲ್ಲಿ ಬಂದು ನೋಡಿ ಕನಿಕರಪಟ್ಟು “ಹೇ, ಸರ್ಪರಾಜ, ನೀನು ಅಹಿಂಸಾವ್ರತದ ಮರ್ಮವನ್ನು ತಿಳಿದುಕೊಂಡಿದ್ದರೆ ಸುಲಭವಾಗಿ ಈ ಅನರ್ಥವನ್ನು ತಪ್ಪಿಸಿಕೊಳ್ಳಬಹುದಾಗಿತ್ತು. ಆದದ್ದಾಯಿತು. ಇನ್ನು ಮುಂದೆ ನೀನು ಕಡಿಯದಿದ್ದರೂ ನಿನ್ನ ಕಡೆಗೆ ಬಂದವರ ಮೇಲೆ ಬುಸ್ಸೆನ್ನುವದನ್ನಾದರೂ ಬಿಡಬೇಡ” ಎಂದು ಹೇಳಿದರು. ಆಮೇಲೆ ಅದು ಆ ರೀತಿಯಲ್ಲಿ ನಡೆಯುತ್ತಲೇ ಜನರು ಮತ್ತೆ ಹೆದರಿ ಅದರ ಗೋಜಿಗೆ ಬರುವದನ್ನು ಬಿಟ್ಟರು. ಹಾವು ಸುರಕ್ಷಿತವಾಗಿತ್ತು. ಹೀಗೆ ವ್ಯಾವಹಾರಿಕರು ಹಿಂಸೆಯನ್ನು ಸಾಕ್ಷಾತ್ತಾಗಿ ಮಾಡದಿದ್ದರೂ ದುಷ್ಟರನ್ನು ದೂರಮಾಡುವದಕ್ಕಾಗಿ ಅದರ ತೋರಿಕೆಯನ್ನಾದರೂ ಮಾಡಲೇ ಬೇಕಾಗುತ್ತದೆ.

ಹೀಗೆ ಮನಸ್ಸಿನಲ್ಲಿಲ್ಲದಿರುವ ಭಾವವನ್ನು ಹೊರಗೆ ತೋರಿಸುವದು ಒಂದುಬಗೆಯ ಕಪಟವೆನಿಸಬಹುದು. ವ್ಯವಹಾರದಲ್ಲಿ ಇಷ್ಟಾದರೂ ಕಪ್ಪು ಹತ್ತದೆ ಇರುವದಕ್ಕೆ ಆಗುವದೇ ಇಲ್ಲ. ಪ್ರಶ್ನೋಪನಿಷತ್ತಿನಲ್ಲಿ

"ತೇಷಾಮಸೌ ವಿರಜೋ ಬ್ರಹ್ಮಲೋಕೋ ನ ಯೇಷು ಜಿಹ್ಮಮನೃತಂ ನ ಮಾಯಾ ಚೇತಿ" ಎಂದಿದೆ. ಯಾರಲ್ಲಿ ಕುಟಿಲತೆಯೂ ಸುಳ್ಳು ಬರೀ ತೋರಿಕೆಯೂ ಇಲ್ಲವೋ ಅವರಿಗೆ ರಜೋಗುಣರಹಿತವಾದ ಬ್ರಹ್ಮಲೋಕವೆಂದು ಅದರ ತಾತ್ಪರ್ಯ. ಈ ವಾಕ್ಯಕ್ಕೆ ಅರ್ಥವನ್ನು ಬರೆಯುವಾಗ ಶ್ರೀಶಂಕರಾಚಾರ್ಯರು, ಮೇಲಿನ ಗುಣಗಳು ಗೃಹಸ್ಥರಲ್ಲಿ ಇರಲೇ ಬೇಕಾದ ನಿಮಿತ್ತವಿರುವದೆಂದು ಹೇಳಿ ಸಂನ್ಯಾಸಿಗಳಿಗೆ ಮೋಕ್ಷವೆಂಬ ತಮ್ಮ ಅರ್ಥವನ್ನು ಸಾಧಿಸಿದ್ದಾರೆ. ಇದರಿಂದ ತಿಳಿಯಬೇಕಾದ್ದೇನೆಂದರೆ ವ್ಯವಹಾರದಲ್ಲಿ ಈ ಗುಣಗಳು ಅಲ್ಪಪ್ರಮಾಣದಿಂದಾದರೂ ಇರಬೇಕಾಗುತ್ತವೆ. ಆದರೆ ಇವುಗಳಿಗೆಲ್ಲಾ ಶಾಸ್ತ್ರಕಾರರು ಸಮಯಗಳನ್ನು ಕಲ್ಪನೆ ಮಾಡಿದ್ದಾರೆ. ಅಷ್ಟರೊಳಗೇ ಇರುವದರಿಂದ ಅದು ಪಾಪದೊಳಗೆ ಎಣಿಕೆಯಾಗುವದಿಲ್ಲ.

ಮನುಷ್ಯನು ಉಸಿರಾಡುವದೇ ಇತರರಿಗೆ ಹಿಂಸೆಯೆಂದು ಹೇಳಿದ ಮೇಲೆ ನಿವೃತ್ತಿಧರ್ಮದವರಾದರೂ ಆ ಪಾಪಕ್ಕೆ ಹೇಗೆ ಹೊರಗಾಗುತ್ತಾರೆಂದರೆ ಹೇಳಬಹುದು. ಅವರು ಉಸಿರಾಡುವದನ್ನೇನೂ ನಿಲ್ಲಿಸುವದಿಲ್ಲ. ಆದರೆ ಉಸಿರಾಡುವದರಿಂದ ಆಗುವ ಹಿಂಸೆಯು ಪಾಪವಲ್ಲ. ಏಕೆಂದರೆ ಉಸಿರಾಡುವದೂ ಬಿಡುವದೂ ಮನುಷ್ಯನ ಕರ್ತೃತ್ವದೊಳಗಿಲ್ಲ. ಮನುಷ್ಯನು ಬದುಕಿರಬೇಕಾದರೆ ಉಸಿರಾಡಲೇ ಬೇಕೆಂದು ಸೃಷ್ಟಿನಿಯಮ. ಹೀಗೆ ಮನುಷ್ಯನು, ಅದಕ್ಕೆ ಕರ್ತೃವಲ್ಲದ್ದರಿಂದ, ಅದರ ದೋಷಕ್ಕೆ ಭಾಗಿಯಲ್ಲ. ಇರಲಿ; ನಿವೃತ್ತಿಧರ್ಮದವರು ತಮ್ಮ ದೇಹೇಂದ್ರಿಯಗಳಿಂದ ಹಿಂಸೆಯನ್ನು ಮಾಡದೆ ಇರುವ ಉದಾಹರಣೆಗಳು ಬೇಕಾದಷ್ಟಿವೆ. ಇದರಿಂದ ಎಷ್ಟೋ ಸಂದರ್ಭಗಳಲ್ಲಿ ಅವರಿಗೆ ಅನೇಕ ಬಗೆಯ ಹಾನಿಗಳಾಗಿರಬಹುದು. ಅಂಥ ಹಾನಿಗಳನ್ನು ತಡೆದುಕೊಂಡಾದರೂ ಅವರು ಅಹಿಂಸಾವ್ರತವನ್ನು ಪಾಲಿಸಿದ್ದಾರೆ. ಕೆಲಕೆಲವು ಸಂದರ್ಭಗಳಲ್ಲಿ ಅವರ ವ್ರತಪ್ರಭಾವವು ಅತ್ಯಂತವಿಲಕ್ಷಣವಾಗಿ ಕಂಡುಬಂದಿದೆ. ರಾಜನಾಗಿದ್ದ ವಿಶ್ವಾಮಿತ್ರನು ಸೇನೆಯೊಡನೆ ವಸಿಷ್ಠರ ಆಶ್ರಮಕ್ಕೆ ಬಂದು ಆತಿಥ್ಯವನ್ನು ಸ್ವೀಕರಿಸಿ ಆಮೇಲೆ ಆ ವಸಿಷ್ಠರ ಧೇನುವಿನ ಮೇಲೆ ಕಣ್ಣುಹಾಕಿ ಅದಕ್ಕಾಗಿ ಅವರ ಮೇಲೆ ಯುದ್ಧವನ್ನು ಹೂಡಿದ

ನಷ್ಟೆ. ಆಗ ವಸಿಷ್ಠರೇನು ಮಾಡಬೇಕು? ವಿಶ್ವಾಮಿತ್ರನನ್ನು ಪ್ರತಿಘಟಿಸುವದು ಅವರಿಗೆ ಅಸಾಧ್ಯವಾಗಿರಲಿಲ್ಲ. ಅವರ ಸ್ವಾಧೀನದಲ್ಲಿಯೂ ಬೇಕಾದಷ್ಟು ಮಂತ್ರತಂತ್ರಗಳಿದ್ದವು. ಆದರೆ ಅವರು ಆ ವಿಶ್ವಾಮಿತ್ರನದೊಂದು ಕೂದಲನ್ನೂ ಕೊಂಕುಗೊಡಲಿಲ್ಲ. ತಮ್ಮದೊಂದು ಬ್ರಹ್ಮದಂಡವನ್ನು ಮುಂದಿಟ್ಟುಕೊಂಡು ಅದರಿಂದ ತಮ್ಮ ಆತ್ಮರಕ್ಷಣೆಯನ್ನು ಮಾಡಿಕೊಂಡರು. ವಿಶ್ವಾಮಿತ್ರನು ಬಿಟ್ಟ ಬಾಣಗಳನ್ನೆಲ್ಲಾ ಆ ಬ್ರಹ್ಮದಂಡವು ತನ್ನ ಕಡೆಗೆ ಸೆಳೆದುಕೊಂಡು ಅವುಗಳನ್ನು ಕೂರುಮಾಡಿ ಬಿಸುಡುತ್ತಿತ್ತು. ಇದನ್ನು ನೋಡಿ ಬೆರಗಾದ ವಿಶ್ವಾಮಿತ್ರನು.

"ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋಬಲಂ ಬಲಮ್ ।
ಏಕೇನ ಬ್ರಹ್ಮದಂಡೇನ ಸರ್ವಾಸ್ತ್ರಾಣಿ ಹತಾನಿ ಮೇ ॥"

ಎಂದು ಹೇಳಿರುವನು. "ಕ್ಷತ್ರಿಯರ ಬಲಕ್ಕೆ ಧಿಕ್ಕಾರವಿರಲಿ; ಬ್ರಹ್ಮತೇಜಸ್ಸಿನ ಬಲವೇ ಬಲವು; ಒಂದೇ ಬ್ರಹ್ಮದಂಡವು ನನ್ನ ಸರ್ವಾಸ್ತ್ರಗಳನ್ನೂ ನುಂಗಿ ನೀರು ಕುಡಿಯಿತಲ್ಲ!" ಎಂದು ಅದರ ತಾತ್ಪರ್ಯ. ವಸಿಷ್ಠರಲ್ಲಿ ಅಂಥ ಬ್ರಹ್ಮತೇಜಸ್ಸಿತ್ತು. ಬ್ರಹ್ಮತೇಜಸ್ಸೆಂದರೆ ಬ್ರಾಹ್ಮಣಜನ್ಮದ ಪ್ರಭಾವವೆಂದು ತಿಳಿಯಬಾರದು. ಅದು ಬ್ರಹ್ಮಸ್ವರೂಪವನ್ನು ಮನಸ್ಸಿನಲ್ಲಿ ಧ್ಯಾನವನ್ನು ಮಾಡಿ ಮಾಡಿ ಪಡೆದ ತಪಃಫಲವು. ಇದರ ಬೆಂಬಲವಿರುವಾಗ ಅವರು ಹಿಂಸೆಮಾಡುವದಕ್ಕೆ ಏಕೆ ಪ್ರವೃತ್ತರಾದಾರು? ನಿವೃತ್ತಿಧರ್ಮದಲ್ಲಿರತಕ್ಕವರೆಲ್ಲರೂ ಈ ಫಲವನ್ನು ಪಡೆದಿರುತ್ತಾರೆ. ಅಥವಾ ಪಡೆಯುತ್ತಿರುತ್ತಾರೆ. ಅವರು ಹಿಂಸೆಗೆ ಮನಸ್ಸನ್ನು ನೀಡಿದರೆ ಅವರ ತಪಃಫಲವು ಕ್ಷಯವಾಗುತ್ತದೆ. ಪರಪೀಡೆಯನ್ನುಂಟುಮಾಡುವದರಿಂದ ಹಿಂಸೆಯು ಪಾಪಕರವು. ಆದ್ದರಿಂದಲೇ ಅದು ತಪಃಫಲವನ್ನು ಕಡಿಮೆ ಮಾಡುತ್ತದೆ. ಪ್ರಾಪಂಚಿಕರಿಗೆ ಇದು ತಪ್ಪಿದ್ದಲ್ಲವೆಂದು ಹೇಳಬೇಕಾಗುತ್ತದೆ. ಏಕೆಂದರೆ ಧರ್ಮರಾಯನು ಮಾಡಿದ್ದು ಧರ್ಮಯುದ್ಧವಾದರೂ ಅದು ಹಿಂಸಾತ್ಮಕವಾಗಿದ್ದದರಿಂದ ಅದರ ದೋಷವನ್ನು ಕಳೆದುಕೊಳ್ಳುವದಕ್ಕಾಗಿ ಅವನು ಅಶ್ವಮೇಧಯಾಗವನ್ನು ಮಾಡಿದನು. ನಿವೃತ್ತಿಧರ್ಮದವರಿಗೆ ವ್ಯವಹಾರದ ಕೋಟಲೆ ಇಲ್ಲವಾದ್ದರಿಂದ ಅವರು ಹಿಂಸೆಗೆ ಮನಸ್ಸನ್ನು ಹಾಕಬೇಕಾದ್ದೇ ಇಲ್ಲ.

ಅಹಿಂಸಾವ್ರತದಿಂದ ವಸಿಷ್ಠರಿಗೆ ಎಷ್ಟರ ಹಾಸಿಯಾಗಿದೆಯೆಂಬುದನ್ನು ಹೇಳತೀರದು. ಅವರಿಗೆ ನೂರುಮಂದಿ ಮಕ್ಕಳಿದ್ದರು. ತ್ರಿಶಂಕುರಾಜನು ಸಶರೀರನಾಗಿ ಸ್ವರ್ಗಕ್ಕೆ ಹೋಗುವ ಯಜ್ಞವನ್ನು ಮಾಡಿಸಿರೆಂದು ಬಂದಾಗ ವಸಿಷ್ಠರೂ ಅವರ ಮಕ್ಕಳೂ ಅವನ ಪ್ರಾರ್ಥನೆಯನ್ನು ತಿರಸ್ಕರಿಸಿದ್ದಲ್ಲದೆ ಅವನು ತೋರಿಸಿದ ಅವಿನಯಕ್ಕಾಗಿ ಅವನನ್ನು ಚಂಡಾಲನಾಗೆಂದು ಶಪಿಸಿದರು. ಕೊನೆಗೆ ವಿಶ್ವಾಮಿತ್ರನು ಆ ಯಜ್ಞವನ್ನು ಮಾಡಿಸುವದಕ್ಕೊಪ್ಪಿದನು. ಆ ಯಜ್ಞಕ್ಕೆ ಆಮಂತ್ರಣವು ಬಂದಾಗ ಕ್ಷತ್ರಿಯನು ಯಾಜಕನಾಗಿಯೂ ಚಂಡಾಲನು ದೀಕ್ಷಿತನಾಗಿಯೂ ನಡೆಯುವ ಯಜ್ಞಕ್ಕೆ ತಾವು ಬರುವದಿಲ್ಲವೆಂದು ವಸಿಷ್ಠಕುಮಾರರೆಲ್ಲರೂ ಆಪತ್ತಿತೋರಿಸಿದರು. ಇದರಿಂದ ಕ್ರುದ್ಧನಾದ ವಿಶ್ವಾಮಿತ್ರನು ಯಜ್ಞವನ್ನು ಮುಗಿಸಿದೊಡನೆಯೇ ಬಂದು ಆ ನೂರುಮಕ್ಕಳನ್ನು ನೆಲಕ್ಕುರುಳಿಸಿದನು. ಆದರೂ ವಸಿಷ್ಠರು ಕೈಮಾಡಲಿಲ್ಲ. ಅವರಿಗೆ ಸಾಮರ್ಥ್ಯವಿಲ್ಲದೆ ಇರಲಿಲ್ಲ; ಸಾಮರ್ಥ್ಯವಿಲ್ಲದೆ ಸಹಿಸುವದು ಹೇಡಿತನ. ವಸಿಷ್ಠರು ಹೇಡಿಗಳಲ್ಲ; ಸಾಮರ್ಥ್ಯವಿದ್ದು ಧರ್ಮಕ್ಕಾಗಿ ಸಹಿಸುವಂಥ ಮಹಾಪರಾಕ್ರಮಿಗಳು.

"ಸರ್ವಹಿಂಸಾನಿವೃತ್ತಾ ಯೇ ನರಾಃ ಸರ್ವಸಹಾಶ್ಚ ಯೇ ।
ಸರ್ವಸ್ಯಾಶ್ರಯಭೂತಾಶ್ಚ ತೇ ನರಾಃ ಸ್ವರ್ಗಗಾಮಿನಃ ॥"

ಎಂದು ವಾಕ್ಯವಿದೆ. ಎಲ್ಲಾ ಹಿಂಸೆಗಳನ್ನು ಬಿಟ್ಟು ಎಷ್ಟು ಕಷ್ಟವನ್ನಾದರೂ ಸಹಿಸುವವರು ಸ್ವರ್ಗಕ್ಕೆ ಹೋಗುತ್ತಾರೆಂದರ್ಥ. ಇಲ್ಲಿ ಸ್ವರ್ಗವೆಂದರೆ ಕೆಲವು ದಿವಸ ಸುಖವನ್ನನುಭವಿಸಿ ಬರುವದಕ್ಕಾಗಿ ಇರುವ ಒಂದು ಲೋಕವಲ್ಲ. ಏಕೆಂದರೆ ಸಮಯಾನುಸಾರವಾಗಿ ಹಿಂಸೆಯನ್ನು ಮಾಡುವದೂ ಧರ್ಮಕ್ಕೆ ಸಮ್ಮತವೇ ಆಗುವದರಿಂದ ಅವರು ಈ ಲೋಕಕ್ಕೆ ಹೋಗಿಯೇ ಹೋಗುತ್ತಾರೆ. ಯುದ್ಧದಲ್ಲಿ ಸತ್ತವರಿಗೆ ವೀರಸ್ವರ್ಗವೆಂದು ಪ್ರಸಿದ್ಧವಿದೆ. ಎಲ್ಲಾ ಹಿಂಸೆಗಳನ್ನು ಬಿಟ್ಟ ಮಹಾತ್ಮರಿಗೂ ಅದೇ ಸ್ವರ್ಗವಲ್ಲ; ಸ್ವರ್ಗಕ್ಕಿಂತ ಸಹಸ್ರಪಾಲು ಹೆಚ್ಚಾದ ಮೋಕ್ಷವೆಂದು ಅದಕ್ಕೆ ಅರ್ಥವನ್ನು ಕಲ್ಪಿಸಬೇಕು. ಸ್ವರ್ಗವೆಂಬ ಮಾತಿಗೆ ಒಂದು ಲೋಕವೆಂಬುದು ರೂಢಿಯ ಅರ್ಥವಾದರೂ ಶಾಸ್ತ್ರಕಾರರು ಅದನ್ನು ಮೋಕ್ಷವೆಂಬ ಅರ್ಥದಲ್ಲಿಯೂ ಉಪಯೋಗಿಸಿರುತ್ತಾರೆ. ಶಾಸ್ತ್ರ

ದಲ್ಲಿ ವಾಮದೇವನು ಸುಪ್ರಸಿದ್ಧಜೀವನ್ಮುಕ್ತನು. ಅವನ ವಿಚಾರವನ್ನು ಹೇಳುವಾಗ ಐತರೇಯೋಪನಿಷತ್ತು "ಸ್ವರ್ಗೇ ಲೋಕೇ ಸರ್ವಾನ್ಕಾಮಾನಾಪ್ತ್ವಾ ಸಮಭವತ್ಸಮಭವತ್" ಎಂದು ಹೇಳಿದೆ. ವಾಮದೇವನಂಥ ಜ್ಞಾನಿಯು ಸ್ವರ್ಗದಂಥ ಒಂದು ಸಾಮಾನ್ಯಪುಣ್ಯಲೋಕಕ್ಕೆ ಹೋಗುವದಸಂಭವನೆಂದು ತಿಳಿದು ಶ್ರೀಮಚ್ಛಂಕರಾಚಾರ್ಯರು ಅಲ್ಲಿ ಸ್ವರ್ಗಶಬ್ದಕ್ಕೆ ಮೋಕ್ಷಸ್ವರೂಪಪರವಾಗಿ ಅರ್ಥವನ್ನು ಮಾಡಿದ್ದಾರೆ. ಇದಲ್ಲದೆ ಕೇನೋಪನಿಷತ್ತಿನ ಕೊನೆಯಲ್ಲಿ ಜ್ಞಾನಿಯ ಪದವಿಯನ್ನು ಹೇಳುವಾಗ "ಸ್ವರ್ಗೇ ಲೋಕೇ ಜ್ಯೇಯೇ ಪ್ರತಿತಿಷ್ಠತಿ ಪ್ರತಿತಿಷ್ಠತಿ" ಎಂದು ಹೇಳಿದೆ. ಜ್ಞಾನಿಯ ಪದವಿಯು ಮೋಕ್ಷವೆಂದು ಸರ್ವವೇದಾಂತಗಳಲ್ಲಿಯೂ ಸುಪ್ರಸಿದ್ಧವಾಗಿದೆ. ಆ ಪದವಿಯನ್ನೇ ಈ ವಾಕ್ಯದಲ್ಲಿ ದೊಡ್ಡ ಸ್ವರ್ಗಲೋಕವೆಂದು ಕರೆದಿದೆ. ಆದ್ದರಿಂದ ಸ್ವರ್ಗಶಬ್ದಕ್ಕೆ ಮೋಕ್ಷವೆಂದು ಅರ್ಥವಾಗುತ್ತದೆ.

ಇನ್ನೊಂದು ದೃಷ್ಟಿಯಿಂದ ನೋಡಿದರೆ ನಿವೃತ್ತಿಪರರಾದವರ ಮೇಲೆ ಆತ್ಮರಕ್ಷಣೆಯ ಭಾರವು ಕೂಡ ಬೀಳುವಂತೆ ಕಾಣುವದಿಲ್ಲ. ಏಕೆಂದರೆ ಒಬ್ಬನು ಮೊದಮೊದಲು ಕಷ್ಟಗಳನ್ನು ಸಹಿಸಿ ಅಹಿಂಸಾವ್ರತವನ್ನು ಪಾಲಿಸುತ್ತ ಹೋದರೆ

"ಅಹಿಂಸಾಪ್ರತಿಷ್ಠಾಯಾಂ ತತ್ಸನ್ನಿಧೌ ವೈರತ್ಯಾಗಃ"

ಎಂಬ ಪಾತಂಜಲಸೂತ್ರದಂತೆ ಮುಂದೆ ಅವನ ಪ್ರಭಾವದಿಂದ ಇತರರ ಹಿಂಸಾಬುದ್ಧಿಯೇ ನಾಶವಾಗುವದು. ಈ ವಿಚಾರವು ಋಷ್ಯಾಶ್ರಮವರ್ಣನೆಯಲ್ಲಿ ಚೆನ್ನಾಗಿ ಅಭಿವ್ಯಕ್ತವಾಗುವದು. ಉದಾಹರಣೆಗಾಗಿ ಶ್ರೀಷಡಕ್ಷರಿಕವಿಯು ರಾಜಶೇಖರವಿಳಾಸದಲ್ಲಿ ಒಂದುಕಡೆ ಹೇಳಿರುವದೇನೆಂದರೆ —

"ಪಸಿವೈತಂದುಣ್ಬುದೂ ಪುಲ್ಲಿಯ ಮೊಲೆಯನಲ್ಲಿರ್ದ ಸಾರಂಗಶಾಬಂ ।
ದ್ವಿಶಿರಂ ತಾಯ್ವುಪ್ಪಿ ವಾಯ್ವಾಂಟಿಡೆಗೆ ಗುಟಿಕಸೋಲ್ದುಂಗುಂ ದಂತಿಪೋತ ॥
ಪ್ರಸರಕ್ಕಂಗಾಲ್ಗೊಳುತ್ತುಳ್ಳಿರಿದೊಡುಗುರ್ಗಳಿಂ ತೀಟುರ್ಗುಂ ಸಿಂಹವಾದಂ ।
ಬ್ಬಸವುಂ ಸರ್ಪಾರ್ಭಕಕ್ಕಾತಪದೆ ತೂಗಿಳ್ಕುಂ ಬರ್ಹದಿಂ ಬರ್ಹಿವೃಂದಂ ॥"

ಸಾರಂಗವು ಹುಲಿಯ ಮೊಲೆಗೆ ಬಾಯನ್ನು ಹಾಕುವದು, ಗಂಡ

ಘೇರುಂಡವು ಶರಭಕ್ಕೆ ಗಟಕವನ್ನು ಕೊಡುವದು, ಆನೆಗಳ ಕಾಲಲ್ಲಿ ಮುರಿದ ಮುಳ್ಳನ್ನು ಸಿಂಹವು ತನ್ನುಗುರುಗಳಿಂದ ತೆಗೆಯುವದು, ನವಿಲುಗಳು ತಮ್ಮ ರೆಕ್ಕೆಗಳಿಂದ [illegible] ಮರಿಗಳಿಗೆ ನೆರಳನ್ನು ಮಾಡುವವು--ಇವೆಲ್ಲಾ ಮನುಷ್ಯನ ಊಹೆಗೆ ಕೂಡ ನಿಲುಕದಂಥ ಮಾತುಗಳು! ಹೀಗೆಂದು ಇವುಗಳನ್ನು ಬರೀ ಕವಿಕಲ್ಪಿತವೆಂದು ಯಾರೂ ತಿಳಿಯಬಾರದು. ಈಗ ಒಣಕಲಾದ ಭೌತಿಕಜ್ಞಾನದ ಬಿರುಬಿಸಿಲ ಬೇಗೆಯಿಂದ ಹಿಂದುಸ್ಥಾನದ ನೆಲವೆಲ್ಲಾ ಕಾದು ಕರಿಯದಾಗಿದ್ದರೂ ಇನ್ನೂ ಪ್ರಯತ್ನ ಮಾಡಿ ಹುಡುಕಿ ನೋಡಿದರೆ ಧರ್ಮದ ತಂಪು ಇರುವ ಒಂದೊಂದು ಕಡೆ ನಿರ್ವೈರಬುದ್ಧಿಯ ಛಾಯೆಯಾದರೂ ಕಾಣಬಹುದು. ಹೀಗಾಗಿ ನಿವೃತ್ತಿಧರ್ಮದವರಿಂದ ಅಹಿಂಸಾವ್ರತವು ಪೂರ್ಣವಾಗುವದು.

ಇಲ್ಲಿ ರಾಜಯೋಗ ಮೊದಲಾದವುಗಳು ನಿವೃತ್ತಿಧರ್ಮದ ಕಡೆಗೆ ಒಲಿಸುವವುಗಳಾದ್ದರಿಂದ ಶುದ್ಧವಾದ ಅಹಿಂಸಾವ್ರತವನ್ನು ಪಾಲಿಸುವದಕ್ಕೇ ಸಾಧಕನು ಪ್ರಯತ್ನಿಸಬೇಕು. ಪ್ರವೃತ್ತಿಮಾರ್ಗದವರು ಉಪಾಯಾಂತರವಿಲ್ಲದೆ ಹಿಂಸೆಯಲ್ಲಿ ಪ್ರವರ್ತಿಸಿದರೂ ಅದು ಶಾಸ್ತ್ರದ ಕಟ್ಟಳೆಯ ಗೆರೆಯನ್ನು ಮೀರಿರಬಾರದು. ಅಹಿಂಸೆಯ ವಿಷಯದಲ್ಲಿ ವೀರಶೈವ ವಚನಶಾಸ್ತ್ರಕಾರರು ಹೇಳಿರುವದೇನೆಂದರೆ—

(೧) ದಯವಿಲ್ಲದ ಧರ್ಮ ದಾವುದಯ್ಯಾ? ದಯವೇ ಬೇಕು ಸಕಲ ಪ್ರಾಣಿಗಳಲ್ಲಿ. ದಯವೇ ಧರ್ಮದ ಮೂಲವಯ್ಯಾ. ಕೂಡಲ ಸಂಗಮದೇವರಂತಲ್ಲದೊಲ್ಲನಯ್ಯಾ.

(೨) ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ, ಹಲವು ಪ್ರಾಣಿಗಳ ಕೊಂದು ನಲಿನಲಿದಾಡುವ! ತನ್ನ ಮನೆಯಲೊಂದು ಶಿಶು ಸತ್ತರೆ, ಅದಕ್ಕೆ ಮರುಗುವಂತೆ ಅವಕೇಕೆ ಮರುಗನು? ಅಂತೆಂದೊಡೆ "ಸ್ವಾಮಿನಃ ಮಿವೇತರಸ್ಯೈವ ದೃಷ್ಟ್ವಾ ನಿತ್ಯಾದಿ ಭಿನ್ನತೆ ॥ ಸರ್ವಂ ಜಪ್ಯೋಽಹಮೇವೇತಿ ಯಃ ಪಶ್ಯತಿ ಸ ಪಶ್ಯತಿ" ಎಂದುದಾಗಿ ಜಾಲಗಾರನ ದುಃಖ ಜಗಕ್ಕೆಲ್ಲ ನಗೆಗೆಡೆ. ಇದು ಕಾರಣ ಚೆನ್ನಮಲ್ಲಿಕಾರ್ಜುನಯ್ಯನ ಭಕ್ತನಾಗಿದ್ದು ಜೀವಹಿಂಸೆಯ ಮಾಡುವ ಮಾದಿಗರನೇನೆಂಬೆನಯ್ಯಾ.

ಯಮದ ಎರಡನೆಯ ವಿಷಯ ಸತ್ಯ. ಹಿಂಸೆಯ ಕಲ್ಪನೆಯನ್ನೇ ತೆಗೆದುಹಾಕುವದು ಹೇಗೆಂಬೋ ಹಾಗೆ ಅನೃತದ ಕಲ್ಪನೆಯನ್ನೇ ತೆಗೆದು

ಹಾಕುವದು ಸತ್ಯ. ನಮ್ಮಲ್ಲಿ ಸತ್ಯಕ್ಕಾಗಿ ಹೆಸರುಗೊಂಡವನು ಹರಿಶ್ಚಂದ್ರ. ಸತ್ಯವ್ರತವನ್ನು ಹಿಡಿದವರು ಅನೇಕರಿರಬಹುದು. ಸತ್ಯದ ಆದರ್ಶ ಸ್ವರೂಪವನ್ನು ಸಾಧಿಸಿದವನು ಹರಿಶ್ಚಂದ್ರ. ಸತ್ಯತೆಯ ಸಾಧನದಿಂದಲೇ ಅವನು ತನ್ನ ಕೀರ್ತಿಶರೀರವನ್ನು ಅಜರಾಮರವಾಗಿ ಮಾಡಿರುವನು. ತುದಿನಾಲಿಗೆಯಿಂದ ಜಾರಿಬಿದ್ದ ಮಾತನ್ನು ಕೂಡ ಅರ್ಥವತ್ತಾಗಿ ಮಾಡಬೇಕೆಂದು ಅವನು ತನ್ನ ತನುಮನಧನಗಳನ್ನು ಸೂರೆಗೊಟ್ಟನು. ವಿಶ್ವಾಮಿತ್ರನು ತನ್ನ ಮಾಯೆಯಿಂದ ಸೃಷ್ಟಿಮಾಡಿದ ಚಂಡಾಲಸ್ತ್ರೀಯರನ್ನು ಮದುವೆಯಾಗೆಂದು ಹೇಳಿದಾಗ ಹರಿಶ್ಚಂದ್ರನು "ತಾನು ರಾಜ್ಯವನ್ನಾದರೂ ಬಿಟ್ಟೇನು; ಧರ್ಮವನ್ನು ಬಿಡಲಾರೆನು" ಎಂದು ಹೇಳಿದನು. ಈ ಮಾತಿಗೆ ಧರ್ಮವನ್ನು ಬಿಡಲಾರೆನೆಂಬುದು ತಾತ್ಪರ್ಯವೇ ಹೊರತು ರಾಜ್ಯವನ್ನು ಬಿಡುವೆನೆಂದು ತಾತ್ಪರ್ಯವಲ್ಲ. ಹೀಗಿದ್ದರೂ ವಿಶ್ವಾಮಿತ್ರನು ರಾಜ್ಯವನ್ನು ಬಿಡೆಂದು ಗಂಟುಬಿದ್ದನು. ಒಮ್ಮೆ ಮಾತುಬಂದು ಬಿಟ್ಟಿದ್ದರಿಂದ ಹರಿಶ್ಚಂದ್ರನು ಅದನ್ನೇ ಸತ್ಯವಾಗಿ ಮಾಡಬೇಕೆಂದು ಅದಕ್ಕಾಗಿ ರಾಜ್ಯವನ್ನೇ ಬಿಟ್ಟುಕೊಟ್ಟನು. ಅದಕ್ಕಾಗಿಯೇ ದೇಶಾಂತರವಾಸಕ್ಕೆ ಹೊರಬಿದ್ದನು. ಅದರ ಸಂಬಂಧದಲ್ಲಿಯೇ ತಾನು ಹೊಲೆಯನಿಗೆ ಆಳಾದನು. ಅದರ ಪರಿಣಾಮವಾಗಿಯೇ ತನ್ನ ಹೆಂಡತಿಯ ತಲೆಯನ್ನು ಹೊಡೆಯುವದಕ್ಕೂ ಹಿಂದುಮುಂದು ನೋಡಲಿಲ್ಲ.

ಅಹಿಂಸೆಯ ವ್ರತವು ಹೇಗೆ ಕಠಿನಸಾಧ್ಯವೋ ಸತ್ಯದ ವ್ರತವೂ ಹಾಗೆಯೇ ಕಠಿನಸಾಧ್ಯ. ಪ್ರವೃತ್ತಿಮಾರ್ಗದವರು ಇದರ ಪರಮಾವಧಿಯನ್ನು ಅನುವರ್ತಿಸಲಾರರೆಂದು ಅಹಿಂಸೆಯ ವಿಚಾರದಲ್ಲಿ ಹೇಗೋ ಹಾಗೆ ಸತ್ಯದ ವಿಚಾರದಲ್ಲಿಯೂ ಶಾಸ್ತ್ರಕಾರರು ಕೆಲವು ವ್ಯವಸ್ಥೆಗಳನ್ನು ಮಾಡಿದ್ದಾರೆ. ಕೆಲಕೆಲವು ಸಂದರ್ಭಗಳಲ್ಲಿ ಸತ್ಯದ ವೇಗವನ್ನು ಸ್ವಲ್ಪ ಮಟ್ಟಿಗೆ ಇಳಿಸಿದ್ದಾರೆ. ಸಾಮಾನ್ಯವಾಗಿ ಕೂಡ ಪ್ರವೃತ್ತಿಮಾರ್ಗದವರಿಗೆ ಸತ್ಯದ ವ್ಯವಸ್ಥೆಯಲ್ಲಿ ವಿಶೇಷವಿದೆ.

"ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾನ್ನ ಬ್ರೂಯಾತ್ಸತ್ಯಮಪ್ರಿಯಮ್ ।
ಪ್ರಿಯಂ ಚ ನಾನೃತಂ ಬ್ರೂಯಾತ್ಸೂಕ್ಷ್ಮಾ ಧರ್ಮಗತಿಃ ಪರಾ ॥"

ಎಂದು ಮಹಾಭಾರತದಲ್ಲಿದೆ. "ಸತ್ಯವನ್ನು ಹೇಳಬೇಕು ಮತ್ತು ಹಿತವನ್ನು

ಹೇಳಬೇಕು; ಹಿತಕರವಲ್ಲದ ಸತ್ಯವನ್ನು ಹೇಳಬಾರದು. ಹಿತಕರವಾದ ಅಸತ್ಯವನ್ನೂ ಹೇಳಬಾರದು. ಇದೇ ಉತ್ಕೃಷ್ಟವಾದ ಧರ್ಮಸೂಕ್ಷ್ಮ" ಎಂದು ಅದರ ತಾತ್ಪರ್ಯ. ಆ ಧರ್ಮಸೂಕ್ಷ್ಮಗಳನ್ನೆಲ್ಲಾ ವಿಚಾರಮಾಡುವದಕ್ಕೆ ಇದು ಸ್ಥಲವಲ್ಲ. ಏಕೆಂದರೆ ಇದು ನಿವೃತ್ತಿಮಾರ್ಗದ ಬಳಿಸಿದ ಪ್ರಕರಣ. ಇಲ್ಲಿ ಅವಸ್ಥ್ಯನುಷ್ಟಿಗೆ ಸತ್ಯದ ಆದರ್ಶಸ್ವರೂಪವನ್ನು ಅನುಕರಣ ಮಾಡುವದರ ಕಡೆಗೇ ಲಕ್ಷ್ಯವನ್ನು ಎಳೆಯಬೇಕಾಗಿದೆ. ಸತ್ಯದ ನುಡಿಗೆ ಆವಾಸಸ್ಥಾನವಾದ ನಾಲಿಗೆಯು ಶರೀರದಲ್ಲಿ ಬಹು ಮಹತ್ತ್ವದ ಅಂಗವಾಗಿದೆ. " ಕುಲವನ್ನು ನಾಲಿಗೆಯು ಹೇಳುತ್ತದೆ " ಎಂದು ಒಂದು ಗಾದೆಯಿದೆ. ಇದರಿಂದ ನಾಲಿಗೆಯು ಮನುಷ್ಯನ ಗುಣವನ್ನು ಪ್ರಕಟಮಾಡತಕ್ಕಂಥ ಅವಯವವೆಂದು ಸ್ಪಷ್ಟವಾಗುತ್ತದೆ. ವೈದ್ಯರು ರೋಗಿಯ ನಾಲಿಗೆಯನ್ನು ನೋಡಿ ದೇಹಸ್ಥಿತಿಯನ್ನು ನಿರ್ಣಯಿಸುತ್ತಾರೆ. ಸತ್ಯವೇ ಉತ್ತಮವರ್ಣದ ಲಕ್ಷಣ. ಸತ್ಯಕಾಮನೆಂಬ ಬಾಲನು ಉಪನಯನಾರ್ಥವಾಗಿ ಋಷಿಗಳ ಬಳಿಗೆ ಹೋದಾಗ ತನ್ನ ತಾಯಿಗೆ ಗೋತ್ರವು ಗೊತ್ತಿಲ್ಲವೆಂದು ನಿಜವನ್ನು ಹೇಳುತ್ತಲೇ ಅವನು ಬ್ರಾಹ್ಮಣನಾಗಿರಬೇಕೆಂದು ನಿಶ್ಚಯಿಸಿ ಆ ಋಷಿಗಳು ಅವನಿಗೆ ತಕ್ಕ ಸಂಸ್ಕಾರವನ್ನು ಮಾಡಿ ಕಳುಹಿಸಿದರೆಂದು ಉಪನಿಷತ್ತಿನಲ್ಲಿ ಹೇಳಿದೆ.

"ಅಶ್ವಮೇಧಸಹಸ್ರಂ ಚ ಸತ್ಯಂ ಚ ತುಲಯಾ ಧೃತಮ್ ।
ಅಶ್ವಮೇಧಸಹಸ್ರಾದ್ಧಿ ಸತ್ಯಮೇವ ವಿಶಿಷ್ಯತೇ ॥"

ಎಂದು ಮಹಾಭಾರತದಲ್ಲಿದೆ. ಸಾವಿರ ಅಶ್ವಮೇಧಗಳನ್ನೂ ಸತ್ಯವನ್ನೂ ತಕ್ಕಡಿಯಲ್ಲಿಟ್ಟು ತೂಗಿದರೆ ಸಾವಿರ ಅಶ್ವಮೇಧಗಳಿಗಿಂತ ಸತ್ಯವೇ ಹೆಚ್ಚಿನದಾಗುವದೆಂದು ಅದರ ಅರ್ಥ. ಧರ್ಮರಾಯನು ಮಹಾಭಾರತ ಯುದ್ಧದಲ್ಲಿ ದ್ರೋಣಾಚಾರ್ಯರನ್ನು ಗೆಲ್ಲುವದಕ್ಕಾಗಿ ಅಶ್ವತ್ಥಾಮನೆಂಬ ಆನೆಯು ಸತ್ತಿತೆಂದು ತೊದಲುತ್ತ ಕೂಗಿದನು. ಅದು, ಅಶ್ವತ್ಥಾಮನು ಸತ್ತನೆಂದು ದ್ರೋಣಾಚಾರ್ಯರಿಗೆ ಕೇಳಿಸಿತು. ಮಗನು ಸತ್ತನೆಂದು ದ್ರೋಣಾಚಾರ್ಯರು ಯೋಗಶಕ್ತಿಯಿಂದ ಸ್ಥೂಲಶರೀರವನ್ನು ರಥದಲ್ಲಿ ಬಿಟ್ಟು ಸೂಕ್ಷ್ಮಶರೀರದಿಂದ ಹೊರಬಿದ್ದು ಮಗನೆಡೆಗೆ ತೆರಳಿದರು. ಈ ಸಮಯವನ್ನು ಕಾದಿದ್ದ ಧೃಷ್ಟದ್ಯುಮ್ನನೆಂಬುವನು ಬಂದು ದ್ರೋಣಾ

ಚಾರ್ಯರ ತಲೆಯನ್ನು ಕತ್ತರಿಸಿ ಮತ್ತೆ ಅವನು ಅದರೊಳಕ್ಕೆ ಬಂದು ಸೇರಿಕೊಳ್ಳುವಂತೆ ಮಾಡಿದನು. ಈ ಉಪಾಯವನ್ನು ಮಾಡದೆ ದ್ರೋಣಾರನ್ನು ಯುದ್ಧರಂಗದಿಂದ ಹಿಮ್ಮೆಟ್ಟಿಸುವುದಕ್ಕೆ ಆಗುತ್ತಲೇ ಇರಲಿಲ್ಲವೆಂಬ ಮಾತನ್ನು ಒಪ್ಪಿಕೊಳ್ಳಬೇಕು. ದ್ರೋಣರು ಹಿಮ್ಮೆಟ್ಟದಿದ್ದರೆ ಕೌರವನ ಪಕ್ಷಕ್ಕೆ ಅಪಜಯವೇ ಆಗುತ್ತಿರಲಿಲ್ಲವೆಂಬುದೂ ಸಯುಕ್ತಿಕವೆ. ಕೌರವರನ್ನು ಧ್ವಂಸಮಾಡುವದು ಅವಶ್ಯಕವಾಗಿತ್ತೆಂಬುದೂ ಯೋಗ್ಯವೆ. ಆದರೂ ಧರ್ಮದೃಷ್ಟಿಯಿಂದ ಸಮ್ಮತವಾದ ಉಪಾಯದಲ್ಲಿ ಅದರ ಅಂಗವಾಗಿ ನಡೆಸಿದ ಯುಕ್ತಿಯು ಯೋಗ್ಯವಾಗಲಿಲ್ಲ. ಅಶ್ವತ್ಥಾಮನೆಂಬ ಆನೆಯು ಸತ್ತಿತೆಂದು ಕೂಗುವಾಗ ಅಶ್ವತ್ಥಾಮನು ಸತ್ತನೆಂಬ ಸುಳ್ಳುಸುದ್ದಿಯನ್ನು ಹರಡುವದೇ ಉದ್ದೇಶವಾಗಿತ್ತೆಂಬುದು ನಿರ್ವಿವಾದವಾದಮಾತು. ಈ ಸುಳ್ಳಿನ ಫಲವು ಧರ್ಮರಾಯನಮಟ್ಟಿಗೆ ಬೀಳದೆ ಹೋಗಲಿಲ್ಲ. ಅದರ ಫಲವಾಗಿ ಧರ್ಮರಾಯನು ನರಕವನ್ನು ಕಾಣಬೇಕಾಗಿ ಬಂತು. ಆದ್ದರಿಂದ ಸತ್ಯವನ್ನು ಸಮಸ್ತರು ಏಕವಾಕ್ಯದಿಂದ ಹೊಗಳುತ್ತಾರೆ. ಶಂಕರದಾಸಿಮಯ್ಯನ ಚರಿತ್ರೆಯಲ್ಲಿ ಬರೆದಿರುವದೇನೆಂದರೆ—

“ ನುಡಿಸ್ಯಂದದ್ರಿಧರ್ಮವರ ।
ರಳಿದುದಿಲ್ಲವೆ? ಅವರ ಕೀರ್ತಿಗ ।
ಳಳಿದುವೇ? ಲೋಕಕಾವ್ಯಗಳಾಗಿ ಬರುತಿದರೆ? ॥
ಅಳಿವುದೊಡಲಪಕೀರ್ತಿಕೀರ್ತಿಗ ।
ಳುಳಿವುವದುಕಾರಣದೆ ಮನುಜಗ ।
ದೊಳಗೆ ಸತ್ಯವ ಬಿಟ್ಟು ಬದುಕುವ ಮನುಜ ನಡವೇನು ॥ ”

ಸತ್ಯದ ಪ್ರಭಾವವನ್ನು ಹೇಳುವಾಗ ಶ್ರೀಪತಂಜಲಿಮಹರ್ಷಿಗಳು

“ ಸತ್ಯಪ್ರತಿಷ್ಠಾಯಾಂ ಕ್ರಿಯಾಫಲಾಶ್ರಯತ್ವಮ್ ”

ಎಂದು ಸೂತ್ರವನ್ನು ಮಾಡಿದ್ದಾರೆ. “ ಸತ್ಯವು ದೃಢವಾದರೆ ಕ್ರಿಯೆಗಳಿಲ್ಲದೆ ಕ್ರಿಯಾಫಲವನ್ನು ಪಡೆಯುವ ಶಕ್ತಿಯುಂಟಾಗುವದೆಂದರ್ಥ. ” ಇದನ್ನು ವಿವರಿಸುವಾಗ ಶ್ರೀಸ್ವಾಮಿವಿವೇಕಾನಂದರು “ ಈ ಸತ್ಯವೆಂಬ ಶಕ್ತಿಯು ದೃಢವಾದರೆ ಕನಸಿನಲ್ಲಿಯೂ ಸುಳ್ಳು ಹೇಳುವದಿಲ್ಲ; ಮನಸ್ಸಿನಲ್ಲಿಯೂ ಮಾತಿನಲ್ಲಿಯೂ ಕೆಲಸದಲ್ಲಿಯೂ ಸತ್ಯವಂತರಾಗಿಯೇ ಇರು

ತ್ತೇವೆ. ನಾವು ಹೇಳಿದುದೇ ಸತ್ಯವಾಗುವದು. ಸುಖಿಯಾಗಿರೆಂದು ಒಬ್ಬನಿಗೆ ಹೇಳಿದರೆ ಅವನು ಸುಖಿಯಾಗುವನು. ಒಬ್ಬನು ರೋಗಿಯಾದರೆ ವಾಸಿಯಾಗಲಿ ಎಂದರೆ ಕೂಡಲೇ ಅವನಿಗೆ ವಾಸಿಯಾಗುವದು.” ಎಂದು ಹೇಳಿದ್ದಾರೆ. ಸತ್ಯದ ವಿಷಯದಲ್ಲಿ ವೀರಶೈವಮತಶಾಸ್ತ್ರಕಾರರು ಹೇಳಿರುವದೇನೆಂದರೆ —

(೧)ದೇವಲೋಕಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ. ಸತ್ಯವ ನುಡಿವುದೇ ದೇವಲೋಕ. ಅಸತ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ. ಅನಾಚಾರವೇ ನರಕ. ಇದಕ್ಕೆ ನೀವೇ ಪ್ರಮಾಣು ಕೂಡಲಸಂಗಮದೇವಾ.

(೨)ಸಟೆದಿಟವೆಂಬುದನರಿಯದು ನಡೆವುದೀ ಲೋಕವೆಲ್ಲವು. ಸಟೆದಿಟವೆಂಬುವೆರಡುಳಿದು ನಡೆವ ಲೋಕದೊಡನೆ ಬಾರೆನು. ಗುರುಲಿಂಗಜಂಗಮದಲ್ಲಿ ಸಟೆಯ ಬಳಸಿದರೆ ಆತನು ತ್ರಿವಿಧಕ್ಕೆ ದ್ರೋಹಿ, ಅಘೋರನರಕಿ, ಉಂಬುದೆಲ್ಲ ಕಿಲ್ಬಿಷ, ತಿಂಬುದೆಲ್ಲ ಅಶುದ್ಧ, ಕುಡಿವುದೆಲ್ಲ ಸುರೆ, ಮುಟ್ಟುವುದು ಹೊಲೆ. ಶಿವಭಕ್ತರಿಗೆ ಹುಸಿಯೆಂಬುದು ಏಕೇ ಅಯ್ಯಾ? ಹುಸಿಯನುಡಿದು ಲಿಂಗವ ಪೂಜಿಸಿದರೆ ಹೊಳ್ಳ ಬಿತ್ತಿ ಫಲವನರಸುವಂತೆ ಕಾಣಾ ಚೆನ್ನಮಲ್ಲಿಕಾರ್ಜುನಾ.

ಯಮದಲ್ಲಿ ಮೂರನೇದು ಅಸ್ತೇಯ. ಅಸ್ತೇಯವೆಂದರೆ ಕದಿಯದಿರುವದು. ಮನುಷ್ಯನು ತನ್ನ ಇಷ್ಟಪ್ರಾಪ್ತಿಯನ್ನು ಮಾಡಿಕೊಳ್ಳುವದಕ್ಕಾಗಿ ನೆರೆಹೊರೆಯವರ ವಸ್ತುವನ್ನು ಎತ್ತಿಹಾಕಲೆಳಸುವನು. ಇಂಥ ಕ್ಷುದ್ರವಾದ ಯೋಚನೆಯನ್ನು ತಂದುಕೊಳ್ಳುತ್ತಲೇ ಮನಸ್ಸಿನ ವೀರ್ಯವೆಲ್ಲಾ ನಷ್ಟವಾಗುವದು. ಆದ್ದರಿಂದ ವಿವೇಕಿಗಳು ಇದಕ್ಕೆ ಎಡೆಗೊಡಬಾರದು. ನಮ್ಮ ಪ್ರಾಚೀನರು ಈ ವಿಚಾರದಲ್ಲಿ ಎಷ್ಟು ಎಚ್ಚರಿಕೆಯಿಂದಿದ್ದರೆಂಬುದಕ್ಕೆ ಭಾರತದಲ್ಲಿ ಒಂದು ಕಥೆಯಿದೆ. ಶಂಖಲಿಖಿತರೆಂಬಿಬ್ಬರು ಅಣ್ಣತಮ್ಮಂದಿರಿದ್ದರು. ತಮ್ಮನಾದ ಲಿಖಿತನು ಅಣ್ಣನಾದ ಶಂಖನ ಅಪ್ಪಣೆಯಿಲ್ಲದೆ ಅವನ ತೋಟದ ಒಂದು ಹಣ್ಣನ್ನು ತಿಂದನು. ಈಗಿನ ಕಾಲದ ವ್ಯವಹಾರದ ದೃಷ್ಟಿಯಿಂದ ನೋಡಿದರೆ ಇದೇನೂ ಬಹುದೊಡ್ಡ ಅಪರಾಧವೇನೂ ಅಲ್ಲ. ಅವರಿಬ್ಬರೂ ಅಣ್ಣತಮ್ಮಂದಿರಾದ್ದರಿಂದ ಒಬ್ಬರ ಗಂಟಿಗೊಬ್ಬರು ಭಾಗಿಗಳೇ ಆಗಿದ್ದರು. ಆದರೆ ಯಜಮಾನನ ಅಪ್ಪಣೆಯನ್ನು ಪಡೆಯದೆ ಇದ್ದದ್ದು ಇಲ್ಲಿ ತಪ್ಪಾಗಿತ್ತು. ಆಗಿನ ಜನರ ಮನಸಿ

ನಲ್ಲಿ ಪಾಪಭೀತಿ ವಿಶೇಷವಾಗಿದ್ದುದರಿಂದ ಲಿಖಿತನಿಗೆ ಸ್ವಲ್ಪ ಹೊತ್ತಿನಲ್ಲಿಯೇ ತನ್ನಲ್ಲಿತನಗೇ ಪಶ್ಚಾತ್ತಾಪವಾಯಿತು. ಅವನು ಬಹಳ ಸರಳಮನಸ್ಸಿನವನಾಗಿದ್ದನು. ಆದ್ದರಿಂದ ಅಣ್ಣನು ಮನೆಗೆ ಬರುತ್ತಲೇ ತನ್ನ ದೋಷವನ್ನು ತಾನೇ ಬಿಚ್ಚಿ ಹೇಳಿದನು. ಶಂಖನು ಲಿಖಿತನಿಗೆ ತಕ್ಕ ಅಣ್ಣನು. ಪ್ರಾಯಶ್ಚಿತ್ತವಿಲ್ಲದ ಪಾಪವು ಪರಿಹಾರವಾಗಲಾರದೆಂದು ಹೇಳಿ ತಾನೇ ಶಿಕ್ಷೆಯನ್ನು ತೆಗೆದುಕೊಳ್ಳುವಂತೆ ಶಂಖನು ತಮ್ಮನಿಗೆ ಹೇಳಿದನು. ಆಗ ಲಿಖಿತನು ತಾನೇ ತನ್ನ ಕೈಯನ್ನು ಶಿಕ್ಷಾರೂಪವಾಗಿ ಕತ್ತರಿಸಿಕೊಂಡನು. ಈಗ ಇಂಥ ತಪ್ಪುಗಳು ನಮಗೆ ತಪ್ಪಾಗಿಯೇ ಕಾಣದೆ ಇರಬಹುದು. ಬಿಳಿಯ ಗೋಡೆಯ ಮೇಲಿನ ಕರಿ ಚುಕ್ಕೆಯು ಎದ್ದು ಕಾಣುವದು. ಕಪ್ಪು ಬಳಿದ ಗೋಡೆಯ ಮೇಲಿನ ಕರೀಚುಕ್ಕೆಯು ಹೇಗೆ ಕಂಡೀತು?

ಅಸ್ತೇಯದ ಪ್ರಭಾವವನ್ನು ಹೇಳುವಾಗ ಶ್ರೀಪತಂಜಲಿಮಹರ್ಷಿಗಳು

"ಅಸ್ತೇಯಪ್ರತಿಷ್ಠಾಯಾಂ ಸರ್ವರತ್ನೋಪಸ್ಥಾನಮ್"

ಎಂದು ಸೂತ್ರವನ್ನು ಮಾಡಿದ್ದಾರೆ. ಕದಿಯದಿರುವದನ್ನು ಸಂಪೂರ್ಣವಾಗಿ ಬಿಟ್ಟರೆ ಯೋಗಿಗೆ ಎಲ್ಲಾ ಐಶ್ವರ್ಯವೂ ಬರುವದೆಂದು ಇದರ ಅರ್ಥ. ಐಶ್ವರ್ಯದ ಮೇಲಿನ ದುರಾಶೆಯಿಂದ ನಾವು ಕಂಡ ಕಂಡ ಕಡೆ ಅದಕ್ಕೆ ಕೈಹಾಕುತ್ತ ಹೋದರೆ ಅದು ಮತ್ತಷ್ಟು ದೂರದೂರಕ್ಕೆ ಹೋಗುವದು. ಅದರ ಕಡೆಗೆ ನಾವು ಬೆನ್ನುತಿರುಗಿಸಿಹೊರಟರೆ ಅದಾಗಿಯೇ ನಮ್ಮ ಬೆನ್ನುಹತ್ತಿಬಂದು ನಮಗೆ ದಾಸನಾಗುವದು. ಅಸ್ತೇಯದ ವಿಷಯದಲ್ಲಿ ಸೋಮೇಶ್ವರಕವಿಯು ಹೇಳಿರುವದೇನೆಂದರೆ—

"ಸುಳಿದಾ ಪೂಷ್ಟುಗವಿಯೊಳ್ ಸೀತೆಯು ಬಿಳಿ ಕೊಂಡೊಯ್ದು ತಾಂ ಬಾಳ್ವನೇ? |
ಇಳಿದಂಭೋಧಿಯ ಬಾಳ್ವನೇ? ತಮನಸಂದಾವಸ್ತುಯಂ ಕದ್ದು ತಾಂ ||
ತಲೆಯಂ ಕಟ್ಟರೆ? ಕಂಬವಾಳಮರದೋಳ್ ಪ್ರೀಕಾರಿಬ್ಬನು |
ಕಳವೇಂ ಕೊಲ್ಲದೆ ಕಾಯ್ವುದೇ? ಹರಹರಾ ಶ್ರೀಚೆನ್ನಸೋಮೇಶ್ವರಾ ||

ಇದೇ ವಿಷಯದಲ್ಲಿ ವೀರಶೈವನೀತಿಶಾಸ್ತ್ರಕಾರರ ಉಪದೇಶವೇನೆಂದರೆ—

(೧) ಬೀದಿಯಲ್ಲಿ ಹೊಸ ವಸ್ತ್ರ ಬಿದ್ದಿದ್ದರೆ ನಾನು ಕೈಮುಟ್ಟಿ ಎತ್ತಿದೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಅದೇನು ಕಾರಣವೆಂದರೆ, ನೀವಿಕ್ಕಿದ ಭಿಕ್ಷೆಯಲ್ಲಿಪ್ಪೆನಾಗಿ ಇಂತಲ್ಲದೆ ನಾನು ಅಳಿಮನವ ಮಾಡಿ ಪರದ್ರವ್ಯಕ್ಕೆ ಆಸೆಮಾಡಿದೆನಾದರೆ ನೀನಾಗಲೇ ಎನ್ನ ನರಕದಲ್ಲದ್ದಿ ನೀನದ್ದು ಹೋಗು ಶಂಭುಜಕ್ಕೇಶ್ವರಾ.

(೨) ಕೊರೆಯು ಬಿಡಾವಣ್ಣಗಳಿರಾ, ಕೊರೆಯುರೋ ಸಾಧನವ! ಪರದ್ರವ್ಯವ ಬಿಡದೆ ಹೋಗಿ ಕೋರೆಯಲ್ಲಿ, ಆ ಕೊರೆ ಎಲ್ಲಾ ಒರುದೊರೆ ಕಂಡಿಯಾ! ಕಳವ ತೊರೆದು ಬಂದರೆ ಒಲಿದು ಕೂಡಿಕೊಂಬ ನಮ್ಮ ಕೂಡಲಸಂಗಮದೇವಾ.

ಯಮದ ನಾಲ್ಕನೆಯ ಅಂಗವು ಬ್ರಹ್ಮಚರ್ಯ. ಬ್ರಹ್ಮಚರ್ಯವೆಂದರೆ ಸ್ತ್ರೀಪುರುಷರ ಸಂಯೋಗವಿಲ್ಲದಿರುವದು. ಗೃಹಸ್ಥರಿಗೆ ಧರ್ಮಪತ್ನಿಯಲ್ಲಿ ಸಂಯೋಗವನ್ನು ಶಾಸ್ತ್ರಕಾರರು ಸಮ್ಮತಿಸಿದ್ದರೂ ಅದು ಅವರ ಮನೋದೌರ್ಬಲ್ಯಕ್ಕೆ ತಕ್ಕ ಒಂದು ವ್ಯವಸ್ಥೆಯು ಮಾತ್ರ ಹೊರತು ಅದಕ್ಕೆ ಉತ್ತೇಜನವನ್ನು ಕೊಡುವದು ಶಾಸ್ತ್ರಕ್ಕೆ ಸಮ್ಮತವಲ್ಲ. ಈ ಅಭಿಪ್ರಾಯವನ್ನು ಸ್ಪಷ್ಟಮಾಡುವದಕ್ಕೆ ಭಾಗವತದಲ್ಲಿ ಒಂದು ಶ್ಲೋಕವಿದೆ. ಅದೇನೆಂದರೆ-

"ಲೋಕೇ ವ್ಯವಾಯಾಮಿಷಮದ್ಯಸೇವಾ ।
ನಿತ್ಯಾಸ್ತು ಜಂತೋರ್ನ ಹಿ ತತ್ರ ಚೋದನಾ॥
ವ್ಯವಸ್ಥಿತಿಸ್ತೇಷು ವಿವಾಹಯಜ್ಞ
ಸುರಾಗ್ರಹೈರಾಸು ನಿವೃತ್ತಿರಿಷ್ಟಾ ॥"

ತಾತ್ಪರ್ಯವೇನೆಂದರೆ- "ಈ ಜಗತ್ತಿನಲ್ಲಿ ಸ್ತ್ರೀಪುರುಷರ ಸಂಯೋಗ, ಮದ್ಯಮಾಂಸಗಳ ಸೇವನೆ- ಇವುಗಳಲ್ಲಿ ಪ್ರಾಣಿಗಳಿಗೆ ಪ್ರವೃತ್ತಿಯು ಸ್ವಾಭಾವಿಕವಾಗಿಯೇ ಇದೆ. ಇವುಗಳನ್ನು ಮಾಡಿರೆಂದು ಹೇಳುವದಿಲ್ಲ. ಮಾಡುವದಾದರೆ ಒಂದು ವ್ಯವಸ್ಥೆಗೊಳಿಸಿಟ್ಟು ಮಾಡಬೇಕು. ಅದೇನೆಂದರೆ— ಸ್ತ್ರೀಪುರುಷರ ಸಂಯೋಗಕ್ಕೆ ವಿವಾಹವೆಂಬ ಕಟ್ಟು; ಮಾಂಸಸೇವನೆಗೆ ಸೋಮಯಾಗವೆಂಬ ಕಟ್ಟು; ಮದ್ಯಸೇವನೆಗೆ ಸೌತ್ರಾಮಣೀಯಜ್ಞವೆಂಬ ಕಟ್ಟು. ಆದರೆ ಈ ಮೂರನ್ನೂ ತೊರೆಯುವದೇ ಶಾಸ್ತ್ರಕ್ಕೆ ಅಭಿಮತವು." ವಿವಾಹವೆಂಬ ಕಟ್ಟಿನಲ್ಲಿದ್ದ ಸ್ತ್ರೀಪುರುಷರು ಸಂಯೋಗಸುಖವನ್ನು ಪಡೆಯುವದಾದರೂ ಋತುಕಾಲ ಮೊದಲಾದ ಅನೇಕನಿರ್ಬಂಧಗಳನ್ನು ಪಾಲಿಸಬೇಕಾಗುವದು. ಹೀಗೆ ಮಾಡುವ

ದಾದರೆ ಅದರಿಂದ ಪಾಪವಿಲ್ಲ. ಪುಣ್ಯವನ್ನು ಹೆಚ್ಚಿಸಿಕೊಳ್ಳಬೇಕಾದರೆ ಮಾತ್ರ ಅವುಗಳನ್ನೆಲ್ಲಾ ಬಿಡಬೇಕಾಗುವದು. ಸ್ತ್ರೀಪುರುಷರ ಸಂಯೋಗದಿಂದ ಮನುಷ್ಯನ ಶಕ್ತಿಯೆಲ್ಲಾ ಕ್ಷೀಣವಾಗಿ ಅವನು ಮುಂದೆ ಯಾವ ಮಹತ್ಕಾರ್ಯಕ್ಕೂ ಅಯೋಗ್ಯನಾಗುವನು. ಪುರೂರವನೆಂಬ ರಾಜನು ಕೆಲವು ದಿವಸ ಊರ್ವಶಿಯೊಡನೆ ಇದ್ದನು. ಆ ಮೇಲೆ ಆಕೆ ಇವನನ್ನು ವಂಚಿಸಿ ಸ್ವರ್ಗಕ್ಕೆ ಹೋಗಿಬಿಟ್ಟಳು. ಆಗ ಪುರೂರವನು ಕುರುಕ್ಷೇತ್ರದಲ್ಲಿ ಹೋಮವನ್ನು ಮಾಡಿ ಅದರ ಫಲವಾಗಿ ತಾನೇ ಊರ್ವಶಿಯ ಬಳಿಗೆ ಹೋಗಿ ಆಕೆಯೊಡನೆ ಬಹಳ ಕಾಲವಿದ್ದನು. ಆಮೇಲೆ ಅವನಿಗೆ ಮನೋನಿಗ್ರಹದ ಇಚ್ಛೆಯುಂಟಾಗಿ ಪ್ರಯತ್ನಮಾಡಿ ನೋಡಿದಾಗ ಅದು ಅವನಿಗೆ ದಕ್ಕದೇ ಹೋಯಿತು. ಅವನ ಶರೀರವೆಲ್ಲಾ ಆಕೆಯ ಸಂಯೋಗದ ಬಲದಿಂದ ಟೊಳ್ಳಾಗಿ ಹೋಗಿತ್ತು; ಮನಸ್ಸು ನಿರ್ವೀರ್ಯವಾಗಿತ್ತು. ಆಮೇಲೆ ಅವನು ಅದಕ್ಕಾಗಿ ಬಹಳ ಪಶ್ಚಾತ್ತಾಪಪಟ್ಟನು. "ಊರೆಲ್ಲಾ ಸೂರೆಯಾದ ಮೇಲೆ ಊರಬಾಗಿಲನ್ನು ಹಾಕಿದರು" ಎಂಬಂತೆ ತನ್ನ ಸರ್ವನಾಶವು ಸಿದ್ಧವಾದ ಮೇಲೆ ಆ ವ್ರತಕ್ಕೆ ಬಾಯುಬೀರು ಕರೆದೇನು ಪ್ರಯೋಜನ? ಬ್ರಹ್ಮಚರ್ಯದ ಪ್ರಭಾವವನ್ನು ಹೇಳುವ ಸಂದರ್ಭದಲ್ಲಿ—

"ಬ್ರಹ್ಮಚರ್ಯಪ್ರತಿಷ್ಠಾಯಾಂ ವೀರ್ಯಲಾಭಃ"

ಎಂಬ ಯೋಗಸೂತ್ರವು ಹೊರಟಿದೆ. ಬ್ರಹ್ಮಚರ್ಯವು ದೃಢವಾದರೆ ಶಕ್ತಿಯು ಬರುವದೆಂದರ್ಥ. ಇದರ ಅರ್ಥವನ್ನು ಶ್ರೀವಿವೇಕಾನಂದರು ವಿವರಿಸಿರುವದೇನೆಂದರೆ – "ಬ್ರಹ್ಮಚರ್ಯಯುಕ್ತನ ಮೆದುಳಿನಲ್ಲಿ ಹೆಚ್ಚಿನ ಶಕ್ತಿಯೂ ಮಹಾಸಂಕಲ್ಪಶಕ್ತಿಯೂ ಇರುವವು. ಬ್ರಹ್ಮಚರ್ಯವಿಲ್ಲದಿದ್ದರೆ ಧಾರ್ಮಿಕಶಕ್ತಿ ಬರಲಾರದು. ಬ್ರಹ್ಮಚರ್ಯದಿಂದ ಜನರೆಲ್ಲರೂ ಸಂಪೂರ್ಣವಾಗಿ ತನ್ನ ವಶರಾಗುವರು. ಯಾರು ಯಾರು ಲೋಕದಲ್ಲಿ ಧರ್ಮೋಪದೇಶಕರಾಗಿದ್ದರೋ ಅವರೆಲ್ಲರೂ ಮಹಾಬ್ರಹ್ಮಚಾರಿಗಳಾಗಿರುತ್ತಿದ್ದರು. ಇದರಿಂದಲೇ ಅವರಿಗೆ ಹೆಚ್ಚಿನ ಶಕ್ತಿಬಂದಿತ್ತು. ಆದ್ದರಿಂದ ಯೋಗಿಯು ಬ್ರಹ್ಮಚಾರಿಯಾಗಿರಬೇಕು.

ಯಮದ ಐದನೇ ಅಂಗವು ಅಪರಿಗ್ರಹ. ಅಪರಿಗ್ರಹವೆಂದರೆ,ಮತ್ತೊ

ಬ್ಬರಿಂದ ದಾನವನ್ನು ತೆಗೆದುಕೊಳ್ಳದಿರುವದು. ದಾನವನ್ನು ಕೊಡುವ ಪದ್ಧತಿಯನ್ನು ನೋಡಿದರೇ ದಾನವನ್ನು ತೆಗೆದುಕೊಳ್ಳುವದರ ಕೀಳುತನವು ವ್ಯಕ್ತವಾಗುತ್ತದೆ. ದಾನವನ್ನು ಕೊಡುವಾಗ ದಾನಿಯ ಕೈ ಮೇಲಿರುತ್ತದೆ; ದಾನವನ್ನು ತೆಗೆದುಕೊಳ್ಳುವವನ ಕೈ ಕೆಳಗೆ ಇರುತ್ತದೆ. ಈ ಕೀಳುತನವು ಹೊರಗಣ ಪರಿಸ್ಥಿಯಲ್ಲಿಷ್ಟೇ ಅಲ್ಲ. ಒಳಗಿನ ಮನಸ್ಸಿನ ಪರಿಸ್ಥಿತಿಯೂ ಇದಕ್ಕನುಗುಣವಾಗಿಯೇ ಇರುವದು. "ಉಪ್ಪಿಕ್ಕಿದವನನ್ನು ಮುಪ್ಪಿನ ತನಕ ನೆನೆ" ಎಂದು ಒಂದು ಗಾದೆಯಿದೆ. ಒಬ್ಬನಿಂದ ಉಪ್ಪಿನಂಥ ಅಗ್ಗವಾದ ಪದಾರ್ಥವನ್ನು ದಾನವಾಗಿ ತೆಗೆದುಕೊಂಡರೂ ಸಾಯುವತನಕ ಮನುಷ್ಯನು ಆ ದಾಕ್ಷಿಣ್ಯಕ್ಕೆ ಬದ್ಧನಾಗುತ್ತಾನೆ. ದಾನವನ್ನು ತೆಗೆದುಕೊಂಡವನ ಮನಸ್ಸು ದಾನಿಯ ಮನಸ್ಸಿಗೆ ಅಧೀನವಾಗುತ್ತದೆ. ದಾಸ್ಯವೃತ್ತಿಯು ಬಲಿಗೆ ಬಿದ್ದ ಅದರಿಂದ ಇನ್ನೇನು ಕೆಲಸವಾದೀತು? ಕೆಲಕೆಲವರಲ್ಲಿ ಈಗಲೂ ಬ್ರಹ್ಮತೇಜಸ್ಸಿದ್ದರೂ "ಮುಖಂ ದಗ್ಧಂ ಪರಾನ್ನೇನ ಹಸ್ತಂ ದಗ್ಧಂ ಪರಿಗ್ರಹಾತ್" ಎಂಬ ವಾಕ್ಯದಂತೆ ಪರಾನ್ನಭೋಜನದ ಪ್ರಭಾವದಿಂದ ಅವರ ಆಶೀರ್ವಾದವು ವ್ಯರ್ಥವಾಗುತ್ತಿರುವದಲ್ಲದೆ ಅವರು ಪರಿಗ್ರಹವನ್ನು ಮಾಡುತ್ತಿರುವ ಕಾರಣದಿಂದ ಅವರ ವರದಹಸ್ತಕ್ಕೆ ಅರ್ಥವಿಲ್ಲವಾಗಿರುವದು. ಆದ್ದರಿಂದ ಯೋಗಿಯು ಪರಿಗ್ರಹವನ್ನು ಮಾಡಬಾರದು.

"ಅಪರಿಗ್ರಹಸ್ಥೈರ್ಯೇ ಜನ್ಮಕಥಂತಾಸಂಬೋಧಃ"

ಎಂದು ಯೋಗಸೂತ್ರವಿದೆ. ದಾನವನ್ನು ಎಷ್ಟು ಮಾತ್ರವೂ ತೆಗೆದುಕೊಳ್ಳದಿದ್ದರೆ ಅವನಿಗೆ ಹಿಂದಿನ ಜನ್ಮದ ನೆನಪಾಗುವದೆಂದರ್ಥ. ಇದರ ವಿವರಣೆಯಾಗಿ ಶ್ರೀಸ್ವಾಮಿ ವಿವೇಕಾನಂದರವರು ಹೇಳಿರುವದೇನೆಂದರೆ— "ದಾನಗಳನ್ನು ಸ್ವೀಕರಿಸದೆ ಇರುವಾತನಿಗೆ ಮತ್ತೊಬ್ಬರ ಹಂಗು ಇರುವದಿಲ್ಲ. ಅವನು ಒಬ್ಬರ ಆಶ್ರಯವಿಲ್ಲದೆ ಸ್ವತಂತ್ರನಾಗಿರುತ್ತಾನೆ. ಅವನ ಮನಸ್ಸು ಶುದ್ಧವಾಗಿರುವದು. ದಾನವನ್ನು ತೆಗೆದುಕೊಳ್ಳದವನಿಗೆ ಚಿತ್ತಶುದ್ಧಿಯಾಗಿ ಪೂರ್ವಜನ್ಮದ ಸ್ಮರಣೆಯು ಕೂಡ ಅದರಲ್ಲಿ ಎದ್ದು ಕಾಣಿಸಿಕೊಳ್ಳುವದು. ಆಗ ಮಾತ್ರ ಯೋಗಿಗೆ ತಾನು ಪಡೆಯಬೇಕಾದ್ದರಲ್ಲಿ ದೃಢವಿಶ್ವಾಸವು ಕೂಡುವದು. ಹೀಗೆ ಎಷ್ಟೋ ಸಾರಿ

ಹುಟ್ಟುತ್ತಸಾಯುತ್ತ ಇದ್ದೇನೆಂದು ಗೊತ್ತಾಗುವದರಿಂದ ಈಸಲ ನಾನು ಮುಕ್ತನಾಗುವೆನು; ಇನ್ನು ಮುಂದೆ ಹುಟ್ಟುವದೂ ಇಲ್ಲ; ಸಾಯುವದೂ ಇಲ್ಲ. ಪ್ರಕೃತಿಗೆ ದಾಸನಾಗುವದೂ ಇಲ್ಲ– ಎಂದು ನಿಶ್ಚಯಿಸಿಕೊಳ್ಳುತ್ತಾನೆ.''

ಈ ಮೇಲೆ ಹೇಳಿದ ಯಮದ ಐದಂಗಗಳೂ ಜಾತಿ, ದೇಶ, ಕಾಲ, ಸಮಯ–ನೋಡಬಾರದ ಯಾವ ಕಾರಣದಿಂದಲೂ ಸಂಕುಚಿತಾವಸ್ಥೆಯನ್ನು ಪಡೆಯದೆ ಎಲ್ಲೆಲ್ಲಿಯೂ ನಡೆದರೆ ಮಹಾವ್ರತಗಳೆನಿಸಿಕೊಳ್ಳುವವೆಂದು ಒಂದು ಯೋಗಸೂತ್ರವು ಹೇಳುತ್ತದೆ. ಪ್ರವೃತ್ತಿಧರ್ಮದವರಿಗೆ ಇವುಗಳ ತೀವ್ರತೆಯನ್ನು ಇಳಿಸಿ ಬೇರೆಬೇರೆ ವ್ಯವಸ್ಥೆಯನ್ನು ಶಾಸ್ತ್ರಕಾರರು ಮಾಡಿದ್ದಾರೆ. ಇವುಗಳೇ ನೀತಿಗಳೆಂದು ಪ್ರಸಿದ್ಧವಾಗಿವೆ. ಶಾಸ್ತ್ರಸಮ್ಮತವಾದ ಈ ನೀತಿಗಳಂತೆ ಆಚರಿಸಿದರೂ ಸದ್ಗತಿಯೇ ಆಗುತ್ತದೆ. ಆ ನೀತಿಮಾರ್ಗವನ್ನು ಮೀರಿದರೆ ಮಾತ್ರ ನರಕವೇ ಗತಿ. ಇನ್ನು ಮುಮುಕ್ಷುಗಳಾದವರು – -ನಿವೃತ್ತಿಧರ್ಮದಲ್ಲಿ ಹೆಜ್ಜೆಯಿಡಬೇಕೆನ್ನುವವರು —- ಆ ನೀತಿಯ ಮೆಟ್ಟಿಲನ್ನು ಹತ್ತಿ ಅದಕ್ಕೂ ಮೇಲಿನ ಧರ್ಮಸ್ವರೂಪವನ್ನೇ ಮೈಗೂಡಿಸಿಕೊಳ್ಳುವದಕ್ಕೆ ಯತ್ನಿಸಬೇಕು.

ಇದಕ್ಕೆ ಸಾಧನವೇನೆಂದರೆ ಕದಿಯಬೇಕೆಂಬ ಯೋಚನೆಯು ಬಂದರೆ ಕದಿಯಬಾರದೆಂಬುದನ್ನು ಯೋಚಿಸಿಕೊಳ್ಳಬೇಕು. ದಾನವನ್ನು ತೆಗೆದುಕೊಳ್ಳಬೇಕೆಂಬ ಯೋಚನೆಯು ಬಂದರೆ ಇದಕ್ಕೆ ಪ್ರತಿಯಾದ ಮತ್ತೊಂದು ಯೋಚನೆಯನ್ನು ಆ ಸ್ಥಲಕ್ಕೆ ತರಬೇಕು. ಹೀಗೆ ಪ್ರತಿಪಕ್ಷಭಾವನೆಯನ್ನು ತಂದುಕೊಂಡು ವಿರುದ್ಧವಾದ ಯೋಚನೆಗಳನ್ನು ನಿಲ್ಲಿಸಬೇಕು. ಈ ಸಂದರ್ಭದಲ್ಲಿ ಶ್ರೀಸ್ವಾಮಿವಿವೇಕಾನಂದರು ತಮ್ಮ ರಾಜಯೋಗದಲ್ಲಿ ಎಚ್ಚರಿಕೆಯನ್ನು ಕೊಟ್ಟಿರುವದೇನೆಂದರೆ '' ನಾನು ಒಂದು ಸುಳ್ಳು ಹೇಳಿದರೆ ಅಥವಾ ಮತ್ತೊಬ್ಬನಿಂದ ಹೇಳಿಸಿದರೆ ಅಥವಾ ಮತ್ತೊಬ್ಬನು ಹೇಳಿದುದನ್ನು ಸರಿಯೆಂದು ಒಪ್ಪಿದರೆ ಎಲ್ಲವೂ ಪಾಪವೇ. ಎಷ್ಟೇ ಸುಳ್ಳಾಗಲಿ ಸುಳ್ಳು. ಪ್ರತಿಯೊಂದು ಕೆಟ್ಟ ಯೋಚನೆಯೂ ಹಿಂದಕ್ಕೆ ಪುಟನೆಗೆಯುತ್ತದೆ. ಪ್ರತಿಯೊಂದು ಹಗೆತನದ ಯೋಚನೆಯೂ– ಅದು ಎಲ್ಲಿಯೋ ಗುಹೆಯಲ್ಲಿ ಮಾಡಿದ ಯೋಚನೆಯಾಗಿದ್ದರೂ ಕೂಡ–

ಒಂದು ಕಡೆ ಕೂಡಿಟ್ಟುಕೊಂಡಿದ್ದು ಬಿಡಲಿಲ್ಲವಿದ್ದರೆ ಒಂದು ದಿನ ಬಹಳ ಶಕ್ತಿಯಿಂದ ಕೂಡಿ ಭಯಂಕರ ರೂಪವನ್ನು ಧರಿಸಿಕೊಂಡು ನಮ್ಮಲ್ಲಿಗೆ ಬಂದುಬಿಡುತ್ತದೆ. ಮಗತನ, ಹೊಟ್ಟೆಕಿಚ್ಚು—ಇಂಥ ದೋಷಗಳನ್ನು ಹೊರಕ್ಕೆ ಬಿಟ್ಟರೆ ಅವು ಚಕ್ರಬಡ್ಡಿಯ ಸಮೇತ ನಿಮ್ಮಲ್ಲಿಗೆ ತಿರುಗಿ ಬರುತ್ತವೆ. ಅವುಗಳನ್ನು ತಪ್ಪಿಸುವುದು ಯಾರಿಂದಲೂ ಆಗುವುದಿಲ್ಲ. ಅವುಗಳನ್ನು ಈಚೆಗೆ ಹೊರಡಿಸುವುದೇ ತಪ್ಪು; ಅವುಗಳನ್ನು ದಹಿಸಿಕೊಳ್ಳಬೇಕಾಗುವುದು. ಇದನ್ನು ಜ್ಞಾಪಕದಲ್ಲಿಟ್ಟುಕೊಂಡಿದ್ದರೆ ಕೆಟ್ಟ ಕೆಲಸಗಳನ್ನು ಮಾಡುವುದಕ್ಕಾಗುವುದಿಲ್ಲ.

## ನಿಯಮ.

ಬಿಡಬೇಕಾದವುಗಳನ್ನು ಹೇಳಿದ ಮೇಲೆ ಪತಂಜಲಿ ಮಹರ್ಷಿಗಳು ಹಿಡಿಯತಕ್ಕವುಗಳನ್ನು ನಿಯಮಗಳೆಂಬ ಹೆಸರಿನಿಂದ ಹೇಳಿದ್ದಾರೆ. ಬಿಡತಕ್ಕವುಗಳನ್ನು ಬಿಡದೆ ಯಾವ ವ್ರತವನ್ನು ಹಿಡಿದರೂ ಸಾರ್ಥಕವಾಗುವುದಿಲ್ಲವಾದ್ದರಿಂದ ಯಮಕ್ಕೆ ಮೊದಲನೆಯ ಸ್ಥಾನವು ದೊರೆಯಿತು. ಈಗ ಇನ್ನು ನಿಯಮದ ವಿಚಾರ. ನಿಯಮಗಳು—

"ಶೌಚಸಂತೋಷ ತಪಃ ಸ್ವಾಧ್ಯಾಯೇಶ್ವರ ಪ್ರಣಿಧಾನಾನಿ ನಿಯಮಾಃ"

ಎಂಬ ಪಾತಂಜಲಸೂತ್ರದಂತೆ ಶುಚಿ, ತೃಪ್ತಿ, ತಪಸ್ಸು, ಮಂತ್ರಜಪ, ದೇವಪೂಜೆ, ಈ ಐದೂ ನಿಯಮಗಳು. ಇವುಗಳ ವಿಚಾರವಾಗಿ ಶ್ರೀಸ್ವಾಮಿ ವಿವೇಕಾನಂದರು ಹೇಳಿರುವುದೇನೆಂದರೆ—

"ಶುಚಿಯು ಒಳಗಣದೆಂದೂ ಹೊರಗಣದೆಂದೂ ಎರಡುಬಗೆಯಾಗಿರುವುದು. ಹೊರಗಣ ಶೌಚವೆಂದರೆ ಶರೀರವನ್ನು ಶುಚಿಯಾಗಿಟ್ಟುಕೊಂಡಿರುವುದು. ಕೊಳಕನಾಗಿರುವವನು ಎಂದಿಗೂ ಯೋಗಿಯಾಗುವುದಿಲ್ಲ. ಇದರ ಜೊತೆಗೆ ಒಳಗಣ ಶೌಚವೂ ಇರಬೇಕು. ಎಲ್ಲರಲ್ಲಿಯೂ ಸ್ನೇಹ, ಕಷ್ಟದಲ್ಲಿರುವವರಲ್ಲಿ ಕರುಣೆ, ಜನರು ಸುಖವಾಗಿದ್ದರೆ ಸಂತೋಷ, ಕೆಟ್ಟವರ ವಿಷಯದಲ್ಲಿ ಉಪೇಕ್ಷೆ— ಈ ಗುಣಗಳಿಂದ ಒಳಗಣ ಶೌಚವಾಗುವುದು. ಒಳಗಣ ಶುದ್ಧಿಯೆಂಬುದು ಹೊರಗಣ ಶುದ್ಧಿಗಿಂತ ಉತ್ತಮವಾದುದೇನೋ ನಿಜ; ಆದರೆ ಎರಡೂ ಅವಶ್ಯಕವೆ. ಒಳಗಣ ಶುದ್ಧಿ ಇಲ್ಲದೆ ಹೊರಗಣ ಶುದ್ಧಿ ಇದ್ದರೂ ಏನೂ ಉಪಯೋಗವಿಲ್ಲ.

“ ನಿಜವಾದ ಒಳಗಣ ಶುದ್ಧಿಯೂ ಹೊರಗಣ ಶುದ್ಧಿಯೂ ಆದರೆ ಶರೀರದ ಮೇಲೆ ಅಕ್ಕರೆ ತಪ್ಪಿ ಅದನ್ನು ಅಂದವಾಗಿಟ್ಟುಕೊಂಡಿರಬೇಕೆಂಬ ಭಾವನೆಯು ಹೋಗುವದು. ಅತ್ಯಂತಸುಂದರವಾದದ್ದೆಂದು ಇತರರು ಹೇಳುವ ಮುಖಕ್ಕೆ ಬುದ್ಧಿಯ ಹೊಳಪು ಇಲ್ಲದಿದ್ದರೆ ಯೋಗಿಗೆ ಅದು ಕೇವಲ ಪಶುವಿನ ಮುಖವಾಗಿ ತೋರುತ್ತಿರುವದು. ಸರ್ವಸಾಧಾರಣವೆಂದು ಜನರು ಆಡಿಕೊಳ್ಳುವ ಮುಖವೇ ಬ್ರಹ್ಮತೇಜಸ್ಸಿನಿಂದ ಕೂಡಿದ್ದರೆ ಯೋಗಿಯು ಅದನ್ನು ದಿವ್ಯಮುಖವೆನ್ನುವನು. ಈ ಶರೀರದ ಮೇಲೆ ಇರುವ ಆಸಕ್ತಿಯೇ ಮನುಷ್ಯಜನ್ಮದಲ್ಲಿರುವ ದೊಡ್ಡ ದೋಷವು. ಶುಚಿತ್ವವು ದೃಢವಾಯಿತೆನ್ನುವದಕ್ಕೆ ನಾವು ಶರೀರವಲ್ಲವೆಂದು ತಿಳಿದುಕೊಳ್ಳದಿರುವದೇ ಮೊದಲನೇ ಗುರ್ತು. ಈ ಶುದ್ಧಿ ಬಂದರೆ ಮಾತ್ರ ದೇಹಭಾವನೆ ಹೋಗುವದು. ಶುಚಿತೆಯನ್ನು ಅಭ್ಯಾಸಮಾಡುವದರಿಂದ ಸತ್ತ್ವಗುಣವು ವೃದ್ಧಿಯಾಗಿ ಮನಸ್ಸು ಒಂದು ಕಡೆಗೆ ನಿಂತು ಸಮಾಧಾನದಿಂದಿರುವದು. ಮನಸ್ಸು ಸಮಾಧಾನವಾಗಹತ್ತುವದು ಧಾರ್ಮಿಕನಾದುದಕ್ಕೆ ಮೊದಲನೇ ಗುರ್ತು.

“ ನಿಯಮಗಳಲ್ಲಿ ಎರಡನೇದು ಸಂತೋಷ. ಮುಖವನ್ನು ಜೋಲು ಹಾಕಿಕೊಂಡಿರುವದು ಅಜೀರ್ಣದ ಗುರ್ತೇ ಹೊರತು ಧರ್ಮದ ಗುರ್ತಲ್ಲ. ಸಂತೋಷವಾಗಿರುವದೇ ಸತ್ತ್ವದ ಸ್ವಭಾವ. ಸಾತ್ತ್ವಿಕನಾದವನಿಗೆ ಎಲ್ಲವೂ ಸುಖಮಯವೇ ಆಗಿರುವವು. ಈ ಗುಣವು ಬಂದರೆ ಯೋಗದ ಅಭ್ಯಾಸವು ಮುಂದೆ ಸಾಗುತ್ತಿದೆಯೆಂದರಿಯಬೇಕು. ದುಃಖವೆಂಬುದೆಲ್ಲ ತಮಸ್ಸಿನಿಂದಲೇ ಆಗಿರುವದು. ಆದ್ದರಿಂದ ದುಃಖವನ್ನು ಬಿಟ್ಟುಬಿಡಬೇಕು. ಮಂಕಾಗಿರುವದೂ ತಮಸ್ಸಿನ ಫಲವೆ. ಬಲವಾಗಿ ಚೆನ್ನಾಗಿ ಮೈಯ್ಕಟ್ಟುಳ್ಳವರಾಗಿ ಅರೋಗರಾಗಿ ಧೈರ್ಯಶಾಲಿಗಳಾಗಿರುವವರೇ ಯೋಗಿಗಳಾಗುವದಕ್ಕೆ ಅರ್ಹರು. ಯೋಗಿಯಾದವನಿಗೆ ಪ್ರತಿಯೊಂದೂ ಆನಂದವೆ. ಯಾವ ಮುಖವನ್ನು ಕಂಡರೂ ಅವನಿಗೆ ಸಂತೋಷವಾಗುವದು. ಇದೇ ಸತ್ಪುರುಷನ ಗುರ್ತು. ದುಃಖವು ಪಾಪದಿಂದ ಹೊರತು ಮತ್ತೇತರಿಂದಲೂ ಬರುವದಿಲ್ಲ. ಸಪ್ಪೆಸಪ್ಪೆಯಾಗಿ ಮುಖವನ್ನೇಕೆ ಹಾಕಿಕೊಳ್ಳಬೇಕು? ಅದನ್ನು ಕೇಳಿದರೆ, ಹೇಳಿದರೆ ಹೆದರಿಕೆಯಾಗು

ವದು. ಮುಖವನ್ನು ಜೋಲುಹಾಕಿಕೊಂಡಿರಬೇಕಾದರೆ ಆದಿನ ಹೊರಕ್ಕೆ ಹೋಗಬಾರದು. ಒಂದು ಕೋಣೆಯಲ್ಲಿ ಯಾರಿಗೂ ಕಾಣದಂತೆ ಅವಿತುಕೊಂಡಿರಬೇಕು. ಈ ರೋಗವನ್ನೇತಕ್ಕೆ ಜನರ ಹತ್ತಿರಕ್ಕೊಯ್ಯಬೇಕು? ಮನಸ್ಸು ವಶವಾದರೆ ಶರೀರವೆಲ್ಲ ವಶವಾಗುವದು. ಈ ಯಂತ್ರಕ್ಕೆ ದಾಸರಾಗುವ ಬದಲು ಈ ಯಂತ್ರವೇ ನಮ್ಮ ಅಡಿಯಾಳಾಗುವದು. ಈ ಯಂತ್ರವು ಆತ್ಮವನ್ನು ಕೆಳಕ್ಕೆ ಜಗ್ಗುವದು ಹಾಗಿರಲಿ; ತಾನೆ ಅದಕ್ಕೆ ಅತ್ಯಂತ ಉತ್ತಮವಾದ ಸಾಧನವಾಗುವದು. ಸಂತೋಷದಿಂದ ಎಲ್ಲಕ್ಕೂ ಹೆಚ್ಚಿನ ಸುಖವು ಬರುವದು.

“ತಪಸ್ಸಿನಿಂದ ಅಶುದ್ಧಿಯು ನಾಶವಾಗಿ ಶರೀರಕ್ಕೂ ಇಂದ್ರಿಯಗಳಿಗೂ ಸಿದ್ಧಿಗಳು ಬರುವವು. ತಪಸ್ಸಿನ ಫಲಗಳು ಬಹುಬೇಗನೆ ಕಾಣಿಸಿಕೊಳ್ಳುತ್ತವೆ. ದೃಷ್ಟಿಶಕ್ತಿಯು ಹೆಚ್ಚುವದು, ದೂರದಿಂದ ಶಬ್ದವು ಕೇಳಿಸುವದು- ಮೊದಲಾದವು ಇದರ ಫಲಗಳು. ಮಂತ್ರಜಪದಿಂದ ಬೇಕಾದ ದೇವತೆಯ ಸಾಕ್ಷಾತ್ಕಾರವಾಗುವದು. ಎಲ್ಲವನ್ನೂ ಈಶ್ವರನಿಗೆ ಸಮರ್ಪಿಸುವದರಿಂದ ಸಮಾಧಿಯಾಗುವದು.”

## ಆಸನ.

ಆಸನವೆಂದರೆ ಕೂತುಕೊಳ್ಳುವ ಬಗೆ. ಹಠಯೋಗದಲ್ಲಿ ಅನೇಕ ಬಗೆಯ ಆಸನಗಳುಂಟು. ಅವೆಲ್ಲಾ ಶರೀರದ ಒಂದೊಂದವಯವಕ್ಕೊಂದೊಂದು ಬಗೆಯ ಆರೋಗ್ಯಸಂಪತ್ತನ್ನೊದಗಿಸಿಕೊಡುವದಕ್ಕೂ ಮಾಂಸಖಂಡಗಳನ್ನೆಲ್ಲಾ ವಶಮಾಡಿಕೊಳ್ಳುವದಕ್ಕೂ ಸುಖದಿಂದ ಬಹುಕಾಲ ಬದುಕುವದಕ್ಕೂ ಸಹಾಯವಾಗುವವು. ರಾಜಯೋಗದಲ್ಲಿ ಲಕ್ಷ್ಯವು ಶರೀರದ ಕಡೆ ಮುಖ್ಯವಾಗಿರದೆ ಮನಸ್ಸಿನ ಕಡೆ ಇರುವದರಿಂದ ಇಲ್ಲಿ ಅವುಗಳೆಲ್ಲಾ ಉಪಯೋಗಕ್ಕೆ ಬೀಳುವದಿಲ್ಲ. ಯೋಗಶಾಸ್ತ್ರಕರ್ತರಾದ ಶ್ರೀಪತಂಜಲಿಮಹರ್ಷಿಗಳು “ಸ್ಥಿರಸುಖಮಾಸನಮ್” ಎಂದು ಸೂತ್ರವನ್ನು ಕಲ್ಪಿಸಿದ್ದಾರೆ.* ಇದರ ವಿವರಣೆಯಲ್ಲಿ ಶ್ರೀಸ್ವಾಮಿ ವಿವೇಕಾನಂದರು ಹೇಳಿರುವದೇನೆಂದರೆ- “ಸ್ಥಿರವಾಗಿ ಕೂತುಕೊಳ್ಳುವದಕ್ಕೆ ಬಂದ ಹೊರತು ಪ್ರಾಣಾಯಾಮವೇ ಮೊದಲಾದ ಸಾಧನಗಳನ್ನು ಮಾಡುವದ

ಕ್ಕಾಗುವದಿಲ್ಲ. ಆಸನವು ಸ್ಥಿರವಾಗುವದೆಂದರೆ ಶರೀರವಿದೆಯೆಂಬುದೇ ತೋರಬಾರದು. ಸುಮ್ಮನೆ ಕೂತಿದ್ದರೆ ಕೆಲವು ನಿಮಿಷಗಳಾಗುವದರಲ್ಲಿ ಶರೀರಕ್ಕೆ ಏನೇನೋ ತೊಂದರೆಗಳು ಬರುತ್ತವೆ. ಶರೀರವೊಂದು ಇದೆಯೆಂಬ ಭಾವನೆಯು ಹೋಗಿಬಿಟ್ಟರೆ ಶರೀರದ ಅನುಭವಗಳೂ ಹೋಗಿಬಿಡುತ್ತವೆ. ಆಗ ಸುಖವೂ ಆಗುವದಿಲ್ಲ; ದುಃಖವೂ ಆಗುವದಿಲ್ಲ. ಮತ್ತೆ ಶರೀರಧಾರಣೆ ಮಾಡಿದರೆ ಎಷ್ಟೇ ಆಯಾಸವು ಹೋದಂತೆ ಕಾಣುವದು. ಶರೀರಕ್ಕೆ ಪೂರ್ಣವಿಶ್ರಾಂತಿಯನ್ನು ಕೊಡುವದೆಂದರೆ ಇದೊಂದೇ ಮಾರ್ಗ. ಹೀಗೆ ಶರೀರವನ್ನು ಜಯಿಸಿ ಸ್ಥಿರವಾಗಿಟ್ಟುಕೊಂಡಿರುವದಕ್ಕೆ ಬಂದರೆ ಸಾಧನವೂ ಸ್ಥಿರವಾಗಿರುವದು. ಆದರೆ ಶರೀರದ ತೊಂದರೆಗಳು ಬರುತ್ತಲೆ ಇದ್ದರೆ ಮನಸ್ಸಿಗೆ ಬಾಧೆಯಾಗಿ ಅದನ್ನು ಒಂದುಕಡೆ ನಿಲ್ಲಿಸುವದಾಗದೆ ಹೋಗುವದು "

ಆಸನದ ವಿಷಯದಲ್ಲಿ ಭಗವದ್ಗೀತೆಯು—

"ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥"

ಎಂದು ಹೇಳಿದೆ. ಶರೀರವೂ ಶಿರಸ್ಸೂ ಕುತ್ತಿಗೆಯೂ ಅಲ್ಲಾಡದೆ ನೆಟ್ಟಗೆ ಇದ್ದು ದೃಷ್ಟಿಯು ಅತ್ತಿತ್ತ ಕದಲದೆ ಮೂಗಿನ ತುದಿಯನ್ನು ನೋಡುತ್ತಿರಬೇಕೆಂದರ್ಥ. ಯೋಗಿಯು ತಾನು ಯಾವ ರೀತಿಯಲ್ಲಿ ಕುಳಿತುಕೊಂಡರೆ ಬಹುಕಾಲ ಹಾಗೆಯೇ ಇರಬಹುದೆಂದು ತೋರುವದೋ ಆ ರೀತಿಯಲ್ಲಿ ಕುಳಿತುಕೊಂಡು ತನ್ನ ಶರೀರವನ್ನೂ ಕುತ್ತಿಗೆಯನ್ನೂ ಶಿರಸ್ಸನ್ನೂ ಸರಳರೇಖೆಯಂತೆ ನೆಟ್ಟಗೆ ನಿಲ್ಲಿಸಬೇಕು. ಹೀಗೆ ನಿಲ್ಲಿಸಬೇಕಾದ ಅವಶ್ಯಕವೇನೆಂದರೆ— ಯೋಗವೆಂದರೆ ಚಿತ್ತದ ವೃತ್ತಿಗಳನ್ನು ತಡೆಯುವದೆಂದು ಹಿಂದೆ ಹೇಳಿದೆಯಷ್ಟೆ. ಆ ಚಿತ್ತವು ಶ್ವಾಸವನ್ನಾಶ್ರಯಿಸಿಕೊಂಡಿದೆ. ಚಿತ್ತವೃತ್ತಿಯನ್ನು ತಡೆಯುವದಕ್ಕಾಗಿ ಶ್ವಾಸವನ್ನು ನಡುನೆತ್ತಿಯಲ್ಲಿರುವ ಬ್ರಹ್ಮರಂಧ್ರಕ್ಕೆ ಏರಿಸಬೇಕಾಗಿದೆ. ಶ್ವಾಸವು ಬ್ರಹ್ಮರಂಧ್ರಕ್ಕೇರಬೇಕಾದರೆ ಅದು ಬೆನ್ನುಹುರಿಯ ಮಧ್ಯದಲ್ಲಿರುವ ಸುಷುಮ್ನೆಯೆಂಬ ಪೊಳ್ಳು ನಾಡಿಯೊಳಗೆ ನುಗ್ಗಿ ಹೋಗಬೇಕಾಗುತ್ತದೆ. ಆದರೆ ಸ್ವಾಭಾವಿಕವಾಗಿ ಶ್ವಾಸವು ಆ ಸುಷುಮ್ನೆಯ ಎಡಬಲ ಭಾಗಗಳಲ್ಲಿರುವ ಇಡೆ, ಪಿಂಗಳೆ- ಎಂಬ ನಾಡಿಗ

ಳೊಳಗೇ ನುಗ್ಗುತ್ತಿರುತ್ತದೆ. ಸುಷುಮ್ನೆಯು ಬಾಯಿ ಮುದುರಿಕೊಂಡಿರುವದರಿಂದ ಶ್ವಾಸವು ಅದರೊಳಗೆ ನುಗ್ಗುವದಿಲ್ಲ. ನಾವು ಪ್ರಯತ್ನದಿಂದ ಆ ಬಾಯಿಯನ್ನು ತೆರೆಸಿ ಶ್ವಾಸವನ್ನು ಆ ಮಾರ್ಗದಲ್ಲಿ ನುಗ್ಗಿಸಬೇಕಾಗುತ್ತದೆ. ನಮ್ಮ ಶರೀರವು ಬಗ್ಗಿದ್ದರೆ ಆ ಬೆನ್ನುಹುರಿಯು ಸುಷುಮ್ನೆಯನ್ನು ಒತ್ತಿ ಆ ಶ್ವಾಸಪ್ರವಾಹವನ್ನು ತಡೆದುಬಿಡುತ್ತದೆ. ಯೋಗವನ್ನು ಮಾಡುವಾಗ ಮಾತ್ರವೇ ಅಲ್ಲ; ಓದುವಾಗಲೂ ಬರೆಯುವಾಗಲೂ ಕೂಡ ಬಗ್ಗಿರಬಾರದೆಂದು ಹೇಳುವದಕ್ಕೂ ಇದೇ ಕಾರಣ. ಎದೆಯು ಬಗ್ಗಿದ ಕಾಲದಲ್ಲಿ ಸಾಮಾನ್ಯವಾಗಿ ಸುಷುಮ್ನೆಗೆ ತಡೆಯಾಗುವದರಿಂದ ಕುಕಲ್ಪನೆಗಳುದಯಿಸುವವು. ಆದ್ದರಿಂದ ಆ ಸುಷುಮ್ನೆಯೆಂಬ ನಾಡಿಯ ಹಾದಿಯು ಸರಳವಾಗಿರುವದಕ್ಕಾಗಿ ನೆಟ್ಟಗೆ ಕುಳಿತುಕೊಳ್ಳಬೇಕಾಗುವದು. ಶರೀರವು ಅಲ್ಲಾಡಿದರೆ ಕೂಡ ಸುಷುಮ್ನೆಗೆ ಧಕ್ಕೆಹತ್ತುವದರಿಂದ ಯೋಗಸಾಧನಕ್ಕೆ ವಿಘ್ನವಾಗುವ ಕಾರಣದಿಂದ ಶರೀರವನ್ನು ಕುತ್ತಿಗೆಯನ್ನೂ ತಲೆಯನ್ನೂ ಅಲ್ಲಾಡದಂತೆ ಇಟ್ಟುಕೊಂಡಿರಬೇಕು.

ಆಮೇಲೆ ಅತ್ತಿತ್ತ ನೋಡದೆ ಮೂಗಿನ ತುದಿಯನ್ನು ನೋಡಬೇಕೆಂದಿದೆ. ಇಲ್ಲಿ ಮೂಗಿನ ತುದಿಯನ್ನು ನೋಡಬೇಕೆಂಬುದಕ್ಕೆ ದೃಷ್ಟಿಯು ನೆಟ್ಟಗೆ ಮುಂಭಾಗದಲ್ಲಿರಬೇಕೆಂದರ್ಥವೇ ಹೊರತು ನಿಜವಾಗಿ ಮೂಗಿನ ತುದಿಯನ್ನು ನೋಡುವದರಿಂದ ಯಾವ ಪುರುಷಾರ್ಥವೂ ಇಲ್ಲ. ಮೂಗಿನ ತುದಿಯನ್ನು ನೋಡಬೇಕೆಂಬುದು ಅತ್ತಿತ್ತ ನೋಡಬಾರದೆಂಬುದನ್ನೆ ಮತ್ತೆ ಒತ್ತಿ ಹೇಳುವ ಮಾತು. ಮೂಗಿನ ತುದಿಯನ್ನೇ ನೋಡಬೇಕೆಂಬುದಾದರೆ ಮನಸ್ಸನ್ನು ಅಲ್ಲಿಯೇ ಇಡಬೇಕಾದೀತು. ಹಾಗಿಲ್ಲ. ಮನಸ್ಸನ್ನು ಭಗವತ್ಸ್ವರೂಪದಲ್ಲಿಡಬೇಕೆಂದು ಮುಂದೆ ಬರುತ್ತದೆ. ದೃಷ್ಟಿಯು ಮೂಗಿನ ತುದಿಯ ರೇಖೆಯನ್ನು ಹಿಡಿದಿರಬೇಕೆಂಬುವದರಲ್ಲಿಯೂ ಒಂದು ಸಂಶಯಕ್ಕೆ ದಾರಿಯಿದೆ. ಮೂಗಿಗೆ ಎರಡು ತುದಿಗಳಿವೆ. ಒಂದು ಹುಬ್ಬಿನ ನಡುವಣ ಭಾಗ; ಇನ್ನೊಂದು ಮೂಗಿನ ಮುಂಭಾಗ. ಈ ಎರಡರಲ್ಲಿ ಯಾವ ತುದಿಯನ್ನವಲಂಬಿಸಿದರೂ ಬಾಧಕವಿಲ್ಲ. ಹುಬ್ಬಿನ ನಡುವಣ ಭಾಗವನ್ನಿಟ್ಟುಕೊಂಡರೆ ಕಣ್ಣನ್ನು ಹೆಚ್ಚಾಗಿ ಅರಳಿಸಿಕೊಂಡಿರಬೇಕಾಗುತ್ತದೆ. ಇದಕ್ಕೆ ಪೂರ್ಣಿಮಾದೃಷ್ಟಿಯೆಂದು ಹೆಸರು. ಮೂಗಿನ

ಮುಂಭಾಗವನ್ನಿಟ್ಟುಕೊಂಡರೆ ಕಣ್ಣನ್ನು ಅರೆಮುಚ್ಚಿದಂತಾಗುತ್ತದೆ. ಇದಕ್ಕೆ ಪ್ರತಿಪದ್ದೃಷ್ಟಿಯೆಂದು ಹೆಸರು. ಮೂಗಿನ ತುದಿಯನ್ನು ನಿರ್ಣಯಿಸುವ ಗಡಿಬಿಡಿಯಲ್ಲಿ ವಿಶಿಷ್ಟಾದ್ವೈತಿಗಳಲ್ಲಿ ತೆಂಗಲೆ, ವಡಗಲೆ–ಎಂಬೆರಡು ಭಾಗಗಳೇ ಆಗಿಬಿಟ್ಟವೆ. ಒಬ್ಬರು ಹುಬ್ಬಿನ ನಡುವಣ ತುದಿಯನ್ನು ಹಿಡಿಯುತ್ತಾರೆ; ಇನ್ನೊಬ್ಬರು ಮುಂಭಾಗವನ್ನು ಗೌರವಿಸುತ್ತಾರೆ. ನಾವು ಈ ಗೊಂದಲದಲ್ಲಿ ಬೀಳಬೇಕಾದ್ದಿಲ್ಲ. ಮೂಗಿನ ಯಾವ ತುದಿಯನ್ನಾದರೂ ಇಟ್ಟುಕೊಳ್ಳಬಹುದು. ಅಥವಾ ಕಣ್ಣುಗಳನ್ನು ಮುಚ್ಚಿಕೊಂಡರೂ ಆಗಬಹುದು. ಅದಕ್ಕೆ ಅಮಾದೃಷ್ಟಿ ಎನ್ನುತ್ತಾರೆ. ಈ ಸ್ಥಿತಿಯಲ್ಲಿ ಮನುಷ್ಯನಿಗೆ ನಿದ್ರೆಯು ಸ್ವಾಮೀಲೇರಿ ಬರುವದೊಂದಪಾಯವಿದೆ. ಮುಖ್ಯತಾತ್ಪರ್ಯವೇನೆಂದರೆ ಅತ್ತಿತ್ತ ನೋಡಬಾರದು. ದೃಷ್ಟಿಗಳ ಮೂಲಕ ಮನಸ್ಸನ್ನು ವಿಷಯಗಳ ಕಡೆಗೆ ಹರಿಯಗೊಡಬಾರದು.

ಆಸನದ ವಿಷಯದಲ್ಲಿ ಯೋಗರತ್ನಾಕರದಕಾರರ ಅಭಿಪ್ರಾಯವೇನೆಂದರೆ—

“ ಮನಮಿರೆ ಸೂಸಕೊಳ್ಳಣ್ಗಳ ।
ಮನಮುಂ ನಾಸಾಗ್ರದಲ್ಲಿ ಕಿವಿ ಕೇಳ್ವೆನಲ್ ॥
ತನು ಕೂಸಿಯುವ ನಟ್ಯಂತಿರ ।
ಶಿನಸು ನಿಂದಂದು ಸಮಯೋಗವದಕ್ಕುಂ ॥ ”

ಮನಸ್ಸನ್ನು ಗೆಲ್ಲುವ ಯತ್ನವನ್ನು ಮಾಡಿದವನು ಅದರ ಮೇಲೆ ಸಾಕ್ಷಾತ್ತಾಗಿ ಕೈಮಾಡುವದಕ್ಕೆ ಮುಂಚೆ ಅದರ ಬಹಿರಂಗದ ಮೇಲೆ ತನ್ನ ಅಧಿಕಾರವನ್ನು ಸಾಧಿಸಬೇಕು. ಪ್ರಾಣವಾಯು ಮತ್ತು ಸ್ಥೂಲ ಶರೀರ- ಇವೆರಡೂ ಮನಸ್ಸಿನ ಬಹಿರಂಗಗಳು. “ಅಟ್ಟಕ್ಕೆ ಹಾರಲಾರದವನು ಬೆಟ್ಟಕ್ಕೆ ಹಾರ್‍ಯಾನೆ?” ಎಂಬ ಗಾದೆಯಂತೆ ಈ ಹೊರಗಣ ಅಂಗಗಳನ್ನೆ ವಶಮಾಡಿಕೊಳ್ಳಲಾರದವನು ಒಳಗಣ ಮನಸ್ಸಿನ ಮೇಲೆ ಕೈಮಾಡಲಾದೀತೆ? ಹೊರಗಣ ಕಾವಲಿಗರನ್ನು ವಶಮಾಡಿಕೊಳ್ಳದೆ ಒಳಗಣ ಅರಸನನ್ನು ಹಿಡಿಯುವದೆಂತು? ಆದ್ದರಿಂದ ಮನಸ್ಸನ್ನು ಗೆಲ್ಲಬೇಕೆನ್ನುವವನು ಅದರ ಬಹಿರಂಗಗಳಾದ ಪ್ರಾಣವಾಯು ಮತ್ತು ಸ್ಥೂಲ ಶರೀರ– ಈ ಎರಡನ್ನೂ ಹಿಡಿತಕ್ಕೆ ಸಿಕ್ಕಿಸಿಕೊಳ್ಳಬೇಕು. ಇವೆರಡರ

ಲ್ಲಿಯೂ ಸ್ಥೂಲಶರೀರವು ಬಹಳ ಹೊರಗಿನದು. ಆದ್ದರಿಂದ ಅದನ್ನು ನಮ್ಮ ಅಧೀನವಾಗಿ ಮಾಡಿಕೊಳ್ಳುವದು ಹೆಚ್ಚು ಅಗತ್ಯವು. ಸಾಮಾನ್ಯವಾಗಿ ಶರೀರಸ್ಥಿತಿಯ ಪರಿಣಾಮವು ಮನಸ್ಸಿನ ಮೇಲೆ ಆಗುವದು ಹೆಚ್ಚು. ಶರೀರವು ಆರೋಗ್ಯದಲ್ಲಿದ್ದರೆ ಮನಸ್ಸು ಶಾಂತವಾಗಿರುವದು. ಶರೀರಕ್ಕೇನಾದರೂ ರೋಗವು ತಗುಲಿದರೆ ಒಡನೆ ಮನಸ್ಸು ತಳಮಳಿಸಿ ಚಲಿಸುವದು. ಆದ್ದರಿಂದ ಮನಸ್ಸು ಸ್ವಸ್ಥವಾಗಿರುವದಕ್ಕಾಗಿ ಶರೀರವು ಕದಲದಂತೆ ಇರುವದು ಸಹಾಯವಾಗುವದು.

"ಶರೀರಮಾದ್ಯಂ ಖಲು ಧರ್ಮಸಾಧನಮ್"

ಎಂಬ ವಾಕ್ಯದಂತೆ ಧರ್ಮವನ್ನು ಹುಟ್ಟಿಸಿಕೊಳ್ಳುವದಕ್ಕೆ ಶರೀರವು ಮೊದಲನೇ ಸಾಧನವು.

## ಪ್ರಾಣಾಯಾಮ.

ಶ್ವಾಸಕ್ಕೂ ಚಿತ್ತಕ್ಕೂ ಸಂಬಂಧವಿರುವದೆಂದು ಹಿಂದೆ ಹೇಳಿದೆಯಷ್ಟೆ. ಚಿತ್ತದ ಚಲನೆಯು ಶ್ವಾಸದ ಚಲನೆಯನ್ನು ಬಹುಮಟ್ಟಿಗೆ ಅವಲಂಬಿಸಿಕೊಂಡಿರುವದು. ಸಾಮಾನ್ಯವಾಗಿ ನಮ್ಮ ಶ್ವಾಸವು ಅಶಿಕ್ಷಿತರೀತಿಯಿಂದ ಓಡಾಡುತ್ತಿರುವದರಿಂದ ನಮ್ಮ ಚಿತ್ತವೂ ಅಶಿಕ್ಷಿತವಾಗಿ ಹರಿದಾಡುತ್ತಿರುವದು. ಚಿತ್ತದ ಆ ದೋಷವನ್ನು ತಪ್ಪಿಸುವದಕ್ಕಾಗಿ ನಾವು ಶ್ವಾಸದ ಚಲನೆಯನ್ನು ಒಂದು ಕ್ರಮಕ್ಕೆ ತರುವದು ಒಳ್ಳೇ ಉಪಾಯ. ಪ್ರಾಣಾಯಾಮದ ವಿಷಯವನ್ನು ಭಗವದ್ಗೀತೆಯು—

"ಪ್ರಾಣಾಪಾನಗತೀ ರುದ್ಧ್ವಾ ನಾಸಾಭ್ಯಂತರಚಾರಿಣೌ"

ಎಂಬ ಮಾತಿನಿಂದ ಹೇಳಿದೆ. ಮೂಗಿನ ಹೊಳ್ಳೆಗಳಲ್ಲಿ ಓಡಾಡುತ್ತಿರುವಂಥ ಪ್ರಾಣಾಪಾನಗಳ ಚಲನೆಯನ್ನು ತಡೆಯಬೇಕೆಂದರ್ಥ. ಪ್ರಾಣವೆಂದರೆ ಮೇಲಕ್ಕೆ ಏರಿ ಹೋಗುವ ಗಾಳಿ. ಅಪಾನವೆಂದರೆ, ಕೆಳಕ್ಕೆ ಇಳಿದು ಬರುವ ಗಾಳಿ. ಇವುಗಳ ಚಲನೆಯನ್ನು ತಡೆಯುವ ವಿಚಾರವನ್ನು ಶ್ರೀವಿವೇಕಾನಂದರ ರಾಜಯೋಗದಿಂದ ಸಂಗ್ರಹಿಸಿ ಇಲ್ಲಿಡುವೆನು.

"ಮೊದಲನೆಯ ಸಾಧನವೇನೆಂದರೆ ಒಂದೇ ಅಳತೆಯಿಂದ ಹೊರಕ್ಕೂ ಒಳಕ್ಕೂ ಉಸಿರು ಬಿಡುವದನ್ನೂ ತೆಗೆದುಕೊಳ್ಳುವದನ್ನೂ ಮಾಡಬೇಕು.

ಇದರಿಂದ ಶರೀರದ ವ್ಯಾಪಾರವೆಲ್ಲಾ ಒಂದು ಕ್ರಮಕ್ಕೆ ಬರುವದು. ಹೀಗೆ ಕೆಲವು ದಿನ ಮಾಡಿ ಆದಮೇಲೆ ಇದಕ್ಕೆ ಓಂಕಾರವನ್ನಾಗಲಿ ಅಥವಾ ಪವಿತ್ರವಾದ ಬೀಜಮಂತ್ರವನ್ನಾಗಲಿ ಕೂಡಿಸಿಕೊಳ್ಳುವದುತ್ತಮ. ಆ ಮಂತ್ರವು ಉಸಿರಿಗೆ ಸೇರಿಕೊಂಡು ಒಳಕ್ಕೂ ಹೊರಕ್ಕೂ ಒಂದೇಸಮ ವಾಗಿ ತಾಳಹಾಕಿದಂತೆ ಹೋಗಿಬಂದರೆ ಶರೀರವೆಲ್ಲ ಹೊಂದಿಕೆಯಾಗು ವದು. ಆಗ ವಿಶ್ರಾಂತಿಯೆಂದರೇನೆಂಬುದು ನಿಮಗೆ ಗೊತ್ತಾಗುವದು. ಇದಕ್ಕೆ ಹೋಲಿಸಿದರೆ ನಿದ್ರೆ ಕೂಡ ವಿಶ್ರಾಂತಿಯಾಗಲಾರದು. ಈ ವಿಶ್ರಾಂತಿಯು ಒಂದುಸಲ ಸಿಕ್ಕಿದರೆ ಸಾಕು. ನರಗಳು ಎಷ್ಟೇ ಸೋತಿರಲಿ; ಸಮಾಧಾನವನ್ನು ಹೊಂದುವವು. ಆಗ ನಿಮಗೆ ಇದಕ್ಕಿಂತ ಮುಂಚೆ ನಿಜವಾದ ವಿಶ್ರಾಂತಿಯೇ ಸಿಕ್ಕಿರಲಿಲ್ಲವೆಂದು ಗೊತ್ತಾಗುವದು.

"ಈ ಅಭ್ಯಾಸದಿಂದ ಆಗುವ ಮೊದಲನೆಯ ಫಲವೇನೆಂದರೆ ಮುಖಭಾವವು ಬೇರೆ ಆಗುವದು. ಮುಖದ ಮೇಲಿನ ಸುಕ್ಕುಗಳೆಲ್ಲ ಮಾಯವಾಗುವವು. ಶಾಂತವಿಚಾರವು ಬಂದ ಕೂಡಲೆ ಮುಖದ ಮೇಲೆಯೂ ಶಾಂತಿ ಕಾಣುವದು. ಆಮೇಲೆ ಸುಸ್ವರವು ಉದಿಸುವದು. ನಾನು ಇದುವರೆಗೆ ಒಡಕಲು ಧ್ವನಿಯುಳ್ಳ ಯೋಗಿಯನ್ನು ಕಂಡಿಲ್ಲ. ಕೆಲವು ತಿಂಗಳು ಅಭ್ಯಾಸಮಾಡುವದರಲ್ಲಿ ಈ ಗುರುತುಗಳು ಕಾಣುವವು. ಮೇಲೆ ಹೇಳಿದ ಶ್ವಾಸದ ಕ್ರಮವನ್ನು ಕೆಲವು ದಿನ ಅಭ್ಯಾಸಮಾಡಿದ ಬಳಿಕ ಇದಕ್ಕಿಂತ ಉತ್ತಮವಾದ ಅಭ್ಯಾಸವನ್ನು ಪ್ರಾರಂಭಿಸಬೇಕು. ಬಲದ ಮೂಗಿನ ಹೊಳ್ಳೆಯನ್ನು ಹೆಬ್ಬೆಟ್ಟಿನಿಂದ ಮುಚ್ಚಿಕೊಂಡು ಮೆಲ್ಲಗೆ ಎಡಗಡೆಯಿಂದ ಉಸಿರನ್ನು ಎಳೆದುಕೊಳ್ಳಬೇಕು. ಆಮೇಲೆ ಎರಡು ಹೊಳ್ಳೆಗಳನ್ನೂ ಹೆಬ್ಬೆಟ್ಟು ತರ್ಜನಿ- ಇವುಗಳಿಂದ ಮುಚ್ಚಿಕೊಂಡು ಆ ಪ್ರಾಣವನ್ನು ಸುಷುಮ್ನೆಯೊಳಕ್ಕೆ ಹೋಗಿ ತಗಲುವಂತೆ ಕಳುಹಿಸುತ್ತಿದ್ದೇನೆಂದು ಭಾವಿಸಬೇಕು. ಆಮೇಲೆ ಹೆಬ್ಬೆಟ್ಟನ್ನು ತೆಗೆದು ಬಲದ ಹೊಳ್ಳೆಯಿಂದ ಉಸಿರನ್ನು ಹೊರಕ್ಕೆ ಬಿಡಬೇಕು. ಆಮೇಲೆ ಎಡಗಡೆಯ ಹೊಳ್ಳೆಯನ್ನು ತರ್ಜನಿಯಿಂದ ಮುಚ್ಚಿಕೊಂಡಿರುವದನ್ನು ಹಾಗೆಯೇ ಇಟ್ಟುಕೊಂಡಿದ್ದು ಅದೇ ಬಲಗಡೆಯ ಹೊಳ್ಳೆಯಿಂದಲೇ ನಿಧಾನವಾಗಿ ಉಸಿರನ್ನು ಎಳೆದುಕೊಳ್ಳಬೇಕು. ನಾಲ್ಕು ಸೆಕೆಂಡುಗಳ ಕಾಲ ಎಳೆದುಕೊಂಡು ಹದಿನಾರು ಸೆಕೆಂಡುಗಳ

ಕಾಲ ಹಿಡಿದುಕೊಂಡಿದ್ದು ಎಂಟು ಸೆಕೆಂಡುಗಳ ಕಾಲ ಬಿಡುವದನ್ನು ಆರಂಭಿಸಬಹುದು. ಇನ್ನೊಂದು ಕ್ರಮವೇನೆಂದರೆ ಮೆಲ್ಲಗೆ ಉಸಿರನ್ನು ಒಳಗೆ ಎಳೆದುಕೊಂಡು ಆಮೇಲೆ ಅದನ್ನು ಮೆಲ್ಲಗೆ ಹೊರಕ್ಕೆ ಬಿಟ್ಟು ಹಾಗೆಯೇ ಹೊರಗೇ ನಿಲ್ಲಿಸಬೇಕು. ಇಲ್ಲಿಯೂ ಮೇಲೆ ಹೇಳಿದಷ್ಟು ಸಂಖ್ಯೆಯ ಕಾಲವನ್ನೇ ಉಪಯೋಗಿಸಬೇಕು. ”

ಈ ರೀತಿಯಲ್ಲಿ ಪ್ರಾಣಾಯಾಮವನ್ನು ಮಾಡುವಾಗಲೆಲ್ಲಾ ಯಾವ ಹಾದರೊಂದು ಮಂತ್ರವನ್ನು ಶ್ವಾಸಕ್ಕೆ ಸೇರಿಸಿಕೊಂಡಿರುವದುತ್ತಮ. ಅದು ಶ್ವಾಸದ ಚಲನೆಯನ್ನು ಒಂದು ಹಿಡಿತಕ್ಕೆ ತರುವದಲ್ಲದೆ ತನ್ನ ಪವಿತ್ರತೆಯ ಪ್ರಭಾವದಿಂದ ಯೋಗದ ವಿಘ್ನಗಳನ್ನೆಲ್ಲಾ ಪರಿಹರಿಸಿ ಯೋಗವನ್ನು ಸುಸೂತ್ರವಾಗಿ ನಾಗಿಸುವದು. ಶ್ವಾಸವನ್ನು ಎಳೆದುಕೊಳ್ಳುವ, ನಿಲ್ಲಿಸಿಕೊಳ್ಳುವ ಮತ್ತು ಬಿಡುವ ಕಾಲವನ್ನು ಗೊತ್ತುಮಾಡಿಕೊಳ್ಳುವದಕ್ಕನುಕೂಲವಾಗಿ ಈ ಮಂತ್ರದ ಸಂಖ್ಯೆಯನ್ನು ಎಣಿಸಿಕೊಳ್ಳಬಹುದು. ಈ ರೀತಿಯಲ್ಲಿ ದಿನಕ್ಕೆ ೩-೪ ಸಲವಾದರೂ ಮಾಡಬೇಕು. ಪ್ರಾತಃಕಾಲವೂ ಸಾಯಂಕಾಲವೂ ಇದಕ್ಕೆ ಬಹು ಪ್ರಶಸ್ತವು.

ಹೀಗೆ ಅಭ್ಯಾಸವನ್ನು ಮಾಡುತ್ತ ಹೋದರೆ ಸಾಮಾನ್ಯವಾಗಿ ನಾವು ಉಸಿರುಬಿಡುವದರ ಉದ್ದವು ಕಡಿಮೆಯಾಗುವದು. ಉಸಿರು ಹೊರ ಬೀಳುವ ಉದ್ದದ ಪ್ರಮಾಣಕ್ಕೆ ಅನುಗುಣವಾಗಿ ಮನಸ್ಸು ದೂರಕ್ಕೆ ಹರಿಯುವದೆಂದು ಗೊತ್ತಾಗಿದೆ. ಪ್ರಾಣಾಯಾಮದಿಂದ ನಿಃಶ್ವಾಸದ ಉದ್ದವು ಕಡಿಮೆಯಾಗುತ್ತ ಆಗುತ್ತ ಕೊನೆಗೆ ಏನೂ ಇಲ್ಲದಷ್ಟು ಕೂಡ ಆಗುವದುಂಟು. ಈ ಉಸಿರಿನ ಉದ್ದವು ಕಡಿಮೆಯಾದಹಾಗೆಲ್ಲಾ ಮನುಷ್ಯನಿಗೆ ಬಗೆಬಗೆಯ ಸಿದ್ಧಿಗಳು ಬರುವವು. ಈ ರೀತಿಯಲ್ಲಿ ತನ್ನ ಉಸಿರನ್ನು ತಾನು ಬಿಗಿಹಿಡಿದರೂ ಇದರಿಂದ ಹೊರಗಣ ಜಗತ್ತಿನ ಉಸಿರನ್ನೇ ಹಿಡಿದಷ್ಟು ಆದರ ಪರಿಣಾಮವಾಗುವದೆಂದು ಶಾಸ್ತ್ರಕಾರರು ಹೇಳುತ್ತಾರೆ. ಧ್ರುವನು ತನ್ನ ಉಸಿರನ್ನು ಬಿಗಿಹಿಡಿಯುತ್ತಲೇ ದೇವತೆಗಳ ಉಸಿರೆಲ್ಲಾ ಕಟ್ಟಿದಂತಾಗಿ ಅವರೆಲ್ಲರೂ ಮಹಾವಿಷ್ಣುವನ್ನು ಪ್ರಾರ್ಥಿಸಿದರೆಂತಲೂ ಆಗ ಮಹಾವಿಷ್ಣು ಧ್ರುವನಿಗೆ ಪ್ರತ್ಯಕ್ಷನಾಗಿ ದೇವತೆಗಳಿಗೆ ಬಂದಿದ್ದ ಕಷ್ಟವನ್ನು ತಪ್ಪಿಸಿದನೆಂತಲೂ ಭಾಗವತವು ಹೇಳುತ್ತದೆ.

ಪ್ರಾಣಾಯಾಮದ ಮೂಲಕ ಪ್ರಾಣಶಕ್ತಿಯನ್ನು ಒಂದು ಕಟ್ಟಿನಲ್ಲಿಟ್ಟರೆ ಇಂದ್ರಿಯಗಳು ತಾವಾಗಿಯೇ ಹೇಳಿದ ಹಾಗೆ ಕೇಳುವವು. ಇಂದ್ರಿಯಗಳೆಲ್ಲಾ ಪ್ರಾಣಶಕ್ತಿಗಧೀನವೆಂಬುದಕ್ಕೆ ಉಪನಿಷತ್ತಿನಲ್ಲಿ ಒಂದು ಕಥೆ ಬಂದಿದೆ. ಇಂದ್ರಿಯಗಳಿಗೂ ಪ್ರಾಣಕ್ಕೂ ಜಗಳವುಂಟಾಯಿತು. ಹೊರಗೆ ಹೋಗಿ ಹರಿದಾಡಿ ಸುಖವನ್ನು ತಂದುಕೊಡುವ ತಮ್ಮ ಸಾಮರ್ಥ್ಯವೇ ಹೆಚ್ಚೆಂದು ಇಂದ್ರಿಯಗಳು ಪ್ರತಿಯೊಂದೂ ಒಳ್ಳೇ ಆವೇಶಯುಕ್ತವಾದ ಭಾಷಣವನ್ನು ಮಾಡಿದವು. ಆಗ ಪ್ರಾಣಶಕ್ತಿಯು ಅವುಗಳಿಗೆ ತಕ್ಕ ಬುದ್ಧಿಯನ್ನು ಕಲಿಸಬೇಕೆಂದು ಮೆಲ್ಲಗೆ ತಾನು ದೇಹವನ್ನು ಬಿಟ್ಟು ಹೊರಡುವ ಚಿಹ್ನೆಯನ್ನು ತೋರಿಸಿತು. ಒಡನೆ ಇಂದ್ರಿಯಗಳ ಕೈಕಾಲೆಲ್ಲಾ ಸೋರಗಲು ಆಗ ಅವೆಲ್ಲವೂ ಕೂಡಿ ಪ್ರಾಣಶಕ್ತಿಯ ಸಾಮರ್ಥ್ಯವೇ ಹೆಚ್ಚೆಂದು ಒಪ್ಪಿಕೊಂಡವಂತೆ. ಇದಲ್ಲದೆ ಇಂದ್ರಿಯಗಳು ಎಚ್ಚರದಲ್ಲಿ ಮತ್ತು ಕನಸಿನಲ್ಲಿ ಮಾತ್ರ ಕೆಲಸವನ್ನು ಮಾಡುವವು. ಪ್ರಾಣವು ನಿದ್ರಾಕಾಲದಲ್ಲಿ ಕೂಡ ಸುಳಿದಾಡುತ್ತಲೇ ಇದ್ದು ದಣಿಯದೆ ಇರುವದು. ಆದ್ದರಿಂದ ಪ್ರಾಣದ ಪ್ರಾಶಸ್ತ್ಯಕ್ಕೆ ಎರಡನೆಯ ಮಾತೇ ಇಲ್ಲ. ಮೂಸಿಯಲ್ಲಿಟ್ಟು ಕಾಸಿದ ಚಿನ್ನದಂತೆ ಪ್ರಾಣಾಯಾಮದಿಂದ ಇಂದ್ರಿಯಗಳ ದೋಷಗಳೆಲ್ಲಾ ನಿವಾರಣೆಯಾಗುವವು.

ಪ್ರಾಣಾಯಾಮಮಾರ್ಗವು ಕಠಿನವಾದರೂ ಇದನ್ನು ಮಾಡುತ್ತ ಮಾಡುತ್ತ ಕೆಲವು ಆಶ್ಚರ್ಯಕರವಾದ ನೋಟಗಳ ದರ್ಶನವಾಗಿ ಈ ಮಾರ್ಗದಲ್ಲಿ ಮುಂದುವರಿಯುವದಕ್ಕೆ ಮತ್ತಷ್ಟು ಉತ್ತೇಜನವು ಸಿಕ್ಕುವದು. ಅಂಥ ದರ್ಶನಗಳೇನೆಂಬುದಕ್ಕೆ ಒಳ್ಳೇ ಅನುಭವಿಗಳಾದ ಶ್ರೀಸರ್ಪಭೂಷಣಶಿವಯೋಗಿಗಳ ಒಂದು ಪದವನ್ನು ಇಲ್ಲಿ ಉದಾಹರಿಸುತ್ತೇನೆ.

ರಾಗ — ಭೈರವಿ.

ಕೇಳಿ ಕಾಲಜ್ಞಾನವ । ಯತಿಗಳಿರ । ಪೇಳುತಿರ್ಪೆ ಲೋಕಕೆ ।
ಲೀಲೆಯಿಂ ಗುರುಸಿದ್ಧನು । ಯೋಗಮಾರ್ಗ । ಭಾಳದೊಳಿದ್ಯಗಳಪ್ಪುವು ॥ ಪ ॥
ಉತ್ತರದ ಗಾಳಿ ತೀರೆ । ಬದರೆದ್ದು । ಸತ್ತಿದ್ದ ರಕ್ತೋರಗ ॥
ಹುತ್ತದಿಂ ಮೇಲಕೆದ್ದು । ಪೆವೆಯುಂಡ । ನೆತ್ತಿ ಗಗನಕೆ ನಡೆವುದು ॥೧॥

ಶಶಿರವಿಗಳೊಂದುಗೂಡಿ । ಹಿಂದಿರುಗಿ । ಸೆಳೆದು ಪೂರ್ವದಿ ಮುಳುಗಲು ॥
ಬಿಸಿಲುಬೆಳದಿಂಗಳುಳ್ಳ । ಕೆಮ್ಮುಗಿಲು । ಪೊಸಪಾಲ್ಸರಿಯು ಕರೆವುದು ॥೨॥
ನೀಲಗಿರಿಯೊಳಗಾಡುವ । ಶಿಖಿಗಳೆರ । ಮೇಳಿಂಗಿಸಲು ಘೋಷಿಯುಂ ॥
ಧಾತ್ರಿಸುತಪದರ್ಗಿರಿಗಳು । ನಕ್ಷತ್ರ । ಮಾತಿಪಗಹೊಲ್ ತೋರ್ಪುದು ॥೩॥
ಮೂರುಬಣ್ಣದ ಮರ್ಕಟ । ಸ್ವದೂರ । ಹಾರಿ ಸುರಪುರವ ಪೊಗಲು ॥
ಮೇರುವಿನ ಮೇಲೆ ರಂಜಿ । ಧ್ವನಿಸಹಿತ ಘೇಂ ಘಂಘಣ ನುಡಿವುದು ॥೪॥
ಕಮಗಂಗವೇರದಿರದೆ । ಜಜ್ಜ ಮುನಿ । ನಮದು ಕುಂತಲದೇಶಕೆ ।
ಪಡುವಲಪ ಗುಡಿಯು ಮೊಕ್ಕ್ಯ । ಅಲ್ಲಿರ್ಪ । ಮೃಡನೆ ಗುರುಸಿದ್ಧನಪ್ಪಂ ॥೫॥

ಈ ಅನುಭವಗಳು ಆ ಶಿವಯೋಗಿಗೆ ಸಿಗೊಬ್ಬರಿಗಾಯಿತೆಂದಲ್ಲ. ಯೋಗಾಭ್ಯಾಸವನ್ನು ಮಾಡುವವರಿಗೆ ಇದರಂತೆಯೇ ಆಗಿಯೇ ಆಗುವದು. ಈ ಸಂಚಿಕೆಯಿಂದಲೇ ಅವರು ಕಾಲಜ್ಞಾನವನ್ನು ಹೇಳುತ್ತೇನೆಂದು ಆರಂಭಿಸಿದ್ದಾರೆ. ಕಾಲಜ್ಞಾನವೆಂದರೆ ಮುಂದಿನ ಕಾಲದಲ್ಲಿ ಆಗುವ ಸಂಗತಿಗಳ ಜ್ಞಾನವೆಂದರ್ಥ. ಈ ಪದದಲ್ಲಿ ಆ ಶಿವಯೋಗಿಗಳು ಯೋಗಮಾರ್ಗದಲ್ಲಿ ಯೋಗಿಗೆ ಕಾಣುವ ಆಶ್ಚರ್ಯಗಳನ್ನು ಹೇಳುತ್ತಾರೆ. ಇದು ಕನ್ನಡವಾದರೂ ವಿಷಯವು ಸಾಮಾನ್ಯರಿಗೆ ಬಗೆಹರಿಸಂತೆ ಕಾಣುತ್ತಿರುವದರಿಂದ ಇಲ್ಲಿ ನನಗೆ ತಿಳಿದ ಮಟ್ಟಿಗೆ ಅದನ್ನು ವಿವರಿಸುತ್ತೇನೆ. ಮೊದಲನೇ ನುಡಿಯ ತಾತ್ಪರ್ಯವೇನೆಂದರೆ— ಬೆನ್ನುಹುರಿಯ ಕೆಳಗಡೆ ಕುಂಡಲಿನಿ ಎಂಬ ಶಕ್ತಿಯು ಸುತ್ತಿರುವ ಕೆಂಪಾದ ಹಾವಿನ ಹಾಗೆ ಮಂಡಲವನ್ನು ಹಾಕಿಕೊಂಡು ಕೆಳಗಡೆಗೆ ಮುಖವಾಗಿ ಬಿದ್ದಿರುವದು. ನಾವು ಎಡಗಡೆಯ ಮೂಗಿನಿಂದ ಶ್ವಾಸವನ್ನು ಹಿಡಿಸಿ ಈ ಕುಂಡಲಿನಿಗೆ ಬಡಿಯುವಂತೆ ಬಲವಾಗಿ ತಾಕಿಸಿದರೆ ಆ ಕುಂಡಲಿನಿಯು ಆಗ ಹೆದರಿ ಎದ್ದು ಸುಷುಮ್ನೆಯೆಂಬ ನಾಡಿಯಿಂದ ಮೇಲುಗಡೆಗೆ ಎರಡು ಹೆಡೆಗಳನ್ನೂ ಎತ್ತಿಕೊಂಡು ಹರಿಯುವದು.

ಇಷ್ಟೇ ಆ ನುಡಿಯ ತಾತ್ಪರ್ಯವಾದರೂ ಇಲ್ಲಿ ಆ ಕುಂಡಲಿನಿಯ ವಿಷಯವಾಗಿ ಕೆಲವು ಸಂಗತಿಗಳನ್ನು ಹೇಳುವದು ಅವಶ್ಯಕವಾಗಿದೆ. ಈ ಕುಂಡಲಿನಿ ಎಂಬ ಶಕ್ತಿಯನ್ನು ಎಬ್ಬಿಸುವದೇ ಪ್ರಾಣಾಯಾಮದ ಉದ್ದೇಶ. ಕುಂಡಲಿನಿಯು ಎದ್ದು ಸುಷುಮ್ನೆಯ ದ್ವಾರವನ್ನು ಹೊಗುತ್ತಲೆ ಆ

ಯೋಗಿಗೆ ಮತ್ತೊಬ್ಬರ ಆಲೋಚನೆಗಳೂ ಮತ್ತು ಅತೀಂದ್ರಿಯವಿಚಾರಗಳೂ ತಿಳಿಯಲಾರಂಭಿಸುವವು. ಆ ದ್ವಾರವು ಮೆದುಳಿಗೆ ಹೋಗಿ ಸೇರುವ ಕಡೆಯನ್ನು ಆ ಕುಂಡಲಿನಿಯು ಸೇರುತ್ತಲೇ ಯೋಗಿಗೆ ನಿರ್ವಿಷಯಜ್ಞಾನವಾಗುತ್ತದೆ. ಸಾಮಾನ್ಯವಾಗಿ ಎಲ್ಲರಿಗೂ ಸುಷುಮ್ನೆಯ ದ್ವಾರವು ಕೆಳಗಡೆ ಮುಚ್ಚಿಕೊಂಡಿರುವದು. ಯೋಗಿಯು ತನ್ನ ಅಭ್ಯಾಸದಿಂದ ಅದನ್ನು ತೆರೆದು ನರದ ವೃತ್ತಿಪ್ರವಾಹಗಳನ್ನು ಅದರ ಮೂಲಕವಾಗಿ ಸಾಗುವಂತೆ ಮಾಡುತ್ತಾನೆ. ಕುಂಡಲಿನಿಯು ಸರ್ವಸಂಸ್ಕಾರ ಶಕ್ತಿಯು. ಸಾಮಾನ್ಯವಾಗಿ ಒಂದೇ ವಸ್ತುವನ್ನು ಬಹಳ ವಿಚಾರ ಮಾಡಿದರೂ ಕುಂಡಲಿನಿಯು ಏಳುವದರಿಂದ ಬೇರೆಬೇರೆ ಕಲ್ಪನೆಗಳು ಹುಟ್ಟುವವು. ಆದರೆ ಬಹುಕಾಲ ಅಂತರ್ಧ್ಯಾನ ಮಾಡಿದ ಬಲದಿಂದ ಅದು ಸುಷುಮ್ನಾದ್ವಾರದಿಂದ ಹೊರಟು ಬೇರೆ ಬೇರೆ ಸ್ಥಾನಗಳನ್ನು ಮುಟ್ಟುವದರಿಂದ ಆಗುವ ಪ್ರತಿಫಲವು ಬಹಳ ಉತ್ಕೃಷ್ಟವಾಗಿ ಅತೀಂದ್ರಿಯಜ್ಞಾನವೆನಿಸುವದು. ಈ ಕುಂಡಲಿನಿಯ ಉತ್ಥಾಪನೆಯು ಪರಮೇಶ್ವರಭಕ್ತಿಯಿಂದಲಾಗಲಿ ಮಹಾತ್ಮರ ಅನುಗ್ರಹದಿಂದಲಾಗಲಿ ವೇದಾಂತದ ವಿಚಾರದಿಂದ ಸಂಸ್ಕೃತವಾದ ಬುದ್ಧಿಯಿಂದಲಾಗಲಿ ಆಗುವದು. ಎಲ್ಲೆಲ್ಲಿ ಶಕ್ತಿಯಲ್ಲಾಗಲಿ ಬುದ್ಧಿಯಲ್ಲಾಗಲಿ ಅಮಾನುಷಮಹತ್ತು ಕಂಡು ಬರುವದೊ ಅಲ್ಲೆಲ್ಲಿ ಸ್ವಲ್ಪವಾದರೂ ಕುಂಡಲಿನಿಯು ಸುಷುಮ್ನೆಯ ದ್ವಾರವನ್ನು ಪ್ರವೇಶಿಸಿರಲೇಬೇಕು. ಕುಂಡಲಿನಿಯು ಯಾವ ಶಕ್ತಿಯನ್ನೂ ಹೊಸದಾಗಿ ಹುಟ್ಟಿಸುವದಿಲ್ಲ. ಅದರ ಇರುವಿಕೆಗೆ ಆಧಾರವಾಗಿರುವ ಮೂಲಾಧಾರವೆಂಬ ಸ್ಥಾನದಲ್ಲಿ (ಶರೀರಶಾಸ್ತ್ರದವರು ಹೇಳುವ ಅಧೋಮಂಡಲಸ್ಥಾನದಲ್ಲಿ) ಶಕ್ತಿಗಳೆಲ್ಲಾ ಅಡಗಿರುತ್ತವೆ. ಕುಂಡಲಿನಿಯು ಅವುಗಳನ್ನೆಲ್ಲಾ ಎಬ್ಬಿಸಿ ಮೆದುಳಿನಲ್ಲಿರುವ ಸಹಸ್ರಾರವೆಂಬ ಸ್ಥಾನಕ್ಕೆ ಮುಟ್ಟಿಸಿ ಫಲಕಾರಿಗಳನ್ನಾಗಿ ಮಾಡುತ್ತದೆ. ಮನುಷ್ಯಶರೀರದಲ್ಲಿರುವ ಶಕ್ತಿಗಳಲ್ಲೆಲ್ಲ ಓಜಸ್ಸೆಂಬುದೇ ಶ್ರೇಷ್ಠವೆಂದು ಯೋಗಿಗಳು ಹೇಳುವರು. ಮನುಷ್ಯನು ತನ್ನ ತಲೆಯಲ್ಲಿ ಎಷ್ಟು ಓಜಸ್ಸಿದ್ದರೆ ಅಷ್ಟು ಶಕ್ತನಾಗಿಯೂ ಅಷ್ಟು ಬುದ್ಧಿವಂತನಾಗಿಯೂ ಅಷ್ಟು ಧರ್ಮಾತ್ಮನಾಗಿಯೂ ಇರುವನು. ಒಬ್ಬೊಬ್ಬರಿಗೆ ಅಷ್ಟು ಚೆನ್ನಾಗಿ ಮಾತಾಡುವದಕ್ಕೆ ಕೂಡ ಬರದೆ ಇದ್ದರೂ ಜನರು ಅವರ ಮಾತಿಗೆ ಬೆರ

ಗಾಗುತ್ತ ಅವರ ಹಿಂದೆ ಓಡಾಡುವದುಂಟಷ್ಟೆ. ಇದು ಅವರ ಓಜಸ್ಸಿನ ಶಕ್ತಿಯು. ಸ್ತ್ರೀಪುರುಷರ ಯೋಜನೆ ಬಂದಾಗ ವೀರ್ಯದ ರೂಪವಾಗುವ ಮನುಷ್ಯನ ಶಕ್ತಿಯನ್ನು ತಡೆದು ವಶದಲ್ಲಿಟ್ಟುಕೊಂಡರೆ ಅದೇ ಓಜಸ್ಸಾಗಿ ಪರಿಣಮಿಸುವದು. ಆದ್ದರಿಂದ ಯೋಗಿಯು ಜನನೇಂದ್ರಿಯದ ಶಕ್ತಿಯನ್ನೆಲ್ಲ ಓಜಸ್ಸಾಗಿ ಮಾಡಿಕೊಳ್ಳುವದಕ್ಕೆ ಪ್ರಯತ್ನಿಸುತ್ತಿರುವನು. ಯಾವನು ಬ್ರಹ್ಮಚಾರಿಯಾಗಿರುವನೊ, ಯಾವಳು ಬ್ರಹ್ಮಚಾರಿಣಿಯಾಗಿರುವಳೊ ಅವರಿಬ್ಬರಿಗೆ ಮಾತ್ರ ಓಜಸ್ಸನ್ನು ಸಂಪಾದಿಸಿ ಮೆದುಳಿನಲ್ಲಿಡುವದಕ್ಕಾಗುತ್ತದೆ. ಆದ್ದರಿಂದಲೇ ಬ್ರಹ್ಮಚರ್ಯವು ಅದಕ್ಕೆ ಉತ್ತಮ ಸಾಧನವೆಂದು ಅವರ ಅಭಿಪ್ರಾಯ. ಕುಂಡಲಿನಿಯಿಂದ ಈ ಶಕ್ತಿಯನ್ನು ಮೆದುಳಿನಲ್ಲಿ ಕೂಡಿಹಾಕಿಕೊಳ್ಳುವದಕ್ಕೆ ಎಲ್ಲರೂ ಪ್ರಯತ್ನಿಸಬೇಕು.

ಇನ್ನು ಎರಡನೇ ನುಡಿಯ ತಾತ್ಪರ್ಯವೇನೆಂದರೆ ಚಂದ್ರನೂ ಸೂರ್ಯನೂ ಕಾಣಿಸಿಕೊಂಡು ಹಾಗೆಯೇ ಅಂತರ್ಧಾನವಾಗುವರು. ಆಮೇಲೆ ಕೆಂಪು ಮೋಡವು ಕಾಣಿಸಿಕೊಂಡು ಹಾಲಿನ ಪ್ರವಾಹದಂತೆ ಪ್ರಕಾಶದ ಪ್ರವಾಹವನ್ನು ಹರಿಸುವದು. ಮೂರನೇ ನುಡಿಯ ತಾತ್ಪರ್ಯವೇನೆಂದರೆ ನಮ್ಮ ಕಣ್ಣಲ್ಲಿರುವ ಕರಿಯ ಗುಡ್ಡೆಗಳಲ್ಲಿ ಕಣ್ಣೆದುರಿನ ವಸ್ತುವಿನ ಬೊಂಬೆ ಮೂಡುವದಷ್ಟೆ. ಎದುರಿನ ಪ್ರಕಾಶವನ್ನು ನೋಡಲಾರದೆ ಕಣ್ಣುಗುಡ್ಡೆಯು ಕೆಳಕ್ಕೆ ಬಾಗುವಷ್ಟು ಉಜ್ವಲವಾದ ಉರಿಗಳಿಂದ ಕೂಡಿ ನಕ್ಷತ್ರಮಾಲೆಯು ಹಗಲುಹೊತ್ತೇ ಕಾಣುವದು. ನಾಲ್ಕನೇ ನುಡಿಯ ತಾತ್ಪರ್ಯವೇನೆಂದರೆ ಸತ್ತ್ವರಜಸ್ತಮೋಗುಣಾತ್ಮಕವಾದ ಆ ಕುಂಡಲಿನಿಯು ಸುಷುಮ್ನಾದ್ವಾರದಿಂದ ಹೊರಟು ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ—ಎಂಬ ಐದುಚಕ್ರಗಳನ್ನು ತೂರಿಕೊಂಡು ಆರನೆ ಸಹಸ್ರಾರದ ಚಕ್ರಕ್ಕೆ ಸೇರುವಾಗ ತಲೆಯಲ್ಲಿ ಶಂಖಧ್ವನಿಯಿಂದ ಕೂಡಿದ ಭೇರೀನಾದವು ಕೇಳಬರುವದು. ಐದನೇ ನುಡಿಯ ತಾತ್ಪರ್ಯವೇನೆಂದರೆ ಕೊನೆಗೆ ತನ್ನ ಶರೀರದಲ್ಲಿಯೇ ಪರಮಾತ್ಮನು ಆವಿರ್ಭವಿಸಿ ಮುಂಗುರುಳುಗಳ ಹಿಂಭಾಗದಲ್ಲಿರುವ ಸಹಸ್ರಾರಪದ್ಮದಲ್ಲಿ ಕಾಣಿಸಿಕೊಳ್ಳುವನು.

ಈ ರೀತಿಯಾದ ಯೋಗಮಾರ್ಗದಿಂದ ದೇವರ ದರ್ಶನವನ್ನು ಪಡೆಯುವದರ ವಿಷಯವಾಗಿ ಶ್ರೀಪುರಂದರದಾಸರು ಹಾಡಿರುವದೇನೆಂದರೆ–

ಕಾಪಿ ಛಾಪುತಾಳ.

ಕಣ್ಣಿನೊಳಗೆ ನೋಡೊ ಹರಿಯ । ಒಳ । । ಪ ।
ಗಣ್ಣಿನೊಳಗೆ ನೋಡೊ ಮೂರ್ಜಗದೊಡೆಯನ ॥ ಅ. ಪ ॥
ಆಧಾರ ಮೊದಲಾದ ಆರು । ಚಕ್ರ ।
ಶೋಧಿಸಿ ಬಿಡಬೇಕು ಈಷಣ ಮೂರು ॥
ಸಾಧಿಸಿ ಸುಷುಮ್ನ ಏರು । ಅಲ್ಲಿ ।
ಭೇದಿಸಿ ನೀ ಪರಬ್ರಹ್ಮನ ಸೇರು ॥ ೧ ॥
ಎವೆ ಹಾಕದೆ ಮೇಲೆ ನೋಡಿ । ಜೋಗ ।
ಪವನದಿಂದಲಿ ವಾಯುಬಂಧನ ಮಾಡಿ ॥
ಸವಿದು ನಾದವ ಪಾನ ಮಾಡಿ । ಅಲ್ಲಿ ।
ನವವಿಧಭಕ್ತಿಲಿ ನಲಿನಲಿದಾಡಿ ॥ ೨ ॥
ಅಂಡಜದೊಳಗಾಡುತಾನೆ । ಭಾನು ।
ಮಂಡಲ ನಾರಾಯಣನುಜೊನವನೆ ॥
ಕುಂಡಲಿ ತುದಿಯೊಳಿದ್ದಾನೆ । ಶ್ರೀಪು ।
ರಂದರವಿಠಲ ಪಾಲಿಸುತಾನೆ ॥ ೩ ॥

ಇದೇ ವಿಚಾರದಲ್ಲಿ ವೀರಶೈವಪಾತನಶಾಸ್ತ್ರಕಾರರು ಹೇಳುವದೇನೆಂದರೆ–

(೧) ಅರೆಪರೆಪವೆದೃಷ್ಟಿಯು ನಾಸಿಕಾಗ್ರದಲ್ಲಿರಿಸಿ ನೋಡುತ್ತ ಹೃದಯಕಮಲದಲ್ಲಿದ್ದ ಅಚಳಲಿಂಗದೊಳಗೆ ಜ್ಞಾನಶೋಧನದಿಂ ನೋಡುತ್ತ ತನುಮನೇಂದ್ರಿಯ ತರಹರವಾಗಿ ಮನ ನಿವಾತದೀಪ್ತಿಯಂತೆ ನಿಂದು ನಿಜವ ಕೂಡಬಲ್ಲಾತನೇ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನಲ್ಲಿ ಸಹಜಯೋಗಿ.

(೨) ಸಹಸ್ರದಳಕಮಲಮಧ್ಯದಲ್ಲಿ ಪಂಚಪತ್ರ. ಈ ಪತ್ರಮಧ್ಯದಲ್ಲಿ ಮಂಡಲತ್ರಯ. ಆ ಮಂಡಲತ್ರಯಮಧ್ಯದಲ್ಲಿ ಪ್ರಣವಪೀಠ. ಆ ಪ್ರಣವಪೀಠದ ಮಧ್ಯದಲ್ಲಿ ಮೂರ್ತಿಗೊಂಡು ಬೆಳಗುವ ನಿಮ್ಮ ದಿವ್ಯಶ್ರೀಮೂರ್ತಿಯ ಕಂಡು ಹರುಷಿತನಾದೆನಯ್ಯ ಅಖಂಡೇಶ್ವರಾ.

## ಪ್ರತ್ಯಾಹಾರ.

ಇದರ ವಿಷಯವಾಗಿ ಶ್ರೀಸ್ವಾಮಿ ವಿವೇಕಾನಂದರು ಹೇಳಿರುವದೇನೆಂದರೆ—

"ಇಂದ್ರಿಯಗಳಿಗೆ ಏನೇನು ಸಿಕ್ಕುವದೋ ಅವು ಅದರಂತೆ ಆಗಿ ಅದರ ಆಕಾರವನ್ನೆ ಹೊಂದುವವು. ಮನಸ್ಸು ಈ ಆಕಾರವನ್ನು ಪಡೆಯದಂತೆ ಮಾಡಿದರೆ ಶಾಂತರಾಗಿರಬಹುದು. ಇದೇ ಪ್ರತ್ಯಾಹಾರ. ಯೋಗಿಯಾದವನು ಹೊರಗಣ ವಿಷಯಗಳ ಆಕಾರವನ್ನು ಇಂದ್ರಿಯಗಳು ಪಡೆಯದಂತೆ ಮಾಡಿಬಿಟ್ಟರೆ ಆಗ ಇಂದ್ರಿಯಗಳು ಸಂಪೂರ್ಣವಾಗಿ ವಶವಾಗುತ್ತವೆ. ಇಂದ್ರಿಯಗಳು ಪೂರ್ಣವಾಗಿ ವಶವಾದರೆ ಪ್ರತಿಯೊಂದು ಮಾಂಸಖಂಡವೂ ಪ್ರತಿಯೊಂದು ನರವೂ ಕೂಡ ವಶವಾಗುವದು. ಯಾಕೆಂದರೆ ಎಲ್ಲಾ ವಿಧವಾದ ತಿಳುವಳಿಕೆಗಳಿಗೂ ಕ್ರಿಯೆಗಳಿಗೂ ಇಂದ್ರಿಯಗಳೇ ಸ್ಥಾನಗಳು. ಇಂದ್ರಿಯಗಳನ್ನು ಜಯಿಸಿದರೆ ಎಲ್ಲಾ ಅನುಭವವನ್ನೂ ಕ್ರಿಯೆಯನ್ನೂ ಯೋಗಿಯು ಜಯಿಸಿದಂತಾಗುವದು. ಆಗ ಶರೀರವೆಲ್ಲ ಅವನು ಹೇಳಿದಂತೆ ಕೇಳುವದು. ಆಗಲೆ ಜನ್ಮವು ಸಫಲವಾಯಿತು. "ಹುಟ್ಟಿದುದಕ್ಕೆ ಧನ್ಯನಾದೆನು" ಎಂದು ಆಗ ಹೇಳಿಕೊಳ್ಳಬಹುದು. ಆ ಇಂದ್ರಿಯನಿಗ್ರಹವೊಂದು ದೊರಕಿದರೆ ಈ ಶರೀರವೆಂಬುದು ಎಷ್ಟು ವಿಚಿತ್ರಕರವಾಗಿರುವದೆಂಬುದು ಗೊತ್ತಾಗುವುದು."

ಮನಸ್ಸನ್ನೂ ಇಂದ್ರಿಯಗಳನ್ನೂ ಬೇಕಾದಾಗ ಹೊರಗೆ ಕಳುಹಿಸುವದಕ್ಕೂ ಒಳಕ್ಕೆ ಸೆಳೆದುಕೊಳ್ಳುವದಕ್ಕೂ ಬಂದರೆ ಪ್ರತ್ಯಾಹಾರವು ಸಿದ್ಧಿಯಾದಂತಾಯಿತು. ಹೀಗೆ ಯಾರಿಗಾದರೂ ಮನಸ್ಸಿನ ಮೇಲೆ ಅಧಿಕಾರವನ್ನು ನಡೆಸುವ ಸಾಮರ್ಥ್ಯವು ತೋರಿಬಂದರೆ ಅವರು ಪ್ರಾಣಾಯಾಮವನ್ನು ಮಾಡಬೇಕಾದ್ದೇ ಇಲ್ಲ. ಪ್ರತ್ಯಾಹಾರಕ್ಕೆ ಸಿದ್ಧವಾಗುವದಕ್ಕಾಗಿ ಪ್ರಾಣಾಯಾಮವನ್ನು ಮಾಡಬೇಕು. ಪ್ರತ್ಯಾಹಾರವು ತಾನಾಗಿಯೇ ಸಿದ್ಧವಾಗಿರುವಾಗ ಪ್ರಾಣಾಯಾಮದ ತೊಂದರೆಯೇಕೆ? ಪ್ರತ್ಯಾಹಾರದ ಸಿದ್ಧಿಯಾದರೆ ಅದು ತನ್ನ ಪ್ರಭಾವದಿಂದ ಪ್ರಾಣಾಯಾಮಸಿದ್ಧಿಯನ್ನು ತಂದುಕೊಟ್ಟೇ ಕೊಡುವದು. ಉಸಿರು ಹೊರಗಡೆಗೆ ಹರಿದಷ್ಟು

ಮನಸ್ಸು ದೂರದೂರಕ್ಕೆ ಹರಿಯುವದೆಂದು ಹಿಂದೆ ಹೇಳಿದೆಯಷ್ಟೆ. ಮನಸ್ಸನ್ನು ಬಿಗಿಹಿಡಿದಷ್ಟು ಉಸಿರೂ ಸಣ್ಣದಾಗಲೇ ಬೇಕು. ಸಾಮಾನ್ಯವಾಗಿ ಯಾವದಾದರೊಂದು ವಿಚಾರವನ್ನು ಕುರಿತು ಯೋಚಿಸುತ್ತಿರುವಾಗ ಮನಸ್ಸು ಅಲ್ಲಿಯೇ ನಿಂತಿರುವದರಿಂದ ಆಗ ಉಸಿರಿನ ವೇಗವೂ ಕಡಿಮೆಯಾಗುವದನ್ನು ಅನುಭವದಲ್ಲಿ ನೋಡಿಕೊಳ್ಳಬಹುದು. ಪ್ರತ್ಯಾಹಾರದಲ್ಲಿ ಮನಸ್ಸನ್ನು ಬಿಗಿಹಿಡಿಯುವದರಿಂದ ಉಸಿರು ತಾನಾಗಿಯೇ ಸಣ್ಣದಾಗಿಯೇ ಆಗುವದು. ಮನಸ್ಸನ್ನು ಬಿಗಿಹಿಡಿಯುವದರಿಂದ ಇಂದ್ರಿಯಗಳನ್ನು ಅನಾಯಾಸವಾಗಿ ಜಯಿಸಿದಂತಾಗುವದು. ಇಂದ್ರಿಯಗಳು ಮನಸ್ಸನ್ನು ಬಿಟ್ಟು ಹೊರಕ್ಕೆ ಹೋದರೆ ಅವುಗಳಿಗೆ ಉಪ್ಪು ಕೂಡ ಹುಟ್ಟುವದಿಲ್ಲ. ಆದ್ದರಿಂದ ಅವು ಮನಸ್ಸನ್ನು ತಮ್ಮ ಬೇಳುವೆಯಿಂದ ಬೆರಗು ಮಾಡಿ ಕಂಡ ಕಂಡ ಕಡೆಗೆ ಅದನ್ನು ಕರೆದುಕೊಂಡು ಹೋಗುತ್ತ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುತ್ತವೆ. ಆ ಮನಸ್ಸನ್ನೇ ನಾವು ಬಿಗಿಹಿಡಿದುಬಿಟ್ಟರೆ ಇಂದ್ರಿಯಗಳು ಹೊರಗೆ ಹೆಜ್ಜೆಯನ್ನಿಡುವದೇ ತಪ್ಪಿಹೋಗುತ್ತದೆ. ಆದ್ದರಿಂದ ಪ್ರತ್ಯಾಹಾರದಿಂದ ಇಂದ್ರಿಯಜಯವು ಕಟ್ಟಿಟ್ಟ ಗಂಟಾಗುವದು. ಈ ವಿಷಯದಲ್ಲಿ ಭಗವದ್ಗೀತೆಯು ಹೇಳಿರುವದೇನೆಂದರೆ—

"ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।
ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥"

ಒಂದು ಕಡೆ ನಿಲ್ಲದೆ ಹೊಯ್ದಾಡುವ ಮನಸ್ಸು ಎಲ್ಲೆಲ್ಲಿ ಹರಿಯುವದೊ ಅಲ್ಲಲ್ಲಿಯೇ ಅದನ್ನು ತಡೆದು ತನ್ನ ವಶದಲ್ಲಿಯೇ ಇಟ್ಟುಕೊಳ್ಳಬೇಕು. ಇದೇ ಅರ್ಥವನ್ನೇ ಭಾಗವತವು—

"ಇಂದ್ರಿಯಾಣೀಂದ್ರಿಯಾರ್ಥೇಭ್ಯೋ ಮನಸಾಽಕೃಷ್ಯ ತನ್ಮನಃ ।
ಬುದ್ಧ್ಯಾ ಸಾರಥಿನಾ ಧೀರಃ ಪ್ರಣಯೇನ್ಮಯಿ ಸರ್ವತಃ ॥"

ಎಂಬ ಶ್ಲೋಕದಿಂದ ಹೇಳಿದೆ. ವಿಷಯಗಳ ಕಡೆಯಿಂದ ಇಂದ್ರಿಯಗಳನ್ನು ಮನಸ್ಸಿನಿಂದ ಎಳೆದು ಆ ಮನಸ್ಸನ್ನು ಬುದ್ಧಿಯಿಂದ ಜಗ್ಗಿ ಪರಮಾತ್ಮಸ್ವರೂಪದಲ್ಲಿಡಬೇಕೆಂದು ತಾತ್ಪರ್ಯ.

## ಧಾರಣಾ.

ಚಿತ್ತವು ಒಂದೇ ಒಂದು ಸ್ಥಾನದಲ್ಲಿ ನಿಲ್ಲುವದೇ ಧಾರಣೆ. ಚಿತ್ತವು ಬಳ್ಳಿಯಂಥ ವಸ್ತು. ಅದು ಇನ್ನೊಂದನ್ನು ಅವಲಂಬಿಸದೆ ಸ್ವತಂತ್ರವಾಗಿ ನಿಂತಿರುವ ಸಾಮರ್ಥ್ಯವುಳ್ಳದ್ದಲ್ಲ. ಅದಕ್ಕೆ ವಿಷಯಗಳ ಅವಲಂಬನೆಯನ್ನು ತಪ್ಪಿಸಿದ ಮೇಲೆ ಮತ್ತೊಂದವಲಂಬನೆಯನ್ನು ಕೊಡುವದಶ್ಯಕ. ಅಂಥ ಅವಲಂಬನೆ ಯಾವುದೆಂದರೆ ದೇವರ ಸ್ವರೂಪ. ಸಾಮಾನ್ಯವಾಗಿ ಮೊದಮೊದಲು ಶಾಲಗ್ರಾಮ, ಶಿವಲಿಂಗ, ಸೂರ್ಯಮಂಡಲ, ಮೊದಲಾದ ವಿಗ್ರಹಗಳಲ್ಲಿ ಮನಸ್ಸನ್ನು ನಿಲ್ಲಿಸುತ್ತಿದ್ದು ಆಮೇಲೆ ಮನಸ್ಸಿನಿಂದಲೇ ಕಲ್ಪನೆಮಾಡಿದ ತನ್ನ ಇಷ್ಟದೇವತಾಸ್ವರೂಪದಲ್ಲಿ ಅದನ್ನು ನೆಲೆಗೊಳಿಸಬೇಕು. "ಆತ್ಮಸಂಸ್ಥಂ ಮನಃ ಕೃತ್ವಾ" ಎಂದು ಭಗವಂತನು ಗೀತೆಯಲ್ಲಿ ಹೇಳಿರುವಂತೆ ಮನಸ್ಸು ಯಾವ ದೇವತಾರೂಪದಲ್ಲಾದರೂ ಪರಮಾತ್ಮನ ಕಲ್ಪನೆಯನ್ನು ತಂದುಕೊಂಡರಾಯಿತು. ಆದರೆ ಆ ರೂಪವು ಒಳ್ಳೇ ಹೃದಯಂಗಮವಾಗಿರಬೇಕು; ಶಾಂತಿಯ ಕಳೆ ಉಕ್ಕುತ್ತಿರಬೇಕು; ಕಣ್ಣುಗಳು ಉದ್ದವಾಗಿ ಕೃಪಾಪೂರ್ಣವಾಗಿರಬೇಕು; ಕೊರಳು ಶಂಖದಂತೆ ಉದ್ದವಾಗಿರಬೇಕು; ಮುಖವು ಮುಗುಳುನಗೆಯನ್ನು ಸೂಸುತ್ತಿರಬೇಕು; ದೇವತ್ವಕ್ಕೆ ತಕ್ಕ ವಸ್ತ್ರಾಭರಣಾದ್ಯಲಂಕಾರಗಳಿರಬೇಕು; ಹಸ್ತವು ನಮಗೆ ಅಭಯವನ್ನು ಕೊಡುತ್ತಿರಬೇಕು.

ಮುಖಭಾವವು ಹೇಗಿರಬೇಕೆಂಬುದನ್ನು ಈ ಬಗೆಯಲ್ಲಿ ಬಣ್ಣಿಸುವದಕ್ಕಿಂತಲೂ ಒಂದು ಉದಾಹರಣೆಯನ್ನು ಕೊಡುವದು ಚೆನ್ನಾಗಿ ತೋರುತ್ತದೆ. ಶ್ರೀಕೃಷ್ಣನು ಗೋಕುಲದಲ್ಲಿ ಮಗುವಾಗಿ ಬೆಳೆಯುತ್ತಿದ್ದನು. ಅವನ ಮುಖಭಾವವು ಎಲ್ಲರನ್ನೂ ತನ್ನ ಕಡೆಗೆ ಸೆಳೆದುಕೊಂಡಿತ್ತು. ಒಬ್ಬ ಹುಡುಗಿಗೆ ಒಂದು ದಿನ ಕೃಷ್ಣನನ್ನು ನೋಡಬೇಕೆಂಬ ಕುತೂಹಲವು ಬಹಳವಾಯಿತು. ಮನೆಯಲ್ಲಿರುವ ತಾಯಿತಂದೆಗಳ ದುರಿಗೆ ಈ ಉದ್ದೇಶದಿಂದ ಹೊರಬೀಳುವದು ಹೇಗೆ? ಹಿಂದಿನ ಕಾಲದಲ್ಲಿ ಸಂಜೆಯಾಗುತ್ತಲೇ ಒಬ್ಬರ ಮನೆಯಿಂದ ದೀಪವನ್ನು ಹಚ್ಚಿಕೊಂಡು ಬರುವ ಪದ್ಧತಿ ಇತ್ತು. ಆ ನೆವವನ್ನು ಮಾಡಿಕೊಂಡು ಆ ಹುಡುಗಿಯು

ಕೃಷ್ಣನಿದ್ದ ಮನೆಗೆ ಹೋದಳು. ಕೃಷ್ಣನು ಒಬ್ಬನೇ ದೀಪಸ್ತಂಭದ ಹತ್ತಿರದಲ್ಲಿಯೇ ಏನನ್ನೋ ಯೋಚಿಸುತ್ತ ಕುಳಿತಿದ್ದನು. ಹೊಸಿಲನ್ನು ದಾಟಿದೊಡನೆ ಆ ಹುಡುಗಿಯ ಕಣ್ಣು ಕೃಷ್ಣನ ಮೇಲೆಯೇ ಬಿತ್ತು. ಒಡನೆಯೇ ತನ್ನ ಮನಸ್ಸು ಪರವಶವಾಗುವ ಸ್ಥಿತಿಯು ಕಂಡರೂ ಆಕೆಯು ಹೇಗೂ ಎಚ್ಚರವನ್ನಿಟ್ಟುಕೊಂಡು ಆ ಸ್ತಂಭದವರೆಗೆ ಹೋದಳು. ಅಲ್ಲಿ ತನ್ನ ಹಣತೆಯ ಬತ್ತಿಯನ್ನು ಮುಂದಕ್ಕೆ ಚಾಚಿ ದೀಪಕ್ಕೆ ತಾಕಿಸುವಾಗ ಅವಳ ದೃಷ್ಟಿಯೆಲ್ಲಾ ಕೃಷ್ಣನ ಮುಖದಲ್ಲಿಯೇ ನೆಟ್ಟು ಹೋಗಿತ್ತು. ಆಗ ಆಕೆ ತನಗೆ ಅರಿವಿಲ್ಲದೆ ತನ್ನ ತರ್ಜನಿಯ ಬೆರಳನ್ನೇ ದೀಪದೊಳಕ್ಕೆ ಇಟ್ಟು ಕೃಷ್ಣನನ್ನೇ ನಿಟ್ಟಿಸುತ್ತ ಬಗ್ಗಿಕೊಂಡು ನಿಂತಳು. ಅವಳ ಬೆಟ್ಟಿಗೆ ಬೆಂಕಿ ಹತ್ತಿ ಉರಿಯಲಾರಂಭಿಸಿತು. ಆದರೂ ಅವಳಿಗೆ ಇತ್ತಕಡೆಯ ಎಚ್ಚರವೇ ಇಲ್ಲ. ಹೀಗೆ ಆ ಹುಡುಗಿಯು ಅಲ್ಲಿಯೇ ನಿಂತ ಮೇಲೆ ಆಕೆಯನ್ನು ಹುಡುಕಿಕೊಂಡು ಆಕೆಯ ತಾಯಿ ಬಂದು ನೋಡಿ ಗಾಬರಿಗೊಂಡು ಮಗಳನ್ನು ಓರೆಗೆ ಕರೆದುಕೊಂಡ ಮೇಲೆ ಆಕೆಗೆ ಎಚ್ಚರವಾಯಿತು. ಆ ಮುದ್ದುಗೋಪಾಲನ ಮುಖವು ಆ ಹುಡುಗಿಗೆ ಎಷ್ಟು ಮನೋಹರವಾಗಿತ್ತೋ ಸಾಧಕನು ಕಲ್ಪನೆಮಾಡಿಕೊಳ್ಳುವ ಮೂರ್ತಿಯ ರೂಪವು ಅಷ್ಟು ಮನೋಹರವಾಗಿರಬೇಕು.

## ಧ್ಯಾನ.

ಧ್ಯಾನವೆಂದರೆ "ತತ್ರ ಪ್ರತ್ಯಯೈಕತಾನತಾ ಧ್ಯಾನಮ್" ಎಂಬ ಯೋಗಸೂತ್ರದಂತೆ ಧಾರಣೆಯನ್ನು ಪಡೆದ ವಸ್ತುವಿನಲ್ಲಿಯೇ ತಿಳಿವಳಿಕೆಯು ಬಿಡದೆ ಹರಿಯುತ್ತಿರುವದು. ಈ ರೀತಿಯಲ್ಲಿ ಮಾಡುವಾಗ ಶ್ವಾಸವು ಆ ದೇವತಾಸಂಬಂಧವಾದ ಮಂತ್ರದೊಡನೆ ನಡೆಯುತ್ತಿರಬೇಕು. ಆಗ ನಿಜವಾದ ಜಪವಾಗುವದು. ಜಪವೆಂದರೆ "ತಜ್ಜಪಸ್ತದರ್ಥಭಾವನಮ್" ಎಂಬ ಯೋಗಸೂತ್ರದಂತೆ ಮಂತ್ರದ ಅರ್ಥವನ್ನು ಭಾವಿಸುತ್ತಿರುವದು. ಶ್ವಾಸವು ಯಾವ ಮಂತ್ರದ ರೂಪವನ್ನು ಪಡೆದಿರುವದೊ ಮನಸ್ಸು ಆ ಮಂತ್ರದ ಅರ್ಥವಾದ ಆಕಾರವನ್ನು ಪಡೆಯುವದೇ ನಿಜವಾದ ಜಪ. ಗಟ್ಟಿಯಾಗಿ ಉಚ್ಚರಿಸುವ ಜಪಕ್ಕಿಂತಲೂ ಮೆತ್ತಗೆ ತುಟಿಗ

ಳಸಾಧಿಸುವ ಜಪವು ಉತ್ತಮ. ಅದಕ್ಕಿಂತ ಈ ಮಾನಸಜಪವು ಶ್ರೇಷ್ಠ ವಾದದ್ದು.

ಎಲ್ಲಾ ದೇವತಾಸ್ವರೂಪವನ್ನೂ ಒಳಗುಮಾಡಿಕೊಳ್ಳುವ ಒಂದು ಉಪಾಯವನ್ನು ಮುಂಡಕೋಪನಿಷತ್ತು ತನ್ನದೊಂದು ಮಂತ್ರದಲ್ಲಿ ಉಪ ದೇಶಿಸಿರುತ್ತದೆ.

"ಪ್ರಣವೋ ಧನುಃ ಶರೋಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।

ಅಪ್ರಮತ್ತೇನ ವೇದ್ಧವ್ಯಂ ..................... "

ಪ್ರಣವವೆಂಬ ಧನುಸ್ಸಿನಲ್ಲಿ ಮನವೆಂಬ ಬಾಣವನ್ನಿಟ್ಟು ಜಗದೀಶ್ವರನಿಗೆ ತಾಕುವಂತೆ ಗುರಿತಪ್ಪದೆ ಹೊಡೆಯಬೇಕೆಂದು ಅದರ ಅರ್ಥ. ಪ್ರಣವ ವೆಂದರೆ ಓಂಕಾರ. ಅದರಲ್ಲಿ ಮನಸ್ಸನ್ನಿಟ್ಟು ತೂಗಿ ಹೊಡೆದರೆ ಆ ಧನು ಸ್ಸಿನ ಮಹಿಮೆಯಿಂದ ಮನಸ್ಸು ವೇಗವಾಗಿ ಹೊರಟು ತನ್ನ ಗುರಿಯನ್ನು ಮುಟ್ಟುವದು. ಹೀಗೆ ಹೊಡೆಯುವಾಗ ಬಾಣವಾದ ಮನಸ್ಸಿನ ತುದಿಯು ಅತ್ತಿತ್ತ ಹೊಯ್ದಾಡಬಾರದು. ಹಾಗಾದ ಪಕ್ಷದಲ್ಲಿ ಅದು ಗುರಿಗೆ ತಾಕುವದಿಲ್ಲ; ಶ್ರಮೆಯು ವ್ಯರ್ಥವಾಗುವದು. ವ್ಯವಹಾರದ ಮಾತಿನಲ್ಲಿ ಹೇಳಬೇಕೆಂದರೆ ಮನಸ್ಸೆಂಬ ಸಮುದ್ರದ ಅನೇಕ ತೆರೆಗಳು ಹೋಗಿ ಒಂದೇ ಒಂದು ತೆರೆಯು ನಿಲ್ಲುವದೇ ಧ್ಯಾನ. ಹೀಗಾಗುವ ಸ್ಥಿತಿಯನ್ನು ಭಗವದ್ಗೀತೆಯು—

"ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।"

ಎಂಬ ಮಾತಿನಿಂದ ವರ್ಣಿಸಿರುವದು. ಗಾಳಿ ಇಲ್ಲದೆ ಇರುವ ಕಡೆಯ ದೀಪವು ಹೇಗೆ ಕದಲದೆ ಇರುವದೊ ಹಾಗೆಂದು ಅದರ ತಾತ್ಪರ್ಯ. ಧಾರಣೆಯಾಗುವವರೆಗೆ ಮನುಷ್ಯನು ತನ್ನ ಧ್ಯೇಯವೇನೆಂಬುದನ್ನು ನಿರ್ಣಯಿಸಿಕೊಳ್ಳುವದಾಗುತ್ತದೆ. ಧ್ಯಾನದಿಂದ ಅದನ್ನು ಅನುಭವಕ್ಕೆ ತಂದುಕೊಳ್ಳುವ ಪ್ರಯತ್ನವು ನಡೆಯುತ್ತದೆ. ಈ ಪ್ರಯತ್ನಕ್ಕೆ ಶ್ರೀ ರಾಮಕೃಷ್ಣಪರಮಹಂಸರು ಮುತ್ತಿನ ಚಿಪ್ಪಿನ ಮೀನಿನ ಉದಾಹರಣೆ ಯನ್ನು ಕೊಟ್ಟಿರುತ್ತಾರೆ. ಮುತ್ತಿನ ಚಿಪ್ಪಿನ ಮೀನು ತನ್ನ ಧ್ಯೇಯವಾದ ಸ್ವಾತಿಯ ಹನಿಯು ತನ್ನಲ್ಲಿ ಬೀಳುವವರೆಗೂ ಮೇಲೆ ಮೇಲೆ ತೇಲು ತ್ತದೆ. ಆ ಹನಿಯು ಬಿದ್ದೊಡನೆ ಮೀನು ಕೆಳಕ್ಕೆ ಮುಳುಗಿ ಆ ಹನಿ

ಯಿಂದ ಒಂದು ಮುತ್ತನ್ನು ಮಾಡುತ್ತದೆ. ಅದರಂತೆ ಸಾಧಕನು ಧಾರಣೆಯನ್ನು ಪಡೆದ ಮನಸ್ಸನ್ನು ಧ್ಯಾನದಲ್ಲಿಟ್ಟು ಸಾರ್ಥಕಗೊಳಿಸಬೇಕು.

ಮನಸ್ಸನ್ನು ಈ ರೀತಿಯಲ್ಲಿ ನಿಯೋಗಿಸಬೇಕೆಂಬುದು ಹೇಳುವದಕ್ಕೆ ಸುಲಭವಾದಷ್ಟು ಮಾಡುವದಕ್ಕೆ ಸುಲಭವಲ್ಲ. ಅರ್ಜುನನಂಥವನಿಗೂ ಕೂಡ ಇದು ಕಷ್ಟವೆನಿಸಿತು. ಆಗ ಅವನಿಗೆ ಉಪಾಯವನ್ನು ಹೇಳುವದಕ್ಕಾಗಿ ಶ್ರೀಕೃಷ್ಣನು

“ ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ”

ಎಂದು ಹೇಳಿದ್ದಾನೆ. ಅಭ್ಯಾಸದಿಂದಲೂ ವೈರಾಗ್ಯದಿಂದಲೂ ಸಾಧಿಸುವದೇ ಉಪಾಯ. ವೈರಾಗ್ಯವನ್ನು ಬಲಪಡಿಸಿಕೊಳ್ಳುವದರಿಂದ ಮನಸ್ಸಿನ ಹರಿದಾಟವು ಕಡಿಮೆಯಾಗುತ್ತದೆ. ಅಭ್ಯಾಸದಿಂದ ಅದು ಒಂದುಕಡೆ ನಿಲ್ಲುವದಕ್ಕೆ ತಕ್ಕದ್ದಾಗುತ್ತದೆ. ಇದು ಇವತ್ತುನಾಳೆಯೊಳಗೆ ಸಿದ್ಧಿಯಾಗುವ ಮಾತಲ್ಲ.

“ ಉತ್ಸೇಕ ಉದಧೇರ್ಯದ್ವತ್ಕುಶಾಗ್ರೇಣೈಕಬಿಂದುನಾ ।
ಮನಸೋ ನಿಗ್ರಹಸ್ತದ್ವದ್ಭವೇದಪರಿಖೇದತಃ ॥ ”

ಎಂದು ಮಾಂಡೂಕ್ಯಶ್ರುತಿಯು ಹೇಳುತ್ತದೆ. ಹುಲ್ಲಿನ ತುದಿಯಿಂದ ಒಂದೊಂದು ಹನಿಯನ್ನೇ ಎತ್ತಿ ಚೆಲ್ಲಿ ಸಮುದ್ರವನ್ನು ಒಣಗಿಸುವಂತೆ ಮನೋನಿಗ್ರಹವು ನಿರಾಶೆಯನ್ನು ಪಡದೆ ಮಾಡತಕ್ಕ ಕೆಲಸವಾಗಿರುವದೆಂದು ತಾತ್ಪರ್ಯ. ಇದಕ್ಕೆ ಹೊಂದುವ ಒಂದು ಕಥೆಯೂ ಪುರಾಣದಲ್ಲಿದೆ. ಸಮುದ್ರವು ಒಮ್ಮೆ ಉಕ್ಕಿ ಬಂದು, ತನ್ನ ದಡದಲ್ಲಿ ಒಂದು ಹಕ್ಕಿಯು ಇಟ್ಟಿದ್ದ ಮೊಟ್ಟೆಗಳನ್ನೆಲ್ಲಾ ಕೊಚ್ಚಿಕೊಂಡು ಹೋಯಿತಂತೆ. ಅದನ್ನು ಕಂಡು ಆ ಪಕ್ಷಿಯು ದುಃಖದಿಂದ ಆ ಸಮುದ್ರವನ್ನೇ ಬತ್ತಿಸಿ ಬಿಡುವೆನೆಂದು ವ್ರತವನ್ನು ತೊಟ್ಟು ತನ್ನ ಕೊಕ್ಕಿನಿಂದ ಒಂದೊಂದು ಹನಿಯನ್ನೇ ಹೊರಕ್ಕೆ ಹಾಕುವದಕ್ಕಾರಂಭಿಸಿತು. ಆ ಹಕ್ಕಿಯನ್ನು ನೋಡಿ ಅದರ ಬಳಗದ ಹಕ್ಕಿಗಳೆಲ್ಲಾ ಐಕಮತ್ಯದಿಂದ ಅದಕ್ಕೆ ನೆರವಾದವು. ಆಮೇಲೆ ಜಾತ್ಯಭಿಮಾನದಿಂದ ಪಕ್ಷಿಗಳೆಲ್ಲಾ ತಮ್ಮ ಪ್ರತಿಷ್ಠೆಯನ್ನುಳಿಸಿಕೊಳ್ಳುವದ

ಕ್ಕಾಗಿ ಈ ಕೆಲಸದಲ್ಲಿ ತೊಡಗಿದವು. ಪಕ್ಷಿಗಳಿಂದ ಸಮುದ್ರವನ್ನು ಬತ್ತಿಸುವದಾದೀತೆ? ಆದರೂ ಪಕ್ಷಿಗಳು ನಿರಾಶೆಯನ್ನು ಹೊಂದದೆ ಎಡೆಬಿಡದೆ ಹೋರಾಡಿದವು. ಇದನ್ನು ನೋಡಿದ ನಾರದರು ಕನಿಕರದಿಂದ ಪಕ್ಷಿರಾಜನಾದ ಗರುಡನನ್ನು ಎಚ್ಚರಿಸಿದರು. ಮಹಾಪ್ರತಾಪಶಾಲಿಯಾದ ಗರುಡನು ಆಗ ಮಹಾರ್ಭಟದಿಂದ ಹೊರಟುಬಂದು ತನ್ನ ಗರಿಗಳ ಬಿರುಗಾಳಿಯಿಂದ ಸಮುದ್ರವನ್ನು ಅಪ್ಪಳಿಸುತ್ತಲೇ ಆ ಹೊಡೆತಕ್ಕೆ ತಡೆಯಲಾರದೆ ಸಮುದ್ರನು ತಾನು ಕೊಳ್ಳೆಕೊಂಡು ಹೋಗಿದ್ದ ಮೊಟ್ಟೆಗಳನ್ನು ತಿರುಗಿ ತಂದುಕೊಟ್ಟು ಗರುಡನ ಪ್ರಸನ್ನತೆಯನ್ನು ಪಡೆದನಂತೆ. ನಿರಾಶೆಯನ್ನು ಪಡದೆ ಯತ್ನವನ್ನು ಮುಂದೆ ಸಾಗಿಸಿದ ಪಕ್ಷಿಗಳು ತಮ್ಮ ಇಷ್ಟಸಿದ್ಧಿಯನ್ನು ಪಡೆದಂತೆ ನಿರಾಶೆಯನ್ನು ಪಡದೆ ಯೋಗಾಭ್ಯಾಸವನ್ನು ಮಾಡಿದ ಯೋಗಿಯು ತನ್ನ ಧ್ಯೇಯವನ್ನು ಸಾಧಿಸುತ್ತಾನೆ. ಆ ಕಾಡುಪಕ್ಷಿಗಳಿಗೆ ದೈವಯೋಗದಿಂದ ಗರುಡನ ನೆರವು ದೊರೆತಂತೆ ಸಾಮಾನ್ಯನಾದ ಮನುಷ್ಯನಿಗಾದರೂ ದೈವಯೋಗದಿಂದ ಮಹಾಪುರುಷರ ಸಮಾಗಮವಾಗಿ ಅವರ ಪ್ರಭಾವದಿಂದ ಅವನ ಇಷ್ಟಾರ್ಥವು ನೆರವೇರುತ್ತದೆ.

ಯೋಗಸಾಧನವನ್ನು ಮಾಡುವವರಿಗೆ ಶ್ರೀಸ್ವಾಮಿವಿವೇಕಾನಂದರು ಹೇಳಿರುವ ಉತ್ತೇಜಕವಾದ ಮಾತುಗಳು ಈ ಸ್ಥಲಕ್ಕೆ ಚೆನ್ನಾಗಿ ಒಪ್ಪುತ್ತವೆ. “ ಬಲವಾಗಿ ಸಾಧನ ಮಾಡಿರಿ. ಇದರಿಂದ ಸತ್ತರೇನು ಬದುಕಿದರೇನು? ಮನೊಂದನ್ನೂ ವಿಚಾರಮಾಡದೆ ಅದರಲ್ಲಿಯೇ ಮಗ್ನರಾಗಿ ಕೆಲಸಮಾಡಿರಿ. ನೀವು ಧೀರರಾದರೆ ಆರುತಿಂಗಳಲ್ಲಿಯೇ ಪೂರ್ಣಯೋಗಿಗಳಾಗಬಹುದು. ಆದರೆ ಇದರಲ್ಲಿ ಒಂದು ಚೂರನ್ನೂ ಇದರ ಜೊತೆಗೆ ಇನ್ನೂ ಬೇಕಾದುದನ್ನೆಲ್ಲಿ ಇಟ್ಟುಕೊಳ್ಳುವವರು ಸ್ವಲ್ಪವೂ ಮುಂದುವರಿಯರು. ಕಾರ್ಯಸಾಧನೆಯಾಗಬೇಕಾದರೆ – ಸಮುದ್ರವನ್ನಾದರೂ ಹೀರಿಬಿಡುವೆನು; ನನ್ನ ಇಚ್ಛಾಮಾತ್ರದಿಂದ ಪರ್ವತವನ್ನಾದರೂ ಪುಡಿಪುಡಿ ಮಾಡುವೆನು – ಎನ್ನಿಸುವಂಥ ಸ್ಥಿರಪ್ರಯತ್ನದ ಶಕ್ತಿಯನ್ನೂ ದೃಢಸಂಕಲ್ಪವನ್ನೂ ಸಂಪಾದಿಸಿಕೊಂಡರೆ ಪುರುಷಾರ್ಥವು ಕೈಸೇರುವದು. ”

# ಸಮಾಧಿ.

ಮನಸ್ಸೆಂಬ ಸಮುದ್ರದ ಅನೇಕ ತೆರೆಗಳು ಹೋಗಿ ಒಂದೇ ಒಂದು ತೆರೆಯು ನಿಲ್ಲುವದೇ ಧ್ಯಾನವೆಂದು ಹಿಂದೆ ಹೇಳಿದ್ದಾಗಿದೆಯಷ್ಟೆ. ಸಮಾಧಿಯು ಅದರ ಮುಂದಿನ ಮೆಟ್ಟಲು. ಆ ಒಂದು ತೆರೆಯೂ ಹೋಗಿ ತೆರೆಯಿಲ್ಲದ ಸಮುದ್ರದಂತೆ ಶಾಂತವಾಗಿರುವದೇ ಸಮಾಧಿ. ಧ್ಯಾನದಲ್ಲಿ ನಾನೆಂಬುದೊಂದು ಜ್ಞಾನವೂ ಧ್ಯೇಯವಸ್ತುವಿನ ಸ್ವರೂಪದ ಜ್ಞಾನವೂ ಧ್ಯಾನವು ನಡೆಯುತ್ತಿರುವದೆಂಬ ಜ್ಞಾನವೂ— ಈ ರೀತಿಯಲ್ಲಿ ಮೂರು ಜ್ಞಾನಗಳಿರುವವು. ಸಮಾಧಿಕಾಲದಲ್ಲಿ ನಾನು ಧ್ಯಾನವನ್ನು ಮಾಡುತ್ತಿರುವೆನೆಂಬುದೂ ಮರೆತು ಹೋಗಿ ಧ್ಯೇಯವಾದ ವಸ್ತುವೊಂದೇ ಆಗಿ ಬಿಟ್ಟಿರುವದು. ಇದೇ ಅರ್ಥವನ್ನೇ ಮುಂಡಕಶ್ರುತಿಯು "ಶರವತ್ತನ್ಮಯೋ ಭವೇತ್" ಎಂಬ ವಾಕ್ಯದಿಂದ ಹೇಳಿರುವದು. ಓಂಕಾರವೆಂಬ ಬಿಲ್ಲಿನಲ್ಲಿ ತನ್ನ ಮನಸ್ಸನ್ನು ಬಾಣವನ್ನಾಗಿ ಮಾಡಿ ಮುಮುಕ್ಷುವು ಜಾಗರೂಕತೆಯಿಂದ ಅದನ್ನು ದೇವರ ಮೇಲೆ ಗುರಿ ಇಡುವನಷ್ಟೆ. ಆ ಗುರಿಯನ್ನೇ ದೃಢವಾಗಿ ಮಾಡಿಕೊಳ್ಳುತ್ತಿರುವವರೆಗೂ ಧ್ಯಾನವೆನಿಸುವದು. ಗುರಿಗೆ ಹೊಡೆದೊಡನೆ ದೇವರು ಬೇರೆ, ಮನಸ್ಸೆಂಬ ಬಾಣವು ಬೇರೆ, ಇರದೆ ಆ ಮನಸ್ಸೆಂಬ ಬಾಣವು ದೇವರಲ್ಲಿ ಕೂಡಿ ಹೋಗಿ ದೇವರೊಬ್ಬನೇ ಇರುವಂತೆ ಸಮಾಧಿಯಲ್ಲಿ ಧ್ಯೇಯವಸ್ತುವೊಂದೇ ಉಳಿದಿರುವದು. ಈ ಸ್ಥಿತಿಯಲ್ಲಿ—

"ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।
ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥"

ಎಂಬ ಗೀತೋಕ್ತಿಯಂತೆ ಅವನು ಇಂದ್ರಿಯಗಳ ಮೆಟ್ಟಲನ್ನು ಮೀರಿ ಬುದ್ಧಿಯಿಂದ ಗ್ರಾಹ್ಯವಾದ ಶಾಶ್ವತಸುಖವನ್ನು ಅನುಭವಿಸುವನಲ್ಲದೆ ಅದನ್ನು ಎಂದಿಗೂ ಕಳೆದುಕೊಳ್ಳುವದಿಲ್ಲ.

ಸಮಾಧಿಯ ವಿಷಯದಲ್ಲಿ ಶ್ರೀಸ್ವಾಮಿ ವಿವೇಕಾನಂದರು ಬರೆದಿರುವದೇನೆಂದರೆ— "ಸಮಾಧಿಯೆಂಬುದು ಪ್ರತಿಯೊಬ್ಬ ಮನುಷ್ಯನಿಗೂ— ಅಷ್ಟೇಕೆ, ಪ್ರತ್ಯೇಕಪ್ರಾಣಿಗೂ—ಸಲ್ಲತಕ್ಕದ್ದು. ಅತ್ಯಂತ ಸಣ್ಣ ಕ್ರಿಮಿ

ಯಿಂದ ಮೊದಲು ಮಾಡಿಕೊಂಡು ಅತ್ಯಂತ ಉತ್ಕೃಷ್ಟತರಗತಿಯ ದೇವತೆಗಳವರೆಗೂ ಇರುವವರಲ್ಲಿ ಪ್ರತಿಯೊಬ್ಬನೂ ಇಂದಿಲ್ಲದಿದ್ದರೆ ನಾಳೆ ಆ ಸ್ಥಿತಿಗೆ ಬರಲೇಬೇಕಾಗುವದು. ಆಗಲೆ ಅವನಿಗೆ ನಿಜವಾಗಿ ಧರ್ಮವೆಂಬುದು ಪ್ರಾರಂಭವಾಗುವದು. ಅಲ್ಲಿಯವರೆಗೂ ನಾವು ಆ ಸ್ಥಿತಿಯನ್ನು ಪಡೆಯುವದಕ್ಕೆ ಹೆಣಗಾಡುತ್ತಿದ್ದೇವೆನ್ನಬಹುದು. ಈಗ ನಮಗೂ ಧರ್ಮಹೀನರಿಗೂ ಯಾವ ಭೇದವೂ ಇಲ್ಲ. ಏಕೆಂದರೆ ನಮಗೆ ಅನುಭವವಿಲ್ಲ. ಈ ಅನುಭವವನ್ನು ಪಡೆಯದೆ ಇದ್ದರೆ ಧ್ಯಾನದಿಂದ ಆಗಬೇಕಾದುದೇನು? ಸಮಾಧಿಯನ್ನು ಪಡೆಯುವದಕ್ಕೆ ಮಾಡಬೇಕಾದ ಪ್ರತಿಯೊಂದು ಕೃತ್ಯವನ್ನೂ ಚೆನ್ನಾಗಿ ವಿಚಾರಮಾಡಿ ಸರಿಯಾಗಿ ಕ್ರಮದಲ್ಲಿ ಹೊಂದಿಸಿ ಶಾಸ್ತ್ರೀಯವಾದ ಕಟ್ಟಿನಲ್ಲಿಟ್ಟಿರುತ್ತಾರೆ. ಅದನ್ನು ಶ್ರದ್ಧೆಯಿಂದ ನಡೆಸಿದರೆ ಅದು ಇಷ್ಟಾರ್ಥವನ್ನು ಕೊಟ್ಟೇ ತೀರುವದು. ಆಗ ಎಲ್ಲಾ ದುಃಖಗಳೂ ಪರಿಹಾರವಾಗುವವು; ಎಲ್ಲಾ ಸಂಕಟಗಳೂ ಮಾಯವಾಗುವವು; ಕರ್ಮಬೀಜಗಳೆಲ್ಲಾ ಸುಟ್ಟು ಆತ್ಮವು ಎಂದಿಗೂ ನಿತ್ಯಮುಕ್ತವಾಗಿರುವದು."

ಹೀಗೆ ಸಮಾಧಿಯನ್ನು ಪಡೆಯುವವನ ಮನಸ್ಸಿನ ಮೇಲೆ ಆಗುವ ಪರಿಣಾಮವನ್ನು ಸೂಚಿಸಿ ಶ್ರೀಸರ್ಪಭೂಷಣ ಶಿವಯೋಗಿಗಳು ಹೇಳಿರುವದೇನೆಂದರೆ—

ರಾಗ— ಶಂಕರಾಭರಣ.

ಯಾವ ಕೃತ್ಯದೊಳಿರುತಿದ್ದರು ಶಿವಯೋಗಿ |
ಭಾವದೊಳಗೆ ಬ್ರಹ್ಮವನು ಬಿಡದಿಹನು || ಪ ||

ಸ್ವರವಭಿನಯತಾಳರಸಭಾವಗಳನೊಂದಿ |
ಶಿರದ ಕುಂಭವ ಮರೆಯದ ನಟಿಯಂತೆ ||
ಕರಣೇಂದ್ರಿಯಗಳ ವಿಷಯಭೋಗಪರನಾಗಿ |
ಪರಮಾತ್ಮನರುಹಿನೆಚ್ಚರದಪ್ಪದಿಹನು || ೧ ||

ಮನೆಗೆಲಸಗಳ ಮಾಡುತಲಿದ್ದರ್ ಸಂಕೇತ |
ದಿನಿಯನ ನೆನೆಸುತಿರುವ ಪಾಂಸ್ತ್ರೀಯಂತೆ ||

ತನುಧನವನಿತಾದಿ ಸಂಸಾರವನು ಹೊಂದಿ ।
ಮನದೊಳಾತ್ಮನ ಲಕ್ಷ್ಯವನು ಬಿಡದವನು ॥ ೨ ॥
ಮೆರೆವೇಳು ತೆರದ ಐಶ್ವರ್ಯ ಸೂಸುತೆ ಜನ್ಮ ।
ಪರಲೋಕಸುಖಕೊಂಬುವವಧೂನಿಯಂತೆ ॥
ಹೊರಗೆ ಸಕಲಲೋಕವ್ಯವಹಾರದೊಳಗಿದ್ದು ।
ಗುರುಸಿದ್ಧನನುಸಂಧಾನದಿ ಬೆರೆದವನು ॥ ೩ ॥

## ಯೋಗದ ಅವಿನಾಶಿತ್ವ.

ಮನೋನಿಗ್ರಹಸ್ವರೂಪವಾದ ಈ ಯೋಗದ ಸಿದ್ಧಿಯು ಬಹು ಕಾಲದ ಅಭ್ಯಾಸದಿಂದ ಸಾಧಿಸತಕ್ಕದ್ದಾಗಿರುವದು. ಮನಸ್ಸು ಅನೇಕ ಜನ್ಮಗಳಿಂದಲೂ ಭೌತಿಕವಸ್ತುಗಳ ವಿಚಾರವನ್ನೇ ಮಾಡಿ ಮಾಡಿ ಅದರ ಕಡೆಗೆ ಬಹು ವೇಗವಾಗಿ ಹರಿಯುತ್ತಿರುವದರಿಂದ ಆ ಪ್ರವಾಹವನ್ನು ದೇವರ ಕಡೆಗೆ ತಿರುಗಿಸುವದೆಂಬುದು ಕಷ್ಟ. ಆದ್ದರಿಂದಲೇ

"ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್"

ಎಂಬ ಗೀತೋಕ್ತಿಯಂತೆ ಅನೇಕಜನ್ಮಗಳಲ್ಲಿ ಈ ಪ್ರವಾಹವನ್ನು ತಿರುಗಿಸುವ ಯತ್ನವನ್ನು ಮಾಡಿ ಸಾಧಕನು ಕೊನೆಗೆ ಜಯಶೀಲನಾಗುವನು. ಬಲವಾದ ಪ್ರಯತ್ನವನ್ನು ಮಾಡಿದರೆ ಒಂದೇಜನ್ಮದಲ್ಲಿಯೇ— ಈಗಲೇ— ಈ ಕಾರ್ಯವನ್ನು ಸಾಧಿಸಬಹುದು. ಇದಕ್ಕೆ ಕೈಹಾಕಿ ಇದನ್ನು ಸಾಧಿಸುವದರೊಳಗೇ ಮನುಷ್ಯನ ಆಯುಸ್ಸು ಮುಗಿದರೆ ಈ ಪ್ರಯತ್ನಕ್ಕಾಗಿ ಅವನು ಪಟ್ಟ ಶ್ರಮವೆಲ್ಲಾ ವ್ಯರ್ಥವಾಗುವದೆಂದು ತಿಳಿಯಬಾರದು. ಈ ಪ್ರಯತ್ನದ ಪ್ರತಿಯೊಂದು ಕಣವೂ ಸಾಧಕನ ಮನಸ್ಸಿನಲ್ಲಿ ಸಂಸ್ಕಾರರೂಪವಾಗಿ ಉಳಿದುಕೊಂಡು ಅವನ ಉನ್ನತಿಯನ್ನು ಮಾಡಿಯೇ ಮಾಡುವದು. ಒಮ್ಮೆ ಅರ್ಜುನನಿಗೆ ಈ ವಿಷಯಕವಾದ ಸಂಶಯವು ಬಂತು. ಆಗ ಶ್ರೀಕೃಷ್ಣಪರಮಾತ್ಮನು ಹೇಳುತ್ತಾನೆ—

"ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ"

ಎಂದರೆ ಉನ್ನತಿಯ ಸಾಧನವನ್ನು ಮಾಡಿದ್ದಕ್ಕೆಂದಿಗೂ ನಾಶವಿಲ್ಲ; ಯೋಗಸಿದ್ಧಿಯಾಗುವದಕ್ಕೆ ಮುಂಚೆಯೇ ಮರಣವು ಒದಗಿದರೆ ಅವರು,

ಯೋಗದ ಫಲವಾಗಿ ಮಹಾಪುಣ್ಯಶಾಲಿಗಳಿಗೆ ಯೋಗ್ಯವಾದ ಪರಲೋಕವನ್ನು ಪಡೆದು ಅಲ್ಲಿ ಬಹುಕಾಲವಿದ್ದು ಆ ಮೇಲೆ ಭೂಲೋಕದಲ್ಲಿ ಸದಾಚಾರಿಗಳಾದ ಶ್ರೀಮಂತರ ಮನೆಯಲ್ಲಿಯೋ ಅಥವಾ ಬಡತನದಲ್ಲಿರುವ ಮಹಾಯೋಗಿಗಳ ಕುಲದಲ್ಲಿಯೋ ಹುಟ್ಟಿ ತಮ್ಮ ಸಾಧನವನ್ನು ಮುಂದುವರಿಸುತ್ತಾರೆ. ಸಾಮಾನ್ಯವಾಗಿ ಪುಣ್ಯಗಳನ್ನು ಮಾಡಿದವರೂ ಪರಲೋಕದ ವಾಸವನ್ನು ಮುಗಿಸಿದ ಮೇಲೆ ಶ್ರೀಮಂತರ ಮನೆಯಲ್ಲಿಯೇ ಹುಟ್ಟಬಹುದು. ಆದರೆ ಸದಾಚಾರಿಗಳಾದ ಶ್ರೀಮಂತರ ಮನೆಯಲ್ಲಿ ಹುಟ್ಟುವರೆಂಬ ನಿಯಮವಿಲ್ಲ. ಯೋಗಾಭ್ಯಾಸಿಗಳ ಜನ್ಮಕ್ಕೆ ದೊರೆಯುವ ಶ್ರೀಮಂತರ ಮನೆಯು ಸದಾಚಾರಿಗಳದಾಗಿಯೇ ಇರುವದು. ಹೀಗಿರುವದರಿಂದ ಆ ಯೋಗಾಭ್ಯಾಸಿಗೆ ಬಹು ಬೇಗ ತನ್ನ ಪೂರ್ವದ ದಾರಿಯನ್ನು ಹಿಡಿಯುವದಕ್ಕೆ ಅನುಕೂಲವಾಗುವದು. ಇನ್ನು ಆ ಯೋಗಾಭ್ಯಾಸಿಯ ಅಭ್ಯಾಸಬಲವು ಹೆಚ್ಚು ಉಜ್ಜ್ವಲವಾಗಿದ್ದರೆ ಅವನು ಬಡವರಾದ ಯೋಗಿಗಳ ಕುಲದಲ್ಲಿಯೇ ಹುಟ್ಟುವನು. ಐಶ್ವರ್ಯವಂತರ ಮನೆಯಲ್ಲಿ ಹುಟ್ಟುವದರಿಂದ ಆ ಯೋಗಾಭ್ಯಾಸವು ತನ್ನ ದಾರಿಗೆ ತಿರುಗಬೇಕಾದರೆ ಆ ಐಶ್ವರ್ಯಭೋಗದ ಸೆಳೆತದೊಡನೆ ಅಷ್ಟಿಷ್ಟಾದರೂ ಹೋರಾಡಬೇಕಾಗುತ್ತದೆ. ಬಡವರ ಮನೆಯಲ್ಲಿ ಹುಟ್ಟಿದರೆ ಅದರ ಯೋಚನೆಯಿಲ್ಲ. ಯೋಗಿಯು ಜನ್ಮಕ್ಕೆ ಆಶ್ರಯವನ್ನು ಕೊಡುವ ಆ ಬಡವರು ಪಾಪದ ಫಲರೂಪವಾದ ಬಡತನವನ್ನು ಹೊಂದಿದವರಾಗಿರುವದಿಲ್ಲ; ವೈರಾಗ್ಯದ ಪರಮಾವಧಿಯಿಂದ ಭಗವತ್ಪ್ರಾಪ್ತಿಯ ಸಂಪತ್ತಿನ ಮುಂದೆ ಉಳಿದುದೆಲ್ಲ ತುಚ್ಛವೆಂದು ಬಿಟ್ಟ ಮಹಾನುಭಾವರಾಗಿರುವರು. ಅವರೂ ಯೋಗಿಗಳಾಗಿರುವದರಿಂದ ಅವರಲ್ಲಿ ಜನ್ಮವನ್ನು ತೆಗೆದುಕೊಂಡ ಸಾಧಕನು ಮೀನಿನ ಮರಿಯಂತೆ ಹುಟ್ಟಿದೊಡನೆ ಯೋಗಸಾಗರದಲ್ಲಿ ಈಸಾಡುವದಕ್ಕೇ ಮೊದಲು ಮಾಡುವನು. ಇಂಥ ಪವಿತ್ರವಾದ ಪ್ರಭಾವವುಳ್ಳ ಯೋಗಾಭ್ಯಾಸವನ್ನು ಬಿಟ್ಟು ಉಳಿದ ಎಷ್ಟು ಕರ್ಮಗಳನ್ನು ಮಾಡಿ ಏನು ಪ್ರಯೋಜನ ?

“ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ”

ಎಂಬ ಗೀತೋಕ್ತಿಯಂತೆ ಯೋಗದ ವಿಚಾರವನ್ನು ಮಾಡುವವನು ಕೂಡ ಸಮಸ್ತವೇದೋಕ್ತಕರ್ಮಾನುಷ್ಠಾನಫಲಗಳಿಗಿಂತ ಹೆಚ್ಚಿನ ಫಲವನ್ನು

ಪಡೆಯುತ್ತಾನೆ. ಇನ್ನು ಅದನ್ನು ತಿಳಿದು ಸಾಧಿಸುವವನಿಗೆ ಆಗುವ ಫಲದ ಮಹತ್ತ್ವವನ್ನು ಹೇಳಬೇಕಾದ್ದೇನು ?

ಕರ್ಮಯೋಗದಿಂದ ಚಿತ್ತಶುದ್ಧಿಯನ್ನು ಮಾಡಿಕೊಂಡು ಚಿತ್ತಸ್ಥೈರ್ಯಕ್ಕಾಗಿ ರಾಜಯೋಗವನ್ನು ಸಾಧಿಸಿದ ಮೇಲೆ ತನಗೆ ಬಂಧನವನ್ನುಂಟು ಮಾಡಿರುವಂಥ ಸತ್ತ್ವರಜಸ್ತಮೋಗುಣಗಳ ಕಣ್ಣಿಯನ್ನೇ ಕಳಚಿಕೊಳ್ಳಬೇಕೆನ್ನುವವನು–

"ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।
ಸ ಗುಣಾನ್ಸಮತೀತ್ಯೈತಾನ್ಬ್ರಹ್ಮಭೂಯಾಯ ಕಲ್ಪತೇ ॥"

ಎಂಬ ಗೀತೋಕ್ತಿಯಂತೆ ಪರಮಾತ್ಮನನ್ನು ಅನನ್ಯವಾದ ಭಕ್ತಿಯೋಗದಿಂದ ಸೇವೆ ಮಾಡಿದರೆ ಅವನು ಗುಣಗಳ ತೊಡಕಿನಿಂದ ಸುಣುಚಿಕೊಂಡು ಬ್ರಹ್ಮತ್ವವನ್ನು ಪಡೆಯುತ್ತಾನೆ.

## ಒಂಬತ್ತನೇ ಕಿರಣ.

# ಭಕ್ತಿಯೋಗ.

---

### ಭಕ್ತಿಯ ಸೌಲಭ್ಯ.

ಪರಮಾತ್ಮನನ್ನು ಅನನ್ಯವಾದ ಭಕ್ತಿಯೋಗದಿಂದ ಸೇವೆ ಮಾಡಿದರೆ ಮನುಷ್ಯರು ದೇವತ್ವವನ್ನು ಪಡೆಯುವರೆಂದು ಭಗವದ್ಗೀತೆಯಲ್ಲಿ ಹೇಳಿದ್ದು ಭಗವಂತನ ಪರಮಾನುಗ್ರಹದ ಮಾತಾಗಿದೆ. ಏಕೆಂದರೆ ಭಗವಂತನು ಮನುಷ್ಯರೆದುರಿಗೆ ಬಂದು ಬಿನ್ನು ದರ್ಶನವನ್ನು ಕೊಡುವದು ಕೂಡ ದೊಡ್ಡ ಮಾತೆನಿಸುವದಿಲ್ಲ. ಮನುಷ್ಯನು ಅನೆತ್ಯವಾದ ಸಾಧನಗಳನ್ನೆಲ್ಲಾ ಮಾಡಿಕೊಂಡರೆ ಅವನ ಶುದ್ಧವಾದ ಮನಸ್ಸಿಗೆ ದೇವರು ಕಾಣಬಹುದು. ಆದರೆ ನಿಜವಾದ ಸಾಧನವು ಯಾವದೆಂಬದನ್ನು ತಿಳಿಯುವದು ಹೇಗೆ? ತಿಳಿದರಲ್ಲವೆ ಅದನ್ನು ಮಾಡುವದು? ಒಂದು ದೇವಸ್ಥಾನಕ್ಕೆ ಹೋಗುವದಕ್ಕೆ ನಾಲ್ಕು ಕಡೆಗಳಿಂದಲೂ ದಾರಿಗಳಿರುವಂತೆ ದೇವರ ಪಾದವನ್ನು ಕಾಣುವದಕ್ಕೆ ಎಷ್ಟೋ ಬಗೆಯ ಸಾಧನಗಳಿರಬಹುದು. ಅವುಗಳಲ್ಲಿ ಯಾವದು ಹತ್ತಿರದ ಹಾದಿಯೋ ಯಾವದು ದೂರದ ಹಾದಿಯೋ ಯಾವದು ಸುಗಮವಾದ ಹಾದಿಯೋ ಯಾವದು ಕಲ್ಲುಮುಳ್ಳುಗಳ ಹಾದಿಯೋ ಎಂಬಂತೆ ಸಾಧನಗಳ ವಿಚಾರದಲ್ಲಿಯೂ ಯಾವದು ಸುಲಭವಾದದ್ದೊ ಯಾವದು ಕಠಿನವಾದದ್ದೊ ಯಾವದರ ಸಿದ್ಧಿಯು ದೀರ್ಘಕಾಲವನ್ನಪೇಕ್ಷಿಸುವದೊ ಯಾವದರ ಸಿದ್ಧಿ ಕ್ಷಿಪ್ರದಲ್ಲಿ ಆಗುವದೊ ಇದನ್ನೆಲ್ಲಾ ತಿಳಿಯಲಿಚ್ಛಿಸುವದು ಮನಸ್ಸಿಗೆ ಸಹಜವಾಗಿರುವದು. ಇದನ್ನು ತಿಳಿದ ಮೇಲೆ ಮನುಷ್ಯನು ತನಗೆ ಪ್ರಶಸ್ತವೆನಿಸಿದ್ದನ್ನು ಹಿಡಿಯುವದಕ್ಕನುಕೂಲವಾಗುತ್ತದೆ. ಆದ್ದರಿಂದ ಮನುಷ್ಯನು ಗುಣಾತೀತನಾಗುವ ಸಾಧನಕ್ಕೆ ಪರಮಾತ್ಮನೇ ತನ್ನ ಮನಸ್ಸನ್ನು ಬಿಚ್ಚಿ ಭಕ್ತಿಯೋಗದ ಕಡೆಗೆ ಕೈಮಾಡಿ ತೋರಿಸುವದು ಅವನ ಅನುಗ್ರಹವೆಂದು ತಿಳಿಯಬೇಕು. ಕರ್ಮ

ಯೋಗ ಮತ್ತು ರಾಜಯೋಗ ಮೊದಲಾದ ಸಾಧನಗಳನ್ನೂ ಹಿಂದೆ ಅವನೇ ತೋರಿಸಿರುವನಾದರೂ ಎಲ್ಲಾ ಸಾಧನಗಳಿಗಿಂತ ಸುಲಭವಾದ ಮತ್ತು ಎಲ್ಲರ ಸ್ವಭಾವಕ್ಕೂ ಒಪ್ಪುವಂಥ ಭಕ್ತಿಯೋಗವನ್ನು ಉಪದೇಶ ಮಾಡಿದ್ದು ನಿಜವಾಗಿಯೂ ಅವನ ಪರಮಾನುಗ್ರಹವು.

ಭಕ್ತಿಯೋಗವೆಂಬುದು ಹತ್ತರೊಡನೆ ಹನ್ನೊಂದನೆಯದೆಂಬಂಥ ಸಾಧನವಲ್ಲ. ಭಕ್ತಿಯೋಗವೇ ನಿಜವಾದ ಸಾಧನವೆಂದೂ ಭಕ್ತಿಯೋಗದಿಂದ ಮಾತ್ರವೇ ದೇವರು ದೊರೆಯುವನೆಂದೂ ಮುಂಡಕೋಪನಿಷತ್ತು ಸಾರುತ್ತದೆ. ನೋಡಿರಿ—

"ನಾಯಮಾತ್ಮಾ ಪ್ರವಚನೇನ ಲಭ್ಯೋ
ನ ಮೇಧಯಾ ನ ಬಹುನಾ ಶ್ರುತೇನ ।
ಯಮೇವೈಷ ವೃಣುತೇ ತೇನ ಲಭ್ಯ
ಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥"

ತಾತ್ಪರ್ಯವೇನೆಂದರೆ—ವೇದಶಾಸ್ತ್ರಗಳನ್ನೆಲ್ಲಾ ಗುಟುಕಿ ಗುಟುಕಿ ಹಾಕಿದರೂ ಆತ್ಮಸ್ವರೂಪವು ಸಿಕ್ಕುವದಿಲ್ಲ; ಸಮಸ್ತ ಗ್ರಂಥಗಳ ಅರ್ಥವನ್ನೂ ಬುದ್ಧಿಯಲ್ಲಿ ಹೇರಿಕೊಂಡರೂ ದೇವತತ್ವವು ದೊರೆಯುವದಿಲ್ಲ. ಇತಿಹಾಸಪುರಾಣಗಳನ್ನೆಲ್ಲಾ ಕೇಳಿ ಕೇಳಿ ಮುಗಿಸಿದರೂ ದೇವರು ಕಾಣಿಸುವದಿಲ್ಲ. ಯಾವನು ಪರಮಾತ್ಮನನ್ನೇ ಸಾಕ್ಷಾತ್ಕಾರಮಾಡಿಕೊಳ್ಳಬೇಕೆಂದು ಅವನ ಕಡೆಗೆ ಪ್ರೇಮಪ್ರವಾಹವನ್ನು ಹರಿಸುವನೋ ಅವನ ಪ್ರೇಮಕ್ಕೆ ಮಾತ್ರ ದೇವರೊಲಿಯುವನು. ಬೇರೆ ಯಾವ ಸಾಧನಕ್ಕೂ ಇಲ್ಲಿ. ದೇವರು ಸರ್ವವ್ಯಾಪಿಯಾಗಿ ಎಲ್ಲೆಲ್ಲಿಯೂ ಇದ್ದರೂ ಅವನು ನಮಗೆ ಕಾಣದಂತೆ ಅಜ್ಞಾನವೆಂಬ ಪರದೆಯಿಂದ ನಮ್ಮ ಕಣ್ಣಿಗೆ ಮುಚ್ಚಿಕೊಂಡಿರುವದು. ನಾವು ದೇವರ ಕಡೆಗೆ ಪ್ರೇಮದ ಪ್ರವಾಹವನ್ನು ಹರಿಸಿದರೆ ಅದರಿಂದ ಸಂತುಷ್ಟನಾದ ಅವನು ಆ ಪರದೆಯನ್ನು ಹಾರಹೊಡೆದು ತಾನೇ ಮೈದೋರಿ ಕಾಣಿಸಿಕೊಳ್ಳುವನು. ಆ ಮೇಲೆ, ಈಗ ನಮ್ಮ ಕಣ್ಣೆದುರಿಗೆ ಮನೆ, ಮಠ, ಮನುಷ್ಯರು, ಪಶುಗಳು—ಇವೆಲ್ಲಾ ಕಾಣುವಂತೆ ದೇವರು ನಮಗೆ ಎಲ್ಲೆಲ್ಲಿಯೂ ಕಾಣುವನು. ಆಗ ಮನುಷ್ಯನ ಧ್ಯೇಯವು ಸಾರ್ಥಕವಾಗುವದು.

ಭಗವಂತನು ಭಗವದ್ಗೀತೆಯಲ್ಲಿ ಹೇಳುವದೇನೆಂದರೆ —

"ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥"

ದೇವರು ಕಾಣದಂತೆ ನಮ್ಮ ಕಣ್ಣನ್ನು ಆವರಿಸಿರುವ ಪರೆ ಯಾವದೆಂದರೆ ಸತ್ತ್ವ, ರಜ, ತಮ— ಎಂಬ ಮೂರು ಗುಣಗಳ ಸಾಮ್ಯಾವಸ್ಥೆಯ ರೂಪವಾದ ಪರಮಾತ್ಮನ ಮಾಯಾಶಕ್ತಿ. ಅದನ್ನು ದಾಟುವದು ಬಹು ಕಠಿನ. ಸರ್ವಶಕ್ತನಾದ ದೇವರ ಮಾಯೆಯನ್ನು ಕ್ಷುದ್ರಪ್ರಾಣಿಗಳಾದ ನಾವು ಹೇಗೆ ಹಿಮ್ಮೆಟ್ಟಿಸಲಾದೀತು? ನಮ್ಮ ಕೈಲಾಗದ ಸಂದರ್ಭದಲ್ಲಿ ನಾವೇನು ಮಾಡಬೇಕು? ಆ ಮಾಯೆಯೆಂಬ ಪರದೆಯನ್ನು ಓರೆಮಾಡಿ ನಮಗೆ ದರ್ಶನವನ್ನು ಕೊಡುವಂತೆ ನಾವು ಅವನಿಗೇ ಶರಣು ಹೋಗಬೇಕು; ಅವನ ಅನುಗ್ರಹದಿಂದಲೇ ನಾವು ಪಾರಾಗಬೇಕು. ಪರಮಾತ್ಮನ ವಿರಾಟ್ಸ್ವರೂಪವನ್ನು ನೋಡಬೇಕೆಂಬ ಉತ್ಕಟವಾದ ಇಚ್ಛೆಯುಂಟಾದಾಗ ಅರ್ಜುನನು ಶ್ರೀಕೃಷ್ಣನಿಗೇ ಶರಣು ಹೋಗಿದ್ದಾನೆ. ಆಮೇಲೆ, ಭಗವಂತನು ದಿವ್ಯದೃಷ್ಟಿಯನ್ನು ಕೊಟ್ಟದ್ದರಿಂದಲೇ ಅರ್ಜುನನು ವಿರಾಟ್ಸ್ವರೂಪವನ್ನು ನೋಡಿದವನಾಗಿದ್ದಾನೆ. ದಿವ್ಯದೃಷ್ಟಿಯೆಂದರೇನು? ಮಾಯೆಯೆಂಬ ಪರದೆಯನ್ನು ಪಾರಹೊಡೆದ ಮೇಲೆ ಅಪ್ರತಿಹತವಾಗಿ ಕಾಣುವ ದೃಷ್ಟಿಯು ದಿವ್ಯದೃಷ್ಟಿ. ಈ ದಿವ್ಯದೃಷ್ಟಿಯನ್ನು ಪಡೆಯುವ ಯೋಗವು ಅರ್ಜುನನಿಗೆ ಭಕ್ತಿಯೋಗದಿಂದಲೇ ಬಂದಿರುವದು.

ಹೀಗೆ ದೇವರು ತಾನೇ ಕಾಣಿಸಿಕೊಳ್ಳುವ ವಿಚಾರದಲ್ಲಿ ಭಗವಾನ್ ಶ್ರೀರಾಮಕೃಷ್ಣರು ಒಂದೆಡೆಯಲ್ಲಿ ಹೇಳಿರುವದೇನೆಂದರೆ—

"ಕಾವಲುಗಾರನು ಮುಂದುಗಡೆ ಮಾತ್ರ ಬೆಳಕು ಬೀಳುವ ಕಂದೀಲಿನಿಂದ ಮುಂದೆ ಇರುವ ಮನುಷ್ಯನನ್ನು ನೋಡುವದಕ್ಕಾಗುತ್ತದೆ. ಆದರೆ ಅವನು ಆ ಬೆಳಕನ್ನು ತನ್ನ ಮುಖದ ಮೇಲೆ ಹಾಕಿಕೊಂಡು ತೋರಿಸಿಕೊಂಡ ಹೊರತು ಅವನನ್ನು ಯಾರೂ ಗುರ್ತು ಹಿಡಿಯುವದಕ್ಕಾಗುವದಿಲ್ಲ. ಹಾಗೆಯೇ ದೇವರು ಪ್ರತಿಯೊಬ್ಬರನ್ನೂ ನೋಡಬಲ್ಲನು. ಅವನು ದಯವಿಟ್ಟು ಕಾಣಿಸಿಕೊಂಡ ಹೊರತು ಅವನನ್ನು ಯಾರು ನೋಡುವದಕ್ಕೂ ಆಗುವದಿಲ್ಲ.

ಈ ಅಭಿಪ್ರಾಯವನ್ನು ಪರಮಾತ್ಮನೇ ಸ್ಪಷ್ಟವಾಗಿ ಆಡಿ ತೋರಿಸಿದ್ದಾನೆ.

"ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥"

ಇದರ ಅರ್ಥವೇನೆಂದರೆ— ಹೇ, ಅರ್ಜುನ, ಈ ರೀತಿಯಾದ ನನ್ನ ಸ್ವರೂಪದ ಪ್ರಕಾರವನ್ನು ತಿಳಿದುಕೊಳ್ಳುವದೂ ನಿಜತ್ವವನ್ನು ನೋಡುವದೂ ಮತ್ತು ಮೋಕ್ಷವನ್ನು ಪಡೆಯುವದೂ— ಇವುಗಳೆಲ್ಲಾ ಅನನ್ಯವಾದ ಭಕ್ತಿಯಿಂದ ಮಾತ್ರ ಸಾಧ್ಯವು.

ಅನನ್ಯವಾದ ಭಕ್ತಿಯೆಂದರೇನೆಂಬುದಕ್ಕೆ ಭಕ್ತ್ಯಾಚಾರ್ಯರಲ್ಲಿ ಶ್ರೇಷ್ಠರಾದ ನಾರದರು—

"ಅನ್ಯಾಶ್ರಯಾಣಾಂ ತ್ಯಾಗೋಽನನ್ಯತಾ"

ಎಂದು ಸೂತ್ರವನ್ನು ಹೇಳಿದ್ದಾರೆ. ಉಳಿದ ಆಶ್ರಯಗಳನ್ನೆಲ್ಲಾ ಬಿಟ್ಟಿರುವದೇ ಅನನ್ಯಭಾವವೆಂದು ತಾತ್ಪರ್ಯ. ಲೋಕದಲ್ಲಿ ಮನುಷ್ಯನು ತನ್ನ ಯೋಗಕ್ಷೇಮದ ಭಾರವನ್ನು ಬಹುಮಟ್ಟಿಗೆ ಮಕ್ಕಳುಮರಿಗಳ ಮೇಲೆಯೂ ಹಣಕಾಸುಗಳ ಮೇಲೆಯೂ ತನ್ನ ಉದ್ಯೋಗದ ಮೇಲೆಯೂ ಶ್ರೀಮಂತರ ಮೇಲೆಯೂ ರಾಜರ ಮೇಲೆಯೂ ಇಟ್ಟಿರುತ್ತಾನೆ; ಇವೆಲ್ಲವುಗಳ ಜೊತೆಗೆ— ಊಟದ ನಡುವಣ ಉಪ್ಪಿನಕಾಯಂತೆ ದೇವರನ್ನು ನಂಬಿರುವದಾಗಿಯೂ ಹೇಳುತ್ತಾನೆ. ಹೀಗೆ ದೇವರ ಮೇಲೆ ಭಾರವನ್ನಿಡೋಣವು ಭಕ್ತಿಯಲ್ಲ. ಈ ಲೌಕಿಕನು ದೇವರನ್ನು ನಂಬಿರುವದು ಬರೀ ಮಾತಿನಲ್ಲಿ. ಅವನ ನಂಬಿಕೆಯೆಲ್ಲಾ ಮಕ್ಕಳುಮರಿ ಮೊದಲಾದವರ ಮೇಲೆಯೇ. ಇಂಥ ಸಂದರ್ಭದಲ್ಲಿ ದೇವರು ಅವನ ಭಾರವನ್ನು ತನ್ನ ಮೈಮೇಲೆ ತೆಗೆದುಕೊಳ್ಳುವದಿಲ್ಲ. ಏಕೆಂದರೆ ಅವನ ಯೋಗಕ್ಷೇಮವನ್ನು ವಹಿಸುವದಕ್ಕೆ ಮಕ್ಕಳುಮರಿ ಮೊದಲಾದ ಬಹಳ ಸಾಧನಗಳಿವೆ. ಸ್ವಸಾಮರ್ಥ್ಯದಿಂದಲೇ ಬೇರೆಯಾಗಿ ತನ್ನ ಸ್ಥಿತಿಗತಿಯನ್ನು ನೋಡಿಕೊಳ್ಳುವ ಮಗನ ಯೋಗಕ್ಷೇಮದ ಹೊರೆಯು ತಂದೆಯ ತಲೆಯಮೇಲೆ ಹೇಗೆ ಇರುವದಿಲ್ಲವೋ ಹಾಗೆ ತನ್ನ ಯೋಗಕ್ಷೇಮವನ್ನು ತಾನು ನೋಡಿಕೊಳ್ಳುವ ಮನುಷ್ಯನ ಭಾರವು ದೇವರ ಮೇಲೆ ಇರುವದಿಲ್ಲ. ಅನಾಥ

ರನ್ನು ರಕ್ಷಿಸುವದು ದೇವರ ಸ್ವಭಾವ. ಮಕ್ಕಳುಮರಿ ಮೊದಲಾದವರನ್ನು ನಾಥರನ್ನಾಗಿ ಉಳ್ಳವರ ಚಿಂತೆಯನ್ನು ದೇವರೇಕೆ ಮಾಡಿಯಾನು? ಆದ್ದರಿಂದ ತನ್ನ ಯೋಗಕ್ಷೇಮಕ್ಕೆ ಮಕ್ಕಳುಮರಿ ಮೊದಲಾದ ನಾಥರು ಸಾಲದೆಂದು ಅವರ ಮೇಲಿಟ್ಟಿರುವ ಭಾರವನ್ನೆಲ್ಲಾ ತೆಗೆದು ಎಲ್ಲಾ ಭಾರವನ್ನು ಪರಮಾತ್ಮನಿಗೊಪ್ಪಿಸುವದೇ ಅನನ್ಯಭಕ್ತಿ. ಹೀಗೆಂದು ಭಕ್ತನು ಮಕ್ಕಳುಮರಿ ಮೊದಲಾದವರನ್ನೆಲ್ಲಿ ಕಾಡುಪಾಲು ಮಾಡಬಾರದು. ಅವರೊಡನೆ ಎಂದಿನಂತೆ ವ್ಯವಹಾರನಡಿಸಿಕೊಂಡಿರಬಹುದು. ಆದರೆ ಅವರಿಂದ ತನ್ನ ಆತ್ಯಂತಿಕಕ್ಷೇಮವಾದೀತೆಂದು ಮೋಸಹೋಗಬಾರದು. ಅದಕ್ಕೆ ದೇವರೊಬ್ಬನೇ ಕರ್ತನು. ಹೀಗೆಂದು ತಿಳಿದು ನಡೆಯುವದೇ ಅನನ್ಯಭಕ್ತಿ.

ಸುಮ್ಮನೆ ಅವರಿವರನ್ನು ಅವಲಂಬಿಸಿಕೊಂಡು ಚಿಂತಿಸುವದರಲ್ಲೇನು ಹುರುಳಿದೆ? ಈ ವಿಷಯದಲ್ಲಿ ಶ್ರೀಪುರಂದರದಾಸರು ಹೇಳಿರುವದೇನೆಂದರೆ—

ಸುರಟಿ. ಆದಿತಾಳ.

ಕೊಡುವ ಕರ್ತ ಬೇರೆ । ಇರುತಿರೆ । ಬಿಡು ಬಿಡು ಚಿಂತೆಯನು ॥ಪ॥

ಒಡೆಯನಾಗಿ ಮೂಜಗವನು ಪಾಲಿಪ ।

ಬಡವರುದ್ಧಾರಕ ಭಕ್ತರೊಡೆಯ ಹರಿ ॥ ಅ. ಪ. ॥

ಕಲ್ಲಿನೊಳಗೆ ಇರುವ । ಕಪ್ಪೆಗೆ । ಅಲ್ಲಿ ಉದಕ ಕೊಡುವ ॥
ಎಲ್ಲ ಜೀವಜಾತಿಗಳನೆ ಕಾವ । ವಲ್ಲಭ ಶ್ರೀಹರಿ ಎಲ್ಲ ತುಂಬಿರುತಿರೆ ॥೧॥

ಅಸಗ್ಯೆವು ಮಾಡದ । ಆಹಾರವ । ತಾನೆ ನಿತ್ಯ ಈವ ॥
ದೀನರೊಡೆಯ ಶ್ರೀನಿವಾಸ ದಯಾನಿಧಿ । ಮಾನದಿಂದ ಕಾವ ಭಾನುಕೋಟಿತೇಜ ॥೨॥

ಸರಸಿಜಾಕ್ಷ ತನ್ನ । ಸೇರಿದ । ನರರ ಬಿಡನು ಘನ್ನ ।
ಪರಮದಯಾನಿಧಿ ಭಕುತರ ಸಲಹುವ । ಪುರಂದರ ವಿಠಲ ಪುಷ್ಪಶರನ ಪಿತ ॥೩॥

ದೊಡ್ಡವರ ಉಪದೇಶವೆಲ್ಲಾ ಹೀಗೆಯೇ ಇರುವದು. ಶ್ರೀಕನಕದಾಸರೂ ಇದೇ ಅಭಿಪ್ರಾಯವನ್ನೇ ಹಾಡಿರುವರು.

ಬಿಲಹರಿ — ಅಟತಾಳ

ತಲ್ಲಣಿಸದಿರು ಕಂಡ್ಯ ತಾಳು ಮನವೇ । ಸ್ವಾಮಿ ।
ನಿಲ್ಲದೇ ರಕ್ಷಿಪನು ಇದಕೆ ಸಂಶಯವೇ? ॥ ಪಲ್ಲ ॥

ಬೆಟ್ಟದ ತುದಿಯಲ್ಲಿ ಬೆಳೆದ ವೃಕ್ಷಂಗಳಿಗೆ ।
ಕಟ್ಟೆಯಾ ಕಟ್ಟಿ ನೀರೆರೆದರಾರು?
ಹುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದ ಮೇಲೆ ।
ಘಟ್ಟಾಗಿ ರಕ್ಷಿಪನು ಇದಕೆ ಸಂಶಯವಿಲ್ಲ ॥ ೧ ॥

ನವಿಲಿಂಗೆ ಚಿತ್ರವರ್ಣವನು ಬರೆದವರಾರು? ।
ಪವಳದ ಲತೆಗೆ ಕೆಂಪಿಟ್ಟರಾರು? ॥
ಸವಿಮಾತಿನರಗಿಳಿಗೆ ಹಸರು ಬರೆದವರಾರು? ।
ಅವ ಮಾಡಿದಾ ರೀತಿಯಲಿ ಪೊರೆಯುವನೆ ನಮ್ಮ? ॥ ೨ ॥

ಕಲ್ಲಿನಲಿ ಹುಟ್ಟಿ ತಾ ಕೂಗುವ ಕಪ್ಪೆಗೆ ।
ಅಲ್ಲಿ ಆಹಾರವ ನಿರ್ಮಿಸಿದರಾರು? ।
ಬಲ್ಲಿದನು ಕಾಗಿನೆಲೆಯಾದಿಕೇಶವರಾಯ ।
ನಿಲ್ಲದೆ ರಕ್ಷಿಸುವ ಇದಕೆ ಸಂಶಯ ಬೇಡ ॥ ೩ ॥

ಹೀಗೆ ತಿಳಿಯಲಾರದೆ ಜಗದಲ್ಲಿ ಆಸಕ್ತವಾದ ಮನಸ್ಸಿನಿಂದ ಭಕ್ತಿಸಾಧನವು ನಡೆಯಲಾರದೆಂಬ ವಿಷಯದಲ್ಲಿ ಶ್ರೀರಾಮಕೃಷ್ಣಪರಮಹಂಸರು ಹೇಳಿರುವದೇನೆಂದರೆ—

"ಸಾಸುವೆಯನ್ನು ಮಂತ್ರಿಸಿ ಹಾಕಿದರೆ ದೃಷ್ಟಿದೋಷವು ಪರಿಹಾರವಾಗುತ್ತದೆ. ಆ ಸಾಸುವೆಗೇ ದೃಷ್ಟಿಯಾಗಿದ್ದರೆ ಅದು ದೃಷ್ಟಿದೋಷವನ್ನು ಹೇಗೆ ಕಳೆದೀತು? ದೇವರಧ್ಯಾನವನ್ನು ಮಾಡಬೇಕಾದ ಮನಸ್ಸು ಪ್ರಾಪಂಚಿಕವಾದ ತುಚ್ಛವಿಷಯಗಳಲ್ಲಿ ಆಸಕ್ತವಾಗಿದ್ದರೆ ಆ ಅಶುದ್ಧವಾದ ಉಪಕರಣದಿಂದ ಭಕ್ತಿಸಾಧನಗಳನ್ನು ಸಮರ್ಪಕವಾಗಿ ಹೇಗೆ ನಡೆಸಲಾದೀತು?"

ಭಕ್ತಿಯು ಎಲ್ಲರ ಸ್ವಭಾವಕ್ಕೂ ಹೊಂದುವದಕ್ಕೆ ಕಾರಣವೇನೆಂದರೆ ಅದು ಪ್ರೇಮಸ್ವರೂಪವಾಗಿರುವದರಿಂದ. ಲೋಕದಲ್ಲಿ ಪ್ರೇಮ

ವಿಲ್ಲದ ಪ್ರಾಣಿಯೇ ಇಲ್ಲ. ಮೃಗಗಳಲ್ಲಿಯೂ ಕೂಡ ಪ್ರೇಮದ ಚಿಹ್ನಗಳು ಬೇಕಾದಷ್ಟು ಕಾಣುವವು. ಅವುಗಳಲ್ಲಿ ದ್ವೇಷದ ಚಿಹ್ನಗಳೂ ಕಾಣುವದೇನೂ ಸುಳ್ಳಲ್ಲ. ಆದರೆ ಪ್ರೇಮದ ಚಿಹ್ನವಿಲ್ಲದೆ ಇಲ್ಲ. ಅವೂ ತಮ್ಮ ಮರಿಗಳನ್ನು ಮುದ್ದುಮಾಡಿಯೇ ಮಾಡುವವು. ಕ್ಷುದ್ರಪ್ರಾಣಿಗಳಲ್ಲಿಯೇ ಹೀಗಿರುವಾಗ ಮನುಷ್ಯನಲ್ಲಿ ಹೇಳಬೇಕಾದ್ದೇನು? ಹೀಗೆ ಸಹಜವಾಗಿ ಮನುಷ್ಯನಲ್ಲಿರುವ ಈ ಗುಣವನ್ನು ದೇವರ ಕಡೆಗೆ ಚೆನ್ನಾಗಿ ಬೆಳೆಸಿಬಿಟ್ಟರಾಯಿತು. ಈ ಪ್ರೇಮವೆಂಬ ಗುಣವನ್ನು ಸಾಮಾನ್ಯವಾಗಿ ಇತರಮನುಷ್ಯರ ಮೇಲೆಯೂ ಪಶುಗಳ ಮೇಲೆಯೂ ಬೆಳೆಸಹೋದರೆ ಅದು ನಮ್ಮಿಷ್ಟದಂತೆ ಬೆಳೆಯದೆ ನಡುನಡುವೆ ತುಂಡುತುಂಡಾಗಬಹುದು. ಏಕೆಂದರೆ ನಾವು ನಮ್ಮ ಪ್ರೇಮಪ್ರವಾಹವನ್ನು ಇತರರ ಮೇಲೆ ಹರಿಸುವದಕ್ಕೆ ಹೋದಾಗ ಇತರರು ಅದನ್ನು ಒಳಗೊಳ್ಳುವಂಥ ಪ್ರೇಮರೂಪರಾಗಿಯೇ ಇರುವರೆಂಬ ನಿಯಮವಿಲ್ಲ. ಇದ್ದರೆ ಆಗಬಹುದು. ಹಾಗಿಲ್ಲದೆ ಅವರು ನಮಗೆ ವಿರುದ್ಧವಾದ ಬಡಬಾಗ್ನಿಯರಾಗಿದ್ದರೆ ಮಾತ್ರ ನಮ್ಮ ಪ್ರೇಮಪ್ರವಾಹವು ಅಲ್ಲಿಯೇ ಬತ್ತಿಬಿಡುವದು. ಹೀಗಾಗಿ ಇಂಥ ಸ್ಥಿತಿಯಲ್ಲಿ ನಮ್ಮ ಪ್ರೇಮಪ್ರವಾಹವು ಸರಾಗವಾಗಿ ಮುಂದುವರಿಯುವದಿಲ್ಲ. ಯಾರ ಕಡೆಗೆ ನಾವು ಪ್ರೇಮಪ್ರವಾಹವನ್ನು ಹರಿಸುವೆವೋ ಅವರು ನಮ್ಮ ಭಾಗಕ್ಕೆ ಬಡಬಾಗ್ನಿಯಂತೆ ಪ್ರತಿಕೂಲರಾಗದೆ ಉಪೇಕ್ಷೆಯಿಂದ ಇದ್ದರೂ ಕೂಡ ನಮ್ಮ ಪ್ರೇಮವು ಅವರ ಒಳಹೊಕ್ಕು ಅವರ ಪ್ರೇಮದ ಅಲೆಯನ್ನೆಬ್ಬಿಸಿ ಅವರೊಡನೆ ಒಂದಾಗಿಬಿಡಬಹುದು. ಇದೂ ಕೂಡ ಹೆಚ್ಚು ಪ್ರಯಾಸಕರವೆ. ನಾವು ಪ್ರೇಮದ ಮೂಲಕ ಪರಮಾತ್ಮನನ್ನು ಸೇರುವದಕ್ಕೆ ಈ ಅಡಚಣೆಗಳೇನೇನೂ ಇಲ್ಲ. ಹೇಗೆಂದರೆ ಅವನು ಬಡಬಾಗ್ನಿಯಂಥ ಕ್ರೂರಸ್ವಭಾವದವನಂತು ಎಂದಿಗೂ ಅಲ್ಲ. ಜೀವರನ್ನು ಹೀರಿ ಹಿಪ್ಪೇಮಾಡಬೇಕೆಂಬ ದುಷ್ಟವಾದ ಉದ್ದೇಶವವನಿಗೆಂದಿಗೂ ಇಲ್ಲ. ತಂದೆಯು ತನ್ನ ಮಕ್ಕಳನ್ನೆಂದಿಗಾದರೂ ಹಿಂದಕ್ಕಟ್ಟುವನೆ? ಇಷ್ಟೇ ಅಲ್ಲ; ಪರಮಾತ್ಮನು ಜೀವರ ವಿಷಯಕ್ಕೆ ಉಪೇಕ್ಷೆಯನ್ನು ಕೂಡ ಮಾಡುವವನಲ್ಲ. ಉತ್ಥಾನಪಾದನಂಥ ಸ್ತ್ರೀಕಾಮುಕನೊಬ್ಬನು ತನ್ನ ಮಗನನ್ನು ಬರಮಾಡಿಕೊಳ್ಳುವದಕ್ಕೆ ಉಪೇಕ್ಷೆಮಾಡಿದ್ದು ಲೋಕದ ಸಹಜಸ್ವಭಾವ

ವಲ್ಲ. ಮಕ್ಕಳು ತನ್ನ ಕಡೆಗೆ ಬಂದರೆಂದರೆ ಎರಡು ಕೈಗಳನ್ನೂ ಅಗಲಿಸಿಕೊಂಡು ಆಲಿಂಗಿಸುವದಕ್ಕೆ ಹೋಗದೆ ಇರುವದು ವಿವೇಕಿಯಾದ ತಂದೆಗೆ ಶಕ್ಯವೇ ಇಲ್ಲ. ಇದೇ ರೀತಿಯಲ್ಲಿ ಜೀವರು ತನ್ನ ಕಡೆಗೆ ಬಂದಾಗ ಅವರನ್ನು ಆದರದಿಂದ ಬರಮಾಡಿಕೊಳ್ಳದೆ ಇರುವದು ಪರಮಾತ್ಮನಿಗೆ ಶಕ್ಯವೇ ಇಲ್ಲ. ಇಷ್ಟರಿಂದ ನಾವು ದೇವರ ಕಡೆಗೆ ನಮ್ಮ ಪ್ರೇಮಪ್ರವಾಹವನ್ನು ತಿರುಗಿಸಿದೆವೆಂದರೆ ದೇವರು ಅದನ್ನು ತನ್ನ ಕಡೆಗೆ ಎಳೆದುಕೊಳ್ಳುವದಕ್ಕೆ ತನ್ನ ಪ್ರೇಮವನ್ನು ಸಮುದ್ರವಾಗಿ ಮಾಡುವನು. ಇದರಿಂದ ನಮ್ಮ ಪ್ರೇಮಪ್ರವಾಹವು ಒಮ್ಮೆ ಅವನ ಕಡೆಗೆ ಹೊರಟಿತೆಂದರೆ ಮುಂದೆ ಭರದಿಂದ ಸಾಗುವದು.

ಹೀಗೆ ಅವನು ನಮ್ಮನ್ನು ಎಳೆದುಕೊಳ್ಳುವನೆಂದು ಹೇಗೆ ನಂಬಬಹುದೆಂದರೆ ಅವನು ಬಡಬಾಗ್ನಿಯಂಥ ನಮ್ಮ ವಿರುದ್ಧದ ಸ್ವಭಾವದವನೂ ಮತ್ತು ಉಪೇಕ್ಷಕನೂ ಅಲ್ಲವೆಂದು ಹಿಂದೆ ಹೇಳಿದ್ದಾಗಿದೆಯಷ್ಟೆ. ಈಗ ಅವನು ನಮ್ಮ ಸಜಾತೀಯಸ್ವಭಾವದ ಪರಮಾವಧಿಯೆಂದು ತೋರಿಸಬಹುದು. ಅವನನ್ನು ಪಡೆಯುವದಕ್ಕೆ ನಾವು ನಮ್ಮ ಪ್ರೇಮವನ್ನು ಸಾಧನವಾಗಿ ಮಾಡಿಕೊಳ್ಳುತ್ತೇವಷ್ಟೆ. ಆ ಪರಮಾತ್ಮನು ಪ್ರೇಮಸಾಗರನು. ಈ ಅಭಿಪ್ರಾಯವು ನಮ್ಮ ಕೈಗಂಟಿಸದಲ್ಲ.

"ರಸೋ ವೈ ಸಃ, ರಸಗ್ಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ"

ಎಂದು ತೈತ್ತಿರೀಯಶ್ರುತಿಯು ಹೊಗಳುತ್ತದೆ. ಪರಮಾತ್ಮನು ಪ್ರೇಮಸ್ವರೂಪನೆಂದೂ ಜೀವರು ಆನಂದಪಡುವದಾಗಲೆಲ್ಲಾ ಆ ಪರಮಾತ್ಮನ ಅಂಶವು ದೊರೆತಿರುವದೆಂದೂ ಅದರ ಅರ್ಥ. ನಮ್ಮ ಪ್ರೇಮವೆಂಬುದು ಸಣ್ಣ ಕಾಲುವೆಯಂಥದ್ದು. ಪ್ರೇಮದ ನಿಧಿಯೇ ಆದ ಪರಮಾತ್ಮನು ನಮ್ಮ ಪ್ರೇಮವನ್ನು ಆದರದಿಂದ ಬರಮಾಡಿಕೊಳ್ಳುವನೆಂಬುದರಲ್ಲಿ ಸಂಶಯವೇನು? ಸಣ್ಣ ಸಣ್ಣ ನದಿಗಳೆಲ್ಲಾ ಸಮುದ್ರದ ಸೆಳತಕ್ಕೆ ಸಿಕ್ಕಿದವುಗಳಂತೆ ಅದರ ಕಡೆಗೆ ಓಡುತ್ತಿರುವದನ್ನು ನಾವು ಪ್ರತಿದಿನವೂ ಕಣ್ಣಾರೆ ನೋಡುತ್ತಿದ್ದೇವೆ. ಆಕಾಶದಿಂದ ಭೂಮಿಯ ಮೇಲೆ ಬಿದ್ದ ನೀರೆಲ್ಲಾ ಸಮುದ್ರಕ್ಕೇ ಸೇರುವದೆಂದು—

"ಆಕಾಶಾತ್ಪತಿತಂ ತೋಯಂ ಯಥಾ ಗಚ್ಛತಿ ಸಾಗರಮ್"

ಎಂಬ ಶ್ಲೋಕಾರ್ಥವು ಹೇಳುತ್ತದೆ. ಸಮುದ್ರವು ಹನಿಹನಿಯನ್ನೂ ಸೆಳೆದುಕೊಳ್ಳುವದೆಂದ ಮೇಲೆ ಹಳ್ಳಗಳನ್ನೂ ನದಿಗಳನ್ನೂ ಸೆಳೆದುಕೊಳ್ಳುವದೇನು ದೊಡ್ಡ ಮಾತು! ಹೀಗೆ ಪ್ರೇಮದ ಕಾಲುವೆಯ ರೂಪವಾಗಿ ಹೊರಟ ನಮ್ಮನ್ನು ಅದು ತನ್ನ ಕಡೆಗೆ ಸೆಳೆದುಕೊಂಡೇ ತೀರುವದು. ನಾವೂ ಅವನಕಡೆಗೆ ಹೋಗುವದಕ್ಕೆ ಯತ್ನಿಸುವೆವು. ಅವನೂ ನಮ್ಮನ್ನು ಎತ್ತಿಕೊಳ್ಳುವನು. ಹೀಗಾಗಿ ಭಗವಂತನನ್ನು ಪಡೆಯುವದಕ್ಕೆ ಭಕ್ತಿಮಾರ್ಗವು ಬಹಳ ಸುಲಭವಾಗಿರುವದು.

ಮನುಷ್ಯವರ್ಗದಲ್ಲಿಯೂ ಪಶುವರ್ಗದಲ್ಲಿಯೂ ಪ್ರೇಮವು ಹರಡಿಕೊಳ್ಳಬಾರದೆಂದಮೇಲೆ ಸಾಧಕರ ಪ್ರೇಮಸ್ವಭಾವದಿಂದ ಆಶ್ರಮದಲ್ಲಿ ಪಶುಪಕ್ಷಿಗಳು ಕೂಡ ವೈರಸ್ವಭಾವವನ್ನು ಮರೆತು ಪ್ರೇಮಮಯವಾಗುತ್ತಿದ್ದವೆಂದು ಹಿಂದೆ ಹೇಳಿದ ಮಾತಿನ ಬೆಲೆ ಏನಾಯಿತೆಂದರೆ ಆ ಹೇಳಿಕೆ ಸುಳ್ಳಲ್ಲ. ಪ್ರೇಮವು ಹರಡಿಕೊಳ್ಳಬಾರದೆಂಬರ್ಥವು ಜನತೆಯ ಸಾಮಾನ್ಯಸ್ಥಿತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಹೇಳಿದ್ದು. ಯಾವ ಆಶ್ರಮದಲ್ಲಿ ಪಶುಪಕ್ಷಿಗಳೆಲ್ಲಾ ಪ್ರೇಮಪರವಶವಾಗಿದ್ದವೋ ಅವರು ತಮ್ಮ ಪ್ರೇಮಪ್ರವಾಹಕ್ಕೆ ಪರಮಾತ್ಮನ ಪ್ರೇಮನಿಧಿಸ್ವರೂಪದೊಡನೆ ಸಂಬಂಧವನ್ನು ಪಡೆದುಕೊಂಡವರು. ಅಂಥವರು ತಮ್ಮ ಪ್ರೇಮವನ್ನು ಎತ್ತೆತ್ತ ಹರಿಸಿದರೂ ಆ ಪ್ರೇಮಪ್ರವಾಹವು ತನ್ನ ಮೂಲಸ್ವರೂಪವಾದ ಪ್ರೇಮನಿಧಿಯ ಬೆಂಬಲದಿಂದ ತನಗೆ ಅಡ್ಡಬಂದ ಬಡಬಾಗ್ನಿಯನ್ನಾದರೂ ಆರಿಸಿ ತಣ್ಣಗೆ ಮಾಡಿ ಎಲ್ಲೆಲ್ಲಿಯೂ ಪ್ರೇಮದ ಬುಗ್ಗೆಗಳನ್ನು ಎಬ್ಬಿಸುವದು. ಸಮುದ್ರಕ್ಕೆ ಸೆಳವನ್ನಿಟ್ಟಿರುವ ಊರಿನಲ್ಲಿ ಬೆಂಕಿಯದೇನು ಹೆದರಿಕೆ? ಆದ್ದರಿಂದ ಅವರಿರುವ ಕಡೆಯೆಲ್ಲಾ ಪ್ರೇಮಮಯವಾಗಿರುವದು.

ಹೀಗೆ ಪ್ರೇಮವು ಪರಮಾತ್ಮನಿಗೆ ಸ್ವರೂಪವಾದ್ದರಿಂದಲೂ ಜೀವರಿಗೆ ಸ್ವಭಾವವಾದ್ದರಿಂದಲೂ ಭಕ್ತಿಪಂಥವು ಸಾಧಕರಿಗೆ ಬಹುಸುಕರವಾಗಿರುವದು. ವೈದಿಕಕರ್ಮಮಾರ್ಗದಿಂದಲೇ ಪಾರಾಗಬೇಕೆಂದರೆ ಹೆಜ್ಜೆಹೆಜ್ಜೆಗೂ ಅದರಲ್ಲಿ ತಪ್ಪುವ ಸಂಭವವೇ ಹೆಚ್ಚು. ಒಂದುಪಕ್ಷ ತಪ್ಪದಂತೆ ಬಹಳ ಎಚ್ಚರಿಕೆಯಿಂದ ಮಾಡಹೋದರೂ ಅದಕ್ಕೆ ಹೊರಗಣ ಸೌಕರ್ಯಗಳು ಬಹಳವಾಗಿ ಬೇಕಾಗುವವು. ಹಣಕಾಸಿನ ಅನು

ಕೂಲತೆ, ಜನಾನುಕೂಲತೆ, ಹೊರಗಣ ಪರಿಸ್ಥಿತಿಯನುಕೂಲತೆ– ಹೀಗೆ ಎಷ್ಟೋ ಬಗೆಯ ಅನುಕೂಲತೆಗಳನ್ನವಲಂಬಿಸಬೇಕಾಗುವದು. ಇಷ್ಟೆಲ್ಲಾ ಒದಗಿಸಿಕೊಂಡು ಮಾಡಿದರೂ ಶಾಸ್ತ್ರದಂತೆ ಸಾಂಗವಾಯಿತೆನಿಸುವದು ದಕ್ಕುವ ಮಾತಲ್ಲ. ಇನ್ನು ರಾಜಯೋಗವನ್ನವಲಂಬಿಸೋಣವೆಂದರೆ ಮನಸ್ಸನ್ನು ಬಿಗಿಹಿಡಿಯುವದೆಂಬುದು ಸ್ವಭಾವಕ್ಕೆ ವಿರುದ್ಧವಾದ ಮಾತು. ಹೊರಹೊರಗೆ ಹರಿದಾಡುವದೇ ಮನಸ್ಸಿನ ಸ್ವಭಾವ. ಅದನ್ನು ಬಿಗಿಹಿಡಿಯುವದೆಂದರೆ–

"ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್"

ಎಂದು ಅರ್ಜುನನು ಹೇಳಿದಂತೆ ಗಾಳಿಯನ್ನು ಮೂಟೆ ಕಟ್ಟಿದಹಾಗೆ ಕಠಿನವೇ ಸರಿ. ಜ್ಞಾನಯೋಗವನ್ನು ಹಿಡಿಯೋಣವೆಂದರೆ ಅದು ಚಿತ್ತಶುದ್ಧಿಯೂ ಚಿತ್ತಸ್ಥೈರ್ಯವೂ ಅಪೇಕ್ಷಿಸುವ ಮಾತು. ಚಿತ್ತಶುದ್ಧಿ ಇಲ್ಲದಿದ್ದರೂ ಹಾಗೂ ಹೀಗೂ ಶಾಸ್ತ್ರಜ್ಞಾನವನ್ನು ಪಡೆದುಕೊಳ್ಳಬಹುದು. ಅದು ಮನಸ್ಸಿನಲ್ಲಿ ಇಳಿಯುವದಿಲ್ಲ. ಇಷ್ಟೇ ಅಲ್ಲ; ಅಧಿಕಾರವಿಲ್ಲದೆ ತಿಳಿದುಕೊಂಡ ಜ್ಞಾನಯೋಗವು ಮನುಷ್ಯನನ್ನು ಉಭಯಭ್ರಷ್ಟನನ್ನಾಗಿ ಮಾಡುವದು. ಹೇಗೆಂದರೆ ಚಿತ್ತಶುದ್ಧಿಯಿಲ್ಲದ್ದರಿಂದ ಅದು ಮನಸ್ಸಿಗೆ ಅಳವಟ್ಟು ಶಾಂತಿಗೆ ಕಾರಣವಾಗುವದಿಲ್ಲ. ಅದು ಉಳಿದ ಸಾಧನಗಳನ್ನು ಕೀಳೆಂದು ತೋರಿಸುವ ಸಂಭವವಿರುವದರಿಂದ ಮುಂದೆಯಾದರೂ ಅವನು ಸರಿಯಾದ ದಾರಿಗೆ ಹತ್ತುವ ಆಸೆಯನ್ನು ತಪ್ಪಿಸುವದು. ಹೀಗಾಗಿ ಅವನು ಎರಡೂ ಕೆಟ್ಟ ಕುರುಡದಾಸನಾಗುವನು.

"ಧಾವನ್ನಿಮೀಲ್ಯ ವಾ ನೇತ್ರೇ ನ ಸ್ಖಲೇನ್ನ ಪತೇದಿಹ"

ಎಂದು ಶ್ರೀಮದ್ಭಾಗವತವು ಉಪದೇಶಿಸುವಂತೆ ಕಣ್ಣುಮುಚ್ಚಿಕೊಂಡು ಓಡಿದರೂ ಕೂಡ ಭಕ್ತನು ಬೀಳುವದೂ ಇಲ್ಲ; ಎಡಹುವದು ಕೂಡ ಇಲ್ಲ. ಆದ್ದರಿಂದಲೇ ಭಕ್ತಿಸಾಧನವು ಸುಲಭವು.

ಕರ್ಮಯೋಗ, ರಾಜಯೋಗ - ಮೊದಲಾದವುಗಳು ಸಿದ್ಧಿಯಾಗುವದಕ್ಕೆ ಎಷ್ಟೋ ದೀರ್ಘಕಾಲವು ಬೇಕಾಗಬಹುದು. ಕರ್ಮಯೋಗದಂತೆ ಒಂದು ಸಾಮಾನ್ಯವಾದ ಸ್ವರ್ಗವು ಸಿಕ್ಕುವದಕ್ಕೇ ನೂರು ಯಜ್ಞಗಳಾಗಬೇಕು. ರಾಜಯೋಗದಂತೆ ಸಾಮಾನ್ಯವಾದ ಕೆಲವು ನಾದಬಿಂದುಕಳೆ

ಗಳ ದರ್ಶನಕ್ಕೇ ಎಷ್ಟೋ ಅಭ್ಯಾಸವು ಬೇಕು. ಭಕ್ತಿಯೋಗಕ್ಕೆ ಹಾಗಿಲ್ಲ. ವಿಭೀಷಣನು ಶ್ರೀರಾಮನ ಪ್ರತಿಪಕ್ಷಿಯಾದ ರಾವಣನ ತಮ್ಮನಾಗಿದ್ದರೂ ಒಮ್ಮೆ ಅವನು ತನ್ನ ಪ್ರೇಮಪ್ರವಾಹವನ್ನು ಶ್ರೀರಾಮನ ಮೇಲೆ ಹರಿಸುತ್ತಲೇ ಅವನಿಗೆ ಆ ಅವತಾರಮೂರ್ತಿಯು ಸಾನ್ನಿಧ್ಯವು ದೊರೆತೇ ದೊರೆಯಿತು. ವಿಭೀಷಣನು ಆಕಾಶಮಾರ್ಗದಲ್ಲಿ ನಿಂತು ತಾನು ಶ್ರೀರಾಮನಿಗೆ ಶರಣು ಬಂದಿದ್ದೇನೆಂದು ಹೇಳಿ ಪ್ರವೇಶಕ್ಕೆ ದಾರಿಯನ್ನು ಬೇಡಿದನು. ಶತ್ರುಪಕ್ಷದವನಾದ ವಿಭೀಷಣನನ್ನು ಒಳಗೆ ಬರಗೊಡಬಾರದೆಂದು ಎಲ್ಲರೂ ಅಭಿಪ್ರಾಯಪಟ್ಟರು. ಆಗ ಶ್ರೀರಾಮಚಂದ್ರಮೂರ್ತಿಯು—

"ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।
ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ ॥"

ಎಂದು ಹೇಳಿದ್ದಾನೆ. ಒಮ್ಮೆ ಬಂದು ಶರಣೆಂದರೆ ಸಾಕು; ಅಂಥ ಸಮಸ್ತರಿಗೂ ಅಭಯವನ್ನು ಕೊಡುವದೇ ನನ್ನ ವ್ರತವೆಂದು ಅದರ ಅಭಿಪ್ರಾಯ. ಇಷ್ಟೇ ಅಲ್ಲ. ಪ್ರತ್ಯಕ್ಷವಾಗಿ ಅಪರಾಧವನ್ನು ಮಾಡಿರುವ ರಾವಣನೇ ಶರಣುಬಂದರೂ ಕೂಡ ಒಡನೆ ಅವನಿಗೆ ಆಶ್ರಯವನ್ನು ಕೊಟ್ಟು ತನ್ನ ಅಯೋಧ್ಯೆಯ ಪಟ್ಟವನ್ನು ಅವನಿಗೇ ಕಟ್ಟುವೆನೆಂದು ಶ್ರೀರಾಮನ ಬಾಯಿಂದ ಹೊರಡುತ್ತದೆ. ಶರಣೆಂಬ ಮಾತಿನಲ್ಲಿರುವ ಪ್ರೇಮದ ಸೆಳೆತವು ಅಷ್ಟು ವೇಗವಾಗಿರುವದು. ಆದ್ದರಿಂದಲೂ ಭಕ್ತಿಪಂಥವೇ ಸುಲಭವು.

ಹೀಗಾಗುವದಕ್ಕೆ ಕಾರಣವೇನೆಂದರೆ ಶರಣೆಂಬ ಮಾತಿನ ಸ್ವರವೇ ಅಷ್ಟು ಮನೋಹರವಾಗಿರುತ್ತದೆ. ಈ ಶರಣೆಂಬ ಮಾತು ಮನುಷ್ಯನ ಹೃದಯದಿಂದ ಹೊರಡಬೇಕಾದರೆ ಆ ಹೃದಯದ ಮೇಲೆ ಎಷ್ಟೋ ಉತ್ತಮಸಂಸ್ಕಾರಗಳಾಗಿರಬೇಕಾಗುತ್ತದೆ. ಈ ವಿಷಯಕ್ಕೆ ಶ್ರೀರಾಮಕೃಷ್ಣಪರಮಹಂಸರು ಒಂದು ಉದಾಹರಣೆಯನ್ನು ಕೊಟ್ಟಿರುತ್ತಾರೆ. ಹೆಚ್ಚಿನ ಸಂಸ್ಕಾರವನ್ನು ಪಡೆಯದೆ ಇರುವ ಒಂದು ಚರ್ಮವನ್ನು ನಗಾರಿಯ ಮೇಲೆ ಹಾಕಿ ಹೊಲಿದಿರುತ್ತಾರೆ. ಅದರ ಮೇಲೆ ಕೋಲಿನಿಂದ ಹೊಡೆಯುತ್ತಲೇ "ಹಮ್, ಹಮ್, ಹಮ್" ಎಂದು ಸಪ್ಪಳಾಗುತ್ತದೆ. ಹೀಗೆ ಯಾರ ಮನಸ್ಸಿನಲ್ಲಿ ಹೆಚ್ಚು ಸಂಸ್ಕಾರಗಳು ನಡೆದಿಲ್ಲವೋ ಅವರ

ಹೃದಯದಲ್ಲಿ "ನಾನು, ನಾನು, ನಾನು-ಎಂಬ ಅಹಂಕಾರದ ಅಲೆಗಳೇ ಏಳುತ್ತಿರುತ್ತವೆ. ನಗಾರಿಯು ಸದ್ದು ಗಾನಲೋಲರನ್ನು ಹೇಗೆ ಆಕರ್ಷಣ ಮಾಡಲಾರದೋ ಹಾಗೆ ಅಹಂಕಾರದ ಅಲೆಗಳುಳ್ಳವರ ಸ್ವರವು ದೇವರನ್ನು ಆಕರ್ಷಿಸಲಾರದು. ದೇವರು ಗಾನಲೋಲನು. ಆ ನಗಾರಿಯು ಚರ್ಮಕ್ಕೇ ಹೆಚ್ಚಿನ ಹದವನ್ನು ಕೊಟ್ಟು ಸಣ್ಣ ಎಳೆಗಳಾಗಿ ಮಾಡಿ ತಂಬೂರಿಗೆ ಕಟ್ಟಿ ಬಸ್ಮ ಮಿಡಿಯುತ್ತಲೇ 'ತುಮ್', ತುಮ್', ತುಮ್'' ಎಂದು ಅದು ಮೃದುಸ್ವರವನ್ನುಚ್ಚರಿಸುವದು. ಹಾಗೆಯೇ ಮನುಷ್ಯನ ಮನಸ್ಸಿನಲ್ಲಿರುವ ಅಹಂಕಾರದ ಸೊಕ್ಕನ್ನೆಲ್ಲಾ ತಿಕ್ಕಿ ಕಳೆದು ಹೆಚ್ಚಿನ ಹದವನ್ನು ಕೊಟ್ಟು ಮಿಡಿಸಿದರೆ ಅದು "ನೀನು, ನೀನು, ನೀನು" ಎಂದು ಪರಮಾತ್ಮನಿಗೆ ಶರಣುಬರುವ ಮಾತನ್ನೆತ್ತುವದು. ನಾನುನಾನೆಂಬುವರನ್ನು ರಕ್ಷಿಸಬೇಕೆಂದು ಯಾರಿಗೂ ಮನಸ್ಸಾಗುವದಿಲ್ಲ; ಇಷ್ಟೇ ಅಲ್ಲ; ಅದು ತನ್ನ ಸಹಾಯಕ್ಕೆ ಬರುತ್ತಿದ್ದ ಇತರರನ್ನು ಕೂಡ ಹಿಮ್ಮೆಟ್ಟಿಸುವದು. ನಾನುನಾನೆಂಬದು ದೇವರ ಮನಸ್ಸಿಗಂತು ಎಷ್ಟುಮಾತ್ರವೂ ಬರುವದಿಲ್ಲ. ಕರ್ಮಯೋಗ, ರಾಜಯೋಗ— ಮೊದಲಾದವುಗಳಲ್ಲಿ ಈ ಅಹಂಕಾರದ ನಾಶಕ್ಕೆ ಹೆಚ್ಚಿನ ಸ್ಥಲವು ದೊರೆತಿಲ್ಲವಾದ್ದರಿಂದಲೇ ಅವು ದೇವರನ್ನು ಬೇಗ ಬರಮಾಡಿಕೊಳ್ಳಲಾರವು. ಭಕ್ತಿಯೋಗದಲ್ಲಿ ಅಹಂಕಾರವನ್ನು ಮೊದಲಿನಿಂದ ಕೊನೆಯವರೆಗೂ ತಲೆಯೆತ್ತದಂತೆ ತಳಕ್ಕೆ ತುಳಿಯುವ ಉದ್ಯೋಗವೇ ನಡೆದಿರುವದು. ಹೀಗೆ ಮಾಡೋಣವು ಈಶ್ವರನಿಗೆ ಬಹು ಪ್ರಿಯವೆಂದು ಭಗವಾನ್ನಾರದರ

"ಈಶ್ವರಸ್ಯಾಪ್ಯಭಿಮಾನದ್ವೇಷಿತ್ವಾತ್, ದೈನ್ಯಪ್ರಿಯತ್ವಾಚ್ಚ"

ಎಂಬ ಭಕ್ತಿಸೂತ್ರವು ಹೇಳುವದು. ಈಶ್ವರನಿಗೂ ಕೂಡ ಅಹಂಕಾರದ ಮೇಲೆ ಹಗೆತನವಿರುವದರಿಂದಲೂ ದೈನ್ಯದ ಮೇಲೆ ಪ್ರೀತಿ ಇರುವದರಿಂದಲೂ ಭಕ್ತಿಯು ಹೆಚ್ಚಿನದೆಂದು ತಾತ್ಪರ್ಯ. ನಿಜವಾಗಿ ನೋಡಿದರೆ ಈಶ್ವರನಿಗೆ ಒಂದರ ಮೇಲೆ ಹಗೆತನವೂ ಒಂದರ ಮೇಲೆ ಪ್ರೇಮವೂ ಇಲ್ಲ. ಏಕೆಂದರೆ ಶ್ರೀಕೃಷ್ಣನೇ ಗೀತೆಯಲ್ಲಿ "ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ" ಎಂದು ಹೇಳಿದ್ದಾನೆ ಆದರೂ ಯಾರ ಮೇಲೆಯೂ ಹಗೆತನವೂ ಯಾರ ಮೇಲೆಯೂ ಪ್ರೇಮವೂ ಇಲ್ಲದಂಥ ಅಗ್ನಿಯು ತನ್ನ ಬಳಿಗೆ ಬಂದವರ

ಶೀತಬಾಧೆಯನ್ನು ತಾನು ಪರಿಹರಿಸುವಂತೆ ಪರಮಾತ್ಮನು 'ನೀನೇ ಕಾಯಬೇಕೆಂ'ದು ಶರಣುಬಂದವರನ್ನು ಮಾತ್ರ ಉದ್ಧಾರಮಾಡುವನು.

ದೈನ್ಯಭಾವದ ವಿಷಯದಲ್ಲಿ ನಮ್ಮ ವೀರಶೈವಮತನಶಾಸ್ತ್ರಕಾರರು ಉಪದೇಶಿಸಿರುವದೇನೆಂದರೆ—

(೧) ಅರಸನ ಮನೆಯಲ್ಲಿ ಅರಸಿಯಾಗಿಪ್ಪುದರಿಂದ ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರಲೇಸಯ್ಯಾ. ತಾರ್ ಅಗ್ಗವಣಿಯ, ನೀಡ್ ಪತ್ರಿಯ ಲಿಂಗಕ್ಕೆ, ಬೋನವ ಓಲಿಯರ್ ಎಂಬರು. ಕೂಡಲ ಸಂಗನ ಶರಣರ ಮಹಾಮನೆಯಲ್ಲಿ ಒಕ್ಕುದ ನುಣ್ಣ್ ತೊತ್ತೇ ಎಂಬರು.

(೨) ಎತ್ತಪ್ಪೆ ಶರಣಂಗೆ, ತೊತ್ತಪ್ಪೆ ಶರಣಂಗೆ, ಭೃತ್ಯನಾಗಿ ಸದ್ಭಕ್ತರ ಮನೆಯ ಬಾಗಿಲ ಕಾಯ್ದಿಪ್ಪ ಸೊಣಗನಪ್ಪೆ. ಕರ್ತಾರ, ನಿನಗೆ ಕರವೆತ್ತಿ ಪ್ರೊವೆಪಡುವ ಭಕ್ತರ ಮನೆಯ ಹಿತ್ತಲ ಬೇಲಿಯಾಗಿಪ್ಪೆನೈ ರಾಮನಾಥಾ.

(೩) ಎನ್ನಲ್ಲಿ ನಿನ್ನ ಮೇಲಣ ಭಕ್ತಿ ಸಾಸಿವೆಯ ಷಡ್ಭಾಗದಿನಿತಿಲ್ಲ. ಎನ್ನ ಭಕ್ತನೆಂಬರು. ನಾನಾವ ಪಾಪವ ಮಾಡಿದೆನೋ! ಬೇಡುದ ಮುನ್ನ ಕೊಯ್ಯುವರೇ ಹೇಳಯ್ಯಾ! ಇರಿಯದ ಪೀಠ, ಇಲ್ಲದ ಸೊಬಗನು ಎಲ್ಲಾ ಒಡೆಯರು ಪರಿಸಿ ನುಡಿವರು. ಎನಗಿದು ವಿಧಿಯೋ ಕೂಡಲಸಂಗಮದೇವಾ

ಕರ್ಮಯೋಗ, ರಾಜಯೋಗ– ಮೊದಲಾದವುಗಳು ದೂರದಲ್ಲಿ ನಿಂತು ಮರದ ಸೌಂದರ್ಯವನ್ನು ನೋಡಿ ಆನಂದಿಸುವಂಥ ಸಾಧನಗಳಾಗಿರುತ್ತವೆ. ಭಕ್ತಿಯೋಗವು ಮರದ ಕೆಳಗೆ ನಿಂತು ಹಣ್ಣುತಿನ್ನುವಂಥ ಸಾಧನವಾಗಿರುತ್ತದೆ. ಕರ್ಮಯೋಗರಾಜಯೋಗಗಳಲ್ಲಿ ದೇವರ ಸ್ವರೂಪ ಸಂಬಂಧವು ಇನ್ನೂ ಹತ್ತಿರವಾಗಿರುವದಿಲ್ಲ. ಭಕ್ತಿಯೋಗದಲ್ಲಿ ಮೊದಲಿಂದಲೇ ಅದರ ಸಂಬಂಧವೇ ಪೂರ್ಣವಾಗಿರುವದು. ಆದ್ದರಿಂದಲೂ ಭಕ್ತಿಪಂಥವು ಸುಲಭವು.

ಕರ್ಮಯೋಗದಲ್ಲಿ ಈಶ್ವರಪ್ರೀತಿಗಾಗಿ ಅನೇಕ ಉಪಕರಣಗಳನ್ನು ಒದಗಿಸಿಕೊಳ್ಳಬೇಕಾಗುವದು. ರಾಜಯೋಗದಲ್ಲಿ ಈಶ್ವರಪ್ರೀತಿಗಾಗಿ ದೇಹದಂಡನೆಯನ್ನೂ ಮನೋದಂಡನೆಯನ್ನೂ ಮಾಡಬೇಕಾಗುವದು. ಭಕ್ತಿಯೋಗದಲ್ಲಿ ಅಂಥದ್ದೇನೂ ಇಲ್ಲ. ಹಾಯಾಗಿದ್ದು ಇದ್ದಷ್ಟರಲ್ಲಿಯೇ ಈಶ್ವರಾರ್ಚನೆಯನ್ನು ಮಾಡಿದರಾಯಿತು.

"ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥"

ಎಂದು ಭಗವಂತನು ಗೀತೆಯಲ್ಲಿ ಹೇಳಿದ್ದಾನೆ. ಭಕ್ತಿಯೋಗದಲ್ಲಿ ದೇವರಿಗೆ ಒಂದು ಎಲೆಯನ್ನೋ ಒಂದು ಹೂವನ್ನೋ ಒಂದು ಹಣ್ಣನ್ನೋ ಕೊನೆಗೆ ಒಂದು ತೊಟ್ಟು ನೀರನ್ನೋ ಕೊಟ್ಟರೂ ಸಾಕು. ಆದರೆ ಅವನು ಶುದ್ಧಬುದ್ಧಿಯುಳ್ಳವನಾಗಿ ಪ್ರೇಮದಿಂದ ಸಂಪಾದಿಸಿ ಪ್ರೇಮದಿಂದ ಕೊಟ್ಟಿದ್ದಾಗಬೇಕು. ಅದನ್ನು ದೇವರು ಆನಂದದಿಂದ ಸ್ವೀಕರಿಸುವನು. ಕೌರವರಿಗೂ ಪಾಂಡವರಿಗೂ ಸಂಧಿಯನ್ನು ಮಾಡುವದಕ್ಕಾಗಿ ಶ್ರೀಕೃಷ್ಣನು ಹಸ್ತಿನಾವತಿಗೆ ಬಂದಿದ್ದಾಗ ಶೂದ್ರನೂ ಬಡವನೂ ಆದ ವಿದುರನು ಕೊಟ್ಟ ಒಂದು ಕುಡಿತೆ ಹಾಲಿನಿಂದ ಅವನ ಹೊಟ್ಟೆ ತುಂಬಿ ಹರಿದ ಕೋಡಿಯು ಅಲ್ಲಿಯೇ ಹೊಸದಾಗಿ ಒಂದು ಕ್ಷೀರಸಾಗರವನ್ನುಂಟುಮಾಡಿತು. ಕುಚೇಲನು ನೆರೆಹೊರೆಯವರನ್ನು ದೈನ್ಯದಿಂದ ಬೇಡಿತಂದ ಹೊಟ್ಟುಗೂಡಿದ ಒಂದು ಹಿಡಿ ಅವಲಕ್ಕಿಯಿಂದ ಶ್ರೀಕೃಷ್ಣನ ಮನೆಯ ಮಂದಿಗೆಲ್ಲಾ ತೃಪ್ತಿಯಾಯಿತು.

ಭಕ್ತನು ಏನು ಕೊಟ್ಟರೂ ದೇವರು ತೆಗೆದುಕೊಳ್ಳುವನೆಂಬುದಕ್ಕೆ ಶ್ರೀರಾಮಕೃಷ್ಣಪರಮಹಂಸರು ಹೇಳಿರುವದೇನೆಂದರೆ–

"ಒಬ್ಬ ಜಮೀನುದಾರನು ಬಹು ಭಾಗ್ಯವಂತನಾಗಿರಬಹುದು. ಆದರೆ ಒಬ್ಬ ಬಡರೈತನು ಪ್ರೀತಿಯಿಂದ ಒಂದು ಪದಾರ್ಥವನ್ನು ತಂದುಕೊಟ್ಟರೆ ಅವನು ಅದನ್ನು ಅತ್ಯಾನಂದದಿಂದ ತೆಗೆದುಕೊಳ್ಳುವನು. ಹಾಗೆಯೇ ಸರ್ವಶಕ್ತನಾದ ಭಗವಂತನು ಎಷ್ಟು ದೊಡ್ಡವನಾದರೂ ಮತ್ತು ಸರ್ವಾರ್ಥಸಿದ್ಧನಾದರೂ ಒಬ್ಬ ತಿರುಕನು ಮನಃಪೂರ್ವಕವಾಗಿ ನಿವೇದನಮಾಡಿದ ಒಂದತ್ಯಲ್ಪಪದಾರ್ಥವನ್ನಾದರೂ ಸಂತೋಷದಿಂದ ಮತ್ತು ಪ್ರೀತಿಯಿಂದ ಸ್ವೀಕರಿಸುವನು"

ಈ ಮಾತಿನ ಪ್ರತ್ಯಕ್ಷರವೂ ಸತ್ಯವೆಂಬ ವಿಷಯಕ್ಕೆ ಪುರಾಣಗಳಲ್ಲಿ ಬೇಕಾದಷ್ಟು ನಿದರ್ಶನಗಳು ದೊರೆಯುತ್ತವೆ.

ಮೊದಲನೆಯದು— ಪತ್ರದಿಂದ ತೃಪ್ತಿಯಾದ ವಿಚಾರ. ಪಾಂಡವರು ಅರಣ್ಯವಾಸದಲ್ಲಿದ್ದಾಗ ನಡುರಾತ್ರಿಯಲ್ಲಿ ದೂರ್ವಾಸರು ಅನೇಕ

ಶಿಷ್ಯರೊಡನೆ ಅನ್ನಾರ್ಥಿಗಳಾಗಿ ಬಂದರು. ಆ ದಿನ ಅಕ್ಷಯಪಾತ್ರೆಯನ್ನು ತೊಳೆದಿಟ್ಟದ್ದಾಗಿತ್ತು. ಆಮೇಲೆ ಅದರಲ್ಲಿ ಅನ್ನವು ಅಕ್ಷಯವಾಗುವ ಪದ್ಧತಿ ಇರಲಿಲ್ಲ. ಆದ್ದರಿಂದ ಬಂದ ಅತಿಥಿಗಳನ್ನು ಹೇಗೆ ಸತ್ಕರಿಸಬೇಕೆಂದು ಎಲ್ಲರೂ ಯೋಚನೆಯಲ್ಲಿ ಬಿದ್ದರು. ಪಾಂಡವರ ಗೃಹಿಣಿಯಾದ ದ್ರೌಪದಿಯು ಅನನ್ಯಭಕ್ತಿಯಿಂದ ಶ್ರೀಕೃಷ್ಣನಿಗೆ ಶರಣುಹೊಕ್ಕಳು. ಶ್ರೀಕೃಷ್ಣನೂ ಪ್ರತ್ಯಕ್ಷನಾಗಿ ತನಗೇ ಹಸಿವಾಗಿರುವದೆಂದು ತಾನೇ ಅನ್ನವನ್ನು ಬಯಸಿದನು. ಅಕ್ಷಯಪಾತ್ರೆಯನ್ನು ತೊಳೆದಿಟ್ಟಾಯಿತೆಂಬ ಸಂಗತಿಯನ್ನು ದ್ರೌಪದಿಯು ಬಹುಸಂಕೋಚದಿಂದ ವಿಜ್ಞಾಪಿಸಿದಳು. ಆದರೂ ಅದರಲ್ಲೇನಾದರೂ ಉಳಿದಿದ್ದರೆ ನೋಡೋಣವೆಂದು ಅದನ್ನು ತರಿಸಿ ನೋಡಿದಾಗ ಅದರಲ್ಲೊಂದು ಎಲೆಯ ಚೂರು ಇತ್ತು. ಶ್ರೀಕೃಷ್ಣನು ಅದನ್ನೇ ತಿಂದು ತೇಗಿ ತೃಪ್ತನಾದ್ದಲ್ಲದೆ ತನ್ನ ಪ್ರಭಾವದಿಂದ ದೂರ್ವಾಸನೇ ಮೊದಲಾದ ಮುನಿಗಳ ಗುಂಪಿಗೆಲ್ಲಾ ತೃಪ್ತಿಯನ್ನುಂಟುಮಾಡಿದನು.

ಎರಡನೆಯದು ದೈನ್ಯದಿಂದ ತೃಪ್ತಿಯಾದ ವಿಚಾರ. ಇಂದ್ರದ್ಯುಮ್ನನೆಂಬ ರಾಜನು ತನ್ನ ಮನೆಗೆ ಬಂದ ಅಗಸ್ತ್ಯರನ್ನು ಆದರಿಸದೆ ಇದ್ದ ತಪ್ಪಿಗಾಗಿ ಆನೆಯಾದ ಮೇಲೆ ಒಂದು ಸರೋವರಕ್ಕೆ ನೀರ್ಗುಡಿಯುವದಕ್ಕೆ ಹೋದಾಗ ಒಂದು ಮೊಸಳೆಯು ಅದರ ಕಾಲನ್ನು ಹಿಡಿದೆಳೆಯಿತು. ಮೊಸಳೆಯ ಸೆಳೆತವನ್ನು ಹಿಮ್ಮೆಟ್ಟಿಸಬೇಕೆಂದು ಗಜೇಂದ್ರನೂ ತನ್ನ ಸಾಹಸವನ್ನೆಲ್ಲಾ ವೆಚ್ಚಮಾಡಿದನು. ಗಜೇಂದ್ರನನ್ನು ಆ ಸಂಕಟದಿಂದ ಪಾರುಮಾಡಬೇಕೆಂದು ಗಜೇಂದ್ರನ ಪರಿವಾರದವರೆಲ್ಲಾ ಒಟ್ಟುಗೂಡಿ ತಮ್ಮಿಂದಾದಷ್ಟು ಹೋರಾಡಿದರು. ಆದರಿಂದ ಫಲವು ತೋರಲಿಲ್ಲ. ಆಗ ಗಜೇಂದ್ರನು ದೈನ್ಯದಿಂದ ಶ್ರೀಕೃಷ್ಣನಿಗೆ ಮೊರೆಯಿಟ್ಟನು. ಕರುಣಾಕರನಾದ ಶ್ರೀಕೃಷ್ಣನು ಒಡನೆ ಆಕಾಶಮಾರ್ಗದಿಂದ ಇಳಿದು ಬಂದನು. ದೇವರ ದರ್ಶನವನ್ನು ತೆಗೆದುಕೊಳ್ಳುವಾಗ ಬರಿಗಯ್ಯಿಂದ ಕಾಣಿಸಿಕೊಳ್ಳುವದಕ್ಕೆ ಗಜೇಂದ್ರನಿಗೆ ಸಂಕೋಚವಾಯಿತು. ಆಗ ಅವನು ಏನು ಮಾಡಬೇಕು? ಸರೋವರದಲ್ಲಿದ್ದ ಒಂದು ಕಮಲವನ್ನು ಕಿತ್ತು ಪರಮಾತ್ಮನ ಪಾದಕ್ಕೆ ಸಮರ್ಪಣೆ ಮಾಡಿದನು. ಪರಮಾತ್ಮನು ಅದ್ದರಿಂ

ದಲೇ ತೃಪ್ತನಾಗಿ ಗಜೇಂದ್ರನನ್ನು ಆ ಬಂಧದಿಂದ ಬಿಡುಗಡೆಮಾಡಿ ತನ್ನ ಶರಣಾಗತರಕ್ಷಕತ್ವವನ್ನು ಪ್ರಕಟಮಾಡಿದನು.

ಮೂರನೆಯದು ಫಲದಿಂದ ತೃಪ್ತಿಯಾದ ವಿಚಾರ. ಮುಂದೆ ಶ್ರೀರಾಮಚಂದ್ರನು ಬರುವನೆಂದು ದಂಡಕಾರಣ್ಯದಲ್ಲಿ ಶಬರಿಯು ಬಹು ಕುತೂಹಲದಿಂದ ಕಾದುಕೊಂಡಿದ್ದಳು. ಆದರೆ ಮಹಾರಾಜಾಧಿರಾಜನಾದ ಶ್ರೀರಾಮಮೂರ್ತಿಯು ಬಂದಾಗ ಅವನ ಆತಿಥ್ಯವನ್ನು ಹೇಗೆ ಮಾಡಬೇಕು? ಶಬರಿಯಲ್ಲಾದರೋ ಯಾವ ಉಪಕರಣವೂ ಇರಲಿಲ್ಲ. ಆಕೆ ಕಾಡಿನಲ್ಲಿ ತನಗೆ ಚೆನ್ನಾಗಿ ಕಂಡಕಂಡ ಹಣ್ಣುಗಳನ್ನೆಲ್ಲಾ ಆರಿಸಿ ಗುಪ್ಪೆ ಮಾಡಿದಳು. ಆದರೆ ಅವುಗಳಲ್ಲಿ ಒಂದೊಂದು ಕಹಿಯಾಗಿದ್ದರೂ ಇರಬಹುದೆಂದು ಸಂಶಯಗೊಂಡು ಅಂಥವುಗಳನ್ನೆಲ್ಲಾ ನೋಡಿ ತೆಗೆದೊಗೆದು ಬಿಡಬೇಕೆಂದು ಪ್ರತಿಯೊಂದನ್ನು ತಾನು ರುಚಿ ನೋಡಿ ಇಡುತ್ತ ಬಂದಳು. ಲೋಕದಲ್ಲಿ ಹೀಗೆ ಮಾಡಿದ್ದು ಎಂಜಲೆನಿಸಿಕೊಂಡು ದೇವರಿಗೆ ಕೊಡಲಿಕ್ಕೆ ಬರುವದಿಲ್ಲ. ಆದರೆ ಶ್ರೀರಾಮಚಂದ್ರದೇವರನ್ನು ಆದಷ್ಟು ಯೋಗ್ಯರೀತಿಯಿಂದ ಸತ್ಕಾರಮಾಡಬೇಕೆಂಬ ಪ್ರೇಮದ ಭರದಲ್ಲಿ ಶಬರಿಗೆ ಎಂಜಲಿನ ಕಲ್ಪನೆಯೇ ಹುಟ್ಟಲಿಲ್ಲ. ಶ್ರೀರಾಮಚಂದ್ರನು ಆ ಎಂಜಲಾದ ಹಣ್ಣುಗಳನ್ನೇ ಅತಿಮಧುರವೆಂದು ಹೊಗಳುತ್ತ ಹೊಟ್ಟೆತುಂಬ ತಿಂದು ಆಕೆಯನ್ನುದ್ಧಾರಮಾಡಿದ್ದಾನೆ.

ನಾಲ್ಕನೆಯದು ನೀರಿನಿಂದ ತೃಪ್ತಿಯಾದ ವಿಚಾರ. ಶ್ರೀಮಹಾವಿಷ್ಣು ವಾಮನಾವತಾರವನ್ನು ಮಾಡಿ ಯಾಚಕನಾಗಿ ಬಲಿಯ ಮನೆಗೆ ಬಂದನಷ್ಟೆ. ಅಲ್ಲಿ ಅವನು ಬೇಡಿದ್ದೇನು? ಮೂರು ಹೆಜ್ಜೆ ಭೂಮಿ. ಆ ಭೂಮಿಯನ್ನೇನಾದರೂ ಅವನು ತನ್ನ ಉಪಭೋಗಕ್ಕೆ ತೆಗೆದುಕೊಂಡನೆ? ಅಲ್ಲಿ ವಾಮನನಿಗೆ ಬಲಿಯಿಂದ ಸಾಕ್ಷಾತ್ತಾಗಿ ಸಿಕ್ಕಿದ್ದು ಅವನು ತನ್ನ ಕೈಗೆ ಬಿಟ್ಟ ದಾನಧಾರೆ. ಇಷ್ಟೆ. ಭಕ್ತನ ಕೈಯಿಂದ ಬಂದ ನೀರಿನ ತಣ್ಣೇ ತನ್ನ ಸರ್ವಸ್ವವೆಂದು ವಾಮನನು ಅದರಿಂದಲೇ ಸಂತುಷ್ಟನಾಗಿ ಪಾತಾಲದಲ್ಲಿ ಅವನ ಮನೆಯ ಬಾಗಿಲಲ್ಲಿದ್ದು ಪ್ರತಿದಿನವೂ ಅವನಿಗೆ ದರ್ಶನವನ್ನು ಕೊಡುವದಕ್ಕೊಪ್ಪಿ ತನ್ನ ಭಕ್ತಪರಾಧೀನತೆಯನ್ನು ಪ್ರದರ್ಶನಮಾಡಿರುವನು.

ಆದ್ದರಿಂದ ದೇವರಿಗೆ ಅರ್ಪಿಸಬೇಕಾದ ವಸ್ತು ಪ್ರೇಮದಿಂದ ಕೂಡಿದ್ದಾಗಿರಬೇಕಾದ್ದು ವಿಶೇಷವೇ ಹೊರತು, ಅದರ ಉತ್ಕೃಷ್ಟತೆ, ಪರಿಣಾಮ, ಮೊದಲಾದ ವಿಶೇಷಗಳೇನೂ ಮುಖ್ಯವಲ್ಲ. ಆದ್ದರಿಂದ ಭಕ್ತಿಯೋಗದಲ್ಲಿ ಉಪಕರಣಗಳನ್ನೊದಗಿಸುವ ಶ್ರಮವೇನೂ ಇಲ್ಲ; ಉತ್ಕಟವಾದ ಪ್ರೇಮವನ್ನು ಸಂಗ್ರಹಿಸಿಕೊಳ್ಳಬೇಕು. ಅದು ತನ್ನ ಕಯ್ಯಲ್ಲಿಯೇ ಇರುವದು. ಹೀಗೆ ಪರಾವಲಂಬನೆ ಇಲ್ಲದ ಕಾರಣದಿಂದಲೂ ಭಕ್ತಿಸಾಧನೆ ಸುಲಭವು.

## ಭಕ್ತಿಯ ಹೆಚ್ಚುಗಾರಿಕೆ.

ಲೋಕದಲ್ಲಿ ನಿರ್ಗುಣಸ್ವರೂಪವನ್ನು ಸಾಕ್ಷಾತ್ಕಾರಮಾಡಿಕೊಳ್ಳುವಂಥ ಜ್ಞಾನಮಾರ್ಗವನ್ನವಲಂಬಿಸಿದವರೂ ಎಷ್ಟೋ ಜನಗಳುಂಟು. 'ಜ್ಞಾನಾದೇವ ತು ಕೈವಲ್ಯಂ' ಎಂದು ಶ್ರುತಿ ಇರುವದರಿಂದ ಮೋಕ್ಷಕ್ಕೆ ಜ್ಞಾನವೇ ಸಾಕ್ಷಾತ್ಸಾಧನವೆಂಬ ಮಾತು ಒಪ್ಪತಕ್ಕದ್ದೆ. ಆದರೆ ಪರಮಾತ್ಮನ ಸಗುಣಸ್ವರೂಪದ ಮೇಲೆ ಭಕ್ತಿಯನ್ನು ಮಾಡುವದರ ಮೂಲಕವಾಗಿ ಜ್ಞಾನವನ್ನು ಪಡೆಯುವದರಲ್ಲಿ ಒಂದು ಹೆಚ್ಚುಗಾರಿಕೆ ಇದೆ. ನಿರ್ಗುಣಸ್ವರೂಪದ ಜ್ಞಾನವು ಮನಸ್ಸಿನಲ್ಲಿ ಬಿಂಬಿಸುವದು ಕಷ್ಟ.

"ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್"

ಎಂದು ಭಗವಂತನೇ ಗೀತೆಯಲ್ಲಿ ಹೇಳಿದ್ದಾನೆ. ನಿರ್ಗುಣಸ್ವರೂಪದ ಅನುಸಂಧಾನವನ್ನು ಮಾಡುವವರಿಗೆ ಕ್ಲೇಶವು ಬಹಳವೆಂದರ್ಥ. ನಿರ್ಗುಣಸ್ವರೂಪದ ಜ್ಞಾನವಾಗಬೇಕಾದರೆ ಬುದ್ಧಿಯ ಶುದ್ಧತೆಯೂ ತೀವ್ರತೆಯೂ ಬಹಳವಾಗಿ ಬೇಕು. ಅದು ಜನಸಾಮಾನ್ಯದಲ್ಲಿ ಇರುವದಿಲ್ಲ. ಪೂರ್ವಾರ್ಜಿತಸುಕೃತವಿಶೇಷದಿಂದ ಅವುಗಳನ್ನು ಪಡೆದಿರುವವರು ತಮ್ಮ ಅನುಸಂಧಾನವನ್ನು ಸಾಗಿಸಬಹುದು. ಅವರು ತಮ್ಮಿಂದ ತಾವೇ ಪಾರಾಗುವ ದಾರಿಯನ್ನು ಹಿಡಿದವರು. ಅವರಿಗೆ ಯಾರ ದಾಕ್ಷಿಣ್ಯವೂ ಇಲ್ಲ. ತಮ್ಮ ಪುಣ್ಯಪ್ರಭಾವದ ವೇಗದಿಂದ ಆ ಸ್ವರೂಪದ ಸಾಕ್ಷಾತ್ಕಾರವನ್ನು ದಕ್ಕಿಸಿಕೊಳ್ಳುವರು. ಅಸಾಮಾನ್ಯಶೂರರಾದ ಅವರ ಮಾತಿರಲಿ. ಜನಸಾಮಾನ್ಯದ ಗತಿಯೇನು?

“ ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ”

ಎಂಬ ಗೀತೋಕ್ತಿಯಂತೆ ದೇಹಾಭಿಮಾನಿಗಳಾದ ಮನುಷ್ಯರಿಗೆ ಅವ್ಯಕ್ತ ಸ್ಥಿತಿಯ ಸಾಕ್ಷಾತ್ಕಾರವಾಗುವದು ಕಠಿನ. ಸ್ಥೂಲರೂಪದ ಕಲ್ಪನೆಯೇ ಅಭ್ಯಾಸವಾಗಿರುವ ಜನರಿಗೆ ಅತ್ಯಂತ ಸೂಕ್ಷ್ಮವಾದ ಅವ್ಯಕ್ತಸ್ವರೂಪದ ಕಲ್ಪನೆ ಹೇಗೆ ನಿಲುಕೀತು? ಅವರಿಗೆ ಸ್ಥೂಲರೂಪದ ಕಲ್ಪನೆಯೇ ಬೇಕು. ಪರಮಾತ್ಮನ ಸಗುಣರೂಪವಾದರೆ ಅವರು ಗ್ರಹಿಸುವದಕ್ಕಾದೀತು.

ಈ ಸಗುಣರೂಪದ ಮೇಲಿನ ಭಕ್ತಿಯಲ್ಲಿರುವ ಹೆಚ್ಚುಗಾರಿಕೆಯೇನೆಂದರೆ ಅವ್ಯಕ್ತೋಪಾಸಕರು ತಮ್ಮ ಸಾಹಸದಿಂದಲೇ ತಾವು ಮುಂದುವರಿಯುವರಷ್ಟೆ. ಅದು ಎಷ್ಟರ ಮಟ್ಟಿಗೆ ಸಾಧ್ಯವಾಗುತ್ತೆಂಬುದು ಅವರವರ ಧೀರತೆಯನ್ನವಲಂಬಿಸಿರುವದು. ಅವರಿಗೆ ತಮ್ಮ ಉದ್ಧಾರದ ಭಾರವು ತಮ್ಮ ತಲೆಯ ಮೇಲೆಯೇ ಕೂತಿರುವದು. ಸಗುಣೋಪಾಸಕರಿಗಾದರೂ ಆ ಎದೆಭಾರ ಇಲ್ಲ.

“ ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ”

ಎಂದು ಪರಮಾತ್ಮನು ಹೇಳಿದ್ದಾನೆ. ಅವರನ್ನು ಹುಟ್ಟುಸಾವುಗಳ ರೂಪವಾದ ಸಂಸಾರವೆಂಬ ಸಾಗರದಿಂದ ತಾನು ಪಾರುಮಾಡಿಸುತ್ತೇನೆಂದು ಪರಮಾತ್ಮನು ಅಭಯವನ್ನು ಕೊಟ್ಟಿದ್ದಾನೆ. ನಾವು ದೇವರಿಗೆ ಶರಣುಹೋದರಾಯಿತು. ದೇವರು ನಮ್ಮನ್ನು ಎತ್ತಿಕೊಂಡು ಹೋಗಿ ಆಚೆಯ ದಡಕ್ಕೆ ಬಿಡುತ್ತಾನೆ. ಈ ನಡವಳಿಕೆಯಲ್ಲಿ ನಮ್ಮ ಮನಸ್ಸಿಗೆ ಎಳ್ಳಷ್ಟು ಹೆದರಿಕೆಗೆ ಕಾರಣವಿಲ್ಲ.

'ಜ್ಞಾನಾದೇವ ತು ಕೈವಲ್ಯಂ' ಎಂಬ ಶ್ರುತಿಯಂತೆ ನಮಗೆ ಮೋಕ್ಷದ ಸಾಕ್ಷಾತ್ಸಾಧನವಾಗಿ ಆಗಬೇಕಾದ ಜ್ಞಾನವಾಗುವದೆಂತೆಂದರೆ—

“ ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥
ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥”

ಎಂದು ಭಗವಂತನು ಮಾತುಕೊಟ್ಟಿದ್ದಾನೆ. ಯಾವಾಗಲೂ ಒಂದೇ

ಮನಸ್ಸಿನಿಂದ ಪ್ರೇಮಪೂರ್ವಕವಾಗಿ ಭಜನೆಯನ್ನು ಮಾಡುವವರಿಗೆ ಸಾಕ್ಷಾತ್ಕಾರಕ್ಕೆ ಸಾಧನವಾದ ಬುದ್ಧಿಯನ್ನು ಕೊಟ್ಟು ಅವರ ಮೇಲಿನ ಕನಿಕರದಿಂದ ಅವರ ಮನಸ್ಸಿನೊಳಹೊಕ್ಕು ತಾನೇ ಝಗಝಗಿಸುವ ಜ್ಞಾನದೀಪವನ್ನು ಹಚ್ಚಿ ಅವರ ಅಜ್ಞಾನವೆಂಬ ಕತ್ತಲೆಯನ್ನು ಹೆಸರಿಲ್ಲದಂತೆ ಮಾಡುತ್ತೇನೆಂದು ಪರಮಾತ್ಮನ ಅಭಿಪ್ರಾಯ. ಇದಕ್ಕಿಂತ ಹೆಚ್ಚಿನದಿನ್ನೇನಾಗಬೇಕು!

ಜ್ಞಾನವು ಭಕ್ತಿಯನ್ನು ಎಷ್ಟು ಬಲವಾಗಿ ಅವಲಂಬಿಸಿರುವದೆಂಬುದನ್ನು ಭಾಗವತವು.

“ ಭಕ್ತಿಃ ಪರೇಶಾನುಭವೋ ವಿರಕ್ತಿ
ರನ್ಯತ್ರ ಚೈಷ ತ್ರಿಕ ಏಕಕಾಲಃ ।
ಪ್ರಪದ್ಯಮಾನಸ್ಯ ಯಥಾಶ್ನತಃ ಸ್ಯು
ಸ್ತುಷ್ಟಿಃ ಪುಷ್ಟಿಃ ಕ್ಷುದಪಾಯೋನುಘಾಸಮ್ ॥”

ಎಂಬ ಶ್ಲೋಕದಿಂದ ಹೇಳಿರುವದು. ಊಟವನ್ನು ಮಾಡುವವನಿಗೆ ತೃಪ್ತಿಯೂ ಶಕ್ತಿಯೂ ಹಸಿವಡಗುವಿಕೆಯೂ ಹೇಗೆ ತುತ್ತುತುತ್ತಿಗೂ ಕಾಣುವದೋ ಹಾಗೆ ಭಕ್ತಿಯನ್ನು ಮಾಡುವವನಿಗೆ ಭಕ್ತಿ, ಈಶ್ವರ ಸಾಕ್ಷಾತ್ಕಾರ ಮತ್ತು ಉಳಿದ ವಿಷಯಗಳಲ್ಲಿ ವಿರಕ್ತಿ—ಈ ಮೂರೂ ಏಕ ಕಾಲದಲ್ಲಿ ಉಂಟಾಗುತ್ತಿರುವವೆಂದರ್ಥ. ಅಂಜನವನ್ನು ಹಾಕಿದೊಡನೆಯೇ ಹೇಗೆ ಭೂಮಿಯಲ್ಲಿ ಅಡಗಿದ್ದ ನಿಕ್ಷೇಪವು ಒಡನೆ ಮೇಲಕ್ಕೆದ್ದು ಕಾಣುವದೋ ಹಾಗೆ ಭಕ್ತಿಸಾಧನವನ್ನು ಮಾಡುವವನಿಗೆ ತತ್ಕ್ಷಣದಲ್ಲಿಯೇ ಪರಮಾತ್ಮಸ್ವರೂಪವು ಮುಂದೆಬಂದು ನಿಲ್ಲುವದು. ಆದ್ದರಿಂದಲೂ ಭಕ್ತಿಯು ಹೆಚ್ಚಿನದು.

ಭಕ್ತಿಯ ಹೆಚ್ಚುಗಾರಿಕೆಯ ವಿಷಯವಾಗಿ ಶ್ರೀರಾಮಕೃಷ್ಣಪರಮಹಂಸರು ಹೇಳಿರುವದೇನೆಂದರೆ— “ ಜ್ಞಾನವು ಪುರುಷನ ಹಾಗೆ; ಭಕ್ತಿಯು ಸ್ತ್ರೀಯ ಹಾಗೆ. ಜ್ಞಾನವೆಂಬುದು ಭಗವಂತನ ಬಹಿರಂಗವಾದ ಆಸ್ಥಾನಮಂಟಪಕ್ಕೆ ಹತ್ತುವ ದ್ವಾರದೇಶವಾಗಿರುವದು; ಭಕ್ತಿಯೆಂಬುದು ಪರಮಾತ್ಮನ ಏಕಾಂತಗೃಹಕ್ಕೆ ಹೋಗುವ ಬಾಗಿಲಾಗಿರುವದು.” ಇದರ ಅರ್ಥವನ್ನು ಮನಸ್ಸಿಗೆ ತಂದುಕೊಂಡರೆ ಜ್ಞಾನಮಾರ್ಗವನ್ನು ಹಿಡಿ

ಯುವದು ತಂದೆಯಿಂದ ಇಷ್ಟಸಿದ್ಧಿಯನ್ನು ಮಾಡಿಕೊಳ್ಳುವಂತೆಯೂ ಭಕ್ತಿಮಾರ್ಗವನ್ನು ಹಿಡಿಯುವದು ತಾಯಿಂದ ಕಾರ್ಯವನ್ನು ಸಾಧಿಸುವಂತೆಯೂ ತೋರುವದು. ಇವೆರಡರಲ್ಲಿ ಯಾವದು ಉತ್ತಮವೆಂಬ ವಿಷಯಕ್ಕೆ ಯಾರೂ ಹೆಚ್ಚು ವಿಚಾರಮಾಡಬೇಕಾದ್ದೇ ಇಲ್ಲ. ತಂದೆಗಿಂತಲೂ ತಾಯಿಂದ ಕಾರ್ಯಸಾಧನೆಯು ಬಹುಬೇಗನೆ ಆಗುವದು. ತಂದೆಯ ಬೆನ್ನು ಹಿಡಿದು ತಿರುಗಿದರೆ ಎಲ್ಲರೂ ಸೇರುವ ಆಸ್ಥಾನಮಂಟಪದಲ್ಲಿ ನಿರ್ಬಂಧಕ್ಕೊಳಪಟ್ಟು ಕುಳಿತುಕೊಳ್ಳಬೇಕಾಗುವದು. ತಾಯ ಬೆನ್ನು ಹಿಡಿದು ತಿರುಗಿದರೆ ಏಕಾಂತಗೃಹದಲ್ಲಿ ಹಾಡಿಕೊಳ್ಳುತ್ತ ತೂಗುಯ್ಯಾಲೆಯಲ್ಲಿ ಕುಳಿತು ತೂಗಿಕೊಳ್ಳುತ್ತಿರಬಹುದು. ಇದರಂತೆ ಜ್ಞಾನಮಾರ್ಗವನ್ನು ಹಿಡಿದವನು ಪರಮಾತ್ಮನ ಸ್ವರೂಪದ ವೈಭವವನ್ನು ತಿಳಿಯಬಹುದು. ಆದರ ಸುಖವನ್ನು ಅನುಭವಮಾಡುವಿಕೆಯು ಭಕ್ತನೊಬ್ಬನಿಗೆ ದಕ್ಕುವದು. ಇದೊಂದು ಭಕ್ತಿಯ ಹೆಚ್ಚುಗಾರಿಕೆ.

ಇನ್ನೊಂದೇನೆಂದರೆ ಜ್ಞಾನಮಾರ್ಗವು ಬುದ್ಧಿಪ್ರಧಾನರಾದವರಿಗೆ ಮಾತ್ರ ಸಾಧ್ಯವು. ಭಕ್ತಿಮಾರ್ಗವು ಹಾಗಲ್ಲ. ಅದು ಪ್ರೇಮಪ್ರಧಾನವಾದ್ದರಿಂದಲೂ ಎಲ್ಲರಲ್ಲಿಯೂ ಬುದ್ಧಿಗಿಂತಲೂ ಪ್ರೇಮವು ಹೆಚ್ಚಾಗಿರುವ ಸಂಭವವಿರುವದರಿಂದಲೂ

"ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್ ॥"

ಎಂದು ಗೀತೆಯಲ್ಲಿ ಹೇಳಿರುವಂತೆ ಪರಮಾತ್ಮನಿಗೆ ಪ್ರೇಮದಿಂದ ಶರಣು ಹೋದರೆ ಪಾಪಯೋನಿಯಲ್ಲಿ ಹುಟ್ಟಿದವರೂ ಸ್ತ್ರೀಯರೂ ವೈಶ್ಯರೂ ಮತ್ತು ಶೂದ್ರರೂ ಕೂಡ ಉತ್ತಮಗತಿಯನ್ನು ಪಡೆಯುವರು. ಅರುಂಧತಿ, ಅನಸೂಯಾ- ಮೊದಲಾದ ಸ್ತ್ರೀಯರು ಪತಿಯನ್ನೆ ಪರದೈವವೆಂಬ ಭಾವನೆಯಿಂದ ಉಪಾಸನೆಯನ್ನು ಮಾಡಿ ಮುಕ್ತರಾಗಿದ್ದಾರೆ. ಶ್ರೀಕೃಷ್ಣನು ಕ್ಷತ್ರಿಯನಾದ ವಸುದೇವನ ಹೊಟ್ಟೆಯಲ್ಲಿ ಹುಟ್ಟಿದ್ದರೂ ಗೋಕುಲದಲ್ಲಿ ಪಶುಪಾಲಕನಾಗಿದ್ದ ವೈಶ್ಯನಾದ ನಂದನೆಂಬುವನಿಗೆ ತಾನಾಗಿಯೇ ಸಾಕುಮಗನಾಗಿ ಅವನನ್ನು ಉದ್ಧಾರಮಾಡಿದ್ದಾನೆ. ಶೂದ್ರನಾದ ವಿದುರನು ಶ್ರೀಕೃಷ್ಣನ ಅನುಗ್ರಹದಿಂದ ಪರಮಪದವಿಯನ್ನು ಹೊಂದಿದ್ದಾನೆ. ಭಕ್ತಿ

ಮಾರ್ಗದಿಂದ ಬರೀ ಎಲ್ಲಾ ವರ್ಣದವರೂ ಪಾರಾಗುವರೆಂಬ ದೃಷ್ಟೇ ಅಲ್ಲ.

" ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ "

ಎಂದು ಭಗವಂತನೇ ಹೇಳಿರುವಂತೆ ಎಂಥ ದುರಾಚಾರಿಯೇ ಆದರೂ ಅನನ್ಯಭಕ್ತಿಯನ್ನು ಮಾಡಿದರೆ ಅವನನ್ನು ಸಾಧುವೆಂದೇ ತಿಳಿಯಬೇಕು. ಏಕೆಂದರೆ ಅವನು ಕೊನೆಗೆ ಒಳ್ಳೇ ನಿಶ್ಚಯವನ್ನು ಮಾಡಿರುವನು. ಸದಾಚಾರದಲ್ಲಿರುವವರು ಉನ್ನತಿಯನ್ನು ಪಡೆಯುವದು ದೊಡ್ಡದಲ್ಲ. ದುರಾಚಾರಿಗಳೂ ಕೂಡ ಧನ್ಯರಾಗಿರುವರೆಂದರೆ ಇದೊಂದು ಹೆಚ್ಚುಗಾರಿಕೆಯೇ ಸರಿ. ಬ್ರಾಹ್ಮಣನಾಗಿ ಮೊದಮೊದಲು ಸದಾಚಾರಿಯಾಗಿದ್ದ ಅಜಾಮಿಳನು ದುರ್ದೈವದಿಂದ ನೀಚಸ್ತ್ರೀಯಲ್ಲಿ ಅನುರಕ್ತನಾಗಿ ಆಚಾರಕ್ಕೆಲ್ಲಾ ತಿಲಾಂಜಲಿಯನ್ನು ಬಿಟ್ಟು ಕೇವಲ ದುರ್ವ್ಯಸನಿಯಾಗಿ ಮರಣೋನ್ಮುಖನಾದನು. ಅವನು ಮಾಡಿದ ಮಹಾಪರಾಧಕ್ಕೆ ಯಾವ ಶಿಕ್ಷೆಯೂ ಸಾಕಾಗದ ಹಾಗಿತ್ತು. ಹೀಗಿದ್ದು ಮರಣಕಾಲದಲ್ಲಿ ಅವನಿಗೆ ಸುದೈವದಿಂದ ಪರಮಾತ್ಮನ ಸ್ಮರಣೆಯುಂಟಾಯಿತು. ಒಡನೆ ಅವನು ಪಶ್ಚಾತ್ತಾಪವನ್ನು ಹೊಂದಿದನು. ಇಷ್ಟರಿಂದಲೇ ಭಗವಂತನು ಅವನನ್ನು ಕೈಹಿಡಿದು ಮೇಲಕ್ಕೆತ್ತಿದನೆಂದು ಭಾಗವತವು ಹೇಳುತ್ತದೆ. ಈಗಲೂ ಹರಿಕಥಾ ಕಾಲಕ್ಷೇಪದಲ್ಲಿ ಅಜಾಮಿಳನ ಕಥೆಯನ್ನು ತೆಗೆದುಕೊಳ್ಳುತ್ತಾರೆ. ಅವನು ಅಂಥ ಮಹಾತ್ಮನಾಗಿ ಪರಿಣಮಿಸಿದ್ದಾನೆ.

ಇದೇ ಅಭಿಪ್ರಾಯವನ್ನು ಶ್ರೀಪುರಂದರದಾಸರು ಒಂದು ಹಾಡಿನಲ್ಲಿ ಹೇಳಿರುವದೇನೆಂದರೆ—

ರೇಗುಪ್ತಿ. ಅಟತಾಳ.

ಸ್ಮರಣೆ ಒಂದೇ ಸಾಲದೆ । ಗೋವಿಂದನ । ನಾಮ ಒಂದೇ ಸಾಲದೇ ॥ ಪ ॥
ಪರಮಪುರುಷನನ್ನು ಸೆರೆ ನಂಬಿದವರಿಗೆ ।
ದುರಿತಬಾಧೆಗಳ ಗುರುತು ತೋರುವದೇ? ॥ ಅ. ಪ. ॥
ಕಡುಮೂರ್ಖನಾದರೇನು । ದುಷ್ಕರ್ಮವ । ಬಿಡದಾತನಾದರೇನು ॥
ಜಡನಾದರೇನಲ್ಲ ಜಾತಿಯಾದರೇನು । ಬಿಡದೆ ಪ್ರಹ್ಲಾದನ್ನ ಸಲಹಿದ ಪರಿಯು ॥೧॥

ಪಾತಕಿಯಾದರೇನು । ಸರ್ವಸ್ವಾರ್ಗಿ । ಘಾತಕಿಯಾದರೇನು? ॥

ನೀತಿಯ ಬಿಟ್ಟು ಗುಪ್ತಕ್ರಿಯಾದರೇನು । ಆತುರದಜಾಮಿಳನ ಸಲಹಿದ ಹರಿಯು ॥೨॥

ಸಕಲತೀರ್ಥಯಾತ್ರೆಯು । ಮಾಡಿದಂಥ । ನಿರ್ಮಲಪುಣ್ಯದ ಫಲವು ॥

ಭಕುತಿಪೂರ್ವಕವಾಗಿ ಬಿಡದನುದಿನದಲ್ಲಿ । ಪ್ರಕಟ ಪುರಂದರವಿಠಲನ ನಾಮವು ॥೩॥

ಈ ಸ್ಥಲಕ್ಕೆ ಒಪ್ಪುವಂತೆ ಶ್ರೀಜಗನ್ನಾಥವಿಠಲರು ಹರಿಕಥಾಮೃತಸಾರದಲ್ಲಿ ಹೇಳಿರುವದೇನೆಂದರೆ—

ಪಾಪಕರ್ಮವ ಸಹಿಸುವರೆಲ । ಕ್ಷೋಣಿಗೆ ಸಮರಾದ ದ್ವಿಜರ ।

ನೀಪಯೋಜಭವಾಂಡದೊಳಗಿಲ್ಲಿ ನಾ ಕಾಣೆ ॥

ಗೋಪ, ಗುರುಪಿನ ಮಡದಿ, ಭೃಗು, ನಗ । ಕೂಪ ಮೊದಲಾದವರು ವಾಲ್ಮಿ ಮು ।

ದಾಪರಾಧಗಳೇನಿದನೆ? ಕರುಣಾಸಮುದ್ರ ಹರೀ ॥

ಉಳಿದ ಸಾಧನಗಳೆಲ್ಲಾ ಅನಾಚಾರಿಗಳನ್ನು ಕತ್ತಿಗೆ ಕೈಹಾಕಿ ನೂಕಿಬಿಡುತ್ತವೆ. ಭಕ್ತಿಯೊಂದು ಮಾತ್ರ ಅವರನ್ನು ಉದ್ಧಾರಮಾಡುತ್ತದೆ. ಇದೊಂದು ಭಕ್ತಿಯ ದೊಡ್ಡ ಹೆಚ್ಚುಗಾರಿಕೆ. ಭಕ್ತಿಯ ಹೆಚ್ಚುಗಾರಿಕೆಯನ್ನು ಹೇಳುವದಲ್ಲಿ ಭಾಗವತವು ಇನ್ನೂ ಮುಂದೆ ಹೋಗಿದೆ. ಅದು ಹನ್ನೊಂದನೇ ಸ್ಕಂಧದ ಹದಿನಾಲ್ಕನೇ ಅಧ್ಯಾಯದಲ್ಲಿ ಹೇಳುವದೇನೆಂದರೆ—

“ಭಕ್ತಿಃ ಪುನಾತಿ ಮನ್ನಿಷ್ಠಾ ಶ್ವಪಾಕಾನಪಿ ಸಂಭವಾತ್”

ಪರಮಾತ್ಮನಲ್ಲಿ ನೆಲಸಿಟ್ಟಿರುವ ಭಕ್ತಿಯು ಚಂಡಾಲರನ್ನು ಕೂಡ ಉದ್ಧಾರಮಾಡುವದೆಂದು ಅದರ ತಾತ್ಪರ್ಯ. ಇಲ್ಲಿ ಸಾಧನಗಳೂ ದೂರಕ್ಕೆ ಅಟ್ಟಿದ್ದ ಚಂಡಾಲರನ್ನು ಕೂಡ ಭಕ್ತಿಮಾರ್ಗವು ಎರಡು ಕೈಗಳನ್ನೂ ನೀಡಿ ಕರೆದುಕೊಂಡು ಮುಂದಕ್ಕೆ ಸಾಗಿಸುವದು. ವಾಲ್ಮೀಕಿಯು ದಾರಿಹೋಕರ ತಲೆಯನ್ನು ಹೊಡೆಯುವಂಥ ನೀಚವಾದ ಉದ್ಯೋಗದಲ್ಲಿದ್ದರೂ ನಾರದರ ಉಪದೇಶದಿಂದ ರಾಮನಾಮವನ್ನು ತಲೆಕೆಳಗಾಗಿ ಜಪಿಸಿದ್ದರ ಮೂಲಕವೇ ದೇವರು ಅವನ ಮೇಲೆ ಕನಿಕರವನ್ನು ತೋರಿಸಿ ಅವನನ್ನು ಮಹರ್ಷಿಯನ್ನಾಗಿ ಮಾಡಿ ವೈಕುಂಠದಲ್ಲಿ ಕೂಡ ಅವನಿಗೆ ಮನ್ನಣೆಯು ದೊರೆಯುವಂತೆ ಅನುಗ್ರಹಿಸಿದ್ದಾನೆ. ವಾನರರೂ ಗೌಳಿಗರೂ ಉತ್ಕೃಷ್ಟ ಜಾತಿಯವರೇ? ಹದ್ದಿನ ಜನ್ಮವೇನು ಶ್ರೇಷ್ಠವೆ? ಹನುಮಂತನೇ ಮೊದಲಾದ ವಾನರರೂ ಗೋಕುಲದಲ್ಲಿದ್ದ ಗೋಪಾಲರೂ ಜಟಾ

ಯಂತ್ರಾ ಕೂಡ ಸದ್ಗತಿಯನ್ನು ಪಡೆದನೆಂದು ಸ್ಮೃತಿ ಹೇಳುವುದೇ? ಬೇಟೆಯಾಡುವ ನೀಚವೃತ್ತಿಯ ವ್ಯಾಧನು ಬಾಯಲ್ಲಿ ತುಂಬಿಕೊಂಡು ತಂದ ನೀರಿನಿಂದ ಶಿವಲಿಂಗಕ್ಕೆ ಅಭಿಷೇಕವನ್ನು ಮಾಡಿ ಕಾಲ್ಚಪ್ಪಲಿದಿಂದ ಎಡಗಯ್ಯಿಂದ ಬರೆಸಿ ಬಲಗೈಯಿಂದ ತಾನು ತಿಂದ ಮಾಂಸಕ್ಕ ವನ್ನು ನಿವೇದನ ಮಾಡಿದ ಏಕನಿಷ್ಠೆಯ ಭಕ್ತಿಯಿಂದ ಆತನು ಭಗವದನುಗ್ರಹಕ್ಕೆ ಪಾತ್ರನಾಗಿ ಧರ್ಮವ್ಯಾಧನೆನಿಸಿ ಆತನೊಬ್ಬ ಸಚ್ಚರಿತ್ರನಾಗಿದ್ದಾನೆ. ಮೊನ್ನೆಮೊನ್ನೆ ಚೋಖಾಮೇಳನೆಂಬ ಚಂಡಾಲನ ಭಕ್ತಿಗೆ ಪಾಂಡುರಂಗನೊಲಿದ ಕಥೆಯು ಭಕ್ತಿವಿಜಯದಲ್ಲಿ ಪ್ರಸಿದ್ಧವಾಗಿದೆ. ಪಂಢರಾಪುರದಲ್ಲಿ ಉತ್ತಮವರ್ಣದವರು ಚೋಖಾಮೇಳನನ್ನು ಪಾಂಡುರಂಗನ ದರ್ಶನಕ್ಕೆ ಒಳಕ್ಕೆ ಬಿಡದೆ ಬಾಗಿಲಲ್ಲಿಯೇ ತಡೆದಾಗ ಆ ಚಂಡಾಲನ ಭಕ್ತಿಗೆ ಪರವಶನಾದ ಪಾಂಡುರಂಗನು ತಾನೇ ಹೊರಕ್ಕೆ ಬಂದು ಆ ಭಕ್ತನಿಗೆ ದರ್ಶನವನ್ನು ಕೊಟ್ಟನೆಂಬುದನ್ನು ನೆನಪುಗೊಡುವಂತೆ ಈಗಲೂ ವಿಠೋಬನ ದೇವಸ್ಥಾನದ ಬಾಗಿಲಲ್ಲಿ ಚೋಖಾಮೇಳನ ಸಮಾಧಿಯೂ ಅದರ ಸಮೀಪದಲ್ಲಿ ವಿಠೋಬನ ಮೂರ್ತಿಯೂ ಕಂಗೊಳಿಸುತ್ತಿವೆ.

ಭಕ್ತ್ಯಾಚಾರ್ಯರೆಂದು ಪ್ರಸಿದ್ಧರಾದ ಭಗವಾನ್ನಾರದರು ಕೂಡ ಇದೇ ಅಭಿಪ್ರಾಯವನ್ನು ತಮ್ಮ ಗ್ರಂಥದಲ್ಲಿ—

" ನಾಸ್ತಿ ತೇಷು ಜಾತಿವಿದ್ಯಾರೂಪಕುಲಧನಕ್ರಿಯಾದಿಭೇದಃ "

ಎಂಬ ಸೂತ್ರದಿಂದ ಉಲ್ಲೇಖಿಸಿರುತ್ತಾರೆ. ಭಕ್ತರಲ್ಲಿ ಹುಟ್ಟು, ತಿಳಿವಳಿಕೆ, ರೂಪ, ಕುಲ, ಹಣ, ಕರ್ಮ- ಮೊದಲಾದವುಗಳ ಹೆಚ್ಚುಕಡಿಮೆಯನ್ನು ನೋಡಬಾರದೆಂದು ಅದರ ತಾತ್ಪರ್ಯ. ಈ ವಿಚಾರದಲ್ಲಿ ಒಂದು ಸ್ಮೃತಿಯು ಹೇಳುವುದೇನೆಂದರೆ—

" ವ್ಯಾಧಸ್ಯಾಚರಣಂ, ಧ್ರುವಸ್ಯ ಚ ವಯೋ, ವಿದ್ಯಾ ಗಜೇಂದ್ರಸ್ಯ ಕಾ, |
ಕಾ ಜಾತಿರ್ವಿದುರಸ್ಯ, ಯಾದವಪತೇರುಗ್ರಸ್ಯ ಕಿಂ ಪೌರುಷಂ, ||
ಕುಬ್ಜಾಯಾಃ ಕಮನೀಯರೂಪಮಧಿಕಂ, ಕಿಂ ತತ್ಸುದಾಮ್ನೋ ಧನಂ, |
ಭಕ್ತ್ಯಾ ತುಷ್ಯತಿ ಕೇವಲಂ ನ ತು ಗುಣೈರ್ಭಕ್ತಿಪ್ರಿಯಃ ಶ್ರೀಪತಿಃ ||"

" ಧರ್ಮವ್ಯಾಧನ ಆಚರಣೆಯಲ್ಲಿ ಶ್ಲಾಘ್ಯವಾದದ್ದೇನಿದೆ ? ಧ್ರುವನಿಗೆ ಬುದ್ಧಿ ಬಲಿತಿರುವಷ್ಟು ವಯಸ್ಸಾಗಿತ್ತೆ? ಗಜೇಂದ್ರನೇನು ವಿದ್ಯಾವಂತನೆ?

ವಿದುರನದು ಉತ್ತಮಜಾತಿಯೇ? ಯಾದವರರಸನಾದ ಉಗ್ರಸೇನ ಪರಾಕ್ರಮಿಯೇ? ಕುಬ್ಜೆಯು ಸುಂದರಿಯೇ? ಸುಧಾಮನು ಧನಿಕನೆ? ಭಗವಂತನು ಆಚರಣೆ, ವಯಸ್ಸು, ವಿದ್ಯೆ, ಜಾತಿ, ಪೌರುಷ, ರೂಪ, ಧನ- ಮೊದಲಾದ ಯಾವದಕ್ಕೂ ಮರುಳಾಗುವದಿಲ್ಲ. ಅವನು ಕೇವಲ ಭಕ್ತಿಯಿಂದ ತೃಪ್ತನಾಗುವವನು." ಎಂದು ಅದರರ್ಥ.

ಇದನ್ನರಿತೇ ಎಷ್ಟೋ ಸಾಧುಗಳು ತಾವು ನಿರ್ಗುಣಸ್ವರೂಪದಲ್ಲಿ ಮಗ್ನರಾಗುವ ಅಧಿಕಾರಿಗಳಾಗಿದ್ದರೂ ಕೂಡ ಪರಮಾತ್ಮನ ಸಗುಣಸ್ವರೂಪದ ಮಾಧುರ್ಯದ ಮುಂದೆ ಅದರ ಬೆಲೆ ಇಲ್ಲವೆಂದು ಆ ಸಗುಣಸ್ವರೂಪದ ಭಕ್ತಿಯನ್ನು ಬಿಡಲಾರದೆ ತಮಗೆ ಆ ನಿರ್ಗುಣಸ್ವರೂಪದ ಮೋಕ್ಷವೇ ಬೇಡವೆಂದೂ ಸಗುಣಭಕ್ತಿಯುಂಟಾಗುವಂಥ ಜನ್ಮಾಂತರಗಳಿರಲೆಂದೂ ಆ ಜನ್ಮಾಂತರಗಳಾದರೂ ಹೆಚ್ಚಿನ ಮನುಷ್ಯಜನ್ಮವೇ ಆಗಬೇಕೆಂದಿರದೆ

" ಕೀಟೇಷು ಪಕ್ಷಿಷು ಮೃಗೇಷು ಸರೀಸೃಪೇಷು ।
ರಕ್ಷಃಪಿಶಾಚಮನುಜೇಷ್ವಪಿ ಯತ್ರ ಯತ್ರ ।
ಜಾತಸ್ಯ ಮೇ ಭವತು ಕೇಶವ ತ್ವತ್ಪ್ರಸಾದಾತ್ ।
ತ್ವಯ್ಯೇವ ಭಕ್ತಿರಚಲಾವ್ಯಭಿಚಾರಿಣೀ ಚ ॥ "

ಎಂಬ ಒಬ್ಬ ಭಕ್ತನ ಪ್ರಾರ್ಥನೆಯಂತೆ ಹುಳ, ಪಕ್ಷಿ, ಮೃಗ, ಹಾವು, ರಾಕ್ಷಸ, ಪಿಶಾಚಿ, ಮನುಷ್ಯ-- ಮೊದಲಾದ ಯಾವ ಜಾತಿಯಲ್ಲಿ ನಾನು ಹುಟ್ಟಿದರೂ ನಿನ್ನನುಗ್ರಹದಿಂದ ನಿನ್ನಲ್ಲಿಯೇ ಅನನ್ಯಭಕ್ತಿಯುಂಟಾಗಲೆಂದೂ ಅವರು ಹಂಬಲಿಸುವರು. ಭಕ್ತಿಯು ನಿರ್ಗುಣಸ್ವರೂಪದ ಪ್ರಾಪ್ತಿಯ ಬಯಕೆಯನ್ನು ಕೂಡ ಹಿಮ್ಮೆಟ್ಟಿಸಿ ತನಗಾಗಿ ಎಲ್ಲಿಂದಲೂ ಬಾಯನೀರು ಕರೆಸುವಂಥದು. ಆದ್ದರಿಂದಲೂ ಭಕ್ತಿಯು ಜ್ಞಾನಕ್ಕಿಂತ ಹೆಚ್ಚಿನದು.

## ಕರ್ಣಾಟಕದ ಸಂಬಂಧ.

ನಮ್ಮ ಭರತಖಂಡವೇ ಧರ್ಮಕ್ಕೆ ಮಾತೃಭೂಮಿ. ಅದರಲ್ಲಿಯೂ ನಮ್ಮ ಕರ್ಣಾಟಕಕ್ಕೆ ಪ್ರಾಶಸ್ತ್ಯವಿರುವದು ನಮಗೆ ಅಭಿಮಾನಾಸ್ಪದವಾದ

ವಿಷಯವಾಗಿದೆ. ಹೇಗೆಂದರೆ ಧರ್ಮಸಾಧನಗಳೆಲ್ಲೆಲ್ಲಾ ಭಕ್ತಿಯೋಗವು ಉತ್ಕೃಷ್ಟವಾದುದೆಂದು ಹೇಳಿದ್ದಾಗಿದೆಯಷ್ಟೆ. ನಮ್ಮದು ನಾ ಆ ಭಕ್ತಿ ಪಂಥದ ನಡುವನೆ. ಭಕ್ತಿಮಾರ್ಗದ ಸ್ವೀಗೂಡಿಕೊಳ್ಳುವಿಕೆಗೆ ಆಶ್ರಯವನ್ನು ಕೊಟ್ಟ ಭಾಗ್ಯವು ನಮ್ಮ ಕರ್ನಾಟಕದ ಪಾಲಿಗೆ ಬಂದಿರುವದು. ಇದು ನಮ್ಮ ಕೈಗಂಟಿನ ಮಾತಲ್ಲ. ಪಾದ್ಮಪುರಾಣದ ಉತ್ತರಖಂಡದಲ್ಲಿರುವ ಭಾಗವತಮಾಹಾತ್ಮ್ಯವನ್ನು ಓದಿ ನೋಡಬಹುದು. ಅಲ್ಲಿ ಭಕ್ತಿಮಾರ್ಗದ ವಿಷಯದಲ್ಲಿ ನಮ್ಮ ಕರ್ನಾಟಕದ ಪುರಾಣಪ್ರಸಿದ್ಧತೆಯು ಕಣ್ಣಿಗೆ ಕಟ್ಟಿದಂತೆ ಕಾಣುವದು. ಆದರಿಂದ ಆರಿಸಿದ ಒಂದು ಶ್ಲೋಕವನ್ನು ಇಲ್ಲಿ ಉದಾಹರಿಸುವೆವು.

"ಉತ್ಪನ್ನಾ ದ್ರಾವಿಡೇ ಸಾಹಂ ವೃದ್ಧಿಂ ಕರ್ಣಾಟಕೇ ಗತಾ ।
ಕ್ವಚಿತ್ ಕ್ವಚಿನ್ಮಹಾರಾಷ್ಟ್ರೇ ಗುರ್ಜರೇ ಜೀರ್ಣತಾಂ ಗತಾ ॥"

ಪರಮಪೂಜ್ಯಳಾದ ಭಕ್ತಿದೇವಿಯು ಭಗವಾನ್ ನಾರದರೆದುರಿಗೆ ತನ್ನ ಪೂರ್ವವೃತ್ತಾಂತವನ್ನು ಹೇಳಿರುವದೇನೆಂದರೆ "ನಾನು ದ್ರಾವಿಡದೇಶದಲ್ಲಿ ಹುಟ್ಟಿದೆನು; ಕರ್ಣಾಟಕದಲ್ಲಿ ಬೆಳೆದೆನು; ಮಹಾರಾಷ್ಟ್ರದಲ್ಲಿ ಸ್ವಲ್ಪ ಸ್ವಲ್ಪ ಓಡಾಡಿದೆನು; ಗುರ್ಜರದೇಶಕ್ಕೆ ಬಂದು ಸೊರಗಿರುವೆನು." ಇದು ಮೇಲಿನ ಶ್ಲೋಕದ ಅರ್ಥ. ನಮ್ಮ ಕರ್ಣಾಟಕವು ಪೂರ್ವದಲ್ಲಿ ಭಕ್ತಿದೇವಿಗೆ ಪರಿಪುಷ್ಟಿಯನ್ನುಂಟುಮಾಡಿ ಇಷ್ಟು ಪ್ರಶಂಸೆಗೆ ಪಾತ್ರವಾಗಿರುವದು. ಅದು ಪೂರ್ವದಲ್ಲಿ ಮಾಡಿದ ಈ ಮಹಾಪುಣ್ಯವು ತನ್ನ ಹೆಸರನ್ನು ಮುಡಿಯಲ್ಲಿ ಪಾರಾಯಣ ಮಾಡುವದಕ್ಕೆ ತಕ್ಕದ್ದಾಗಿ ಮಾಡಿರುವದು. ಸುದೈವದಿಂದ ನಾವು ಅಂಥ ಪವಿತ್ರಭೂಮಿಯಲ್ಲಿ ಜನ್ಮವೆತ್ತಿರುವೆವು. ಹೊಸದಾಗಿ ನಮ್ಮ ಭೂಮಾತೆಯ ಜಯಧ್ವನಿಯನ್ನು ಹತ್ತು ದಿಕ್ಕುಗಳಿಗೂ ತುಂಬುವ ಶ್ಲಾಘನೆಯನ್ನು ನಾವು ಪಡೆಯಬೇಕಾಗಿರುವಾಗ ನಮ್ಮ ಪೂರ್ವಿಕರು ಸಂಪಾದಿಸಿದ ಜಯಘೋಷವನ್ನು ಸಜೀವವಾಗಿ ಇಡುವಷ್ಟಾದರೂ ನಮ್ಮ ಯೋಗ್ಯತೆಯು ಈಗ ಹೊರಬೀಳದ ಮೇಲೆ ನಮ್ಮ ಹುಟ್ಟಿನಿಂದ ಏನು ಪ್ರಯೋಜನ?

"ಮಾತುಃ ಕೇವಲಮೇವ ಯೌವನವನಚ್ಛೇದೇ ಕುಠಾರಾ ವಯಂ"

ಎಂಬಂತೆ ನಮ್ಮ ಹುಟ್ಟಿನಿಂದ ನಾವು ಸುಮ್ಮನೆ ಭೂಮಿಯ ಸಾರವನ್ನೆಲ್ಲಾ ತಿಂದು ತೇಗಿ ಅದರ ಹೊಗರನ್ನು ಹಾಳು ಮಾಡುವವರಾಗಬಾರದು. ಯಾವ ಕರ್ಣಾಟಕವು ತನ್ನನ್ನು ಪುಷ್ಟಿಗೊಳಿಸಿತೆಂದು ಭಕ್ತಿದೇವಿಯು ದೇವರ್ಷಿಗಳೆದುರಿಗೆ ನಮ್ಮ ದೇಶವನ್ನು ಹೊಗಳಿದಳೋ ಆ ನಮ್ಮ ದೇಶವು ಈ ಕಾಲದಲ್ಲಿ ಆ ಶ್ಲಾಘನೆಗೆ ಸಂಶಯವನ್ನುಂಟುಮಾಡುವ ಪರಿಸ್ಥಿತಿಗೆ ಇಳಿದಿದೆ. ಪೂರ್ವದಲ್ಲಿ ಗುರ್ಜರದೇಶದಲ್ಲಿ ಸೊರಗಿದೆನೆಂದು ಹೇಳಿಕೊಂಡ ಭಕ್ತಿದೇವಿಯು ಈಗ ಕರ್ಣಾಟಕದಲ್ಲಿ ನಿಟ್ಟುಸಿರುಬಿಡುತ್ತಿರುವಂತೆ ತೋರುತ್ತದೆ. ನಾವು ಬರೀ ನಮ್ಮ ಪೂರ್ವಿಕರ ಯಶಸ್ಸಿನಿಂದಲೇ ತೃಪ್ತರಾಗದೆ ನಮ್ಮ ಹಿರಿಯರ ಮಕ್ಕಳಾದ್ದಕ್ಕೆ ಸಾರ್ಥಕವಾಗಿ ಭಕ್ತಿಮಾರ್ಗವು ನಮ್ಮ ದೇಶದಲ್ಲಿ ಎಲ್ಲೆಲ್ಲಿಯೂ ಪ್ರಸಾರವಾಗಿ ನಮ್ಮ ದೇಶವು ಆರ್ಯಧರ್ಮ ಧ್ವಜದ ಗದ್ದುಗೆಯಾಗಬೇಕು. ಎಂದು ನಮ್ಮ ಈ ಇಷ್ಟಾರ್ಥವು ನೆರವೇರುವದೋ ಅಂದು ನಾವು ನಿಜವಾದ ಕನ್ನಡಿಗರು. ಸ್ವಭಾವವಾಗಿ ಕನ್ನಡಿಗರಿಗೆ ಧರ್ಮದ ಹುಚ್ಚು ಬಹಳ. ನಮ್ಮ ಕನ್ನಡನಾಡಿನಲ್ಲಿರುವಷ್ಟು ಧರ್ಮಪೀಠಗಳು ಬೇರೆ ಯಾವ ನಾಡಿನಲ್ಲಿಯೂ ದೊರೆಯಲಾರವು. ಜನರ ಈ ಭಕ್ತಿಭಾವನೆಯ ಪ್ರಭಾವದಿಂದಲೇ ಹಿಂದೆ ಕರ್ಣಾಟಕದಲ್ಲಿ ಸ್ಥಾಪಿತವಾದ ವಿಜಯನಗರದ ಸಂಸ್ಥಾನವು ಸಮಸ್ತಭರತದೇಶೀಯರ ಕಣ್ಣುಕುಕ್ಕುವಷ್ಟು ಪ್ರತಿಭೆಯನ್ನು ತೋರಿ ತನ್ನ ಯಶಸ್ಸೌರಭವನ್ನು ದಿಗಂತಗಳವರೆಗೂ ಹಬ್ಬಿಸಿರುವದು. ದೈವಯೋಗದಿಂದ ಅಸ್ತಂಗತವಾದ ಆ ರಾಜ್ಯಕ್ಕೆ ಪುನರ್ಜನ್ಮದ ಕಾಲವು ಸನ್ನಿಹಿತವಾಗಿರುವದೆಂದು ಭವಿಷ್ಯವಾದಿಗಳು ನುಡಿಯುತ್ತಿರುವರು. ಅದು ಅರ್ಥವತ್ತಾಗಿ ಕನ್ನಡನಾಡಿನ ದುರ್ದಶೆ ಬಯಲಾಗಬೇಕಾದರೆ ಕನ್ನಡನಾಡು ತನ್ನ ಸ್ವಭಾವಸಿದ್ಧ ಸಾಧನವಾದ ಭಕ್ತಿಭಾವವನ್ನು ಮತ್ತೆ ಹುರಿಗೂಡಿಸಿಕೊಳ್ಳಬೇಕು. ಅದಿಲ್ಲದ ಬಾಯ ಬಡಬಡಿಕೆಯಿಂದ ಏನೂ ಆಗುವದಿಲ್ಲ.

## ವಿಗ್ರಹ ಪೂಜೆ.

ವೇದದಲ್ಲಿ ದೇವರು ನಿರಾಕಾರನೆಂಬ ವಚನಗಳೂ ಸಿಕ್ಕುತ್ತವೆ; ಸಾಕಾರನೆಂಬ ವಚನಗಳೂ ಸಿಕ್ಕುತ್ತವೆ. ಭಕ್ತಿಮಾರ್ಗಕ್ಕೆ ಸಾಕಾರವೇ

ಹೆಚ್ಚು ಉಪಯೋಗಕ್ಕೆ ಬರುವದು. ಮನುಷ್ಯನಿಗೆ ನಿರಾಕಾರವನ್ನು ಕಲ್ಪಿಸಿಕೊಳ್ಳುವದು ಸಾಧ್ಯವಲ್ಲ. ಯಾವ ಬಳ್ಳಿಯೂ ಆಕಾಶವನ್ನು ಅಡರಿಕೊಂಡು ನಿಲ್ಲಲಾರದಷ್ಟೆ. ಅದರಂತೆ ಮನಸ್ಸೆಂಬ ಬಳ್ಳಿಯು ನಿರಾಕಾರದ ಮೇಲೆ ಹಬ್ಬಲಾರದು. ಆದ್ದರಿಂದ ಪ್ರತಿಯೊಬ್ಬನೂ ತನ್ನ ಭಕ್ತಿಗೆ ವಿಷಯವಾಗಿ ಒಂದು ಸಾಕಾರದೇವತೆಯನ್ನು ಆಶ್ರಯಿಸಲೇಬೇಕಾಗುವದು. ಭಕ್ತನಿಗೆ ಸಾಕಾರವಿಲ್ಲದಿದ್ದರೆ ಸಮೆಯುವದೇ ಇಲ್ಲ. ಯಾಕೆಂದರೆ ಅವನು ಆ ದೇವತೆಯ ಮೇಲೆ ಪ್ರೇಮವನ್ನು ಮಾಡಿ ಅದಕ್ಕೆ ಸ್ನಾನವನ್ನು ಮಾಡಿಸಬೇಕಾಗುತ್ತದೆ; ಉಡಿಸಬೇಕಾಗುತ್ತದೆ; ಉಣ್ಣಿಸಬೇಕಾಗುತ್ತದೆ; ಮಲಗಿಸಬೇಕಾಗುತ್ತದೆ; ಮಾತನಾಡಿಸಬೇಕಾಗುತ್ತದೆ; ಅದರ ಪಾದವನ್ನು ಹಿಡಿಯಬೇಕಾಗುತ್ತದೆ; ಅದನ್ನು ಹೊತ್ತುಕೊಂಡು ಮೆರೆಸಬೇಕಾಗುತ್ತದೆ; ತನ್ನ ಪ್ರೇಮವನ್ನು ಯಾವ ಯಾವ ಬಗೆಯಲ್ಲಿ ತೋರಿಸಬೇಕಾಗುವದೋ ಆಯಾರೀತಿಯಲ್ಲೆಲ್ಲ ಮಾಡಬೇಕಾಗುತ್ತದೆ. ಏನೂ ಇಲ್ಲದ ಬಯಲ ಮೇಲೆ ಪ್ರೀತಿಮಾಡುವದನ್ನು ಭಕ್ತನು ಅರಣ್ಯರೋದನವೆಂದು ತಿಳಿಯುವನು. ಇದಲ್ಲದೆ ಸಾಕಾರಸ್ವರೂಪದ ಕಲ್ಪನೆಯನ್ನು ತೆಗೆದುಹಾಕುವದೆಂದರೆ ಇತಿಹಾಸಪುರಾಣಗಳನ್ನೆಲ್ಲ ಗಂಟುಕಟ್ಟಿ ಸಮುದ್ರಕ್ಕೆ ಹಾಕಿದಂತೆಯೇ. ನಿರಾಕಾರಸ್ವರೂಪವು ದೇಹಿಗಳಿಗೆ ದಕ್ಕುವದಿಲ್ಲೆಂದು ತಿಳಿದೇ ಪರಮಾತ್ಮನು ಭಕ್ತರಿಗೆ ದರ್ಶನವನ್ನು ಕೊಡುವದಕ್ಕಾಗಿ ವಿಷ್ಣು, ರಾಮ ಮತ್ಸ್ಯ ಹಂಸ—ಮೊದಲಾದ ಆಕಾರಗಳನ್ನು ಧಾರಣೆ ಮಾಡಿರುವಾಗ ಆ ಸಾಕಾರದ ಸೌಕರ್ಯವನ್ನು ಉಪಯೋಗ ಮಾಡಿಕೊಳ್ಳದೆ ಹೋಗುವದು ದಡ್ಡತನವೇ ಸರಿಯೆಂದು ಭಕ್ತರ ಅಭಿಪ್ರಾಯ. ಆದ್ದರಿಂದ ಅವರು ಯಾವದಾದರೊಂದು ಸಾಕಾರವನ್ನು ತಮ್ಮ ಇಷ್ಟದೇವತೆಯಾಗಿ ಮಾಡಿಕೊಂಡು ಅದರ ನೆನಪಾಗುವಂತೆ ತಮ್ಮ ಉಪಾಸನೆಗೊಂದು ವಿಗ್ರಹವನ್ನಿಟ್ಟುಕೊಳ್ಳುವರು.

ಈ ವಿಗ್ರಹಗಳನ್ನು ಪೂಜಿಸುವದೆಂಬುದು ಪರದೇಶೀಯರ ಮನಸ್ಸಿಗೆ ಬಗ್ಗುವದಿಲ್ಲ. ಆದ್ದರಿಂದ ಇದೊಂದು ಆರ್ಯಧರ್ಮದ ದೊಡ್ಡ ಕಲಂಕವೆಂದು ಅವರು ನಮ್ಮನ್ನು ಬಾಯಿತುಂಬ ನಿಂದಿಸುವರು. ಹೀಗೆಂದು ಅವರು ಸಾಕಾರದ ಅವಲಂಬನೆಯನ್ನು ಸಂಪೂರ್ಣವಾಗಿ

ಬಿಟ್ಟರೆ ಇಲ್ಲ. ಕ್ರೈಸ್ತಮತದವರು ಶಿಲುಬೆಯ ಚಿಹ್ನವನ್ನು ಗೌರವಿಸುವರು. ಮಹಮ್ಮದೀಯರು ಹಸ್ತವನ್ನು ಪೂಜಿಸುವರು. ಅವರ ಸಾಕಾರವು ನಮ್ಮದರ ಹಾಗೆ ಕೈ, ಕಾಲು, ಮುಖ—ಮೊದಲಾದವುಗಳಿಲ್ಲದೆ ಇರಬಹುದು. ಆದರೆ ಅದೂ ಒಂದು ಆಕಾರವೆಂಬ ವಿಷಯಕ್ಕೇನೂ ಸಂಶಯವಿಲ್ಲ. ಅವರಿಟ್ಟುಕೊಂಡಿರುವ ಆಕಾರವೂ ನೆನಪಿಗಾಗಿ; ನಾವಿಟ್ಟುಕೊಂಡಿರುವ ಆಕಾರವೂ ನೆನಪಿಗಾಗಿ. ಇದರಲ್ಲೇನು ವಿಶೇಷ? ಆಕಾರವನ್ನು ಬಿಟ್ಟು ಸಾಧಿಸುವದು ಸಾಮಾನ್ಯವಾಗಿ ಮನುಷ್ಯರಿಗೆ ಸಾಧ್ಯವೇ ಇಲ್ಲ. ನಿರಾಕಾರವನ್ನೇ ಗ್ರಹಿಸುವಂಥ ಪ್ರತಿಭಾಶಾಲಿಗಳು ಅದರಂತೆ ಮಾಡಬಹುದು. ವಿಗ್ರಹವೇ ಬೇಕೆಂದು ನಮ್ಮಲ್ಲಿ ಆಗ್ರಹವೇನೂ ಇಲ್ಲ. ಅದರಲ್ಲಿಯೂ ವಿಗ್ರಹಗಳನ್ನು ಮಾಡಿಟ್ಟುಕೊಂಡು ಪೂಜಿಸುವದು ಧರ್ಮದ ಬಾಲಪಾಠದವರಿಗೇ ಹೇಳಿದ ಮಾತು. ಇದರ ವಿಚಾರದಲ್ಲಿ ಆಗ್ನೇಯ ಪುರಾಣದಲ್ಲಿರುವದೇನೆಂದರೆ—

"ಅಗ್ನೌ ಕ್ರಿಯಾವತಾಂ ದೇವೋ ರವೌ ದೇವೋ ಮನೀಷಿಣಾಂ ।
ಪ್ರತಿಮಾ ಸ್ವಲ್ಪಬುದ್ಧೀನಾಂ ಯೋಗಿನಾಂ ಹೃದಯೇ ಹರಿಃ ॥"

ಅರ್ಥವೇನೆಂದರೆ "ಕರ್ಮಮಾರ್ಗದವರಿಗೆ ದೇವರು ಅಗ್ನಿಯಲ್ಲಿರುವನು; ಪಂಡಿತರು ದೇವರನ್ನು ಸೂರ್ಯಮಂಡಲದಲ್ಲಿ ಅನುಸಂಧಾನ ಮಾಡುವರು; ಅಲ್ಪತರ ಬುದ್ಧಿಸಾಮರ್ಥ್ಯವುಳ್ಳವರು ವಿಗ್ರಹಗಳನ್ನು ಪೂಜಿಸುವರು; ಯೋಗಿಗಳಿಗೆ ಈ ಯಾವ ಉಪಕರಣವೂ ಬೇಕಿಲ್ಲ; ಅವರು ತಮ್ಮ ಹೃದಯದಲ್ಲಿಯೇ ನಿರಾಕಾರವನ್ನು ಕಾಣುವರು." ಹೆಚ್ಚಿನ ಶಾಸ್ತ್ರಜ್ಞಾನವಿಲ್ಲದಂಥ ಕರ್ಮಠರ ದೇವರು ಅಗ್ನಿಯು; ಏಕೆಂದರೆ ನಮ್ಮ ಕಣ್ಣೆದುರಿಗೆ ಬಳಕೆಯಲ್ಲಿರುವ ವಸ್ತುಗಳಲ್ಲಿ ಅಗ್ನಿಗೆ ಹೆಚ್ಚುಗಾರಿಕೆ ಇದೆ. ಏಕೆಂದರೆ ಅದು ಬೆಳಕುಳ್ಳ ವಸ್ತುವಾಗಿರುವದೊಂದು ಮತ್ತು ಇತರವಸ್ತುಗಳನ್ನೆಲ್ಲಾ ಸುಟ್ಟುಹಾಕುವಂಥ ವಿಲಕ್ಷಣಸಾಮರ್ಥ್ಯವಿರುವದೊಂದು. ಬೆಳಕುಳ್ಳ ವಸ್ತುಗಳ ಮೇಲೆ ಯಾರಿಗಾದರೂ ಪ್ರೇಮವು ಹುಟ್ಟುವದು ಸಹಜವಾದದ್ದು. ಮಕ್ಕಳು ಕೂಡ ಬೆಳಕಿನ ಕಡೆಗೇ ನಿಟ್ಟಿಸುತ್ತ ಆನಂದಿಸುತ್ತವೆ. ಅಗ್ನಿಯಲ್ಲಿ ಈ ಲೋಕೋತ್ತರವಾದ ಗುಣವಿರುವದಲ್ಲದೆ ಸರ್ವಭಕ್ಷಕತ್ವವೆಂಬ ಅಸಾಧಾರಣಸಾಮರ್ಥ್ಯವೂ

ಇರುವದರಿಂದ ಅದರಲ್ಲಿ ದೇವತ್ವಬುದ್ಧಿಯುಂಟಾಗಿದೆ. ಪ್ರತಿಯೊಬ್ಬರ ಶರೀರದಲ್ಲಿಯೂ ದೇವರು ಜಠರಾಗ್ನಿಯ ರೂಪದಲ್ಲಿರುವನೆಂದು ಹಿಂದೆಯೇ ಹೇಳಿದೆ. ಹೊರಗಣ ಅಗ್ನಿಯಲ್ಲಿ ದೇವಬುದ್ಧಿಯನ್ನು ಮಾಡುವದೂ ಅದರ ಸಜಾತೀಯ ಕಲ್ಪನೆ. ಹೀಗಾಗಿ ಶಾಸ್ತ್ರಗಳು ಅಗ್ನಿಯನ್ನು ದೇವತೆಗಳ ಮುಖವೆಂದು ಹೇಳುತ್ತವೆ. ಆದ್ದರಿಂದ ದೇವತೆಗಳನ್ನು ಉದ್ದೇಶಿಸಿ ಮಾಡುವ ವೈದಿಕಕರ್ಮಗಳಲ್ಲಿ ಅಗ್ನಿಗೆ ಪ್ರಾಶಸ್ತ್ಯವು ಹೆಚ್ಚು.

ಪಂಡಿತರಾದವರು ಇನ್ನೂ ಮುಂದೆ ಹೋಗುತ್ತಾರೆ. ಏಕೆಂದರೆ ಅಗ್ನಿಯು ಒಂದು ಪರಿಮಿತಿಯ ಸ್ವರೂಪವುಳ್ಳದ್ದು ಮತ್ತು ಸಾಮಾನ್ಯ ದೃಷ್ಟಿಯಿಂದ ನೋಡಿದರೆ ನಮ್ಮಿಂದಲೇ ಉತ್ಪತ್ತಿಯಾಗುವಂಥದ್ದು. ಇದರ ಮೇಲೆ ಅದರ ಪ್ರಕಾಶವೆಲ್ಲಾ ರಾತ್ರಿಯೇ ಬಹಳ. ಆ ಪ್ರಕಾಶಾಧಿಕ್ಯವು ಸೂರ್ಯನಿಂದ ದತ್ತವಾದದ್ದೆಂದು ಹೇಳುತ್ತಾರೆ. ಮಹಾಕವಿ ಕಾಲಿದಾಸನು ದಿಲೀಪನಿಂದ ರಾಜ್ಯವನ್ನು ಪಡೆದ ರಘುಮಹಾರಾಜನನ್ನು ವರ್ಣಿಸುವಾಗ ಅವನು ಸಾಯಂಕಾಲದಲ್ಲಿ ಸೂರ್ಯನಿಂದ ತೇಜಸ್ಸನ್ನು ಪಡೆದ ಅಗ್ನಿಯಂತೆ ಹೆಚ್ಚು ಪ್ರಕಾಶಮಾನನಾಗಿದ್ದನೆಂದು

"ಸ ರಾಜ್ಯಂ ಗುರುಣಾ ದತ್ತಂ ಪ್ರತಿಪದ್ಯಾಧಿಕಂ ಬಭೌ।
ದಿನಾಂತೇ ನಿಹಿತಂ ತೇಜಃ ಸವಿತ್ರೇವ ಹುತಾಶನಃ ॥"

ಎಂಬ ಶ್ಲೋಕದಿಂದ ರಘುವಂಶದಲ್ಲಿ ಹೇಳಿದ್ದಾನೆ. ಇದರಿಂದ ಸೂರ್ಯನು ಅಗ್ನಿಗಿಂತ ಮೇಲೆಂದಾಯಿತು. ಇದಲ್ಲದೆ ಸೂರ್ಯನಿಂದಲೇ ಮಳೆಬೆಳೆಗಳಾಗುವದೂ ಸೂರ್ಯನಿಂದಲೇ ಆಯುರಾರೋಗ್ಯಗಳಿರುವದೂ ಎಲ್ಲರಿಗೂ ಪ್ರತ್ಯಕ್ಷವಾಗಿ ತೋರುತ್ತಿದೆ. ಆದ್ದರಿಂದ ಸೂರ್ಯನಲ್ಲಿ ದೇವತಾಬುದ್ಧಿಯನ್ನು ಮಾಡಬೇಕೆಂದು ಪಂಡಿತರ ಅಭಿಪ್ರಾಯ. ಸೂರ್ಯವ್ಯಾಪ್ತಿಯ ಅಪರಿಮಿತತ್ವವೂ ಈ ಕಲ್ಪನೆಗೆ ಸಹಾಯವಾಗುವದು.

ಇಷ್ಟೆಲ್ಲಾ ಕಲ್ಪನೆಯನ್ನು ಮಾಡಿಕೊಳ್ಳಲಾರದವರಿಗಾಗಿ ಬೇರೆ ಬೇರೆ ವಿಗ್ರಹಗಳ ಆರಾಧನೆಯ ಕ್ರಮವು ಹುಟ್ಟಿರುವದು. ಹೀಗೆಂದು ಇದೊಂದು ಕೀಳೆಂದು ತಿಳಿಯಬಾರದು. ಪ್ರತ್ಯಕ್ಷವಾದ ಅಗ್ನಿಯಾಗಲಿ ಸೂರ್ಯಬಿಂಬವಾಗಲಿ ದೇವರಾಗಿರದೆ ಅವುಗಳ ಅಂತರ್ಯಾಮಿಯೇ ಹೇಗೆ ದೇವರೋ ಹಾಗೆ ಈ ವಿಗ್ರಹಗಳೇ ದೇವರಾಗಿರದೆ ವಿಗ್ರಹಗಳ ಅಂತರ್ಯಾ

ಮಿಯೇ ದೇವರು. ಇದರಲ್ಲಿ ಮೇಲುಕೀಳುಗಳ ವಿಚಾರವೆಲ್ಲಿದೆ? ಅಗ್ನಿಯೂ ವಿಗ್ರಹವೇ; ಸೂರ್ಯನೂ ವಿಗ್ರಹವೇ. ಆದರಂತೆ ನಾವು ಮಾಡಿದ ದೇವರ ಆಕೃತಿಗಳೂ ವಿಗ್ರಹಗಳೆ. ಈ ವಿಗ್ರಹಗಳ ಸ್ವರೂಪದಲ್ಲಿ ಮೇಲುಕೀಳುಗಳಿರಬಹುದು; ಅವುಗಳಿಂದ ನೆನಪಾಗುವ ಅಂತರ್ಯಾಮಿಯು ಸ್ವರೂಪದಲ್ಲಿ ಮೇಲುಕೀಳುಗಳೇನೂ ಇಲ್ಲ. ಯೋಗಿಗಳು ಇಂಥ ಬಾಹ್ಯ ವಿಗ್ರಹಗಳನ್ನು ಬಯಸದೆ ತಮ್ಮ ಹೃದಯದಲ್ಲಿ ತಾವು ಪರಮಾತ್ಮನನ್ನು ಕಾಣುವರು. ಹೀಗೆ ವಿಗ್ರಹಗಳ ಸ್ವರೂಪವು ಸೌಕರ್ಯಕ್ಕಾಗಿ ಕಲ್ಪನೆ ಮಾಡಿಕೊಂಡದ್ದು. ಒಬ್ಬ ರಾಜನ ನೆನಪಿಗಾಗಿ ಒಂದು ಕಡೆ ಅವನದೊಂದು ವಿಗ್ರಹವನ್ನಿಟ್ಟಿರುವಾಗ ಒಬ್ಬ ಅವಿವೇಕಿಯು ಅದನ್ನು ವಿರೂಪಗೊಳಿಸಿದರೆ ಆ ಅವಮಾನವು ಕಲ್ಲಿಗಾಯಿತೆಂದು ವಿವೇಕಿಗಳು ತಿಳಿಯುವರೇನು? ರಾಜನ ಅವಮಾನವಾಯಿತೆಂದು ರಾಜಕೀಯಾಧಿಕಾರಿಗಳು ಆ ಅಪರಾಧಿಯನ್ನು ದಂಡಿಸುವರು. ಅದು ಯೋಗ್ಯವೇ ಸರಿ. ಏಕೆಂದರೆ ಆವಿಗ್ರಹವು ರಾಜನ ನೆನಪುಗೊಡುವಂಥದ್ದು. ಈ ತತ್ತ್ವವನ್ನು ಮನಸ್ಸಿಗೆ ತಂದುಕೊಳ್ಳದೆ ಆರ್ಯಮತದವರೆಲ್ಲ ಮೂರ್ತಿಪೂಜಕರೆಂದು ಬಾಯಿ ತೀಟೆಯನ್ನು ಕಳೆದುಕೊಳ್ಳುವದು ಅವಿವೇಕದ ಮಾತೇ ಸರಿ.

ಮೂರ್ತಿಪೂಜೆಯೆಂದರೇನು? ಒಂದಾಕಾರವು ಅಂದವಾಗಿ ಕಾಣುವಂತೆ ತಕ್ಕ ಉಪಚಾರಗಳನ್ನು ಮಾಡುವದು. ಆರ್ಯಧರ್ಮದವರು ವಿಗ್ರಹಗಳನ್ನು ಪೂಜೆಮಾಡುವಾಗ ಈ ಮಣ್ಣು ಮೈ ತೊಳೆದುಕೊಳ್ಳಲಿ; ಈ ಕಲ್ಲು ಉಣ್ಣಲಿ, ಈ ಕಟ್ಟಿಗೆಯು ಉಡಲಿ; ಈ ಮಣ್ಣು, ಕಲ್ಲೂ, ಕಟ್ಟಿಗೆಯೂ ನಮಗೆ ಶ್ರೇಯಸ್ಸನ್ನುಂಟುಮಾಡಲಿ ಎಂದಿಚ್ಛಿಸುವರೇನು? ಮಣ್ಣು ಮೊದಲಾದವುಗಳು ಜಡವಾದವುಗಳೆಂಬ ಸ್ಫೂರ್ತಿ ಅವರಿಗಿಲ್ಲವೇನು? ಲೋಕದಲ್ಲಿ ಎಲ್ಲಾ ಜಡಪದಾರ್ಥಗಳಿಗೂ ಆಧಾರವಾದ ಚೈತನ್ಯವನ್ನು ಕಂಡುಹಿಡಿಯುವಿಕೆಗೆಂದು ಅಸ್ತ್ರತಾಂಬೂಲವಿದ್ದರೆ ಅದಕ್ಕೆ ಆರ್ಯಧರ್ಮವು ಅಧಿಕಾರಿಯು. ಹೀಗಿರುವಾಗ ಆರ್ಯಧರ್ಮದವರು ಜಡವಸ್ತುಗಳ ಪೂಜಕರೆಂದರೆ ಹೊಟ್ಟೆ ಹುಣ್ಣಾಗುವಷ್ಟು ನಗೆ ಬರುವದು. ಇಷ್ಟೆ. ಆರ್ಯಧರ್ಮದವರು ಮಾಡುವ ಮೂರ್ತಿಪೂಜೆಯು

ಮೂರ್ತಿಪೂಜೆಯಲ್ಲ; ದೇವರ ಪೂಜೆ ಅವರು ಮೂರ್ತಿಪೂಜಕರಾದರೆ ಪೂಜೆಯಾದ ಮೇಲೆ ಗಣಪತಿ, ಕೋಟಿಲಿಂಗ- ಮೊದಲಾದ ಮೂರ್ತಿಗಳನ್ನು ನೀರಿಗೇಕೆ ಒಗೆಯುತ್ತಾರೆ? ಮತ್ತು ಪ್ರಾಣಪ್ರತಿಷ್ಠೆಯನ್ನು ಮಾಡುವದಕ್ಕೆ ಮುಂಚೆ ಅವುಗಳನ್ನೇಕೆ ಪೂಜಿಸುವದಿಲ್ಲ? ಇದರ ವಿಚಾರವನ್ನು ಮಾಡಿದರೆ ಮೂರ್ತಿಯ ಪೂಜೆಯ ಗಂಧವೇ ಅವರಲ್ಲಿಲ್ಲ. ಮೂರ್ತಿಪೂಜೆಯ ಮಾತೃಭೂಮಿಯು ಪರದೇಶ. ಪರದೇಶದ ಸಂಸ್ಕೃತಿಯು ನಮ್ಮ ದೇಶಕ್ಕೆ ಕಾಲುಹಾಕಿದಾಗಿನಿಂದ ನಮ್ಮ ದೇಶದಲ್ಲಿ ಮೂರ್ತಿಪೂಜೆ ಈಗಿನ ತರೇ ಹತ್ತುತ್ತಿದೆ. ಈಗ ಬಂದಿರುವ ಮೂರ್ತಿಪೂಜೆಯು ಸ್ವರೂಪವೇನೆಂದರೆ ಶಾಸ್ತ್ರದ ನಿಯಮವನ್ನು ಅಥವಾ ಸಮಾಜದ ಪದ್ಧತಿಯನ್ನು ಮನಸ್ಸಿಗೆ ತಂದುಕೊಳ್ಳದೆ ಮನಬಂದಂತೆ ಹೊಸಬಗೆಯ ಅಂದವನ್ನು ಮಾಡಿಕೊಳ್ಳಬೇಕೆಂದು ಪಾಶ್ಚಾತ್ಯರನ್ನು ಅನುಕರಣ ಮಾಡಿ ಕ್ರಾಪು ಬಿಡುವದು, ಮುಖಕ್ಷೌರವನ್ನು ಮಾಡಿಸುವದು, ಮೀಸೆಗೆ ರೂಪಾಂತರಗಳನ್ನು ಕಲ್ಪಿಸುವದು. ಹಣೆಯಲ್ಲಿ ಜಾತಿಚಿಹ್ನವನ್ನು ಧರಿಸದಿರುವದು, ಅಗತ್ಯವಿಲ್ಲದಿದ್ದರೂ ಸುಗಂಧತೈಲವನ್ನು ಹಾಕುವದು, ಶರೀರ ರಕ್ಷಣಾರ್ಥವಾಗಿ ದೇಶಕಾಲಗಳಿಗೆ ತಕ್ಕಂತೆ ಅವಶ್ಯಕವೂ ಅನುರೂಪವೂ ಆದವುಗಳಿಗಿಂತ ಹೆಚ್ಚಾಗಿ ಆಡಂಬರದ ವಸ್ತ್ರಗಳನ್ನು ಧರಿಸುವದು. ಕಣ್ಣು ಬಯಸಿತೆಂದು ನಾಟಕ ಮೊದಲಾದವುಗಳನ್ನು ನೋಡುವದು, ಕಿವಿಯು ಪೇಕ್ಷಿಸಿತೆಂದು ಗಾನವನ್ನು ಹುಡುಕಿಕೊಂಡು ಹೋಗುವದು, ಮೂಗನ್ನು ತೃಪ್ತಿಗೊಳಿಸಬೇಕೆಂದು ಸುವಾಸನೆಯ ದ್ರವ್ಯಗಳನ್ನು ಹಚ್ಚಿಕೊಳ್ಳುವದು, ಚರ್ಮದ ಆಸೆಯನ್ನು ತೀರಿಸಬೇಕೆಂಬ ಸ್ತ್ರೀಪುರುಷರ ಆಲಿಂಗನ. ನಾಲಿಗೆಯ ತೀಟೆಯನ್ನು ತಡೆಯಲಾರದೆ ಕಂಡಕಂಡದ್ದನ್ನೆಲ್ಲ ತಿನ್ನುವದು, ಕುಡಿಯುವದು.- ಇವೆಲ್ಲಾ ಮೂರ್ತಿಪೂಜೆ. ಇವುಗಳಲ್ಲಿ ಮೂರ್ತಿಪೂಜೆಯು ಹೊರತು ಎರಡನೆಯ ಅರ್ಥವೇ ಇಲ್ಲ. ಅಗ್ನಿ, ಸೂರ್ಯ ಮತ್ತು ವಿಗ್ರಹಗಳು ಇವುಗಳೆಲ್ಲ ಪರಮಾತ್ಮನ ನೆನಪುಗೊಡತಕ್ಕವುಗಳಾದ್ದರಿಂದ ಅವುಗಳ ಪೂಜೆಯು ವಿಗ್ರಹಪೂಜೆಯಲ್ಲ. ಆ ಪೂಜೆಯು ದೇವರಿಗೆ ಸಂಬಂಧಿಸಿದ್ದು. ಕಾಮಿನೀಕಾಂಚನಗಳ ಉಪಾಸಕರಿಗೆ ನಮ್ಮ ವಿಗ್ರಹಗಳಲ್ಲಿ ಪರಮಾತ್ಮ ದೃಷ್ಟಿಯುಂಟಾಗುವದು ಕಠಿನವೆನಿಸಬಹುದು. ಪರದೇಶೀಯರಿಗೆ ಅದು

ಒಗ್ಗುವದಿಲ್ಲವೆಂದು ನಾವು ನಮ್ಮ ದೇವತೆಗಳನ್ನು ಬಿಟ್ಟು ಅವರ ದೇವತೆಗಳ ಮುಂದೆ ಬಾಗಿ ನೀರು ಸುರಿಸುವದು ನಮಗೆ ಯೋಗ್ಯವಲ್ಲ. ಅವರ ದೇವತೆಗಳು ಅವರಿಗೆ; ನಮ್ಮ ದೇವತೆಗಳು ನಮಗೆ. ಆದ್ದರಿಂದ ಪರದೇಶದಿಂದ ಬಂದು ನಮ್ಮ ದೇಶದಲ್ಲಿ ಹಬ್ಬುತ್ತಿರುವ ಪರಸಂಸ್ಕೃತಿಯೆಂಬ ವಿಷಲತೆಯನ್ನು ವಿವೇಕಿಗಳು ಬೇರು ಸಹಿತ ಕಿತ್ತು ಸಮುದ್ರದಾಚೆಗೇ ಒಗೆಯಬೇಕು. ಇದರ ನೆಲೆಯನ್ನು ನೀಯಬೇಕು. ಇದನ್ನು ಹೀಗೆಯೇ ಬೆಳೆಯಬಿಟ್ಟರೆ ನಮ್ಮ ದೇಶದ ಮಣ್ಣೆಲ್ಲ ವಿಷಮಯವಾಗುವ ಸಂಭವವುಂಟು.

ವಿಗ್ರಹಪೂಜೆಯ ವಿಷಯದಲ್ಲಿ ಶ್ರೀರಾಮಕೃಷ್ಣಪರಮಹಂಸರು ಹೇಳಿರುವದೇನೆಂದರೆ—

(೧) ಬಣ್ಣದ ಹಣ್ಣು ಅಥವಾ ಬಣ್ಣದ ಆನೆಯು ನಿಜವಾದ ಹಣ್ಣಿನ ಅಥವಾ ಸಚೇತನವಾದ ಪ್ರಾಣಿಯ ನೆನಪುಗೊಡುವಂತೆ ಪೂಜಿಸಲ್ಪಟ್ಟ ವಿಗ್ರಹಗಳು ನಿರಾಕಾರನಾದ ಪರಮಾತ್ಮನ ನೆನಪು ಕೊಡುವವು.

(೨) ಭಗವಾನ್ ಶ್ರೀರಾಮಕೃಷ್ಣಪರಮಹಂಸರು ಅವರ ಕಾಲದಲ್ಲಿ ಪ್ರಸಿದ್ಧನಾಗಿದ್ದ ಕೇಶುಬಚಂದ್ರಸೇನನನ್ನು ಕುರಿತು "ಈ ವಿಗ್ರಹಗಳನ್ನು ನೋಡಿದಾಗ ನಿನ್ನ ಮನಸ್ಸಿನಲ್ಲಿ ಕಲ್ಲು, ಮಣ್ಣು, ಮತ್ತು ಕಟ್ಟಿಗೆಗಳ ಭಾವನೆ ಏಕೆ ಹುಟ್ಟುತ್ತದೆ? ಈ ಆಕೃತಿಗಳಲ್ಲಿ ನಿತ್ಯನಾದ, ಪರಮಾನಂದ ಸ್ವರೂಪನಾದ ಲೋಕಮಾತೆ ಏಕೆ ಕಾಣುವದಿಲ್ಲ? ಈ ವಿಗ್ರಹಗಳು ನಿತ್ಯನಾದ ನಿರಾಕಾರವಸ್ತುವಿನ ಸಾಕಾರಸಂಗ್ರಹಭೂತವಾದುವೆಂದು ತಿಳಿ" ಎಂದು ಹೇಳಿದರು.

(೩) ದೇವರ ಮತ್ತು ದೇವಿಯರ ವಿಗ್ರಹಗಳನ್ನು ನೋಡಿದಾಗ ಅದರಲ್ಲಿ ದೇವತ್ವಬುದ್ಧಿ ಹುಟ್ಟಿದರೆ ಉಪಾಸಿಗೆ ದೇವತ್ವವೇ ಸಿದ್ಧಿಸುತ್ತದೆ. ಆದರೆ ಆ ವಿಗ್ರಹಗಳು ಕಲ್ಲಿನಿಂದಲೋ ಮಣ್ಣಿನಿಂದಲೋ ಅಥವಾ ಕಟ್ಟಿಗೆಯಿಂದಲೋ ಮಾಡಿದ ಬೊಂಬೆಗಳೆಂದು ತಿಳಿದರೆ ಮಾತ್ರ ವಿಗ್ರಹಪೂಜೆಯಿಂದ ಏನೂ ಫಲವಿಲ್ಲ.

## ಗೋಪೂಜೆ.

ಮೇಲೆ ಹೇಳಿದಂತೆ ಮನುಷ್ಯಕಲ್ಪಿತವಾದ ಯಾವದಾದರೊಂದು ವಿಗ್ರಹದಲ್ಲಿ ಸಮಸ್ತಕಲ್ಯಾಣಗುಣಪರಿಪೂರ್ಣನಾದ ಪರಮಾತ್ಮನ ಸ್ವರೂ

ಪವನ್ನು ಭಾವನೆ ಮಾಡುವದೊಂದು ಬಗೆಯ ವಿಗ್ರಹಪೂಜೆಯಾಯಿತಷ್ಟೆ. ಸೃಷ್ಟಿಯಲ್ಲಿ ಸ್ವಭಾವವಾಗಿರುವ ವಸ್ತುಗಳಲ್ಲಿಯೇ ಅವುಗಳಲ್ಲಿರುವ ಹೆಚ್ಚುಗಾರಿಕೆಯನ್ನು ಪರಮಾತ್ಮನ ವಿಭೂತಿಯೆಂದು ಭಾವಿಸಿ ಅವುಗಳನ್ನೇ ಉಪಾಸನೆ ಮಾಡುವದೊಂದು ಪದ್ಧತಿಯೂ ಇದೆ. ಇದೂ ಒಂದು ಬಗೆಯ ವಿಗ್ರಹಪೂಜೆಯು. ಈ ಪೂಜೆಯಾದರೂ ಆ ವಸ್ತುಗಳ ಸ್ಥೂಲರೂಪಕ್ಕಾಗಿ ಅಲ್ಲ; ಅವುಗಳಲ್ಲಿರುವ ಹೆಚ್ಚುಗಾರಿಕೆಗಾಗಿ. ನಮಗೆ ಈ ಬಗೆಯ ಅಂತರ್ದೃಷ್ಟಿ ಇರುವದರಿಂದ ಪರದೇಶೀಯರು ವಿಗ್ರಹಪೂಜೆಯ ಮೇಲೆ ಹೊರಿಸುವ ಯಾವ ದೋಷಕ್ಕೂ ನಮ್ಮಲ್ಲಿ ಅವಕಾಶವಿಲ್ಲ. ಉದಾಹರಣೆಗೆ ನೋಡಿರಿ. ತನ್ನ ವಿಭೂತಿವಿಶೇಷಗಳ ವಿಚಾರವಾಗಿ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ವಿಭೂತಿಯೋಗವೆಂಬ ಹೆಸರಿನಿಂದ ಒಂದು ಅಧ್ಯಾಯವನ್ನೇ ಹೇಳಿದ್ದಾನೆ. ಅವುಗಳಲ್ಲಿ "ಜ್ಯೋತಿಷಾಂ ರವಿರಂಶುಮಾನ್" ಎಂಬದೊಂದನ್ನು ತೆಗೆದುಕೊಂಡರೆ ಪ್ರಕಾಶಕರವಾದ ವಸ್ತುಗಳಲ್ಲಿ ಉತ್ತಮೋತ್ಕರಣಗಳಲ್ಲ ಸೂರ್ಯನಲ್ಲಿ ಭಗವದ್ವಿಭೂತಿವಿಶೇಷವಿರುವದೆಂದರ್ಥವಾಗುತ್ತದೆ. ಅದರಂತೆ ನಾವು ನಮಸ್ಕಾರ ಮೊದಲಾದವುಗಳಿಂದ ಸೂರ್ಯನನ್ನು ಉಪಾಸನೆ ಮಾಡುತ್ತೇವೆ. ಭೌತಿಕಶಾಸ್ತ್ರಜ್ಞರ ದೃಷ್ಟಿಯಿಂದ ಸೂರ್ಯಗೋಲವು ಒಂದು ನಶ್ವರವಾದ ಪದಾರ್ಥವಾಗಿರಬಹುದು. ನಾವು ಉಪಾಸನೆ ಮಾಡುವದು ಆ ಹೊರಗಣ ರೂಪವನ್ನಲ್ಲ. ಆ ಸೂರ್ಯಬಿಂಬದಲ್ಲಿರುವ ತೇಜೋವಿಶೇಷದ ಹೆಚ್ಚಿನ ಶಕ್ತಿಯೇ ನಮ್ಮ ಭಾವನೆಗೆ ವಿಷಯವು. ಹೀಗೆ ನಾವು ಯಾವ ಯಾವ ವಸ್ತುವಿಶೇಷಗಳನ್ನು ಪೂಜಿಸಿದರೂ ನಮ್ಮ ಲಕ್ಷ್ಯವು ಆ ವಸ್ತುಗಳೊಳಗಿರುವ ಹೆಚ್ಚುಗಾರಿಕೆಗಾಗಿ ಇರುವದು. ಈ ದೃಷ್ಟಿಯಿಂದ ಮಾಡುವ ಪೂಜೆಗಳಲ್ಲಿ ನಮ್ಮಲ್ಲಿ ಗೋಪೂಜೆಯು ಬಹುಪ್ರಧಾನವಾಗಿ ಬಹುಕಾಲದಿಂದ ನಡೆದುಕೊಂಡು ಬರುತ್ತಿರುವದು. ವಿಗ್ರಹಪೂಜೆಗಳಲ್ಲಿ ಶಿವ, ವಿಷ್ಣು ಮೊದಲಾದ ಆಕಾರವಿಶೇಷಗಳು ಎಲ್ಲವೂ ಎಲ್ಲರಿಗೂ ಆದರಣೀಯಗಳಾಗದೆ ಇರಬಹುದು. ಸ್ವವರ್ಗದಲ್ಲಿಯೂ ವೈಷ್ಣವರು ತುಲಸಿಯನ್ನು ಬಹುಮಾನಿಸಿದರೆ ಶೈವರು ಬಿಲ್ವಪತ್ರೆಯನ್ನು ಗೌರವಿಸಬಹುದು. ಅದರಂತೆ ವೈಷ್ಣವರು ವಿಷ್ಣುಪುರಾಣವನ್ನು ಪ್ರೀತಿಸಿದರೆ ಶೈವರು ಶೈವಪುರಾಣದ ಮೇಲೆ ಮೆಚ್ಚುಗೆಯನ್ನು

ತೋರಿಸಬಹುದು: ಗೋಪೂಜೆಯ ವಿಷಯದಲ್ಲಿ ಮಾತ್ರ ಭರತಖಂಡದಲ್ಲಿ ಹುಟ್ಟಿದ ಧರ್ಮವನ್ನು ಅವಲಂಬಿಸಿರುವವರಲ್ಲಿ ಯಾವ ಒಳಭೇದದವರಿಗೂ ಎಳ್ಳಷ್ಟೂ ಭಿನ್ನಾಭಿಪ್ರಾಯವಿಲ್ಲ. ಆದ್ದರಿಂದ ಇಷ್ಟುಮಟ್ಟಿಗೆ ಸರ್ವಸಮ್ಮತವಾಗಿರುವ ಗೋಪೂಜೆಯ ವಿಚಾರದಲ್ಲಿ ಇಲ್ಲಿ ಕೆಲವು ವಿಷಯಗಳನ್ನು ಉಲ್ಲೇಖಿಸುವದು ಅಗತ್ಯವಾಗಿರುವದು.

ಗೋಪೂಜೆಯು ನಮ್ಮ ದೇಶಕ್ಕೆ ಅನಾದಿಕಾಲದಿಂದ ಬಂದಿರುವ ಶ್ರೇಯಸ್ಸಾಧನವು. ಗೋವಿನ ಮಹತ್ತ್ವದ ವಿಚಾರವು ಋಗ್ವೇದದಲ್ಲಿ ಸೂರೆಯಾಗಿರುವದು. ವೇದವು ಉತ್ಪತ್ತಿನಾಶಗಳಿಲ್ಲದೆ ಯಾವಾಗಲೂ ಇರತಕ್ಕದ್ದೆಂದೂ ಅದು ಈಶ್ವರನ ಆಜ್ಞೆಯೆಂದೂ ನಮ್ಮ ಭಾವನೆ ಇರುವದರಿಂದ ಗೋವಿನ ಮೇಲಿನ ಪೂಜ್ಯಬುದ್ಧಿಯು ಹಾಗೆಯೇ ತ್ರಿಕಾಲಗಳಲ್ಲಿಯೂ ಇರತಕ್ಕದ್ದೆಂದೂ ಪರಮೇಶ್ವರನಿಂದ ಉಪದಿಷ್ಟವಾದದ್ದೆಂದೂ ಸ್ಪಷ್ಟವಾಯಿತು. ಆದರೆ ಕಾರ್ಯಕಾರಣಭಾವವನ್ನು ಹುಡುಕುವ ಸ್ವಭಾವದವರಾದ ಈಗಿನವರ ಮನಸ್ಸಿನಲ್ಲಿ ಪಶುವಿಗೇಕಿಷ್ಟು ಪೂಜ್ಯತೆಯೆಂಬ ಕಲ್ಪನೆಯು ತಲೆದೋರಬಹುದು. ಏಕೆಂದರೆ ಸಾಮಾನ್ಯವಾಗಿ ಪಶುಜನ್ಮವು ಪಾಪದ ಫಲವಾದದ್ದು; ಮನುಷ್ಯನು ಪಾಪಪುಣ್ಯಗಳ ಮಿಶ್ರಣದಿಂದ ಹುಟ್ಟಿದವನು; ಹೀಗಿರುವಾಗ ಉತ್ತಮಜನ್ಮದಲ್ಲಿರುವ ಮನುಷ್ಯನು ಹೀನಜನ್ಮದಲ್ಲಿರುವ ಪಶುವನ್ನು ಪೂಜಿಸುವದು ಅಯೋಗ್ಯವೆನಿಸುವದು ಸ್ವಭಾವವಾಗಿದೆ. ಆದರೆ ಜನ್ಮದ ವಿಚಾರವನ್ನು ಬಿಟ್ಟು ಗುಣದ ದೃಷ್ಟಿಯಿಂದ ನೋಡಿದರೆ ಪಶುವಿನ ಯೋಗ್ಯತೆಯು ಪೂಜ್ಯತೆಯು ಹೊರಪಡುವದು. ಜನ್ಮದ ಸ್ಥಿತಿಯು ಬರೀ ವ್ಯವಹಾರಕ್ಕೆ ಮಾತ್ರ. ಗುಣದ ಸ್ಥಿತಿಯು ವಿಶೇಷವಾಗಿ ಪರಮಾರ್ಥಕ್ಕೆ ಸಾಧನವಾಗಿದ್ದು ಒಮ್ಮೊಮ್ಮೆ ವ್ಯವಹಾರದ ಮೇಲೆ ಕೂಡ ತನ್ನ ಅಧಿಕಾರವನ್ನು ನಡೆಸುವದು. ಮನುಷ್ಯರಲ್ಲಿಯೇ ಕೀಳುಜಾತಿಯಲ್ಲಿ ಹುಟ್ಟಿದವರಾದರೂ ಗುಣದಿಂದ ಮೇಲಾದರೆ ಅವರು ಮೇಲುಜಾತಿಯವರಿಗೂ ಮಾನ್ಯರಾಗುವದನ್ನು ನಾವು ನೋಡುತ್ತೇವೆ. ಅವರು ತಮ್ಮ ಆಹಾರ, ವಿಹಾರ– ಮೊದಲಾದ ವ್ಯವಹಾರದಲ್ಲಿ ತಮ್ಮ ಜನ್ಮದ ಜಾತಿಯ ನಿಯಮದಲ್ಲಿಯೇ ಕೆಳಗಿನವರೆನಿಸಿಕೊಂಡಿದ್ದರೂ ತಮ್ಮ ಗುಣದ ಪ್ರಭಾವದಿಂದ ಅವರು ಮೇಲಕ್ಕೆ ಬಂದೇ ಇರುತ್ತಾರೆ. ಇದರಂತೆ

ಆಕಳು, ಪಶುಜನ್ಮದಲ್ಲಿರುವದರಿಂದ ಆಹಾರವಿಹಾರಗಳಲ್ಲಿ ಕೀಳಾಗಿದ್ದರೂ ತನ್ನಲ್ಲಿರುವ ಸತ್ತ್ವಗುಣದಿಂದ ಅದು ಮನುಷ್ಯನಿಗೆ ಪೂಜ್ಯವೇ ಆಗಿರುವದು. ಆಕಳು ಸಾತ್ತ್ವಿಕಪ್ರಾಣಿಯೆಂದು ಎಲ್ಲರ ಅನುಭವದಲ್ಲಿಯೂ ಇದೆ. ಯಾವನಾದರೊಬ್ಬ ಮನುಷ್ಯನನ್ನು ಸಾತ್ತ್ವಿಕನೆನ್ನಬೇಕಾದರೆ ಅವನು ಆಕಳಂಥ ಮನುಷ್ಯನೆನ್ನುವ ರೂಢಿಯಿದೆ. ಹಿಂದೆ ದುಶ್ಶಾಸನನು ದ್ರೌಪದಿಯ ಸೀರೆಯನ್ನು ಸೆಳೆದಾಗ ನೆರೆದ ಜನರೆಲ್ಲರೂ "ಅಯ್ಯೋ! ಆಕಳ ಹಾನಿಯಾಗುವದಲ್ಲ!!" ಎಂದು ಗೋಳಿಟ್ಟರಂತೆ. ಹುಲಿಯು ಅತ್ಯಂತ ಕ್ರೂರಸ್ವಭಾವದ ಪ್ರಾಣಿಯಷ್ಟೇ. ಅದಕ್ಕೆ ವಿರುದ್ಧವಾಗಿ ಆಕಳು ಅಷ್ಟೇ ಅತ್ಯಂತ ಸತ್ತ್ವಗುಣದ ಪ್ರಾಣಿಯೆಂಬುದನ್ನು 'ಗೋಮುಖವ್ಯಾಘ್ರ' ಎಂಬ ಪದಯೋಗವು ನೆನಪುಗೊಡುತ್ತದೆ. ಆಕಳ ಈ ಸ್ವಭಾವದ ಮಾತೂ ಇರಲಿ. ಆಕಳ ಹಾಲಿನಂಥ ಸಾತ್ತ್ವಿಕವಾದ ಆಹಾರವು ಈ ಜಗತ್ತಿನಲ್ಲಿನ್ನೊಂದಿಲ್ಲವೇ ಇಲ್ಲ. ಸಾತ್ತ್ವಿಕಾಹಾರವನ್ನು ಹೇಳುವಾಗ ಭಗವದ್ಗೀತೆಯು

"ಆಯುಃಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।
ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ॥"

ಎಂದು ಹೇಳಿದೆ. ಆಯುಷ್ಯ, ಸಾತ್ತ್ವಿಕಗುಣ, ಶಕ್ತಿ, ಆರೋಗ್ಯ, ಸುಖ, ಪ್ರೀತಿ—ಇವುಗಳನ್ನು ಹೆಚ್ಚಿಸುವದಾಗಿಯೂ ರಸಯುಕ್ತವಾಗಿಯೂ ಜಿಡ್ಡಿನಿಂದ ಕೂಡಿದ್ದಾಗಿಯೂ ಸ್ಥಿರಸ್ವಭಾವದ್ದಾಗಿಯೂ ಮನೋಹರವಾಗಿಯೂ ಇರುವದೇ ಸಾತ್ತ್ವಿಕಾಹಾರವೆಂದು ಅದರ ತಾತ್ಪರ್ಯ. ಆಕಳ ಹಾಲು ಈ ಎಲ್ಲ ಗುಣಗಳ ಮೂರ್ತಸ್ವರೂಪವೆಂಬಂತೆ ಇದೆ. ಆಕಳ ತುಪ್ಪವು ಆಯುಸ್ಸನ್ನು ಹೆಚ್ಚಿಸುವದೆಂದು "ಆಯುರ್ವೈ ಘೃತಂ" ಎಂಬ ಶ್ರುತಿಯೇ ಹೇಳುತ್ತದೆ. ಶ್ರುತಿಯಲ್ಲಿ ಗೋವಿನ ವಿಚಾರವು ಮಾತ್ರ ಬಂದಿರುವದರಿಂದ ಇಲ್ಲಿ ಬೇರೆ ಪ್ರಾಣಿಯ ತುಪ್ಪವನ್ನು ತೆಗೆದುಕೊಳ್ಳಬಾರದು. ಹಾಲಿನಿಂದ ಸಾತ್ತ್ವಿಕಗುಣವುಂಟಾಗುವದೆಂಬದಕ್ಕೂ ಶ್ರುತಿಯನ್ನುದಾಹರಿಸಬಹುದು. "ಗೋಭಿಷ್ಟರೇಮಾಮತಿಂ ದುರೇವಾಂ" ಎಂಬ ಶ್ರುತಿ ಇದೆ. "ದಾರಿದ್ರ್ಯದಿಂದ ಬಂದ ದುಷ್ಟವಾದ ಬುದ್ಧಿಯನ್ನು ಗೋಗಳಿಂದ ಕಳೆದುಕೊಳ್ಳೋಣ" ಎಂದರ್ಥ. ಇದರಿಂದ ಆಕಳ ಹಾಲು ದುಷ್ಟ

ಬುದ್ಧಿಯನ್ನು ಕಳೆದು ಸಾತ್ತ್ವಿಕಗುಣವನ್ನುಂಟು ಮಾಡುವದೆಂದು ವ್ಯಕ್ತವಾಗುತ್ತದೆ. ಇದರಂತೆಯೇ ಆಕಳ ಹಾಲಿನಿಂದ ಶಕ್ತಿಯುಂಟಾಗುವದೆಂಬದಕ್ಕೂ ಶ್ರುತಿಯ ಆಧಾರವಿದೆ. ಮೇಲೆ ಹೇಳಿದ ಮಂತ್ರದ ಮುಂದೆಯೇ “ಅಸ್ಮಾಕೇನ ವೃಜನೇನಾಜಯೇಮ” ಎಂದಿದೆ. ‘ನಮ್ಮ ಸಾಮರ್ಥ್ಯದಿಂದ ಶತ್ರುಗಳನ್ನು ಜಯಿಸುವಂತಾಗಲಿ” ಎಂದು ಅದರ ತಾತ್ಪರ್ಯ. ಇದರಿಂದ ಆಕಳ ಹಾಲಿನಲ್ಲಿ ಆ ಸಾಮರ್ಥ್ಯವಿರುವದೆಂದು ಸಿದ್ಧವಾಯಿತು. ಈ ಅಭಿಪ್ರಾಯವನ್ನು ಶ್ರೀಶುಕಾಚಾರ್ಯರು ತಮ್ಮ ಭಾಗವತದಲ್ಲಿ ಶ್ರೀಕೃಷ್ಣನ ಬಾಯಿಂದಲೂ ಆಡಿಸಿದ್ದಾರೆ.

“ಗಾಯಾಚೆ ಸೇವ ದುಗ್ಧೇ ಪುಷ್ಟೀ |
ಬಾಳಪಣೀ ಮಾರಿಲೇ ಜಟೀ |
ಕಂಸಚಾಣೂರ ಮಾರಿಲೇ ಹಟೀ |
ಬೈಸವಿಲಾ ರಾಜ್ಯಪಟೀ ಉಗ್ರಸೇನ ||”

“ಆಕಳ ಸೇವೆಯಿಂದ ನನಗೆ ಪುಷ್ಟಿಯಾಯಿತು. ಅದರಿಂದ ನಾನು ಹುಡುಗತನದಲ್ಲಿಯೇ ಜಟ್ಟಿಗಳನ್ನು ಕೆಡಹಿದೆನು; ಹಟದಿಂದ ಕಂಸಚಾಣೂರರನ್ನು ನೆಲಕ್ಕೊರಗಿಸಿದೆನು. ಮತ್ತು ಉಗ್ರಸೇನನನ್ನು ಸಿಂಹಾಸನದ ಮೇಲೆ ಕೂಡಿಸಿದೆನು.” ಎಂದು ಅದರ ತಾತ್ಪರ್ಯ. ಇನ್ನು ಆಕಳ ಹಾಲಿನಿಂದ ಆರೋಗ್ಯವೆಂಬ ವಿಚಾರಕ್ಕೂ ಶ್ರುತಿಯು ಸಿಕ್ಕುತ್ತದೆ. ಆದರೆ ಕುಡುಗೋಲಿನಿಂದ ಆಗುವ ಕೆಲಸಕ್ಕೆ ಕೊಡಲಿ ಏಕೆ? ಭೌತಿಕಶಾಸ್ತ್ರಜ್ಞರಾದ ಪಾಶ್ಚಾತ್ಯರೂ ಪೌರ್ವಾತ್ಯರೂ ಕೂಡ ಆಕಳ ಹಾಲಿನಿಂದಾಗುವ ಆರೋಗ್ಯದ ವಿಚಾರದಲ್ಲಿ ಏಕಾಭಿಪ್ರಾಯವುಳ್ಳವರಾಗಿರುವದರಿಂದ ಅದಕ್ಕಾಗಿ ಶ್ರುತಿಯ ತನಕ ಹೋಗುವ ಕಾರಣವಿಲ್ಲ. ಉಳಿದ ಗುಣಗಳ ವಿಷಯಕ್ಕಂತು ಶ್ರುತಿಯ ಆಧಾರದ ಆವಶ್ಯಕತೆಯುಳ್ಳದೆಂಬುದಿಷ್ಟೇ ಅಲ್ಲ; ಭೌತಿಕಶಾಸ್ತ್ರಜ್ಞರ ಮಾತೂ ಬೇಕಾಗಿಲ್ಲ; ಏಕೆಂದರೆ ಆ ಗುಣಗಳೆಲ್ಲಾ ನಮ್ಮ ಅನುಭವಕ್ಕೇ ಈಗಲೇ ಗೋಚರವಾಗುತ್ತವೆ. ಇಷ್ಟೆಲ್ಲಾ ವಿಚಾರ ಮಾಡಿಯೋ ಏನೋ ಉದ್ಭಟನೆಂಬ ಮಹಾಕವಿಯು “ಕೋ ರಸೋ ಗೋರಸಂ ವಿನಾ” ಎಂದು ಹೇಳಿದ್ದಾನೆ. “ಆಕಳ ಹಾಲನ್ನು ಬಿಟ್ಟರೆ ರಸವೆಂದು ಹೇಳಿಸಿಕೊಳ್ಳುವದಕ್ಕೆ ಯೋಗ್ಯವಾದದ್ದು ಇನ್ನೊಂದಿಲ್ಲವೇ ಇಲ್ಲ”

ಎಂದು ಅವನ ತಾತ್ಪರ್ಯ. ಇಂಥ ಸಾತ್ತ್ವಿಕಾಹಾರಕ್ಕೆ ಆಧಾರಸ್ಥಾನವಾಗಿರುವದೊಂದು ಉತ್ಕೃಷ್ಟವಾದ ಹೆಚ್ಚುಗಾರಿಕೆಯಲ್ಲವೆ? ಈ ಹೆಚ್ಚುಗಾರಿಕೆಯನ್ನು ಪರಮಾತ್ಮನ ವಿಭೂತಿವಿಶೇಷವೆಂದು ಭಾವಿಸುವದಕ್ಕೆ ಹಿಂದುಮುಂದು ನೋಡುವದೇಕೆ? ಆಕಳು ಇಷ್ಟರಮಟ್ಟಿಗೆ ಸತ್ತ್ವಗುಣಕ್ಕೆ ಆಶ್ರಯವಾಗಿರುವದರಿಂದ ಅದರ ದೇಹದಲ್ಲಿ ಮೂವತ್ತುಮೂರು ಕೋಟಿ ದೇವತೆಗಳಿರುವರೆಂಬ ಧಾರ್ಮಿಕಕಲ್ಪನೆಯೂ ಸಯುಕ್ತಿಕವಾಗುವದು. ಏಕೆಂದರೆ ದೇವತೆಗಳು ಸತ್ತ್ವಗುಣಪ್ರಿಯರು. ಆಕಳಲ್ಲಿ ಸತ್ತ್ವಗುಣವು ತುಂಬಿತುಳುಕುವದರಿಂದ ಅದರ ದೇಹದಲ್ಲಿ ದೇವತೆಗಳೂ ತುಂಬಿತುಳುಕುತ್ತಿರುವರೆಂಬ ಮಾತು ಒಪ್ಪುವದು.

ಹೀಗೆ ಆಕಳು ಸರ್ವದೇವತೆಗಳ ಆವಾಸಸ್ಥಾನವಾಗಿರುವದರಿಂದಲೇ ಪ್ರತಿದಿನವೂ ಮನುಷ್ಯನು ಗೋಗ್ರಾಸವನ್ನು ಕೊಟ್ಟು ಉಣ್ಣಬೇಕೆಂದು ನಮ್ಮಲ್ಲಿ ವಿಧಿ ಇರುವದು. ನಾವು ಉಣ್ಣುವ ಆಹಾರವು ದೇವರಿಗೆ ನಿವೇದನ ಮಾಡಿದ ಶೇಷವಾಗಿರಬೇಕೆಂದು ಹಿಂದೆ ಹೇಳಿದೆಯಷ್ಟೆ. ಜಡವಾದ ವಿಗ್ರಹದಲ್ಲಿ ಬರೀ ಭಾವನೆಯನ್ನು ಮಾಡುವದಕ್ಕಿಂತಲೂ ಆಕಳಲ್ಲಿ ಭಗವದ್ವಿಭೂತಿಯು ಸಚೇತನವಾಗಿ ಕಾಣಬರುವದರಿಂದ ಅದಕ್ಕೆ ಆಹಾರವನ್ನು ಕೊಡುವದು ಹೆಚ್ಚು ಪ್ರಶಸ್ತವೆಂದು ತೋರಿಬಂದಿದೆ. ಇಲ್ಲಿ ಇನ್ನೊಂದು ಸಂಶಯವು ಬರುತ್ತದೆ. ಗೋವಿಗೆ ಹುಲ್ಲು ತಕ್ಕ ಗ್ರಾಸವು. ಹೀಗಿರುವಾಗ ಗೋಗ್ರಾಸದ ಪದ್ಧತಿಯನ್ನು ಅಗ್ಗವಾದ ಹುಲ್ಲಿನ ಮೇಲೆ ಸಾಗಿಸದೆ ಬೆಲೆಯುಳ್ಳ ಮನುಷ್ಯಾಹಾರವನ್ನು ಚ್ಚುಮಾಡುವ ಆವಶ್ಯಕವೇನೆಂಬುದೇ ಆ ಸಂಶಯವು. ಉಣ್ಣಲಾರದ ಗ್ರಹಗಳೆದುರಿಗೆ ಬರೀ ಭಾವನೆಯ ಮೇಲೆ ನಿವೇದನವನ್ನು ಮುಗಿಸುವ ಚಿಗೆ ಮನಸ್ಸನ್ನು ಸೋತವರಿಗೆ ಉಣ್ಣುವ ಆಕಳಿಗಾಗಿ ತಮ್ಮ ಆಹಾರ ನ್ನು ಕಳೆದುಕೊಳ್ಳುವದಕ್ಕೆ ಸಂಕೋಚವಾಗುವದು ಸ್ವಭಾವವಾಗಿದೆ. ೀವರಿಗೆ ನಿವೇದನ ಮಾಡುವದು ದೇವರ ಹೊಟ್ಟೆ ತುಂಬುವದಕ್ಕಾಗಿ ವೆ ಆ ಆಹಾರವು ತನಗೆ ದೇವರ ಪ್ರಸಾದವಾಗುವದಕ್ಕಾಗಿರುವದೆಂಬ ಲ್ಪನೆಯನ್ನು ತಂದುಕೊಂಡರೆ ಆ ಸಂಕೋಚವು ಹಾರಿಹೋಗುವದು. ದ್ದರಿಂದ ತಮ್ಮ ಆಹಾರವನ್ನು ನಿಜವಾಗಿ ದೇವರ ಪ್ರಸಾದವಾಗಿ

ಮಾಡಿಕೊಳ್ಳಬೇಕೆನ್ನುವವರೆಲ್ಲರೂ ತಮ್ಮ ಮನೆಯಲ್ಲಿ ಆಕಳನ್ನಿಟ್ಟು ಕೊಂಡು ಪ್ರತಿದಿನವೂ ಅದರುಪಾಸನೆಯನ್ನು ಮಾಡಬೇಕು.

ಆಕಳು ಸರ್ವದೇವತಾಸ್ವರೂಪವಾದರೂ ಅದರಲ್ಲಿ ಭೂದೇವತಾ ಸ್ವರೂಪವು ಬಹಳವಾಗಿರುವದು. ಭೂದೇವಿಯು ತನ್ನ ಕಷ್ಟಗಳನ್ನು ಹೇಳಿಕೊಳ್ಳುವದಕ್ಕೆ ದೇವರ ಬಳಿಗೆ ಹೋಗುವಾಗಲೆಲ್ಲ ಗೋರೂಪ ವನ್ನು ಧಾರಣಮಾಡಿರುವಳೆಂದು ಪುರಾಣಗಳಲ್ಲಿ ಪ್ರಸಿದ್ಧವಾಗಿರುವದು. ಆಕಳು ಕನಿಕರಕ್ಕೆ ಪಾತ್ರವಾದ ಪ್ರಾಣಿಯಾಗಿರುವದೇ ಅದಕ್ಕೆ ಕಾರಣ ವಿರಬಹುದು. ದಿಲೀಪನು ಭೂಮಿಯನ್ನು ಬಹು ಕನಿಕರದಿಂದ ಪಾಲಿ ಸುತ್ತಿದ್ದನೆಂದು ಹೇಳುವಾಗ ರಘುವಂಶವು.

“ ಜುಗೋಪ ಗೋರೂಪಧರಾಮಿವೋರ್ವೀಮ್ ”

ಎಂಬ ಮಾತಿನಿಂದ ಆಕಳ ರೂಪವನ್ನು ಧಾರಣಮಾಡಿದ ಭೂಮಿಯನ್ನು ರಕ್ಷಿಸುವಂತೆ ಎಂದು ಹೇಳಿದೆ.

ಆಕಳಲ್ಲಿ ಹೆಚ್ಚುಗಾರಿಕೆ ಇರುವದರಿಂದ ಅದಕ್ಕೆ ಪ್ರತಿದಿನದ ಪೂಜೆ ದೊರೆತಿರುವದಲ್ಲದೆ ಆಶ್ವಿನವದ್ಯ ೧೨ ಗೋವತ್ಸದ್ವಾದಶಿಯೆಂಬ ಹೆಸರಿ ನಿಂದಲೂ ಕಾರ್ತಿಕಶುದ್ಧ ೧ ಬಲಿಪಾಡ್ಯದ ಹೆಸರಿನಿಂದಲೂ ಕಾರ್ತಿಕ ಶು ೮ ಗೋಪಾಷ್ಟಮಿಯ ಹೆಸರಿನಿಂದಲೂ ಆಕಳ ಪೂಜೆಯು ವಿಶೇಷವು ಧರ್ಮಶಾಸ್ತ್ರದಲ್ಲಿ ವಿಹಿತವಾಗಿರುವದು. ಆ ದಿನಗಳಲ್ಲಿ ಈಗಲೂ ಅವು ಗಳ ಉತ್ಸವವು ನಡೆಯುವದು. ಆಕಳುಗಳ ಮೇಲೆ ಧರ್ಮರಾಯನಿ ಗಿದ್ದ ಪೂಜ್ಯಬುದ್ಧಿಯು ಭಾರತದಲ್ಲಿ ಚೆನ್ನಾಗಿ ವ್ಯಕ್ತವಾಗಿದೆ. ಎಲ್ಲ ಆಕಳ ಕರುಗಳೂ ತಮ್ಮ ತಾಯಿ ಮೊಲೆಯನ್ನುಂಡ ಮೇಲೆ ಅವನ ಊಟದ ಪ್ರಯತ್ನವು ನಡೆಯುತ್ತಿತ್ತು. ಈ ರಹಸ್ಯವನ್ನರಿತ ಕೌರವನು ವಿರಾಟನಗರದಲ್ಲಿ ಅಜ್ಞಾತವಾಸದಲ್ಲಿದ್ದ ಅವನನ್ನು ಕಂಡು ಹಿಡಿಯುವದ ಕ್ಕಾಗಿ ಅಲ್ಲಿಯ ಗೋವುಗಳನ್ನೆಲ್ಲಾ ಸೆರೆಹಿಡಿದದ್ದೂ ಭೀಮಾರ್ಜುನರು ತಮ್ಮ ಸಾಹಸದಿಂದ ಅವುಗಳನ್ನು ಬಿಡಿಸಿ ತಂದು ಸುರಕ್ಷಿತವಾಗಿ ಮಾಡಿದ್ದೂ ಸುಪ್ರಸಿದ್ಧವಾಗಿದೆ.

ವ್ಯವಹಾರದೃಷ್ಟಿಯಿಂದ ನೋಡಿದರೆ ವ್ಯವಸಾಯಪ್ರಧಾನವಾದ ಈ ದೇಶದಲ್ಲಿ ಉಳುಮೆಯ ಕೆಲಸವು ವಿಶೇಷವಾಗಿ ಎತ್ತುಗಳಿಂದ ನಡೆ

ಯುವದರಿಂದ ಅವುಗಳನ್ನು ಹಡೆಯುವ ಆಕಳುಗಳಿಗೆ ಹೆಚ್ಚುಗಾರಿಕೆಯೆಂದು ತೋರಬಹುದು. ಇದರಲ್ಲಿಯೂ ಅರ್ಥವಿಲ್ಲದೆ ಇಲ್ಲ. ಆದರೆ ಇದೇ ಅದರ ಮುಖ್ಯಾರ್ಥವಲ್ಲ. ಇದು ಮಕ್ಕಳಿಗೆ "ಒಂದು ತುತ್ತು ಉಣ್ಣು, ತೊಂಡಿಕೆ ಬೆಳೆಯುತ್ತದೆ" ಎಂದು ಹೇಳುವ ಮಾತಿನಂತೆ ಇದೆ. ಉಣ್ಣುವದರಿಂದ ತೊಂಡಿಕೆ ಬೆಳೆಯುವದೇನೂ ಸುಳ್ಳಲ್ಲ. ಆದರೆ ಉಣ್ಣುವದು ತೊಂಡಿಕೆಗಾಗಿ ಅಲ್ಲ; ಜೀವಿಸುವದಕ್ಕಾಗಿ. ಉಣ್ಣದಿದ್ದರೆ ಆತ್ಮನಾಶವೇ ಆಗುವದು. ವ್ಯವಹಾರಪ್ರಧಾನರಿಗೆ ವ್ಯವಸಾಯದ ಆಶೆಯನ್ನು ಹುಟ್ಟಿದ್ದು ತಿಳಿಯದ ಮಕ್ಕಳಿಗೆ ತೊಂಡಿಕೆಯ ಆಶೆಯನ್ನು ಹುಟ್ಟಿದಂತೆಯೇ ಸರಿ. ಸಿಕ್ಷಯಾಂಶವನ್ನು ಸ್ವೀಕಾರಮಾಡಿದರೆ ಊಟವು ಜೀವಿಸುವದಕ್ಕೆ ಹೇಗೋ ಹಾಗೆ ಆಕಳು ನಮ್ಮ ಧರ್ಮಾಭಿವೃದ್ಧಿಗೆ ಉಪಕರಣವು. ಧರ್ಮವಿಲ್ಲದಿದ್ದರೆ ನಮ್ಮ ನಾಶವೇ ಆಗುವದು. ಧಾರ್ಮಿಕವ್ಯವಹಾರದಲ್ಲಿ ದೇವರ ನೈವೇದ್ಯಕ್ಕೆ ಪ್ರತಿನಿತ್ಯವೂ ಆಕಳ ಹಾಲು ಅಗತ್ಯವಾಗಿ ಬೇಕು. ದೇವರಿಗೆ ಯೋಗ್ಯವಾದ ಆಹಾರಪದಾರ್ಥವು ಆಕಳ ಹಾಲಿನಷ್ಟು ಉತ್ತಮವಾದದ್ದು ಮತ್ತೊಂದಿಲ್ಲ. ಪ್ರತಿನಿತ್ಯವೂ ಆಕಳ ತುಪ್ಪವನ್ನು ಅಗ್ನಿಯ ಮೂಲಕ ದೇವರಿಗೆ ಒಪ್ಪಿಸಬೇಕೆಂದು ವಿಧಿ ಇದೆ. ಒಂದು ಪಕ್ಷ ಪ್ರತಿದಿನವೂ ಆಕಳ ತುಪ್ಪವು ದೊರೆಯದಿದ್ದರೂ ಅಮಾವಾಸ್ಯೆಯ ದಿವಸ ಕರೆದ ಹಾಲಿನಿಂದಾದರೂ ಮರುದಿನ ದೇವರಿಗೆ ಆಕಳ ರಸವನ್ನು ಮುಟ್ಟಿಸಲೇ ಬೇಕೆಂದು ನಿರ್ಬಂಧವಿದೆ. ಈ ರೀತಿಯಲ್ಲಿ ದೇವಕಾರ್ಯವನ್ನು ಮಾಡುವದರಿಂದ ಮನುಷ್ಯರಿಗೆ ಉತ್ತಮಗತಿಯುಂಟಾಗುವದಕ್ಕೆ ಕಾರಣವಾಗುತ್ತದೆ. ಹೀಗೆ ಆಕಳು ವ್ಯವಹಾರದೃಷ್ಟಿಯಿಂದಲೂ ಧರ್ಮದೃಷ್ಟಿಯಿಂದಲೂ ಎರಡರಿಂದಲೂ ಮನುಷ್ಯರಿಗೆ ಅಗತ್ಯವಾಗಿದೆ ಎಂಬುವದು ಗೋಪೂಜೆಯನ್ನು ಮಾಡುವವನು ಹೇಳಬೇಕಾದ

"ಲಕ್ಷ್ಮೀರ್ಯಾ ಲೋಕಪಾಲಾನಾಂ ಧೇನುರೂಪೇಣ ಸಂಸ್ಥಿತಾ ।
ಘೃತಂ ವಹತಿ ಯಜ್ಞಾರ್ಥೇ ಮಮ ಪಾಪಂ ವ್ಯಪೋಹತು ।।"

ಎಂಬ ಶ್ಲೋಕದಿಂದ ಹೊರಪಡುತ್ತದೆ. ಆಕಳುಗಳಿಂದ ಐಹಿಕವಾದ ಭಾಗ್ಯವು ದೊರೆಯುವದೆಂಬುದು ಈಗ ನಮಗೆ ಕನಸಿನ ಮಾತೇ ಆಗಿದೆ. ಏಕೆಂದರೆ ಈಗ ನಮಗೆ ಆಕಳುಗಳ ದರ್ಶನವು ಪುರಾಣದಲ್ಲಿಯೂ

ಚಿತ್ರಗಳಲ್ಲಿಯೂ ಮಾತ್ರ ಆಗುವ ಕಾಲ ಬರುತ್ತಿದೆ. ಅದಕ್ಕನುಗುಣವಾಗಿ ನಮ್ಮ ಐಹಿಕವಾದ ಐಶ್ವರ್ಯವು ನಮ್ಮ ಪ್ರಾಚೀನೇತಿಹಾಸದಲ್ಲಿಯೂ ಚಿತ್ರಗಳಲ್ಲಿಯೂ ಅಡಕವಾಗಿದೆ. ಆಕಳುಗಳಿಂದ ಐಹಿಕವಾದ ಭಾಗ್ಯವುಂಟೆಂಬರ್ಥವನ್ನು ಇಂದೇ ಪ್ರತ್ಯಕ್ಷವಾಗಿ ಸ್ವಿಟ್ಜರ್ಲಂಡಿನಲ್ಲಿ ನೋಡಬಹುದು. ಅಮೇರಿಕಾ, ಇಂಗ್ಲಂಡು ದೇಶಗಳಲ್ಲಿ ಕೂಡ ಅದು ತೋರಿ ಬರುತ್ತದೆ. ಆ ಯೋಗವನ್ನು ನಾವು ತಂದುಕೊಳ್ಳಬೇಕಾದರೆ ನಮ್ಮಲ್ಲಿ ಆಕಳ ಸಂತತಿ ಬೆಳೆಯಬೇಕಾಗುವದು. ಈ ವ್ಯವಹಾರದ ಮಾತೂ ಇರಲಿ. ನಮ್ಮ ಧಾರ್ಮಿಕತ್ವದ ವೃದ್ಧಿಗಾದರೂ ನಾವು ಪ್ರತಿಯೊಬ್ಬರೂ ಆಕಳನ್ನು ಸಾಕಲೇ ಬೇಕು. ಗೋರಕ್ಷಣೆಯು ನಮ್ಮ ಧರ್ಮಶ್ರದ್ಧೆಯ ಬಾಹ್ಯಲಕ್ಷಣವು. ಗೋವಿನಲ್ಲಿ ಹೀಗೆ ಐಹಿಕಾಮುಷ್ಮಿಕಫಲಗಳೆರಡನ್ನೂ ಕೊಡುವ ಯೋಗ್ಯತೆ ಇರುವದರಿಂದಲೇ ಪೂರ್ವದಲ್ಲಿ ದಕ್ಷಿಣಾದ್ರವ್ಯಕ್ಕೆ ಗೋವನ್ನೇ ಉಪಯೋಗಿಸುತ್ತಿದ್ದರು. ನವು ಒಬ್ಬರಿಗೊಂದು ದಾನವನ್ನು ಮಾಡುವದರಿಂದ ಅವರ ಐಹಿಕಾಮುಷ್ಮಿಕಸಾಧನಗಳಿಗೆ ಉತ್ತೇಜಕರಾಗಬೇಕು. ಅದೇ ನಿಜವಾದ ದಾನ. ಒಂದೆರಡು ಲೋಹದ ಕಾಸುಗಳನ್ನು ಕೊಟ್ಟರೇನು ಮಾಡಿದಂತಾಯಿತು? ಅದರಿಂದ ಸ್ವಲ್ಪ ಐಹಿಕಪ್ರಯೋಜನವಾಗಬಹುದು. ಧರ್ಮಕ್ಕೂ ಸಹಾಯವಾಗಬೇಕಾದರೆ ಆಕಳೇ ಸರಿ. ಪೂರ್ವದಲ್ಲಿ ಧನರೂಪವಾದ ದಕ್ಷಿಣೆಯನ್ನು ಕೊಡುವ ಪದ್ಧತಿ ಇರಲಿಲ್ಲ. ಜನಕರಾಜನು ಬೇಕಾದಷ್ಟು ಆಕಳುಗಳನ್ನು ಅಲಂಕರಿಸಿ ಬ್ರಹ್ಮಜ್ಞಾನಿಗಳಿಗಾಗಿ ಬಯಲಲ್ಲಿಟ್ಟದ್ದು ಬೃಹದಾರಣ್ಯಕೋಪನಿಷತ್ತಿನಲ್ಲಿದೆ.

ಆಕಳುಗಳಿಗೆ ಮಹತ್ತ್ವವು ಬಂದಿರುವದು ವ್ಯವಹಾರದೃಷ್ಟಿಯಿಂದ ಅಲ್ಲ; ಅವುಗಳ ಪವಿತ್ರತೆಯ ದೃಷ್ಟಿಯಿಂದ. ಆಕಳುಗಳ ಹಾಲೂ ಮೊಸರೂ ತುಪ್ಪವೂ ದೇವರ ಅಭಿಷೇಕಕ್ಕೆ ಕೂಡ ಬರುವವು. ಅವುಗಳಿಗೆ ಗೋಮೂತ್ರವೂ ಗೋಮಯವೂ ಸೇರಿ ಪಂಚಗವ್ಯವೆನಿಸಿಕೊಂಡು ಪಾಪ ಪರಿಹಾರಕವೆಂದು ಪ್ರಸಿದ್ಧವಾಗಿರುವವು. ಗೋಮಯವೂ ಗೋಮೂತ್ರವೂ ವಿಷಕ್ರಿಮಿನಾಶಕವೆಂದು ಭೌತಿಕಶಾಸ್ತ್ರಜ್ಞರೂ ಒಪ್ಪುವರು. ಆದರೆ ಅದು ನಮಗೆ ಮಹತ್ತ್ವವಲ್ಲ; ಅದರ ಪಾಪಪರಿಹಾರಕತ್ವವು ನಮಗೆ ಮಹ

ತ್ತ್ವವು. ಈ ಗುಣವನ್ನು ಈಗಲೇ ಎಲ್ಲರಿಗೂ ಮನಗಾಣಿಸುವದಕ್ಕೆ ಬರುವದಿಲ್ಲ. ಯಾಕೆಂದರೆ ಇದು ಇಂದ್ರಿಯಗಳಿಗೆ ವಿಷಯವಾದ ಸಂಗತಿಯಲ್ಲ. ನಾವು ನಮ್ಮ ತಪಶ್ಚರ್ಯಪ್ರಭಾವದಿಂದ ಅತೀಂದ್ರಿಯಜ್ಞಾನವನ್ನು ಪಡೆದರೆ ಆಗ ಈ ಅರ್ಥವನ್ನು ಮನಗಾಣಬಹುದು. ಆ ಯೋಗ್ಯತೆ ಇಲ್ಲದೆ ಕ್ಷುದ್ರವಾದ ಇಂದ್ರಿಯಜ್ಞಾನದಿಂದ ಅತೀಂದ್ರಿಯಜ್ಞಾನವನ್ನು ಕಂಡುಗಾಣುವದು ಅಶ್ರೇಯಸ್ಕರವಾದದ್ದು. ಇರಲಿ. ಗೋಲೋಕವೆಂದು ಒಂದು ಲೋಕವುಂಟೆಂದೂ ಅದು ವೈಕುಂಠಕ್ಕಿಂತ ಮೇಲಿದ್ದು ಅದೇ ನಿಜವಾದ ಮೋಕ್ಷಸ್ಥಾನವೆಂದೂ ಶ್ರೀವಲ್ಲಭಾಚಾರ್ಯರು ಹೇಳುತ್ತಾರೆ. ಕೆಟ್ಟ ನಕ್ಷತ್ರದಲ್ಲಿ ಹುಟ್ಟಿದ ಕೂಸನ್ನು ಆಕಳ ಹೊಟ್ಟೆಯ ಕೆಳಗೆ ತೂರಿಸಿ ಅದರ ಹೊಟ್ಟೆಯಿಂದ ಜನ್ಮವಾದಂತೆ ಭಾವಿಸುವದರಿಂದ ಕೆಟ್ಟ ನಕ್ಷತ್ರದ ದೋಷವು ಪರಿಹಾರವಾಗುವದೆಂದು ಧರ್ಮಶಾಸ್ತ್ರವು ಹೇಳುತ್ತದೆ. ಶ್ರಾದ್ಧದಿನದ ಪಿಂಡಗಳನ್ನು ಆಕಳುಗಳಿಗೆ ತಿನ್ನಿಸುವದು ಉತ್ತಮವೆಂದೂ ಶಾಸ್ತ್ರವು ಸೂಚಿಸುತ್ತದೆ. ಯಾಕೆಂದರೆ –

“ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಂ”

ಎಂಬ ಶ್ರುತಿಯಂತೆ ಗೋಮಾತೆಯು ವಸುರುದ್ರಾದಿತ್ಯರಿಗೆ ಸಮೀಪಸಂಬಂಧಿನಿಯಾಗಿದ್ದಾಳೆ. ಪಿತೃಗಳು ವಸುರುದ್ರಾದಿತ್ಯರೂಪರೆಂದು ಮಂತ್ರದಲ್ಲಿ ಬರುತ್ತದೆ. ಆದ್ದರಿಂದ ಪಿಂಡಗಳನ್ನು ಆಕಳಿಗೆ ತಿನ್ನಿಸಿದರೆ ಪಿತೃಗಳಿಗೆ ತೃಪ್ತಿಯಾಗುವದು ಸಹಜವಾಯಿತು. ಇದಲ್ಲದೆ ಗೋವುಗಳಿರುವ ಕಡೆ ಪರಮಾತ್ಮನಿರುವನೆಂಬುದನ್ನು ಗೋಪದ್ಮವ್ರತವು ಸೂಚಿಸುತ್ತದೆ. ಆಕಳುಗಳು ವಾಸಮಾಡುವ ಕಡೆಯಲ್ಲಿ ಸಾರಿಸಿ ಅಕ್ಕಿಯ ಹಿಟ್ಟಿನಿಂದ ಪದ್ಮಗಳನ್ನು ಬರೆದು ಚಾತುರ್ಮಾಸ್ಯಕಾಲದಲ್ಲಿ ತಪ್ಪದೆ ಐದು ವರ್ಷ ಪೂಜೆಯನ್ನು ಮಾಡಿದರೆ ಲಕ್ಷ್ಮೀನಾರಾಯಣನು ಪ್ರಸನ್ನನಾಗುವನೆಂದು ಆವ್ರತವು ಹೇಳುತ್ತದೆ. ಆಕಳು ಈಯುತ್ತಿರುವಾಗ ಅದನ್ನು ಪ್ರದಕ್ಷಿಣೆ ಮಾಡಿದರೆ ಭೂಪ್ರದಕ್ಷಿಣೆಯ ಫಲವು ಬರುವದೆಂದು ಪ್ರತೀತಿ ಇದೆ. ಅಹಲ್ಯೆಯ ತಂದೆಯು ತನ್ನ ಮಗಳನ್ನು ಅಪೇಕ್ಷಿಸುವವರಿಗೆ ಭೂಪ್ರದಕ್ಷಿಣೆಯನ್ನು ಪಣವಾಗಿಟ್ಟನಂತೆ. ಗುಣಾಢ್ಯಳಾದ ಆಕೆಯ ಮೇಲಿನ ಆಶೆಯಿಂದ ಎಷ್ಟೋ ಜನರು ನಿಜವಾಗಿ ಭೂಪ್ರದಕ್ಷಿಣೆಗೇ ಹೊರಟರು. ಗೌತ

ಮರು ಈಯುತ್ತಿದ್ದ ಒಂದು ಆಕಳನ್ನು ಕಂಡು ಅದರ ಪ್ರದಕ್ಷಿಣೆಯನ್ನು ಮಾಡಿ ಒಂದು ಕನ್ಯೆಯನ್ನು ವರಿಸಿದರು. ಅವರಿಗೆ ಭೂಪ್ರದಕ್ಷಿಣೆಯ ಫಲವು ಬಂದಿರುವದನ್ನು ಎಲ್ಲರೂ ಒಪ್ಪಿಕೊಂಡದ್ದರಿಂದ ಅವರಿಗೆ ಅಹಲ್ಯೆಯೊಡನೆ ಪಾಣಿಗ್ರಹಣವಾಯಿತು. ಕೊಡಗುದೇಶದಲ್ಲಿ ತುಲಾಮಾಸದಲ್ಲಿ ಬರುವ ಕಾವೇರಿಯ ಹಬ್ಬದಲ್ಲಿ “ಗೋವಿನಕಥೆ” ಎಂಬ ಹಾಡನ್ನು ಪವಿತ್ರವೆಂದು ಈಗಲೂ ಪಠಿಸುತ್ತಿರುತ್ತಾರೆ. ಹೀಗೆ ಗೋವಿನ ಪವಿತ್ರತೆಯ ವಿಷಯವಾಗಿ ಬೇಕಾದಷ್ಟು ಸಂದರ್ಭಗಳು ದೊರೆಯುತ್ತವೆ.

ಇಂಥ ಗೋಮಾತೆಯ ರಕ್ಷಣೆಯು ಪ್ರತಿಯೊಬ್ಬ ಹಿಂದುವಿನ ಮುಖ್ಯಧಾರ್ಮಿಕಕರ್ತವ್ಯವು. ಸಾಕ್ಷಾತ್ಪರಮಾತ್ಮನು ಕೃಷ್ಣಾವತಾರವನ್ನು ಮಾಡಿ ಈ ಉದ್ಯೋಗಕ್ಕೆ ಉದಾಹರಣೆಯನ್ನು ಹಾಕಿಕೊಟ್ಟಿರುವನು. ಮತ್ತು

“ಕೃಷಿಗೋರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್”

ಎಂಬ ಮಾತಿನಿಂದ ಗೋರಕ್ಷಣೆಯನ್ನು ಧರ್ಮವೆಂದು ಆಡಿ ತೋರಿಸಿರುವನು. ಯಾರಲ್ಲಿ ಧಾರ್ಮಿಕಪ್ರವೃತ್ತಿ ಇರುವದೋ ಅವರಲ್ಲೆಲ್ಲಾ ಬಹುಮಟ್ಟಿಗೆ ಗೋಭಕ್ತಿ ಕಂಡೇ ಕಾಣುವದು. ಶ್ರೀಸಮರ್ಥ ರಾಮದಾಸರ ಮತ್ತು ಶ್ರೀದತ್ತಾತ್ರೇಯರ ಚಿತ್ರಗಳಲ್ಲಿ ಅವರ ಸಮೀಪದಲ್ಲಿ ಗೋವನ್ನು ಚಿತ್ರಿಸಿರುವದಕ್ಕೂ ಇದೇ ಕಾರಣ. ಧರ್ಮಸ್ಥಾಪನೆಯ ಉದ್ಯೋಗವು ನಡೆದಿರುವ ಕಡೆಗಳಲ್ಲೆಲ್ಲಾ ಗೋರಕ್ಷಣೆಯು ನಡೆದೇ ಇರುವದು. ಪೂರ್ವದಲ್ಲಿ ಯಾವ ಋಷಿಗಳ ಆಶ್ರಮದಲ್ಲಿಯೂ ಆಕಳಿಲ್ಲದೆ ಇರಲಿಲ್ಲ. ಗೋರಕ್ಷಣೆಯನ್ನು ನಾವು ಯಾವಾಗಲೂ ಬಯಸುತ್ತಿರುವಂತೆ

“ಮಾನಸ್ತೋಕೇ ತನಯೇ ಮಾನ ಆಯುಷಿ ಮಾನೋಗೋಷು ಮಾನ ಅಶ್ವೇಷು ರೀರಿಷಃ” ಮತ್ತು “ಆರಾತ್ತೇ ಗೋಘ್ನಮುತ ಪೂರುಷಘ್ನಂ”

ಎಂಬ ಶ್ರುತಿಗಳು ನಮಗೆ ಪ್ರತಿಕ್ಷಣವೂ ನೆನಪುಗೊಡುತ್ತಿರುವವು “ನಮ್ಮ ಮಕ್ಕಳು, ಮೊಮ್ಮಕ್ಕಳು, ಆಯುಸ್ಸು, ಆಕಳು, ಕುದುರೆ– ಇವುಗಳಿಗೆ ಹಿಂಸೆಯೊದಗದೆ ಇರಲಿ” “ಆಕಳುಗಳನ್ನೂ ಮನುಷ್ಯರನ್ನೂ ಹಿಂಸಿಸುವ ಆಯುಧಗಳು ನಮಗೆ ದೂರವಾಗಲಿ” ಎಂದು ಅವುಗಳ ಅರ್ಥ. ಇದೇ ಅರ್ಥವನ್ನೇ

"ನಾಸ್ತಿ ನಾಸ್ತಿ ಪರೋ ಧರ್ಮೋ ಲೋಕೇ ಗೋರಕ್ಷಣಾದೃತೇ"

ಎಂಬ ವಾಕ್ಯವು ಹೇಳುತ್ತದೆ. ಲೋಕದಲ್ಲಿ ಗೋರಕ್ಷಣಕ್ಕಿಂತ ಹೆಚ್ಚಿನ ಧರ್ಮವಿಲ್ಲವೆಂದು ಅದರ ತಾತ್ಪರ್ಯ. ಈ ಪ್ರಾರ್ಥನೆಯೇ ಬ್ರಾಹ್ಮಣರ ಪ್ರತಿಯೊಂದು ವೈದಿಕಕರ್ಮದ ಕೊನೆಯಲ್ಲಿಯೂ

"ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಮ್"

ಎಂಬ ವಾಕ್ಯದಿಂದ ಹೊರಡುವದು. ಇಲ್ಲಿ ಬ್ರಾಹ್ಮಣರಿಗೆ ಶುಭವಾಗಲೆನ್ನುವದು ಅವರು ಜಗತ್ತಿನ ಹಿತಕ್ಕಾಗಿ ತಪಶ್ಚರ್ಯೆಯನ್ನು ಮಾಡುವವರೆಂಬ ದೃಷ್ಟಿಯಿಂದ ಹೇಳಿದ್ದು. ಆ ಮಾತಿರಲಿ ಅದು ಇಲ್ಲಿಯ ವಿಷಯವಲ್ಲ. ಗೋವಿನ ರಕ್ಷಣೆಯಾಗದಿದ್ದರೆ ಜನರ ಧರ್ಮಾಭಿವೃದ್ಧಿಗೆ ದಾರಿಯೇ ಇಲ್ಲದ್ದರಿಂದ ಅದರ ರಕ್ಷಣೆಯು ಅಗತ್ಯವು.

ಗೋರಕ್ಷಣೆಯು ಇಷ್ಟು ಪ್ರಧಾನವಾದರೂ ಬಹಳ ಹಿಂದಿನ ಕಾಲದಲ್ಲಿ ಒಂದು ಪ್ರಸಂಗದಲ್ಲಿ ಗೋವನ್ನು ಕೊಲ್ಲಬಹುದೆಂದಿತ್ತು. ಜನರ ಸಾತ್ವಿಕಶಕ್ತಿಯು ಮಾಂಸಾಹಾರದಿಂದ ಮಂದವಾಗದಷ್ಟು ತೀವ್ರವಾಗಿದ್ದಾಗ ಆಚರಣೆಯಲ್ಲಿದ್ದ ಆ ನಿಯಮವು ಈಗ ಶಾಸ್ತ್ರದಿಂದ ನಿಷಿದ್ಧವಾಗಿದೆ.

"ಮಾ ಗಾಂ ಅನಾಗಾಂ ಅದಿತಿಂ ವಧಿಷ್ಟ"

ಎಂದು ಶ್ರುತಿ ಇರುವದು. ನಮಗೆಲ್ಲ ಅದಿತಿಯಾದಂಥ ಸಾತ್ವಿಕಪ್ರಾಣಿಯಾದ ಗೋವನ್ನು ಕೊಲ್ಲಬಾರದೆಂದು ಅದರ ಅರ್ಥ. ಅದಿತಿಯು ಕಶ್ಯಪರ ಹೆಂಡತಿ. ಆ ದಂಪತಿಗಳಿಂದಲೇ ಜನತೆಯು ಬೆಳೆದಿರುವದು. ಆದ್ದರಿಂದ ಆಕೆ ನಮಗೆ ತಾಯಾದಳು. ಆಕಳು ನಮಗೆ ಆಕೆಯ ಸಮಾನವು. ಸಾಮಾನ್ಯವಾಗಿ ಮಕ್ಕಳು ಹುಟ್ಟಿದ ಮೂರುದಿವಸಗಳ ವರೆಗೂ ತಾಯಿ ಮೊಲೆಯಲ್ಲಿ ಹಾಲು ಬರುವದಿಲ್ಲ. ಅಲ್ಲಿಯವರೆಗೂ ಆಕಳು ನಮಗೆ ತಾಯಿ. ಆಕಳ ಹೊರತು ಬೇರೆ ಪ್ರಾಣಿಯ ಹಾಲು ಅಷ್ಟು ಆರೋಗ್ಯಕರವಲ್ಲ; ಶುದ್ಧವಂತು ಅಲ್ಲವೇ ಅಲ್ಲ. ಇಂಥ ಆಕಳುಗಳನ್ನು ಪರದೇಶೀಯರು ಹೊಟ್ಟೆಗಾಗಿಯೂ ಚರ್ಮಕ್ಕಾಗಿಯೂ ಕೊಲ್ಲುತ್ತಿರುವದು ಅತ್ಯಂತದುಃಖಕರವಾದ ಸಂಗತಿಯು. ಇದು ನಮಗಂತು ಅತ್ಯಂತವಾದ ದುರ್ದೈವವಷ್ಟೆ. ಅವರಿಗೂ ಇದರ ದುರ್ದೈವಸ್ವರೂಪವು ತಪ್ಪಿದ್ದಲ್ಲ. ಏಕೆಂದರೆ ಗೋವಧೆಯು ಅವರ ಧರ್ಮಕ್ಕೂ ವಿರೋಧವೇ. ಮುಸಲ್ಮಾನ ಜನರ ಪವಿತ್ರ

ಗ್ರಂಥವಾದ ಕುರಾನಿನಲ್ಲಿ —

“ ನನಾ ಇಸೀ ಮುಕಾಮೇ ಶಿಕ ಪರಾ ತುಗೂರ ।

ಜಿಬಿ ಪರ ಬನಾಮಯು ಜಿಬಿ ಪರಿ ತುಯೂರ ॥ ”

ಎಂದು ಹೇಳಿದೆ. “ಹಸು ಮೊದಲಾದ ನಾಲ್ಕುಕಾಲಿನ ಪಶುಗಳು ಮನುಷ್ಯನ ಆಹಾರಕ್ಕಾಗಿ ಹುಟ್ಟಿಲ್ಲ; ಭಾರವನ್ನು ಹೊರುವದು ಮೊದಲಾದ ಕೆಲಸಕ್ಕೆ ಹುಟ್ಟಿವೆ” ಎಂದು ಅದರ ಅರ್ಥ. ಇಂಥ ಅಹಿಂಸಾಪರವಾದ ವಾಕ್ಯಗಳು ಕುರಾನಿನಲ್ಲಿಯೂ ಎಷ್ಟೋ ಇವೆ. ಮುಸಲ್ಮಾನರು ಬಕರ+ಇ+ಈದ್ ಎಂಬ ಹಬ್ಬದಲ್ಲಿ ಗೋವಧೆಯನ್ನು ಮಾಡುತ್ತಾರಷ್ಟೆ. ಆ ಹಬ್ಬದ ಮೂಲವೃತ್ತಾಂತವನ್ನು ನೋಡಿರಿ. ಇಬ್ರಾಹಿಂ ಪೈಗಂಬರನೆಂಬ ಸಾಧು ಭಗವದ್ಭಕ್ತಿಯನ್ನು ಮಾಡುತ್ತಿರುವಾಗ ಅವನ ಭಾವವನ್ನು ಪರೀಕ್ಷೆಮಾಡಬೇಕೆಂದು ಅಲ್ಲಾನು ( ಭಗವಂತನು ) “ನಿನ್ನ ಅತ್ಯಂತ ಪ್ರಿಯವಸ್ತುವನ್ನು ನನಗರ್ಪಿಸು”, ಎಂದು ಕೇಳಿದನು. ಆಗ ಪೈಗಂಬರನು ತನ್ನ ಪ್ರಿಯಪುತ್ರನಾದ ಇಸ್ಮಾಯಿಲನೆಂಬ ಮಗನನ್ನು ದೇವರಿಗೆ ಅರ್ಪಿಸುವದಕ್ಕಾಗಿ ಅವನನ್ನು ತನ್ನ ಕೈಯಿಂದಲೇ ಕೊಲ್ಲುವದಕ್ಕೆ ಹೊರಟು ಮುಂದೇನಾದರೂ ತನ್ನ ಮನಸ್ಸು ಹಿಂದೆಗೆದೀತೆಂದು ಕಣ್ಣುಗಳನ್ನು ಕಟ್ಟಿಕೊಂಡು ಕತ್ತಿಯನ್ನು ಬೀಸಿದನು. ಅಷ್ಟರಲ್ಲಿ ದೈವಯೋಗದಿಂದ ಆ ಮಗನ ಸ್ಥಾನದಲ್ಲಿ ಒಂದು ಕುರಿ ಬಂದು ನಿಂತಿತ್ತು. ಹೀಗಾಗಿ ಆಗ ಕುರಿಯು ವಧೆಯಾಗಿ ಮಗನ ಜೀವವು ಉಳಿಯಿತು. ಆಮೇಲೆ ದೇವರು ಆ ಕುರಿಯನ್ನೂ ಬದುಕಿಸಿದನು. ಆದ್ದರಿಂದ ಅದು ಕುರಿಯ ಹಬ್ಬವೆಂದು ಹೆಸರಾಯಿತು. ಎಲ್ಲರ ದೇವರೂ ಒಂದೇ. ದೇವರು ಹಿಂಸೆಯನ್ನೆಂದೂ ಮೆಚ್ಚುವದಿಲ್ಲ. ಅದು ನಿಜವಾಗಿ ಕುರಿಯು ಬದುಕಿದ ಹಬ್ಬವಾಗಿರುವಾಗ ಹೇಗೋ ಆ ಸ್ಥಾನಕ್ಕೆ ಗೋವಧೆಯು ಬಂದು ನಿಂತಿದೆ. ಅಹಿಂಸಾಪ್ರಧಾನರಾದ ಹಿಂದುಗಳಲ್ಲಿಯೂ ಕೂಡ ಪ್ರಾಣಿವಧೆಯು ಕೆಲಕೆಲವರಲ್ಲಿ ಹೇಗೋ ಧರ್ಮವೆಂಬ ಬುದ್ಧಿಯನ್ನುಂಟುಮಾಡಿರುವಂತೆ ಮುಸಲ್ಮಾನರಲ್ಲಿಯೂ ಕಾಲಕರ್ಮಸಂಯೋಗದಿಂದ ಗೋವಧೆಯು ಪ್ರಚಾರಕ್ಕೆ ಬಂದಿರಬಹುದೆಂದು ತೋರುತ್ತದೆ.

ಇನ್ನು ಕ್ರಿಸ್ತಬಂಧುಗಳ ಧರ್ಮಗ್ರಂಥವಾದ ಬೈಬಲನ್ನು ನೋಡಿರಿ·

*"Thou shalt not kill; and whosoever shall kill shall be in danger of the Judgement.*

—ಸೆ. ಟ್ ಮ್ಯಾಥ್ಯೂಯವರ ಹಳೇ ಒಡಂಬಡಿಕೆ ೫-೨೧.

"ಕೊಲ್ಲಬೇಡ; ಯಾರು ಕೊಲ್ಲುವರೋ ಅವರು ಅದಕ್ಕಾಗಿ ಶಿಕ್ಷೆಯನ್ನು ಅನುಭವಿಸಬೇಕಾಗುವುದು" ಎಂದು ಇದರ ತಾತ್ಪರ್ಯ. ಹಾಗಾದರೆ ಹೊಟ್ಟೆಗೇನು ಮಾಡಬೇಕೆಂದರೆ—

"And God said, Behold, I have given you every herb bearing seed; which is upon the face of all the earth: and every tree, in which is the fruit of a tree yielding seed; to you it shall be for meat."

— ಹಳೇ ಒಡಂಬಡಿಕೆ.

"ದೇವರು ಹೇಳಿದ್ದೇನೆಂದರೆ— ಎಚ್ಚರ; ಬೀಜವುಳ್ಳ ಪ್ರತಿಯೊಂದು ವನಸ್ಪತಿಯನ್ನು ಮತ್ತು ಮುಂದಿನ ಬೀಜವನ್ನು ಕೊಡುವಂಥ ಹಣ್ಣುಗಳುಳ್ಳ ಪ್ರತಿಯೊಂದು ಮರವನ್ನೂ ಭೂಮಿಯ ಮೇಲೆಲ್ಲಾ ನಾನು ನಿನಗಾಗಿ ಮಾಡಿದ್ದೇನೆ. ಅದು ನಿನಗೆ ಆಹಾರ."

ಇದು ಸಾಮಾನ್ಯವಾದ ಅಹಿಂಸೆಯ ಮಾತಾಯಿತಷ್ಟೆ. ಆಕಳು ಕ್ರೈಸ್ತನೊಡನೆಯೂ ಒಂದು ವಿಶೇಷಸಂಬಂಧವನ್ನು ಹೊಂದಿದೆ. ಅದೇನೆಂದರೆ ಏಸುಕ್ರಿಸ್ತನ ಜನ್ಮವಾದಾಗ ಒಂದು ಆಕಳು ಅವನ ಮೈಮೇಲೆ ಉಸಿರುಬಿಡುತ್ತ ಅವನ ಶರೀರದಲ್ಲಿ ಉಷ್ಣತೆಯನ್ನು ಹುಟ್ಟಿಸಿ ಅವನನ್ನು ರಕ್ಷಿಸಿತೆಂದು ಸ್ಪೇನ ದೇಶದಲ್ಲಿ ಈಗಲೂ ಅಲ್ಲಿಯ ಜನರು ಕ್ರೈಸ್ತನ ಜನ್ಮದ ದಿನ ಆಕಳುಗಳ ಮೇಲೆ ಬಹಳ ಪ್ರೇಮವನ್ನು ತೋರಿಸುತ್ತಾರೆ. ಇಂಗ್ಲೆಂಡಿನಲ್ಲಿಯೂ ಅಲ್ಲಿಯವರು ತಮ್ಮ ಆಕಳುಗಳನ್ನೇನೂ ವಿಶೇಷವಾಗಿ ಕೊಲ್ಲುವದಿಲ್ಲ. ನಮ್ಮ ದುರ್ದೈವದಿಂದ ನಮ್ಮ ಆಕಳುಗಳಿಗೆ ಉಳಿಗಾಲವಿಲ್ಲ. ಪರದೇಶೀಯರ ಕಟಾಕ್ಷವು ನಮ್ಮ ಆಕಳುಗಳ ಮೇಲೆ ಬಹಳವಾಗಿದ್ದದ್ದರಿಂದ ಹಾಲುತೊರೆದ ಕೆಚ್ಚಲಿನಿಂದಸುರಿದ ಕ್ಷೀರದಿಂದ ನೆನೆದ ಭೂಮಿಯು ಕೊಡುತ್ತಿದ್ದ ಸುಗಂಧದಿಂದ ತುಂಬಿದ್ದ ನಮ್ಮ ದೇಶವು

ಅವುಗಳ ವಧೆಯಿಂದಾದ ರಕ್ತದಿಂದ ಹುಟ್ಟಿದ ದುರ್ಗಂಧದಿಂದ ತುಂಬಿರುವದು. ಕ್ಷೀರಸಾಗರದ ಕಲ್ಪನೆಯುಳ್ಳ ಹಿಂದುಸ್ಥಾನದಲ್ಲಿ ಒಂದೊಳಲೆಯಷ್ಟಾದರೂ ಶುದ್ಧವಾದ ಆಕಳ ಹಾಲಿಗೆ ಅವಕಾಶವಿಲ್ಲದೆ ಮಕ್ಕಳುಗಳೆಲ್ಲಾ ಅಕಾಲಮರಣಕ್ಕೆ ಗುರಿಯಾಗುವ ಹೊತ್ತು ಬಂತು. ಕ್ಷೀರಸಾಗರದ ಅಭಿಮಾನ ದೇವತೆಯು ಪದವಿಯನ್ನು ಪಡೆದವರಿದ್ದ ಭರತಖಂಡದಲ್ಲಿ ನಮಗೆ ಹುಳಿಮಜ್ಜಿಗೆಗೆ ಕೂಡ ಅಭಾವವಾಯಿತು. ನಮ್ಮ ದೇವತೆಗಳ ಐಶ್ವರ್ಯವೆಲ್ಲ ಕ್ಷೀರಸಾಗರದಲ್ಲಿ ಹುಟ್ಟಿದ್ದರಿಂದ ಹಾಲಿನ ಅಭಾವವಾಗುತ್ತಲೆ ನಮ್ಮ ಐಶ್ವರ್ಯವೆಲ್ಲಾ ಅಲ್ಲಲ್ಲಿಯೇ ಅಂತರ್ಧಾನವಾಯಿತು. ನಮ್ಮ ತ್ರಿಮೂರ್ತಿಗಳಲ್ಲೊಬ್ಬನಾದ ಮಹಾವಿಷ್ಣು ಕ್ಷೀರಸಾಗರಶಾಯಿಯಾದ್ದರಿಂದ ನಮ್ಮ ದೇಶದಲ್ಲಿ ಹಾಲಿನ ವಾಸನೆ ಇಂಗಿದುದನ್ನು ಕಂಡು ಮೆಲ್ಲನೆ ತನ್ನ ಸಾನ್ನಿಧ್ಯವನ್ನು ದೂರಮಾಡಿದನು. ಆದ್ದರಿಂದ ನಾವು ನಮ್ಮ ಸ್ವಸ್ಥಿತಿಗೆ ಹೋಗಬೇಕಾದರೆ ಗೋವರ್ಗವನ್ನು ಹೆಚ್ಚಿಸಿ ಗೋಕ್ಷೀರದ ಉಪಯೋಗವನ್ನು ಬೆಳೆಸಿದ ಹೊರತು ಗತ್ಯಂತರವಿಲ್ಲ. ಈ ಉದ್ದೇಶವನ್ನು ಸಾಧಿಸುವದಕ್ಕೆ ಮುಂಚೆ ನಮ್ಮ ದೇಶದಲ್ಲಿ ಆಗುತ್ತಿರುವ ಗೋವಧೆಯನ್ನು ಮೊದಲು ನಿಲ್ಲಿಸಬೇಕು. ಅದನ್ನು ಕಣ್ಣಾರೆ ನೋಡುತ್ತ ನಾವು ಉಪೇಕ್ಷೆಯಿಂದ ಇರುವದು ನಮಗೆ ಅತ್ಯಂತ ಅಶ್ರೇಯಸ್ಕರವು. ಹಿಂದೆ ದಿಲೀಪನೆಂಬ ರಾಜನು ದೇವಲೋಕದ ಧೇನುವಿಗೆ ವಂದಿಸದೆ ಉಪೇಕ್ಷೆ ಮಾಡಿದ ಮಾತ್ರದಿಂದಲೇ ಅವನ ಸಂತತಿಗೇ ತಡೆಯಾಗಿ ಹೋಯಿತು. ಆಮೇಲೆ ಅವನು ತನ್ನ ರಾಜ್ಯವೈಭವವನ್ನು ಒಂದು ಮೂಲೆಯಲ್ಲಿ ಮುದುರಿಟ್ಟು ಒಂದು ಧೇನುವಿನ ಉಪಾಸನೆಯನ್ನು ಮಾಡಿದ ಮೇಲೆಯೇ ಅವನ ಪಾಪದ ಫಲವು ಹಿಮ್ಮೆಟ್ಟಿತು. ಒಂದು ವಂದನೆಯ ಉಪೇಕ್ಷೆಗೇ ಇಷ್ಟು ಫಲವಾದರೆ ಅದರ ಮರಣವನ್ನು ನೋಡಿ ಕೂಡ ಉಪೇಕ್ಷಿಸುವದಕ್ಕೆ ಈಗಿನ ಪರಿಸ್ಥಿತಿಯಲ್ಲಿ ನಮಗೊದಗಿರುವ ದುರ್ದಶೆಯೇನೂ ಹೆಚ್ಚಲ್ಲ. ದಿಲೀಪನು ತಾನು ಉಪೇಕ್ಷಿಸಿದ ಪಾಪವನ್ನು ಹಿಮ್ಮೆಟ್ಟಿಸುವದಕ್ಕೆ ಒಂದು ಗೋವಿನ ರಕ್ಷಣೆಗಾಗಿ ತನ್ನ ದೇಹವನ್ನೇ ಒಂದು ಸಿಂಹಕ್ಕೆ ಸೂರೆಗೊಟ್ಟನೆಂದು ರಘುವಂಶಕಾವ್ಯವು ಹೇಳುತ್ತದೆ. ಈಗ ಆಕಳ ರಕ್ಷಣೆಗಾಗಿ ನಮ್ಮ ದೇಹವನ್ನಾದರೂ ಕೊಟ್ಟೇವೆಂಬಷ್ಟು ಮಾನಸಿಕ ಧಾರ್ಢ್ಯವೂ

ನಮಗಿಲ್ಲ. ಚೆನ್ನಾಗಿ ವಿಚಾರಮಾಡಿದರೆ ನಮ್ಮ ಆಕಳುಗಳ ಕೊಲೆಗೆ ಪರದೇಶೀಯರಿಗಿಂತಲೂ ನಾವೇ ಮುಖ್ಯಕಾರಣರೆಂದು ಹೇಳಬೇಕಾಗುತ್ತದೆ. ಏಕೆಂದರೆ ನಾವು ನಮ್ಮ ಆಕಳುಗಳ ಮೇಲೆ ನಿಜವಾದ ಪೂಜ್ಯಬುದ್ಧಿಯನ್ನಿಟ್ಟು ನಡೆಯುತ್ತಿದ್ದರೆ ಯಾವ ಪರದೇಶೀಯರಿಗೂ ಅವುಗಳ ಮೇಲೆ ಕೈಮಾಡುವ ಎದೆಯುಂಟಾಗುತ್ತಿರಲಿಲ್ಲ. ನಮ್ಮ ಅಶ್ರದ್ಧೆಯೇ ಅವರನ್ನು ಗೋವಧೆಯಲ್ಲಿ ಪ್ರವೃತ್ತಿ ಮಾಡಿಸಿರುವದು. ಆದ್ದರಿಂದ ನಮ್ಮ ತಪ್ಪನ್ನು ನಾವು ಮೊದಲು ತಿದ್ದಿಕೊಳ್ಳಬೇಕು. ಪ್ರತಿಯೊಬ್ಬನೂ ತನ್ನಿಂದಾದಷ್ಟು ಒಂದಿಲ್ಲೊಂದು ಬಗೆಯಲ್ಲಿ ಗೋಸೇವೆಯನ್ನು ಮಾಡಿದ ಹೊರತು ತನ್ನ ಧಾರ್ಮಿಕಕರ್ತವ್ಯವು ಸಾಗಿದಂತಾಗಲಿಲ್ಲೆಂದು ಭಾವನೆಯನ್ನು ಹೊಂದಿ ಗೋರಕ್ಷಣೆಗಾಗಿ ತನ್ನ ತನು-ಮನ-ಧನಗಳನ್ನರ್ಪಿಸಬೇಕು. ಎಂದು ಪ್ರತಿಯೊಂದು ಮನೆಯಲ್ಲಿಯೂ ಗೋಶಾಲೆಯುಂಟಾಗಿ ಶ್ರದ್ಧಾಪೂರ್ವಕವಾಗಿ ಅವುಗಳ ಉಪಾಸನೆಯು ನಡೆದು ಅಮೃತಸ್ವರೂಪವಾದ ಗೋರಸವು ಜನತೆಗೆ ದೊರೆಯುವದೊ ಅಂದು ನಮ್ಮ ಧರ್ಮವು ತಲೆಯೆತ್ತಿತೆಂದು ತಿಳಿಯಬೇಕಾಗುವದು. ಇದನ್ನರಿತು ಎಲ್ಲರೂ ಗೋಪೂಜೆಯ ವಿಷಯದಲ್ಲಿ ಆದರವನ್ನು ವಹಿಸಬೇಕು.

ಹೀಗೆ ಯಾವದಾದರೊಂದು ವಿಗ್ರಹದ್ವಾರಗಳಲ್ಲಿ ಪರಮಾತ್ಮನ ವಿಭೂತಿವಿಶೇಷಗಳೆನಿಸುವ ಗೋವಿನಂಥ ಪವಿತ್ರಸ್ಥಾನಗಳಲ್ಲಿ ಭಗವದ್ಬುದ್ಧಿಯನ್ನು ನೈಗೂಡಿಸಿಕೊಳ್ಳುತ್ತ ಹೋದರೆ ಭಕ್ತಿಯು ಚೆನ್ನಾಗಿ ಅಳವಡುವದು.

## ತೋರಿಕೆಯ ಭಕ್ತಿ.

ಭಕ್ತಿಯೆಂದರೆ ಮುಂದೆ ಹೇಳಹೋಗುವಂತೆ ಕೀರ್ತನ, ಸ್ಮರಣ-ವಂದನಾದವುಗಳಾದರೂ ಅವು ಸಾಮಾನ್ಯವಾಗಿ ಎಲ್ಲರಲ್ಲಿಯೂ ಶುದ್ಧಸ್ವರೂಪದಲ್ಲಿರುವದಿಲ್ಲ. ಪ್ರಪಂಚದಲ್ಲಿ ಆಸಕ್ತರಾದ ಅನೇಕರಲ್ಲಿ ಅದು ಬರೀ ತೋರಿಕೆಯದಾಗಿರುವದು. ತಮ್ಮಲ್ಲಿಲ್ಲದ್ದನ್ನು ಇದ್ದಂತೆ ತೋರಿಸಿಕೊಳ್ಳುವದರಲ್ಲಿಯೂ ಒಂದು ಗುಣವು ಇದೆ. ಒಳ್ಳೆಯದನ್ನು ಅನುಕರಣಮಾಡುವದು ಎಂದಿಗೂ ಕೆಡುಕಲ್ಲ. ಒಂದೂರಿನ ಒಬ್ಬ ರಾಜನು ಸಂನ್ಯಾಸಿ

ಯನ್ನಾದರೆ ಮದುವೆಯಾಗುವೆನೆಂಬ ತನ್ನ ಮಗಳನ್ನು ವರಿಸುವ ಸಂನ್ಯಾಸಿಗೆ ಅರ್ಧರಾಜ್ಯವನ್ನು ಕೊಡುವೆನೆಂದು ಡಂಗುರವನ್ನು ಹೊಡೆಸಿದನು. ಅದನ್ನು ಕೇಳಿದವರಲ್ಲಿ ಒಬ್ಬ ಕ್ಷುದ್ರಮನುಷ್ಯನು ಗಾಳಿಬಂದಾಗಲೇ ತೂರಿಕೊಳ್ಳ ಬೇಕೆಂದು ಒಡನೆ ಕಾವಿಯನ್ನು ಧರಿಸಿ ಊರ ಹೊರಕ್ಕೆ ಹೋಗಿ ತಪಸ್ವಿ ಯಂತೆ ಕುಳಿತು ನಟನೆ ಮಾಡುವದಕ್ಕಾರಂಭಿಸಿದನು. ನಮ್ಮ ದೇಶದ ಧರ್ಮಶ್ರದ್ಧೆಯ ಜನರಾಗಲೆ ಅವನಿಗೆ ನಡೆದುಕೊಳ್ಳುವದಕ್ಕಾರಂಭಿಸಿದರು. ನಮ್ಮವರಲ್ಲಿ ಒಳಗಣ ತಿರುಳನ್ನು ನೋಡುವಷ್ಟು ಅವಕಾಶವಿಲ್ಲ;

“ಕಾಷಾಯದಂಡಮಾತ್ರೇಣ ಯತಿಃ ಪೂಜ್ಯೋ ನ ಸಂಶಯಃ”

ಎಂಬ ವಾಕ್ಯವು ಹಿಂದೆ ಬಂದು ನಿಲ್ಲುವದು. ಕಾಷಾಯದಂಡಗಳಿದ್ದ ರಾಯಿತು; ಇಷ್ಟರಿಂದಲೇ ಅವನಿಗೆ ಅಡ್ಡಬೀಳಲೇಬೇಕೆಂದು ಅದರರ್ಥ. ಊರ ಹೊರಗೆ ಮಹಾಮಹಿಮನಾದ ಸಂನ್ಯಾಸಿ ಬಂದಿರುವನೆಂದು ಊರ ಲ್ಲೆಲ್ಲಾ ಸುದ್ದಿ ಹರಡಿತು. ಈ ವರ್ತಮಾನವನ್ನು ಕೇಳಿ ರಾಜನು ತನ್ನ ಮಗಳಿಗಾಗಿ ಆ ಸಂನ್ಯಾಸಿಯನ್ನು ಒಲಿಸಿಕೊಳ್ಳಬೇಕೆಂದು ಪರಿವಾರದೊ ಡನೆ ಊರ ಮುಂದಕ್ಕೆ ಬಂದು ಶ್ರದ್ಧಾಭಕ್ತಿಯುಕ್ತನಾಗಿ ವಿನಯದಿಂದ ಆ ಸಂನ್ಯಾಸಿಗೆ ವಂದನೆಯನ್ನು ಮಾಡಿದನು. ಯಾವ ರಾಜನ ದರ್ಶನವು ತನಗೆ ಸ್ವಪ್ನದಲ್ಲಿ ಕೂಡ ಅಶಕ್ಯವಾಗಿತ್ತೊ ಆ ರಾಜನು ತನ್ನ ಕಡೆಗೆ ಪಾದಚಾರಿಯಾಗಿ ಬಂದು ಅತಿವಿನಯವನ್ನು ತೋರಿಸುವದನ್ನು ನೋಡಿ ಆ ಸಂನ್ಯಾಸಿಯ ಮನಸ್ಸೇ ಬದಲಾಗಿ ಹೋಯಿತು. ಬರೀ ವೇಷಕ್ಕೇ ಇಷ್ಟು ಗೌರವವು ದೊರೆತ ಮೇಲೆ ನಿಜವಾಗಿ ವಿರಕ್ತನಾದರೆ ಇನ್ನೆಷ್ಟು ಗೌರವವಿರಬಹುದೆಂದು ಲೆಕ್ಕಮಾಡಿ ನೋಡಿ ಆ ಕ್ಷುದ್ರಮನುಷ್ಯನು ಅಂದಿನಿಂದ ನಿಜವಾದ ಸಂನ್ಯಾಸಿಯೇ ಆಗಿಬಿಟ್ಟನು. ಈ ಸ್ಥಲಕ್ಕೆ ರಾಮಾ ಯಣದ ಒಂದು ಕಥೆಯು ಚೆನ್ನಾಗಿ ಒಪ್ಪುತ್ತದೆ. ರಾವಣನು ಸೀತೆ ಯನ್ನು ಅಶೋಕವನದಲ್ಲಿಟ್ಟ ಮೇಲೆ ಆಕೆಯನ್ನು ಒಲಿಸಿಕೊಳ್ಳುವದಕ್ಕೆ ಏನು ಮಾಡಬೇಕೆಂದು ವಿಚಾರ ಮಾಡುತ್ತ ಕುಳಿತಾಗ ರಾಮರೂಪವನ್ನೇ ಧಾರಣಮಾಡಿಕೊಂಡು ಹೋಗಿ ವಂಚಿಸಿಬಿಟ್ಟರಾಯಿತೆಂದು ಒಬ್ಬರು ಹೇಳಿದರು. ಕಾಮರೂಪಿಯಾದ ರಾವಣನಿಗೆ ಬೇಕಾದ ರೂಪವನ್ನು ಧಾರ ಣಮಾಡುವದು ಸಾಧ್ಯವಾಗಿತ್ತು. ಆದರೆ ಪರನಾರೀಸಹೋದರನಾದ

ರಾಮನ ರೂಪವನ್ನು ಮನಸ್ಸಿಗೆ ತಂದುಕೊಳ್ಳುತ್ತಲೇ ಸೀತೆಯು ವಿಷಯಕವಾದ ಭಾವನೆಯೇ ಬದಲಾಗುವದರಿಂದ ಅದು ತನಗೆ ಸಾಧಕವಲ್ಲವೆಂದು ರಾವಣನು ಹೇಳಿದ್ದಾನೆ. ರಾಮನ ತೋರಿಕೆಯ ರೂಪದ ವಿಚಾರವು ಕೂಡ ಈ ಬಗೆಯ ಪರಿಣಾಮವನ್ನುಂಟುಮಾಡಿತೆಂದಮೇಲೆ ಒಳ್ಳೆಯದನ್ನು ಅನುಕರಣ ಮಾಡುವದರಲ್ಲಿ ಒಂದು ಗುಣವೂ ಉಂಟೆಂದಾಯಿತು. ಆದರೆ ತೋರಿಕೆಗಾಗಿ ಮಾತ್ರ ಅದನ್ನು ಮಾಡಬೇಕೆಂಬ ಉದ್ದೇಶವು ಕೆಟ್ಟದು. ಮೊದಮೊದಲು ಒಂದು ಯೋಗ್ಯತೆಯು ಇಲ್ಲದಿದ್ದಾಗ ಅದನ್ನು ತೋರಿಕೆಯಿಂದಾರಂಭಿಸಿದರೂ ಆ ಯೋಗ್ಯತೆಯನ್ನು ಮೆಯ್ಗೂಡಿಸಿಕೊಳ್ಳುವದಕ್ಕೆ ಎಡೆಬಿಡದೆ ಪ್ರಯತ್ನವನ್ನು ಮಾಡುತ್ತಿರಬೇಕು.

ತೋರಿಕೆಯು ನಮ್ಮ ಧ್ಯೇಯವಲ್ಲ. ತೋರಿಕೆಯೇ ಮುಂದೆ ಅದನ್ನು ನಮ್ಮ ಸ್ವಭಾವವಾಗಿ ಮಾಡಲೆಂದು ಸುಮ್ಮನಿರುವದು ವಿವೇಕವಲ್ಲ. ಅದು ಎಂದಿಗೆ ಸಾಧ್ಯವೋ? ಹೇಳುವದಕ್ಕೆ ಬರುವದಿಲ್ಲ. ನಮ್ಮ ತೋರಿಕೆಯಿಂದ ಜನರನ್ನು ಮೋಸಗೊಳಿಸಿದಂತೆ ಮಾತ್ರ ಆಗಿಯೇ ಆಗುವದು. ಇದು ಆಗಬಾರದು. ಆದ್ದರಿಂದ ಬರೀ ತೋರಿಕೆ ಪ್ರಶಸ್ತವಲ್ಲ. ತೋರಿಕೆಯ ಭಕ್ತಿಯನ್ನು ಭಗವಾನ್ನಾರದರು

"ತದ್ವಿಹೀನಂ ಜಾರಾಣಾಮಿವ"

ಎಂಬ ಸೂತ್ರದಿಂದ ನಿಂದಿಸಿದ್ದಾರೆ. ಭಗವಂತನ ಮಾಹಾತ್ಮ್ಯಜ್ಞಾನವನ್ನು ನೆನಪಿನಲ್ಲಿಟ್ಟುಕೊಂಡಿರದೆ ಹೊರಗೆ ತೋರಿಸುವ ಪ್ರೀತಿಯು ಜಾರರ ಪ್ರೀತಿಯಂತೆ ಎಂದರ್ಥ. ಜಾರರಾದ ಗಂಡಸರೂ ಹೆಂಗಸರೂ ಒಬ್ಬರ ಗುಣವನ್ನು ಮತ್ತೊಬ್ಬರು ಅರಿಯದೆ ಬರೀ ತಮ್ಮ ತಮ್ಮ ತಾತ್ಕಾಲಿಕ ಸುಖವನ್ನುದ್ದೇಶವಾಗಿಟ್ಟುಕೊಂಡು ಒಬ್ಬರ ಮೇಲೊಬ್ಬರು ಪ್ರೇಮವನ್ನು ತೋರಿಸುತ್ತಿರುತ್ತಾರೆ. ಪರಮಾತ್ಮನ ಮಾಹಾತ್ಮ್ಯದ ಜ್ಞಾನವಿಲ್ಲದೆ ಪರಮಾತ್ಮನ ಮೇಲೆ ಪ್ರೀತಿಮಾಡುವದು ಆ ಜಾರರ ಪ್ರೀತಿಯಂತೆ ಇರುವದು. ಈ ತೋರಿಕೆಯ ಭಕ್ತಿಯ ವಿಷಯದಲ್ಲಿ ಶ್ರೀರಾಮಕೃಷ್ಣಪರಮಹಂಸರು ಹೇಳಿರುವದೇನೆಂದರೆ

(೧) ಪ್ರಾಪಂಚಿಕರು "ಹರಿ, ಹರಿ" ಎಂದು ನಾಮಸ್ಮರಣೆಯನ್ನು ಮಾಡುತ್ತ ಪ್ರಾಪಂಚಿಕಫಲಾಭಿಲಾಷೆಯಿಂದ ಬಗೆಬಗೆಯ ಧರ್ಮಕಾರ್ಯ

ಗಳನ್ನು ಮಾಡುವರು. ಆದರೆ ಅವರಿಗೆ ಏನಾದರೊಂದು ಅಪಾಯವಾಗಲಿ, ದುಃಖವಾಗಲಿ, ಬಡತನವಾಗಲಿ, ಮರಣವಾಗಲಿ ಒದಗಿದರೆ ಅವರು ದೇವರನ್ನು ಮರೆತುಬಿಡುವರು. ಅವರು ಗಿಣಿಗಳ ಹಾಗೆ. ಹೇಗೆಂದರೆ ಗಿಳಿಗಳು ಯಾವಾಗಲೂ "ರಾಧಾಕೃಷ್ಣ, ರಾಧಾಕೃಷ್ಣ" ಎಂದು ಪರಮಾತ್ಮನ ನಾಮಗಳನ್ನು ಕೂಗುತ್ತಿರುತ್ತವೆ. ಆದರೆ ಬೆಕ್ಕು ಹಿಡಿಯುವದಕ್ಕೆ ಬಂದಾಗ ಪರಮಾತ್ಮನ ನಾಮವನ್ನು ಮರೆತು ಅಕ್ಕಾ.. ಕ್ಯಾ.... ಕ್ಯಾ ಎಂದು ಚೀರುತ್ತವೆ.

(೨) ಒಂದು ಒಗೆಯ ಹಾಸಿಗೆ (Spring cushion) ಇರುತ್ತದೆ. ಅದನ್ನು ತೂಗುವ ಹಾಸಿಗೆ ಎನ್ನಬಹುದು. ಅದರ ಮೇಲೆ ಯಾರಾದರೂ ಕುಳಿತುಕೊಂಡರೆ ಅದು ಆ ಭಾರದ ದೆಸೆಯಿಂದ ಕುಸಿಯುತ್ತದೆ. ಅವರು ಎದ್ದ ಕೂಡಲೆ ಅದು ಮೊದಲಿನಂತೆ ಆಗುತ್ತದೆ. ಪ್ರಾಪಂಚಿಕರ ಸ್ಥಿತಿಯೂ ಹಾಗೆಯೇ. ಅವರಿಗೆ ಧಾರ್ಮಿಕವಿಚಾರಗಳು ಕಿವಿಗೆ ಬೀಳುತ್ತಿರುವ ವರೆಗೂ ಅವರಲ್ಲಿ ಭಕ್ತಿಭಾವವೂ ಧರ್ಮಶ್ರದ್ಧೆಯೂ ತುಂಬಿರುವವು. ಆದರೆ ಅವರು ತಮ್ಮ ಪ್ರಪಂಚವ್ಯವಹಾರದ ದಿನಚರ್ಯೆಯನ್ನು ಕೈಕೊಳ್ಳುತ್ತಲೇ ಆ ಪೂಜ್ಯತಮವಾದ ವಿಚಾರಗಳನ್ನೆಲ್ಲಾ ಮರೆತು ಮೊದಲಿನಂತೆ ಅಶುದ್ಧರಾಗುತ್ತಾರೆ.

(೩) ಕಬ್ಬಿಣದ ಕಂಬಿಯು ಕೊಲುಮೆಯಲ್ಲಿರುವವರೆಗೂ ಕೆಂಪಗೆ ಕೆಂಡವಾಗಿರುತ್ತದೆ. ಆದರೆ ಹೊರಕ್ಕೆ ತೆಗೆಯುತ್ತಲೇ ಅದು ಕಪ್ಪಾಗುತ್ತದೆ. ಪ್ರಾಪಂಚಿಕರೂ ಹಾಗೆಯೇ. ಅವರಿಗೆ ದೇವರ ಸಾನ್ನಿಧ್ಯದಲ್ಲಿ ಅಥವಾ ಭಕ್ತರ ಸಹವಾಸದಲ್ಲಿ ಇದ್ದಾಗ ಮಾತ್ರ ಧಾರ್ಮಿಕಭಾವನೆ ಇರುತ್ತದೆ. ಆ ಸ್ಥಳಗಳನ್ನು ಬಿಟ್ಟು ಬರುತ್ತಲೆ ಅವರು ಅವುಗಳನ್ನೆಲ್ಲ ಕಳೆದುಕೊಳ್ಳುತ್ತಾರೆ.

## ದುಸ್ಸಂಗ.

ತೋರಿಕೆಯ ಭಕ್ತಿಯನ್ನು ನಿಂದಿಸಿದ ಮೇಲೆ ನಿಜವಾದ ಭಕ್ತಿಯ ಸ್ವರೂಪವನ್ನು ಹೇಳುವದಕ್ಕಾರಂಭಿಸಬೇಕು. ಇನ್ನು ಅದರ ಸರಿಯಾದ ಸಾಧನವನಾರಂಭಿಸುವದಕೆ, ಮೊದಲು ಅದರ ವಿರುದ್ಧ ಸಾಮಗ್ರಿಯನ್ನು.

ಕಳೆದುಕೊಳ್ಳುವದು ಅಗತ್ಯವಾಗಿದೆ. ಅದು ಯಾವದೆಂದರೆ ದುಸ್ಸಂಗ. ಇದರ ವಿಷಯದಲ್ಲಿ ಭಗವಾನ್ ನಾರದರು ತಮ್ಮ ಸೂತ್ರಗಳಲ್ಲಿ ಎಚ್ಚರಿಕೆಯನ್ನು ಕೊಟ್ಟಿರುವದೇನೆಂದರೆ—

“ ದುಸ್ಸಙ್ಗಃ ಸರ್ವಥೈವ ತ್ಯಾಜ್ಯಃ ।
ಕಾಮಕ್ರೋಧಮೋಹಸ್ಮೃತಿಭ್ರಂಶಬುದ್ಧಿನಾಶಸರ್ವನಾಶಕಾರಣತ್ವಾತ್ ॥”

ಎಂದರೆ ಕೆಟ್ಟಸಹವಾಸವನ್ನು ಎಲ್ಲಾ ಬಗೆಯಿಂದಲೂ ಬಿಡಬೇಕು; ಏಕೆಂದರೆ ಕೆಟ್ಟ ಸಂಗವು ಆಸೆ, ಸಿಟ್ಟು, ಭ್ರಾಂತಿ, ಮರವೆ, ಬುದ್ಧಿಯನ್ನು ಕಳೆದುಕೊಳ್ಳುವದು, ಕೊನೆಗೆ ಎಲ್ಲವನ್ನೂ ಕಳೆದುಕೊಳ್ಳುವದು— ಇಷ್ಟಕ್ಕೆ ಕಾರಣವಾಗುವದು.

ಇದರ ವಿಷಯದಲ್ಲಿ ಶ್ರೀರಾಮಕೃಷ್ಣಪರಮಹಂಸರ ಅಭಿಪ್ರಾಯ—

(೧) ಹುಲಿಯಲ್ಲಿಯೂ ಪರಮಾತ್ಮನಿರುವನೆಂಬುದು ನಿಜವು. ಆದರೆ ನಾವು ಅದಕ್ಕೆ ಎದುರುಬಿದ್ದು ನಿಂತುಕೊಳ್ಳಬಾರದು. ಹಾಗೆಯೇ ದುರ್ಜನರ ಹೃದಯದಲ್ಲಿಯೂ ಪರಮಾತ್ಮನಿರುವನು. ಆದರೆ ನಾವು ಅವರೊಡನೆ ಸೇರುವದು ಯೋಗ್ಯವಲ್ಲ

(೨) ಅದ್ಭುತವ್ಯಾಪಾರವನ್ನು ತೋರಿಸುವವರ ಬಳಿಗೆ ಹೋಗಬೇಡ. ಅವರು ಸತ್ಯದ ದಾರಿಯನ್ನು ತಪ್ಪಿಸಿ ಅಡ್ಡದಾರಿಯನ್ನು ಹಿಡಿಸುವರು. ಅವರ ಮನಸ್ಸೆಲ್ಲ ಯೋಗಶಕ್ತಿಯೆಂಬ ಬಲೆಯ ಕಣ್ಣುಗಳ ಕೂಡಕಿಗೆ ಬಿದ್ದು ಆತ್ಮಾನ್ವೇಷಣವನ್ನು ಬಿಡುವದು. ಆ ಶಕ್ತಿಗಳ ವಿಷಯದಲ್ಲಿ ಎಚ್ಚರಿಕೆಯಾಗಿರಿ; ಅವುಗಳನ್ನುಪೇಕ್ಷಿಸಬೇಡಿ.

(೩) ನೀರೆಲ್ಲ ಸರ್ವೇಶ್ವರನಾದ ಶ್ರೀಮನ್ನಾರಾಯಣನ ಪಾದದಲ್ಲಿ ಹುಟ್ಟಿದ ಗಂಗೆಯು. ಆದರೆ ಎಲ್ಲ ನೀರೂ ಕುಡಿಯುವದಕ್ಕೆ ಯೋಗ್ಯವಲ್ಲ. ಹಾಗೆಯೇ ದೇವರು ಎಲ್ಲ ಕಡೆಯೂ ಇದ್ದರೂ ಎಲ್ಲ ಸ್ಥಲಗಳೂ ಮನುಷ್ಯರಿಗೆ ಯಾತ್ರಾಸ್ಥಲಗಳಲ್ಲ. ಒಂದು ಕಡೆಯ ನೀರನ್ನು ಕಾಲು ತೊಳೆದುಕೊಳ್ಳುವದಕ್ಕೆ ಉಪಯೋಗಿಸಬಹುದು; ಮತ್ತೊಂದು ಕಡೆಯದು ಕುಡಿಯುವದಕ್ಕೆ ಉಪಯೋಗವಾಗಬಹುದು; ಉಳಿದ ಕಡೆಗಳ ನೀರು ಮುಟ್ಟುವದಕ್ಕೆ ಕೂಡ ಯೋಗ್ಯವಲ್ಲದೆ ಇರಬಹುದು. ಸ್ಥಲಗಳ ವಿಷಯವೂ ಹಾಗೆಯೇ. ನಾವು ಕೆಲವು ಸ್ಥಲಗಳ ಸಮೀಪಕ್ಕೆ ಹೋಗ

ಬಹುದು; ಇನ್ನು ಕೆಲವು ಸ್ಥಲಗಳು ಒಳಹೊಕ್ಕು ಇರಬಹುದು; ಉಳಿದ ಸ್ಥಲಗಳನ್ನು ದೂರದಲ್ಲಿಯೇ ಬಿಡಬೇಕಾಗಿರುವದು.

(೪) ಸಣ್ಣ ಗಿಡಕ್ಕೆ ಯಾವಾಗಲೂ ಕುರಿಮೇಕೆಗಳು, ದನಕರುಗಳು ಮತ್ತು ಮಕ್ಕಳುಮರಿಗಳ ಬಾಧೆ ತಗಲದಂತೆ ಬೇಲಿ ಇರಬೇಕಾದುದಗತ್ಯ. ಆದರೆ ದೊಡ್ಡದಾಗಿ ಬೆಳೆದ ಮೇಲೆ ಕುರಿಮೇಕೆಗಳು ಮತ್ತು ದನಕರುಗಳ ಮಂದೆಮಂದೆಗಳೇ ಅದರ ನೆರಳಲ್ಲಿ ನಿಂತು ಅದರ ಎಲೆಗಳನ್ನಲ್ಲಿ ಹೊಟ್ಟೆ ಬಿರಿಯುವಷ್ಟು ಮೇಯಬಹುದು. ನಿಮ್ಮಲ್ಲಿ ವಿಶ್ವಾಸವಿನ್ನೂ ಬಲಿಯದೆ ಇರುವಾಗ ನೀವು ಕೆಟ್ಟ ಸಹವಾಸದ ಮತ್ತು ಪ್ರಾಪಂಚಿಕ ವಿಷಯಗಳ ಹಾವಳಿಗೆ ಸಿಕ್ಕದಂತೆ ಕಾಪಾಡಿಕೊಳ್ಳಬೇಕು. ವಿಶ್ವಾಸವು ದೃಢವಾಗಿ ಬಲಿತ ಮೇಲೆ ನಿಮ್ಮ ಪವಿತ್ರಸಾನ್ನಿಧ್ಯಕ್ಕೆ ಯಾವ ಪ್ರಾಪಂಚಿಕಪ್ರವೃತ್ತಿಯೂ ದುರಿಚ್ಛೆಯೂ ತಲೆ ಹಾಕುವದಕ್ಕೆ ಆಗುವದಿಲ್ಲ. ನಿಮ್ಮ ಪವಿತ್ರತೆಯ ಸಂಸರ್ಗದಿಂದಲೇ ದುಷ್ಟರಾದ ಎಷ್ಟೋ ಜನರು ದೈವೀ ಸಂಪತ್ತನ್ನು ಪಡೆಯುವರು.

ವೀರಶೈವಮತಶಾಸ್ತ್ರಕಾರರ ಅಭಿಪ್ರಾಯ—

(೧) ದುರುಳ ದುರ್ಜನರ ಸಂಗ ಬೇಡವಯ್ಯ. ಅವ ಹಾವಾದಡೇನು ? ವಿಷ ಒಂದೇ. ಅಂತವರ ಸಂಗ ಬೇಡವಯ್ಯ. ಅಂತರಂಗದ ಆತ್ಮಶುದ್ಧವಿಲ್ಲದವರ ಸಂಗವು ಸಿಂಗಿ ಕಾಳಕೂಟ ವಿಷವು ಕೂಡಲಸಂಗಮದೇವಾ.

(೨) ಬಂದಕ್ಕೊಂದು ನುಡಿದು, ಕಣ್ಣು ಕೆಂಪನೆ ಮಾಡಿ, ಗಂಡುಗೆದರಿ ಮುಂದುವರಿಕ್ಕುವ ಕೆಲರ ಕಂಡು ಅಂಜುವೆನೋ ಸದಾಶಿವ. ಬಡಿವೆನೆಂದು ಭಂಗವಾದಡಾಗಲಿ ನಮ್ಮ ಕೂಡಲಸಂಗನ ಶರಣಾನುಭವವಿಲ್ಲದವರ ಮೋಲಮೋರೆಯ ಹೊದ್ದೆ. ಹೊಲ ಬಿನ್ನೋಪವೆ.

## ಸತ್ಸಂಗ.

ಇನ್ನು ನಿಜವಾದ ಭಕ್ತಿಯನ್ನು ಆರಂಭಿಸಬಹುದು. ಅದು —

“ ಸತಾಂ ಸಂಗೈರೇವಾತ್ರ ಸಾಧನಂ ಪ್ರಥಮಂ ಸ್ಮೃತಂ ”

ಎಂಬ ಅಧ್ಯಾತ್ಮರಾಮಾಯಣದ ಉಕ್ತಿಯಂತೆ ಸತ್ಸಂಗದಿಂದ ಮೊದಲಾಗುತ್ತದೆ. ಸಾಧುಗಳು ಯಾರೆಂಬ ವಿಷಯದಲ್ಲಿ ಯೋಗವಾಸಿಷ್ಠದಲ್ಲಿ—

“ ಅನನ್ತಂ ಸಮತಾನನ್ದಂ ಪರಮಾರ್ಥಂ ವಿದುರ್ಬುಧಾಃ ।
ಸ ಯೇಭ್ಯಃ ಪ್ರಾಪ್ಯತೇ ನಿತ್ಯಂ ತೇ ಸೇವ್ಯಾಃ ಶಾಸ್ತ್ರಸಾಧವಃ ॥ ”

ಎಂದು ಹೇಳಿದೆ. ಅಖಂಡವಾಗಿ ಸಮತ್ವರೂಪವಾಗಿರುವ ಆನಂದವೇ ಪರಮಾರ್ಥವಾದ್ದರಿಂದ ಅದು ಯಾರಿಂದ ನಮಗೆ ದೊರೆಯುವದೋ ಅಂಥ ಸಾಧುಗಳನ್ನು ಶಾಸ್ತ್ರಗಳನ್ನು ಸೇವಿಸಬೇಕೆಂದರ್ಥ. ಅಂಥ ಸಾಧುಗಳ ಸಹವಾಸವು ದೊರೆತ ಮೇಲಿಂದೇ ಭಕ್ತಿಪಂಥವು ಮುಂದೆ ಸಾಗುವದು. ಅಥವಾ ಮುಂದೆ ಸಾಗುವದೇನು ! ಒಂದು ದೃಷ್ಟಿಯಿಂದ ನೋಡಿದರೆ ಭಕ್ತಿಪಂಥದಲ್ಲಿ ಅದೇ ಬೀಜಸ್ಥಾನ. ಭಾಗವತಗ್ರಂಥದಲ್ಲಿ—

“ ತೇ ನಾಧೀತಶ್ರುತಿಗಣಾ ನೋಪಾಸಿತಮಹತ್ತಮಾಃ ।
ಅವ್ರತಾತಪ್ತತಪಸಃ ಸತ್ಸಂಗಾನ್ಮಾಮುಪಾಗತಾಃ ॥ ”

ಎಂಬ ಶ್ಲೋಕವಿದೆ. ಯಾರು ವೇದಶಾಸ್ತ್ರಗಳನ್ನು ಓದುವ ಆಯಾಸವನ್ನು ತೆಗೆದುಕೊಂಡಿಲ್ಲವೋ ಯಾರು ಅಪ್ರತಿಮಪಂಡಿತರನ್ನು ಸೇವಿಸುವ ಶ್ರಮೆಯನ್ನು ವಹಿಸಿಲ್ಲವೋ ಯಾರು ವ್ರತಗಳಿಂದಲೂ ತಪಸ್ಸಿನಿಂದಲೂ ದೇಹದಂಡನೆಯನ್ನು ಮಾಡಿಲ್ಲವೋ ಅಂಥವರು ಕೂಡ ಬರೀ ಸತ್ಸಂಗದ ಪ್ರಭಾವದಿಂದ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗುವರೆಂದರ್ಥ. ಈಗ ಭಕ್ತ್ಯಾಚಾರ್ಯರೆಂದು ಪ್ರಸಿದ್ಧರಾಗಿರುವ ಭಗವಾನ್ ನಾರದರು ಪೂರ್ವದಲ್ಲಿ ಒಬ್ಬ ದಾಸಿಯ ಪುತ್ರರಾಗಿದ್ದರು. ತನ್ನ ತಾಯಿಯು ದಾಸಿಯಾಗಿದ್ದ ಮನೆಗೆ ಒಬ್ಬರು ಸಂನ್ಯಾಸಿಗಳು ಬಂದು ಒಂದು ಚಾತುರ್ಮಾಸ್ಯವಿದ್ದರು. ದಾಸಿಯ ಪುತ್ರನಿಗೆ ಆ ಸಂನ್ಯಾಸಿಗಳ ಅನುಗ್ರಹದಿಂದ ಆ ಜನ್ಮದಲ್ಲಿ ಉತ್ಕಟವಾದ ತಪಸ್ಸು ಸಾಗಿ ಮುಂದಿನ ಜನ್ಮದಲ್ಲಿಯೇ ನಾರದರ ಜನ್ಮ ಬಂತು. ಸಾಧುಗಳ ಸಹವಾಸದ ಫಲವು ವಿಲಕ್ಷಣವಾದದ್ದು. ಇದರ ವಿಷಯದಲ್ಲಿ ಜ್ಞಾನಸಿಂಧುವೆಂಬ ಗ್ರಂಥದಲ್ಲಿ ಒಂದು ಕಥೆ ಬಂದಿದೆ. ಅದರ ತಾತ್ಪರ್ಯವೇನೆಂದರೆ— ನಾರದರು ಒಮ್ಮೆ ಕೃಷ್ಣನ ಬಳಿಗೆ ಹೋಗಿ ಸಾಧುಗಳ ದರ್ಶನದ ಫಲವೇನೆಂದು ಕೇಳಿದರು. ಶ್ರೀಕೃಷ್ಣನು ಸ್ವಲ್ಪ ಹೊತ್ತು ಯೋಚಿಸಿ “ ಒಂದು ಕಡೆ ಒಂದು ಸಗಣಿಯ ಹುಳುವಿರುವದು; ಅದನ್ನು ಕೇಳು; ತಿಳಿಯುತ್ತದೆ ” ಎಂದು ಹೇಳಿದನು. ನಾರದರು ಅದ

ರಂತೆ ಹೋಗಿ ಆ ಹುಳುವನ್ನು ಕೇಳುತ್ತಲೇ ಅದು ತನ್ನ ಕಣ್ಣನ್ನು ತೆರೆದು ನೋಡಿ ಹಾಗೆಯೇ ಕಣ್ಣು ಮುಚ್ಚಿಬಿಟ್ಟಿತು. ಮತ್ತೆ ಕಣ್ಣು ಬಿಡಲೇ ಇಲ್ಲ. ನಾರದರು ತಿರುಗಿಬಂದು ನಡೆದ ಸಂಗತಿಯನ್ನು ಕೃಷ್ಣನಿಗೆ ಹೇಳಿದರು. ಕೃಷ್ಣನು ಇನ್ನು ಕೆಲವು ದಿವಸಗಳ ಮೇಲೆ ಹೇಳುತ್ತೇನೆಂದು ಸುಮ್ಮನಾಗಿ ಬಹಳ ದಿನಗಳ ಮೇಲೆ ಮತ್ತೆ ಅವರು ಬಂದು ಕೇಳಿದಾಗ “ಒಂದು ಸ್ಥಲದಲ್ಲಿರುವ ವಿಷ್ಣುದೇವಾಲಯದ ಮೇಲೆ ಕುಳಿತಿರುವ ಹಂಸೆಯನ್ನು ಕೇಳು” ಎಂದು ಹೇಳಿದನು. ನಾರದರು ಅಲ್ಲಿಗೆ ಹೋಗಿ ತಮ್ಮ ಮಹತೀವೀಣೆಯನ್ನು ಮೀಟುತ್ತಲೇ ಅದು ಗರಕ್ಕನೆ ತಿರುಗಿ ಅವರನ್ನು ನೋಡಿ ಒಡನೆ ಸತ್ತುಬಿತ್ತು. ಹೀಗೇಕಾಯಿತೆಂಬುದನ್ನು ತಿಳಿಯದೆ ನಾರದರು ಮತ್ತೆ ಕೃಷ್ಣನ ಬಳಿಗೆ ಹೋಗಿ ಆದ ಸಂಗತಿಯನ್ನು ಹೇಳಿದರು. ಮುಂದಿನ ಸಲ ನಿಜಸ್ಥಿತಿಯನ್ನು ತಿಳಿಸಿಯೇ ಬಿಡುವೆನೆಂದು ಸಮಾಧಾನವನ್ನು ಹೇಳಿ ಕೃಷ್ಣನು ಆ ಸಲವೂ ನಾರದರನ್ನು ಕಳುಹಿಸಿಬಿಟ್ಟನು. ಈ ರಹಸ್ಯವನ್ನು ತಿಳಿಯಬೇಕೆಂದು ನಾರದರ ಇಚ್ಛೆಯು ಮತ್ತಷ್ಟು ಉತ್ಕಟವಾಯಿತು. ಮತ್ತೊಮ್ಮೆ ಅವರು ಬೇಗ ಬಂದರು. “ಈ ಸಲ ಒಂದು ಸ್ಥಲದಲ್ಲಿ ಹುಟ್ಟಿರುವ ಗಂಡು ಕೂಸನ್ನು ಕೇಳಬೇಕು” ಎಂದ ಕೃಷ್ಣನ ಮುಖದಿಂದ ಬಂತು. ನಗಣಿಯ ಹುಳುವೂ ಹಂಸವೂ ದಿಕ್ಕಿಲ್ಲದ ಪ್ರಾಣಿಗಳು. ಅವುಗಳ ಗತಿಯೇ ಆ ಶಿಶುವಿಗಾದರೆ ಮನೆಯವರು ತಮ್ಮನ್ನು ಸುಮ್ಮನೆ ಬಿಡರೆಂದೂ ಈ ಬಗೆಯ ವಿನೋದಗಳನ್ನು ಬಿಟ್ಟು ನಿಜಸ್ಥಿತಿಯನ್ನು ಹೇಳೆಂದೂ ನಾರದರು ಕೃಷ್ಣನಿಗೆ ಗಟ್ಟಿಯಾಗಿ ಗಂಟುಬಿದ್ದರು. ಈ ಸಲ ಇಂಥ ಅಪಾಯವೇನೂ ಇಲ್ಲವೆಂದು ಕೊನೆಗೆ ಕೃಷ್ಣನು ತನ್ನ ಭಕ್ತರ ಆಣೆಯನ್ನು ಹೊತ್ತನು. ಆಗ ನಾರದರು ಇನ್ನು ಹಿಂದುಮುಂದು ನೋಡಬಾರದೆಂದು ಆ ಸ್ಥಲಕ್ಕೆ ಹೋಗಿ ಆ ಕೂಸನ್ನು ನೋಡಬೇಕೆಂದಪೇಕ್ಷಿಸಿದರು. ದೇವರ್ಷಿಗಳ ದರ್ಶನದಿಂದ ಮಗುವಿಗೆ ಶ್ರೇಯಸ್ಸೇ ಆಗುವದೆಂದು ಮನೆಯವರು ಕೂಸನ್ನು ಒಂದು ಮೊರದಲ್ಲಿ ಮಲಗಿಸಿಕೊಂಡು ತಂದು ತೋರಿಸಿದರು. ಮಹತೀವೀಣೆಯಿಂದ ಮೃದುಮಧುರಸ್ವರವು ಹೊರಡುತ್ತಲೇ ಶಿಶುವು ಆನಂದಪರವಶವಾಗಿ ನಾರದರನ್ನು ದಿಟ್ಟಿಸಿ ನೋಡಿ ಒಡನೆ ಕಂಪಿಸತ್ರ

ಗದಾಧಾರಿಯಾದ ರೂಪವನ್ನು ವಹಿಸಿ "ನಾರದರೇ, ನಾನು ಮೊದಲು ಸಗಣಿಯ ಹುಳುವಾಗಿದ್ದೆನು; ಅಲ್ಲಿ ತಾವು ದರ್ಶನವನ್ನು ಕೊಟ್ಟದ್ದರಿಂದ ಉತ್ತಮವಾದ ಹಂಸವಾದೆನು; ಮತ್ತೆ ತಾವು ದರ್ಶನವನ್ನು ಕೊಟ್ಟದ್ದರಿಂದ ಸಜ್ಜನರ ಮನೆಯ ಶಿಶುವಾದೆನು; ಇಲ್ಲಿಯೂ ತಾವು ದರ್ಶನವನ್ನು ಕೊಟ್ಟದ್ದರಿಂದ ಮನುಷ್ಯಜನ್ಮವನ್ನು ಬಿಟ್ಟು ಸಾರೂಪ್ಯಮುಕ್ತಿಯನ್ನೇ ಪಡೆದೆನು; ಇದೇ ಸಂತರ ದರ್ಶನದ ಫಲ" ಎಂದು ವೈಕುಂಠಕ್ಕೆ ಹೊರಟಿತು. ಇದನ್ನೆಲ್ಲಾ ನೋಡಿ ನಾರದರು ಆಶ್ಚರ್ಯಭರಿತರಾದರು. ಈ ಪರಿಣಾಮದ ಅರ್ಥವನ್ನು ಸರ್ವಜ್ಞನು—

"ಭಕ್ತರೊಡನಾಡುವುದು । ಭಕ್ತರೊಡಗೂಡುವುದು ।
ಭಕ್ತರೊಳ್ಪುಕ್ಕಿ ವರಿಸಿಪ್ಪ ಭಕ್ತನೇ ।
ಮುಕ್ತನಾಗಿಹನು ಸರ್ವಜ್ಞ ॥"

ಎಂಬ ಪದ್ಯದಲ್ಲಿ ಹೇಳಿರುವನು. ಭಕ್ತರ ಸಹವಾಸದ ವಿಷಯದಲ್ಲಿ ಶ್ರೀ ರಾಮಕೃಷ್ಣಪರಮಹಂಸರು ಹೇಳುವುದೇನೆಂದರೆ—

(೧) ಭಕ್ತರ ಸಹವಾಸವು ಕಲಗಚ್ಚಿನ (ಅಕ್ಕಿಯನ್ನು ತೊಳೆದ ನೀರಿನ) ಹಾಗೆ ಇದೆ. ಕಲಗಚ್ಚು ಸೆಕೆಯನ್ನು ಇಳಿಸುತ್ತದೆ. ಹಾಗೆಯೇ ಭಕ್ತರ ಸಹವಾಸವು ಪ್ರಾಪಂಚಿಕರಿಗೆ ಇರುವ ಬಹುಬಗೆಯ ಹಂಬಲಿಕೆಯ ಅಮಲನ್ನು ಹೋಗಲಾಡಿಸುತ್ತದೆ.

(೨) ನಾವು ಹೇಗೆ ನಮ್ಮ ಜೀವಿತಕಾಲವನ್ನು ಕಳೆಯಬೇಕು? ಒಲೆಯಲ್ಲಿರುವ ಬೆಂಕಿಯು ಆರಿ ಹೋಗದಂತೆ ಮತ್ತು ಆಗಾಗ ಹೊತ್ತಿಕೊಳ್ಳುವಂತೆ ಊದುಗೊಳವಿಯಿಂದ ಊದುವ ಹಾಗೆ ಮನಸ್ಸನ್ನು ಆಗಾಗ ಭಕ್ತರ ಸಹವಾಸದಿಂದ ಆಗುವ ಉತ್ತೇಜನಕ್ಕೆ ಒಳಪಡಿಸುತ್ತಿರಬೇಕು.

(೩) ಹಸೀ ಮರವು ಬೆಂಕಿಯ ಮೇಲೆ ಇಟ್ಟಾಗ ಮೊದಲು ಒಣಗಿ ಆಮೇಲೆ ಉರಿಯುತ್ತದೆ. ಹಾಗೆಯೇ ಸಾಧುಗಳ ಸಹವಾಸವು ಪ್ರಾಪಂಚಿಕಸ್ತ್ರೀಪುರುಷರ ಹೃದಯದಲ್ಲಿರುವ ದುರಾಶೆಯೆಂಬ ತೇವವನ್ನು ಮೊದಲು ಹೋಗಲಾಡಿಸುತ್ತದೆ. ಆಮೇಲೆ ಅವರಲ್ಲಿ ವಿವೇಕವೆಂಬ ಬೆಂಕಿಯು ಪ್ರಜ್ವಲಿಸುತ್ತದೆ.

ಈ ವಿಷಯದಲ್ಲಿ ಶ್ರೀಸಮರ್ಥ ರಾಮದಾಸರು "ಮನಾಚೆ ಶ್ಲೋಕ" ಎಂಬ ಗ್ರಂಥದಲ್ಲಿ ಉಪದೇಶವನ್ನು ಮಾಡಿರುವದರ ಕನ್ನಡದ ಅನುವಾದವಾಗಿ ನಮ್ಮ ಮನಸ್ಸಿಗುಪದೇಶವೆಂಬ ಪುಸ್ತಕದಲ್ಲಿರುವದೇನೆಂದರೆ—

ಸಾಂಗತ್ಯ ॥ ಸಾಧುಸಂಗತಿಯನ್ನು ಮಾಡಿ ನೋಡಲು ದುಷ್ಟ ।
ವಾದ ವೃತ್ತಿಯುವೊಳ್ಳಿತಹುದು ॥
ಸಾಧಿಸಿ ಸನ್ಮಾರ್ಗದಲಿ ನಿಲಿಪ್ಪುದು ದುಷ್ಟ ।
ವಾದ ಕಾಲನ ಭಂಗಿಸುವದು ॥
ಅರಿವ ತಿಳಿದೇನು ತತ್ತ್ವವ ತಿಳಿದೇನು ? ।
ಸರಿಗಮಗಳ ತಿಳಿದೇನು ? ॥
ಬರಿಯೋಗಯಾಗಭೋಗತ್ಯಾಗದಿಂದೇನು ।
ಸರೆ ಸಾಧುಸಂಗದಿ ಶಾಂತಿ ॥
ಮನವೆ ನೀ ಬಿಡು ಬಿಡು ಸರ್ವಸಂಗವನು ಸ ।
ಜ್ಜನರನು ಯುಕ್ತದಿ ಸೇರು ॥
ಮನವೆ ಕೇಳದು ದುಃಖವನು ಶಾಂತವಮಾಡಿ ಸಾ ।
ಧನವಾಗುವದು ಭಕ್ತಸಧಕೆ ॥

ಇನ್ನು ಇದೇ ವಿಷಯದಲ್ಲಿ ವೀರಶೈವವಚನಶಾಸ್ತ್ರಕಾರರ ಅಭಿಪ್ರಾಯವೇನೆಂದರೆ —

(೧) ಅರಿಯದವರೊಡನೆ ಸಂಗ ಮಾಡಿದರೆ ಕಲ್ಲು ಹೊಯ್ದು ಕಿಡಿಯ ತೆಗೆದುಕೊಂಬಂತೆ. ಬಲ್ಲವರೊಡನೆ ಸಂಗಮಾಡಿದರೆ ಮೊಸರು ಬೆಣ್ಣೆಯ ತೆಗೆದುಕೊಂಬಂತೆ. ಚನ್ನಮಲ್ಲಿಕಾರ್ಜುನಯ್ಯಾ, ನಿಮ್ಮ ಶರಣರ ಸಂಗ ಕರ್ಪೂರದಗಿರಿಯ ಉರಿಯುಕೊಂಬಂತೆ.

(೨) ಮಡಿಕೆಯ ಮಾಡುವರೆ ಮಣ್ಣೇ ಮೊದಲು. ತೊಡಿಗೆಯ ಮಾಡುವರೆ ಹೊನ್ನೇ ಮೊದಲು. ಶಿವಪಥವನರಿವರೆ ಗುರುಪಥವೇ ಮೊದಲು. ಕೂಡಲ ಸಂಗಮ ದೇವರನರಿವರೆ ಶರಣರ ಸಂಗವೇ ಮೊದಲು.

(೩) ಅಸತ್ಯವ ನಡೆಸುವೆನೆಂದರೆ ಮಾಣದು ; ಹೇಸತ್ತು ಬಿಟ್ಟೆನೆಂದರೆ ಮಾಣದು ; ಏನನೇವೆನೆಂದರೆ ಮಾಣದು ಕಾಯದ ಕರ್ಮದ ಫಲಭೋಗ. ಕೂಡಲ ಸಂಗನ ಶರಣರು ಬಂದು ' ಹೋ ಅಂಜದಿರು ' ಎಂದರೆ ನಾನು ಬದುಕುವೆನು.

ಇದೆಲ್ಲ ಅರ್ಥವನ್ನೂ ಗರ್ಭೀಕರಿಸಿ ಭಗವಾನ್ನಾರದರು

" ಮಹತ್ಸಂಗಸ್ತು ದುರ್ಲಭೋಽಗಮ್ಯೋಽಮೋಘಶ್ಚ "

ಎಂದೊಂದು ಸೂತ್ರದಲ್ಲಿ ಮಹಾತ್ಮರ ಸಹವಾಸವು ದೊರೆಯುವದು ಕಷ್ಟವೆಂದೂ ಅದನ್ನು ತಿಳಿಯುವದಾಗುವದಿಲ್ಲವೆಂದೂ ಅದು ಬಹು ಬೆಲೆಯುಳ್ಳದ್ದೆಂದೂ ಸತ್ಸಂಗವನ್ನು ಹೊಗಳಿ ಆ ಸತ್ಸಂಗವು ದೇವರ ಕೃಪೆಯಿಂದಲೇ ದೊರೆಯುವದೆಂದು

" ಲಭ್ಯತೇಪಿ ತತ್ಕೃಪಯೈವ "

ಎಂಬ ಸೂತ್ರದಿಂದ ಹೇಳಿರುವದಲ್ಲದೆ ಅದರ ಮುಂದಿನ

" ತಸ್ಮಿಂಸ್ತಜ್ಜನೇ ಭೇದಾಭಾವಾತ್ "

ಎಂಬ ಸೂತ್ರದಿಂದ ಭಗವಂತನಿಗೂ ಭಕ್ತರಿಗೂ ಭೇದವಿಲ್ಲವೆಂದು ಹೇಳಿ ಆ ಭಕ್ತರ ಸಹವಾಸವನ್ನು ಸರ್ವವಿಧದಲ್ಲಿಯೂ ಪಡೆಯಬೇಕೆಂದು

" ತದೇವ ಸಾಧ್ಯತಾಂ ತದೇವ ಸಾಧ್ಯತಾಂ "

ಎಂಬ ಸೂತ್ರದಲ್ಲಿ ಸಾರಿಸಾರಿ ಹೇಳಿರುತ್ತಾರೆ. ಆದ್ದರಿಂದ ಸಾಧಕನು ಉತ್ತಮಭಗವದ್ಭಕ್ತರ ಆಶ್ರಯವನ್ನು ಮೊದಲು ಪಡೆಯಬೇಕು.

## ಅನಿಂದೆ.

ಒಂದು ಬೆಳೆಯನ್ನು ಬಿತ್ತಿದರೆ ಅದರ ಜೊತೆಯಲ್ಲಿ ಕಳೆಯು ಹುಟ್ಟುವಂತೆ ಒಬ್ಬ ಮಹಾತ್ಮರಲ್ಲಿ ಅಥವಾ ಒಂದು ಇಷ್ಟದೇವತೆಯಲ್ಲಿ ಅಥವಾ ಒಂದು ಶಾಸ್ತ್ರದಲ್ಲಿ ಶ್ರದ್ಧೆಯು ಹುಟ್ಟುವದರೊಂದಿಗೆ ಇನ್ನೊಬ್ಬ ಮಹಾತ್ಮರಲ್ಲಿ ಅಥವಾ ಇನ್ನೊಂದು ದೇವತೆಯಲ್ಲಿ ಅಥವಾ ಇನ್ನೊಂದು ಶಾಸ್ತ್ರದಲ್ಲಿ ತುಚ್ಛಬುದ್ಧಿಯುಂಟಾಗುವ ಸಂಭವವುಂಟು. "ಕುರ್ಚಿಗೆ" ಎಂಬ ಆಯುಧದಿಂದ ಕಳೆಯನ್ನು ಕಿತ್ತೊಗೆದು ಸಸಿಯ ಬೆಳವಣಿಗೆಗೆ ಸಹಾಯವನ್ನು ಕಲ್ಪಿಸುವಂತೆ ವಿವೇಕದಿಂದ ಆ ತುಚ್ಛಭಾವನೆಯನ್ನು ಕಿತ್ತೊಗೆದು ಶ್ರದ್ಧೆಯನ್ನು ಬೆಳೆಸಬೇಕು. ಕಳೆಯನ್ನು ಕಿತ್ತೊಗೆಯದಿದ್ದರೆ ಬೆಳೆಯು ಹೇಗೆ ಚೆನ್ನಾಗಿ ತಲೆ ಎತ್ತಿಕೊಂಡು ಬೆಳೆಯಲಾರದೋ ಹಾಗೆ ತುಚ್ಛಬುದ್ಧಿಯನ್ನು ತೆಗೆದುಹಾಕದಿದ್ದರೆ ಶ್ರದ್ಧೆಯು ಚೆನ್ನಾಗಿ ಪೈಗೂಡಿಕೊಳ್ಳಲಾರದು. ಮನುಷ್ಯನಿಗೆ ಪೂರ್ವಜನ್ಮದ ಸಂಸ್ಕಾರದಿಂದ ಯಾವದೋ ಒಂದು ದೇವತೆಯಲ್ಲಿ ಸ್ವಭಾವವಾಗಿ ಶ್ರದ್ಧೆಯುಂಟಾಗಿರುತ್ತದೆ. ಇದಕ್ಕೆ ತನ್ನ

ಪೂರ್ವಸಂಸ್ಕಾರವೇ ಕಾರಣವೇ ಹೊರತು ತಂದೆತಾಯಿಗಳದೇನೂ ಇಲ್ಲ. ಹೇಗೆಂದರೆ ತಂದೆತಾಯಿಗಳು ವಿಷ್ಣುವಿನ ಉಪಾಸಕರಾಗಿದ್ದರೆ ಮಗನು ಶಿವನ ಉಪಾಸಕನಾಗಿರುವದುಂಟು. ತಂದೆಯು ದತ್ತನ ಉಪಾಸಕನಾಗಿದ್ದರೆ ತಾಯಿಯು ರಾಮನ ಉಪಾಸಕಳಾಗಿರುವದುಂಟು. ಮಗಳು ಮಾರುತಿಯ ಉಪಾಸಕಳಾಗಿದ್ದರೆ ತಂದೆಯು ಲಕ್ಷ್ಮಿಯುಪಾಸಕನಾಗಿರಬಹುದು. ಆದ್ದರಿಂದ ಈ ಸಂಸ್ಕಾರದಲ್ಲಿ ತಂದೆತಾಯಿಗಳದೇನೂ ಇಲ್ಲ. ದೊಡ್ಡದೊಡ್ಡ ಅಭೇದಜ್ಞಾನದವರಿಗೆ ಕೂಡ ಈ ಸಂಸ್ಕಾರದ ಪ್ರಭಾವವು ಬಿಟ್ಟದ್ದಿಲ್ಲ. ಶ್ರೀ ಅಪ್ಪಯ್ಯದೀಕ್ಷಿತರು ಒಂದುಕಡೆ ಹೇಳಿರುವದೇನೆಂದರೆ—

ಮಹೇಶ್ವರೇ ವಾ ಜಗತಾಮಧೀಶ್ವರೇ
ಜನಾರ್ದನೇ ವಾ ಜಗದಂತರಾತ್ಮನಿ ||
ನ ವಸ್ತುಭೇದಪ್ರತಿಪತ್ತಿರಸ್ತಿ ಮೇ
ತಥಾಪಿ ಭಕ್ತಿಸ್ತರುಣೇಂದುಶೇಖರೇ ||"

ಇದರ ಅರ್ಥವೇನೆಂದರೆ "ಜಗತ್ತಿಗೆಲ್ಲಾ ಅಧಿಷ್ಠಾನಸ್ವರೂಪನಾದ ಪರಮೇಶ್ವರ ಮತ್ತು ಜಗದಂತರ್ಯಾಮಿಯಾದ ವಿಷ್ಣು— ಇವರಿಬ್ಬರಲ್ಲಿ ಭೇದವಿಲ್ಲೆಂದು ನನಗೆ ತಿಳಿದಿದ್ದರೂ ನನ್ನ ಭಕ್ತಿಯು ಒಲವು ಪರಮೇಶ್ವರಸ್ವರೂಪದಲ್ಲಿಯೇ ಇರುವದು" ಹೀಗೆ ಎಲ್ಲರಿಗೂ ಒಂದಿಲ್ಲೊಂದು ಮಹಾತ್ಮವ್ಯಕ್ತಿಯಲ್ಲಿಯೂ ಒಂದಿಲ್ಲೊಂದು ದೇವತೆಯಲ್ಲಿಯೂ ಒಂದಿಲ್ಲೊಂದು ಶಾಸ್ತ್ರದಲ್ಲಿಯೂ ಸ್ವಾಭಾವಿಕವಾದ ಶ್ರದ್ಧೆ ಇದ್ದೇ ಇರುವದು. ಅವರು ಆ ಶ್ರದ್ಧೆಯ ಮೂಲಕವೇ ಪಾರಾಗಬಹುದು; ಒಂದನ್ನು ಬಿಟ್ಟು ಇನ್ನೊಂದನ್ನು ಹಿಡಿಯಬೇಕಾದ್ದಿಲ್ಲ. ಶಿವ, ವಿಷ್ಣು—ಮೊದಲಾದ ದೇವತೆಗಳ ಹದಿನೆಂಟು ಪುರಾಣಗಳನ್ನು ವ್ಯಾಸರೊಬ್ಬರೇ ಮಾಡಿದ್ದಾರೆ. ಆಯಾಪುರಾಣದಲ್ಲಿರುವ ಶಿವ, ವಿಷ್ಣು —ಮೊದಲಾದ ನಾಮಗಳಿಗೆ ಜಗತ್ತಿನ ಸೃಷ್ಟಿಸ್ಥಿತಿಸಂಹಾರಗಳ ಕರ್ತೃವೆಂದೇ ಅರ್ಥ.

"ಏಕಂ ಸದ್ವಿಪ್ರಾ ಬಹುಧಾ ವದಂತಿ"

ಎಂಬ ಶ್ರುತಿಯಂತೆ ಒಬ್ಬ ದೇವರನ್ನೇ ಬೇರೆಬೇರೆ ಜನರು ಬೇರೆಬೇರೆಯಾಗಿ ಕರೆಯುವರು.

"ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ"

ಎಂಬ ಗೀತೋಕ್ತಿಯಂತೆ ಯಾವ ದೇವರಿಗೆ ಶರಣುಹೊಕ್ಕರೂ ಆ ಮುಖ್ಯ ದೇವರಿಗೆ ಶರಣೆಂದಂತೆ ಆಗುವದು. ಇದಕ್ಕೆ ವೇದದಲ್ಲಿಯೂ ಆಧಾರವಿದೆ:

"ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ ರೂಪಂ ಪ್ರತಿರೂಪೋ ಬಭೂವ ।
ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥"

—(ಕೇನ ೫-೯)

ಒಬ್ಬನೇ ಅಗ್ನಿಯು ಈ ಲೋಕದಲ್ಲಿ ಪ್ರವಿಷ್ಟನಾಗಿ ಬೇರೆ ಬೇರೆ ರೂಪದಲ್ಲಿ ಬೇರೆ ಬೇರೆ ಕಾಣುವನು. ಅದರಂತೆ ದೇವರ ರೂಪಗಳು ಬೇರೆಬೇರೆಯಾದರೂ ಅಂತರ್ಯಾಮಿ ಒಂದೇ. ಅವರವರಲ್ಲಿ ಕೀಳು ಮೇಲುಗಳಿದ್ದರೆ ಕೀಳಾದವರ ಚರಿತ್ರೆಯನ್ನು ವ್ಯಾಸರೇಕೆ ಬರೆಯುತ್ತಿದ್ದರು? ಅವರನ್ನು ಬಣ್ಣಿಸುವಾಗ ಅವರವರನ್ನು ಅಟ್ಟಕ್ಕೇರಿಸಿರುತ್ತಾರೆ. ಇಷ್ಟೇ ತಾತ್ಪರ್ಯವೇ ಹೊರತು ಮತ್ತೇನೂ ಇಲ್ಲ. ಪ್ರಧಾನನಾಯಕನನ್ನಾಗಿ ಮಾಡಿರುವ ಎಲ್ಲಾ ಸ್ವರೂಪವೂ ಒಬ್ಬ ಜಗದೀಶ್ವರನದೇ ಆಗಿರುವದರಿಂದ ನಾವು ಯಾವದಾದರೊಂದು ಸ್ವರೂಪವನ್ನು ಅಥವಾ ಅದರ ಅನುಯಾಯಿಗಳಾದ ಮಹಾತ್ಮರನ್ನು ಅಥವಾ ಆ ದೇವತಾಸಂಬಂಧವಾದ ಒಂದು ಶಾಸ್ತ್ರವನ್ನು ತುಚ್ಛಬುದ್ಧಿಯಿಂದ ನಿಂದಿಸಿದರೆ ಪ್ರಕಾರಾಂತರದಿಂದ ಆ ಜಗದೀಶ್ವರನನ್ನೇ, ಅವನ ಅನುಯಾಯಿಗಳನ್ನೇ, ಅವನ ಶಾಸ್ತ್ರವನ್ನೇ ನಿಂದಿಸಿದಂತಾಯಿತು. ರಾಜಯೋಗದಲ್ಲಿ ಯಮವನ್ನು ನಿಯಮಕ್ಕಿಂತ ಮೊದಲು ಹಾಕಿರುವದಕ್ಕೆ ಕೊಟ್ಟಿರುವ ಕಾರಣವನ್ನು ನೆನಪಿಗೆ ತಂದುಕೊಳ್ಳಬೇಕು. ಒಳ್ಳೆಯದನ್ನು ಹಿಡಿಯುವದಕ್ಕೆ ಮೊದಲು ಕೆಟ್ಟದ್ದನ್ನು ಬಿಡಬೇಕು. ಅಂದರೆ ಒಂದರಲ್ಲಿ ಶ್ರದ್ಧೆಯನ್ನು ಬೆಳೆಸಿಕೊಳ್ಳುವದಕ್ಕೆ ಮೊದಲು ಬೇರೆ ದೇವತೆ ಮೊದಲಾದವುಗಳ ನಿಂದೆಯನ್ನು ಬಿಡಬೇಕು. ಎಲುಬನ್ನು ಹಿಡಿದುಕೊಂಡೇ ಎಷ್ಟುಸಲ ಮುಳುಗಿದರೂ ಹೇಗೆ ಮೈಲಿಗೆ ಹೋಗುವದಿಲ್ಲವೋ ಹಾಗೆ ಇನ್ನೊಂದು ದೇವತೆಯ ನಿಂದೆಯನ್ನು ಮಾಡುತ್ತ ಎಷ್ಟು ಶ್ರದ್ಧೆಯನ್ನು ಬೆಳೆಸಿಕೊಂಡರೂ ವ್ಯರ್ಥವೇ. ಎಲುಬನ್ನು ದೂರಕ್ಕೆ ಬಿಸಾಟು ಒಮ್ಮೆ ಮುಳುಗಿದರೆ ಸಾಕು. ಅವನು ಶುದ್ಧನಾಗುವನು. ಅದರಂತೆ ನಿಂದೆಯನ್ನು ಬಿಟ್ಟು ಶ್ರದ್ಧೆಯನ್ನು ಮಾಡಿದರೆ ಶೀಘ್ರದಲ್ಲಿ ಫಲಕಾರಿಯಾಗುವದು.

ತನ್ನ ತನ್ನ ದೇವತೆಯಲ್ಲಿಡಬೇಕಾದ ಪೂಜ್ಯಬುದ್ಧಿಯನ್ನು ಪತಿವ್ರತೆಯ ಪತಿಭಕ್ತಿಗೆ ಹೋಲಿಸಬಹುದು. ಪತಿವ್ರತೆಗೆ ಪುರುಷನೆಂದರೆ ತನ್ನ ಗಂಡ. ಅದರಂತೆ ಭಕ್ತನಿಗೆ ಲೋಕದಲ್ಲಿ ತನ್ನ ದೇವರೇ ದೇವರು. ಆದರೆ ಪತಿವ್ರತೆಯು ಉಳಿದ ಗಂಡಸರನ್ನೆಲ್ಲಾ ನಪುಂಸಕರೆಂದು ಹೀಯಾಳಿಸುವದಿಲ್ಲ. ಅವರೂ ಗಂಡಸರೆ. ಆದರೆ ಆಕೆ ಅವರ ವಿಚಾರವನ್ನು ಮನಸ್ಸಿಗೆ ತಂದುಕೊಳ್ಳುವದಿಲ್ಲ. ತನ್ನೆದುರಿಗೆ ಅವರು ಬಂದರೆ ಅವರ ಮುಂದೆ ಆಕೆ ತಲೆಯನ್ನು ಬಗ್ಗಿಸಿಕೊಂಡೇ ಹೋಗುವಳು. ಇದರಂತೆ ಭಕ್ತನು ಇತರರ ಇಷ್ಟದೇವತೆಯನ್ನು ದೇವರಲ್ಲವೆಂದು ಹೀಯಾಳಿಸಬಾರದು. ಅವೂ ದೇವತಾ ಸ್ವರೂಪವೇ. ಆದರೆ ಅವುಗಳ ವಿಚಾರವನ್ನು ಇವನು ತೆಗೆದುಕೊಳ್ಳದಿದ್ದರಾಯಿತು. ಎಲ್ಲರೊಡನೆ ಸೇರಿದ ಸಮಯದಲ್ಲಿ ಇತರರ ದೇವತೆಗಳಿಗೂ ಗೌರವವನ್ನೇ ಕೊಡಲೇಬೇಕು. ಹೀಗೆ ಮಾಡಿದರೆ ಮಾತ್ರ ಭಕ್ತಿಯು ಬೆಳೆಯುವದು.

"ಶ್ರದ್ಧಾಂ ಭಾಗವತೇ ಶಾಸ್ತ್ರೇಽನಿಂದಾಮನ್ಯತ್ರ ಚಾಪಿ ಹಿ"

ಎಂಬ ಶ್ಲೋಕಾರ್ಧದಲ್ಲಿ ಭಾಗವತವು ಈ ಅಭಿಪ್ರಾಯವನ್ನೇ ಒತ್ತಿ ಹೇಳಿರುವದು. ಆದ್ದರಿಂದ ಅನ್ಯದೇವತೆ ಮೊದಲಾದವುಗಳ ನಿಂದೆಯನ್ನು ಅಗತ್ಯವಾಗಿ ಬಿಡಬೇಕು

## ನವವಿಧಭಕ್ತಿಗಳು.

ಭಕ್ತಿಯೆಂದರೆ ಪ್ರತಿದಿನವೂ ಕೆಲವು ಹೊತ್ತು ಗಟ್ಟಿಯಾಗಿ ರಾಮ, ಕೃಷ್ಣ, ಶಿವ, ಶಂಕರ, ದತ್ತ — ಎನ್ನುತ್ತ ಭಜನೆಯನ್ನು ಮಾಡಿ ದೇವರಿಗೆ ಆರತಿಯನ್ನೆತ್ತುವದೆಂದು ಕೆಲವರು ತಿಳಿದುಕೊಂಡಿರುತ್ತಾರೆ. ಪರಮಾತ್ಮನ ಸಾಕ್ಷಾತ್ಕಾರದಂಥ ಮಹತ್ಫಲವನ್ನು ಕೊಡುವ ಭಕ್ತಿಯು ಇಷ್ಟು ಸುಲಭವಾಗಿರುವದೆಂದು ತಿಳಿಯಬಾರದು. ಭಕ್ತಿಯನ್ನು ಸುಲಭವೆಂದು ಹೇಳಿದ್ದು ಅದು ಎಲ್ಲರ ಸ್ವಭಾವಕ್ಕೆ ಹೊಂದುವಂಥದ್ದೆಂಬ ದೃಷ್ಟಿಯಿಂದಲೇ ಹೊರತು ನಡಸಲಿಕ್ಕೆಗೂ ಅದು ಇಷ್ಟು ಸುಲಭವಾದದ್ದೆಂದಲ್ಲ. ಮಹತ್ಫಲವನ್ನು ಕೊಡತಕ್ಕ ಸಾಧನವೂ ಮಹತ್ತಾಗಿಯೇ ಇರುವದು. ಸುಮ್ಮನೆ ಮೇಲುಮಾಳಿಗೆ ಕಿತ್ತುಹೋಗುವಷ್ಟು ಕಿರಿಚಿಕೊಳ್ಳುವದು ಮಾತ್ರವೇ

ಭಕ್ತಿಯಲ್ಲ. ಅದರಿಂದ ಮನಸ್ಸು ಸ್ವಲ್ಪ ಎಚ್ಚರಗೊಳ್ಳಬಹುದು. ಆದರೆ ಅದಕ್ಕಿಂತ ಮಹತ್ತ್ವದ ಸಾಧನಗಳು ಬಹಳ ಉಂಟು. ಈ ವಿಷಯದಲ್ಲಿ ಶ್ರೀರಾಮಕೃಷ್ಣಪರಮಹಂಸರು ಹೇಳಿರುವದೇನೆಂದರೆ—

" ಭಂಗಿಸೊಪ್ಪು ಎಂದು ಸುಮ್ಮನೆ ಒದರಿದ ಮಾತ್ರಕ್ಕೇ ಅದರಿಂದುಂಟಾಗಬೇಕಾದ ಮದವು ಬರುವದಿಲ್ಲ. ಅದು ದ್ರವರೂಪವಾಗುವಂತೆ ನೀರಿನಲ್ಲಿ ತೇದು ಕುಡಿದರೆ ಮದಸೇರುವದು. ಸುಮ್ಮನೆ ಗಟ್ಟಿಯಾಗಿ ದೇವ, ದೇವ, ಎಂದ ಮಾತ್ರಕ್ಕೇ ಏನಾದೀತು? ಏಕಪ್ರಕಾರವಾಗಿ ಭಕ್ತಿಸಾಧನಗಳನ್ನು ಅಭ್ಯಾಸ ಮಾಡಬೇಕು. ಆಗ ದೇವರು ನಿಜವಾಗಿ ಕಂಡೇ ಕಾಣುವನು."

ಅಂಥ ಭಕ್ತಿಸಾಧನಗಳು ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನ–ಹೀಗೆ ಒಂಬತ್ತು ಬಗೆಯಾಗಿರುವವೆಂದು ಭಾಗವತದಲ್ಲಿರುವ

" ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥ "

ಎಂಬ ಶ್ಲೋಕವು ಹೇಳುವದು. ಈ ಒಂಬತ್ತು ಭಕ್ತಿಗಳನ್ನು ಕ್ರಮವಾಗಿ ಪರೀಕ್ಷಿತ, ಶುಕ, ಪ್ರಹ್ಲಾದ, ಲಕ್ಷ್ಮಿ, ಪೃಥು, ಅಕ್ರೂರ, ಮಾರುತಿ, ಅರ್ಜುನ ಮತ್ತು ಬಲಿ–ಇವರು ಸಾಧಿಸಿ ಪ್ರಸಿದ್ಧರಾಗಿರುವರೆಂದು ಸ್ಮೃತಿಯು—

" ಶ್ರೀಕೃಷ್ಣಶ್ರವಣೇ ಪರೀಕ್ಷಿತಿರಭೂದ್ವೈಯಾಸಕಿಃ ಕೀರ್ತನೇ ।
ಪ್ರಹ್ಲಾದಃ ಸ್ಮರಣೇ ತದಙ್ಘ್ರಿಭಜನೇ ಲಕ್ಷ್ಮೀಃ ಪೃಥುಃ ಪೂಜನೇ ॥
ಅಕ್ರೂರಸ್ತ್ವಭಿವಂದನೇ ಕಪಿಪತಿರ್ದಾಸ್ಯೇ ಚ ಸಖ್ಯೇಽರ್ಜುನ ।
ಸರ್ವಸ್ವಾತ್ಮನಿವೇದನೇ ಬಲಿರಭೂತ್ಕೈವಲ್ಯಮೇಷಾಂ ಸಮಮ್ ॥"

ಎಂಬ ಶ್ಲೋಕದಲ್ಲಿ ಹೇಳುತ್ತದೆ. ಇವುಗಳಲ್ಲಿ ಒಂದೊಂದನ್ನಾಗಿ ಈ ಕೆಳಗೆ ವಿವರಿಸುತ್ತೇವೆ.

ಶ್ರವಣ— ಶ್ರವಣವೆಂದರೆ ಪರಮಾತ್ಮನ ಮಹಿಮಾವಿಶೇಷಗಳನ್ನು ಕೇಳುವದು. ಈ ಮಹಿಮಾವಿಶೇಷಗಳು ಪುರಾಣಗಳಲ್ಲಿ ಸಮೃದ್ಧಿಯಾ

ಗಿರುವವು. ಇವುಗಳನ್ನು ಕೇಳುವ ಸುಯೋಗವು ಕೂಡ ಎಷ್ಟೋ ಜನರಿಗೆ ದುರ್ಲಭವೆಂದು

"ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ ॥"

ಎಂದು ಶ್ರುತಿಯು ಹೇಳುವದು. ವೇದವನ್ನು ಸಾಕ್ಷಾತ್ತಾಗಿ ಓದಿ ತಿಳಿದುಕೊಳ್ಳುವದಕ್ಕೆ ಶಾಸ್ತ್ರವು ಎಲ್ಲರಿಗೂ ಅವಕಾಶವನ್ನು ಕೊಟ್ಟಿಲ್ಲದಿದ್ದರೂ ಪುರಾಣಶ್ರವಣಕ್ಕೆ ಯಾವ ಪ್ರತಿಬಂಧಕವನ್ನೂ ಇಟ್ಟಿಲ್ಲ. ವೇದದ ಭಾಷೆಯು ಕ್ಲಿಷ್ಟವಾಗಿದ್ದು ಅತ್ಯಲ್ಪಸಂಖ್ಯೆಯ ಜನರಿಗೆ ಮಾತ್ರ ತಿಳಿಯಬಹುದಾದ ಸ್ವಭಾವದಲ್ಲಿರುವದರಿಂದ ಅದನ್ನು ಸಾಕ್ಷಾತ್ತಾಗಿ ತಿಳಿಯಹೋಗುವದು ವೃಥಾಶ್ರಮವಾಗುವದು. ಅದರ ಅರ್ಥವನ್ನೇ ವಿವರಿಸಿ ಪುರಾಣಗಳು ಅದನ್ನು ಹೆಚ್ಚು ರಸವತ್ತಾಗಿ ಮಾಡಿರುವವು. ಮೊದಮೊದಲು ಮಕ್ಕಳಿಗೆ ಅನ್ನವನ್ನು ತಿನ್ನಿಸುವಾಗ ಅದರಲ್ಲಿ ರುಚಿಯುಂಟಾಗುವಂತೆ ಸಕ್ಕರೆಯನ್ನು ಸೇರಿಸಿ ಅದನ್ನುಣಿಸುವದರಿಂದ ಮಕ್ಕಳನ್ನು ಪುಷ್ಟಿಗೊಳಿಸುವಂತೆ ಪೂರ್ವಿಕರು ವೇದದಲ್ಲಿರುವ ಕ್ಲಿಷ್ಟವಾದ ವಿಷಯಗಳಿಗೆ ಉದಾಹರಣೆಗಳನ್ನು ಕೊಟ್ಟು ಒಳ್ಳೇ ಅಲಂಕಾರಿಕಭಾಷೆಯಿಂದ ಮನಸ್ಸಿನಲ್ಲಿ ಬಿಂಬಿಸುವ ಹಾಗೆ ವರ್ಣಿಸಿ, ವೇದದಿಂದ ಆಗಬೇಕಾದ ಪೂರ್ಣಪ್ರಯೋಜನವನ್ನು ನಮ್ಮ ಅನುಭವಕ್ಕೆ ಸಿದ್ಧಮಾಡಿ ಕೊಟ್ಟಿರುತ್ತಾರೆ. ವೇದವನ್ನು ಓದುವದಕ್ಕೆ ಎಲ್ಲರಿಗೂ ಸಮ್ಮತಿಯನ್ನು ಕೊಡದೆ ಇರುವದನ್ನು ನೋಡಿ ಪೂರ್ವಿಕರು ರಹಸ್ಯಾರ್ಥಗಳನ್ನೆಲ್ಲಾ ಸ್ವಾರ್ಥದೃಷ್ಟಿಯಿಂದ ಬಚ್ಚಿಟ್ಟಿರುವರೆಂದು ಕೆಲವರು ದೂರುವರು. ಈಚೀಚೆಗೆ ಶಾಸ್ತ್ರಕಾರರ ಸಮ್ಮತಿಯನ್ನು ಲಕ್ಷಿಸದೆ ಎಷ್ಟೋ ಜನರು ವೇದವನ್ನೇ ಸಾಕ್ಷಾತ್ತಾಗಿ ಓದಿ ಅರ್ಥವನ್ನು ಮಾಡಿಕೊಂಡು ಅದರ ಮೇಲೆ ಅನೇಕಗ್ರಂಥಗಳನ್ನು ಬರೆದಿರುವರಷ್ಟೆ. ಪೂರ್ವಿಕರು ಪುರಾಣಗಳಲ್ಲಿ ವಿವರಿಸದೆ ಬಚ್ಚಿಟ್ಟಿರುವ ಒಂದು ವಿಷಯವನ್ನಾದರೂ ಯಾರಾದರೂ ತೋರಿಸುವರೆ? ಶಕ್ಯವಿಲ್ಲ. ಪೂರ್ವಿಕರು ಒಂದು ಸಂಪ್ರದಾಯಪರಂಪರೆಯನ್ನು ಕಾಯುವ ಸದ್ಬುದ್ಧಿಯಿಂದ ಆ ಶಬ್ದಾಧ್ಯಯನದ ಅಧಿಕಾರವನ್ನು ಮಾತ್ರ ಸ್ವಲ್ಪ ಕೈಹಿಡಿದಿರುವರೇ ಹೊರತು ಅದರ ಅರ್ಥವನ್ನೆಳ್ಳಷ್ಟು ಮರೆಮಾಡಿಲ್ಲ. ತಮಗೆ ತಿಳಿದ ಅರ್ಥವನ್ನು ಮತ್ತೊಬ್ಬನಿಗೆ ಹೇಳದೆ ಸ್ವಾರ್ಥಬುದ್ಧಿಯಿಂದ ತನ್ನಲ್ಲಿಯೇ ಉಳಿಸಿಕೊಳ್ಳುವದು

ಪಾಪ. ಈ ಕಲ್ಪನೆಯು ನಮ್ಮ ಪೂರ್ವಿಕರಲ್ಲಿ ಎಷ್ಟು ಜಾಗರೂಕವಾಗಿತ್ತೆಂಬುದಕ್ಕೆ ಪ್ರಶ್ನೋಪನಿಷತ್ತಿನ ಆರನೇ ಪ್ರಶ್ನೆಯಲ್ಲಿ ಒಂದು ಕಥೆ ಬಂದಿದೆ. ಕೋಸಲದೇಶದ ಹಿರಣ್ಯನಾಭನೆಂಬ ರಾಜಪುತ್ರನು ಸುಕೇಶನೆಂಬ ಬ್ರಾಹ್ಮಣನ ಬಳಿಗೆ ಒಂದು ಪುರುಷನ ಷೋಡಶಕಲೆಗಳ ವಿಷಯವನ್ನು ಪ್ರಶ್ನೆಮಾಡಿದನು. ಆಗ ಸುಕೇಶನು “ಅಯ್ಯಾ, ನನಗೆ ಅದು ತಿಳಿಯದು. ಹಾಗೆ ತಿಳಿದಿದ್ದರೆ ನಾನು ನಿನಗೆ ಹೇಳದೆ ಹೇಗೆ ಇದ್ದೇನು ? ಯಾವನು ಸುಳ್ಳು ಹೇಳುತ್ತಾನೋ ಅವನ ಸಮೂಲವಾಗಿ ನಾಶವಾಗುತ್ತಾನೆ. ಅದ್ದರಿಂದ ನಾನು ಸುಳ್ಳು ಹೇಳಲಾರೆನು” ಎಂದು ಉತ್ತರವನ್ನು ಕೊಟ್ಟು ಆ ವಿಚಾರವನ್ನು ತಿಳಿದುಕೊಳ್ಳುವದಕ್ಕಾಗಿ ಪಿಪ್ಪಲಾದನೆಂಬ ಋಷಿಯ ಬಳಿಗೆ ಹೋಗಿ ತಾನು ಗುರುಕುಲವಾಸವನ್ನು ಮಾಡಿದ್ದಾನೆ. ಇದರಿಂದ ತನಗೆ ತಿಳಿದದ್ದನ್ನು ಮಾಜುವದು ನಮ್ಮ ಜನಾಂಗದ ಪದ್ಧತಿಯಂತೆ ಪರದೇಶದವರು “ತಾನು ಕಳ್ಳ; ಪರರನ್ನು ನಂಬ” ಎಂಬ ಗಾದೆಯಲ್ಲಿ. ತಾವು ಮಾಜುವವರಾದ್ದರಿಂದ ಅವರ ಕಣ್ಣಿಗೆ ನಮ್ಮಲ್ಲಿಯೂ ಆ ಗುಣವೇ ಕಂಡ ಹಾಗೆ ಆಗುತ್ತದೆ. ಪಶ್ಚಿಮದೇಶದಲ್ಲಿ ವ್ಯಾಪಾರದ ಮತ್ತು ಕೈಗಾರಿಕೆಯ ಉದ್ಯೋಗಗಳು ಮುಗಿಲು ಮುಟ್ಟಿವೆಯಷ್ಟೆ. ಅವುಗಳನ್ನು ಕಲಿಯುವದಕ್ಕೆ ನಮ್ಮವರು ಹೋದರೆ ಅವರು ನಮಗೆ ಕಲಿಸುವದು ಬರೀ ಹೊರಗಣ ಕೂಲಿಯ ಕೆಲಸವೇ ಹೊರತು ಅವುಗಳ ರಹಸ್ಯವನ್ನು (Trade secret) ವ್ಯಾಪಾರದ ರಹಸ್ಯವೆಂದು ಬಚ್ಚಿಟ್ಟುಕೊಳ್ಳುತ್ತಿರುವದು ಪ್ರಸಿದ್ಧವಾಗಿದೆ. ಅದ್ದರಿಂದ ಅವರ ಕಣ್ಣಿಗೆ ನಾವು ಸ್ವಾರ್ಥಿಗಳಾಗಿ ಕಾಣುವದೂ ಸಹಜವಾಗಿದೆ. ಇನ್ನು ನಮ್ಮನಮ್ಮವರಲ್ಲಿಯೂ ಎಷ್ಟೋ ಜನರು ಈ ಅಭಿಪ್ರಾಯಪಡುವವರುಂಟು. ಆದರೇನು? ಪಾಪ! ಅದು ಅವರ ಸ್ವಬುದ್ಧಿಯಲ್ಲಿ ಹುಟ್ಟಿದ್ದಲ್ಲ. ಪಶ್ಚಿಮದೇಶದವರಲ್ಲಿರುವ ಪೂಜ್ಯಬುದ್ಧಿಯಿಂದ ನಮ್ಮವರೂ ಅವರ ಹಿಮ್ಮೇಳವನ್ನು ಹಾಡುವರು. ಪಶ್ಚಿಮದೇಶದವರು ತಮ್ಮ ಪುಂಗಿಯನ್ನು ಬದಲುಮಾಡಿದರೆ ಒಡನೆ ಅನುಕರಣಪ್ರಿಯರಾದ ನಮ್ಮವರು ತಮ್ಮ ಹಿಮ್ಮೇಳವನ್ನು ಆ ಶ್ರುತಿಗೇ ಹೊಂದಿಸುವರು.

ತನಗೆ ವೇದಾಧಿಕಾರವಿಲ್ಲವೆಂದು ಕಣ್ಣು ಕೆಂಪಗೆ ಮಾಡುವವರಿ

ಗೆಲ್ಲಾ ವೇದಾರ್ಥದ ಮೇಲಿನ ಪ್ರೀತಿಯೇ ಕಾರಣವೆಂದು ಹೇಳುವ ಹಾಗಿಲ್ಲ. ಏಕೆಂದರೆ ಈಗ ಜರ್ಮನಿಯ ಪಂಡಿತರಾದ ಮ್ಯಾಕ್ಸಮುಲ್ಲರ್ ಸಾಹೇಬರು ವೇದಗಳನ್ನೆಲ್ಲಾ ಇಂಗ್ಲೀಷಿಗೆ ಭಾಷಾಂತರಿಸಿಯೂ ಇರುವರು ಮತ್ತು ಎಲ್ಲವೂ ಅಚ್ಚಾಗಿಯೂ ಇರುವವು. ಹೀಗೆಂದು ಅದನ್ನು ತಿಳಿದು ಕೊಳ್ಳುವದಕ್ಕೆ ಈಗ ಎಷ್ಟು ಜನರು ಬಾಯನೀರು ಕರೆಯುತ್ತಿದ್ದಾರೆ? ಒಮ್ಮೆ ಸ್ವಾಮಿ ವಿವೇಕಾನಂದರಿಗೂ ಪ್ರೊಫೆಸರ್ ಡಾಯಸನ ಸಾಹೇಬರಿಗೂ ಸಂಭಾಷಣೆಯಾದಾಗ ತಾನು ವೇದಾಂತದಲ್ಲಿ ತಲೆಯನ್ನು ಹಾಕಿ, ಇಷ್ಟೆಲ್ಲಾ ಬರೆಯುವದಕ್ಕೆ ಬದಲು ಬೇರೆ ಯಾವದಾದರೂ ಶಾಸ್ತ್ರವಿಷಯವನ್ನು ಹಿಡಿದಿದ್ದರೆ ತನ್ನ ಮನೆಗೆ ಸುವರ್ಣದ ಕಲಶವನ್ನಿಡಬಹುದಾಗಿತ್ತೆಂದು ಪ್ರೊಫೆಸರ್ ಡಾಯಸನ್ ಸಾಹೇಬರು ಹೇಳಿದರಂತೆ. ಅವರು ಹೀಗೆ ಹೇಳಿದ್ದಕ್ಕೆ ಕಾರಣವೇನೆಂದರೆ ಅವರ ವೇದಾಂತದ ಪುಸ್ತಕಗಳನ್ನು ಕೊಂಡುಕೊಳ್ಳುವವರೇ ಇಲ್ಲವಾಗಿತ್ತು. ಇದನ್ನು ನೋಡಿದರೆ ಜನರಿಗೆ ವೇದದ ವಿಚಾರದ ಮೇಲಿನ ಆದರವೇನೂ ಬಹಳವಾಗಿಲ್ಲ. ತಾವು ಯಾವದಕ್ಕೂ ಅನಧಿಕಾರಿಗಳೆನಿಸಿಕೊಳ್ಳಬಾರದೆಂಬ ಅಭಿಮಾನವೇ ಅವರ ಮನಸ್ಸನ್ನು ಕಲಕಿಬಿಡುವದು. ವೇದಾರ್ಥವನ್ನು ಪ್ರಚಾರಮಾಡುವ ವಿಷಯದಲ್ಲಿ ನಮ್ಮವರು ಎಷ್ಟು ಮಾತ್ರವೂ ಹಿಂದಿಲ್ಲ.

“ಶ್ರಾವಯೇಚ್ಚತುರೋ ವರ್ಣಾನ್ಕೃತ್ವಾ ಬ್ರಾಹ್ಮಣಮಗ್ರತಃ”

ಎಂದು ಸ್ಮೃತಿಯಿದೆ. ಬ್ರಾಹ್ಮಣನನ್ನು ಮುಂದು ಮಾಡಿಕೊಂಡು ನಾಲ್ಕು ವರ್ಣದವರಿಗೂ ಶ್ರವಣಮಾಡಿಸಬೇಕೆಂದು ಅದರ ಅರ್ಥ. ಬರೀ ನಾಲ್ಕು ವರ್ಣದವರೇ ಏಕೆ? ಮ್ಲೇಂಛಾದಿಗಳು ಕೂಡ ಭಾಷಾಂತರದಿಂದ ಅದರ ಅರ್ಥವನ್ನು ತಿಳಿದುಕೊಳ್ಳಬಹುದೆಂದು ಸ್ಕಾಂದಪುರಾಣವು ಹೇಳುತ್ತದೆ. ಹೀಗೆ ವೇದಾರ್ಥವನ್ನು ಎಲ್ಲರಿಗೂ ಬೋಧಿಸುವ ಸ್ಥಿತಿಗೆ ತಂದು ಅದರ ದಿಂದ ಪುರಾಣರೂಪದಲ್ಲಿ ಬರೆದಿಟ್ಟಿರುವ ಗ್ರಂಥಗಳನ್ನು ಅವರು ಎಲ್ಲರ ಮುಂದೆಯೂ ಇಟ್ಟು ಅದನ್ನು ಓದುವದಕ್ಕೆ ಸಮ್ಮತಿಯನ್ನು ಕೊಟ್ಟಿದ್ದರೂ ಅದನ್ನು ಕಣ್ಣೆತ್ತಿ ಕೂಡ ನೋಡದೆ ಅವರು ವಿಚಾರಪೂರ್ವಕವಾಗಿ ಬಿಗಿ ಹಿಡಿದಿರುವದನ್ನೇ ಆಕ್ಷೇಪಿಸುವದರಲ್ಲಿ ಹುರುಳಿಲ್ಲ. ಲೋಕದಲ್ಲಿ ಒಂದೊಂದರ ವ್ಯವಸ್ಥೆ ಒಬ್ಬೊಬ್ಬರ ಕಡೆಗಿದ್ದರೆ ನೆಟ್ಟಗಾಗುವದೆಂಬ ಸೂತ್ರವನು

ಹಿಡಿದು ವೇದದ ರಕ್ಷಣೆಯ ಭಾರವನ್ನು ಒಂದು ವರ್ಣದಲ್ಲಿಟ್ಟದ್ದಾಗಿ ದೆಯೇ ಹೊರತು ಮತ್ತೇನೂ ಇಲ್ಲ. ಆ ವೇದರಕ್ಷಕರಿಗಾದರೂ ಉಳಿದವರಿಗ್ಯೆಅದನ್ನು ಹದವಾಗಿ ಮಾಡಿಕೊಡಬೇಕೆಂಬ ಭಾರವಿರುವದರಿಂದ ಇತರರಿಗೆ ಅದೊಂದು ಬಗೆಯ ಹೆಚ್ಚಿನ ಸೌಕರ್ಯವೇ ಆಯಿತು. ಇರಲಿ.

ಶ್ರವಣವೆಂಬುವದೊಂದು ಸಾಮಾನ್ಯವಾದ ಸಾಧನವೆಂದು ಯಾರೂ ತಿಳಿಯಬಾರದು. ಶ್ರವಣವಿಲ್ಲದೆ ಪರಮಾತ್ಮನ ಮಹಿಮೆಯು ತಿಳಿಯುವದಿಲ್ಲ. ಆ ಮಹಿಮೆಯು ತಿಳಿಯದೆ ಭಕ್ತಿಯು ಹುಟ್ಟುವದಿಲ್ಲ. ಶ್ರವಣ ಮೊದಲಾದವುಗಳಿಲ್ಲದೆ ಒಬ್ಬರನ್ನೊಬ್ಬರು ನೋಡಿ ಭಜನೆಯನ್ನು ಮಾತ್ರ ಮಾಡುವ ಭಕ್ತಿಯು ಕುರುಡಭಕ್ತಿ. ಅದರಿಂದ ದೇವರನ್ನು ಕಾಣುವದಕ್ಕೆ ಆಗುವದಿಲ್ಲ. ಹಿಂದೆ ಶ್ರೀಶುಕಾಚಾರ್ಯರು ಪರೀಕ್ಷಿತನಿಗೆ ಭಾಗವತಶ್ರವಣವನ್ನುಮಾಡಿಸುವದಕ್ಕೆ ಕುಳಿತಾಗ ದೇವತೆಗಳು ತಮ್ಮ ಅಮೃತ ಕಲಶವನ್ನು ಅವರ ಮುಂದೆ ತಂದಿಟ್ಟು ಆ ಅಮೃತವನ್ನು ಪರೀಕ್ಷಿತನಿಗೆ ಕುಡಿಸಿ ಭಾಗವತಾಮೃತವನ್ನು ತಮಗೆ ಕೊಡಬೇಕೆಂದು ಪ್ರಾರ್ಥಿಸಿದರು. ದೇವತೆಗಳ ಅಮೃತವನ್ನು ಪರೀಕ್ಷಿತನಿಗೆ ಕುಡಿಸಿದರೆ ಅವನಿಗೆ ಸರ್ಪದಿಂದ ಆಗುತ್ತಿದ್ದ ಮರಣವು ತಪ್ಪಬಹುದಾಗಿತ್ತು. ಆದರೆ ಎಂದೆಂದಿಗೂ ಹುಟ್ಟು ಸಾವುಗಳ ಕೋಟಲೆಯುಂಟಾಗದಂಥ ಪರಿಸ್ಥಿತಿಯೊದಗುತ್ತಿರಲಿಲ್ಲ. ಇದಲ್ಲದೆ ದೇವತೆಗಳು ಸ್ವಾರ್ಥಬುದ್ಧಿಯಿಂದ ಶ್ರವಣವನ್ನಪೇಕ್ಷಿಸಿದರೇ ಹೊರತು ಭಕ್ತಿಯಿಂದ ಅಲ್ಲ. ಇದು ಶ್ರೀಶುಕಾಚಾರ್ಯರಿಗೆ ತಿಳಿದಿತ್ತು. ಆದ್ದರಿಂದ ಅವರು ಅದನ್ನು ದೇವತೆಗಳಿಗೆ ಹೇಳಲಿಲ್ಲ.

ಶ್ರವಣದಲ್ಲಿ ಪರೀಕ್ಷಿತನಿಗಿದ್ದ ಭಕ್ತಿವಿಶೇಷವು ಎಂಥದ್ದಾಗಿತ್ತೆಂದು ತಿಳಿಯಲಿಚ್ಛೆಯಾಗಬಹುದು. ಅವನಿಗೆ ಏಳು ದಿವಸಗಳಲ್ಲಿ ಸರ್ಪದಿಂದ ಮರಣವೆಂದು ನಿಶ್ಚಯವಾಗಿತ್ತು. ಅಷ್ಟರಲ್ಲಿ ಅವನು ತನ್ನ ಸದ್ಗತಿಯ ದಾರಿಯನ್ನು ನೋಡಿಕೊಳ್ಳಬೇಕೆಂದು ಶ್ರವಣದಲ್ಲಿ ತದೇಕಮನಸ್ಕನಾದನು. ಮೃತ್ಯುವಿನ ಬಾಯೊಳಗೆ ತಲೆಯನ್ನಿಟ್ಟಿರುವ ತನಗೆ ಪ್ರಾಪಂಚಿಕ ಸುಖಗಳಿನ್ನೇಕೆಂದು ಅವನಿಗೆ ತೀವ್ರವಾದ ವೈರಾಗ್ಯವುಂಟಾಗಿತ್ತು. ಇಂಥ ಬುದ್ಧಿಯಿಂದ ಕೇಳುವ ಶ್ರವಣವೇ ಶ್ರವಣ. ವಿನೋದಕಾಲಕ್ಷೇಪಕ್ಕಾಗಿ ಮಾಡುವ ಶ್ರವಣವು ಶ್ರವಣವಲ್ಲ. ಮನಸ್ಸನ್ನು ಹತ್ತು ದಿಕ್ಕುಗಳಿಗೂ

ಹರಿದಾಡಬಿಟ್ಟು ಶರೀರಮಾತ್ರನಾಗಿ ಕುಳಿತು ಸುಮ್ಮನೆ ಆ ಶಬ್ದಗಳನ್ನು ಕಿವಿಯಲ್ಲಿ ಹಾದು ಹೋಗಗೊಡುವದು ಎಂದಿಗೂ ಶ್ರವಣವೆನಿಸಲಾರದು. ಶ್ರವಣದಲ್ಲಿ ಮನಸ್ಸು ಏಕಾಗ್ರವಾಗಿರಬೇಕು. ಶ್ರವಣವು ಮನಸ್ಸಿಗೆ ಹೊರತು ಬರೀ ಕಿವಿಗಳಿಗಲ್ಲ. ಕಿವಿಗೆ ಶ್ರವಣವಾಗುವದಾದರೆ ಶ್ರೀಶುಕಾಚಾರ್ಯರ ವಾಕ್ಯಸಅಲೆಗಳು ಅಲ್ಲಿ ಕಂಬಗಳಲ್ಲಿ ಮಾಡಿದ್ದ ಬೊಂಬೆಗಳ ಕಿವಿಗಳಿಗೂ ತಾಕಿ ಅವುಗಳಿಗೂ ಶ್ರವಣವಾಗಿರಬೇಕಾಯಿತು. ಅದು ಅಸಂಭವ. ಪರೀಕ್ಷಿತನ ಮನಸ್ಸು ತನ್ಮಯವಾಗಿದ್ದದ್ದೇ ಅವನ ಶ್ರವಣದ ಯೋಗ್ಯತೆಯ ವಿಶೇಷ. ಆ ತನ್ಮಯತೆಯು ಒಮ್ಮೆ ಆ ಸಭೆಯಲ್ಲಿಯೇ ಬೆಳಕಿಗೆ ಬಂತು. ಶ್ರೀಶುಕಾಚಾರ್ಯರು ಭಾಗವತಪುರಾಣವನ್ನಾರಂಭಿಸಿದಾಗ ಲೆಕ್ಕವಿಲ್ಲದಷ್ಟು ಮಂದಿ ಋಷಿಗಳು ಮೊದಲಾದವರೆಲ್ಲಾ ಸೇರಿದ್ದರು. ಆದರೂ ಆಚಾರ್ಯರು ಪರೀಕ್ಷಿತನ ಮುಖವನ್ನು ನೋಡುತ್ತಲೇ ಪುರಾಣವನ್ನು ಹೇಳುತ್ತಿದ್ದರು. ಆಚಾರ್ಯರು ಬ್ರಾಹ್ಮಣತ್ವಕ್ಕಿಂತ ರಾಜತ್ವಕ್ಕೆ ಹೆಚ್ಚು ಮಹತ್ತ್ವವನ್ನು ಕೊಟ್ಟಿರುವರೆಂದು ಮುನಿಸಮಾಜವು ಗುಸುಗುಸು ಗುಟ್ಟಿತು. ಇದು ಆಚಾರ್ಯರಿಗೂ ತಿಳಿಯಿತು. ಇದರ ಉತ್ತರವನ್ನು ಪ್ರಕಾರಾಂತರದಿಂದ ತಿಳಿಯಪಡಿಸಬೇಕೆಂದು ಆಚಾರ್ಯರು ಒಮ್ಮೆಗೇ ಆ ಮಂಟಪಕ್ಕೆ ಯೋಗಶಕ್ತಿಯಿಂದ ಬೆಂಕಿಹತ್ತಿದಂತೆ ಕಾಣಿಸಿದರು. ಅದನ್ನು ಕಂಡೊಡನೆ ಮುನಿಗಳೆಲ್ಲಾ ದಂಡಕಮಂಡಲುಗಳನ್ನು ತೆಗೆದುಕೊಂಡು ಪಲಾಯನಸೂಕ್ತವನ್ನು ಹೇಳಿಬಿಟ್ಟರು. ಪರೀಕ್ಷಿತನು ಮಾತ್ರ ಕೂಡಲೆಳೆಯಷ್ಟು ಕದಲಲಿಲ್ಲ. ಒಡನೆ ಅದು ಬರೀ ತೋರಿಕೆಯೆಂದು ಮುನಿಗಳಿಗೆ ತಿಳಿಯಿತು. ಆಮೇಲೆ ಎಲ್ಲರೂ ಜೋಲುಮುಖವನ್ನು ಹಾಕಿಕೊಂಡು ಪರೀಕ್ಷಿತನ ತನ್ಮಯತೆಗೆ ಬೆರಗಾಗಿ ತಲೆಯನ್ನು ಬಗ್ಗಿಸಿಕೊಂಡು ಕುಳಿತರು. ತನ್ಮಯತೆಯೆಂದರೆ ಬೇರೆ ಕಲ್ಪನೆಯನ್ನು ಒಳಕ್ಕೆ ಬರಗೊಡದೆ ಅದನ್ನೇ ಆಲಿಸುವದು. ಹಾಗಿಲ್ಲದೆ ಕಿವಿಯ ತುದಿಯಿಂದ ಮಾಡುವ ಶ್ರವಣವು ಅಕ್ಕಸಾಲೆಯ ಮನೆಯಲ್ಲಿರುವ ಶ್ರವಣವೇ ಸರಿ.

ಶ್ರವಣವು ಭಕ್ತಿಯ ಸಾಧನವೆಂಬುದನ್ನು ಭಗವಾನ್ ನಾರದರ—

" ಲೋಕೇಽಪಿ ಭಗವದ್ಗುಣಶ್ರವಣಕೀರ್ತನಾತ್ "

ಎಂಬ ಸೂತ್ರವೂ ಹೇಳುವದು. ನವವಿಧಭಕ್ತಿಗಳನ್ನು ಶ್ರೀಸಮರ್ಥರಾಮದಾಸರು ತಮ್ಮ ದಾಸಬೋಧಗ್ರಂಥದಲ್ಲಿ ಬಹು ಚೆನ್ನಾಗಿ ವಿವರಿಸಿದ್ದಾರೆ. ಶ್ರವಣಭಕ್ತಿಯ ಸ್ವರೂಪದ ವಿಷಯದಲ್ಲಿ ಅವರು ಹೇಳಿರುವದರ ಸಾರಾಂಶವೇನೆಂದರೆ— "ಪುರಾಣದಲ್ಲಿ ಭಗವಂತನ ಲೀಲೆಗಳನ್ನು ಕೇಳುವದಲ್ಲದೆ ನಡುನಡುವೆ ಅಧ್ಯಾತ್ಮವಿಚಾರಗಳನ್ನೂ ಕೇಳಬೇಕು. ಕರ್ಮಮಾರ್ಗ, ಉಪಾಸನಾಮಾರ್ಗ, ಜ್ಞಾನಮಾರ್ಗ, ಯೋಗಮಾರ್ಗ, ವ್ರತಗಳ ಮಹಿಮೆ, ತೀರ್ಥಗಳ ಮಹಿಮೆ, ದಾನಗಳ ಮಹಿಮೆ, ವಿವಿಧಮಂತ್ರಗಳು, ವಿವಿಧ ತಪಸ್ಸುಗಳು— ಇವುಗಳನ್ನೆಲ್ಲಾ ತಿಳಿಯಬೇಕು. ಭೂಗೋಳದ ರಚನೆ, ಖಗೋಳದ ರಚನೆ ಮೊದಲಾದವುಗಳು ಕೂಡ ಬುದ್ಧಿಯಲ್ಲಿ ಹಾದು ಹೋಗಬೇಕು. ರಾಗಜ್ಞಾನ, ತಾಲಜ್ಞಾನ, ನೃತ್ಯಜ್ಞಾನ, ವಾದ್ಯಜ್ಞಾನ, ಜ್ಯೋತಿಷ, ಸಾಮುದ್ರಿಕ, ಓಷಧಿಜ್ಞಾನ—ಇವುಗಳ ಪರಿಚಯವು ಕೂಡ ಆಗಿರಬೇಕು." ಇಷ್ಟೆಲ್ಲಾ ಆಗುವ ಹಾಗೆ ಮಾಡಿದ ಶ್ರವಣವೇ ಶ್ರವಣ. ಹೀಗೆಂದು ಹೇಳಿದರೆ ಅಭ್ಯಾಸವೈರಾಗ್ಯದವರಿಗೆ ಸಂಶಯವು ಬರಬಹುದು. ಏಕೆಂದರೆ ಶ್ರುತಿಯಲ್ಲಿ

"ನಾನುಧ್ಯಾಯಾದ್ಬಹೂನ್ ಶಬ್ದಾನ್ ವಾಚೋ ವಿಗ್ಲಾಪನಂ ಹಿ ತತ್"

"ಅನ್ಯಾ ವಾಚೋ ವಿಮುಂಚಥ"

ಎಂದಿವೆ. ಬಹಳ ಮಾತುಗಳನ್ನು ಓದುವದರಿಂದ ನಾಲಿಗೆಗೆ ಆಯಾಸಮಾತ್ರವೆಂದೂ ಪರಮಾತ್ಮನ ಹೊರತು ಉಳಿದ ಮಾತುಗಳಿಗೆ ಹೋಗಬಾರದೆಂದೂ ಅವುಗಳ ಅರ್ಥವು. ಇದರಿಂದ ದಾಸಬೋಧದಲ್ಲಿ ಹೇಳಿದ ಅರ್ಥವು ಶ್ರುತಿಗೆ ವಿರೋಧವೆಂದು ಆಪಾತದೃಷ್ಟಿಯಿಂದ ಕಾಣಬಹುದು. ಹಾಗೇನೂ ಇಲ್ಲ. ಒಮ್ಮೆ ನಿಶ್ಚಯಜ್ಞಾನವಾದ ಮೇಲೆ ಬಹಳ ಓದುವದೂ ಉಳಿದ ಮಾತುಗಳಿಗೆ ಹೋಗುವದೂ ಅನವಶ್ಯಕವಾಗುವದು. ನಿಶ್ಚಯಜ್ಞಾನವಾಗುವದಕ್ಕೆ ಮುಂಚೆ ದಾಸಬೋಧದಲ್ಲಿ ಹೇಳಿದ ಪ್ರತ್ಯಕ್ಷರವೂ ಮಾನ್ಯವಾಗಿರುವದು. ವ್ರತಮಹಿಮೆ, ಭೂಗೋಳರಚನೆ, ರಾಗಜ್ಞಾನ-ಮೊದಲಾದವುಗಳಿಂದ ಕೂಡ ಹೆಚ್ಚಿನ ಉಪಯೋಗವಿದೆ. ಶ್ರವಣದ ಧ್ಯೇಯವೇನು? ಪರಮಾತ್ಮನ ಸರ್ವೋತ್ಕೃಷ್ಟತೆಯನ್ನು ತೋರಿಸುವದು. ಆ ಉದ್ದೇಶವನ್ನು ನೆರವೇರಿಸಿಕೊಳ್ಳುವದಕ್ಕೆ ಸಾಧನವಾಗಿ ಈ ಭೌತಿಕ

ವಿಚಾರಗಳೂ ಬೇಕಾಗುತ್ತವೆ. ಏಕೆಂದರೆ ಸುಖಕ್ಕೆ ಈ ಭೌತಿಕವಿಚಾರಗಳೇ ಸಾಧನಗಳೆಂದು ನಮ್ಮಲ್ಲೊಂದುಬಗೆಯ ತಿಳಿವಳಿಕೆಯು ಹೇಗೋ ಬೇರುಬಿಟ್ಟುಕೊಂಡಿದೆ. ಆದ್ದರಿಂದಲೇ ಎಲ್ಲರೂ ಭೌತಿಕವಿದ್ಯೆಯ ಕಡೆಗೇ ಮುಂದೆ ಮುಂದೆ ನುಗ್ಗುತ್ತೇವೆ. ನಮಗೆ ಅದರ ವಿಚಾರವೂ ಚೆನ್ನಾಗಿ ತಿಳಿದು ಇವೆಲ್ಲವೂ ಪರಮಾತ್ಮನ ಸೃಷ್ಟಿವೈಚಿತ್ರ್ಯದ ಒಂದೊಂದು ಲೇಶವೆಂದು ತಿಳಿದರೆ ಆಗ ನಮಗೆ ದೇವರಲ್ಲಿ ಪೂಜ್ಯಬುದ್ಧಿಯುಂಟಾಗುತ್ತದೆ. ಈ ದೃಷ್ಟಿಯಿಂದ ಕಲಿತರೆ ಭೌತಿಕವಾದ ಯಾವ ವಿದ್ಯೆಯೂ ವ್ಯರ್ಥವಲ್ಲ. ನಿಜವಾಗಿ ವಿದ್ಯೆಗಳ ಉದ್ದೇಶವೆಲ್ಲಾ ಇದೆ. ನಮಗೆ ಈ ದೃಷ್ಟಿ ಇಲ್ಲದ್ದರಿಂದ ಈ ವಿದ್ಯೆಗಳೆಲ್ಲಾ ಅವಿದ್ಯೆಗಳಾಗಿವೆ. ಇವೆಲ್ಲವೂ ಪರಮಾತ್ಮನ ಸೂತ್ರಕ್ಕೆ ಒಳಪಟ್ಟು ಇರುವ ವಿಚಾರವನ್ನು ಮನಸ್ಸಿಗೆ ತಂದುಕೊಂಡರೆ ಅವನಿಗೆ ಭಗವಂತನಲ್ಲಿ ವಿಚಾರಪೂರ್ವಕವಾದ ಭಕ್ತಿಯುಂಟಾಗುತ್ತದೆ. ಹೀಗೆ ಉಂಟಾದ ಭಕ್ತಿಯು ಆಮೇಲೆ ಕದಲುವದಲ್ಲ. ಹೀಗಲ್ಲದ ಕುರುಡಭಕ್ತಿಯು ಯಾವಾಗಲೋ ಅಡ್ಡದಾರಿಯನ್ನು ಹಿಡಿದು ಹೋಗಿ ಕೊರಕಲಿಗೆ ಬೀಳುವದು.

ಇಷ್ಟೆಲ್ಲಾ ಶ್ರವಣವನ್ನು ಮಾಡಬೇಕೆಂದು ಹೇಳಿದ ಮೇಲೆ ಶ್ರೀಸಮರ್ಥರು ಇನ್ನೊಂದು ಬೋಧವಾಕ್ಯವನ್ನು ಹೇಳಿದ್ದಾರೆ. ಅದರ ತಾತ್ಪರ್ಯವೇನೆಂದರೆ—

"ಹೀಗೆ ಎಲ್ಲವನ್ನೂ ಶ್ರವಣ ಮಾಡಬೇಕು; ಆದರೆ ಅದರಲ್ಲಿ ಸಾರವನ್ನು ಶೋಧಿಸಿ ತೆಗೆದುಕೊಳ್ಳಬೇಕು; ಅಸಾರವಾದ್ದನ್ನೆಲ್ಲಾ ಬಿಟ್ಟುಬಿಡಬೇಕು; ಇದೇ ಶ್ರವಣಭಕ್ತಿ." (೪-೧-೨೯)

ಹೀಗೆ ಸಾರಗ್ರಹಣ ಮಾಡುವ ವಿಷಯದಲ್ಲಿ ಶ್ರೀಶುಕಾಚಾರ್ಯರು ನಮಗೆ ಉದಾಹರಣೆಯಾಗಿರುತ್ತಾರೆ. ಹೇಗೆಂದರೆ ಅವರ

"ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ।
ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ ॥"

ಎಂಬ ಶ್ಲೋಕವನ್ನು ನೋಡಿದರೆ ಅವರು ಸರ್ವಶಾಸ್ತ್ರಗಳನ್ನೂ ನೋಡಿ ಅದರ ಮೇಲೆ ತಮ್ಮ ವಿಚಾರವನ್ನೂ ನಡೆಸಿ ನಡೆಸಿ ಪರಮಾತ್ಮನ ಅಖಂಡ ನಾಮಸ್ಮರಣೆಯನ್ನು ಮಾಡಬೇಕೆಂಬ ಒಂದರ್ಥವನ್ನು ಸಾರವಾಗಿ ತೆಗೆ

ದಿಟ್ಟಿರುತ್ತಾರೆ. ಈ ಕೆಲಸವನ್ನು ಶ್ರೀಶುಕಾಚಾರ್ಯರೇ ಮಾಡಿರುವರೆಂದು ಅಷ್ಟಕ್ಕೇ ಸುಮ್ಮನಾಗಬಾರದು. ಪ್ರತಿಯೊಬ್ಬರೂ ಆ ಕೆಲಸವನ್ನು ತಾವೇ ಮಾಡಿ ತಮ್ಮದೊಂದು ಸಾರಸಂಗ್ರಹವನ್ನು ಸಿದ್ಧಗೊಳಿಸಬೇಕು. ಹೀಗೆ ಮಾಡಿದರೆ ಮಾತ್ರ ಮುಂದೆ ಅದು ಗಟ್ಟಿಯಾಗಿ ಉಳಿಯುವದು.

ಶ್ರವಣದ ವಿಷಯದಲ್ಲಿ ಶ್ರೀಜಗನ್ನಾಥದಾಸರು ತಮ್ಮ ಹರಿಕಥಾಮೃತಸಾಗರದಲ್ಲಿ ಹೇಳಿರುವದೇನೆಂದರೆ—

"ಶ್ರವಣ ಮನಕಾನಂದವೀವುದು ।
ಭವಜನಿತದುಃಖಗಳ ಕಳೆವುದು ।
ವಿವಿಧಭೋಗಗಳಿಪವರಂಗಳಲಿತ್ತು ಸಲಹುವದು ॥
ಭುವನಪಾವನವೆನಿಪ ಲಕ್ಷ್ಮೀ ।
ಧವನ ಮಂಗಳಕಥೆಯು ಪರವೋ ।
ತ್ಸವದಿ ಕಿವಿಗೊಟ್ಟಾಲಿಪುದು ಭೂಸುರರು ದಿನದಿನದಿ॥"

## ಕೀರ್ತನ.

ಕೆರೆ ತುಂಬಿದ ಮೇಲೆ ಕೋಡಿ ಬೀಳಬೇಕಷ್ಟೆ. ಪರಮಾತ್ಮನ ಸ್ವರೂಪವನ್ನೂ ಜಗತ್ತಿನ ಸ್ವರೂಪವನ್ನೂ ಶ್ರವಣಮಾಡಿದ ಮೇಲೆ ಅವುಗಳೆಲ್ಲಾ ಮನಸ್ಸಿನಲ್ಲಿ ತುಂಬಿ ಕೀರ್ತನರೂಪದಲ್ಲಿ ಹೊರಬೀಳಬೇಕು. ಆಗ ಅದರ ವೈಭವವು ಆನಂದದಾಯಕವಾಗಿರುವದು. ಏಕೆಂದರೆ ಶ್ರೀಕೃಷ್ಣಪರಮಾತ್ಮನು ನಾರದರಿಗೆ ಹೇಳಿರುವದೇನೆಂದರೆ-

"ನಾಹಂ ವಸಾಮಿ ವೈಕುಂಠೇ ಯೋಗಿನಾಂ ಹೃದಯೇ ರವೌ ।
ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥"

"ಹೇ, ನಾರದ, ನಾನು ವೈಕುಂಠದಲ್ಲಿರುವವನೂ ಅಲ್ಲ; ಯೋಗಿಗಳ ಹೃದಯದಲ್ಲಿರುವವನೂ ಅಲ್ಲ; ಸೂರ್ಯಮಂಡಲದಲ್ಲಿರುವವನೂ ಅಲ್ಲ; ನನ್ನ ಭಕ್ತರು ಎಲ್ಲಿ ನನ್ನನ್ನು ಗಾನಮಾಡುತ್ತಾರೋ ಅಲ್ಲಿ ನಾನಿರುತ್ತೇನೆ." ಹೀಗೆಂದು ಅವನು ಹೇಳಿರುವ ಮಾತುಗಳಿಂದ ವೈಕುಂಠ, ಯೋಗಿಗಳ ಹೃದಯ, ಸೂರ್ಯಮಂಡಲ— ಮೊದಲಾದ ಕಡೆಗಳಲ್ಲಿ ಅವನಿಲ್ಲವೆಂದು ತಿಳಿಯಬಾರದು. ಪರಮಾತ್ಮನಿಲ್ಲದೆ ಇರುವ ಸ್ಥಲವೇ ಇಲ್ಲನೆಂಬುದಂತು

ಸರಿಯಷ್ಟೆ. ವೈಕುಂಠ ಮೊದಲಾದವುಗಳೂ ವಿಶೇಷವಾಗಿ ಅವನ ಸಾನ್ನಿಧ್ಯದ ಸ್ಥಲಗಳೆ. ಆದರೂ ಪರಮಾತ್ಮನಿಗೆ ಕೀರ್ತನದ ಮೇಲೆ ಪ್ರೀತಿ ಹೆಚ್ಚು. ಅದರಲ್ಲಿಯೂ ಗಾಯನದಿಂದ ಕೂಡಿದ ಕೀರ್ತನವೆಂದರೆ ಅವನಿಗೆ ಪರಮಪ್ರೀತಿ. ಈ ಅಭಿಪ್ರಾಯವನ್ನು ತೋರಿಸುವದಕ್ಕಾಗಿ ಆತನು ವೈಕುಂಠ ಮೊದಲಾದವುಗಳನ್ನು ಕಡಿಮೆ ಮಾಡಿ ಕೀರ್ತನವನ್ನು ಅಟ್ಟಕ್ಕೇರಿಸಿರುವನು. ದೇವರು ಸಾಮಗಾನಲೋಲನೆಂದು ಬಹಳವಾಗಿ ಪ್ರಸಿದ್ಧಿಯಿದೆ. ವೈಭವಪ್ರಿಯನಾದ ವಿಷ್ಣು ಗಾನಲೋಲನಾಗಿರುವದು ಸಹಜವಾಗಿದೆ. ಎಲ್ಲಾ ಪ್ರಾಣಿಗಳಿಗೂ ಅತ್ಯಿಷ್ಟವಾದ ಗಾನದಲ್ಲಿ ಪ್ರವೃತ್ತಿ ಇದ್ದೇ ಇರುವದು ನಮ್ಮೆಲ್ಲರ ಅನುಭವದಲ್ಲಿಯೂ ಇದೆ. ಈ ಪ್ರವೃತ್ತಿಯನ್ನು ಸದುಪಯೋಗ ಮಾಡಿಕೊಂಡು ಎಲ್ಲರೂ ತನ್ನ ಕಡೆಗೆ ಬರಲೆಂದೇ ಆತನು ಗಾನಲೋಲನಾಗಿದ್ದಾನೆಂದು ತೋರುತ್ತದೆ. ಹಾಗಿಲ್ಲದಿದ್ದರೆ ಸ್ವಾನಂದಮೂರ್ತಿಯಾದ ಆತನು ತನ್ನ ಆನಂದಕ್ಕೆ ಗಾನವನ್ನವಲಂಬಿಸಬೇಕಾದ್ದಿರಲಿಲ್ಲ. ಹೀಗೆ ಆತನು ನಮಗಾಗಿ ಗಾನಲೋಲನಾಗಿರುವದರಿಂದ ಪ್ರತಿಯೊಬ್ಬರೂ ಕೀರ್ತನದಿಂದ ಪರಮಾತ್ಮನನ್ನು ಒಲಿಸಿಕೊಳ್ಳುವ ಯತ್ನವನ್ನು ಮಾಡಬೇಕು.

ಇದರ ವಿಷಯದಲ್ಲಿ ಶ್ರೀರಾಮಕೃಷ್ಣಪರಮಹಂಸರು ಹೇಳಿರುವದೇನೆಂದರೆ—

(೧) ಲೋಕಮಾತೆಯಾದ ಆದಿಶಕ್ತಿಯು ಪರದೆಯ ಹಿಂದುಗಡೆ ಕುಳಿತು ತನ್ನ ಕೆಲಸವನ್ನು ನಡೆಸುತ್ತ ತಾನು ಮಾತ್ರ ಯಾರಿಗೂ ಕಾಣಿಸಿಕೊಳ್ಳದೆ ಇರುವ ಕುಲೀನಸ್ತ್ರೀಯಂತೆ ಇರುವಳು. ನಮ್ಮ ಪ್ರೇಮಪೂರ್ವಕವಾದ ಕೀರ್ತನೆಗಳು ಮಾತ್ರ ಮಾಯೆಯೆಂಬ ಪರದೆಯನ್ನು ತೂರಿಕೊಂಡು ಆಕೆಯ ಬಳಿಗೆ ಹೋಗುತ್ತವೆ.

(೨) ಒಬ್ಬ ತಾಯಿಗೆ ಅನೇಕ ಮಕ್ಕಳಿರುತ್ತಾರೆ. ಆಕೆಯು ಒಂದಕ್ಕೆ ಒಂದು ಬೊಂಬೆಯನ್ನೂ ಇನ್ನೊಂದಕ್ಕೆ ಒಂದು ತುಂಡು ಮಿಠಾಯಿಯನ್ನೂ ಮತ್ತೊಂದಕ್ಕೆ ಒಂದು ಹವಳದ ಆಟದ ವಸ್ತುವನ್ನೂ ಕೊಡುತ್ತಾಳೆ. ಆಗ ಅವರೆಲ್ಲರೂ ಅವರವರ ಆಟದಲ್ಲಿಯೇ ತನ್ಮಯರಾಗಿ ತಮ್ಮ ತಾಯಿಯನ್ನು ಮರೆತುಬಿಡುತ್ತಾರೆ. ಆ ಸಮಯದಲ್ಲಿ ಆಕೆಯು

ತನ್ನ ಮಟ್ಟಿಗೆ ತಾನು ಬೇರೆ ಕೆಲಸದಲ್ಲಿರುವಳು. ಆದರೆ ಆ ಮಕ್ಕಳುಗಳಲ್ಲಿ ಯಾವದು ತನ್ನ ಆಟದ ಸಾಮಾನನ್ನು ಬಿಸಾಟು 'ಅಮ್ಮ, ಅಮ್ಮ' ಎಂದು ಹಂಬಲಿಸುವದೋ ಆ ಮಗುವಿನ ಬಳಿಗೆ ಆಕೆಯು ಓಡಿ ಬಂದು ಅದನ್ನು ಎತ್ತಿಕೊಂಡು ಮುದ್ದಿಸುವಳು. ಆದುದರಿಂದ ಜನರೆ, ವ್ಯರ್ಥವಾದ ಪ್ರಪಂಚವಿಷಯಗಳಲ್ಲಿ ಮುಳುಗಿ ನಿಮ್ಮ ಲೋಕಮಾತೆಯನ್ನು ಮರೆತಿದ್ದೀರಿ; ಆದರೆ ಅವುಗಳನ್ನೆಲ್ಲ ಬಿಸಾಟು ಆಕೆಗೆ ಮೊರೆಯಿಟ್ಟರೆ ಆಕೆಯು ಒಡನೆಯೇ ಬಂದು ನಿಮ್ಮನ್ನು ಎತ್ತಿಕೊಳ್ಳುವಳು.

(೩) ಎಲೆ ಹೃದಯವೆ, ಲೋಕಮಾತೆಯಾದ ದೇವಿಗೆ ನಿಜವಾಗಿ ಮೊರೆಯಿಡು. ಆಕೆಯು ನಿನ್ನ ಬಳಿಗೆ ಎಷ್ಟು ಬೇಗ ಓಡಿ ಬರುವಳೆಂಬದನ್ನು ನೀನೇ ನೋಡುವೆ. ಮನಃಪೂರ್ವಕವಾಗಿ ದೇವಿಗೆ ಒಂದುಸಲ ಮೊರೆಯಿಟ್ಟರೆ ಸಾಕು. ಆಕೆ ಎಂದಿಗೂ ಅದಕ್ಕೆ ಕಿವಿಗೊಡದೆ ಇರುವದಿಲ್ಲ.

ಕೀರ್ತನವೆಂದರೆ ನಮ್ಮ ಕನ್ನಡ ದೇಶದಲ್ಲಿ ಒಂದೊಂದು ಕಡೆ ಒಂದೊಂದು ಅರ್ಥವಿದೆ. ಮೈಸೂರ ಕಡೆಯಲ್ಲಿ ಕೀರ್ತನವೆಂದರೆ ಪದಗಳನ್ನು ರಾಗವಾಗಿ ಹಾಡುವದು. ಧಾರವಾಡದ ಕಡೆಯಲ್ಲಿ ಕೀರ್ತನವೆಂದರೆ ತಾಳಮೇಳಗಾನಗಳೊಡನೆ ಪರಮಾತ್ಮನ ಕಥೆಯನ್ನು ಪ್ರತಿಪಾದಿಸುವದು. ಯಾವ ಯಾವ ಕಡೆ ಯಾವ ಅರ್ಥವಾದರೂ ಇರಲಿ. ಕೀರ್ತನವೆಂಬ ಸಂಸ್ಕೃತಶಬ್ದಕ್ಕೆ ಹೇಳುವದೆಂದರ್ಥ. ಇದರ ಪ್ರಕಾರ ಬರೀ ಪದಗಳನ್ನು ರಾಗದಿಂದ ಹಾಡುವದೂ ತಾಳಮೇಳಗಳೊಡನೆ ಪರಮಾತ್ಮನ ಕಥೆಯನ್ನು ಪ್ರತಿಪಾದಿಸುವದೂ ಇವೆರಡೇ ಅಲ್ಲದೆ ಪುರಾಣವನ್ನು ಹೇಳುವದೂ ವಿಚಾರಗಳನ್ನು ಉಪನ್ಯಾಸರೂಪದಿಂದ ನಿರೂಪಿಸುವದೂ ಇವೆಲ್ಲವೂ ಕೀರ್ತನಗಳೆ. ಶ್ರೀಸಮರ್ಥರಾಮದಾಸಸ್ವಾಮಿಗಳು ಕೀರ್ತನಶಬ್ದವನ್ನು ಈ ವ್ಯಾಪಕಾರ್ಥದಲ್ಲಿಯೇ ಇಟ್ಟುಕೊಂಡು ಕೀರ್ತನದ ಸ್ವರೂಪವನ್ನು ಕುರಿತು ತಮ್ಮ ದಾಸಬೋಧಗ್ರಂಥದಲ್ಲಿ ಬರೆದಿರುವದರ ತಾತ್ಪರ್ಯವೇನೆಂದರೆ---

"ಕೀರ್ತನಕಾರನು ಅಪ್ರತಿಹತವಾದ ತನ್ನ ವೈಖರಿಯಿಂದ ಭಗವನ್ಮಹಿಮೆಯ ಪ್ರವಾಹವನ್ನು ಶ್ರೋತೃವೃಂದದ ಮೇಲೆ ಹಾಯಿಸಬೇಕು.

ಕೀರ್ತನಕಾರನಿಗೆ ಅನೇಕ ಪಾಠಾಂತರಗಳೂ ಪರಿಚಯವಿದ್ದು ಅವುಗಳೆಲ್ಲಾ ಅಲ್ಲಿ ಸೂರೆಯಾಗಬೇಕು. ಸುಮ್ಮನೆ ಬರೆದಿದ್ದಷ್ಟನ್ನು ಅಥವಾ ಗಟ್ಟಿ ಮಾಡಿದಷ್ಟನ್ನು ಗಿಳಿಯಂತೆ ಓದುವ ಅಥವಾ ಒಪ್ಪಿಸುವ ಕೀರ್ತನವು ಕೀರ್ತನವಲ್ಲ. ಕೀರ್ತನದಲ್ಲಿ ಸಮಯಕ್ಕೆ ತಕ್ಕ ಹಾಗೆ ಅನೇಕ ಕತೆಗಳಿಂದ ಉದಾತ್ತವಿಚಾರಗಳು ಧುಮುಕುತ್ತಿರಬೇಕು. ಕೀರ್ತನಕಾರನು ಪ್ರತಿದಿನವೂ ಹೊಸ ಹೊಸ ಪ್ರಸಂಗಗಳನ್ನು ತೆಗೆಯಬೇಕು. ಅವುಗಳನ್ನು ಪ್ರತಿಪಾದಿಸುವಾಗ ನಾನಾವಿಧವಾದ ಆಕ್ಷೇಪಗಳನ್ನು ತಾನೇ ಎತ್ತಿ ಅವುಗಳಿಗೆಲ್ಲಾ ಸಭಿಕರು ತಲೆದೂಗುವಂತೆ ಸಮಾಧಾನವನ್ನು ಹೇಳಬೇಕು. ಕೀರ್ತನಸಮಯದಲ್ಲಿ ಬಗೆಬಗೆಯ ಧ್ಯಾನಗಳನ್ನೂ ವರ್ಣಿಸಬೇಕು; ಕೇಳುವವರ ಮನಸ್ಸಿನಲ್ಲಿ ಪರಮಾತ್ಮನ ಸಗುಣಮೂರ್ತಿಯು ಒಡೆದು ಮೂಡುವಂತೆ ಅದರ ಅಲಂಕಾರವಿಶೇಷಗಳ ದುಂದು ಮಾಡಿಬಿಡಬೇಕು; ಪರಮಾತ್ಮನ ಯಶಸ್ಸು, ಪರಮಾತ್ಮನ ಪ್ರತಾಪ— ಇವು ಕೇಳಿದವರ ಮನಸ್ಸಿನಲ್ಲಿ ಮನೆಯನ್ನು ಮಾಡಿಕೊಳಬೇಕು. ಕೀರ್ತನಕಾರನ ವಾಣಿಯು ಭಾಷಾಪಾಂಡಿತ್ಯವು ಸಭಿಕರನ್ನು ಬೆರಗುಮಾಡಿಬಿಡಬೇಕು; ಪರಮಾತ್ಮನ ಕಥೆಯನ್ನು ವಿವರಿಸುವಾಗ ನಡುನಡುವೆ ಕಟ್ಟುಕಥೆಗಳನ್ನೂ ಐತಿಹಾಸಿಕಕಥೆಗಳನ್ನೂ ಹೇಳಿ ಜನರ ಮನಸ್ಸನ್ನು ಉಲ್ಲಾಸಗೊಳಿಸಬೇಕು. ತಾಳ, ಗಾಯನ, ಮೃದಂಗ— ಇವುಗಳಿಂದಲೂ ಜನರ ಮನಸ್ಸನ್ನು ಆಕರ್ಷಿಸಬೇಕು. ಸುವೃಷ್ಟಿಯಾದಾಗ ನೀರು ತುಂಬಿ ಮೊರೆಯುತ್ತ ಹರಿಯುವಂತೆ ಕೀರ್ತನಕಾಲದಲ್ಲಿ ಪರಮಾತ್ಮವಿಚಾರಪ್ರವಾಹವು ಜನರ ಕಿವಿಗಳಲ್ಲಿ ಭೋರ್ಗಟ್ಟುತ್ತಿರಬೇಕು; ಹೇಳುವವರಿಗೂ ಕೇಳುವವರಿಗೂ ರೋಮಾಂಚವುಂಟಾಗಿ ಆನಂದಾಶ್ರುಗಳ ಕೋಡಿಬಿಡಬೇಕು. ಕೀರ್ತನದಲ್ಲಿ ಬಗೆಬಗೆಯ ನೃತ್ಯಪದ್ಯಗಳ ಪ್ರವೇಶವಾಗಬೇಕು. ಕೀರ್ತನಸ್ಥಾನವು ವೀರಶ್ರೀಯ ವಿಹಾರಭೂಮಿಯಾಗಬೇಕು. ಶೃಂಗಾರ ಮೊದಲಾದ ರಸಗಳಿಗೂ ಕೊರತೆಯಾಗಬಾರದು. ಸಾಮಾನ್ಯವಿಚಾರಗಳ ನಡುನಡುವೆ ವೇದಾಂತವಿಚಾರಗಳನ್ನು ಪೋಣಿಸಬೇಕು. ಕರ್ಮ, ಉಪಾಸನ— ಈ ಮಾರ್ಗಗಳನ್ನು ರಕ್ಷಣಮಾಡಿಕೊಂಡು

ಜ್ಞಾನಮಾರ್ಗವನ್ನು ಹೇಳಬೇಕು. ಯಾವ ಸದ್ವೃತ್ತಿಯಲ್ಲಿಯೂ ಅನಾದರವನ್ನುಂಟುಮಾಡದಂತೆ ಎಚ್ಚರಿಕೆಯಿಂದಿರಬೇಕು.

ಶ್ರೀಸಮರ್ಥರು ಹೇಳುವಂತೆ ಇಷ್ಟೆಲ್ಲಾ ಗುಣವಿಶೇಷಗಳಿಂದ ಕೀರ್ತನಮಾಡುವವರೂ ಸಿಕ್ಕಬಹುದು. ಏಕೆಂದರೆ ಈಗಿನ ಕಾಲದಲ್ಲಿ ಪಾಂಡಿತ್ಯದ ಕಲೆಯೂ ಅಗ್ಗವಾಗಿದೆ. ಇದರ ಜೊತೆಗೆ ಅಲ್ಲಲ್ಲಿ ವಕ್ತೃತ್ವದ ಅಭ್ಯಾಸವೂ ಬೆಳೆಯುತ್ತಿದೆ. ಆದರೆ ಮೇಲೆ ಹೇಳಿದ ಗುಣಗಳ ಜೊತೆಗೆ ಇನ್ನೊಂದು ಗುಣವು ಅವಶ್ಯಕವಾಗಿರಬೇಕಾಗಿದೆ. ಅದು ಇವುಗಳ ಮೇಲೆಲ್ಲಾ ತನ್ನ ಬೆಳಕನ್ನು ಕೆಡಹುವಂಥದ್ದು. ಆ ಗುಣವಿದ್ದರೆ ವಕ್ತೃತ್ವವು ಕಾರ್ಯಕಾರಿಯಾಗುವದು. ಇಲ್ಲದಿದ್ದರೆ ಅದು ಅರಣ್ಯರೋದನವೆ. ಅದೇನೆಂದರೆ—

" ವಕ್ತಾ ಪಾಹಿಜೆ ಸಾಚಾರ । ಅನುಭವಾಚಾ "

ಎಂದು ಶ್ರೀಸಮರ್ಥರು ಹೇಳಿರುವಂತೆ ಕೀರ್ತನಕಾರನು ಆಚಾರಶೀಲನಾಗಿ ಅನುಭವಿಯಾಗಿರಬೇಕು. ಗಣಿತ, ಖಗೋಳ, ಭೂಗೋಳ-ಮೊದಲಾದವುಗಳನ್ನು ಹೇಳುವವರು ಹೇಗಿದ್ದರೂ ನಡೆಯುತ್ತದೆ. ಧರ್ಮವಿಚಾರಕ್ಕೆ ಮಾತ್ರ ಹಾಗೆ ನಡೆಯುವದಿಲ್ಲ. ಆಚಾರಹೀನನೂ ವಕ್ತೃತ್ವದಲ್ಲಿ ಯಶಸ್ಸನ್ನು ಪಡೆಯಬಹುದು. ಅನಾಚಾರಿಯು ಹೇಳಿದ ಗಣಿತಮೊದಲಾದವು ಹೇಗೆ ಕಲಿಯುವವರ ಮನಸ್ಸಿನಲ್ಲಿ ಬಿಂಬಿಸುವವೊ ಹಾಗೆ ಅನಾಚಾರಿಯು ಹೇಳಿದ ಧರ್ಮಬೋಧೆಯು ಯಾರ ಮನಸ್ಸಿನಲ್ಲಿಯೂ ಬಿಂಬಿಸಲಾರದು. ಧರ್ಮಬೋಧೆಗೆ ಅನಾಚಾರದವನ ಬಾಯಿಂದ ಹೊರಡುವದೊಂದು ದುರ್ದಶೆಯೇ ಸರಿ. ಆದ್ದರಿಂದ ಕೀರ್ತನಕಾರರು ತಮ್ಮ ಆಚಾರವನ್ನು ಚೆನ್ನಾಗಿ ರಕ್ಷಣೆ ಮಾಡಿಕೊಂಡು ತಾವು ಹೇಳುವ ಸದುಪದೇಶಗಳನ್ನೆಲ್ಲಾ ತಮ್ಮ ಅನುಭವದಲ್ಲಿಟ್ಟುಕೊಳ್ಳಬೇಕು. ಹೀಗೆ ಮಾಡಿದರೆ ಮಾತ್ರ ಕೀರ್ತನದಿಂದ ಬಹುಜನರನ್ನು ಬಹು ಅನಾಯಾಸವಾಗಿ ದಾರಿಗೆ ತರಬಹುದು. ಈ ಬಗೆಯ ಕೀರ್ತನವು ಭಕ್ತಿಯ ಒಂದು ಲಕ್ಷಣವೆಂದು ಭಗವಾನ್ ನಾರದರ

" ಕಥಾದಿಷ್ವಿತಿ ಗರ್ಗಃ "

ಎಂಬ ಸೂತ್ರವು ಹೇಳಿರುವದು. ದೇವರ ಕಥೆಗಳಲ್ಲಿರುವ ಆಸಕ್ತಿಯೇ ಗುರುತೆಂದು ಗರ್ಗಾಚಾರ್ಯರ ಅಭಿಪ್ರಾಯವು.

ಈ ಬಗೆಯ ಕೀರ್ತನಕ್ಕೆ ಶ್ರೀಶುಕಾಚಾರ್ಯರೇ ತಕ್ಕ ಉದಾಹರಣೆ. ಅವರ ವಕ್ತೃತ್ವಸ್ವಭಾವವನ್ನು ಆಗ ನೋಡಿದವರೇ ಧನ್ಯರು. ಏಳು ದಿವಸ ಅಖಂಡವಾಗಿ ಭಾಗವತಕೀರ್ತನವನ್ನು ಮಾಡುವದೆಂದರೆ ಸಾಮಾನ್ಯವಲ್ಲ. ಒಂದೆರಡು ತಾಸು ಹೇಳುವದರಲ್ಲಿಯೇ ಮನುಷ್ಯನ ಸಾಮರ್ಥ್ಯವು ಕುಗ್ಗುತ್ತದೆ. ಏಕಪ್ರಕಾರವಾಗಿ ಏಳು ದಿವಸ ಜನರ ಮನಸ್ಸನ್ನೆಲ್ಲಾ ಆಕರ್ಷಣೆ ಮಾಡಿಕೊಂಡು ಉತ್ಸಾಹಪೂರ್ಣವಾಗಿ ಕೀರ್ತನವನ್ನು ಮಾಡಿದ್ದನ್ನು ಎಷ್ಟು ಹೊಗಳಿದರೂ ತೀರದು. ಕೀರ್ತನಕಾರರೆಲ್ಲರೂ ಕೀರ್ತನಾರಂಭದಲ್ಲಿ ಶ್ರೀಶುಕಾಚಾರ್ಯರನ್ನು ವಂದಿಸಿ ಕೀರ್ತನದ ಸಾಮರ್ಥ್ಯವನ್ನನುಗ್ರಹ ಮಾಡುವಂತೆ ಪ್ರಾರ್ಥಿಸಿಕೊಳ್ಳಬೇಕು. ಏಕೆಂದರೆ ಅಂಥ ಕೀರ್ತನಕಾರರು ಇನ್ನೊಬ್ಬರು ಹುಟ್ಟಿಲ್ಲ. ಅವರ ಕೀರ್ತನದ ಉಪಕರಣಗಳನ್ನು ಭಾಗವತಮಾಹಾತ್ಮ್ಯಕಾರರು ವರ್ಣಿಸಿರುವದನ್ನು ನೆನೆಸಿಕೊಂಡರೆ ಮೈ ಜುಮ್ಮೆನ್ನುತ್ತದೆ ನೋಡಿರಿ.

“ ಪ್ರಹ್ಲಾದಸ್ತಾಲಧಾರೀ ತರಲಗತಿತಯಾ ಚೋದ್ಧವಃ ಕಾಂಸ್ಯಧಾರೀ ।
ವೀಣಾಧಾರೀ ಸುರರ್ಷಿಃ ಸ್ವರಕುಶಲತಯಾ ರಾಗಕರ್ತಾರ್ಜುನೋಽಭೂತ್ ॥
ಇಂದ್ರೋಽವಾದೀನ್ಮೃದಂಗಂ ಜಯಜಯಸುಕರಾಃ ಕೀರ್ತನೇ ತೇ ಕುಮಾರಾಃ ।
ಯತ್ರಾಗ್ರೇ ಭಾವವಕ್ತಾ ಸರಸರಚನಯಾ ವ್ಯಾಸಪುತ್ರೋ ಬಭೂವ ॥ ”

ತಾಲಕ್ಕೆ ಪ್ರಹ್ಲಾದನು; ಝಾಲರಿಗೆ ಉದ್ಧವನು; ವೀಣೆಗೆ ನಾರದರು; ಹಿಮ್ಮೇಳಕ್ಕೆ ಅರ್ಜುನ; ಮೃದಂಗಕ್ಕೆ ಇಂದ್ರ; ಜಯಜಯಕಾರಕ್ಕೆ ಅಶ್ವಿನೀಕುಮಾರರು; ಇವರ ನಡುವೆ ಸರಸವಾಗಿ ಭಾವವನ್ನು ಪ್ರತಿಪಾದನೆ ಮಾಡುವದಕ್ಕೆ ಶ್ರೀಶುಕಾಚಾರ್ಯರು! ಎಂಥ ವೈಭವ!!

ಕೀರ್ತನವು ಜನರಲ್ಲಿ ರೋಮಾಂಚವನ್ನು ಹುಟ್ಟಿಸಿ ಆನಂದಾಶ್ರುವಿನ ಕೋಡಿ ಹರಿಯುವಂತೆ ಮಾಡಬೇಕು. ಈಗ ನಡೆಯುತ್ತಿರುವ ಎಷ್ಟೋ ಕೀರ್ತನಗಳಲ್ಲಿ ಈ ಲಕ್ಷಣವನ್ನು ನಾವು ಮನಗಾಣಬಹುದು. ಆದರೆ ಭಕ್ತಿಯ ನಿಜಸ್ವರೂಪವು ಮೈಯುಗ್ಗಡಿತೆಂಬುದಕ್ಕೆ ಈ ಲಕ್ಷಣದ ಒಳಭೇದಗಳನ್ನು ತಿಳಿಯುವದಗತ್ಯವು. ಮಹಾಸಾಧುಗಳಾದ ಶ್ರೀಏಕ

ನಾಥರು ಭಾಗವತದ ಏಕಾದಶಸ್ಕಂಧದ ೧೧ನೇ ಅಧ್ಯಾಯದ ೨೩ನೇ ಶ್ಲೋಕಕ್ಕೆ ವಿವರಣೆಯನ್ನು ಬರೆಯುವಾಗ ಈ ವಿಚಾರವನ್ನು ಉಲ್ಲೇಖಿಸಿದ್ದಾರೆ. ಅದರ ತಾತ್ಪರ್ಯವೇನೆಂದರೆ— “ಕಥೆಯಲ್ಲಿ ಕೆಲವು ಪಾತ್ರಗಳು ದುಃಖಿಸುವ ಪ್ರಸಂಗವನ್ನು ಸತ್ತುಕೆಟ್ಟುಹೋದ ಸುದ್ದಿಯನ್ನು ಬಣ್ಣಗೊಟ್ಟು ವಿವರಿಸುವಾಗ ಅನೇಕರ ಕಣ್ಣಲ್ಲಿ ನೀರಿಳಿಯುವದು. ಅನೇಕರ ಮೈ ಗಡಗುಟ್ಟಿ ನಡುಗುವದು. ಇದೂ ಪ್ರೇಮದ ಲಕ್ಷಣವೆ; ಆದರೆ ಅದು ತಾಮಸಪ್ರೇಮ. ಮಹಾವೀರರ ಶೌರ್ಯವನ್ನು ದಾರುಣವಾದ ಯುದ್ಧವನ್ನು ಕೇಳುವಾಗ ಮನಸ್ಸಿಗೆ ಆಗುವ ಉಲ್ಲಾಸವೂ ಪ್ರೇಮದ ಲಕ್ಷಣವೆ; ಆದರೆ ಅದು ರಾಜಸ. ಪರಮಾತ್ಮನ ಸಗುಣಮೂರ್ತಿಯ ವೈಭವವನ್ನು ಕರುಣಾಮಯತೆಯನ್ನು ನೆನೆನೆನೆಯುತ್ತ ಮನಸ್ಸು ಪರಮಾತ್ಮಮಯವಾಗುವದು ಮಾತ್ರ ಸಾತ್ತ್ವಿಕಪ್ರೇಮ. ಕೀರ್ತನಕಾಲದಲ್ಲಿ ಸಭೆಯ ಮೇಲೆಲ್ಲಾ ಈ ಸಾತ್ತ್ವಿಕ ಪ್ರೇಮದ ಪ್ರವಾಹವು ಹರಿದಿರಬೇಕು.

ಕೀರ್ತನದ ವಿಷಯವಾಗಿ ನಾವು ಹೇಳಬೇಕಾದದ್ದು ಮುಗಿದರೂ ಇನ್ನೊಂದು ಸಂಗತಿಯನ್ನು ನಮ್ಮ ಕೀರ್ತನಕಾರರ ಕಿವಿಯಲ್ಲಿ ಹೇಳಬೇಕಾಗಿದೆ. ಕೀರ್ತನವು ಪ್ರತಿಫಲಾಪೇಕ್ಷೆಯದಾಗಬಾರದು. ಇನ್ನು ಹೊಟ್ಟೆಗೇನು ಗತಿಯೆಂಬ ಯೋಚನೆಯುಂಟಾದರೆ ಅನನ್ಯಭಕ್ತಿಯುಳ್ಳವರ ಯೋಗಕ್ಷೇಮವನ್ನು ತಾನು ನೋಡಿಕೊಳ್ಳುತ್ತೇನೆಂಬ ಭಗವದ್ವಾಕ್ಯವನ್ನು ಸ್ಮರಣೆಗೆ ತಂದುಕೊಳ್ಳಬೇಕು. ಆ ಮಾತಿನ ಮೇಲೆ ವಿಶ್ವಾಸವನ್ನಿಡುವಷ್ಟು ಮನೋದಾರ್ಢ್ಯವಿಲ್ಲದಿದ್ದರೆ

“ಆಪುಲಿಯಾ ಸುಖಸ್ವಾರ್ಥಾ । ಕೇಲೀಚ ಕರಾವೀ ಹರಿಕಥಾ ।
ಹರಿಕಥೇ ವೀಣ ಸರ್ವಥಾ ರಾಹೋಂಚ ನಯೇ ॥”

ಎಂದು ಶ್ರೀಸಮರ್ಥರು ಹೇಳಿರುವಂತೆ ತಮ್ಮ ಸುಖಸ್ವಾರ್ಥಗಳನ್ನು ಮಾಡಿಕೊಂಡು ಹರಿಕಥೆಯನ್ನು ಮಾಡಬೇಕು. ಹರಿಕಥೆ ಇಲ್ಲದೆ ಎಂದೂ ಇರಲೇಬಾರದು. ಹರಿಕಥೆಯನ್ನು ಮಾರಬಾರದು. ಹರಿಕಥೆಯನ್ನು ಕೇಳಿ ಯಾರಾದರೂ ಸಹಾಯ ಮಾಡಿದರೆ ತೆಗೆದುಕೊಳ್ಳಬಹುದು; ಆದರೆ ಅದಕ್ಕೆ ಮುಂದಾಗಿಯೇ ಬೆಲೆಯನ್ನು ಕಟ್ಟಿ ಮಾರುವದು ಸಂಪೂರ್ಣವಾಗಿ ಅದನ್ನು ದುರುಪಯೋಗ ಮಾಡಿಕೊಂಡಂತೆ ಆಗುವದು. ಪರಿಗ್ರಹದ ವಿಷ

ಯುದಲ್ಲಿ ನಮ್ಮವರು ಎಷ್ಟು ವಿರಕ್ತಿಯಿಂದ ಇದ್ದರೆಂಬುದನ್ನು ಮನಸ್ಸಿಗೆ ತಂದುಕೊಳ್ಳಬೇಕು. ಒಮ್ಮೆ ಅಗಸ್ತ್ಯರಿಗೆ ಹಣವು ಬೇಕಾಗಿತ್ತು. ಆಗ ಅವರು ಶ್ರುತಶ್ವ, ಬ್ರಧ್ನಶ್ವ-ಎಂಬುವರ ಬಳಿಗೆ ಹೋದರು. ಆ ಗೃಹಸ್ಥರು ಅಗಸ್ತ್ಯರಿಗೆ ಹಣವನ್ನು ಕೊಡುವದಕ್ಕೆ ಸಿದ್ಧರಾಗಿದ್ದರು. ಆದರೆ ಅಗಸ್ತ್ಯರು ನೋಡಿದಾಗ ಆ ಗೃಹಸ್ಥರ ಆಯವ್ಯಯಗಳೆರಡೂ ಸರಿಯಾಗಿದ್ದದ್ದರಿಂದ ಅವರು ಕೊಡುವದನ್ನು ಅಗಸ್ತ್ಯರು ಪರಿಗ್ರಹಿಸಲಿಲ್ಲ. ಒಂದು ಪಕ್ಷ ಕೊಡತಕ್ಕವರು ಧನಿಕರಾಗಿದ್ದರೂ ತನಗೆ ಅಗತ್ಯವಾದಷ್ಟಕ್ಕಿಂತ ಹೆಚ್ಚನ್ನು ಪರಿಗ್ರಹಿಸುವದು ಕೂಡ ನಮ್ಮವರಿಗೆ ಯೋಗ್ಯವೆನಿಸುವದಿಲ್ಲ. ವರತಂತುಋಷಿಗಳು ತಮ್ಮ ಶಿಷ್ಯನಿಗೆ ಒಂದು ಮೊತ್ತವನ್ನು ಗುರುದಕ್ಷಿಣೆಯಾಗಿ ಕೇಳಿದ್ದರು. ಆ ಶಿಷ್ಯನು ಒಬ್ಬ ರಾಜನ ಬಳಿಗೆ ಹೋಗಿ ಯಾಚಿಸಿದಾಗ ಆ ರಾಜನು ಅವನಿಗೆ ಹೆಚ್ಚಾಗಿ ಕೊಡುವದಕ್ಕೆ ಬಂದನು. ಆಗ ಆ ಶಿಷ್ಯನು ತನ್ನ ಅಗತ್ಯಕ್ಕಿಂತ ಹೆಚ್ಚಾಗಿ ಪರಿಗ್ರಹಿಸಲಾರೆನೆಂದು ಹೇಳಿದ್ದಾನೆ. ಇಂಥ ಪುಣ್ಯಶ್ಲೋಕರ ವಂಶದಲ್ಲಿ ಹುಟ್ಟಿ ಕೀರ್ತನಕ್ಕೆ ಬೆಲೆಯನ್ನು ಕಟ್ಟಿ ಅಂಗಡಿಯನ್ನಾಗಿಡುವದು ವ್ಯವಹಾರದೃಷ್ಟಿಯಿಂದ ಎಷ್ಟೇ ಸೌಕರ್ಯವಾಗಿ ಕಂಡರೂ ಧರ್ಮದೃಷ್ಟಿಯಿಂದ ನಿಂದ್ಯವೇ ಸರಿ. ತಮ್ಮ ಕೀರ್ತನವು ವೀರ್ಯವತ್ತಾಗಬೇಕಾದರೆ ಕೀರ್ತನಕಾರರು ಅವಶ್ಯವಾಗಿ ವಿರಕ್ತರಾಗಿರಬೇಕು. ಇಲ್ಲದಿದ್ದರೆ ನಾಟಕವನ್ನಾದರೂ ಹೂಡಬೇಕು. ಧನಾಕರ್ಷಣೆಯ ಉದ್ದೇಶವನ್ನಿಟ್ಟುಕೊಂಡು ವೈರಾಗ್ಯವನ್ನುಪದೇಶ ಮಾಡುವದು "ಮಾಡುವದು ಅನಾಚಾರ; ಮನೆಯ ಮುಂದೆ ವೃಂದಾವನ" ಎಂಬ ಗಾದೆಯಂತೆ ಆಗುವದು. ಕೀರ್ತನಕ್ಕೆ ಈ ದುರ್ದಶೆ ಬರದಂತೆ ಕೀರ್ತನಕಾರರು ರಕ್ಷಣೆ ಮಾಡಬೇಕು.

## ಸ್ಮರಣ.

ಕೇಳುವದು ಮತ್ತು ಹೇಳುವದು- ಇವು ಜ್ಞಾನೇಂದ್ರಿಯದ ಕೆಲಸಗಳಾದವು. ಸ್ಮರಣೆಯು ಮನಸ್ಸಿನ ಕ್ರಿಯೆ. ಮನಸ್ಸು ಸರ್ವೇಂದ್ರಿಯಗಳಿಗೂ ಅಂತರವಾದ್ದರಿಂದ ಮನಸ್ಸಿನ ಕ್ರಿಯೆಯು ಹೆಚ್ಚು ಪರಿಣಾಮಕಾರಕವಾಗುವದು.

“ ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ”

ಎಂಬ ವಚನದಂತೆ ಈಗ ಪರತಂತ್ರಕ್ಕೆ ಸಿಕ್ಕಿರುವದೆಂಬುದು ಮನಸ್ಸೇ. ಆದ್ದರಿಂದ ಸ್ವಾತಂತ್ರ್ಯವೂ ಮನಸ್ಸಿಗೇ ಆಗಬೇಕಾಗಿರುವದು. ಆ ಪಾರತಂತ್ರ್ಯವೂ ಸ್ವಾತಂತ್ರ್ಯವೂ ಏನೆಂದರೆ—

“ ಬಂಧಾಯ ವಿಷಯಾಸಕ್ತಂ ಮುಕ್ತ್ಯೈ ನಿರ್ವಿಷಯಂ ಸ್ಮೃತಮ್ ”

ಎಂಬ ಉತ್ತರಾರ್ಧದಂತೆ ಸುಖಕ್ಕಾಗಿ ಹೊರಗಣ ಭೌತಿಕಸಾಧನಗಳನ್ನು ಅವಲಂಬಿಸುವದೇ ಪಾರತಂತ್ರ್ಯ; ಅವುಗಳಿಲ್ಲದಿದ್ದರೂ ಸುಖದಿಂದಿರುವದೇ ಸ್ವಾತಂತ್ರ್ಯ. ಭೌತಿಕಸಾಧನಗಳನ್ನೇ ಮನಸ್ಸಿನಲ್ಲಿ ಕನವರಿಸಿಕೊಳ್ಳುತ್ತ ಹೋಗುವದರಿಂದ ಮನಸ್ಸು ಅದರಲ್ಲಿ ಆಸಕ್ತವಾಗುವದು. ದೇವರನ್ನು ಕನವರಿಸಿಕೊಳ್ಳುತ್ತ ಹೋದರೆ ಮನಸ್ಸು ದೇವರಲ್ಲಿ ಆಸಕ್ತವಾಗುವದು. ದೇವರು ಸರ್ವತಂತ್ರಸ್ವತಂತ್ರನು. ಅಂಥವನಲ್ಲಿ ಮನಸ್ಸು ಆಸಕ್ತವಾಯಿತೆಂದರೆ ಮನಸ್ಸಿಗೂ ಅದೇ ಗುಣವು ಇಳಿದು ಬಂದು ಅದಕ್ಕೂ ಸ್ವಾತಂತ್ರ್ಯಸುಖವು ದೊರೆಯುವದು. ಈ ಅರ್ಥವನ್ನೇ ಗೀತೆಯಲ್ಲಿ ಭಗವಂತನು ಉಪದೇಶ ಮಾಡಿರುವದೇನೆಂದರೆ-

“ ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।
ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ”

ಇದರ ಅರ್ಥವೇನೆಂದರೆ- “ ಮನಸ್ಸಿನಲ್ಲಿ ಇನ್ನೊಂದರ ಮೇಲೆ ಭಾರವನ್ನಿಡದೆ ಯಾರು ಯಾವಾಗಲೂ ನನ್ನನ್ನು ಸ್ಮರಿಸುತ್ತಾರೋ ಹಾಗೆ ಏಕಾಗ್ರಚಿತ್ತದಿಂದ ಅಖಂಡಧ್ಯಾನವನ್ನು ಮಾಡುವವರಿಗೆ ನಾನು ಸುಲಭನು.” ಅದರಲ್ಲಿಯೂ

“ ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।
ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥”

ಎಂದರೆ “ಮರಣಕಾಲದಲ್ಲಿ ಶರೀರವನ್ನು ಬಿಡುವಾಗ ಯಾರು ನನ್ನನ್ನೇ ಸ್ಮರಿಸುತ್ತ ಹೋಗುತ್ತಾರೋ ಅವರು ನನ್ನ ಸ್ವರೂಪವನ್ನೇ ಪಡೆಯುತ್ತಾರೆ; ಇದರಲ್ಲಿ ಸಂದೇಹವಿಲ್ಲ. ಹೀಗೆ ಭಗವಂತನ ವಾಗ್ದಾನವಾಗಿದೆ.

ಸ್ಮರಣೆಗೆ ಪ್ರಹ್ಲಾದನು ಒಳ್ಳೇ ಉದಾಹರಣೆ. ತಂದೆಯಾದ ಹಿರಣ್ಯಕಶಿಪು ಮಗನಾದ ಪ್ರಹ್ಲಾದನನ್ನು ಬಗೆಬಗೆಯಿಂದ ಕೊಲ್ಲಿಸಬೇಕೆಂದು

ಯತ್ನವನ್ನು ಮಾಡಿದನು. ವಿಷವನ್ನು ಕುಡಿಸುವದು, ಹಾವುಗಳಿಂದ ಕಚ್ಚಿಸುವದು, ಬೆಟ್ಟದ ಮೇಲಿನಿಂದ ಉರುಳಿಸುವದು, ಸಮುದ್ರಕ್ಕೆ ತಳ್ಳುವದು– ಹೀಗೆಲ್ಲ ಏನೇನು ಮಾಡಿದರೂ ಪ್ರಹ್ಲಾದನು ಅಖಂಡವಾಗಿ ಶ್ರೀಹರಿಯ ಸ್ಮರಣೆಯನ್ನು ಮಾಡುತ್ತಿದ್ದದರಿಂದ ಅವನಿಗೆ ಎಲ್ಲೆಲ್ಲಿಯೂ ಪರಮಾತ್ಮನ ಸಾನ್ನಿಧ್ಯವೇ ಉಂಟಾಗಿ ವಿಷ ಮೊದಲಾದವುಗಳ ವೇಗವೆಲ್ಲ ಮಾಯವಾಗಿ ಹೋಗುತ್ತಿತ್ತು. ದೇವರ ಮನಸ್ಸಿಗೆ ಬಂದರೆ ವಿಷ ಮೊದಲಾದವುಗಳೇ ಅಮೃತವಾಗುವದಕ್ಕೇನು ತಡ! ಪ್ರಹ್ಲಾದನು ಪರಮಾತ್ಮನ ನಾಮವನ್ನು ಗಟ್ಟಿಯಾಗಿ ಅವಲಂಬಿಸಿಕೊಂಡು ಸ್ಮರಣೆಮಾಡುತ್ತಿದ್ದದರಿಂದ ಈ ವಿಪತ್ತುಗಳೆಲ್ಲಾ ತಮಗೇ ವಿಪತ್ತುಗಳಾಗಿ ಪರಿಣಮಿಸಿದವು. ಯಾವ ವಸ್ತುವಿಗಾದರೂ ನಾಮ, ರೂಪ–ಎಂಬೆರಡು ಅವಯವಗಳುಂಟು. ಅದರಲ್ಲಿಯೂ ನಾಮಕ್ಕೆ ಪ್ರಾಶಸ್ತ್ಯವು ಹೆಚ್ಚು. ನಾಮವು ಜುಟ್ಟಿನ ಹಾಗೆ; ರೂಪವು ಉಳಿದ ದೇಹದ ಹಾಗೆ. ನಾಮವನ್ನವಲಂಬಿಸಿದರೆ ರೂಪವು ತನಗೆ ತಾನೇ ಸಾಕ್ಷಾತ್ಕಾರವಾಗುವದು. ವಾನರರು ಸಮುದ್ರಬಂಧನವನ್ನು ಮಾಡುವಾಗ ರಾಮಶಬ್ದವನ್ನು ಬರೆದ ಪ್ರಭಾವದಿಂದ ಕಲ್ಲುಗಳು ಕೂಡ ತೇಲುತ್ತಿದ್ದವೆಂದ ಮೇಲೆ ನಾಮಪ್ರಭಾವದಿಂದ ಮನುಷ್ಯನು ಪಾರಾಗುವದಿನ್ನೇನು ದೊಡ್ಡ ಮಾತು! ಈ ಸ್ಮರಣೆಯು 'ಸಂಕಟ ಬಂದಾಗ ವೆಂಕಟರಮಣ' ಎಂಬ ಗಾದೆಯಂತೆ ಸಾಮಾನ್ಯವಾಗಿ ಕಷ್ಟಕಾಲದಲ್ಲಿ ಮಾತ್ರ ಒದಗುವ ಸಂಭವವು ಹೆಚ್ಚು. ಈ ಮರ್ಮವನ್ನರಿತೇ ಪ್ರಹ್ಲಾದನು

"ವಿಪದಸ್ಸಂತು ನಃ ಶಶ್ವದ್ಯಾಸು ಸಂಕೀರ್ತನಂ ತವ"

ಎಂದು ಹೇಳಿದ್ದಾನೆ. ವಿಪತ್ಕಾಲದಲ್ಲಿ ದೇವರ ಸ್ಮರಣೆ ಬರುವದರಿಂದ ತನಗೆ ವಿಪತ್ತುಗಳೇ ಒಂದರ ಹಿಂದೊಂದು ಬರುತ್ತಿರಲೆಂದು ಅವನ ಅಭಿಪ್ರಾಯ. ಆದರೆ ಬರೀ ಕಷ್ಟಕಾಲದಲ್ಲಿ ಮಾತ್ರ ದೇವರ ಹೆಸರನ್ನು ತೆಗೆದುಕೊಳ್ಳುವದು ಹೆಚ್ಚು ಕಾರ್ಯಕಾರಿಯಲ್ಲ.

"ಹರೇರ್ನಾಮೈವ ನಾಮೈವ ನಾಮೈವ ಮಮ ಜೀವನಮ್ ।
ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ ॥"

ಎಂದು ವಿದುರನು ಹೇಳಿರುವಂತೆ ಪರಮಾತ್ಮನ ನಾಮವೇ ಮನುಷ್ಯನ ಜೀವನಸರ್ವಸ್ವವಾಗಬೇಕು. ಕಲಿಯುಗದಲ್ಲಂತು ನಾಮದ ಹೊರತು

ಬೇರೆ ಗತಿ ಇಲ್ಲವೇ ಇಲ್ಲ. ನಾಮಪ್ರಭಾವದ ವಿಷಯದಲ್ಲಿ ನಮ್ಮ ಮನಸ್ಸಿಗುಪದೇಶವೆಂಬ ಗ್ರಂಥದಲ್ಲಿರುವ ಶ್ರೀರಾಮದಾಸರ ಉಪದೇಶದ ಅನುವಾದವೇನೆಂದರೆ.

|| ಸಾಂಗತ್ಯ || " ಸುತನ ನಾರಾಯಣನೆಂದಜಾಮಿಳನು ಸ |
ದ್ಗತಿಯನೆ ಪಡೆದನು ಪಾಪಿ ||
ಓದದಿ ಗಿಳಿಗೆ ರಾಮನೆಂಬುದ ಕಲಿಸಿದ |
ಸತಿ ವಾರಾಂಗನೆ ಪೂಜ್ಯಳಾದಳ್ ||
ಅಸುರಕುಲದ ಪ್ರಹ್ಲಾದನು ನಾಮದ |
ದೆಸೆಯಿಂದ ವರಭಕ್ತನಾದ ||
ಮಸಗಿದನಾತನ ತಂದೆಯಾ ನಾಮವ |
ನುಸಿರದವನೆ ಪೈತ್ಯನಿಳೆಯೊಳ್ ||
ಹರಿನಾಮ ಶಿಲೆಯನುದ್ಧಾರವ ಮಾಡಿತು |
ನರರನುದ್ಧರಿಪುದೊಂದರಿದೆ ||
ಒರೆವೆ ಸಂಶಯದಿಂದೆ ರಘುವರನಾಮವ |
ಸ್ಮರಿಸದವನೆ ಪಾಪರೂಪಿ ||"

ನಾಮಸ್ಮರಣೆಯ ಸ್ವರೂಪದ ವಿಷಯವಾಗಿ ಶ್ರೀಸಮರ್ಥರು ತಮ್ಮ ದಾಸಬೋಧಗ್ರಂಥದಲ್ಲಿ ಉಪದೇಶ ಮಾಡಿರುವದರ ತಾತ್ಪರ್ಯವೇನೆಂದರೆ–

" ಸುಖಕಾಲದಲ್ಲಿ, ದುಃಖಕಾಲದಲ್ಲಿ, ಉದ್ವೇಗಕಾಲದಲ್ಲಿ, ಆನಂದಕಾಲದಲ್ಲಿ— ಯಾವಾಗಲೂ ನಾಮಸ್ಮರಣೆ ಇಲ್ಲದೆ ಇರಬಾರದು. ಯಾವದಾದರೊಂದು ಸಂಕಟಕಾಲದಲ್ಲಂತು ಅದನ್ನು ನೆನಪಿಗೆ ತಂದುಕೊಳ್ಳಲೇಬೇಕು. ಉಣ್ಣುವಾಗ, ತಿನ್ನುವಾಗ, ಮಲಗುವಾಗ, ನಡೆಯುವಾಗ, ಕೆಲಸವನ್ನು ಮಾಡುವಾಗ ಕೂಡ ನಾಮಸ್ಮರಣೆ ನಡೆಯುತ್ತಿರಬೇಕು. ನಾಮಮಹಿಮೆಯು ಈಶ್ವರನಿಗೆ ಗೊತ್ತು. ವಿಶ್ವೇಶ್ವರನು ವಾರಣಾಸಿಯಲ್ಲಿ ಜನರಿಗೆ ರಾಮನಾಮವನ್ನುಪದೇಶಿಸುವನು. ವಾಲ್ಮೀಕಿಯು ಮೊದಮೊದಲು ರಾಮನಾಮವನ್ನು ತಲೆಕೆಳಗಾಗಿ ಜಪಿಸಿಯೇ ಸಿದ್ಧಿಯನ್ನು ಪಡೆದು ಕೊನೆಗೆ ಶತಕೋಟಿರಾಮಾಯಣದ ಕರ್ತನಾದನು. ಆದ್ದರಿಂದ ಮನಸ್ಸಿನಲ್ಲಿ ನಾಮವನ್ನು ಸ್ಮರಿಸಬೇಕು ಮತ್ತು ರೂಪವನ್ನು ನೆನಪಿಗೆ ತಂದುಕೊಳ್ಳಬೇಕು.

ನಾಮದ ಶ್ರೇಷ್ಠತೆಯನ್ನು ಕುರಿತು ಶ್ರೀಪುರಂದರದಾಸರು ಹೇಳಿರುವದೇನೆಂದರೆ—

ರಾಗ ಕಲ್ಯಾಣಿ. ಅಟತಾಳ.

ಕಲ್ಲುಸಕ್ಕರೆ ಕೊಳ್ಳಿರೊ । ನೀವೆಲ್ಲರು । ಕಲ್ಲುಸಕ್ಕರೆ ಕೊಳ್ಳಿರೊ ॥ಪ॥
ಕಲ್ಲುಸಕ್ಕರೆ ಸವಿ ಬಲ್ಲವರೆ ಬಲ್ಲರು ।
ಫುಲ್ಲಲೋಚನ ಶ್ರೀಕೃಷ್ಣನಾಮವೆಂಬ ॥ ॥ ಅ. ಪ ॥
ಎತ್ತುಗೋಣಿಗಳಿಂದ ಹೊತ್ತು ಮಾರುವದಲ್ಲ ।
ಒತ್ತೊತ್ತಿ ಗೋಣಿಯೊಳ್ತುಂಬುವದಲ್ಲ ॥
ಎತ್ತ ಹೋದರೂ ಬಾಡಿಗೆ ಸುಂಕವಿದಕಿಲ್ಲ ।
ಉತ್ತಮ ಸರಕಿದು ಅತಿಲಾಭ ಬರುವಂಥ ॥ ೧ ॥
ನಷ್ಟಬೀಳುವದಲ್ಲ ನಾತಹುಟ್ಟುವದಲ್ಲ ।
ಎಷ್ಟು ಒಯ್ದರೂ ಬೆಲೆ ರೊಕ್ಕವಿದಕಿಲ್ಲ ॥
ಕಟ್ಟಿರುವೆಯು ತಿಂದು ಕಡಿಮೆಯಾಗುವದಲ್ಲ ।
ಪಟ್ಟಣದೊಳಗಿದು ಕ್ರಯಕೆ ಸಿಗದು ಇಂಥ ॥ ೨ ॥
ಸಂತೆಸಂತೆಗೆ ಹೋಗಿ ಶ್ರಮಪಡಿಸುವದಲ್ಲ ।
ಸಂತೆಯೊಳಗೆ ದೊರಕುವದಿದಲ್ಲ ॥
ಸಂತತ ಭಕ್ತರ ನಾಲಿಗೆ ಸವಿಗೊಂಬ ।
ಕಾಂತ ಪುರಂದರ ವಿಠಲನ ನಾಮವೆಂಬ ॥ ೩ ॥

ಇದೇ ವಿಷಯದಲ್ಲಿ ವೀರಶೈವವಚನಶಾಸ್ತ್ರಕಾರರು ಉಪದೇಶಿಸಿರುವದೇನೆಂದರೆ—

(೧) ವಚನದಲ್ಲಿ ನಾಮಾಮೃತ ತುಂಬಿ, ಮನದಲ್ಲಿ ನಿಮ್ಮ ನೆನಪು ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿಯು ತುಂಬಿ ಕೂಡಲ ಸಂಗಮದೇವಾ, ನಿಮ್ಮ ಚರಣ ಕಮಲದೊಳು ಸೊಗಡ ಬಂಡನುಂಬ ತುಂಬಿಯಾಗಿಹೆನು.

(೨) ಎನಗೆ ನಿಮ್ಮ ನೆನಹಾದಾಗಲೇ ಉದಯ. ಎನಗೆ ನಿಮ್ಮ ಪಾದ ಮರಹಾದಾಗಲೇ ಅಸ್ತಮಾನ. ಎನಗೆ ನಿಮ್ಮ ನೆನಹವೇ ಜೀವಾಳ. ಎನಗೆ ನಿಮ್ಮ ನೆನಹವೇ ಪ್ರಾಣ, ಕಾಣಾ ಸ್ವಾಮಿ. ಎನ್ನ ಹೃದಯದಲ್ಲಿ ನಿಮ್ಮ ಚರಣದುಂಡಿಗೆಯ ಸೊತ್ತಯ್ಯಾ. ಎನ್ನ ವದನದಲ್ಲಿ ಷಡಕ್ಷರಿಯ ಬರೆಯಯ್ಯಾ, ಕೂಡಲಸಂಗಮದೇವಾ.

(೩) ಚಕೋರರಂಗೆ ಚಂದ್ರಮನ ಬೆಳಗಿನ ಚಿಂತೆ. ಕಮಲಾಂಬುಜಕೆ ಭಾನುವಿನ ಉದಯದ ಚಿಂತೆ. ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ. ಎನಗೆ ಕೂಡಲ ಸಂಗಮ ದೇವರ ನೆನೆವುದೇ ಚಿಂತೆ.

ಈ ಸಂದರ್ಭಕ್ಕೆ ಹೊಂದುವ ಶ್ರೀಜಗನ್ನಾಥದಾಸರ ಉಪದೇಶವೇನೆಂದರೆ—

" ಕಿಟ್ಟುಗಟ್ಟಿದ ಲೋಪ ಪಾವಕ ।
ಸುಟ್ಟು ವಿಂಗಡಮಾಡುವಂತೆ ಘ ।
ರಟ್ಟ ಪ್ರೀಹಿಯೊಳಿಪ್ಪ ತಂಡುಲ ಕಪಗೆ ತೆಗೆವಂತೆ ॥
ಪಿಟ್ಟಲು ಎಂದೊಮ್ಮೆ ಮೈಮರೆ ।
ದಟ್ಟನಾಸದಿ ಕರೆಯ ದುರಿತಗ ।
ಳಟ್ಟುಳಿಯ ಬಿಡಿಸವನ ತನ್ನೊಳಗಿಟ್ಟು ಸಲಹುವನು ॥"

## ಪಾದಸೇವನ.

ಲೋಕದಲ್ಲಿ ಯಾರ ಅನುಗ್ರಹವು ನಮಗೆ ಬೇಕೋ ಅವರ ಕಾಲನ್ನಾದರೂ ಹಿಡಿಯಬೇಕೆನ್ನುತ್ತಾರೆ. ನಮಗೆ ದೇವರ ಅನುಗ್ರಹವು ಬೇಕಾದರೆ ನಾವು ದೇವರ ಪಾದವನ್ನು ಹಿಡಿಯಬೇಕು. ಶ್ರವಣ, ಕೀರ್ತನ, ಸ್ಮರಣ- ಇವು ದೇವರಿಂದ ದೂರವಾಗಿರುವಾಗ ನಡೆಸತಕ್ಕವುಗಳು. ಪಾದಸೇವನವನ್ನು ಮಾಡಬೇಕಾದರೆ ದೇವರು ಸಾಕ್ಷಾತ್ತಾಗಿರಬೇಕಾಗಿರುತ್ತದೆ. ದೇವರ ಸಾಕ್ಷಾತ್ಕಾರವು ಲಕ್ಷ್ಮೀದೇವಿಗೊಬ್ಬಳಿಗೆ ಮಾತ್ರ ಸಾಧ್ಯವಾಯಿತೆಂದು ಪುರಾಣಗಳು ಹೇಳುತ್ತವೆ. ಲಕ್ಷ್ಮಿಯು ಹೊರತು ಬೇರೆ ಯಾರಿಗೂ ಸಾಕ್ಷಾತ್ಕಾರದ ಸೇವೆಯು ದೊರೆತಿಲ್ಲ. ದೇವರಿಂದ ಎಷ್ಟೋ ದೂರದಲ್ಲಿರುವ ನಾವು ಈ ಭಕ್ತಿಯನ್ನು ಹೇಗೆ ನಡೆಸಬೇಕೆಂಬ ವಿಷಯದಲ್ಲಿ ಶ್ರೀಸಮರ್ಥರು ದಾಸಬೋಧದಲ್ಲಿ ಹೇಳಿರುವ ತಾತ್ಪರ್ಯವೇನೆಂದರೆ -

" ಸದ್ಗತಿಯನ್ನು ಪಡೆಯಬೇಕೆಂಬ ಮನುಷ್ಯನು ತ್ರಿಕರಣಪೂರ್ವಕವಾಗಿ ಸದ್ಗುರುಗಳ ಪಾದವನ್ನು ಸೇವೆ ಮಾಡಬೇಕು. ಸದ್ಗುರುವಿನ ಹೊರತು ಸಂಸಾರದ ತಾಪದ ಪರಿಹಾರಕ್ಕೆ ಉಪಾಯವಿಲ್ಲವಾದ್ದರಿಂದ ಸದ್ಗುರುಗಳ ಸೇವೆಯು ಅಗತ್ಯ. ಯಾವ ವಸ್ತು ಮನಸ್ಸಿನ ಊಹೆಗೆ

ಕೂಡ ನಿಲುಕುವದಿಲ್ಲವೊ ಅಂಥದ್ದನ್ನು ಕಣ್ಣಿಗೆ ಕಟ್ಟಿದಂತೆ ಮಾಡುವ ಸದ್ಗುರುವಿನ ಸೇವೆಯು ಸಾಮಾನ್ಯವಲ್ಲ. ನಾವು ಮಾಡಬೇಕಾದ ಸದ್ಗುರುವಿನ ಚರಣಸೇವೆಯೇ ಪಾದಸೇವನ.

## ಅರ್ಚನ.

ಪಾದಸೇವನವು ಏಕದೇಶದ ಉಪಚಾರವು. ಅದರ ಪೂರ್ಣತೆಯು ಅರ್ಚನದಿಂದ ಆಗುವದು. ಪೂಜೆ ಮೊದಲಾದವುಗಳಲ್ಲಿರುವ ಆಸಕ್ತಿಯೇ ಭಕ್ತಿಯ ಗುರ್ತೆಂದು ಪರಾಶರರ ಮಕ್ಕಳಾದ ವೇದವ್ಯಾಸರ ಅಭಿಪ್ರಾಯವೆಂದು ಭಗವಾನ್ ನಾರದರು

" ಪೂಜಾದಿಷ್ವನುರಾಗ ಇತಿ ಪಾರಾಶರ್ಯಃ "

ಎಂಬ ಸೂತ್ರದಲ್ಲಿ ಹೇಳಿರುತ್ತಾರೆ. ಶ್ರೀಸಮರ್ಥರು ತಮ್ಮ ಗ್ರಂಥದಲ್ಲಿ ಹೇಳಿರುವ ವಿವರಣೆಯ ತಾತ್ಪರ್ಯವೇನೆಂದರೆ-

" ಅರ್ಚನವೆಂದರೆ ಶಾಸ್ತ್ರದಲ್ಲಿ ಹೇಳಿರುವ ವಿಧಿಯಂತೆ ದೇವರನ್ನು ಪೂಜಿಸುವದು. ದೇವರ ವಿಗ್ರಹವನ್ನು ಆರಾಧಿಸುವಂತೆ, ಸಾಧುಸಂತರನ್ನು ಸತ್ಕರಿಸುವದೂ, ಗೋವನ್ನು ಪೋಷಿಸುವದೂ ಇವೂ ಅರ್ಚನವೆ. ಮನೆಯಲ್ಲಿರುವ ಶಾಲಗ್ರಾಮ, ಲಿಂಗ-ಮೊದಲಾದವುಗಳನ್ನು ಪೂಜಿಸುವದೂ ಅರ್ಚನವೆ. ಕುಲಧರ್ಮವನ್ನು ನಡೆಸುವದು, ತೀರ್ಥಯಾತ್ರೆಯನ್ನು ಮಾಡುವದು- ಇವೂ ಅರ್ಚನವೆ. ವಿಗ್ರಹಗಳನ್ನು ಪೂಜಿಸುವಾಗ ಅರ್ಘ್ಯ ಪಾದ್ಯ, ಸ್ನಾನ, ವಸ್ತ್ರ, ಗಂಧ, ಆಭರಣ,ಪುಷ್ಪ, ಧೂಪ, ದೀಪ, ನೈವೇದ್ಯ, ಆರತಿ, ನಮಸ್ಕಾರ- ಮೊದಲಾದವುಗಳನ್ನು ಒಳ್ಳೇ ವೈಭವದಿಂದ ಮಾಡುವದೂ ಅರ್ಚನ. ಬಾವಿಗಳನ್ನು ತೋಡಿಸುವದು, ಕೆರೆಗಳನ್ನು ಕಟ್ಟಿಸುವದು, ದೇವರ ಪ್ರತಿಷ್ಠೆಯನ್ನು ಮಾಡುವದು- ಇವೂ ಅರ್ಚನದಲ್ಲಿಯೇ ಬರುವವು. ಮುಖ್ಯವಾಗಿ ತ್ರಿಕರಣಪೂರ್ವಕವಾಗಿ ತನುಮನಧನಗಳನ್ನು ದೇವರಿಗೆ ಅರ್ಪಿಸುವದೇ ಅರ್ಚನಭಕ್ತಿ. ಹೊರಗೆ ವೈಭವದಿಂದ ಇಷ್ಟೆಲ್ಲಾ ಮಾಡುವದಕ್ಕಾಗದಿದ್ದರೂ ಮಾನಸಪೂಜೆಯನ್ನಾದರೂ ಮಾಡಬೇಕು. ಎಂದರೆ ಮನಸ್ಸಿನಲ್ಲಿ ದೇವರ ಮೂರ್ತಿಯನ್ನು ಕಲ್ಪಿಸಿ ಅದಕ್ಕೆ ಮೇಲೆ

ಹೇಳಿದ ಎಲ್ಲಾ ಬಗೆಯ ಉಪಚಾರಗಳನ್ನೂ ಛತ್ರಚಾಮರಾದಿಯಾಗಿ ಎಲ್ಲವನ್ನೂ ಕಲ್ಪಿಸಬೇಕು. ಉದಾರತೆಯ ಕಲ್ಪನೆಗಾದರೂ ಏಕೆ ಬಡತನ?

ಅರ್ಚನಭಕ್ತಿಯಲ್ಲಿ ಪೃಥುರಾಜನು ಪ್ರಸಿದ್ಧನಾಗಿದ್ದಾನೆ. ಅವನು ಒಮ್ಮೆ ಯಜ್ಞವನ್ನು ಮಾಡುತ್ತಿದ್ದಾಗ ಸನಕ, ಸಂದನ-- ಮೊದಲಾದ ಮಹಾತ್ಮರು ಅಲ್ಲಿಗೆ ಬಂದರು. ಇಂಥ ಭಗವದ್ಭಕ್ತರಿಗಿಂತ ಹೆಚ್ಚಾದ ಭಗವತ್ಸಾನ್ನಿಧ್ಯವು ಬೇರೆ ಸಿಕ್ಕಲಾರದೆಂದು ಅವನು ತನ್ನ ಸರ್ವಸ್ವವನ್ನೂ ಅವರಿಗೆ ಅರ್ಪಣೆಮಾಡಿ ಅವರ ಪೂಜೆಯನ್ನು ಮಾಡಿದನು. ಮಹಾವಿರಕ್ತಶಿಖಾಮಣಿಗಳಾದ ಅವರು ತಾವು ಅದನ್ನು ತಮ್ಮ ಉಪಭೋಗಕ್ಕಾಗಿ ಸ್ವೀಕರಿಸದೆ ತಮ್ಮದಾಗಿ ಅವುಗಳನ್ನು ಮತ್ತೆ ಅವನಲ್ಲಿಯೇ ಇಟ್ಟರು. ಇಲ್ಲಿ ನಾವು ಗ್ರಹಿಸಬೇಕಾದ ವಿಷಯವೇನೆಂದರೆ ಅವನು ತನ್ನ ಸರ್ವಸ್ವವನ್ನೂ ಅವರ ಪೂಜೆಗೆ ವಿನಿಯೋಗಿಸಿದ್ದು. ಅವನ ಪೂಜೆಯಲ್ಲಿ ಗ್ರಹಿಸಬೇಕಾದ ಇನ್ನೊಂದು ಗುಣವೇನೆಂದರೆ ಪೃಥುರಾಜನು ಭಗವಂತನ ಅರ್ಚನರೂಪವಾಗಿ ತೊಂಬತ್ತೊಂಬತ್ತು ಅಶ್ವಮೇಧ ಯಜ್ಞಗಳನ್ನು ಮುಗಿಸಿ ನೂರನೇದನ್ನು ನಡೆಸುತ್ತಿದ್ದನು. ಅದೂ ಮುಗಿದರೆ ಪೃಥುರಾಜನು ತನ್ನ ಅಧಿಕಾರಕ್ಕೆ ಬರುವನೆಂಬ ಅಸೂಯೆಯಿಂದ ಇಂದ್ರನು ಆ ಯಜ್ಞಾಶ್ವವನ್ನು ಕದ್ದೊಯ್ದನು. ಆಗ ಋತ್ವಿಗ್ಜನರು ಕೋಪದಿಂದ ಆ ಯಜ್ಞವಿಘಾತಕನಾದ ಇಂದ್ರನನ್ನೇ ಹೋಮಮಾಡುವೆವೆಂದಾರಂಭಿಸಲು ಬ್ರಹ್ಮನು ಬಂದು ಪೃಥುವಿಗೆ ಸಮಾಧಾನವನ್ನು ಹೇಳಿ ಇಂದ್ರನನ್ನು ಹೋಮ ಮಾಡುವದು ಯೋಗ್ಯವಲ್ಲವೆಂದು ತಿಳಿಸಿದನು. ಬ್ರಹ್ಮನ ಮಾತಿನಲ್ಲಿ ಗುಣಗ್ರಹಣವನ್ನು ಮಾಡಿ ಪೃಥುರಾಜನು ತನ್ನ ಕೋಪವನ್ನು ತನ್ನಲ್ಲಿಯೇ ನುಂಗಿಕೊಂಡು ನೂರನೇ ಯಜ್ಞವನ್ನು ಅಲ್ಲಿಗೇ ನಿಲ್ಲಿಸಿ ಅವಭೃತಸ್ನಾನವನ್ನುಮಾಡಿದನು. ಈ ರೀತಿಯಲ್ಲಿ ಆ ರಾಜನು ಬ್ರಹ್ಮನ ಮಾತನ್ನು ನಡೆಸಿ ತನ್ನ ಕೋಪವನ್ನೂ ತನ್ನಲ್ಲಿಯೇ ಅಡಗಿಸಿಕೊಂಡದ್ದಕ್ಕಾಗಿ ಮಹಾವಿಷ್ಣು ತುಷ್ಟನಾಗಿ ಅವನೆದುರಿಗೆ ಸಾಕ್ಷಾತ್ತಾಗಿ ಬಂದು ದರ್ಶನವನ್ನು ಕೊಟ್ಟು ಪೃಥುವನ್ನು ಶ್ಲಾಘಿಸಿದನು. ಆದ್ದರಿಂದ ಅರ್ಚನಭಕ್ತಿಯಲ್ಲಿ ದೇವರಿಗಾಗಿ ತನ್ನ ಸರ್ವಸ್ವವನ್ನೂ ಅರ್ಪಣಮಾಡಬೇಕು ಮತ್ತು

ತನ್ನ ದೋಷವನ್ನು ತಿದ್ದಿಕೊಳ್ಳುವದಕ್ಕೆ ತಾನು ಸಿದ್ಧನಾಗಿರಬೇಕು. ಹೀಗೆ ಮಾಡುವ ಪೂಜೆಯು ನಿಜವಾದ ಪೂಜೆಯಾಗುವದು.

## ವಂದನ.

"ಶ್ರೀಸಮರ್ಥರು ವಿವರಿಸಿರುವ ಇದರ ಸ್ವರೂಪದ ತಾತ್ಪರ್ಯವೇನೆಂದರೆ–

"ವಂದನವೆಂಬುದಕ್ಕೆ ಪರಮಾತ್ಮನಿಗೆ ವಂದನವೆಂಬುವದಂತು ಸ್ಪಷ್ಟವೆ. ಆದರೆ ಪರಮಾತ್ಮನ ಭಕ್ತರಾದ ಸಾಧುಗಳಿಗೆ ನಮಸ್ಕಾರ ಮಾಡುವದೂ ಸೂರ್ಯನಮಸ್ಕಾರವನ್ನು ಮಾಡುವದೂ ವಂದನಭಕ್ತಿಯೆನಿಸುವದು. ಯಾವ ಯಾವ ದೇವರ ವಿಗ್ರಹಗಳನ್ನು ಕಂಡರೂ ಯಾವ ಯಾವ ದೊಡ್ಡವರನ್ನು ಕಂಡರೂ ಭಕ್ತರು, ಜ್ಞಾನಿಗಳು, ವಿರಕ್ತರು, ಯೋಗಿಗಳು ತಪಸ್ವಿಗಳು– ಇಂಥವರನ್ನೂ ವೇದಜ್ಞರು, ಶಾಸ್ತ್ರಜ್ಞರು, ಪಂಡಿತರು, ಪುರಾಣಿಕರು, ಯಾಜ್ಞಿಕರು, ವೈದಿಕರು, ಪವಿತ್ರಜನರು— ಇಂಥವರನ್ನೂ ಯಾರನ್ನು ಕಂಡರೂ ನಮಸ್ಕರಿಸಬೇಕು. ಎಲ್ಲೆಲ್ಲಿ ಗುಣವಿಶೇಷಗಳ ಶ್ರೇಷ್ಠತೆ ಕಾಣುವದೋ ಅಲ್ಲೆಲ್ಲಾ ಸದ್ಗುರುವಿನ ಸಾನ್ನಿಧ್ಯವಿರುವದೆಂದು ಭಾವಿಸಬೇಕು. ಬೇರೆಬೇರೆಯವರಿಗೆ ಮಾಡಿದ ನಮಸ್ಕಾರವೆಲ್ಲಾ ಒಬ್ಬ ದೇವರಿಗೇ ಮುಟ್ಟುವವು. ನಮಸ್ಕಾರದ ಮೂಲಕವಾಗಿ ವಿನಯವನ್ನು ತೋರಿಸುವದರಿಂದ ಸತ್ಪಾತ್ರರಾದ ಜನರ ಅನುಗ್ರಹವು ದೊರೆಯುವದು. ನಮಸ್ಕಾರವೆಂಬುದು ಬಹು ಸುಲಭವಾಗಿರುವದು. ಬರೀ ಇಷ್ಟರಿಂದ ದೇವರು ಹೇಗೆ ಒಲಿಯುವನೆಂದರೆ ದೇವರ ಒಲುಮೆಗೆ ಪಾತ್ರವಾಗುವ ನಮಸ್ಕಾರದಲ್ಲಿ ಒಂದು ವಿಶೇಷವಿದೆ. ಅದೇನೆಂದರೆ ಅನನ್ಯಭಾವ. ಯಾರಿಗೆ ನಮಸ್ಕಾರವನ್ನು ಮಾಡಿದರೂ ಅಲ್ಲಿ ಭಗವಂತನಿರುವನೆಂಬ ಬುದ್ಧಿಯು ಜಾಗರೂಕನಾಗಿರಬೇಕು. ಇದು ನಿಜವಾದ ನಮಸ್ಕಾರ."

ಪೂಜೆಯಿಂದ ಪ್ರಸನ್ನನಾದ ಪರಮಾತ್ಮನ ಮನಸ್ಸು ನಮಸ್ಕಾರದಿಂದ ಕರಗಿಹೋಗುವದು. ಅಷ್ಟರಿಂದ ನಮಸ್ಕಾರಕ್ಕೆ ಶ್ರೇಷ್ಠತೆ. ನಮಸ್ಕಾರದ ವಿಷಯದಲ್ಲಿ ಭಾಗವತವು ಹೇಳುವದೇನೆಂದರೆ-

"ಖಂ ವಾಯುಮಗ್ನಿಂ ಸಲಿಲಂ ಮಹೀಂ ಚ ।
ಜ್ಯೋತೀಂಷಿ ಸತ್ತ್ವಾನಿ ದಿಶೋ ದ್ರುಮಾದೀನ್ ॥
ಸರಿತ್ಸಮುದ್ರಾಂಶ್ಚ ಹರೇಃ ಶರೀರಂ ।
ಯತ್ಕಿಂಚ ಭೂತಂ ಪ್ರಣಮೇದನನ್ಯಃ ॥"

ಇದರ ತಾತ್ಪರ್ಯ— "ಪರಮಾತ್ಮನ ಶರೀರರೂಪವಾಗಿರುವಂಥ ಆಕಾಶ, ವಾಯು, ಅಗ್ನಿ, ನೀರು, ಪೃಥ್ವಿ, ಜ್ಯೋತಿರ್ಮಯವಾದ ವಸ್ತುಗಳು, ದಿಕ್ಕುಗಳು, ಮರ ಮೊದಲಾದವು, ನದಿಗಳು, ಸಮುದ್ರಗಳು— ಇನ್ನೂ ಏನೇನಿವೆಯೋ ಅವುಗಳಿಗೆಲ್ಲಾ ಅನನ್ಯಭಾವದಿಂದ ನಮಸ್ಕರಿಸಬೇಕು."

ಈ ನಮಸ್ಕಾರಕ್ಕೆ ಭಾಗವತದಲ್ಲಿರುವ ಅಕ್ರೂರನ ಉದಾಹರಣೆ ಚೆನ್ನಾಗಿದೆ. ಅಕ್ರೂರನು ಶ್ರೀಕೃಷ್ಣನ ಭಕ್ತನು. ಮಧುರೆಯಲ್ಲಿದ್ದ ಕಂಸನು ಬಲರಾಮಕೃಷ್ಣರನ್ನು ಉಪಾಯದಿಂದ ತನ್ನೂರಿಗೆ ಬರಮಾಡಿಕೊಂಡು ಕೊಲ್ಲಿಸಬೇಕೆಂದು ಅವರನ್ನು ಕರೆದುಕೊಂಡು ಬರುವದಕ್ಕೆ ಅಕ್ರೂರನನ್ನು ಕಳುಹಿಸಿದನು. ಶ್ರೀಬಲರಾಮಕೃಷ್ಣರು ನಂದಗೋಕುಲದಲ್ಲಿದ್ದರು. ಈ ಉದ್ಯೋಗವು ತನ್ನ ಕಡೆಗೆ ಬರುತ್ತಲೇ ಅನಾಯಾಸವಾಗಿ ತಾನಾಗಿಯೇ ಪರಮಾತ್ಮನ ದರ್ಶನಲಾಭವಾಗುವ ಸುಯೋಗವು ತನಗೆ ದೊರೆಯಿತೆಂದು ಹಿಗ್ಗಿ ಅಕ್ರೂರನು ರಥವನ್ನು ಹತ್ತಿಕೊಂಡು ನಂದಗೋಕುಲದ ಕಡೆಗೆ ಭರದಿಂದ ನಾಗಿದನು. ಹೀಗೆ ಹೋಗುತ್ತಿರುವಾಗ ಎಷ್ಟು ಹೊತ್ತಿಗೆ ಪರಮಾತ್ಮನ ದರ್ಶನವಾಗುವದೊ ಎಂಬ ಕುತೂಹಲದಿಂದ ಅವನ ಮನಸ್ಸು ಪರಮಾತ್ಮಮಯವಾಗುತ್ತ ಬಂತು ಇದರ ಪರಿಣಾಮವಾಗಿ ಅವನಿಗೆ ಎಲ್ಲೆಲ್ಲಿಯೂ ಪರಮಾತ್ಮನ ಸಾನ್ನಿಧ್ಯವೇ ಕಣ್ಣಿಗೆ ಕಟ್ಟಿದ ಹಾಗೆ ಆಯಿತು. ನಂದಗೋಕುಲದ ಸಮೀಪದಲ್ಲಿರುವ ವೃಕ್ಷಗಳು ನದಿಗಳು, ಬಂಡೆಗಳು— ಮೊದಲಾದವುಗಳೆಲ್ಲಾ ಶ್ರೀಕೃಷ್ಣನ ಸ್ಪರ್ಶವನ್ನು ಪಡೆದಿದ್ದದರಿಂದ ಅಲ್ಲೆಲ್ಲಾ ಪರಮಾತ್ಮನ ಸಾನ್ನಿಧ್ಯವುಂಟಾಗಿರುವದೆಂದು ಅವನು ರಥದಿಂದಿಳಿದು ಅವುಗಳಿಗೆಲ್ಲಾ ನಮಸ್ಕಾರವನ್ನು ಮಾಡಿದನು. ದೈವಯೋಗದಿಂದ ಪದ್ಮ, ಯವ, ಅಂಕುಶ— ಮೊದಲಾದ ಸುಚಿಹ್ನಗಳಿಂದ ಕೂಡಿದ ಹೆಜ್ಜೆಗಳು ಅಲ್ಲಿಯ ಮಣ್ಣಿನಲ್ಲಿ ಮೂಡಿದ್ದನ್ನು ಕಂಡಾಗಲಂತು ಅವನಿಗೆ ಪರಮಾತ್ಮನ ಸಾಕ್ಷಾತ್ತಾದ ಸಾನ್ನಿಧ್ಯವೇ

ದೊರೆತಂತಾಗಿ ಅವನು ಆ ಮಣ್ಣಿನ ಮೇಲೆ ಚೆನ್ನಾಗಿ ಹೊರಳಾಡಿದನು. ಈ ರೀತಿಯಲ್ಲಿ ದಾರಿಯುದ್ದಕ್ಕೂ ಪ್ರತಿಯೊಂದು ಪಾದಚಿಹ್ನದ ಮೇಲೆಯೂ ಹೊರಳುತ್ತ ಪ್ರತಿಯೊಂದು ಮರಗಿಡಗಳಿಗೂ ವಂದಿಸುತ್ತ ಗೋಕುಲವನ್ನು ಸೇರಿ ಶ್ರೀಕೃಷ್ಣನನ್ನು ಕಂಡಾಗಲಂತು ಸಂಪೂರ್ಣವಾಗಿ ತನ್ನನ್ನು ಮರೆತು ಪರಮಾತ್ಮನ ಪಾದದ ಮೇಲೆ ತನ್ನ ಹಣೆಯನ್ನಿಟ್ಟನು. ಈ ಬಗೆಯ ಅಕ್ರೂರನ ವಿನಯವನ್ನು ನೋಡಿ ಶ್ರೀಕೃಷ್ಣನ ಮನಸ್ಸು ಕರಗಿತು. ಆಮೇಲೆ ಅವನು ಗೋಕುಲದಿಂದ ಮಥುರೆಗೆ ಹೊರಟು ಬರುತ್ತ ದಾರಿಯಲ್ಲಿ ಯಮುನೆಯಲ್ಲಿ ಸ್ನಾನಕ್ಕಾಗಿ ಅಕ್ರೂರನನ್ನು ಮುಳುಗಿಸಿ ಅವನಿಗೆ ಅಲ್ಲಿ ತನ್ನ ವಿರಾಡ್ರೂಪದ ದರ್ಶನವನ್ನು ಮಾಡಿಸಿದನು.

ಅಕ್ರೂರನ ಈ ವಂದನೆಯನ್ನು ಶ್ರೀವಿಠೋಬಾ ಅಣ್ಣಾ ಪಂತರು ಒಂದು ಚಮತ್ಕಾರವಾದ ರೀತಿಯಿಂದ ವರ್ಣಿಸಿದ್ದಾರೆ.

"ಅಕ್ರೂರೋಽಹಮಪಿ ಪ್ರಸಂಗವಶತೋ ಭ್ರಾತಾ ಮಮ ಕ್ರೂರತಾ ।
ಶ್ರೀಮದ್ಗೋಕುಲವಾಸಿನಾಂ ಭಗವತಃ ಪ್ರಾಣಪ್ರಿಯಪ್ರಾಣಿನಾಮ್ ॥
ಹೇತೋಽಸ್ತಸ್ಯ ಹರಿರ್ಮಯೋಪರಿ ಪುನಾ ರುಷ್ಟಸ್ತು ನ ಸ್ಯಾದಿತಿ ।
ಪ್ರಾಪ್ತಾಶಂಕತಯಾ ಕ್ಷಮಾಪನಕೃತೇ ಶ್ರೀಶಂ ನವಂದೇ ಮುಹುಃ ॥"

ತಾತ್ಪರ್ಯವೇನೆಂದರೆ—"ನನಗೆ ಅಕ್ರೂರನೆಂದು ಹೆಸರಿದೆ. ಆದರೂ ಈ ಪ್ರಸಂಗದಿಂದ ನನ್ನಲ್ಲಿ ಜನರಿಗೆ ಕ್ರೂರತೆಯೇ ಕಂಡುಬರಬಹುದು. ಏಕೆಂದರೆ ಗೋಕುಲವಾಸಿಗಳೆಲ್ಲರೂ ಶ್ರೀಕೃಷ್ಣನನ್ನು ತಮ್ಮ ಪ್ರಾಣಕ್ಕಿಂತ ಹೆಚ್ಚೆಂದು ತಿಳಿದಿರುವರು. ಅವರನ್ನು ಅಗಲಿಸುವದರಿಂದ ಶ್ರೀಕೃಷ್ಣನಿಗೆ ಮತ್ತೆ ತನ್ನ ಮೇಲೆ ಕೋಪ ಬರಬಾರದೆಂದು ಕ್ಷಮೆಯನ್ನು ಕೇಳಿಕೊಳ್ಳುವವನ ಹಾಗೆ ಅಕ್ರೂರನು ಬಾರಿಬಾರಿಗೂ ನಮಸ್ಕರಿಸಿದನು."

## ದಾಸ್ಯ.

ದಾಸ್ಯಭಕ್ತಿಯ ವಿಷಯದಲ್ಲಿ ಶ್ರೀಸಮರ್ಥರ ಅಭಿಪ್ರಾಯದ ತಾತ್ಪರ್ಯವೇನೆಂದರೆ—

"ಯಾವಾಗಲೂ ಭಗವಂತನ ಸನ್ನಿಧಿಯಲ್ಲಿದ್ದು ಬಿದ್ದ ಕೆಲಸಗಳನ್ನೆಲ್ಲ ಮಾಡುವದು ದಾಸ್ಯಭಕ್ತಿ. ದೇವಾಲಯದ ಶಿಥಿಲತೆಯನ್ನು ಸರಿ

ಪಡಿಸಬೇಕು; ಸಡಿಲಿದ ಸರೋವರಗಳನ್ನು ಜಗಿಮಾಡಬೇಕು; ಸುಲಭವಾಗಿ ಧರ್ಮಶಾಲೆಯನ್ನು ನಾಗಿಸಬೇಕು; ಸಿಂಹಾಸನ, ಪಲ್ಲಕ್ಕಿ, ಮಂಚ– ಮೊದಲಾದವುಗಳನ್ನು ಹೊಸದಾಗಿ ಮಾಡಿಸಬೇಕು; ಛತ್ರ, ಚಾಮರ, ಸೂರ್ಯಪಾನ, ಧ್ವಜ– ಮೊದಲಾದವುಗಳನ್ನು ಆದರದಿಂದ ರಕ್ಷಿಸಬೇಕು; ದಿವ್ಯವಾದ ವಸ್ತ್ರಗಳನ್ನೂ ದಿವ್ಯವಾದ ಆಭರಣಗಳನ್ನೂ ಯತ್ನದಿಂದ ಸಂಗ್ರಹಿಸಬೇಕು; ಹೂವಿನ ತೋಟವನ್ನೂ ಫಲವೃಕ್ಷಗಳನ್ನೂ ಚೆನ್ನಾಗಿ ಬೆಳೆಸಬೇಕು; ಪಶುಶಾಲೆ, ವೈದ್ಯಶಾಲೆ ಮೊದಲಾದವುಗಳನ್ನು ಶ್ರೇಷ್ಠವಾಗಿಟ್ಟಿರಬೇಕು; ಪರಿಮಳದ್ರವ್ಯಗಳು, ವಾದ್ಯಫಲಗಳು–ಮೊದಲಾದವುಗಳನ್ನು ಬೇರೆಬೇರೆ ಸ್ಥಲದಲ್ಲಿ ಸುವ್ಯವಸ್ಥಿತರೀತಿಯಿಂದ ಇಡಬೇಕು; ಯಾವ ಕಾರ್ಯಭಾಗವನ್ನೂ ಮರೆಯಬಾರದು; ಜಯಂತಿ ಮೊದಲಾದ ಉತ್ಸವಗಳನ್ನು ಮಾಡುವಾಗ ಶಾಸ್ತ್ರಾದೃಷ್ಟಕ್ರಮದ ರೀತಿಯನ್ನು ತೋರಿಸಬೇಕು; ಪೂಜೆಗೆ ಬೇಕಾದ ಉಪಕರಣಗಳಲ್ಲಿ ಯಾವದಕ್ಕೂ ಕೊರತೆಯಾಗದಂತೆ ಒದಗಿಸಬೇಕು; ಎಲ್ಲರೊಡನೆಯೂ ಕರುಣಾಪೂರ್ಣವಾದ ಮಾತನ್ನೇ ಆಡುತ್ತಿರಬೇಕು; ಇಷ್ಟೆಲ್ಲವನ್ನೂ ಮಾಡುವ ಯೋಗವು ಹೊರಗೆ ದೊರೆಯದಿದ್ದರೂ ಮಾನಸಪೂಜೆಯಲ್ಲಾದರೂ ಮಾಡಬೇಕು. ಸದ್ಗುರುವಿನ ಸೇವೆಗೂ ಇದೇ ನಿಯಮಗಳು."

ದಾಸ್ಯಭಕ್ತಿಯಲ್ಲಿ ಮಾರುತಿಯು ಪ್ರಸಿದ್ಧನಾಗಿದ್ದಾನೆ. ಅವನ ದಾಸ್ಯಭಕ್ತಿಯು ಸಾಮಾನ್ಯವಾಗಿ ರಾಮಾಯಣದಲ್ಲೆಲ್ಲಾ ಹಾಸುಹೊಕ್ಕಾಗಳಾಗಿರುವವು. ಆದರೂ ಇಲ್ಲಿ ಒಂದು ಪ್ರಸಂಗವನ್ನು ನೆನಪಿಗೆ ತಂದುಕೊಡಬಹುದು. ರಾವಣನ ಸಂಹಾರವಾದ ಮೇಲೆ ಶ್ರೀರಾಮಚಂದ್ರನು ಪಟ್ಟಾಭಿಷಿಕ್ತನಾದಾಗ ಅನೇಕರಿಗೆ ಅನೇಕ ಉಡುಗೆರೆಗಳು ಸಿಕ್ಕಿದವು. ಅವುಗಳಲ್ಲೇನೂ ಹುರುಳಿಲ್ಲವೆಂದು ಮಾರುತಿಯು ತನಗೆ ದಾಸ್ಯಭಕ್ತಿಯನ್ನನುಗ್ರಹಿಸಬೇಕೆಂದು ಕೇಳಿ ಶ್ರೀರಾಮಚಂದ್ರನ ಸೇವೆಯಲ್ಲಿ ನಿಂತನು. ಮಾರುತಿಯ ಮೇಲೆ ಶ್ರೀರಾಮನ ಅನುಗ್ರಹವು ಸಾಮಾನ್ಯವಾಗಿಯೇ ಬಹಳವಾಗಿರುವದೆಂದು ಎಲ್ಲರಿಗೂ ಗೊತ್ತಿತ್ತು. ದಾಸ್ಯಭಕ್ತಿಗೇ ಕಂಕಣವನ್ನು ಕಟ್ಟಿಕೊಂಡು ನಿಂತ ಮೇಲೆ ಮಾರುತಿಯ ಪ್ರತಿಷ್ಠೆಯು ಮುಗಿಲು ಮುಟ್ಟುವದೆಂದು ಯೋಚಿಸಿ ಅನೇಕ ಕಪಿಶ್ರೇಷ್ಠರು ಪ್ರತಿಯೊಂದು

ಸೇವೆಗೂ ತಾವು ತಾವಾಗಿ ಮುಂದೆ ಬಂದು ಮಾರುತಿಗೆ ಯಾವ ಕೆಲಸವೂ ಸಿಕ್ಕಗೊಡದಂತೆ ಮಾಡಿದರು. ಇದನ್ನು ತಿಳಿದು ಶ್ರೀರಾಮನು ಸೇವಾಸಕ್ತನಾದ ಮಾರುತಿಯನ್ನು ನೋಡಿ ತಾನು ಆಕಳಿಸಿದಾಗ ಒಂದು ಚಿಟಿಕೆಯನ್ನು ಹೊಡೆಯಬೇಕೆಂದು ಹೇಳಿದನು. ಆಕಳಿಕೆಯು ತಮೋಗುಣದ ಲಕ್ಷಣವಾದ್ದರಿಂದ ಆ ಕಾಲದಲ್ಲಿ ಮನಸ್ಸನ್ನು ರಜೋಗುಣಕ್ಕೆ ತಿರುಗಿಸುವದಕ್ಕೋಸ್ಕರ ಚಿಟಿಕೆಯನ್ನು ಹೊಡೆಯುವ ಪದ್ಧತಿ ಈಗಲೂ ಉಂಟು. ಮಾರುತಿಯು ಅದನ್ನೇ ಸಮರ್ಪಕವಾಗಿ ನಡೆಸುತ್ತಿದ್ದನು. ಒಂದು ದಿವಸ ಶ್ರೀರಾಮಚಂದ್ರನು ಸೀತಾಸಮೇತನಾಗಿ ಶಯ್ಯಾಗೃಹಕ್ಕೆ ಹೋದನು. ಮಾರುತಿಯು ತನ್ನ ಸೇವೆಯನ್ನು ನಿಲ್ಲಿಸಬಾರದೆಂದು ತಾನೂ ಒಳಕ್ಕೆ ಹೋದನು. ಶ್ರೀರಾಮನು ಆಗ ಅವನನ್ನು ಹೊರಕ್ಕೆ ಹೋಗಹೇಳಿದನು. ತನ್ನ ಸೇವಾವೃತ್ತಿಗೇನುಗತಿಯೆಂದು ಮಾರುತಿಯು ಹಿಂದುಮುಂದು ನೋಡಿದನು. ಹೊರಗಿದ್ದು ಚಿಟಿಕೆಯನ್ನು ಹಾಕಿದರೆ ಆ ಚಿಟಿಕೆಯ ಸದ್ದಾದಾಗಲೇ ತಾನು ಆಕಳಿಸುವೆನೆಂದು ಹೇಳಿ ಶ್ರೀರಾಮನು ಮಾರುತಿಯನ್ನೊಪ್ಪಿಸಿ ಹೊರಕ್ಕೆ ಕಳುಹಿಸಿದನು. ಮಾರುತಿಯು ಹೊರಕ್ಕೆ ಬಂದು ಸ್ವಲ್ಪ ಹೊತ್ತು ಕುಳಿತನು. ನಿಷ್ಕಾರಣವಾಗಿ ತಾನು ಚಿಟಿಕೆಯನ್ನು ಹೊಡೆದು ಸ್ವಾಮಿಯನ್ನು ಆಕಳಿಸುವಂತೆ ಮಾಡುವದು ಅವನ ಮನಸ್ಸಿಗೆ ಬರಲಿಲ್ಲ. ಸ್ವಾಮಿಯ ಸನ್ನಿಧಿಯನ್ನು ಬಿಟ್ಟು ವಿಷಯಗಳ ಕಡೆಗೆ ಹೊರಳುವದಕ್ಕೂ ಮನಸ್ಸು ಒಗ್ಗಲಿಲ್ಲ. ಸ್ವಾಮಿಯ ನಾಮಸ್ಮರಣೆಯೇ ಸ್ವಾಮಿಯ ಸನ್ನಿಧಿಯೆಂದು ನೆನಪಾಯಿತು. ಒಡನೆ ಅವನು "ರಾಮ, ರಾಮ, ರಾಮ, ರಾಮ," ಎನ್ನುತ್ತ ನಾಮಸ್ಮರಣೆಯನ್ನಾರಂಭಿಸಿದನು. ಪ್ರತಿಯೊಂದು ನಾಮವನ್ನುಚ್ಚರಿಸುತ್ತಲೂ ಭಕ್ತಿಯ ಆವೇಶವು ಒಂದೊಂದು ಮೆಟ್ಟಿಲನ್ನು ಏರುತ್ತ ಬಂತು. ಸ್ವಲ್ಪ ಹೊತ್ತಿನಲ್ಲಿಯೇ ಹೊರಗಣ ಪ್ರಪಂಚದ ಎಚ್ಚರವೇ ಇಲ್ಲದೆ ಅಖಂಡವಾಗಿ ರಾಮನಾಮವನ್ನುಚ್ಚರಿಸುತ್ತ ಆ ಆವೇಶದಭರದಲ್ಲಿ ಮಾರುತಿಯು ತನಗರಿವಿಲ್ಲದೆ ಒಂದೇ ಸಮನಾಗಿ ಎಡೆಬಿಡದೆ ಚಿಟಿಕೆಗಳನ್ನು ಹೊಡೆಯುವದಕ್ಕಾರಂಭಿಸಿದನು. ಮಾರುತಿಯ ಪ್ರತಿಯೊಂದು ಚಿಟಿಕೆಗೂ ಶ್ರೀರಾಮನು ಒಂದೊಂದು ಸಲ ಆಕಳಿಸಬೇಕಾಗಿತ್ತು. ಏಕೆಂದರೆ ಅವನ ವಾಗ್ದಾನವು ಆ ರೀತಿಯಾಗಿತ್ತು.

ಆದ್ದರಿಂದ ರಾಮನಿಗೆ ಆಕಳಿಕೆಯಾರಂಭವಾಗಿ ಒಂದರ ಹಿಂದೊಂದು ಬಿಡದೆ ಸುಗ್ಗಿಬಂತು. ಬಿಟ್ಟ ಬಾಯಿ ಮುಚ್ಚುವದಕ್ಕಿಲ್ಲದೆ ಉಸಿರು ಮೇಲ ಮೇಲಕ್ಕೆ ಸಿಕ್ಕುತ್ತ ಕಣ್ಣುಗುಡ್ಡೆಯು ತಲೆಕೆಳಗಾಗುವ ಹೊತ್ತು ಬಂತು. ಮಾತಾಡುವದಕ್ಕೆ ಕೂಡ ಆಗದಂತೆ ಉಸಿರುಕಟ್ಟಿ ಆಕಳಿಸುತ್ತಿದ್ದ ಪತಿಯನ್ನು ನೋಡಿ ಗಾಬರಿಗೊಂಡು ಸೀತೆಯು ಒಡನೆ ಬಾಗಿಲನ್ನು ತೆರೆದು ಮಾರುತಿಯನ್ನು ಕರೆದಳು. ಮಾರುತಿಯು ಅಲ್ಲಿಗೆ ಹೊರಡುವದಕ್ಕಾಗಿ ಚಿಟಿಕೆಯನ್ನು ನಿಲ್ಲಿಸುತ್ತಲೇ ಒಳಗೆ ಶ್ರೀರಾಮಚಂದ್ರನಿಗೆ ಸಮಾಧಾನವಾಯಿತು. ಸ್ವಾಮಿಯ ಕಣ್ಣೆದುರಿಗೆ ಪ್ರತ್ಯಕ್ಷವಾಗಿ ಮಾಡುವ ಸೇವೆಯು ದೊರೆಯದಿದ್ದರೂ ಪರೋಕ್ಷವಾಗಿ ಸ್ವಾಮಿಯ ಸ್ಮರಣೆಯೊಂದೇ ತನ್ನ ಸರ್ವಸ್ವವೆಂದು ಭಾವಿಸಿದ ಮಾರುತಿಯ ನಡವಳಿಕೆಯಿಂದ ಪ್ರೀತನಾದ ಶ್ರೀರಾಮಚಂದ್ರನು ಮಾರುತಿಯ ತಲೆಯ ಮೇಲೆ ಕೈ ಇಟ್ಟು ಮಹದನುಗ್ರಹವನ್ನು ಮಾಡಿ ಸೀತೆಯ ಎದುರಿಗೆ ಅವನನ್ನು ಬಹಳವಾಗಿ ಶ್ಲಾಘಿಸಿದನು. ಹೀಗೆ ಪ್ರಸಂಗವು ಬಂದಾಗ ಸಾಕ್ಷಾತ್ತಾಗಿ ಸೇವೆಯನ್ನು ಮಾಡುತ್ತ ಉಳಿದ ಕಾಲದಲ್ಲಿ ಕೂಡ ವಿಷಯಚಿಂತನೆಗೆ ಹೋಗದೆ ಪರಮಾತ್ಮಸ್ಮರಣೆಯಲ್ಲಿರುವದೇ ನಿಜವಾದ ದಾಸ್ಯಭಕ್ತಿ. ಸಾಧುಸಂತರಲ್ಲಿ ದಾಸ್ಯಭಕ್ತಿಯನ್ನು ಮಾಡುತ್ತಿರುವವರು ಬಹುಜನರಿರುತ್ತಾರೆ. ಅವರು ಸಾಧುಗಳ ಕಣ್ಣೆದುರಿಗೆ ಮಾಡುವ ಸೇವೆಯು ಸ್ವಸ್ತೋತ್ರಾರ್ಥವೇ ಆಗಿರುತ್ತದೆ. ಆದರೆ ಪರೋಕ್ಷದಲ್ಲಿ ಅವರ ಮನಸ್ಸು ಬೇರೆಕಡೆ ಹೋಯ್ದಾಡುವದೇ ಬಹಳ. ಅದೇ ಅವರ ಸಿದ್ಧಿಗೆ ಪ್ರತಿಬಂಧಕವು. ಅವರು ತಮ್ಮ ಪರೋಕ್ಷಸ್ಥಿತಿಯನ್ನು ಪರೀಕ್ಷಾಸ್ಥಿತಿಯೆಂದು ಭಾವಿಸಿ ಅಖಂಡವಾದ ದಾಸ್ಯಭಕ್ತಿಯನ್ನು ಮೈಯ್ಗೂಡಿಸಿಕೊಳ್ಳಬೇಕು. ದೇವರೂ ಮತ್ತು ಸಾಧುಗಳೂ ಪರೋಕ್ಷಸ್ಥಿತಿಯನ್ನು ಕೂಡ ನೋಡಬಲ್ಲವರೆಂಬುದನ್ನು ಮರೆಯಬಾರದು.

ವಂದನವು ಆಗಾಗ ತಲೆಯನ್ನು ಬಗ್ಗಿಸುವಂತೆ ಮಾಡುವದು; ದಾಸ್ಯವು ಯಾವಾಗಲೂ ತಲೆಯನ್ನು ಬಗ್ಗಿಸಿದಂತೆ ಇರುವದು. ಇದರಿಂದ ದೇವರ ಮನಸ್ಸು ಬಹುಬೇಗ ಕರಗುವದಕ್ಕೆ ದಾರಿಯಾಗಿರುವದು. ದಾಸ್ಯಭಕ್ತಿಯಲ್ಲಿರುವ ಈ ಸೌಕರ್ಯವನ್ನು ನೋಡಿ ಒಬ್ಬ ಭಕ್ತನು ಪ್ರಾರ್ಥಿಸಿಕೊಂಡಿರುವದೇನೆಂದರೆ—

“ ಮಜ್ಜನ್ಮನಃ ಫಲಮಿದಂ ಮಧುಕೈಟಭಾರೇ ।
ಮತ್ಪ್ರಾರ್ಥನೀಯ ಮದನುಗ್ರಹ ಏಷ ಏವ ॥
ತ್ವದ್ಭೃತ್ಯಭೃತ್ಯಪರಿಚಾರಕಭೃತ್ಯಭೃತ್ಯ ।
ಭೃತ್ಯಸ್ಯಭೃತ್ಯ ಇತಿ ಮಾಂ ಸ್ಮರ ಲೋಕನಾಥ ॥ ”

ಎಂದರೆ ಹೇ ದೇವ, ನಾನು ಈ ಸಲ ಹುಟ್ಟಿದ್ದಕ್ಕೆ ನಿನ್ನನ್ನು ಬೇಡಿಕೊಳ್ಳುವದಿದೊಂದೇ. ಏನೆಂದರೆ ನನ್ನನ್ನು ನಿನ್ನ ಸೇವಕರ ಸೇವಕರ ಸೇವಕರ ಸೇವಕರ ಸೇವಕರ ಸೇವಕನೆಂದು ನನ್ನನ್ನು ತಿಳಿ.

## ಸಖ್ಯ.

ದಾಸ್ಯದಲ್ಲಿ ಸ್ವಾಮಿಗೂ ದಾಸನಿಗೂ ಅಂತರವಿರುತ್ತದೆ. ಆ ಅಂತರವನ್ನು ಕೂಡ ಕಡಿಮೆ ಮಾಡಿ ಸ್ವಾಮಿಯ ಮೇಲಿನ ಪ್ರೇಮವನ್ನು ಬೆಳೆಸುವದೆಂದರೆ ಸಖ್ಯಭಕ್ತಿ.

“ ಸಮಾನಶೀಲವ್ಯಸನೇಷು ಸಖ್ಯಮ್ ”

ಎಂಬ ವಾಕ್ಯದಂತೆ ಒಂದೇ ಬಗೆಯ ಶೀಲದವರಿಗೆ ಮಾತ್ರ ಸಖ್ಯವು ಕೂಡುವದು. ನಾವು ಪರಮಾತ್ಮನೊಡನೆ ಸಖ್ಯಭಕ್ತಿಯನ್ನು ಮಾಡಬೇಕಾದರೆ ಪರಮಾತ್ಮನ ಶೀಲವನ್ನು ನಮ್ಮ ಅನುಷ್ಠಾನದಲ್ಲಿ ತಂದುಕೊಳ್ಳಬೇಕು. ಸಖ್ಯಭಕ್ತಿಯ ವಿಷಯದಲ್ಲಿ ಶ್ರೀಸಮರ್ಥರ ವಿವರಣೆಯ ತಾತ್ಪರ್ಯವೇನೆಂದರೆ—

“ ದೇವರಿಗೆ ಪ್ರೀತಿಯಾಗುವ ರೀತಿಯಲ್ಲಿ ನಡೆಯಬೇಕು; ದೇವರಿಗೆ ಯಾವಯಾವದು ಪ್ರಿಯವೋ ಅದೆಲ್ಲಾ ತನಗೂ ಪ್ರಿಯವಾಗಬೇಕು; ಹೀಗಾಗಿ ದೇವರ ಮತ್ತು ತನ್ನ ಮನಸ್ಸು ಒಂದಾಗಬೇಕು; ದೇವರ ಸಖ್ಯಕ್ಕಾಗಿ ತನ್ನ ಸೌಖ್ಯವನ್ನು ಬಿಡಬೇಕು; ಸಂಸಾರವ್ಯಥೆಯನ್ನು ಬಿಟ್ಟು ದೇವರ ಚಿಂತೆಯನ್ನು ಹಚ್ಚಿಕೊಳ್ಳಬೇಕು; ದೇವರಿಗಾಗಿ ತನ್ನ ಪ್ರಾಣವನ್ನಾದರೂ ಒಪ್ಪಿಸುವದಕ್ಕೆ ಅನುವಾಗಬೇಕು; ದೇವರು ತನ್ನ ಪ್ರಾಣವಾಗಬೇಕು ”

“ ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ”

ಎಂಬ ಗೀತೋಕ್ತಿಯಂತೆ ಭಕ್ತನ ಭಾವನೆಗೆ ತಕ್ಕಂತೆ ದೇವರು ಅನುಗ್ರಹವನ್ನು ಮಾಡುವನು. ಮೇಘವು ಚಾತಕವನ್ನು ತೃಪ್ತಿಗೊಳಿಸದಿದ್ದರೂ

ಚಾತಕವು ಮೇಘದ ಮೇಲಿನ ದೃಷ್ಟಿಯನ್ನು ತಿರುಗಿಸದಂತೆಯೂ ಚಂದ್ರ ನು ಹೊತ್ತಿಗೆ ಸರಿಯಾಗಿ ಹುಟ್ಟದಿದ್ದರೂ ಚಕೋರವು ಅವನಲ್ಲಿ ಅನನ್ಯ ಭಾವವನ್ನು ಬಿಡದಿರುವಂತೆಯೂ ಭಕ್ತನು ಭಗವಂತನ ಮೇಲಿನ ಮಮ ತ್ವವನ್ನು ಬಿಡಬಾರದು. ತನ್ನ ಸರ್ವಸ್ವವನ್ನೂ ಅವನಿಗೆ ಹೇಳಿಕೊಳ್ಳ ಬೇಕು. ದೇವರು ಹೇಗೋ ಸದ್ಗುರುವೂ ಹಾಗೆಯೇ.

ಉಳಿದ ಭಕ್ತಿಗಳಲ್ಲಿ ದೇವರ ಮುಂದೆ ತನ್ನ ಮನೋಗತವನ್ನೆಲ್ಲಾ ಬಿಚ್ಚಿ ಹೇಳುವ ಸಲಿಗೆ ಇರುವದಿಲ್ಲ. ಸಖ್ಯಭಕ್ತಿಯಲ್ಲಿ ಆ ನ್ಯೂನತೆಯೂ ದೂರವಾಗಿರುವದು. ಪರಮಾತ್ಮನೊಡನೆ ಸಖ್ಯಭಕ್ತಿಯನ್ನು ಮಾಡಿದವ ರಲ್ಲಿ ಪ್ರಶಂಸನೀಯನಾದವನು ಅರ್ಜುನ. ಭಾರತಯುದ್ಧದ ಆರಂಭ ದಲ್ಲಿ ಅರ್ಜುನನು ಶ್ರೀಕೃಷ್ಣನಿಗೆ ತನ್ನ ಮನಸ್ಸಿನ ವಿಷಾದವನ್ನೆಲ್ಲಾ ವಿವರಿಸಿ ಹೇಳಿದ್ದು ಒಂದು ಪ್ರಕರಣವೇ ಆಗಿದೆ. ಹೀಗೆ ಭಗವಂತನ ಮುಂದೆ ತನ್ನ ಮನಸ್ಸನ್ನೆಲ್ಲಾ ಬಿಚ್ಚಿಡುವದಕ್ಕೆ ಅರ್ಜುನನಿಗೆ ಸಖ್ಯಭ ಕ್ತಿಯು ಬಹು ಅನುಕೂಲವಾಯಿತು. ಆ ಸಖ್ಯಭಕ್ತಿಯ ಪ್ರಭಾವದಿಂ ದಲೇ ದೇವತೆಗಳಿಗೆ ಕೂಡ ಅಸಾಧ್ಯವಾದ ವಿರಾಡ್ರೂಪದರ್ಶನವು ಅವ ನಿಗೆ ಲಭ್ಯವಾಯಿತು. ಅಷ್ಟೇ ಅಲ್ಲದೆ ಪೂರ್ವದಲ್ಲಿ ಪರಮಾತ್ಮನು ವಿವ ಸ್ವಾನನಿಗೆ ಉಪದೇಶ ಮಾಡಿದ ಯೋಗವು ಈಗಲೂ ಪರಮಾತ್ಮನ ಮುಖದಿಂದಲೇ ಅರ್ಜುನನಿಗೆ ದೊರೆಯಿತು. ಈ ಅಭಿಪ್ರಾಯವು ಶ್ರೀಕೃಷ್ಣನ ಮಾತಿನಲ್ಲಿಯೇ ಗೀತೆಯಲ್ಲಿ

" ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ |
ಭಕ್ತೋಽಸಿ ಮೇ ಸಖಾಚೇತಿ ರಹಸ್ಯಂ ಹ್ಯೇತದುತ್ತಮಮ್ ॥ "

ಎಂಬ ಶ್ಲೋಕದಲ್ಲಿ ಸ್ಪಷ್ಟವಾಗಿದೆ. ಹಿಂದೆ ನಾನು ಹೇಳಿದ್ದ ಉತ್ತಮ ರಹಸ್ಯವಾದ ಯೋಗವನ್ನೇ ನೀನು ಭಕ್ತನೆಂದೂ ಸಖನೆಂದೂ ತಿಳಿದು ಈಗ ನಿನಗೆ ಹೇಳಿದೆನೆಂದು ಆ ಶ್ಲೋಕದಲ್ಲಿ ಶ್ರೀಕೃಷ್ಣನ ತಾತ್ಪರ್ಯ.

## ಆತ್ಮನಿವೇದನ.

ಆತ್ಮನಿವೇದನಭಕ್ತಿಗೆ ಬಲಿಯನ್ನು ನಿದರ್ಶನವಾಗಿ ಹೇಳುತ್ತಾರೆ. ಪರಮಾತ್ಮನು ವಾಮನಾವತಾರವನ್ನು ತಾಳಿ ಯಾಚಕನಾಗಿ ಬಂದ ಕಾಲ

ದಲ್ಲಿ ಅವನಿಗೆ ಬಲಿಯು ಮೂರು ಹೆಜ್ಜೆಯ ಭೂಮಿಯನ್ನು ದಾನ ಮಾಡಿದನಷ್ಟೆ. ವಾಮನನು ಒಂದು ಹೆಜ್ಜೆಯಿಂದ ಊರ್ಧ್ವಲೋಕಗಳನ್ನೂ ಒಂದು ಹೆಜ್ಜೆಯಿಂದ ಅಧೋಲೋಕಗಳನ್ನೂ ಆಕ್ರಮಿಸಿದನು. ಇನ್ನೊಂದು ಹೆಜ್ಜೆಗೆ ಸ್ಥಲವಿರಲಿಲ್ಲ. ಬಲಿಚಕ್ರವರ್ತಿಯಲ್ಲಿ ಆವನದಾಗಿ ಶರೀರವೊಂದು ಮಾತ್ರ ಉಳಿದಿತ್ತು. ಆಗ ಆವನು ಆ ಒಂದು ಹೆಜ್ಜೆಗೆ ತನ್ನ ತಲೆಯನ್ನೇ ಕೊಟ್ಟ ಕಥೆಯು ಭಾಗವತದಲ್ಲಿದೆ. ಬಲಿಯು ಮಹಾಭಗವದ್ಭಕ್ತನಾಗಿದ್ದನು. ದೇವತೆಗಳ ಹಿತಕ್ಕಾಗಿ ಆ ಬಲಿಯನ್ನು ಹೊರಕ್ಕೆ ಹಾಕಬೇಕೆಂದು ವಿಷ್ಣುವಿಗೆ ಉದ್ದೇಶವಿತ್ತು. ಶುಕ್ರಾಚಾರ್ಯರೇ ಮೊದಲಾದವರು ಅಡ್ಡಬಂದರೂ ಕೇಳದೆ ಅವನು ಪರಮಾತ್ಮನಿಗೆ ತನ್ನ ಆತ್ಮನಿವೇದನವನ್ನು ಮಾಡಿಯೇ ಬಿಟ್ಟನು. ಈ ಆತ್ಮನಿವೇದನಭಕ್ತಿಯಿಂದಾದ ಪರಿಣಾಮವು ವಿಲಕ್ಷಣವಾಗಿದೆ. ಸಖ್ಯಭಕ್ತಿಯ ಕಾಲದಲ್ಲಿ ಭಕ್ತನೂ ಸ್ವಾಮಿಯೂ ಜೇರೆ ಬೇರೆಯಾಗಿ ಸಮಾನರಾಗಿದ್ದರು. ಸಖ್ಯಭಕ್ತಿಯ ಹಿಂದಿನ ದಾಸ್ಯಭಕ್ತಿಯಲ್ಲಿ ಭಕ್ತನು ಸ್ವಾಮಿಗೆ ದಾಸನಾಗಿದ್ದನು. ಸಖ್ಯಭಕ್ತಿಯ ಮುಂದಿನ ಆತ್ಮನಿವೇದನದ ಪರಿಣಾಮವೇನಾಯಿತೆಂದರೆ ಶ್ರೀಮಹಾವಿಷ್ಣು ಬಲಿಯ ಭಕ್ತಿಗೆ ಬದ್ಧನಾಗಿ ಪಾತಾಲದಲ್ಲಿ ತಾನು ದಾಸನಂತೆ ಬಲಿಯ ಬಾಗಿಲನ್ನು ಕಾದುಕೊಂಡಿರಬೇಕಾಯಿತು. ಆತ್ಮನಿವೇದನಭಕ್ತಿಯಿಂದ ಪರಮಾತ್ಮನು ಹೀಗೆ ಭಕ್ತನಿಗೆ ಆಳಾಗಬೇಕಾಯಿತು. ಆತ್ಮನಿವೇದನಭಕ್ತಿಯ ವೇಗವು ಇಷ್ಟು ತೀವ್ರವಾದದ್ದು. ಇದರ ವಿಷಯವಾಗಿ ಶ್ರೀಸಮರ್ಥರ ವಿವರಣೆಯ ತಾತ್ಪರ್ಯವೇನೆಂದರೆ—

“ತನ್ನ ಸ್ವರೂಪವೇನೆಂಬುದನ್ನು ತಿಳಿಯಬೇಕು; ದೇವರ ಸ್ವರೂಪವನ್ನು ಗುರ್ತಿಸಬೇಕು; ಪರಮೇಶ್ವರನ ಹೊರತು ತನಗೆ ಅಸ್ತಿತ್ವವಿಲ್ಲವೆಂದು ತಿಳಿಯಬೇಕು; ದೇಹ ಮೊದಲಾದವುಗಳ ಮೇಲಿನ ಅಹಂಭಾವವನ್ನು ಸರ್ವವಿಧದಿಂದಲೂ ಬಿಡಬೇಕು; ನಾನು ನಾನೆಂಬಭಿಮಾನವನ್ನು ತೊರೆಯಬೇಕು; ಈ ಆತ್ಮನಿವೇದನಭಕ್ತಿಯಾಗದೆ. ಹುಟ್ಟು ಸಾವುಗಳು ತಪ್ಪುವದಿಲ್ಲ.”

## ಭಕ್ತಿಯ ಬೇರೆ ಬಗೆಗಳು.

ಭಕ್ತ್ಯಾಚಾರ್ಯರಾದ ಭಗವಾನ್ನಾರದರು ಭಕ್ತಿಯನ್ನು ಹನ್ನೊಂದು ಬಗೆಯೆಂದು ಮಾಡಿ ಕಲ್ಪಿಸಿರುವ ಸೂತ್ರವೇನೆಂದರೆ—

"ಗುಣಮಾಹಾತ್ಮ್ಯಾಸಕ್ತಿರೂಪಾಸಕ್ತಿಪೂಜಾಸಕ್ತಿಸ್ಮರಣಾಸಕ್ತಿ
ದಾಸ್ಯಾಸಕ್ತಿಸಖ್ಯಾಸಕ್ತಿವಾತ್ಸಲ್ಯಾಸಕ್ತಿಕಾನ್ತಾಸಕ್ತ್ಯಾತ್ಮನಿವೇ
ದನಾಸಕ್ತಿತನ್ಮಯತಾಸಕ್ತಿಪರಮವಿರಹಾಸಕ್ತಿರೂಪೈಕಧಾಪ್ಯೇ
ಕಾದಶಧಾ ಭವತಿ."

ತಾತ್ಪರ್ಯವೇನೆಂದರೆ- ಆಸಕ್ತಿಯೆಂಬುದು ಒಂದೇ ಆದರೂ ಗುಣಗಳ ಹೆಚ್ಚುಗೆಯಲ್ಲಿರುವ ಆಸಕ್ತಿ, ರೂಪದಲ್ಲಿರುವ ಆಸಕ್ತಿ, ಪೂಜೆಯಲ್ಲಿರುವ ಆಸಕ್ತಿ, ಸ್ಮರಣೆಯಲ್ಲಿರುವ ಆಸಕ್ತಿ, ಆಳುತನದ ಆಸಕ್ತಿ, ಗೆಳೆತನದ ಆಸಕ್ತಿ, ವಾತ್ಸಲ್ಯದ ಆಸಕ್ತಿ, ಹೆಂಡತಿಯ ಆಸಕ್ತಿ, ತನ್ನನ್ನೇ ಒಪ್ಪಿಸುವ ಆಸಕ್ತಿ, ತನ್ಮಯವಾಗುವ ಆಸಕ್ತಿ, ಬಲವಾದ ಅಗಲುವಿಕೆಯ ಆಸಕ್ತಿ- ಎಂದು ಹನ್ನೊಂದು ಬಗೆಯಾಗಿರುವದು. ಇವುಗಳಲ್ಲಿ ಬಹುಭಾಗಗಳ ವಿಚಾರವು ನವವಿಧಭಕ್ತಿಗಳಲ್ಲಿ ಬಂದಿರುವವು. ಆದರೂ ಕೆಲವು ವಿಚಾರವಿಶೇಷಗಳು ಇಲ್ಲಿ ಹೇಳಲಾಗುವವು. ಈ ಹನ್ನೊಂದು ಬಗೆಗಳೂ ಆಸಕ್ತಿಯ ಭೇದಗಳೆಂದು ಸೂತ್ರದಿಂದಲೇ ಕಾಣುತ್ತದೆ. ಈ ಅಭಿಪ್ರಾಯವು ಮಹಾಕವಿಭವಭೂತಿಯ

"ಏಕೋರಸಃ ಕರುಣ ಏವ ನಿಮಿತ್ತಭೇದಾ ||
ದ್ಭಿನ್ನಃ ಪೃಥಕ್ಪೃಥಗಿವಾಶ್ರಯತೇ ವಿವರ್ತಾನ್ ||
ಆವರ್ತಬುದ್ಬುದತರಂಗಮಯಾನ್ವಿಕಾರಾ |
ನ್ನದ್ಯೋ ಯಥಾ ಸಲಿಲಮೇವ ತು ತತ್ಸಮಗ್ರಮ್ ||"

ಎಂಬ ಉತ್ತರರಾಮಚರಿತ್ರೆಯ ಶ್ಲೋಕದ ನೆನಪುಗೊಡುತ್ತದೆ. ಏಕೆಂದರೆ ಆ ಶ್ಲೋಕದಲ್ಲಿ ನಿಜವಾಗಿ ಕರುಣೆಯೆಂಬುದೊಂದೇ ರಸವೆಂದೂ ಅದೇ ಬೇರೆ ಬೇರೆ ನಿಮಿತ್ತಗಳಿಂದ ಬೇರೆ ಬೇರೆ ರೂಪಗಳನ್ನು ಪಡೆಯುವಂತೆ ತೋರುತ್ತದೆಯೆಂದೂ ನೀರೆಂಬುದು ಸುಳಿ, ಗುಳ್ಳೆ, ತೆರೆ- ಮೊದಲಾದ ರೂಪಗಳನ್ನು ಹೊಂದಿದರೂ ನಿಜವಾಗಿ ಎಲ್ಲಾ ನೀರೇ ಆಗಿರುವಂತೆ

ಎಲ್ಲಾ ರಸಗಳೂ ಕರುಣಾರಸದಲ್ಲಿ ಅಡಗಿರುವವೆಂದು ಅಭಿಪ್ರಾಯವಿದೆ. ಹಾಗೆಯೇ ಒಂದೇ ಆಸಕ್ತಿಯು ಹನ್ನೊಂದು ಬಗೆಯಾಗಿರುವದು.

ಮೊದಲನೇದು ಗುಣಮಾಹಾತ್ಮ್ಯಾಸಕ್ತಿ— ಲೋಕದಲ್ಲಿರುವ ವಸ್ತುಗಳ ಗುಣವನ್ನು ಹೇಳಿದರೂ ಕೇಳಿದರೂ ಜನರಿಗೆ ವಸ್ತುಗಳ ಮೇಲಿನ ಪ್ರೇಮವು ಮತ್ತಷ್ಟು ಹೆಚ್ಚಿ ಅದರಲ್ಲಿಯೇ ಮನಸ್ಸು ನೆಡುವದು. ಈ ಗುಣಗಳು ಎಷ್ಟು ಕೇಳಿದರೂ ಮುಗಿಯುವಂಥವುಗಳಲ್ಲವಾದ್ದರಿಂದ ಶ್ರವಣಕ್ಕೆ ಕೊನೆಯೇ ಇಲ್ಲ. ಈ ಗುಣಮಾಹಾತ್ಮ್ಯೆಯ ವಿಷಯಕ್ಕೆ ಭಾಗವತವು ಹೇಳಿರುವದೇನೆಂದರೆ—

“ ನಿವೃತ್ತತರ್ಷೈರುಪಗೀಯಮಾನಾ ।
ದ್ಭವೌಷಧಾಚ್ಛ್ರೋತ್ರಮನೋಭಿರಾಮಾತ್ ॥
ಕ ಉತ್ತಮಶ್ಲೋಕಗುಣಾನುವಾದಾ ।
ತ್ಪುಮಾನ್ವಿರಜ್ಯೇತ ವಿನಾ ಪಶುಘ್ನಾತ್ ॥”

ಎಂದರೆ— “ ಆಶೆಗಳನ್ನೆಲ್ಲ ಬಿಟ್ಟವರು ಕೂಡ ಯಾವಾಗಲೂ ಗಾನ ಮಾಡುತ್ತಿರುವಂಥವುಗಳಾಗಿಯೂ ಸಂಸಾರರೋಗಕ್ಕೆ ಔಷಧವಾಗಿಯೂ ಕೇಳುವವರ ಮನಸ್ಸನ್ನು ಎಳೆಯುವಂಥವುಗಳಾಗಿಯೂ ಇರುವ ಆ ಪ್ರಸಿದ್ಧನಾದ ಪರಮಾತ್ಮನ ಗುಣಗಳ ವರ್ಣನೆಯನ್ನು ಕಟುಕನ ಹೊರತು ಬೇರೆ ಯಾರು ಒಲ್ಲೆನೆನ್ನುವರು?

ಎರಡನೇದು ರೂಪಾಸಕ್ತಿ— ಗುಣಗಳೆಲ್ಲಾ ರೂಪವನ್ನು ಹೊಂದಿಕೊಂಡಿರುತ್ತವೆ. ಪರಮಾತ್ಮನು ತನ್ನ ಗುಣಗಳನ್ನು ಪ್ರಕಟಮಾಡುವದಕ್ಕಾಗಿ ವಿಷ್ಣುಪುರಾಣದಲ್ಲಿ

“ ಇಚ್ಛಾಗೃಹೀತಾಭಿಮತೋರುದೇಹಃ ”

ಎಂದು ಹೇಳಿರುವಂತೆ ತನ್ನ ಇಚ್ಛೆಯಿಂದ ಬೇಕುಬೇಕಾದ ರೂಪನ್ನು ಧಾರಣಮಾಡುವನು. ಅಂಥ ಯಾವದಾದರೂ ರೂಪದಲ್ಲಿ ಇಡುವ ಆಸಕ್ತಿಯೇ ರೂಪಾಸಕ್ತಿ. ಈ ರೂಪದ ವಿಷಯದಲ್ಲಿ ಭಾಗವತದಲ್ಲಿ

“ ಸಂಕ್ಷೋಭಮಕ್ಷರಜುಷಾಮಪಿ ಚಿತ್ತತನ್ವೋಃ ”

ಎಂದು ಬಂದಿದೆ. ಪರಮಾತ್ಮನ ಅವ್ಯಕ್ತಸ್ವರೂಪವನ್ನರಿತಿರುವ ಬ್ರಹ್ಮಾದಿಗಳಿಗೆ ಕೂಡ ವ್ಯಕ್ತಸ್ವರೂಪವನ್ನು ನೋಡಿದರೆ ಮನಸ್ಸು ಶರೀರವೂ

ಪರವಶವಾಗುವನೆಂದರ್ಥ. ಸಾಧಕನಾದವನು ಪ್ರತಿದಿನವೂ ತನ್ನ ಇಷ್ಟ ದೈವದ ಹೆಜ್ಜೆಯಿಂದ ತಲೆಯವರೆಗಿನ ರೂಪವನ್ನು ಆದಷ್ಟು ಚೆನ್ನಾಗಿ ಮನಸ್ಸಿನಲ್ಲಿ ನಿಲ್ಲಿಸಿಕೊಳ್ಳಬೇಕು.

ಮೂರನೇದು ಪೂಜಾಸಕ್ತಿ:— ಆ ಪರಮಾತ್ಮನ ರೂಪವನ್ನು ಆಸನ ಪಾದ್ಯ, ಅರ್ಘ್ಯ, ಸ್ನಾನ, ವಸ್ತ್ರ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ ಮೊದಲಾದವುಗಳಿಂದ ಪೂಜಿಸುವದು.

ನಾಲ್ಕನೇದು ಸ್ಮರಣಾಸಕ್ತಿ:— ಶರೀರದಿಂದ ಮಾಡಿದ ಪೂಜೆಗಿತಲೂ ಮನಸ್ಸಿನಿಂದ ಮಾಡಿದ ಸ್ಮರಣೆಯು ಹೆಚ್ಚು ಕೆಲಸ ಮಾಡುವದು ಏಕೆಂದರೆ ಶರೀರದ ಕೆಲಸವು ಎಷ್ಟೋ ವೇಳೆಗಳಲ್ಲಿ ಮನಸ್ಸಿಗೆ ಮುಟ್ಟು ದಿಲ್ಲ. ಆದರೆ ಮನಸ್ಸಿನಲ್ಲಿರುವದು ಶರೀರದ ಮೇಲೆ ಕೆಲಸ ಮಾಡಿಯೇ ತೀರುವದು.

“ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ ”

ಎಂದು ಸ್ಮೃತಿ ಇದೆ. ಮಹಾಪಾತಕಿಗಳು ಸ್ಮರಣೆ ಮಾಡಿದರೂ ಹರಿಯು ಅವರ ಪಾಪಗಳನ್ನು ಕಳೆಯುವನೆಂದರ್ಥ. ಹೀಗೆ ಪೂರ್ವಾರ್ಧದಲ್ಲಿ ಹೇಳಿದ ಸ್ಮೃತಿಯು ಉತ್ತರಾರ್ಧದಲ್ಲಿ—

“ ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇವ ಹಿ ಪಾವಕಃ ”

ಎಂದಿದೆ. ಎಂದರೆ ತಿಳಿಯದೆ ಮುಟ್ಟಿದರೂ ಬೆಂಕಿಯು ಸುಟ್ಟೇಸುಡುವದೆಂದರ್ಥ. ಬೆಂಕಿಯನ್ನು ಬೇಕಾಗಿಯೋ ಮುಟ್ಟಿದರೂ ಬೇಕಿಲ್ಲದೆ ಮುಟ್ಟಿದರೂ ಸುಡುವದೇ ಸ್ವಭಾವವಲ್ಲವೇ? ಬೆಂಕಿಯ ಚೂರು ಒಂದು ದಾರಿಯಲ್ಲಿ ಬಿದ್ದಿದ್ದರೆ ಚರ್ಮವು ದಪ್ಪವಾಗಿರುವ ಅಂಗಾಲಿನಿಂದ ತುಳಿದವನಿಗೆ ಅದರ ಸುಡುವ ಕಾರ್ಯವು ನಡೆದರೂ ತೋರದಿರುವಂತೆ ಬಹುಪಾಪಿಯಾದವನು ಮನಸ್ಸಿಲ್ಲದೆ ಮಾಡಿದ ಸ್ಮರಣೆಯಿಂದ ಸ್ವಲ್ಪ ಪಾಪವು ಹೋದರೂ ಬೇಗನೆ ಅದರ ಫಲವು ತೋರುವದಿಲ್ಲ. ಅದೇ ಕಿಡಿಯನ್ನು ಹತ್ತಿಯಲ್ಲಿಯೋ ತೆಂಗಿನ ಗುಂಜಿನಲ್ಲಿಯೋ ಇಟ್ಟು ಬೆಳೆಸಿ ಒಣ ಕಟ್ಟಿಗೆಯನ್ನು ಜೋಡಿಸಿದರೆ ಧಗಧಗನೆ ಉರಿಯುವಂತೆ ಎಂಥ ಪಾಪಿಷ್ಠನಾಗಿದ್ದರೂ ಮನಸ್ಸಿಟ್ಟು ಪರಮಾತ್ಮನ ಸ್ಮರಣೆಯನ್ನು ಮಾಡಿಬಿಟ್ಟನೆಂದರೆ ಅವನ ಪಾಪಗಳೆಲ್ಲಾ ಹಾರಿಹೋಗುವವು.

ಐದನೇದು ದಾಸ್ಯಭಕ್ತಿ:— ಪ್ರತಿಫಲವನ್ನು ಬಯಸುವ ದಾಸ್ಯವು ದಾಸ್ಯಭಕ್ತಿಯಲ್ಲ. ದೇವರಿಗಾಗಿ ಹಗಲಿರುಳೂ ದುಡಿದು ಏನನ್ನೂ ಬಯಸದಿದ್ದರೆ ದೇವರು ತನ್ನ ಸರ್ವಸ್ವವನ್ನೂ ಅವನಿಗೆ ಕೊಡಬೇಕಾಗುವದು. ಏಕೆಂದರೆ ಕೂಲಿಯನ್ನು ಕೇಳದೆ ಮನಃಪೂರ್ವಕವಾಗಿ ದುಡಿಯುವ ಆಳಿಗೆ ಯಜಮಾನನು ತನ್ನ ಗೌರವಕ್ಕೆ ತಕ್ಕಂತೆ ಹೆಚ್ಚಾಗಿಯೇ ಕೊಡಬೇಕಾಗುವದನ್ನು ನಾವು ವ್ಯವಹಾರದಲ್ಲಿ ನೋಡುತ್ತೇವೆ. ಒಂದು ದೃಷ್ಟಿಯಿಂದ ನೋಡಿದರೆ ತನಗೇನೂ ಬೇಡವೆಂಬ ವೈರಾಗ್ಯವು ನನಗೆಲ್ಲವೂ ಬೇಕೆಂಬ ಆಸಕ್ತಿಯ ರೂಪಾಂತರವಾಗಿ ತೋರುವದು. 'ಆಳಾಗಬಲ್ಲವನು ಅರಸಾಗಬಲ್ಲನು' ಎಂಬ ಗಾದೆಯಂತೆ ಚೆನ್ನಾಗಿ ದಾಸ್ಯಭಕ್ತಿಯನ್ನು ಮಾಡಬಲ್ಲವನು ಪರಮಾತ್ಮನ ಪರಮಾನುಗ್ರಹಕ್ಕೆ ಪಾತ್ರನಾಗುವನು.

ಆರನೇದು ಸಖ್ಯಾಸಕ್ತಿ:— ಸರ್ವೇಶ್ವರನಾದ ಪರಮಾತ್ಮನನ್ನು ನಮ್ಮ ಆಟದ ಗೆಳೆಯನನ್ನಾಗಿ ಮಾಡಿಕೊಳ್ಳುವದು. ಗೆಳೆಯನಲ್ಲಿ ಹೇಗೆ ನಮ್ಮ ತಪ್ಪುಗಳನ್ನು ಅತ್ತಿತ್ತ ನೋಡದೆ ಒಪ್ಪಿಕೊಳ್ಳುವೆವೊ ಹಾಗೆ ಪರಮಾತ್ಮನ ವಿಷಯದಲ್ಲಿ ನಡೆದುಕೊಳ್ಳುವದು.

ಏಳನೇದು ವಾತ್ಸಲ್ಯಾಸಕ್ತಿ:— ಪರಮಾತ್ಮನನ್ನು ಮುದ್ದು ಬೀರುವ ಹಸುಗೂಸೆಂದು ಭಾವಿಸಿ ಆತನಲ್ಲಿ ನಮ್ಮ ಮಕ್ಕಳ ಪ್ರೇಮವನ್ನೆಲ್ಲಾ ತೋರಿಸುವದು ವಾತ್ಸಲ್ಯಭಕ್ತಿಯು. ದೇವರು ಸರ್ವಶಕ್ತನೆಂಬ ಯೋಚನೆಯನ್ನು ತಂದುಕೊಂಡರೆ ನಮಗೆ ಒಮ್ಮೊಮ್ಮೆ ಭಯವುಂಟಾಗುವ ಸಂಭವವುಂಟು. ಆ ಭಯೋತ್ಪಾದಕಶಕ್ತಿಮತ್ತ್ವವನ್ನು ಮರೆಸುವದಕ್ಕೆ ಈ ವಾತ್ಸಲ್ಯಭಕ್ತಿಯು ಒಳ್ಳೇ ಸಾಧನ. ಮಕ್ಕಳ ಮೇಲಿನ ಪ್ರೇಮವಿಶೇಷದಿಂದ ಮನಸ್ಸಿಗಾಗುವ ಒಂದು ಬಗೆಯ ಆನಂದವನ್ನು ನಮ್ಮ ಶ್ರೀವಿದ್ಯಾರಣ್ಯ ಕಾವ್ಯದ ಈ ಕೆಳಗಿನ ಪದ್ಯಗಳು ಸ್ವಲ್ಪಮಟ್ಟಿಗೆ ದಿಕ್ಪ್ರದರ್ಶನ ಮಾಡುವವು—

" ಮಡಿಯುಂಡೊಡಂ ಬಿಡದೆ ಧೂಲಿ ಸೇರುತಿ |
ಮ್ಮಡಿಯಾಗಿ ಮಕ್ಕಳುರೆ ಮುಟ್ಟಲಾ ಸುಖಂ ||
ಮಡಿಯಾದ ವಸ್ತ್ರದ ಬೆಡಂಗ ಮಾರುತಿ |
ಮ್ಮಡಿಯಾದ ಸೌಖ್ಯಮೆನಿಕುಂ ಮನಕ್ಕೆ ತಾಂ ||

ಇಟ್ಟ ವಸ್ತುಕುಲವಿಟ್ಟ ತಾಣದೊಳ್ ।
ನೆಟ್ಟನಿರ್ದ ಸುಖಮಿಾಯುವೆಂದಿಗುಂ ॥
ಪುಟ್ಟ ಮಕ್ಕಳದ ದಿಟ್ಟಿಸುತ್ತ ಚೆ ।
ಲ್ಲಿಟ್ಟ ಸೌಖ್ಯಕೆಣೆಯಿಲ್ಲವೆಂದಿಗುಂ ॥
ಸರಿಗಮಪದವುಂ ಸುಕಂಠದಿಂ ತಾಂ ।
ಸರಿ, ಸರಿ, ರಮ್ಯವಿದೆಂದೆನಲ್ಕೆ ಹಾಡಲ್ ॥
ಸರಿವ ಶಿಶುವ ರೋದನಕ್ಕದೆಂತುಂ ।
ಸರಿಯೆನೆ ತೋರದು ಲೋಕದಲ್ಲಿ ನೋಡಲ್ ॥"

ಹೀಗೆ ಮಕ್ಕಳನ್ನು ಮುದ್ದಿಸುವ ಪ್ರೇಮವನ್ನು ಭಗವಂತನ ಕಡೆಗೆ ಇಟ್ಟರೆ ವಾತ್ಸಲ್ಯಭಕ್ತಿಯಾಗುವದು. ಪರಮಾತ್ಮನು ಮಗುವಾಗಿ ಗೋಪಸ್ತ್ರೀಯರಲ್ಲಿದ್ದ ವಿಚಿತ್ರಲೀಲೆಯನ್ನು ನಮ್ಮ ಭಕ್ತಿಗೀತಾವಲಿಯ ಈ ಕೆಳಗಿನ ಪದವು ಹಾಡುವದು.

ರಾಗ— ಕಮಾಚು. ರೂಪಕತಾಳ.

ಇದು ಚಿತ್ರವೇ ಸರಿ । ಮಧುರೇಶ ಶ್ರೀಹರಿ ॥ ಪ ॥
ವರಯುತಿಗಳು ನಿನ್ನ ಒಡೆಯ । ಲರಿಯದಿರುತಿರೆ ॥
ಒರಳ ಕಲ್ಲಿಗೆ ಕಟ್ಟುಬಿದ್ದ । ಪರಿಯ ನೋಡಲು ॥ ೧ ॥
ನೋಡೆ ಶಬ್ದಮೂಲ ನೀನು । ನಾಡ ಗೊಲ್ಲರಾ ॥
ಹಾಡಿಗೆ ಮೈ ಮರೆಯುತ್ತಿದ್ದ । ಪಾಡ ನೋಡಲು ॥ ೨ ॥
ಕೂದಲೆಳೆಯೊಳಬ್ಧಿ ಇರಲು । ಯಾದವನಾಗಿ ॥
ಕಾದ ಬೊಗಸೆ ನೀರ ಸ್ನಾನ । ಗೆಯ್ದ ರೀತಿಯು ॥ ೩ ॥
ಎಲ್ಲವನ್ನು ತಿಳಿದ ನೀನು । ಗೊಲ್ಲ ಹೆಣ್ಣಳಾ ॥
ಸೊಲ್ಲಿನಿಂದ ಮಾತ ಕಲಿತ । ಫುಲ್ಲನಯನನೆ ॥ ೪ ॥
ಧರಣಿಗೆ ಆಧಾರನಾಗಿ । ತರುಣಿಯರುಗಳ ॥
ಬೆರಳ ಹಿಡಿದು ತಪ್ಪುಹೆಜ್ಜೆ । ಇರಿಸುತಿರುವದು ॥ ೫ ॥
ನೆಲವೆ ಬಸಿರೊಳಡಗಿರಲ್ಕೆ । ಒಲಿದು ಗೊಲ್ಲರಾ ॥
ಲಲನೆಯರ ತೊಡೆಯೊಳಡಗಿ । ಮಲಗುತಿರುವದು ॥ ೬ ॥

ತಿಳಿಯ ಚಿದ್ರೂಪನಾಗಿ । ಬಳಿದ ಮೋಹವ ॥
ತಳೆದ ಬಾಲನಂತೆ ಅಳುತ । ಮೊಲೆಯ ಕುಡಿವುದು ॥ ೭ ॥

ಮಕ್ಕಳಲ್ಲೆಲ್ಲ ಪರಮಾತ್ಮದೃಷ್ಟಿಯನ್ನು ಮಾಡುವದರ ಮೂಲಕ ವಾತ್ಸಲ್ಯಭಕ್ತಿಯನ್ನು ಹೆಚ್ಚಿಸಿಕೊಳ್ಳಬಹುದು.

ಎಂಟನೇದು ಕಾಂತಾಸಕ್ತಿ:— ಇದು ಗಂಡಹೆಂಡಿರ ಪ್ರೇಮ. ಇದಕ್ಕಿಂತ ಹೆಚ್ಚಿನ ಪ್ರೇಮವು ಜಗತ್ತಿನಲ್ಲಿ ಇಲ್ಲವೇ ಇಲ್ಲ. ಶೃಂಗಾರರಸಪ್ರಧಾನವಾದ ಕಲ್ಪನಾಕಥೆಗಳ ಕಡೆಗೆ ಇರುವ ಜನರ ಒಲವೇ ಇದಕ್ಕೆ ನಿದರ್ಶನವಾಗಿರುವದು. ಕಾಂತಾಭಕ್ತಿಯಲ್ಲಿ ನಾವೆಲ್ಲರೂ ಪತ್ನಿಯರು; ಪರಮಾತ್ಮನೇ ಪತಿಯು. ಹೀಗೆಂದು ಗಂಡಸರೆಲ್ಲರೂ ಹೆಂಗಸರಂತೆಯೇ ಉಡಿಗೆತೊಡಿಗೆಗಳನ್ನಿಟ್ಟುಕೊಂಡು ಶೃಂಗಾರಪ್ರಿಯರಾಗಿ ಧೈರ್ಯ, ಸಾಹಸ-ವೊದಲಾದ ಗುಣಗಳನ್ನು ಒಂದು ಮೂಲೆಯಲ್ಲಿ ಮುದುರಿಟ್ಟು ಕುಳಿತುಕೊಳ್ಳುವದೆಂದು ತಿಳಿಯಬಾರದು. ವ್ಯವಹಾರದಲ್ಲೆಲ್ಲಾ ಗಂಡಸರೇ ಆಗಿದ್ದು ಹೃದಯದಲ್ಲಿ ಹೆಂಗಸರಾಗಬೇಕು. ಪತಿವ್ರತೆಯಾದ ಹೆಂಡತಿಯು ಪ್ರಿಯನಾದ ಗಂಡನನ್ನು ಆದರಿಸುವಂತೆ ಪರಮಾತ್ಮನಿಗೆ ಉಪಚಾರಗಳನ್ನು ಮಾಡಬೇಕು.

ಒಂಬತ್ತನೇದು ಆತ್ಮನಿವೇದನಾಸಕ್ತಿ:— ಇದರಲ್ಲಿ ಭಕ್ತನು ಭಕ್ತಿಯನ್ನು ಮಾಡುವ ಸ್ವಾತಂತ್ರ್ಯವನ್ನು ಕೂಡ ಪರಮಾತ್ಮನಿಗೆ ಒಪ್ಪಿಸಿಬಿಡುವನು. ಪರಮಾತ್ಮನ ಪ್ರೇರಣೆಯ ಹೊರತು ತನ್ನಿಂದ ಏನೂ ಸಾಗುವದಿಲ್ಲವೆಂದು ಎಲ್ಲ ಭಾರವನ್ನೂ ಪರಮಾತ್ಮನ ಮೇಲೆ ಹಾಕುವನು.

ಹತ್ತನೇದು ತನ್ಮಯಾಸಕ್ತಿ:— ಪರಮಾತ್ಮವಿಷಯವಾದ ಸ್ಮರಣೆಯ ಭರದಲ್ಲಿ ತನ್ನ ಪ್ರತ್ಯೇಕವ್ಯಕ್ತಿತ್ವವನ್ನು ಮರೆಯುವದು ತನ್ಮಯಾಸಕ್ತಿ. ಬಿಟ್ಟ ಬಾಣವು ಗುರಿಯಿಟ್ಟ ವಸ್ತುವಿನ ಒಳಕ್ಕೆ ಹೋಗಿ ಸೇರಿಕೊಂಡು ಆ ವಸ್ತುವಿನೊಳಗೆ ಕೂಡಿಕೊಂಡಿರುವಂತೆ ತಾನು ಪರಮಾತ್ಮನಲ್ಲಿ ಬೆರೆಯಬೇಕು.

ಹನ್ನೊಂದನೇದು ಪರಮವಿರಹಾಸಕ್ತಿ:— ಸಾಮಾನ್ಯವಾಗಿ ನೋಡಿದರೆ ತನ್ಮಯಾಸಕ್ತಿಯೇ ಭಕ್ತಿಗಳಲ್ಲಿ ಕೊನೆಯಾಗಬೇಕಾಗಿತ್ತು. ಪರಮಾತ್ಮನಲ್ಲಿ ತನ್ಮಯವಾಗುವದಕ್ಕಿಂತ ಮತ್ತೇನು ಬೇಕಾಗಿದೆ? ಆದರೂ

ಭಗವಾನ್ನಾರದರು ಅದಕ್ಕಿಂತ ಮುಂದೆ ಇನ್ನೂ ಒಂದು ಮೆಟ್ಟಿಲನ್ನು ಹೇಳಿರುವದು ಕೇವಲ ಆ ತನ್ಮಯತೆಯ ಉಜ್ಜ್ವಲತೆಯನ್ನು ತೋರಿಸುವದಕ್ಕಾಗಿ ಮಾತ್ರ ಆಗಿರುತ್ತದೆ. ಸತಿಪತಿಯರು ತನ್ಮಯತೆಯ ಕಾಲದಲ್ಲಿ ಪ್ರೇಮಪರವಶರಾಗಿರುವದು ಸಹಜವು. ಆದರೆ ಆ ತನ್ಮಯತೆಯ ಪ್ರೇಮವೆಂಬ ಸುವರ್ಣಕ್ಕೆ ಪರಮವಿರಹಾವಸ್ಥೆಯು ಒಳ್ಳೇ ಒರೆಗಲ್ಲಾಗಿದೆ. ಸತಿಪತಿಯರ ಪ್ರೇಮದ ಬೆಲೆಯು ಅವರ ವಿರಹಾವಸ್ಥೆಯಲ್ಲಿ ಮಾತ್ರ ಎದ್ದು ಕಾಣುವದು. ಶ್ರೀರಾಮಚಂದ್ರನ ಮೇಲಿನ ಸೀತೆಯ ಪ್ರೇಮವು ಆಕೆಯ ಲಂಕಾವಾಸಸ್ಥಿತಿಯಲ್ಲಿ ಚೆನ್ನಾಗಿ ಅಭಿವ್ಯಕ್ತವಾಗಿರುವದು. ನಳನ ಮೇಲಿದ್ದ ದಮಯಂತಿಯ ಪ್ರೇಮವು ಆಕೆಯು ನಳನನ್ನಗಲಿದ ಮೇಲೆ ಮಾಡಿದ ಪ್ರಯತ್ನಗಳಿಂದ ಸ್ಪಷ್ಟವಾಗುವದು. ಸ್ತ್ರೀಯರಲ್ಲಿ ಈ ರೀತಿಯಾಗಿ ತೋರಿದಂತೆ ಪುರುಷರಲ್ಲಿ ಮಹಾಕವಿ ಕಾಲಿದಾಸನ ಮೇಘದೂತದ ನಾಯಕನಾದ ಯಕ್ಷನಲ್ಲಿಯೂ ಮಹಾಕವಿ ಭವಭೂತಿಯ ಉತ್ತರರಾಮಚರಿತ್ರೆಯ ನಾಯಕನಾದ ವಿಕ್ರಮನಲ್ಲಿಯೂ ಅದು ಹೊರಬಿದ್ದಿರುವದು. ಯಕ್ಷನು ಮೇಘವನ್ನು ಜಡವೆಂದು ತಿಳಿಯದೆ ಅದನ್ನು ತನ್ನ ಪತ್ನಿಯ ಕಡೆಗೆ ಕಳುಹಿಸುವ ಯೋಚನೆಯನ್ನು ಮಾಡಿದ್ದಾನೆ. ವಿಕ್ರಮನಂತು ಊರ್ವಶಿಯ ಹಂಬಲಿನಿಂದ ನವಿಲು, ಕೋಗಿಲೆ, ಹಂಸ, ಚಕ್ರವಾಕ, ಭ್ರಮರ, ಆನೆ, ಪರ್ವತ, ನದಿ, ಸಾರಂಗ- ಇವುಗಳ ಸಂಗಡ ಕೂಡ ವಿಚಾರಮಾಡಿದ್ದಾನೆ. ಈ ಮನಸ್ಸಿನ ಸ್ಥಿತಿಯು ಹಲ್ಲಿಟವು ಅವರ ಪ್ರೇಮದ ಪರಿಣಾಮವಾಗಿರುವದು. ಈ ಬಗೆಯ ಪರಮವಿರಹಾಸಕ್ತಿಯಲ್ಲಿ

"ಯಥಾ ವ್ರಜಗೋಪಿಕಾನಾಮ್"

ಎಂಬ ನಾರದಭಕ್ತಿಸೂತ್ರದಂತೆ ಗೋಪಸ್ತ್ರೀಯರು ಹೆಸರುಗೊಂಡಿದ್ದಾರೆ. ಗೋಪಸ್ತ್ರೀಯರ ಪ್ರೇಮವು ಕಾಮುಕತೆಯ ಸ್ವಾರ್ಥದಿಂದ ಕಲುಷಿತವಾಗಿತ್ತೆಂದು ಕೆಲವರು ಹೇಳುವದು ಅವಿಚಾರರಮಣೀಯವಾದ ಮಾತು. ಏಕೆಂದರೆ ಆಗ ಶ್ರೀಕೃಷ್ಣನಿಗೆ ವಯಸ್ಸು ಏಳು ತುಂಬಿ ಎಂಟಕ್ಕೆ ಬಿದ್ದಿತ್ತು. ಅಂಥ ಹಸುಗೂಸಿನ ಮೇಲೆ ಕಾಮುಕತೆ ಹೇಗೆ ಹುಟ್ಟೀತು? ಒಂದು ವೇಳೆ ಹುಟ್ಟಿದರೂ ಗೋಪಿಯರು ತಮ್ಮ ಅತ್ತೆಮಾವಂದಿರೆದುರಿಗೇ ಹೇಗೆ ಮನೆತನನ್ನು ಬಿಟ್ಟು ಬರುತ್ತಿದ್ದರು? ಅದೂ ಗುಂಪು ಕಟ್ಟಿಕೊಂಡು ಬರುವದು

ಹೇಗೆ ಒಪ್ಪೀತು? ಇದರ ಜೊತೆಗೆ ಶ್ರೀಕೃಷ್ಣನ ವಿಷಯಕ್ಕೆ ಗೋಪಿಯರ ಅಭಿಪ್ರಾಯವೇನಿತ್ತೆಂಬದಕ್ಕೆ ಭಾಗವತದಲ್ಲಿಯೇ ಅವರ ಬಾಯಿಂದ ಬಂದಿರುವ ಶ್ಲೋಕಗಳನ್ನು ನೋಡಿರಿ–

"ನ ಖಲು ಗೋಪಿಕಾನಂದನೋ ಭವಾ ।
ನಖಿಲದೇಹಿನಾಮಂತರಾತ್ಮದೃಕ್ ॥
ವಿಖನಸಾರ್ಥಿತೋ ವಿಶ್ವಗುಪ್ತಯೇ ।
ಸಖ ಉದೇಯಿವಾನ್ಸಾತ್ವತಾಂ ಕುಲೇ ॥"

ಅರ್ಥ– ಎಲೈ ಗೆಳೆಯನಾದ ಕೃಷ್ಣನೇ, ನೀನು ಗೋಪಿಯ ಮಗನಂತು ಅಲ್ಲವೇ ಅಲ್ಲ. ಎಲ್ಲ ಜೀವರುಗಳಲ್ಲಿಯೂ ಒಳಗೆ ನೋಡುತ್ತ ಕುಳಿತಿರುವ ಅಂತರ್ಯಾಮಿಯೇ ನೀನು. ಪ್ರಪಂಚವನ್ನೆಲ್ಲಾ ಕಾಪಾಡುವದಕ್ಕೆಂದೇ ಮಹಾತ್ಮನಾದ ನೀನು ಸಾತ್ವತರ ಕುಲದಲ್ಲಿ ಹುಟ್ಟಿ ಸಂಚರಿಸುತ್ತಿರುವೆ.

"ವಿರಚಿತಾಭಯಂ ವೃಷ್ಣಿಧುರ್ಯ ತೇ ।
ಚರಣಮೀಯುಷಾಂ ಸಂಸೃತೇರ್ಭಯಾತ್ ॥
ಕರಸರೋರುಹಂ ಕಾಂತ ಕಾಮದಂ ।
ಶಿರಸಿ ಧೇಹಿ ನಃ ಶ್ರೀಕರಗ್ರಹಮ್ ॥"

ಅರ್ಥ– ಎಲೈ ವೃಷ್ಣಿಕುಲ ಶ್ರೇಷ್ಠನಾದ ಕೃಷ್ಣನೇ ಸಂಸಾರದ ಭಯದಿಂದ ನಿನ್ನನ್ನೇ ಶರಣು ಹೊಂದಿದ್ದೇವೆ. ಬೇಡಿದಿಷ್ಟಾರ್ಥವನ್ನು ಕೊಡುವ ಲಕ್ಷ್ಮೀದೇವಿಯ ಕೈಯನ್ನು ಹಿಡಿದಿರುವ ನಿನ್ನ ಅಭಯಹಸ್ತವನ್ನು ನಮ್ಮ ತಲೆಯ ಮೇಲೆ ಇಡುವವನಾಗು.

ಲೋಕದಲ್ಲಿ ವಿಷಯಗಳಲ್ಲಿ ಮನಸ್ಸಿಟ್ಟವರಿಗೆ ಈ ಭಕ್ತಿಯ ಆಳವು ತಿಳಿಯದು. ಯಾವದಾದರೂ ಒಂದು ತುಚ್ಛವಾದ ವಸ್ತುವನ್ನು ಕಳೆದುಕೊಂಡರೆ ಕಣ್ಣೀರಿನ ಕೋಡಿಯನ್ನು ಹರಿಸುವವರು ಎಷ್ಟೋ ಜನರಿರುವರು. ಆದರೆ 'ಪರಮಾತ್ಮನ ಪಾದಾರವಿಂದವನ್ನು ಕಾಣಲಿಲ್ಲವಲ್ಲ!' ಎಂದು ಒಂದು ತೊಟ್ಟು ನೀರನ್ನಾದರೂ ಕಣ್ಣಿನಿಂದ ಇಳಿಸುವ ಮಹಾತ್ಮರು ಎಲ್ಲಿರುವರು? ಅವರೆಲ್ಲಿರುವರೋ ಅದೇ ಪುಣ್ಯಭೂಮಿ. ಆ ಕಣ್ಣೀರಿನ ಕೋಡಿ ಹರಿಯುವದಕ್ಕೆ ಪರಮವಿರಹಾಸಕ್ತಿಯೇ ಕಾಲುವೆ.

ಈ ಪ್ರೇಮಭಾವದ ವಿಷಯದಲ್ಲಿ ವೀರಶೈವರ ವಚನಶಾಸ್ತ್ರಕಾರರ ಉದ್ಗಾರಗಳೂ ಎಷ್ಟು ಉತ್ತೇಜಕವಾಗಿವೆ! ನೋಡಿರಿ–

(೧) ಅರಿಸಿನವ ಮಿಂದು, ಹೊಂದುಡುಗೆಯನೆ ಚೊಟ್ಟೆ. ಪುರುಷ ಬಾರಾ ಪುಣ್ಯರತ್ನವೇ ನೀ ಬಾ. ನಿನ್ನ ಬರವೆನ್ನಸುಖದ ಬರವಾದುದೀಗ ಬಾರಾ, ಬಾರಾ ಚನ್ನಮಲ್ಲಿಕಾರ್ಜುನ ಬಂದಾನೆಂದು ಬಟ್ಟೆಗಳ ನೋಡಿ ನಾ ಬಾಯಾರುತಿರ್ದೆ.

(೨) ಕೇವಳದ ಮನವು ತರಿ ಕೆಳಗಾಯಿತವ್ವಾ. ಸುಳಿದು ಬೀಸುವ ಗಾಳಿ ಉರಿಯಾಯಿತವ್ವಾ. ಬೆಳದಿಂಗಳು ಬಿಸಿಲಾಯಿತವ್ವ ಕೆಳದಿ. ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವಾ. ತಿಳುಹು ಬುದ್ಧಿಯ, ಹೇಳಿ ಕರತಾರೆತೆಗವ್ವಾ, ಚನ್ನಮಲ್ಲಿಕಾರ್ಜುನಗೆ ಮುನಿಸವ್ವಾ.

(೩) ಮನವ ಮಂಚವ ಮಾಡಿ ಚಿತ್ತದಿ ಪವಡಿಸುವೆ, ಬಾರಯ್ಯಾ. ಎನ್ನ ಶಿವಲಿಂಗವೇ ಬಾರಯ್ಯ. ಎನ್ನ ಭಕ್ತವತ್ಸಲನೇ ಬಾರಯ್ಯ ಎನ್ನ ಭಕ್ತದೇಹಿಕ ದೇವನೇ ಬಾರಯ್ಯ. ಎನ್ನ ಅಂತರಂಗದೊಳಿರು ಬಾರಯ್ಯ. ಎನ್ನ ಬಹಿರಂಗದೊಳಿರು ಬಾರಯ್ಯ. ಓಂ ನಮಃ ಶಿವಾಯ ಎಂದು ಕರೆವೆನು ಉಳಿಯುಮೇಶ್ವರಾ.

(೪) ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೇ, ನೀವು ಕಾಣಿರೇ? ಕೊಳನ ತಡಿಯಲಾಡುವ ಹಂಸೆಗಳಿರಾ, ನೀವು ಕಾಣಿರೆ, ನೀವು ಕಾಣಿರೆ? ಸ್ವರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೆ, ನೀವು ಕಾಣಿರೆ? ಗಿರಿಗಹ್ವರಗಳೊಳಗಾಡುವ ನವಿಲುಗಳಿರಾ, ನೀವು ಕಾಣಿರೆ? ಚನ್ನಮಲ್ಲಿಕಾರ್ಜುನ ದೇವನೆಲ್ಲಿದ್ದಾನೆಂಬುದ ಬಲ್ಲರೆ, ನೀವು ಹೇಳಿರೆ.

## ಭಕ್ತಿಯ ಆವೇಶ.

ಭಕ್ತಿಯು ಮೆಯ್ದುಂಬಿದ್ದಕ್ಕೆ ದೇಹಾದಿಗಳ ಮೇಲೆ ಎಚ್ಚರವಿಲ್ಲದಂತಾಗಿ ಪರಮಾತ್ಮನಲ್ಲಿ ತನ್ಮಯತೆಯಾಗುವದೇ ಸಾಕ್ಷಿ. ಇದಕ್ಕೆ ವಿದುರನ ಹೆಂಡತಿಯ ದೃಷ್ಟಾಂತವು ಬಹು ಚೆನ್ನಾಗಿದೆ. ವಿದುರನ ಹೆಂಡತಿಯು ಬಚ್ಚಲಲ್ಲಿ ಬೆತ್ತಲೆಯಾಗಿ ಸ್ನಾನಮಾಡುತ್ತಿದ್ದಾಗ ಒಂದು ದಿನ ಶ್ರೀಕೃಷ್ಣನು ಬಂದು ಬಾಗಿಲಲ್ಲಿ ನಿಂತು ತನ್ನ ಬಂದಿರುವಿಕೆಯನ್ನು ಸೂಚಿಸಿದನು. ಒಡನೆಯೇ ವಿದುರನ ಹೆಂಡತಿಗೆ ಕೃಷ್ಣನ ಮೇಲಿನ ಪ್ರೇಮದ ಭರದಲ್ಲಿ ದೇಹಭಾನವೇ ಹಾರಿಹೋಯಿತು. ಆಗ ಆಕೆ ಬೆತ್ತಲೆಯಾಗಿಯೇ ಎದ್ದು ಬಂದು ಬಾಗಿಲನ್ನು ತೆಗೆದು ಅವನನ್ನು ಒಂದು ಕಡೆ ಕೂಡಿಸಿ ಒಳಗಣಿಂದ ಬಾಳೆಯ ಹಣ್ಣುಗಳನ್ನು ತಂದು ಸಿಪ್ಪೆಯನ್ನು ದು ಹಣ್ಣನ್ನು ಕೆಳಕ್ಕೆ ಬಿಸಾಟು ಸಿಪ್ಪೆಯನ್ನೇ ಕೃಷ್ಣನಿಗೆ ತಿನ್ನಿಸುತ್ತಿ

ದ್ದಳು. ಕೃಷ್ಣನು ಅದನ್ನು ಬಾಯಿ ಚಪ್ಪರಿಸಿಕೊಂಡು ತಿನ್ನುತ್ತಿದ್ದನು. ಇಷ್ಟರಲ್ಲಿ ಹೊರಗಣಿಂದ ವಿದುರನು ಬಂದನು. ಅಷ್ಟು ಹೊತ್ತಿಗೆ ಕೃಷ್ಣನು ತನ್ನ ಪೀತಾಂಬರವನ್ನು ಆಕೆಗೆ ಹೊದ್ದಿಸಿದ್ದನು. ಆಕೆಗೆ ಯಾವದರ ಅರಿವೂ ಇಲ್ಲ. ಆ ಪ್ರೇಮದ ಆವೇಶದಲ್ಲಿ ಹಿಂದುಮುಂದು ತೋರದೆ ಆಕೆ ಅವನಿಗೆ ಬಾಳೆಯ ಸಿಪ್ಪೆಗಳನ್ನೇ ತಿನ್ನಿಸುತ್ತಿದ್ದಳು. ಇದನ್ನು ಕಂಡು ವಿದುರನು ಆಕೆಯನ್ನು ಗದರಿಸಿ ಹಣ್ಣನ್ನು ತಿನಿಸ ಹೇಳಿ ಪರಮಾತ್ಮನ ಪೀತಾಂಬರವನ್ನು ತೆಗೆದುಕೊಂಡದ್ದಕ್ಕೆ ಆಕ್ಷೇಪಿಸಿದನು. ಆಗ ಆಕೆಗೆ ಎಚ್ಚರವಾಗಿ ಹಣ್ಣನ್ನು ಕೃಷ್ಣನ ಬಾಯಲ್ಲಿಟ್ಟಳು. ಆಗ ಕೃಷ್ಣನು ಒಮ್ಮೆ ಅದನ್ನು ಸವಿದು ಅದು ಹಿಂದಿನದರಷ್ಟು ಸವಿಯಾಗಿಲ್ಲವೆಂದು ಉಗುಳಿಬಿಟ್ಟನು. ಮೊದಲು ಆಕೆ ತಿನ್ನಿಸಿದ್ದು ಸಿಪ್ಪೆಯಾದರೂ ಅದರಲ್ಲಿ ಆಕೆಯ ಪ್ರೇಮಾವೇಶದ ರಸವು ಸೇರಿಕೊಂಡಿತ್ತು. ಹಣ್ಣನ್ನು ಬಾಯಲ್ಲಿಡುವಾಗ ಆ ಆವೇಶವಿಲ್ಲದ್ದರಿಂದ ಹಿಂದಿನ ಸವಿ ಬರಲಿಲ್ಲ.

ಮತ್ತೊಬ್ಬ ವರ್ತಕನ ಉದಾಹರಣೆಯೂ ಚಮತ್ಕಾರವಾಗಿದೆ. ಉತ್ತರಹಿಂದುಸ್ಥಾನದಲ್ಲಿ ಒಬ್ಬ ವರ್ತಕನಿದ್ದನು. ಆ ದೇಶದಲ್ಲಿ 'ತೇರಾ' ಎಂಬ ಒಂದು ಮಾತಿದೆ ಇದಕ್ಕೆ ಹದಿಮೂರೆಂದು ಒಂದರ್ಥ; ನಿನ್ನವನೆಂದು ಇನ್ನೊಂದರ್ಥ. ಆ ವರ್ತಕನು ಧಾನ್ಯವನ್ನು ಅಳೆಯುವಾಗ ಹನ್ನೆರಡರವರೆಗೂ ಸರಿಯಾಗಿ ಅಳೆದು ಹದಿಮೂರನೆಯದಕ್ಕೆ 'ತೇರಾ', ಎನ್ನುತ್ತಲೇ ತನ್ನ ವ್ಯಾಪಾರದ ಅರಿವು ಹಾರಿಹೋಗಿ 'ನಾನು ನಿನ್ನವ"ನೆಂದು ಪರಮಾತ್ಮನಿಗೆ ಹೇಳಿಕೊಳ್ಳುವ ಭಾವನೆಯೇ ಮೈದುಂಬಿಕೊಂಡು ಅವನು ಅಲ್ಲಿಂದ ಮುಂದೆ ಪ್ರತಿಯೊಂದಳತೆಗೂ 'ತೇರಾ', ಎನ್ನುತ್ತಲೇ ಇದ್ದನಂತೆ. ಹೀಗೆ ಪರಮಾತ್ಮನ ನೆನಪಾದ ಕೂಡಲೆ ದೇಹಭಾನವು ಅಳಿದು ಹೋಗುವಂತೆ ಭಕ್ತಿಯ ಆವೇಶವನ್ನು ತಂದುಕೊಳ್ಳಬೇಕು.

## ಭಕ್ತಿಯ ಬಹಿರಂಗಚಿಹ್ನ.

ಒಳಗೆ ಮೈಯ್ದೊಡಿದ ಭಕ್ತಿಯ ಆವೇಶವು ಹೊರಗೆ ಕೂಡ ತೋರುವ ಸ್ಥಿತಿಯನ್ನು ಕುರಿತು ಭಗವಾನ್ ನಾರದರು–

" ಕಂಠಾವರೋಧರೋಮಾಂಚಾಶ್ರುಭಿಃ ಪರಸ್ಪರಂ ಲಪಮಾನಾಃ ಪಾವಯನ್ತಿ ಕುಲಾನಿ ಪೃಥಿವೀಂ ಚ "

ಎಂಬ ಸೂತ್ರದಲ್ಲಿ ಹೇಳಿದ್ದಾರೆ. ಇದರ ಅರ್ಥವೇನೆಂದರೆ–ಗಂಟಲು ಕಟ್ಟಿ ಹೊಂಪುಳಿಯಾಗಿ ಸಂತೋಷದ ಕಂಬನಿಗಳಿಂದ ಒಬ್ಬರೊಡನೊಬ್ಬರು ಮಾತನಾಡುತ್ತ ಕುಲಗಳನ್ನೂ ಭೂಮಿಯನ್ನೂ ಶುದ್ಧಿಮಾಡುವರು. ಇದೇ ಅರ್ಥದಲ್ಲಿಯೇ ಭಾಗವತಪುರಾಣದಲ್ಲಿ ಬಂದಿರುವ ವಿಚಾರಗಳೇನೆಂದರೆ–

(೧) ಚಕ್ರಪಾಣಿಯಾದ ಶ್ರೀಕೃಷ್ಣನು ಈ ಲೋಕದಲ್ಲಿ ತೆಗೆದುಕೊಂಡ ಅವತಾರಗಳನ್ನೂ ಮಾಡಿದ ಕರ್ಮಗಳನ್ನೂ ಆ ಉದ್ದೇಶಗಳನ್ನೊಳಗೊಂಡ ನಾಮಗಳನ್ನೂ ಹಾಡುಗಳಾಗಿ ಹಾಡುವಾಗ ಭಕ್ತನು ನಾಚಿಕೆಯನ್ನು ಮನಸ್ಸಿಗೆ ತಂದುಕೊಳ್ಳದೆ ಯಾವದರ ಸೆಳೆತಕ್ಕೂ ಸಿಕ್ಕದೆ ಜೀವನಯಾತ್ರೆಯನ್ನು ನಡೆಸುವನು. (೧೧-೨-೩೯)

(೨) ಈ ರೀತಿಯಲ್ಲಿ ತನ್ನ ಪ್ರಿಯನಾದ ಪರಮಾತ್ಮನ ನಾಮವನ್ನು ಕೀರ್ತಿಸುತ್ತ ಪ್ರೇಮಾವೇಶವುಳ್ಳವನಾದವನು ಇವನೊಬ್ಬ ವಿಲಕ್ಷಣ ಪುರುಷನೆನ್ನುವಂತೆ ಗಟ್ಟಿಯಾಗಿ ನಗುವನು, ಅಳುವನು, ಕೂಗಿಕೊಳ್ಳುವನು, ಹಾಡುವನು ಮತ್ತು ಹುಚ್ಚನಂತೆ ಕುಣಿಯುವನು! (೧೧-೨-೪೦)

(೩) ರೋಮಾಂಚಗಳುಂಟಾಗದೆ, ಮನಸ್ಸು ಕರಗದೆ, ಆನಂದಾಶ್ರುಗಳ ಕೋಡಿ ಇಡದೆ ಇರುವ ಭಕ್ತಿಯಿಂದ ಹೇಗೆ ಶುದ್ಧಿಯಾದೀತು! (೧೧-೧೪-೨೩)

ಈ ಸಂದರ್ಭಕ್ಕೆ ಒಪ್ಪುವಂತೆ ನಮ್ಮ ಭಕ್ತಿಗೀತಾವಳಿಯಲ್ಲಿರುವ ಒಂದು ಉದ್ಗಾರವೇನೆಂದರೆ—

ರಾಗ— ಸುರಟಿ ಮಿಶ್ರಛಾಪು.

ಎಂದಿಗೆ ನಾನೀಸುಖವನುಭವಿಸುವೆನೊ ||ಪ||
ಇಂದುವ ಮೀರಿಸಿದ । ಇಂದಿರೆಯರಸನ ।
ಸುಂದರವದನವನಾ । ನಂದದಿ ನೋಡುತಿರುತ ||ಅ. ಪ.||
ಪರಿಯನು ಪೂಜಿಸುತ । ಪರಿಪರಿ ವಿಧದಿ ||
ಹೊರಗಣ ವಸ್ತುಗಳ । ಮರೆಯುತ ಇದ್ದಲ್ಲಿಯೆ ।
ಇರುತಲಿ ಆ ಶ್ರೀಪರಿಗೆ । ಶರಣೆನುತಿರುತಿರುತ || ೧ ||

ದೇವನ ಚರಿತೆಯ । ಕೇಳುತ ಕೇಳುತ ॥
ಆವಿಧವಾದ ಭಕ್ತಿ । ಭಾವದಿ ಮೆಯ್ಮರೆತು ।
ಪಾವನರೂಪಾಬ್ಧಿಯೊಳು । ಆವಗ ಮುಳುಗುತ ॥ ೨ ॥
ನಾಮವ ಕೀರ್ತಿಸುತ । ಪ್ರೇಮದ ಭರದಿ ॥
ರೋಮವು ಪುಳಕಿಸೆ । ನೇಮದಿ ಬೆವರಿರೆ ।
ಆ ಮಹಿಮೆಯು ಮುಖದ । ಸೀಮೆಯನಾವರಿಸಿರೆ ॥ ೩ ॥
ದಡದಡ ಸುರಿಸುತ । ಕುಡಿಕೆಯ ಕಣ್ಣ ನೀರ ॥
ಗಡಗಡ ನಡುಗುತ । ನುಡಿಯೊಳು ತೊದಳುತ ।
ಸಡಗರದಿ ಮೃಡನಸಖನ । ಅಡಿಯನು ಹಿಡಿದಿರುತ ॥ ೪ ॥
ಅದುದನೆಲ್ಲವನು । ಮಾಧವಗೊಪ್ಪಿಸಿ ॥
ಭೂಧವನಾದಾತನ । ಪಾದವ ಮರೆಯದೆ ।
ಆದರದಿಂದ ಒಟ್ಟು । ಸೋದವ ಸೋಡುತಿರುತ ॥ ೫ ॥

ಈ ವಿಷಯದಲ್ಲಿ ವೀರಶೈವಮತಸಶಾಸ್ತ್ರಕಾರರ ಅಭಿಪ್ರಾಯವೇನೆಂದರೆ–

( ೧ ) ಅಡಿಗಡಿಗೆ ಲಿಂಗವನಡರಿಯಡಾ, ಕಂಗಳು ಕಡೆಗೋಡಿವರಿದವಯ್ಯಾ. ಎನ್ನಶ್ರುಜಲಂಗಳು ಆಲಿಗಲ್ಲ ರೂಹಿನಂತೆ. ತನು ಪುಳಕಿತವಾಗೆ ಅರಗಿನ ಪುತ್ಥಳಿಯಂತೆ. ಬೆವರು ಬಿಂದುಗಳೆಲ್ಲ ಭಕ್ತಿರಸಪ್ರವವಯ್ಯಾ. ಕೂಡಲಸಂಗಮದೇವಯ್ಯಾ ನಿಮ್ಮ ದರ್ಶನಸ್ಪರ್ಶನದಿಂದ ಮನ ಒಲಿದು ಸರೆವ ಭರವನಾನೇನೆಂಬೆನಯ್ಯಾ?

( ೨ ) ಮನಮನ ಬೆರಸಿದಲ್ಲಿ ತನು ಕರಗದಿದ್ದಡೆ, ನೋಂಕಿನಲ್ಲಿ ಪುಳಕಂಗಳು ಹೊರ ಹೊಮ್ಮದಿರ್ದಡೆ, ಕಂಗಳಶ್ರುಜಲಂಗಳು ಸುರಿಯದಿರ್ದಡೆ, ನುಡಿವಲ್ಲಿ ಗದ್ಗದಂಗಳು ಮೊರ ಹೊಣ್ಣದಿರ್ದಡೆ, ಕೂಡಲಸಂಗಮದೇವರ ಭಕ್ತಿಗಿದೇ ಚಿಹ್ನ, ಎನ್ನಲ್ಲಿ ಇಲ್ಲವಾಗಿ ಆನು ಡಂಭಕ ಕಾಣಿರೇ

ಎಂದು ಒಳಗೆ ಭಕ್ತಿಯು ಪೂರ್ಣವಾಗಿ ತುಂಬುವದೊ ಅಂದು ಅದು ಹೊರಗೆ ಈ ರೀತಿಯಲ್ಲಿ ತುಳುಕುವದು. ಭಕ್ತಿಯೆಂಬ ಸಮುದ್ರದಲ್ಲಿ ಮುಳುಗಿದ್ದರ ಚಿಹ್ನವಾದ ಆವೇಶವು ತುಂಬಿತುಳಕಿದ್ದು ಇತಿಹಾಸಪ್ರಸಿದ್ಧನಾಗಿರುವ ಮಹಾಭಗವದ್ಭಕ್ತನಾದ ಚೈತನ್ಯನಲ್ಲಿ ಚೆನ್ನಾಗಿ ಕಂಡು ಬಂದಿದೆ. ಎಷ್ಟೋ ಸಂದರ್ಭದಲ್ಲಿ ಆವನು ಕೃಷ್ಣನಿಗೆ ಆನಂದವನ್ನುಂಟು ಮಾಡಿದ ಸಂಗತಿಗಳನ್ನು ನೆನೆದು ಆನಂದಗೊಳ್ಳುತ್ತಲೂ ದುಃಖವನ್ನುಂಟು

ಮಾಡಿದ ಸಂಗತಿಗಳನ್ನು ನೆನೆದು ದುಃಖಿಗೊಳ್ಳುತ್ತಲೂ ಒಮ್ಮೊಮ್ಮೆ ನಗುತ್ತ, ಒಮ್ಮೊಮ್ಮೆ ಅಳುತ್ತ, ಒಮ್ಮೊಮ್ಮೆ ಕುಣಿಯುತ್ತ, ಒಮ್ಮೊಮ್ಮೆ ನಿಟ್ಟಿಸಿ ನೋಡುತ್ತ, ಒಮ್ಮೊಮ್ಮೆ ನಿಟ್ಟುಸಿರಿಡುತ್ತ, ಒಮ್ಮೊಮ್ಮೆ ಬೆರಗಾಗುತ್ತ, ಒಮ್ಮೊಮ್ಮೆ ಬೆಚ್ಚಿಬೀಳುತ್ತ, ರೋಮಾಂಚಗಳನ್ನು ಪಡೆಯುತ್ತ, ಆನಂದಾಶ್ರುಗಳನ್ನು ಸುರಿಸುತ್ತ, ಗದ್ಗದಸ್ವರದಿಂದ ಹಾಡುತ್ತ, ತನ್ನನ್ನು ತಾನು ಮರೆಯುತ್ತ, ಪ್ರೇಮಾತಿಶಯದಿಂದ ತನ್ಮಯನಾಗುತ್ತಿದ್ದನು. ಭಜನೆಗೆ ನಿಂತನೆಂದರೆ ಎಷ್ಟೋ ಸಲ ಅವನಿಗೆ ಹೊತ್ತೇ ತಿಳಿಯುತ್ತಿರಲಿಲ್ಲ.

## ಭಕ್ತರ ಲಕ್ಷಣ.

ಭಕ್ತರ ಲಕ್ಷಣದ ವಿಷಯದಲ್ಲಿ ಭಾಗವತವು ಹೇಳುವದೇನೆಂದರೆ—

(೧) ಎಲ್ಲ ಪ್ರಾಣಿಗಳಲ್ಲಿಯೂ ಒಬ್ಬನೇ ಆತ್ಮನಿರುವನೆಂದೂ ಎಲ್ಲ ಪ್ರಾಣಿಗಳೂ ಆತ್ಮನಲ್ಲಿಯೇ ಇರುವವೆಂದೂ ಯಾವನು ತಿಳಿಯುವನೋ ಅವನು ಉತ್ತಮನು. (೧೧-೨-೪೫)

(೨) ಈಶ್ವರನಲ್ಲಿ ಪ್ರೇಮವನ್ನೂ ಭಕ್ತರಲ್ಲಿ ಮೈತ್ರಿಯನ್ನೂ ಅಜ್ಞಾನಿಗಳಲ್ಲಿ ಕರುಣೆಯನ್ನೂ ಹಗೆತನವುಳ್ಳವರಲ್ಲಿ ಉಪೇಕ್ಷೆಯನ್ನೂ ಮಾಡುವವನು ಮಧ್ಯಮನು. (೧೧-೨-೪೬)

(೩) ಭಗವಂತನ ಮೂರ್ತಿಯ ಪೂಜೆಯನ್ನು ಮಾತ್ರ ಶ್ರದ್ಧೆಯಿಂದ ಮಾಡುತ್ತ ಭಗವದ್ಭಕ್ತರನ್ನು ಆದರಿಸದೆ ಇರುವವನು ಪ್ರಾಕೃತನು. (೧೧-೨-೪೭)

(೪) ಇಂದ್ರಿಯಗಳಿಂದ ಭೋಗ್ಯವಿಷಯಗಳನ್ನು ಪಡೆದರೂ ಅದರಿಂದ ಯಾವನು ಹರ್ಷವನ್ನೂ ವಿಷಾದವನ್ನೂ ಪಡುವದಿಲ್ಲವೋ ಇದೆಲ್ಲ ವಿಷ್ಣುವಿನ ಮಾಯೆಯೆಂದು ಯಾವನು ನೋಡುವನೋ ಅವನು ಭಾಗವತೋತ್ತಮನು. (೧೧-೨-೪೮)

(೫) ಭಗವಂತನ ಸ್ಮರಣೆಯಲ್ಲಿಯೇ ಮನಸ್ಸಿಟ್ಟು ದೇಹೇಂದ್ರಿಯಪ್ರಾಣಮನೋಬುದ್ಧಿಗಳ ಹುಟ್ಟು, ಸಾವು, ಹಸಿವು, ಭಯ-ಮೊದಲಾದ

ಸಂಸಾರ ಧರ್ಮಗಳಿಂದ ಯಾವನು ಮೋಹವನ್ನು ಹೊಂದುವದಿಲ್ಲವೋ ಅವನು ಭಾಗವತೋತ್ತಮನು. ( ೧೧-೨-೪೯ )

( ೬ ) ಯಾವನು ಮನಸ್ಸಿನಲ್ಲಿ ಕಾಮಕರ್ಮಗಳ ಬೀಜಗಳನ್ನು ಹುಟ್ಟಗೊಡದೆ ಪರಮಾತ್ಮನಲ್ಲಿಯೇ ನೆಲೆಸಿರುವನೋ ಅವನು ಭಾಗವತೋತ್ತಮನು. ( ೧೧-೨-೫೦ )

( ೭ ) ಯಾವನಿಗೆ ತನ್ನ ಜನ್ಮದ, ಕರ್ಮದ, ವರ್ಣದ, ಆಶ್ರಮದ, ಮತ್ತು ಜಾತಿಯ ದುರಭಿಮಾನವು ತಲೆಗೇರುವದಿಲ್ಲವೋ ಅವನು ಹರಿಪ್ರಿಯನು. ( ೧೧-೨-೫೧ )

( ೮ ) ಯಾರಿಗೆ ಹಣದಲ್ಲಿ ನನ್ನದು ಬೇರೆ, ಪರರದು, ಬೇರೆ-ಎಂದೂ ಆತ್ಮದ ವಿಷಯದಲ್ಲಿ ನನ್ನದು ಬೇರೆ, ಪರರದು ಬೇರೆ-ಎಂದೂ ಭೇದಭಾವನೆ ಇಲ್ಲದೆ ಸರ್ವಭೂತಗಳಲ್ಲಿಯೂ ಸಮತ್ವಬುದ್ಧಿಯುಂಟಾಗಿ ಶಾಂತತೆಯು ಬಂದಿರುವದೋ ಅವನು ಭಾಗವತೋತ್ತಮನು. ( ೧೧-೨-೫೨ )

( ೯ ) ಮೂರುಲೋಕದ ವೈಭವವೂ ತನಗೆ ಒಲಿದು ಬರುತ್ತಿದ್ದರೂ ಆದರ ಕಡೆಗೆ ಮನಸ್ಸು ಹಾಕದೆ ದೇವಾಧಿದೇವರಿಂದ ಕೂಡ ಹುಡುಕಲ್ಪಡುತ್ತಿರುವಂಥ ಭಗವತ್ಪಾದಾರವಿಂದದ ಸ್ಮರಣೆಯನ್ನು ಒಂದು ಕ್ಷಣಾರ್ಧವೂ ಕೂಡ ಬಿಡದೆ ಇರುವವನು ವೈಷ್ಣವಶ್ರೇಷ್ಠನು. ( ೧೧-೨-೫೩ )

ಇದೇ ವಿಷಯದಲ್ಲಿ ಭಗವದ್ಗೀತೆಯಲ್ಲಿ ಹೇಳಿರುವದೇನೆಂದರೆ—

ಯಾರೊಬ್ಬರ ಮೇಲೆಯೂ ಹಗೆತನವನ್ನು ಮಾಡದೆ, ಎಲ್ಲರಲ್ಲಿಯೂ ಮೈತ್ರಿಯನ್ನೂ ಕರುಣೆಯನ್ನೂ ತೋರುತ್ತ, ನಾನು ನನ್ನದೆಂಬದನ್ನು ಬಿಟ್ಟು, ಸುಖದುಃಖಗಳನ್ನು ಸಮವಾಗಿ ತಿಳಿಯುತ್ತ, ಕ್ಷಮಾವಂತನಾಗಿ, ( ೧೨-೧೩ )

( ೨ ) ಯಾವಾಗಲೂ ತೃಪ್ತನಾಗಿ, ಮನಸ್ಸನ್ನು ಸಮತ್ವದಲ್ಲಿಟ್ಟುಕೊಂಡು, ಮನಸ್ಸಿನ ಮೇಲೆ ಅಧಿಕಾರವನ್ನು ನಡೆಸುವವನಾಗಿ, ದೃಢನಿಶ್ಚಯವುಳ್ಳವನಾಗಿ, ಪರಮಾತ್ಮನಲ್ಲಿಯೇ ಮನೋಬುದ್ಧಿಗಳನ್ನಿಟ್ಟಿರುವ ಭಕ್ತನೇ ನನಗೆ ಪ್ರಿಯನು ( ೧೨-೧೪)

( ೩ ) ಜನರನ್ನು ತಳಮಳಗೊಳಿಸದೆ, ತಾನು ತಳಮಳಗೊಳ್ಳದೆ, ಹರ್ಷ, ಸಿಟ್ಟು, ಭಯ, ತಳಮಳ-ಇವುಗಳಿಗೆ ಆಶ್ರಯವನ್ನು ಕೊಡದವನೇ ನನಗೆ ಪ್ರಿಯನು. ( ೧೨-೧೫ )

( ೪ ) ಅಪೇಕ್ಷೆಯುಳ್ಳವನಾಗದೆ, ಶುಚಿಯಾಗಿ, ದಕ್ಷನಾಗಿ, ಯಾವದರಲ್ಲಿಯೂ ಆಸಕ್ತಿಯನ್ನು ವಹಿಸದೆ, ಯಾವದರಿಂದಲೂ ಮನಸ್ಸಿನ ವಿಕಾರವನ್ನು ಪಡೆಯದೆ, ಕಾಮ್ಯಕರ್ಮಗಳನ್ನೆಲ್ಲ ಬಿಟ್ಟು ಇರುವ ಭಕ್ತನು ನನಗೆ ಪ್ರಿಯನು. ( ೧೨-೧೬ )

( ೫ ) ಯಾವನು ಯಾವದರಿಂದಲೂ ಮೈಯ್ಯುಬ್ಬದೆ, ಯಾವದರ ಮೇಲೆಯೂ ಹಗೆತನವನ್ನು ಮಾಡದೆ, ಯಾವದಕ್ಕೂ ಕಣ್ಣೀರು ಬಿಡದೆ, ಯಾವದಕ್ಕೂ ಬಾಯಿನೀರು ಕರೆಯದೆ, ಶುಭಾಶುಭ ಫಲಗಳನ್ನು ಲಕ್ಷ್ಯ ಮಾಡದೆ ಇರುವನೊ ಅಂಥ ಭಕ್ತನು ನನಗೆ ಪ್ರಿಯನು. ( ೧೨-೧೭ )

( ೬ ) ಶತ್ರುಮಿತ್ರರಲ್ಲಿಯೂ ಮಾನಾಪಮಾನಗಳಲ್ಲಿಯೂ ಶೀತೋಷ್ಣಸುಖದುಃಖಗಳಲ್ಲಿಯೂ ಸಮತ್ವವುಳ್ಳವನಾಗಿ, ಯಾವದರಲ್ಲಿಯೂ ಆಸಕ್ತನಾಗದೆ ( ೧೨-೧೮ )

( ೭ ) ನಿಂದಾಸ್ತುತಿಗಳನ್ನು ಸಮವಾಗಿ, ಭಾವಿಸುತ್ತ ಮನಸ್ಸಿನಲ್ಲಿ ಪರಮಾತ್ಮವಿಚಾರವನ್ನಿಟ್ಟುಕೊಂಡವನಾಗಿ, ಏನು ಸಿಕ್ಕಿದರೂ ಸಂತುಷ್ಟನಾಗುತ್ತ, ಒಂದು ನಿಯುತವಾದ ವಾಸಸ್ಥಾನವಿಲ್ಲದವನಾಗಿ, ಸ್ಥಿರಬುದ್ಧಿಯುಳ್ಳವನಾದ ಭಕ್ತನು ನನಗೆ ಪ್ರಿಯನು. ( ೧೨-೧೯ )

ಈ ಲಕ್ಷಣಗಳೂ ಮತ್ತು ಗೀತೆಯ ಹದಿನಾಲ್ಕನೇ ಅಧ್ಯಾಯದಲ್ಲಿರುವ ಗುಣಾತೀತನ ಲಕ್ಷಣಗಳೂ ಒಂದೇ ಆದ್ದರಿಂದ ಭಕ್ತಿಯಿಂದ ಮನುಷ್ಯನು ಗುಣಾತೀತನಾದಂತಾಯಿತು. ಈ ಎಲ್ಲ ಲಕ್ಷಣಗಳ ಸಾರಸಂಗ್ರಹವನ್ನು ಮಾಡಿದರೆ ಸರ್ವಪ್ರಾಣಿಗಳಲ್ಲಿಯೂ ಭಗವದ್ಭಾವನೆ ಮತ್ತು ನಿರಭಿಮಾನ--ಎಂಬ ಎರಡು ದೊಡ್ಡ ಗುಣಗಳು ಎದ್ದು ಕಾಣುವವು. ಈ ಗುಣಗಳು ಕೃತಿಯಲ್ಲಿ ಹೇಗೆ ತೋರುವವೆಂಬದಕ್ಕೆ ದಿಗ್ದರ್ಶನಾರ್ಥವಾಗಿ ಇಲ್ಲಿ ಎರಡು ಕಥೆಗಳನ್ನು ಹೇಳುವೆವು ಮೊದಲನೇದು ಸರ್ವಪ್ರಾಣಿಗಳಲ್ಲಿಯೂ ಭಗವದ್ಭಾವನೆಯ ವಿಚಾರ. ಒಂದು ಕಥೆಯಲ್ಲಿ ಒಬ ಯಜಮಾನನು ಏನೋ ಒಂದು ತಪ್ಪಿಗಾಗಿ ತನ್ನ ಆಳನ್ನು ದಂಡಿಸು

ತ್ತಿದ್ದನು. ಆ ದಾರಿಯಲ್ಲಿಬಂದ ಸಾಧುವಿಗೆ ಆ ಆಳಿನಮೇಲೆ ಕನಿಕರವುಂಟಾಯಿತು. ಆಗ ಆ ಸಾಧು ಆ ಆಳನ್ನು ಬಿಡಿಸುವದಕ್ಕೆಂದು ನಡುವೆ ನುಗ್ಗಿದನು. ಅದನ್ನು ಸಹಿಸಲಾರದೆ ಯಜಮಾನನು ಆ ಸಾಧುವನ್ನು ಚೆನ್ನಾಗಿ ಹಣ್ಣಾಗುವಂತೆ ಬಡಿದನು ಸಾಧುವಿಗೆ ಎಚ್ಚರವು ತಪ್ಪಿತು. ಈ ಸುದ್ದಿಯನ್ನು ಕೇಳಿ ಅವನ ಶಿಷ್ಯರು ಬಂದು ಅವನಿಗೆ ಶೈತ್ಯೋಪಚಾರವನ್ನು ಮಾಡಿ ಸ್ವಲ್ಪ ಹಾಲನ್ನು ಕುಡಿಸಿದರು. ಆಗ ಸಾಧು ಸ್ವಲ್ಪ ಕಣ್ಣು ಬಿಟ್ಟನು. ಸರಿಯಾದ ಜ್ಞಾನವು ಬಂದಿದೆಯೋ ಇಲ್ಲವೋ ನೋಡಬೇಕೆಂದು ಒಬ್ಬ ಶಿಷ್ಯನು ಗುರುವನ್ನು ಕುರಿತು ಈಗ ಹಾಲನ್ನು ಕುಡಿಸಿದವರು ಯಾರೆಂದು ಕೇಳಿದನು. ಆಗ ಆ ಸಾಧು ತನ್ನನ್ನು ಹೊಡೆದ ಯಜಮಾನನೇ ಹಾಲು ಕುಡಿಸಿದನೆಂದು ಹೇಳಿದನು. ಎಲ್ಲರ ಹೃದಯದಲ್ಲಿಯೂ ಒಬ್ಬನೇ ದೇವರಿರುವ ಭಾವನೆಯು ಆ ಸಾಧುವಿನ ಹೃದಯದಲ್ಲಿ ಅಷ್ಟು ಬಲವಾಗಿತ್ತು. ಇಂಥ ಜ್ಞಾನದ ವಿಷಯದಲ್ಲಿ ಶ್ರೀಜಗನ್ನಾಥದಾಸರು ಹೇಳಿರುವದೇನೆಂದರೆ—

ಒಬ್ಬನಲಿ ನಿಂದಾಡುವನು ಮ ।
ತ್ತೊಬ್ಬನಲಿ ನೋಡುವನು ಬೇಡುವ ।
ನೊಬ್ಬನಲಿ ನೀಡುವನು ಮಾತಾಡುವನು ಬೆರಗಾಗಿ ॥
ಅಬ್ಬರದ ಹೆದ್ದೈವನಿವ ಮ ।
ತ್ತೊಬ್ಬರನು ಲೆಕ್ಕಿಸನು ಲೋಕದೊ ।
ಳೊಬ್ಬನೇ ತಾಂ ಬಾಧ್ಯಬಾಧಕನಾಗಿ ನಿರ್ಭೀತ ॥

ನಿರಭಿಮಾನದ ವಿಚಾರಕ್ಕೆ ಒಂದು ಸಣ್ಣ ಕಥೆ ಸಾಕಾಗಿದೆ. ಒಬ್ಬ ಭಕ್ತನ ಭಕ್ತಿಗೆ ಮೆಚ್ಚಿ ದೇವರು ತಾನಾಗಿ ಆ ಭಕ್ತಿಗೇನನ್ನಾದರೂ ಕೊಟ್ಟೇ ಬರಬೇಕೆಂದು ಇಳಿದು ಬಂದು ತಾನು ಬಂದಿರುವ ವೃತ್ತಾಂತವನ್ನು ತಿಳಿಸಿದನು. ಆ ಭಕ್ತನು ಅವನಿಗೆ ನಮಸ್ಕರಿಸಿಬಿಟ್ಟು ಸುಮ್ಮನಾದನು. ಏನಾದರೂ ವರವನ್ನು ಕೇಳೆಂದು ದೇವರು ಹೇಳಿದನು. ತನಗೇನೇನೂ ಬೇಡವೆಂದು ಭಕ್ತನಿಂದ ಉತ್ತರವು ಬಂತು. ಕೊನೆಗೆ ತನ್ನದೊಂದು ವರವನ್ನು ತೆಗೆದುಕೊಂಡೇ ಬಿಡಬೇಕೆಂದು ದೇವರು ನಿರ್ಬಂಧಿಸಿದನು. ಹಾಗಾದರೆ ನನ್ನಿಂದ ಜಗತ್ತಿಗೆ ಏನು ಹಿತವಾಗುವದೆಂಬ ಅರಿವು ನನಗಾ

ಆ ಅಭಿಮಾನದಿಂದ ನಿನ್ನ ವಿಸ್ಮರಣೆಯಾಗದಂತೆ ನನ್ನ ಹಿಂದುಗಡೆಯ ನೆರಳೊಳಕ್ಕೆ ಬಂದವರಿಗೆಲ್ಲಾ ಆರೋಗ್ಯವಾಗಲೆಂದು ಭಕ್ತನು ಕೇಳಿಕೊಂಡನು. ಹೀಗೆ ಭಕ್ತರಲ್ಲಿ ನಿರಭಿಮಾನತ್ವವೂ ಮುಖ್ಯಲಕ್ಷಣವಾಗಿರುವದು.

## ಭಕ್ತರ ಹೆಚ್ಚುಗಾರಿಕೆ

ಭಕ್ತರ ಹೆಚ್ಚುಗಾರಿಕೆಯ ವಿಷಯಕ್ಕೆ ಮಹಾಕವಿ ಲಕ್ಷ್ಮೀಶನು ತನ್ನ ಜೈಮಿನಿಕಾವ್ಯದಲ್ಲಿ ಚಂದ್ರಹಾಸನ ಕಥೆಯಲ್ಲಿ ಕೃಷ್ಣನಿಂದ ಅರ್ಜುನನಿಗೆ ಹೇಳಿಸಿರುವ ಒಂದು ಮಾತು ಸಾಕಾಗಿದೆ. ಅದೇನೆಂದರೆ—

ತನ್ನ ಶರಣರ ಜೀವನವೆ ತನಗೆ ಜೀವನಂ ।
ತನ್ನ ಶರಣರ್ಗೀರೆ ತಿಳಿಯೆ ತಾಂ ಬೇರಲ್ಲ ।
ತನ್ನ ಶರಣರ ಹೃದಯಕಮಲದೊಳ್ ಪ್ರತ್ಯಕ್ಷವಾಗಿ ಕಾಸಿರುತಿಪೆನು ॥

ಈ ಅಭಿಪ್ರಾಯವು ಬರೀ ತುದಿನಾಲಿಗೆಯ ಉಪಚಾರದ ಮಾತಲ್ಲ; ಕೃತಿಯಲ್ಲಿ ಕೂಡ ನೋಡಿರಿ. ಅಂಬರೀಷಮಹಾರಾಜನು ಒಮ್ಮೆ ಒಂದು ವರ್ಷ ನಡೆಸತಕ್ಕ ದ್ವಾದಶೀವ್ರತವನ್ನು ಸಾಧಿಸಿದನು. ಆ ವ್ರತವು ಪೂರ್ತಿಯಾಗುವಾಗ ಮೂರು ದಿನ ಉಪವಾಸವಿದ್ದು ನಾಲ್ಕನೆಯ ದಿನ ಬ್ರಾಹ್ಮಣಭೋಜನಾದಿಗಳನ್ನು ಮಾಡಿಸಿ ತಾನು ಪಾರಣೆಗೆ ಸಿದ್ಧನಾದಾಗ ದೂರ್ವಾಸರು ಬಂದರು. ರಾಜನು ಅವರನ್ನು ಸತ್ಕರಿಸಿ ಅವರಿಗೆ ಆಮಂತ್ರಣವನ್ನು ಕೊಟ್ಟನು. ಅದನ್ನು ಸ್ವೀಕರಿಸಿ ಅವರು ಸ್ನಾನಕ್ಕೆ ನದಿಗೆ ಹೋದರು. ಆಗ ದ್ವಾದಶೀತಿಥಿಯು ಅರ್ಧಘಳಿಗೆ ಮಾತ್ರವೇ ಉಳಿದಿತ್ತು. ಅತ್ತ ದೂರ್ವಾಸರು ತಡವನ್ನು ಮಾಡಿದರು. ಆಗ ಅಂಬರೀಷನು ವ್ರತಸಮಾಪ್ತಿಗಾಗಿ ಕೇವಲ ಜಲಪಾನದಿಂದಾದರೂ ಸಕಾಲಕ್ಕೆ ಪಾರಣೆಯನ್ನು ನಡೆಸಬೇಕೆಂದು ಅದರಂತೆ ಮಾಡಿದನು. ಇದನ್ನು ದಿವ್ಯಜ್ಞಾನದಿಂದ ತಿಳಿದ ದೂರ್ವಾಸರು ಕೋಪಾವಿಷ್ಟರಾಗಿ ಬಂದು ಜಡೆಯನ್ನು ಅಪ್ಪಳಿಸಿದರು. ಒಡನೆ ಒಂದು ಶಕ್ತಿಯುತ್ಪನ್ನವಾಗಿ ಭಯಂಕರವಾಗಿ ಮುಂದೆ ಬಂತು. ಅಂಬರೀಷನು ಸುಮ್ಮನೆ ಹರಿಸ್ಮರಣೆಯನ್ನು ಮಾಡುತ್ತ ನಿಶ್ಚಲನಾಗಿದ್ದನು. ಆಗ ಹರಿಯು, ತನ್ನ ಭಕ್ತನು ತನ್ನಿಂದ ಬೇರೆಯಲ್ಲ ಎಂಬ ಭಾವನೆಯಿಂದ, ತನ್ನ ಚಕ್ರವನ್ನು ಬಿಟ್ಟನು. ಕೊನೆಗೆ ಆ ಚಕ್ರದ

ಉಪಸಂಹಾರವು ಶ್ರೀಹರಿಯಿಂದ ಕೂಡ ಆಗದೆ ದೂರ್ವಾಸನು ಅಂಬರೀಷನ ಕ್ಷಮೆಯನ್ನು ಕೇಳಿಕೊಂಡ ಮೇಲೆ ಅಂಬರೀಷನ ಅನುಗ್ರಹದಿಂದ ಆಯಿತು. ಭಕ್ತರಿಗೆ ಯಾರದೇನು ಭಂಗ! ಅಂಬರೀಷನಿಗೆ ಪರಮಾತ್ಮನ ನೆರವಿರುವಾಗ ದೂರ್ವಾಸರ ಶಕ್ತಿ ಏನು ಮಾಡೀತು? ಇಂಥ ಸಂದರ್ಭಕ್ಕೊಪ್ಪುವಂತೆ ಶ್ರೀಪುರಂದರದಾಸರೂ ಹಾಡಿರುವದೇನೆಂದರೆ–

ರಾಗ–ಆನಂದಭೈರವಿ. ಅಟತಾಳ.

ಯಾರು ಒಲಿದರೇನು । ನಮಗೇನು । ಯಾರು ಮುನಿದರೇನು ॥ಪ॥
ಕ್ಷೀರಸಾಗರಶಾಯಿಯಾದವನ । ಸೇರಿದಂಥ ಹರಿದಾಸರಿಗೆ ॥ಅ. ಪ.॥

ಊರನಾಳುವ ದೊರೆಗಳು ನಮ್ಮನು । ದೂರ ಅಟ್ಟಿದರೇನು ।
ಘೋರಾರಣ್ಯದಿ ತಿರುಗುವ ಮೃಗಗಳು । ಅಡ್ಡಗಟ್ಟಿದರೇನು ॥
ಮಾರಿಯು ಬಂದು ಮುಸುಕಿನ ದಂಡು । ಮೈಗೆ ಮುತ್ತಿದರೇನು ।
ವಾರಿಜನಾಭನ ವಸುದೇವಸುತನ । ಸೇರಿದಂಥ ಹರಿದಾಸರಿಗೆ ॥೧॥

ಪಡೆದ ತಾಯಿಯೂ ತಂದೆಯೂ ನಮ್ಮೊಳು ಅಹಿತವ ಮಾಡಿದರೇನು ।
ಮಡದಿಮಕ್ಕಳೂ ಮನೆಯ ಸಂಪದವೂ ಮುನಿಸುಗಟ್ಟಿದರೇನು ॥
ಒಡನಾಡುವ ಗೆಳೆಯರು ತಾವು ನಮ್ಮೊಳು ವೈರವ ಬೆಳೆಸಿದರೇನು ।
ಕಡಲಶಯನಕರುಣಾನಿಧಿನಮ್ಮ ಒಡೆಯನಾಗಿಹ ಹರಿದಾಸರಿಗೆ ॥೨॥

ಕಾನನದೊಳು ಹರಿದಾಡುವ ಸರ್ಪವು ಕಾಲಿಗೆ ಸುತ್ತಿದರೇನು ।
ಜೇನಿನಂದದಿ ಕೀಟಕ್ರಿಮಿಗಳು ಚರ್ಮಕೆ ಮುತ್ತಿದರೇನು ॥
ಭಾನುನಂದನಬುಧಮಂಗಳರ ಒಲವು ತಪ್ಪಿದರೇನು ।
ದೀನನಾಥ ಶ್ರೀಪುರಂದರ ವಿಠಲನ ಧ್ಯಾನವುಳ್ಳ ಹರಿದಾಸರಿಗೆ ॥೩॥

ಹೀಗೆ ದೇವರು ಭಕ್ತರನ್ನು ತನ್ನ ಸಮನೆಂದು ಭಾವಿಸುವದೊಂದು ಕಡೆ ಇರಲಿ. ಎಷ್ಟೋ ಸಂದರ್ಭಗಳಲ್ಲಿ ಭಕ್ತರಿಗಿಂತ ತಾನು ಕಡಿಮೆಯವನೆನಿಸಿಕೊಂಡ ಉದಾಹರಣೆಗಳೂ ದೊರೆಯುತ್ತವೆ. ಭಾರತಯುದ್ಧದಲ್ಲಿ ಶಸ್ತ್ರವನ್ನು ಹಿಡಿಯುವದಿಲ್ಲವೆಂದು ಶ್ರೀಕೃಷ್ಣನು ಪ್ರತಿಜ್ಞೆಮಾಡಿದ್ದನು. ಹೀಗಿರುವಾಗ ಒಮ್ಮೆ ಭೀಷ್ಮನು ಅರ್ಜುನನನ್ನು ತುಂಬ ವಿಹ್ವಲನಾಗುವಂತೆ

ಹೊಡೆದನು. ಇದನ್ನು ನೋಡಿ ತಡೆಯಲಾರದೆ ಶ್ರೀಕೃಷ್ಣನು ಕೋಪದಿಂದ ರಥದ ಗಾಲಿಯನ್ನು ಹಿಡಿದು ಭೀಷ್ಮನನ್ನು ಹೊಡೆಯುವದಕ್ಕೆ ಬಂದಿದ್ದನೆಂದು ಕಥೆ ಇದೆ. ಭೀಷ್ಮನು ಮರಣದ ಕಾಲದಲ್ಲಿ ಮಾಡಿರುವ ಸ್ತೋತ್ರದಲ್ಲಿ ಈ ಅರ್ಥವು ಗರ್ಭಿತವಾಗಿದೆ.

“ಸ್ವನಿಗಮಮಪಹಾಯ ಮತ್ಪ್ರತಿಜ್ಞಾಂ ।
ಋತಮಧಿಕರ್ತುಮವಪ್ಲುತೋ ರಥಸ್ಥಃ ॥
ಧೃತರಥಚರಣೋಽಭ್ಯಯಾಚ್ಚಲದ್ಗುಃ ॥
ಹರಿರಿವ ಹಂತುಮಿಭಂ ಗತೋತ್ತರೀಯಃ ॥
ಶಿತವಿಶಿಖಹತೋ ವಿಶೀರ್ಣದಂಶಃ ।
ಕ್ಷತಜಪರಿಪ್ಲುತ ಆತತಾಯಿನೋ ಮೇ ॥
ಪ್ರಸಭಮಭಿಸಸಾರ ಮದ್ವಧಾರ್ಥಂ ।
ಸ ಭವತು ಮೇ ಭಗವಾನ್ ಗತಿರ್ಮುಕುಂದಃ ॥”

ಅರ್ಥ— “ತಾನು ಮಾತಿಗೆ ತಪ್ಪಿದರೂ ತನಗೆ ಭಕ್ತನಾದ ನನ್ನ ಪ್ರತಿಜ್ಞೆಯನ್ನು ಕೆಡಿಸಬಾರದೆಂಬ ವಾತ್ಸಲ್ಯದಿಂದ ತನ್ನ ಚಕ್ರಾಯುಧವನ್ನು ಕೈಗೆತ್ತಿಕೊಂಡು ರಥದಿಂದಿಳಿದು, ಮೈಮೇಲಿನ ಒಟ್ಟೆಯು ಜಾರಿದುದನ್ನೂ ತಿಳಿಯದೆ ಹರಿದ ಕವಚದಿಂದಲೂ ರಕ್ತದಿಂದ ತೊಯ್ದ ಮೈಯಿಂದಲೂ ಕೂಡಿದವನಾಗಿ ಆನೆಯ ಮೇಲೆ ಬೀಳುವ ಸಿಂಹದಂತೆ ನನ್ನನ್ನು ಕೊಲ್ಲಬೇಕೆಂಬ ಆತುರದಿಂದ ಯಾವನು ಮುಂದೆ ಬಂದನೋ ಆ ಕೃಷ್ಣನು ನನಗೆ ಗತಿಯಾಗಲಿ!”

ಈ ಪ್ರಸಂಗದಲ್ಲಿ ಯಾರನ್ನು ಮೇಲೆನ್ನಬೇಕೋ ಕಠಿನವಾಗಿದೆ. ಶ್ರೀಕೃಷ್ಣನು ತನ್ನ ಪ್ರತಿಜ್ಞೆಯನ್ನು ಮುರಿದು ಚಕ್ರವನ್ನು ಹಿಡಿದದ್ದರಿಂದ ಹಾಗೆ ಚಕ್ರವನ್ನು ಹಿಡಿಸಿ ಪ್ರತಿಜ್ಞೆಯನ್ನು ಪೂರ್ಣಮಾಡಿಕೊಂಡ ಭೀಷ್ಮನನ್ನು ಮೇಲೆನ್ನಬೇಕೋ? ಆ ಭೀಷ್ಮನು ತನ್ನನ್ನು ಕೊಲ್ಲುವದಕ್ಕೆ ಬಂದ ಕೃಷ್ಣನೇ ತನಗೆ ಗತಿಯೆಂಬುದರಿಂದ ಕೃಷ್ಣನನ್ನು ಮೇಲೆನ್ನಬೇಕೋ? ‘ಸ್ನೇಯು ಪರಾಕಾಷ್ಠೆಗೆ ಹೋಯಿತೆಂದರೆ ಭಗವಂತನ ಮತ್ತು ಭಗ[illegible]ರ ಭೇದವನ್ನು ತಿಳಿಯುವದೇ ಆಗಲಾರದೆಂದು ತೋರುತ್ತದೆ.

ಹೀಗೆ ದೇವರು ಭಕ್ತರನ್ನು ಮೇಲು ಮಾಡಿರುವದು ಒಂದೆರಡೆಡೆಯಲ್ಲಿ ಮಾತ್ರವೇ ಅಲ್ಲ; ಎಷ್ಟೋ ಉದಾಹರಣೆಗಳು ಸಿಕ್ಕುತ್ತವೆ. ನಮ್ಮ ಭಕ್ತಿಗೀತಾವಳಿಯ ಒಂದು ಹಾಡನ್ನು ನೋಡಿರಿ—

ರಾಗ— ಕಮಾಚು. ರೂಪಕ.

ಏನಿದು ಭಕ್ತಪರಾಧೀನತೆ ದೇವ ॥ ಪ ॥
ಮೂರುಲೋಕದೊಡೆಯನಾಗಿ । ಧಾರಿಣಿಯೊಳಿರುವ ನಿನಗೆ ॥ ಅ. ಪ. ॥

ಧರೆಯೊಳಗೆ ಕಬೀರಗಾಗಿ । ಪರಿಪರಿಮಾಡ ॥
ವರವಸ್ತ್ರವನ್ನು ನೆಯ್ದು । ಪರಮಪುರುಷ ಶ್ರೀರಮೇಶ ॥೧॥

ಹರುಷದಿ ಧರ್ಮಜಯಜ್ಞ | ಗಣನ ಬಳಿಯೊಳ್ ॥
ಪರಿಚರ್ಯೆಯನ್ನು ಗೆಯ್ದು ಗರುಡಧ್ವಜ ಸರಸಿಜಾಕ್ಷ ॥೨॥

ಜನಿ ಎನುತ್ತ ಹೆಸರ ಪಡೆದ । ದಾಸಿಗೆ ತಾನು ॥
ಅನುದಿನ ವಸ್ತ್ರಗಳನೊಗೆದ । ಪಂಕಜಾಯತದೀರ್ಘನಯನ ॥೩॥

ನೆರೆ ಸಜ್ಜನನೆಂಬ ಕಟುಕ । ನಂಗಡಿಯಲ್ಲಿ ॥
ಭರದಿಂ ಮಾಂಸವ ಮಾರಿದ । ಕರದಿಂದು ಸುಮಂದಹಾಸ ॥೪॥

ಆದರದಿಂದೇಕನಾಥ । ಸಾಧುಗೃಹದೊಳು ॥
ಭೇದವಿಲ್ಲದೆ ನೀರ ಹೊತ್ತ । ಮಾಧವ ಮಧುರಿಪು ಜನ್ಮಯ ॥ ೫ ॥

ಭಕ್ತಪರವಶತೆಯ ಪರಾಕಾಷ್ಠತೆಗೆ ಇನ್ನೊಂದುದಾಹರಣೆಯನ್ನು ಹೇಳಬಹುದು. ಒಮ್ಮೆ ನಾರದರು ಶ್ರೀಕೃಷ್ಣನ ಮನೆಗೆ ಬಂದರು. ಶ್ರೀಕೃಷ್ಣನು ದೇವತಾರ್ಚನೆಯನ್ನು ಮಾಡುತ್ತಿರುವನೆಂದು ತಿಳಿಯಿತು. ಶ್ರೀಕೃಷ್ಣನಿಂದ ಪೂಜೆಯನ್ನು ಪಡೆಯುವ ದೇವರು ಯಾರೆಂದು ನಾರದರ ಮನಸ್ಸಿನಲ್ಲಿ ವಿಚಾರವು ಹುಟ್ಟಿತು. ಒಡನೆ ಅವರು ಸ್ನಾನವನ್ನು ಮಾಡಿ ಮಡಿಯನ್ನುಟ್ಟು ಒಳಕ್ಕೆ ಹೋದರು. ರತ್ನಖಚಿತವಾದ ಪೀಠದ ಮೇಲೆ ಮಹಾವೈಭವದಿಂದ ಕೂಡಿದ ಪೂಜೆಗೆ ವಿಷಯವಾಗಿ ಒಂದು ಸಂಪುಷ್ಟವು ಮಾತ್ರ ಇತ್ತು. ಅದರಲ್ಲಿರುವ ದೇವರು ಯಾರೆಂದು ನಾರದರು ಕೇ

ದರು. ಆಗ ಶ್ರೀಕೃಷ್ಣನು ಅದರ ಬಾಯನ್ನು ತೆಗೆದು 'ಇಗೋ ನಿಮ್ಮಂಥ ಭಗವದ್ಭಕ್ತರ ಪಾದಧೂಳಿಯೇ ನನ್ನ ದೇವರು." ಎಂದು ತೋರಿಸಿದ ನೆಂದು ಕಥೆಯಿದೆ. ಭಕ್ತರ ಹೆಚ್ಚುಗಾರಿಕೆಗೆ ಇದಕ್ಕಿಂತ ಇನ್ನೇನು ಬೇಕು? ಸ್ವಭಾವವಾಗಿ ಇಂದ್ರಿಯಗಳೆಲ್ಲಾ ಬಹಿರ್ಮುಖವಾಗಿರುವಾಗ ಅವುಗಳನ್ನು ಅಂತರ್ಮುಖವಾಗಿ ಮಾಡಿ ಜಯಶೀಲರಾದದ್ದಕ್ಕೆ ಈ ಹೆಚ್ಚುಗಾರಿಕೆಯು ಒಪ್ಪತಕ್ಕದ್ದೆ.

## ಭಕ್ತರ ಪವಿತ್ರತೆ.

ಭಗವಾನ್ ನಾರದರ ಸೂತ್ರದಿಂದ ಭಕ್ತರ ಪವಿತ್ರತೆಯನ್ನು ತಿಳಿಯಬೇಕಾದರೆ—

"ತೀರ್ಥೀಕುರ್ವನ್ತಿ ತೀರ್ಥಾನಿ ಸುಕರ್ಮೀಕುರ್ವನ್ತಿ ಕರ್ಮಾಣಿ ಸಚ್ಛಾಸ್ತ್ರೀಕುರ್ವನ್ತಿ ಶಾಸ್ತ್ರಾಣಿ"

ಎಂಬ ಸೂತ್ರವನ್ನು ನೋಡಬೇಕು. ಇವರು ತೀರ್ಥಗಳನ್ನು ಒಳ್ಳೆಯ ತೀರ್ಥಗಳನ್ನಾಗಿಯೂ ಕರ್ಮಗಳನ್ನು ಉತ್ತಮ ಕರ್ಮಗಳನ್ನಾಗಿಯೂ ಶಾಸ್ತ್ರಗಳನ್ನು ಒಳ್ಳೆಯ ಶಾಸ್ತ್ರಗಳನ್ನಾಗಿಯೂ ಮಾಡುವರೆಂದರ್ಥ. ಈ ಅಭಿಪ್ರಾಯಕ್ಕೆ ಶ್ರೀಪುರಂದರದಾಸರು ಹೇಳಿರುವುದೇನೆಂದರೆ—

ಯದುಕುಲಕಾಂಬೋಧಿ — ಝಂಪೆತಾಳ

ಹರಿಭಕುತಿ ಉಳ್ಳವರ ಶರೀರವೆ ಕುರುಕ್ಷೇತ್ರ । ಅವರ ।
ನರರೆಂದು ಬಗೆವರೇ ನರಕವಾಸಿಗಳು ॥ಪ॥

ಸದಮಲನ ನೆನೆಯುವ ಹೃದಯ ಕಾಶೀಪುರವು ।
ಮಧುರಿಪುವ ನೆನೆವ ಮನ ಮಣಿಕರ್ಣಿಕೆ ॥
ಪದುಮನಾಭನ ಪೊಗಳ್ವ ವದನವೇ ವೈಕುಂಠ ।
ಸದಮಲನ ಒಲ್ಲಿಸುವ ಜಿಹ್ವೆ ಶ್ರೀರಂಗ ॥೧॥

ನರಹರಿಯನೀಕ್ಷಿಸುವ ನಯನ ದ್ವಾರಾವತಿಯು ।
ಸಿರಿಧರಗೆ ಶರಣೆಂಬ ಶಿರವೆ ಬದರಿ ॥

ಮುರಹರನ ಕಥೆಯ ಕೇಳುವ ಕಿವಿಯು ಕೇದಾರ ।
ಹರಿಪಾದರಜವ ಘ್ರಾಣಿಪ ಮೂಗು ಮಧುರೆ ॥೨॥

ಲಕ್ಷ ಪ್ರದಕ್ಷಿಣೆಯು ಚರಣ ವ್ಯಾಯಾವತಿಯು ।
ಲಕ್ಷ್ಮೀಪತಿಯ ಪೂಜಿಸುವ ಕರವೆ ಕಂಚಿ ॥
ಪಕ್ಷಿವಾಹನಪುರಂದರವಿಠಲಭಕುತಿಯೋ ।
ಲಕ್ಷ್ಯವಿಟ್ಟರಿಯು ಅದು ನಿಜವಾದ ಮುಕುತಿ ॥೩॥

ವೀರಶೈವಮತಶಾಸ್ತ್ರಕಾರರು ಈ ಅಭಿಪ್ರಾಯವನ್ನು ಅನುಮೋದಿಸಿ ಹೇಳಿರುವದೇನೆಂದರೆ—

(೧) ಭಕ್ತರ ಮನೆಯು ಅಂಗಣವಾರಣಾಸಿ ಎಂಬುದು ಹುಸಿಯೋ? ಭಕ್ತರ ಮನೆಯ ಅಂಗಣದಲ್ಲಿ ಅಷ್ಟಷಷ್ಟಿತೀರ್ಥಗಳು ನೆಲಸಿಪ್ಪವಾಗಿ. ಸುತ್ತಿದಡೆ ಶ್ರೀಶೈಲ. ಕೆಲಬಲದಲ್ಲಿ ಕೇದಾರ. ಅಲ್ಲಿಂದ ಹೊರಗೆ ಶ್ರೀವಾರಣಾಸಿ. ವಿರಕ್ತಿ ಬೀಡಾಗಿ, ಭಕ್ತಿ ವೊಳೆಯಾಗಿ, ಎನ್ನದೇವ ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಭಕ್ತರ ಮನೆಯು ಅಂಗಣ ವಾರಣಾಸಿಗಿಂದಧಿಕ.

(೨) ಅಡಿಗಡಿಗೆ ಸ್ನಾನಸಿದ್ಧಿ. ಅಡಿಗಡಿಗೆ ದಿವ್ಯಕ್ಷೇತ್ರ. ಅಡಿಗಡಿಗೆ ನಿಧಿನಿಧಾನ ನೋಡಯ್ಯ. ಸುತ್ತಿ ಬರೆ ವಾರಣಾಸಿ. ಆತನಿರುವೇ ಅವಿಮುಕ್ತಕ್ಷೇತ್ರ, ಕೂಡಲಸಂಗನ ಶರಣ ಸ್ವತಂತ್ರನಾಗಿ.

ಹಿಂದೆ ಭಗವಂತನಾಗಲಿ ಭಗವದ್ಭಕ್ತರಾಗಲಿ ಬಳಸಿದ ತೀರ್ಥವನ್ನು ತೀರ್ಥವೆನ್ನುತ್ತಾರೆ. ಆ ತೀರ್ಥಕ್ಷೇತ್ರವು ಬಂದಮೇಲೆ ಬಹು ಕಾಲವು ಕಳೆದಿರುವದರಿಂದ ಅವರ ಪವಿತ್ರತೆಯಲ್ಲೇನಾದರೂ ಕೊರತೆಯಾಗಿದ್ದರೆ ಅದು ಈಗ ಭಗವದ್ಭಕ್ತರ ಬಳಕೆಯಿಂದ ಮತ್ತೆ ಉಜ್ಜೀವನಗೊಳ್ಳುವದಾದ್ದರಿಂದ ಭಗವದ್ಭಕ್ತರು ಪವಿತ್ರತೆಯ ಮಾತೃಭೂಮಿಯೆಂದು ಭಾವಿಸುವದಾಗಿರುವದು.

## ಮುಖ್ಯಭಕ್ತರು

"ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥"

ಎಂದು ಭಗವದ್ಗೀತೆಯಲ್ಲಿ ಹೇಳಿರುವಂತೆ ಭಕ್ತರಲ್ಲಿ ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ- ಎಂದು ನಾಲ್ಕು ಬಗೆಗಳಿವೆ. ಯಾವದಾದರೊಂದು ದುಃಖದ ಪರಿಹಾರಕ್ಕಾಗಿ ಶರಣುಬರುವವನು ಆರ್ತನು;ಮನಸ್ಸಿನ ಕುತೂಹಲವನ್ನು ಕಳೆದುಕೊಳ್ಳುವದಕ್ಕಾಗಿ ತಿಳಿಯಲಿಚ್ಛಿಸುವವನು ಜಿಜ್ಞಾಸು; ಯಾವದಾದರೊಂದು ಇಷ್ಟಾರ್ಥವನ್ನು ಬಯಸುವವನು ಅರ್ಥಾರ್ಥಿ;ಪರಮಾತ್ಮಸ್ವರೂಪವನ್ನು ತಿಳಿದು ಭಜಿಸುವವನು ಜ್ಞಾನಿ. ಆದರೆ ಈ ನಾಲ್ವರಲ್ಲಿ ಯಾರು ಉತ್ತಮರೆಂಬ ಮಾತು ಬಂದಾಗ ಶ್ರೀಕೃಷ್ಣನು “ ಉದಾರಾಸ್ಸರ್ವ ಏವೈತೇ ” ಎಂಬ ಮಾತಿನಿಂದ ಎಲ್ಲರನ್ನೂ ಉದಾರರೆಂದು ಹೊಗಳಿದ್ದಾನೆ. ಏಕೆಂದರೆ ತನ್ನ ಇಷ್ಟಾರ್ಥವನ್ನು ತಾನೇ ಸ್ವಸಾಹಸದಿಂದ ಪಡೆಯುತ್ತೇನೆಂಬ ಭಾವನೆಯೇ ಸಾಮಾನ್ಯವಾಗಿ ಮನುಷ್ಯನ ಮನಸ್ಸಿನಲ್ಲಿ ಧುಮುಕುವದು. ಹೀಗಾಗುವ ಪಕ್ಷದಲ್ಲಿ ಅವರು ದೇವರ ನೆರವನ್ನು ಬಯಸುವ ಅಗತ್ಯವೇ ಉಳಿಯುವದಿಲ್ಲ; ಈ ಸ್ವಪ್ರತಿಷ್ಠೆಯ ವೇಗವನ್ನು ತಡೆದುಕೊಂಡು ಆ ಇಷ್ಟಸಿದ್ಧಿಯ ಕಾರಣದಿಂದಲಾದರೂ ಆರ್ತನೇ ಮೊದಲಾದವರು ದೇವರಿಗೆ ಶರಣುಹೋದದ್ದು ಉದಾರತೆಯೇ ಸರಿ. ತನ್ನ ದುರಭಿಮಾನವನ್ನು ಮುದುರಿಟ್ಟು ಮತ್ತೊಬ್ಬನ ಯೋಗ್ಯತಾವಿಶೇಷವನ್ನೊಪ್ಪಿಕೊಂಡು ನಡೆಯುವದು ಮನುಷ್ಯರ ಉದಾರತೆಯು. ಆದರೂ

“ ತೇಷಾಂ ಜ್ಞಾನೀ ನಿತ್ಯಯುಕ್ತಃ ಏಕಭಕ್ತಿರ್ವಿಶಿಷ್ಯತೇ ”

ಎಂಬ ವಾಕ್ಯದಿಂದ ಭಗವಂತನು ಅವರಲ್ಲೆಲ್ಲಾ ನಿತ್ಯಯುಕ್ತನಾದ ಜ್ಞಾನಿಯೇ ಹೆಚ್ಚಿನವನೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಏಕೆಂದರೆ ಆರ್ತ ಮೊದಲಾದ ಮೂವರಿಗೆ ಯಾವದಾದರೊಂದು ಬಗೆಯ ಪ್ರತಿಫಲದ ನಿರೀಕ್ಷಣೆ ಇರುತ್ತದೆ. ಆದ್ದರಿಂದ ಅದು ವ್ಯಾಪಾರಿಯ ಭಕ್ತಿ. ಜ್ಞಾನಿಯದು ಅದಲ್ಲ. ಅವನು ಪರಮಾತ್ಮಸ್ವರೂಪವನ್ನು ತಿಳಿದು ಅದಕ್ಕೆ ಕೇವಲ ಗುಣಲುಬ್ಧನಾಗಿ, ಶರಣುಹೋಗುತ್ತಾನೆ. ಆದ್ದರಿಂದ ಅವನು ಹೆಚ್ಚಿನವನು. ಪರಮಾತ್ಮಸ್ವರೂಪದ ಜ್ಞಾನವಿಲ್ಲದೆ ಮಾಡಿದ ಭಕ್ತಿಯು ನಿಶ್ಚಲವಾಗಿ ನಿಲ್ಲುವದಿಲ್ಲ. ಅದನ್ನು ಶಾಸ್ತ್ರಕಾರರು ಗೌಣಭಕ್ತಿಯೆನ್ನುತ್ತಾರೆ. ಪರಮಾತ್ಮಸ್ವರೂಪಜ್ಞಾನಪೂರ್ವಕವಾದ ಭಕ್ತಿಯು ಪರಭಕ್ತಿ. ಇದೇ

ನಿಜವಾದಭಕ್ತಿ. ಆದ್ದರಿಂದ ಭಕ್ತಿಯು ಪರಿಪೂರ್ಣತೆಯನ್ನು ಪಡೆಯ ಬೇಕಾದರೆ ಜ್ಞಾನವು ಅಗತ್ಯ. ಅದಕ್ಕೇನು ಮಾಡಬೇಕು?

" ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ ।
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥
ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥"

ಎಂದು ಗೀತೆಯಲ್ಲಿ ಹೇಳಿರುವಂತೆ ಪ್ರೀತಿಪೂರ್ವಕವಾಗಿ ಯಾವಾಗಲೂ ಗೌಣಭಕ್ತಿಯನ್ನು ಮಾಡುವವರಿಗೆ ದೇವರು ತನ್ನನ್ನು ಪಡೆಯುವದಕ್ಕೆ ತಕ್ಕ ಬುದ್ಧಿಯನ್ನು ಕೊಟ್ಟು ಅವರ ಮೇಲಿನ ಕನಿಕರದಿಂದ ತಾನೇ ಅವರ ಅಜ್ಞಾನವನ್ನು ಕಳೆದು ಅವರ ಹೃದಯದಲ್ಲಿ ತಾನೇ ಆವಿರ್ಭವಿಸಿ ಜ್ಞಾನದೀಪವಾಗಿ ಹೊಳೆಯುವನು. ಆ ಪರಮಾತ್ಮನ ಆವಿರ್ಭಾವಕ್ಕೆ ಸಾಧಕವಾದ ಜ್ಞಾನಯೋಗವನ್ನು ಮುಂದಿನ ಪ್ರಕರಣದಲ್ಲಿ ವಿವರಿಸಲಾಗುವದು.

---

# ಹತ್ತನೇ ಕಿರಣ

# ಜ್ಞಾನಯೋಗ.

## ಜ್ಞಾನಯೋಗದ ಹೆಚ್ಚುಗಾರಿಕೆ.

ಭಗವಂತನು ತನ್ನನ್ನು ಯಾವಾಗಲೂ ಭಜಿಸಿದವರಿಗೆ ಬುದ್ಧಿಯೋಗವನ್ನು ಕೊಟ್ಟು ಅವರನ್ನು ತನ್ನ ಬಳಿಗೆ ಬರಮಾಡಿಕೊಳ್ಳುವೆನೆಂದು ಹೇಳಿದ ವಿಚಾರವು ಭಕ್ತಿಯೋಗದ ಕೊನೆಯಲ್ಲಿ ಬಂದಿದೆಯಷ್ಟೆ. ಆ ಬುದ್ಧಿಯೋಗವೇ ಈ ಪ್ರಕರಣದ ವಿಷಯವಾಗಿರುವ ಜ್ಞಾನಯೋಗವು. ಭಕ್ತಿಯೋಗದಂಥ ಪವಿತ್ರವಾದ ಸಾಧನವಾದ ಮೇಲೆ ಕೂಡ ತನ್ನ ಪ್ರಾಶಸ್ತ್ಯವನ್ನು ಮೆರೆಸುವಂಥ ಯೋಗ್ಯತಾವಿಶೇಷವು ಜ್ಞಾನಯೋಗದಲ್ಲೇನಿರುವದೆಂದು ತಿಳಿಯಲಿಚ್ಛೆಯಾಗಬಹುದು. ಅದು ಈಗ ವ್ಯಕ್ತವಾಗುವದು. ಎಲ್ಲ ಯೋಗಗಳಲ್ಲಿಯೂ ಯೋಗ ಎಂಬ ಶಬ್ದವು ಸಾಧನವೆಂಬ ತಾತ್ಪರ್ಯದಲ್ಲಿ ಪ್ರಯೋಗವಾಗಿರುವದು. ಯುಜ್ ಎಂಬ ಧಾತುವಿನಿಂದ ಹುಟ್ಟಿದ ಈ ಯೋಗಶಬ್ದವು ಬೇರೆ ಬೇರೆ ಅನೇಕಾರ್ಥಗಳನ್ನು ಕೊಡುತ್ತದೆ. ಅಮರಕೋಶದಲ್ಲಿ ಇದಕ್ಕೆ ಸನ್ನಹನ, ಉಪಾಯ, ಧ್ಯಾನ, ಸಂಗತಿ ಮತ್ತು ಯುಕ್ತಿ– ಎಂಬ ಐದರ್ಥಗಳಿವೆ. ಇವುಗಳಲ್ಲಿ ಸನ್ನಹನವೆಂಬ ಅರ್ಥವನ್ನು ತೆಗೆದುಕೊಂಡರೆ ಸಾಧನವೆಂಬ ತಾತ್ಪರ್ಯವು ಹೊರಡುತ್ತದೆ. ಯೋಗಗಳೆಲ್ಲಾ ಆತ್ಮಜ್ಞಾನಕ್ಕೆ ಸಾಧನಗಳಾದ್ದರಿಂದ ಇವುಗಳಿಗೆ ಯೋಗಗಳೆಂಬ ಹೆಸರು ಒಪ್ಪುತ್ತದೆ. ಯೋಗಗಳು ಎಷ್ಟೋ ಇವೆ. ಈಗ ಇಲ್ಲಿ ಯೋಗಗಳು ಕರ್ಮಯೋಗ, ರಾಜಯೋಗ, ಭಕ್ತಿಯೋಗ, ಜ್ಞಾನಯೋಗ–ಎಂದು ನಾಲ್ಕು ಬಗೆಯಾಗಿ ಲೆಕ್ಕಕ್ಕೆ ಬಂದಿವೆ. 'ಆತ್ಮಜ್ಞಾನಕ್ಕೆ ಈ ನಾಲ್ಕು ಯೋಗಗಳೂ ಸ್ವತಂತ್ರವಾಗಿ ಬೇರೆ ಬೇರೆ ದಾರಿಗಳಾಗಿದ್ದು ಅವುಗಳಲ್ಲಿ ಜ್ಞಾನಯೋಗವು ಶ್ರೇಷ್ಠವೋ? ಅಥವಾ ಉಳಿದವುಗಳೆಲ್ಲ ತನಗೆ ನೆರವಾಗಿರತಕ್ಕವುಗಳಾದ್ದರಿಂದ ಜ್ಞಾನಯೋಗವು ಶ್ರೇಷ್ಠವೋ?' ಎಂಬುದು

ಈಗಿನ ಪ್ರಶ್ನೆ. ಈ ವಿಷಯವನ್ನು ಮನಗಾಣಿಸುವದಕ್ಕೆ ಮೊದಲು ಆತ್ಮಜ್ಞಾನಕ್ಕೆ ನಮಗೆ ಏನು ಅಡ್ಡಬಂದಿರುವದೆಂಬದನ್ನು ತಿಳಿಯುವದಗತ್ಯವಾಗುವದು. ಏಕೆಂದರೆ ನಮಗೆ ಅಡ್ಡಬಂದಿರುವದರ ಸ್ವಭಾವವು ಗೊತ್ತಾದರೆ ಅದನ್ನು ಪ್ರತಿಯೊಂದು ಯೋಗವೂ ಸ್ವತಂತ್ರವಾಗಿ ಕಳೆಯುಲಾಗಿತೋ ಅಥವಾ ಉಳಿದವುಗಳನ್ನು ನೆರವಾಗಿಟ್ಟುಕೊಂಡು ಮುಖ್ಯವಾಗಿ ಜ್ಞಾನಯೋಗವೇ ಕಳೆಯುವದೋ—ಎಂಬುದನ್ನು ನಿಶ್ಚಯಿಸಲಾದೀತು. ಇಲ್ಲಿ ಇನ್ನೊಂದು ವಿಷಯವೇನೆಂದರೆ ಆತ್ಮಜ್ಞಾನಕ್ಕೆ ನಮಗೆ ಏನು ಅಡ್ಡಿಬಂದಿರುವದೆಂಬದನ್ನು ವಿಚಾರಮಾಡುವದಕ್ಕೂ ಮುಂಚೆ ಆತ್ಮಜ್ಞಾನವೆಂದರೇನೆಂಬದನ್ನೂ ವಿಚಾರಮಾಡಬೇಕು. ಏಕೆಂದರೆ ಆತ್ಮ ಎಂಬ ಶಬ್ದಕ್ಕೂ ಬೇರೆ ಬೇರೆ ಅರ್ಥಗಳಿವೆ. ಆದ್ದರಿಂದ ಇನ್ನು ಒಂದೊಂದಾಗಿ ಈ ತೊಡಕುಗಳನ್ನು ಬಿಡಿಸೋಣ.

ಮೊದಲು ಆತ್ಮವೆಂದರೇನೆಂಬುದನ್ನು ವಿಚಾರಮಾಡೋಣ. ಆತ್ಮ ಎಂಬ ಶಬ್ದಕ್ಕೆ ನಿಘಂಟಿನಲ್ಲಿ ಬೇಕಾದಷ್ಟು ಅರ್ಥಗಳಿದ್ದರೂ ಇಲ್ಲಿ ನಮಗೆ ಸಂಶಯವು ಬರುವದು ಎರಡೇ ಅರ್ಥಗಳಲ್ಲಿ. ಜೀವಾತ್ಮನಿಗೂ ಆತ್ಮನೆಂದು ಹೆಸರಿದೆ; ಪರಮಾತ್ಮನಿಗೂ ಆತ್ಮನೆಂದು ಹೆಸರಿದೆ. ಈ ಎರಡರಲ್ಲಿ ನಾವು ಯಾವದನ್ನು ತೆಗೆದುಕೊಳ್ಳಬೇಕು? ನಮಗೆ ಶಾಂತಿಯು ಸಿಕ್ಕುವದು ಪರಮಾತ್ಮನ ಜ್ಞಾನದಿಂದಲೇ ಹೊರತು ಜೀವಾತ್ಮನ ಜ್ಞಾನದಿಂದಲ್ಲ. ಆದ್ದರಿಂದ ನಮ್ಮ ಮುಖ್ಯ ಧ್ಯೇಯವು ಪರಮಾತ್ಮನ ಜ್ಞಾನವೇ. ಆದರೆ ಆ ಪರಮಾತ್ಮನ ಜ್ಞಾನವನ್ನು ಮಾಡಿಕೊಳ್ಳುವದಕ್ಕೆ ಮೊದಲು ಜೀವಾತ್ಮನ ಜ್ಞಾನವೂ ಅಗತ್ಯವಿದೆ. ಏಕೆಂದರೆ 'ಅಟ್ಟಕ್ಕೆ ಹಾರದವನು ಬೆಟ್ಟಕ್ಕೆ ಹಾರ್‍ಯಾನೆ?', ಎಂಬಂತೆ ಯಾವನಿಗೆ ತನ್ನ ಸ್ವರೂಪದ ಜ್ಞಾನವೇ ಇಲ್ಲವೋ ಅವನಿಗೆ ಪರಮಾತ್ಮಜ್ಞಾನವಾಗುವದು ಹೇಗೆ? ಆದ್ದರಿಂದ ಪರಮಾತ್ಮಜ್ಞಾನಕ್ಕೆ ಸಾಧನವಾಗಿ ಜೀವಾತ್ಮಜ್ಞಾನವೂ ಬೇಕು. 'ನಾನು ನಾನೆಂದು ಎಲ್ಲರಿಗೂ ಜೀವಾತ್ಮನ ಅರಿವು ಇರುವದಲ್ಲ?', ಎಂದರೆ ನಿಜ; ಆ ಅರಿವಿಗೆ ವಿಷಯವಾದ ವಸ್ತು ಯಾವದು? ಬಹುಮಟ್ಟಿಗೆ ಎಲ್ಲರೂ ನಾನುನಾನೆಂಬ ಅರಿವಿಗೆ ದೇಹವನ್ನೇ ವಿಷಯವಾಗಿ ತಿಳಿದಿರುವರು. ಹೀಗೆ ದೇಹವೇ ನಾನೆಂಬ ಜ್ಞಾನವು ನಮಗೆ

ಪರಂಪರೆಯಿಂದ ಬಂದಿರುವದು. ನಾವು ಹುಟ್ಟಿದೊಡನೆ ನಮಗೆ ನಾನು ನಾನೆಂಬ ಮಾತಿಗೆ ದೇಹವನ್ನೇ ವಿಷಯವಾಗಿ ಮಾಡಿ ತಾಯಿ ಮೊದಲಾದವರು ಮಂಕುಬೂದಿಯನ್ನು ತಳಿಯುವರು. ಎಲ್ಲರ ವ್ಯವಹಾರವೂ ಹೀಗೆಯೇ ಇರುವದು. ಇದರಲ್ಲಿ ಅವರ ಉದ್ದೇಶವೇನೂ ಕೆಟ್ಟದ್ದಲ್ಲ. ಅವರ ತಿಳಿವಳಿಕೆಯೇ ಹಾಗಿರುವದು ಅವರು ವಿಚಾರವಿಲ್ಲದೆ ಹಾಗೆ ಹೇಳುತ್ತಿರುವರು. ಅದು ಹೇಗೆಂದರೆ ಎಷ್ಟೋ ವೇಳೆ ಅವರ ಮಾತುಗಳಲ್ಲಿ ಈ ಅಭಿಪ್ರಾಯಕ್ಕೆ ವಿರುದ್ಧವಾದ ಕಲ್ಪನೆಗಳು ಬರುತ್ತಿರುತ್ತವೆ. ಅವುಗಳನ್ನೆಲ್ಲ ಅವರು ತರ್ಕಕ್ಕೆ ಹಾಕಿ ನೋಡುವದೇ ಇಲ್ಲ. ಉದಾಹರಣೆಗೆ ನೋಡಿರಿ. ಒಮ್ಮೊಮ್ಮೆ ಜನರು "ಇದು ನನ್ನ ಹಿಂದಿನ ಜನ್ಮದ ಕರ್ಮಫಲ" ಎನ್ನುತ್ತಾರೆ. ಇದರಿಂದ ನಾವು ಹಿಂದಿನಜನ್ಮದಲ್ಲಿದ್ದೆವೆಂದು ಸ್ಪಷ್ಟವಾಗುವದಷ್ಟೇ. ನಾವು ಎಂಬ ಮಾತಿನ ಅರ್ಥಕ್ಕೆ ದೇಹವು ವಿಷಯವಾದರೆ ಆ ದೇಹವೇ ಹಿಂದಿನ ಜನ್ಮದಲ್ಲಿತ್ತೆಂದು ಹೇಳುವದಕ್ಕಾದೀತೇನು? ಒಂದು ದೇಹವು ಸತ್ತಾಗ ಅದನ್ನು ಸುಟ್ಟೋ ಹೂಳಿಯೋ ನಾಶಮಾಡಿಬಿಡುತ್ತಾರೆ. ಅದರ ಕಣಗಳೆಲ್ಲ ದಿಕ್ಕುದಿಕ್ಕಿಗೆ ಹಾರಿ ಹೋಗುತ್ತವೆ. ಅದೇ ದೇಹವೇ ಮತ್ತೆ ಹೇಗೆ ಹುಟ್ಟೀತು? ಒಂದು ಜನ್ಮದಲ್ಲಿಯೇ ಹನ್ನೆರಡು ವರ್ಷಗಳಲ್ಲಿ ಒಂದು ಶರೀರದ ಕಣಗಳೆಲ್ಲ ಬದಲಾಗುವವೆಂದು ಭೌತಿಕಶಾಸ್ತ್ರಜ್ಞರು ಹೇಳುತ್ತಾರೆ. ಅವರ ಅಭಿಪ್ರಾಯವನ್ನು ಹಿಡಿದುಕೊಂಡರೆ ಇವತ್ತಿನ ನಾನು ಹನ್ನೆರಡು ವರುಷಗಳ ಹಿಂದೆ ಇದೇ ದೇಹದಲ್ಲಿದ್ದರೂ ನಾನುನಾನೆಂಬ ಮಾತಿನ ಅರ್ಥಕ್ಕೆ ನನ್ನ ದೇಹವನ್ನು ವಿಷಯವಾಗಿ ಮಾಡುವದಕ್ಕೆ ಬರುವದಿಲ್ಲ. ಏಕೆಂದರೆ ಇವತ್ತು ನನ್ನ ದೇಹದಲ್ಲಿರುವ ಕಣಗಳೇ ಬೇರೆ; ಹನ್ನೆರಡು ವರ್ಷಗಳ ಹಿಂದೆ ನನ್ನ ದೇಹದಲ್ಲಿದ್ದ ಕಣಗಳೇ ಬೇರೆ. ಎಂದರೆ ಇವತ್ತಿನ ದೇಹವೇ ಬೇರೆ: ಹನ್ನೆರಡು ವರುಷಗಳ ಹಿಂದಿನ ದೇಹವೇ ಬೇರೆ. ಇವೆರಡೂ ಒಂದೇ ಹೇಗೆ ಆದಾವು? ಆದರೆ ಹನ್ನೆರಡು ವರ್ಷಗಳ ಹಿಂದಿದ್ದ ನಾನೇ ಇಂದು ಇರುವೆನೆಂಬ ನನ್ನ ಅನುಭವವನ್ನು ಕಳೆಯುವದಕ್ಕೆ ಮಾತ್ರ ರಿಗೂ ಶಕ್ಯವಿಲ್ಲ. ಅದ್ದರಿಂದ ನಾನು ಎಂಬ ವಸ್ತು ದೇಹಕ್ಕಿಂತ ಾಗಿರಲೇ ಬೇಕು. ದೇಹಕ್ಕಿಂತ ಭಿನ್ನವಾದಂಥ ಆ ಜೀವಸ್ವ

ಸ್ವರೂಪವೆಂಥದ್ದೋ ಅದರ ವಿಚಾರವೂ ಕೂಡ ಈಗ ಬೇಕಾಗಿಲ್ಲ. ಜೀವ ಸ್ವರೂಪವು ದೇಹಕ್ಕಿಂತ ಭಿನ್ನವೇ ಇಷ್ಟು ತಿಳುವಳಿಕೆ ಸಾಕು. ಜೀವಸ್ವರೂಪದ ಜ್ಞಾನವೂ ನಮಗೆ ಎಷ್ಟೋ ಸಹಾಯಕವಾಗುವದೂ ನಿಜ; ಆದರೆ ಅದನ್ನು ತಿಳಿಯುವದಕ್ಕಿಂತ ಮೊದಲು ನಶ್ವರವಾದ ದೇಹವನ್ನೇ ನಾನೆಂಬ ತಪ್ಪು ತಿಳುವಳಿಕೆಯನ್ನು ಕಳೆದುಕೊಳ್ಳುವದಗತ್ಯ. ಒಳ್ಳೆಯದನ್ನು ಹಿಡಿಯುವದಕ್ಕಿಂತ ಮೊದಲು ಕೆಟ್ಟದನ್ನು ಬಿಡುವದು ಅವಶ್ಯಕವೆಂಬ ವಿಚಾರವು ಹಿಂದೆ ಅನೇಕ ಸಾರೆ ಬಂದಿದೆ. ಆದ್ದರಿಂದ ಜೀವನ ನಿಜಸ್ವರೂಪವನ್ನು ತಿಳಿಯುವದಕ್ಕಿಂತ ಮೊದಲು ಯಾವ ಯಾವದನ್ನೋ ಜೀವನೆಂದು ನಾವು ಭ್ರಾಂತಿಗೊಂಡು ವ್ಯವಹರಿಸುತ್ತಿರುವದನ್ನು ಬಿಡಬೇಕು. ಇಷ್ಟಾದರೆ ಎಷ್ಟೋ ಕೆಲಸವಾಯಿತು. ಅಡ್ಡದಾರಿಯನ್ನು ಹಿಡಿದು ಹೋಗುತ್ತಿದ್ದವನು ತಾನು ಹಿಡಿದಿರುವದು ಅಡ್ಡದಾರಿಯೆಂದು ತಿಳಿದು ಮುಂದೆ ಹೋಗುವದನ್ನು ಬಿಟ್ಟರೆ ಎಷ್ಟೋ ಆಯಾಸವನ್ನು ಉಳಿಸಿಕೊಂಡ ಹಾಗಾಯಿತು. ನಾವು ಈಗ ನಾನು ನಾನೆಂಬ ಮಾತಿನ ಅರ್ಥಕ್ಕೆ ಶರೀರ, ಪ್ರಾಣ, ಮನಸ್ಸು, ಮತ್ತು ಬುದ್ಧಿ-ಮೊದಲಾದವುಗಳನ್ನು ವಿಷಯವಾಗಿ ಭ್ರಮಿಸಿ ಹೇಳುತ್ತ ಹೋಗುತ್ತಿದ್ದೇವೆ. ಇದು ಭ್ರಾಂತಿಯೆಂದು ತಿಳಿದು ಇನ್ನು ನಾವು ಅಂಥ ಕಲ್ಪನೆಗಳನ್ನು ದೂರ ಮಾಡಿದರೆ ಆಮೇಲೆ ಇದಕ್ಕೆಲ್ಲ ಸಾಮರ್ಥ್ಯವನ್ನು ಕೊಡತಕ್ಕದ್ದಾಗಿ ಇವೆಲ್ಲಕ್ಕಿಂತ ಭಿನ್ನವಾಗಿರುವ ಜೀವಸ್ವರೂಪವನ್ನೂ ಅದಕ್ಕೂ ಆಧಾರವಾದ ಪರಮಾತ್ಮಸ್ವರೂಪವನ್ನೂ ಮನಗಾಣುವೆವು.

ಈಗ ನಮಗೆ ಆತ್ಮಜ್ಞಾನಕ್ಕೆ ಅಡ್ಡಿಯಾಗಿರುವದೇನೆಂದು ವ್ಯಕ್ತವಾಯಿತು. ದೇಹ ಮೊದಲಾದವುಗಳೇ ನಾನೆಂಬ ತಪ್ಪು ತಿಳುವಳಿಕೆಯೇ ಆತ್ಮಜ್ಞಾನಕ್ಕೆ ಅಡ್ಡಿಯಾಗಿರುವದು. ಹೀಗೆ ನಮ್ಮ ಆತ್ಮಜ್ಞಾನಕ್ಕಿರುವ ಪ್ರತಿಬಂಧಕದ ಸ್ವಭಾವವು ಗೊತ್ತಾದ ಮೇಲೆ ಇದನ್ನು ಪ್ರತಿಯೊಂದು ಯೋಗವೂ ಸ್ವತಂತ್ರವಾಗಿ ಕಳೆಯಬಹುದೀತೋ ಅಥವಾ ಉಳಿದವುಗಳನ್ನು ನೆರವಾಗಿಟ್ಟುಕೊಂಡು ಮುಖ್ಯವಾಗಿ ಜ್ಞಾನಯೋಗವೇ ಕಳೆಯುವದೋ? ಎಂಬದನ್ನು ಸುಲಭವಾಗಿ ನಿಶ್ಚಯಿಸಬಹುದು. ದೇಹವೇ ನಾನೆಂಬ ಮೊದಲಾದ ತಪ್ಪುತಿಳುವಳಿಕೆಗಳನ್ನು ಕರ್ಮಯೋಗ ಮೊದಲ

ದವು ಹೋಗಲಾಡಿಸಬಲ್ಲವೊ ಇಲ್ಲವೊ ಎಂಬದನ್ನು ನೋಡುವದಕ್ಕೆ ಮೊದಲು ನಮ್ಮ ಪ್ರತಿದಿನದ ವ್ಯವಹಾರದ ಒಂದುದಾಹರಣೆಯನ್ನು ತೆಗೆದುಕೊಳ್ಳೋಣ. ಏಕೆಂದರೆ ಪ್ರತ್ಯಕ್ಷವಾದ ಉದಾಹರಣೆಯಿಂದ ಪರೋಕ್ಷವಾದ ವಿಚಾರಗಳನ್ನು ನಿರ್ಣಯಿಸುವದಕ್ಕೆ ಸುಲಭವಾಗುತ್ತದೆ. ಆದ್ದರಿಂದ ಉದಾಹರಣೆಗಾಗಿ ನಾವು ನಮ್ಮ ಒಂದು ದಿನದ ಆದಾಯವ್ಯಯಗಳನ್ನು ಬರೆದೆವೆಂದು ತಿಳಿಯೋಣ. ಆದರಲ್ಲಿ ಕೂಡಿ ಕಳೆಯುವದರಲ್ಲಿ ನಡೆದ ಪ್ರಮಾದದಿಂದ ಲೆಕ್ಕದಲ್ಲಿ ಉಳಿಯುವ ಹಣಕ್ಕೂ ನಮ್ಮ ಚೀಲದಲ್ಲಿ ಉಳಿದಿರುವ ಹಣಕ್ಕೂ ಹೆಚ್ಚು ಕಡಿಮೆ ಬರುತ್ತದೆ. ಎಲ್ಲಿ ತಪ್ಪಿರುವದೆಂಬದನ್ನು ತಿಳಿದು ತಿದ್ದಿಕೊಳ್ಳಬೇಕಾಗಿರುತ್ತದೆ. ಆಗ ನಾವು ಸುಮ್ಮನೆ ಬೇಕಾದಷ್ಟು ಸ್ನಾನಸಂಧ್ಯಾದಿಕರ್ಮಗಳನ್ನು ಮಾಡಿದರಾಗಲಿ, ಸುಮ್ಮನೆ ಉಸಿರುಕಟ್ಟಿ ಆ ಲೆಕ್ಕದ ಅಂಕೆಗಳನ್ನೇ ಪಿರಿಪಿರಿ ನಿಟ್ಟಿಸಿದರಾಗಲಿ ಅಥವಾ ಪ್ರಾಮಾಣಿಕತೆಯ ಮೇಲೆ ಪ್ರೇಮವನ್ನು ತೋರಿಸಿದರಾಗಲಿ ಆ ತಪ್ಪು ಹೊರಬೀಳುವದೊ? ಎಂದಿಗೂ ಇಲ್ಲ. ಅವಿಚಾರದಿಂದ ಬಿದ್ದಿದ್ದ ಆ ತಪ್ಪು ಹೊರಬೀಳಬೇಕಾದರೆ ನಮ್ಮ ಲೆಕ್ಕವನ್ನು ಮುಂದಿಟ್ಟುಕೊಂಡು ಬಹು ಎಚ್ಚರಿಕೆಯಿಂದ ಎಲ್ಲಾ ಕಡೆಯಲ್ಲಿಯೂ ತಾಳೆಯನ್ನು ಹಾಕುತ್ತ ವಿಚಾರಮಾಡಬೇಕು. ವಿಚಾರದಿಂದ ಆ ತಪ್ಪು ಹೊರಬಿದ್ದೇ ತೀರುವದು. ವಿಚಾರದ ಹೊರತು ಅದಕ್ಕೆ ಯಾವದೂ ತಕ್ಕ ಸಾಧನವಲ್ಲ. ಈ ಅನುಭವವನ್ನು ದೇಹಾತ್ಮಬುದ್ಧಿಯ ಕಡೆಗೆ ತಿರುಗಿಸಿಕೊಂಡರಾಯಿತು. ಅವಿಚಾರದಿಂದ ಆದ ತಪ್ಪು ವಿಚಾರದ ಹೊರತು ಬೇರೆ ಏತರಿಂದ ಹೋದೀತು! ನಮಗೆ ಅವಿಚಾರದಿಂದ ದೇಹಾತ್ಮಬುದ್ಧಿಯುಂಟಾಗಿದೆ. ಅದನ್ನು ವಿಚಾರದಿಂದಲೇ ಹಿಮ್ಮೆಟ್ಟಿಸಬೇಕು. ವಿಚಾರಪ್ರಧಾನವಾದದ್ದು ಜ್ಞಾನಯೋಗ. ಆದ್ದರಿಂದ ಕರ್ಮಯೋಗವೂ ರಾಜಯೋಗವೂ ಭಕ್ತಿಯೋಗವೂ ಆ ತಪ್ಪು ತಿಳುವಳಿಕೆಯನ್ನು ಕಳೆಯಲಾರವೆಂದೂ ಜ್ಞಾನಯೋಗ ಒಂದು ಮಾತ್ರ ಆದನ್ನು ಕಳೆಯಬಲ್ಲದೆಂದೂ ಸಿದ್ಧವಾಯಿತು.

ಇನ್ನು ಆ ಜ್ಞಾನಯೋಗವಾದರೂ ಸ್ವತಂತ್ರವಾಗಿ ತಾನೊಂದೇ ಆ ಅಜ್ಞಾನವನ್ನು ಕಳೆಯಬಲ್ಲದೊ? ಇದಕ್ಕೂ ಹೂಗುಟ್ಟುವದಕ್ಕಾಗುವ

ದಿಲ್ಲ. ಏಕೆಂದರೆ ವ್ಯವಹಾರದಲ್ಲಿ ನೋಡಿದರೂ ಕೂಡ ತೀಕ್ಷ್ಣಬುದ್ಧಿಯುವರ ವಿಚಾರಕ್ಕೂ ಮಂದಬುದ್ಧಿಯುವರ ವಿಚಾರಕ್ಕೂ ಎಷ್ಟೋ ಅಂತರವು ಕಾಣಬರುತ್ತದೆ. ವ್ಯವಹಾರದ ವಿಚಾರಕ್ಕಿಂತ ಬಹು ಮೇಲಿನ ಮೆಟ್ಟಿಲಾಗಿರುವ ದೇಹಾತ್ಮಬುದ್ಧಿಯ ವಿಚಾರವನ್ನು ಎಲ್ಲರೂ ಮಾಡಹೋದರೆ ಹೇಗೆ ದಕ್ಕೀತು? ದೇಹಾತ್ಮಬುದ್ಧಿಯನ್ನು ಕಳೆಯುವದಕ್ಕೆ ತೀಕ್ಷ್ಣವಾದ ಬುದ್ಧಿಯಲ್ಲದೆ ವಿಶೇಷವಾಗಿ ಶುದ್ಧವಾದ ಮತ್ತು ಸ್ಥಿರವಾದ ಬುದ್ಧಿಯು ಬೇಕಾಗಿರುವದು. ಏಕೆಂದರೆ ಬೇಕಾದಷ್ಟು ಮಳೆ ಬಂದು ಆ ನೀರು ಕಂಡಕಂಡ ಕಡೆಗಳಲ್ಲೆಲ್ಲ ಹರಿದು ಹೊಲಸಿನಿಂದ ಕೂಡಿ ಬಂಡಾಗಿ ಹರಿಯುವಾಗ ಅದರಲ್ಲಿ ಪ್ರತಿಬಿಂಬವು ಕಾಣುವದೇನು? ಅದರಂತೆಯೇ ಮನಸ್ಸಿನಲ್ಲಿ ಸಮೃದ್ಧಿಯಾಗಿ ವ್ಯಾವಹಾರಿಕವಾದ ಕಲ್ಪನೆಗಳು ತುಂಬಿ ಅವು ನಾಲ್ಕು ದಿಕ್ಕಿಗೂ ಹರಡಿಕೊಳ್ಳುತ್ತ ರಾಗದ್ವೇಷಾದಿಗಳಿಂದ ಕೂಡಿ ಅಶುದ್ಧವಾಗಿ ಪ್ರವಹಿಸುವಾಗ ಅದರಲ್ಲಿ ಪ್ರತಿಬಿಂಬವು ಸರಿಯಾಗಿ ಹೇಗೆ ಮೂಡೀತು? ಆದ್ದರಿಂದ ಆತ್ಮನು ದೇಹಕ್ಕಿಂತ ಭಿನ್ನನೆಂಬ ಪ್ರೌಢವಿಚಾರವು ಪ್ರವೇಶಿಸಬೇಕಾದರೆ ಬುದ್ಧಿಯು ಶುದ್ಧವಾಗಿರಬೇಕು. ಈ ಶುದ್ಧಿಗಾಗಿಯೇ ಕರ್ಮಯೋಗವು ಗೊತ್ತಾಗಿರುವದು. ಇನ್ನು ಒಂದು ಬುದ್ಧಿಯು ಶುದ್ಧವಾಗಿತ್ತೆಂದು ಇಟ್ಟುಕೊಳ್ಳೋಣ. ನೀರು ತಿಳಿಯಾಗಿದ್ದರೂ ಅದರ ಪ್ರವಾಹವು ಎಲ್ಲಾ ಕಡೆಗೂ ವೇಗವಾಗಿ ಹೊರಟುತ್ತಿದ್ದರೆ ಅದರಲ್ಲಾದರೂ ಪ್ರತಿಬಿಂಬವು ಹೇಗೆ ಮೂಡೀತು? ಹಾಗೆಯೇ ಶುದ್ಧಚಿತ್ತವಾದರೂ ಅದು ನಾಲ್ಕು ಕಡೆಗೂ ಹರಿಯುತ್ತಿದ್ದರೆ ಅದರಲ್ಲಿ ದೇಹಾತ್ಮಬುದ್ಧಿಯ ವಿಚಾರವು ಮೂಡಲಾರದು. ನೀರು ತನ್ನ ಚಲನೆಯನ್ನು ಬಿಟ್ಟು ಸುಮ್ಮನೆ ಒಂದು ಕಡೆ ನಿಲ್ಲಬೇಕು. ಆಗ ಅದರಲ್ಲಿ ಪ್ರತಿಬಿಂಬವು ಮೂಡುವದು. ಅದರಂತೆ ಮನಸ್ಸು ತನ್ನ ಹಾರಾಟವನ್ನು ಬಿಟ್ಟು ಒಂದು ಕಡೆ ನಿಲ್ಲಬೇಕು. ಆಗ ಅದರಲ್ಲಿ ದೇಹಾತ್ಮಬುದ್ಧಿಯ ವಿಚಾರವು ಇಳಿಯುವದು. ಈ ಸ್ಥಿರತೆಯು ರಾಜಯೋಗದಿಂದಲೂ ಭಕ್ತಿಯೋಗದಿಂದಲೂ ಪಡೆಯಲ್ಪಡುವದು. ಹೀಗೆ ಜ್ಞಾನಯೋಗವನ್ನು ನಡೆಸಬೇಕಾದರೆ ಕರ್ಮಯೋಗದಿಂದ ಚಿತ್ತಶುದ್ಧಿಯನ್ನೂ ರಾಜಯೋಗ ಭಕ್ತಿಯೋಗಗಳಿಂದ ಚಿತ್ತಸ್ಥೈರ್ಯವನ್ನೂ ಪಡೆದ ಬುದ್ಧಿಯಾಗಬೇಕು.

ಶುದ್ಧವೂ ಸ್ಥಿರವೂ ಅಲ್ಲದ ಬುದ್ಧಿಯು ವಿಚಾರವು ಜ್ಞಾನಯೋಗವೆನಿಸಿಕೊಳ್ಳುವದೇ ಇಲ್ಲ. ಅದನ್ನು ಜ್ಞಾನವೆನ್ನಬಹುದು. ಯೋಗವೆಂಬ ಪವಿತ್ರನಾಮವನ್ನು ಪಡೆಯಬೇಕಾದರೆ ಆ ವಿಚಾರವು ಶುದ್ಧವೂ ಸ್ಥಿರವೂ ಆದ ಬುದ್ಧಿಯಲ್ಲಿಯೇ ಹುಟ್ಟಬೇಕು. ಆದ್ದರಿಂದ ತಪ್ಪುತಿಳಿವಳಿಕೆಯನ್ನು ಕಳೆಯುವದಕ್ಕೆ ಸ್ವತಂತ್ರವಾದ ಜ್ಞಾನಯೋಗಕ್ಕೆ ಸಾಮರ್ಥ್ಯವಿಲ್ಲವೆಂದಾಯಿತು. ಹೀಗಾಗಿ ಯಾವ ಯೋಗವೂ ತಾನೊಂದೇ ಸ್ವತಂತ್ರವಾಗಿ ತಪ್ಪು ತಿಳಿವಳಿಕೆಯನ್ನು ಕಳೆಯಲಾರದೆಂದಾಯಿತು. ಆದ್ದರಿಂದ ಉಳಿದವುಗಳನ್ನು ನೆರವಾಗಿಟ್ಟುಕೊಂಡು ಮುಖ್ಯವಾಗಿ ಜ್ಞಾನಯೋಗವೇ ಅದನ್ನು ಕಳೆಯುವದೆನ್ನಬೇಕು. ಈ ಯೋಗಗಳು ಒಂದಕ್ಕೊಂದು ನೆರವಾಗಿರುವ ಸ್ಥಿತಿಯು ಪ್ರತಿಯೋಗದಲ್ಲಿಯೂ ಕಾಣುವದು. ಹೇಗೆಂದರೆ ಕರ್ಮಯೋಗದಲ್ಲಿಯೂ ಅಲ್ಪಸ್ವಲ್ಪವಾದರೂ ಮನಸ್ಸಿನ ಏಕಾಗ್ರತೆಯೂ ಪ್ರೇಮಸ್ವಭಾವವೂ ವಿಚಾರವೂ ಇದ್ದೇ ಇರುವವು. ಅದರಂತೆಯೇ ರಾಜಯೋಗದಲ್ಲಿ ಕರ್ಮವೂ ಪ್ರೇಮವೂ ವಿಚಾರವೂ ಭಕ್ತಿಯೋಗದಲ್ಲಿ ಕರ್ಮವೂ ಚಿತ್ತೈಕಾಗ್ರತೆಯೂ ವಿಚಾರವೂ ಮತ್ತು ಜ್ಞಾನಯೋಗದಲ್ಲಿ ಕರ್ಮವೂ ಚಿತ್ತೈಕಾಗ್ರತೆಯೂ ಪ್ರೇಮವೂ ಹಾಸುಹೊಕ್ಕುಗಳಾಗಿ ನೆಯ್ದುಕೊಂಡಿರುವವು. ಆದರೆ ಕರ್ಮವು ಬಹಳವಾಗಿರುವ ಭಾಗವು ಕರ್ಮಯೋಗವೆಂದೂ ಚಿತ್ತೈಕಾಗ್ರತೆಯ ಕಡೆಗೆ ಹೆಚ್ಚು ಲಕ್ಷ್ಯವಿರುವ ಭಾಗವು ರಾಜಯೋಗವೆಂದೂ ಪ್ರೇಮಕ್ಕೆ ಪ್ರಾಶಸ್ತ್ಯವಿರುವ ಭಾಗವು ಭಕ್ತಿಯೋಗವೆಂದೂ ವಿಚಾರಪ್ರಧಾನವಾದ ಭಾಗವು ಜ್ಞಾನಯೋಗವೆಂದೂ ಹೆಸರುಗೊಂಡಿರುವವು. ಈ ಪ್ರತಿಯೊಂದು ಬೇರೆಬೇರೆ ಭಾಗಕ್ಕೂ ತನ್ನಲ್ಲಿರುವ ವಿಚಾರಭಾಗವನ್ನು ಪರಿಪಕ್ವಸ್ಥಿತಿಗೆ ತರುವದೇ ಧ್ಯೇಯವಾಗಿರುವದು. ಹೀಗೆ ಹಣ್ಣಾಗಿ ಬಂದ ವಿಚಾರವು ದೇಹಾತ್ಮಬುದ್ಧಿಯನ್ನು ಕಳೆಯುವದಕ್ಕೆ ಸಮರ್ಥವಾಗುವದು. ಜ್ಞಾನಯೋಗದಲ್ಲಿ ಇಂಥ ವಿಚಾರಕ್ಕೇ ಪ್ರಾಧಾನ್ಯವಿರುವದರಿಂದ ಎಲ್ಲ ಯೋಗಗಳಲ್ಲಿ ಅದಕ್ಕೇ ಶ್ರೇಷ್ಠತೆಯು ಒಪ್ಪುವದು. ದೇಹಾತ್ಮಬುದ್ಧಿಯನ್ನು ಹೋಗಲಾಡಿಸುವದೇ ಜ್ಞಾನಯೋಗದ ಹೆಚ್ಚುಗಾರಿಕೆ.

ಪರಮಾತ್ಮಜ್ಞಾನವು ಹೇಗೆ ಆಗುವದೆಂಬ ವಿಚಾರವನ್ನು ಹೇಳು ವಾಗ ಕಠವಲ್ಲಿಯು—

"ಏಷ ಸರ್ವೇಷು ಭೂತೇಷು ಗೂಢೋऽऽತ್ಮಾ ನ ಪ್ರಕಾಶತೇ ।
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥"

ಎಂದು ಹೇಳಿದೆ. ತಾತ್ಪರ್ಯವೇನೆಂದರೆ:— "ಪರಮಾತ್ಮನು ಎಲ್ಲರ ಲ್ಲಿಯೂ ಅಂತರ್ಯಾಮಿಯಾಗಿ ಯಾರಿಗೂ ಕಾಣಿಸಿಕೊಳ್ಳದೆ ಇದ್ದಾನೆ; ಸೂಕ್ಷ್ಮದರ್ಶಿಗಳಾದವರು ತೀಕ್ಷ್ಣವಾದ ತಮ್ಮ ಸೂಕ್ಷ್ಮಬುದ್ಧಿಯಿಂದ ಅವ ನನ್ನು ಕಾಣಬಹುದು." ಈ ಮಾತಿನಲ್ಲಿ ವೇದವು ಬುದ್ಧಿಗೆ ಪ್ರಾಶಸ್ತ್ಯ ವನ್ನು ಕೊಟ್ಟಿರುವದೂ ಜ್ಞಾನಯೋಗದ ಹೆಚ್ಚುಗಾರಿಕೆಯನ್ನು ತೋರಿಸು ವದು. ದೇಹಾತ್ಮಬುದ್ಧಿಯು ವಿಚಾರವನ್ನು ಮಾಡುವಂಥ ಸೂಕ್ಷ್ಮತ್ವ ವುಂಟಾಗಬೇಕಾದರೆ ಆ ಬುದ್ಧಿಯು ಶುದ್ಧವಾಗಲೇಬೇಕು. ಚಿನ್ನದ ತಂತಿಯನ್ನು ಎಳೆಯಬೇಕಾದರೆ ಆ ಚಿನ್ನದಲ್ಲಿ ಕಶ್ಮಲವಿದ್ದರೆ ಆ ತಂತಿ ತೆಳ್ಳಗೆ ಬರದೆ ನಡ ನಡುವೆ ಮುರಿದು ಕೊಂಡು ಹೋಗುವದು. ಚೊಕ್ಕ ಚಿನ್ನದ ತಂತಿಯು ಬೇಕಾದಷ್ಟು ದೂರ ನೇಯಿಗೆಯಂತೆ ಬರುವದು. ಇದ ರಂತೆ ಬುದ್ಧಿಯು ಸೂಕ್ಷ್ಮವಾಗಬೇಕಾದರೆ ಶುದ್ಧಿಯು ಬೇಕು. ಪರ ಮಾತ್ಮನು ಅಚಿಂತ್ಯಾವ್ಯಕ್ತರೂಪನಾದ್ದರಿಂದ ಬುದ್ಧಿಗೂ ದೂರನೆಂದು ಶ್ರುತಿಯು ಎಷ್ಟೋ ಕಡೆ ಹೇಳಿರುತ್ತದೆ. ಇಲ್ಲಿ ಅವನನ್ನು ಬುದ್ಧಿಯಿಂದ ನೋಡಬಹುದೆಂಬ ಮಾತಿಗೆ ಅರ್ಥವೇನೆಂದರೆ ಆತ್ಮಜ್ಞಾನಕ್ಕಿರುವ ದೇಹಾ ತ್ಮಜ್ಞಾನರೂಪವಾದ ಪ್ರತಿಬಂಧಕವನ್ನು ಬುದ್ಧಿಯಿಂದ ನಿರ್ಮೂಲಿಸಬಹು ದೆಂಬುದಿಷ್ಟೆ. ಪ್ರತಿಬಂಧಕವು ಹೋದರೆ ಆತ್ಮಸ್ಫೂರ್ತಿಯಾಗಿಯೇ ಆಗು ವದು. ಆಗ ಆತ್ಮದರ್ಶನದ ಶ್ಲಾಘನೆಯನ್ನು ನಾವು ಯಾರಿಗಾದರೂ ಕೊಡುವದೆಂದರೆ ಅದಕ್ಕೆ ಬುದ್ಧಿಯೇ ಪಾತ್ರವಾಗಿರುವದು.

ಜ್ಞಾನಯೋಗದ ಹೆಚ್ಚುಗಾರಿಕೆಯು ಬರೀ ನಮ್ಮ ವಿಚಾರದಿಂ ದಲೇ ಅಲ್ಲ; ಭಗವಂತನ ಮುಖದಿಂದಲೇ ಎಷ್ಟೋ ಕಡೆ ಉಕ್ತವಾಗಿದೆ.

"ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ।"
"ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ ।"
"ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।"

“ ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥ ”

ತಾತ್ಪರ್ಯ— “ ಜ್ಞಾನವೆಂಬ ನಾವೆಯಿಂದಲೇ ಎಲ್ಲ ಪಾಪಗಳನ್ನೂ ದಾಟುತ್ತೀ.” “ ಅನೇಕಜನ್ಮಗಳಾದ ಮೇಲೆ ಜ್ಞಾನವಂತನು ನನ್ನನ್ನು ಪಡೆಯುತ್ತಾನೆ.” “ ಜ್ಞಾನಕ್ಕೆ ಸಮಾನವಾದ ಪವಿತ್ರವಸ್ತು ಈ ಲೋಕದಲ್ಲಿಲ್ಲ.” “ ಸರ್ವಕರ್ಮಗಳೂ ಜ್ಞಾನದಲ್ಲಿ ಕೊನೆಗಾಣುತ್ತವೆ. ”

## ಸದ್ಗುರುವಿನ ಆವಶ್ಯಕತೆ

‘ ಇನ್ನು ಈ ವಿಚಾರದಿಂದಲಾದರೂ ಮನುಷ್ಯನು ಪರಾವಲಂಬನೆ ಇಲ್ಲದೆ ತನ್ನ ಉದ್ಧಾರವನ್ನು ತಾನೇ ಮಾಡಿಕೊಳ್ಳಲಾರದೀತೋ?’– ಎಂಬ ವಿಚಾರವನ್ನು ಮನಸ್ಸಿಗೆ ತಂದುಕೊಂಡರೆ ಇದಕ್ಕೆ ಉತ್ತರವನ್ನು ಕೊಡುವದಕ್ಕೆ ಮೊದಲು ಸ್ವಲ್ಪಮಟ್ಟಿಗೆ ಆಕಾಶದ ಕಡೆಗೆ ನೋಡಬೇಕಾಗುವದು. ಏಕೆಂದರೆ ತನ್ನ ಅವಿಚಾರದಿಂದ ಆಗಿರುವ ತಪ್ಪುತಿಳುವಳಿಕೆಯು ತನ್ನ ಬುದ್ಧಿಯಲ್ಲಿ ನಡೆಯುವ ವಿಚಾರದಿಂದ ಹೋಗಲೇ ಬೇಕಾದ್ದರಿಂದ ಪರಾವಲಂಬನೆಯು ಕಾರಣವಿಲ್ಲವೆಂದು ವಿಚಾರದಿಂದ ಸಿದ್ಧವಾಗುವದು; ಆದರೆ ಹಾಗೆ ಸಿದ್ಧವಾದರೂ ಅದನ್ನು ಸರಿಯಾದ ದಾರಿಗೆ ತಿರುಗಿಸಿ ಮುಂದೆ ಸಾಗಿಸಬಲ್ಲಂಥ ಒಬ್ಬ ಅನುಭವಿಯ ನೆರವು ಬೇಕಾಗುವದು. ಅನುಭವಿಗಳಾದವರ ಗ್ರಂಥಗಳು ಬೇಕಾದಷ್ಟು ಇರುವದು ನಿಜ. ಅವುಗಳಲ್ಲಿ ಎಲ್ಲ ವಿಚಾರಗಳೂ ಸ್ಪಷ್ಟವಾಗಿ ಇರುವದೂ ನಿಜ. ಅಷ್ಟರಿಂದಲೇ ಪುಣ್ಯಶಾಲಿಯಾದವನು ತನ್ನ ಇಷ್ಟಸಿದ್ಧಿಯನ್ನು ಮಾಡಿಕೊಳ್ಳಬಹುದಾಗಿರುವದೂ ನಿಜ. ಆದರೂ ಸಾಮಾನ್ಯವಾಗಿ ಎಷ್ಟೇ ಪುಣ್ಯಶಾಲಿಯಾದರೂ ಬರೀ ಗ್ರಂಥದ ಬೆನ್ನು ಹತ್ತಿ ಮುಂದೆ ಸಾಗುವಾಗ ಅವನ ಬುದ್ಧಿಯು ಬೆದರುವದು. ಏಕೆಂದರೆ ಅದು ಪ್ರಪಂಚಿಕರಾದ ಯಾರೂ ತುಳಿಯದೆ ಇರುವ ಹಾದಿ. ಆದ್ದರಿಂದ ಆ ಹಾದಿಯಲ್ಲಿ ಎದೆಗೊಟ್ಟು ಮುಂದೆ ಹೋಗುವಾಗ ಎಂಥವರಿಗಾದರೂ ಗಾಬರಿಯಾಗುವದು. ಆ ದಾರಿಯಲ್ಲಿ ಹೋಗಿ ಕೊನೆಯನ್ನು ಮುಟ್ಟಿದವರ ಬೆಂಬಲವು ದೊರೆತರೆ ಯಾರಾದರೂ ಧೈರ್ಯದಿಂದ ಮುಂದೆ ಮುಂದೆ ಹೆಜ್ಜೆಯನ್ನಿಡಬಹುದು. ಆದ್ದರಿಂದಲೇ ಮಹಾಬುದ್ಧಿಶಾಲಿಗಳೂ ಕೂಡ ಒಬ್ಬ ಸದ್ಗುರುವನ್ನಾ

ಶ್ರಯಿಸಿಯೇ ಪಾರಾಗಿದ್ದಾರೆ. ಪರಾವಲಂಬನೆ ಇಲ್ಲದೆ ಪಾರಾಗಿರುವದಕ್ಕೂ ಉದಾಹರಣೆ ಇಲ್ಲದೆ ಇಲ್ಲ. ಶ್ರೀಸಮರ್ಥ ರಾಮದಾಸರು ಮೊದಮೊದಲು ತಮ್ಮ ಅಣ್ಣನ ಬೆಂಬಲದಿಂದ ಜ್ಞಾನಸಾಧನಗಳನ್ನು ಮಾಡುತ್ತಿದ್ದರು. ಆಮೇಲೆ ಪರಾವಲಂಬನೆಯನ್ನು ಬಿಟ್ಟು ಸ್ವಸಾಮರ್ಥ್ಯದಿಂದಲೇ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಬೇಕೆಂದು ಸಮರ್ಥರು ಒಂದು ಮಾರುತಿಯ ದೇವಸ್ಥಾನದಲ್ಲಿ ಭಕ್ತಿಯ ಆವೇಶವನ್ನು ತಂದ ಕೊಂಡು ಒಂದು ಮೂಲೆಯಲ್ಲಿ ನಿಶ್ಚೇಷ್ಟರಾಗಿ ಇದ್ದುಬಿಟ್ಟರು. ಅವರ ದೃಢನಿಶ್ಚಯವೂ ಭಕ್ತಿಪ್ರಭಾವವೂ ಲೋಕೋತ್ತರವಾಗಿದ್ದುದರಿಂದ ಅವರಿಗೆ ಆಗ ಅಲ್ಲಿ ಸಾಕ್ಷಾತ್ಕಾರವಾಯಿತೆಂದು ವಾರ್ತೆ ಇದೆ. ಹೀಗೆ ಆಗುವದುಂಟೆಂದು ಎಲ್ಲರೂ ಆ ದಾರಿಯನ್ನು ಹಿಡಿಯುವದು ಉಪಯೋಗಕರವಾಗಿ ಕಾಣುವದಿಲ್ಲ. ಏಕೆಂದರೆ ಸಮರ್ಥರ ಮನಸ್ಸಿನ ಪರಿಸ್ಥಿತಿಯು ಎಲ್ಲರಲ್ಲಿಯೂ ಇರುವದಿಲ್ಲ. ಆದ್ದರಿಂದ ಸದ್ಗುರುಗಳ ಆಶ್ರಯವನ್ನು ಪಡೆಯುವದೇ ರಾಜಮಾರ್ಗ. ಅದೇ ನಿರ್ಭಯವಾದದ್ದು.

ಪುರಾಣಗಳಲ್ಲೆಲ್ಲಾ ಸದ್ಗುರುಗಳ ಆಶ್ರಯಕ್ಕೇ ಹೆಚ್ಚು ಪ್ರಾಶಸ್ತ್ಯವಿದೆ. ಆ ಸದ್ಗುರುಗಳನ್ನಾದರೂ ಸದ್ಗುರುಬುದ್ಧಿಯಿಂದ ಆಶ್ರಯಿಸಬೇಕು. ಶ್ರೀಶುಕಾಚಾರ್ಯರಿಗೆ ತಮ್ಮ ತಂದೆಯಾದ ವ್ಯಾಸರ ಬೆಂಬಲವಿತ್ತು. ವ್ಯಾಸರು ಸಾಮಾನ್ಯಜ್ಞಾನಿಗಳಲ್ಲೊಬ್ಬರಲ್ಲ. "ವ್ಯಾಸೋಚ್ಛಿಷ್ಟಮಿದಂ ಜಗತ್" ಎಂಬ ವಾಕ್ಯದಂತೆ ಈ ಜಗತ್ತಿನಲ್ಲಿರುವ ಭಗವದ್ವಿಚಾರಗಳೆಲ್ಲ ವ್ಯಾಸರ ಎಂಜಲು - ಎಂದರೆ ಅವರ ಬಾಯಿಂದ ಬಂದದ್ದು. ಯಾರೇನು ತತ್ತ್ವದ ವಿಚಾರವನ್ನು ಹೇಳಿದರೂ ಅದು ವ್ಯಾಸರ ಮಾತಿನಿಂದ ಆರಿಸಿಕೊಂಡದ್ದೇ ಆಗಿರುವದು. ಜಗತ್ತಿನಲ್ಲಿ ಯಾರಿಗೆ ಸಾಕ್ಷಾತ್ಕಾರವಾಗಬೇಕಾದರೂ ಅದು ವ್ಯಾಸರ ವಾಕ್ಯದ ಮೂಲಕವೇ ಆಗಬೇಕಾಗಿರುವದು. ಇಂಥ ವ್ಯಾಸರ ಉಪದೇಶವಾದ ಮೇಲೆ ಶ್ರೀಶುಕಾಚಾರ್ಯರಿಗೆ ಜ್ಞಾನವಾಗದೆ ಇದ್ದೀತೆ? ಆದರೂ ಶುಕಾಚಾರ್ಯರ ಮನಸ್ಸಿನಲ್ಲಿ ಸಂಶಯವು ತಲೆದೋರುತ್ತಿತ್ತು. ಏಕೆಂದರೆ ಶ್ರೀಶುಕಾಚಾರ್ಯರಿಗೆ ಭಗವಾನ್ ವ್ಯಾಸರ ಮೇಲೆ ಸದ್ಗುರುಗಳೆಂಬ ದೃಷ್ಟಿಗಿಂತ ತಂದೆಯೆಂಬ ಭಾವನೆ ಹೆಚ್ಚಾಗಿತ್ತು. ಆಮೇಲೆ ಈ ಮರ ನ್ನರಿತು ಶ್ರೀವ್ಯಾಸಮಹರ್ಷಿಗಳು ತಮ್ಮ ಮಗನನ್ನು ಪರೀಕ್ಷೆಗೊಳ

ಸಂಶಯರಹಿತನನ್ನಾಗಿ ಮಾಡಬೇಕೆಂದು ಪ್ರಸಿದ್ಧ ರಾಜರ್ಷಿಯಾದ ಜನಕನ ಬಳಿಗೆ ಕಳುಹಿಸಿದರು. ಜನಕನು ಪರೀಕ್ಷಿಸಿ ಅವರ ಸಮಾಧಾನಸ್ಥಿತಿಯನ್ನು ಮನಗಂಡು ಅವರು ತಿಳಿದುಕೊಂಡಿದ್ದದ್ದು ಸರಿಯೆಂದು ಹೇಳಿದ ಮೇಲೆ ಶುಕಾಚಾರ್ಯರ ಸಂಶಯದ ಬೇರು ಕಿತ್ತುಹೋಯಿತು. ಆದ್ದರಿಂದ ಸದ್ಗುರುಗಳನ್ನಾದರೂ ಸದ್ಗುರುಬುದ್ಧಿಯಿಂದ ಆಶ್ರಯಿಸುವದು ಅಗತ್ಯವು.

ಸದ್ಗುರುಗಳ ಆಶ್ರಯದಿಂದ ಸಂಸ್ಕಾರವನ್ನು ಪಡೆಯದಂಥ ಸಾಧಕನು ಚಳಿಯ ದೆಸೆಯಿಂದ ಹೆಡೆಯನ್ನು ಹಾಕಿಕೊಂಡು ಸುಮ್ಮನೆ ಮಲಗಿದ ಕೃಷ್ಣಸರ್ಪದಂತೆ ಇರುತ್ತಾನೆ. ಕೃಷ್ಣಸರ್ಪವು ಚಳಿಯ ದೆಸೆಯಿಂದ ಅಲ್ಲಾಡಲಾರದೆ ಸಾಮರ್ಥ್ಯವಿಲ್ಲದ್ದರಿಂದ ಬಿಗ್ಗನೆ ಮುದುರಿಕೊಂಡಿರುತ್ತದೆ. ಅಸಹಾಯಶೀಲನಾದ ಸಾಧಕನು ತನ್ನ ಮನಸ್ಸನ್ನು ತಾನಾಗಿ ಬಿಗಿ ಹಿಡಿದುಕೊಂಡು ವಿಷಯಗಳಿಂದ ವಿಮುಖನಾಗಿರುತ್ತಾನೆ. ಚಳಿಯಿಂದ ಮಲಗಿದ ಹಾವಿನಲ್ಲಿ ವಿಷದ ಹಲ್ಲು ಹೋಗಿರುವದಿಲ್ಲವಾದ್ದರಿಂದ ಅದಕ್ಕೆ ಸ್ವಲ್ಪ ಕಾವು ದೊರೆತೊಡನೆಯೇ ಅದು ಎದ್ದು ಭೋರ್ಗಟ್ಟಿ ಕಣ್ಣಿಗೆ ಬಿದ್ದವರನ್ನು ಕಚ್ಚಿಯೇ ಬಿಡುವದು. ತಾನಾಗಿ ಮನಸ್ಸನ್ನು ಬಿಗಿಹಿಡಿದುಕೊಂಡಿರುವ ಸಾಧಕನಲ್ಲಿಯೂ ರಾಗದ್ವೇಷಗಳು ಅಡಗಿಕೊಂಡಿದ್ದೇ ಇರುವವಾದ್ದರಿಂದ ಮನಸ್ಸಿನಲ್ಲಿ ಒಮ್ಮೆ ವಿಷಯವಾಸನೆಯ ಪ್ರಬಲವಾದ ತರಂಗವು ಎದ್ದೊಡನೆ ಅವನು ಬಹಿರ್ಮುಖನಾಗಿ ವಿಷಯಗಳನ್ನು ಅತ್ಯಾತುರದಿಂದ ಉಪಭೋಗಿಸುವನು. ನಿರ್ಬಂಧದಿಂದ ಉಪವಾಸವನ್ನು ಮಾಡಿದ ಮನುಷ್ಯನು ಅನ್ನವನ್ನು ಕಾಣುತ್ತಲೇ ಅತಿವೇಗದಿಂದ ಬಕಬಕ ಮುಕ್ಕಿ ಅಜೀರ್ಣವನ್ನು ಮಾಡಿಕೊಂಡುಬಿಡುವಂತೆ ಆ ಸಾಧಕನು ಹಾನಿಯನ್ನು ಪಡೆಯುವನು. ಹಾವಾಡಿಗನು ಹಲ್ಲನ್ನು ಕಿತ್ತ ಮೇಲೆ ಹಾವಿನ ಭಯವಿಲ್ಲ. ಅದರಂತೆ ಸದ್ಗುರುಗಳ ಆಶ್ರಯದಿಂದ ಕಾಮಕ್ರೋಧಗಳನ್ನು ಕಳೆದುಕೊಂಡ ಸಾಧಕನು ಮಾತ್ರ ಹಾನಿಯನ್ನು ಪಡೆಯುವದಿಲ್ಲ. ಆದ್ದರಿಂದ ಸದ್ಗುರುಗಳ ಆಶ್ರಯವನ್ನು ಪಡೆಯುವದವಶ್ಯಕವು.

ಭಗವಂತನು ಗೀತೆಯಲ್ಲಿ ಜ್ಞಾನವನ್ನು ಬಾಯ ತುಂಬ ಹೊಗಳಿದ ಮೇಲೆ

" ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥"

ಎಂದು ಹೇಳಿದ್ದಾನೆ. ತಾತ್ಪರ್ಯವೇನೆಂದರೆ — " ಅರ್ಜುನ, ಇದೊಂದು ವಿಷಯವನ್ನು ನೀನು ತಿಳಿದುಕೊ. ಏನೆಂದರೆ— ಜ್ಞಾನೋಪದೇಶವನ್ನು ಪಡೆಯಬೇಕಾದರೆ ಸದ್ಗುರುಗಳ ಬಳಿಗೆ ವಿನೀತನಾಗಿ ಹೋಗಬೇಕು; ಅವರಿಗೆ ದೀರ್ಘನಮಸ್ಕಾರವನ್ನು ಹಾಕಬೇಕು; ತನ್ನ ಬಂಧಕ್ಕೂ ಮೋಕ್ಷಕ್ಕೂ ಕಾರಣವೇನೆಂದು ವಿನಂತಾಗಿ ಕೇಳಬೇಕು; ಅವರ ಮನಸ್ಸು ಕರಗುವಂತೆ ಅವರ ಸೇವೆಯನ್ನು ಮಾಡಬೇಕು; ತತ್ತ್ವವನ್ನು ಕಣ್ಣಾರೆ ಕಂಡಿರುವಂಥ ಆ ಜ್ಞಾನಿಗಳು ನಿನಗೆ ಜ್ಞಾನವನ್ನು ಉಪದೇಶಮಾಡುವರು " ಹೀಗೆ ಭಗವಂತನೂ ಸದ್ಗುರುಗಳ ಕಡೆಗೆ ಬೆಟ್ಟುಮಾಡಿ ತೋರಿಸಿರುವದರಿಂದಲೂ ಸದ್ಗುರುಗಳ ಆಶ್ರಯವು ಅವಶ್ಯಕವು.

ಸದ್ಗುರುಗಳ ಕೃಪಾದೃಷ್ಟಿಯು ಒಮ್ಮೆ ಬಿದ್ದರೆ ಅವನ ಉದ್ಧಾರವು ಇಂದಿಲ್ಲವಿದ್ದರೆ ನಾಳೆ ಆಗಿಯೇ ಆಗುವದು. ಪ್ರಪಂಚದ ದುಃಖವೆಂಬ ಕಣ್ಣೆಯನ್ನು ಕಳಚಿಕೊಳ್ಳಬೇಕೆಂಬ ಸಾಧಕನಿಗೆ ಸದ್ಗುರುಗಳ ಆಶ್ರಯವು ಸಣ್ಣ ಗುಂಡಿಯಲ್ಲಿ ಬಳಲುತ್ತಿರುವ ಮೀನಿಗೆ ಸಮುದ್ರಸ್ನಾನಯಾತ್ರೆಯನ್ನು ಮಾಡುವವನ ಕೃಪಾದೃಷ್ಟಿ ಬಿದ್ದಂತೆ ಆಗುವದು. ಸಣ್ಣ ಗುಂಡಿಯಲ್ಲಿ ಬಿಸಿಲಬೇಗೆಯಿಂದ ನೀರು ದಿನದಿನಕ್ಕೆ ಇಳಿಯುತ್ತಿರುವದನ್ನು ನೋಡಿ ಅಲ್ಲಿದ್ದ ಮೀನು ಮುಂದೆ ತನ್ನ ಗತಿಯೇನೆಂದು ಕಳವಳಪಡುತ್ತಿರುವದು. ಸಮುದ್ರಸ್ನಾನಕ್ಕೆ ಹೋಗುವವನು ದಾರಿಯಲ್ಲಿ ಆ ಮೀನನ್ನು ನೋಡಿ ಕನಿಕರವನ್ನು ಪಟ್ಟನೆಂದರೆ ಅದರ ಉದ್ಧಾರವಾದಂತೆಯೇ. ಹೇಗೆಂದರೆ ಆ ಸ್ನಾನಾರ್ಥಿಯು ಒಡನೆ ಆ ಮೀನನ್ನೂ ಸ್ವಲ್ಪ ನೀರನ್ನೂ ತನ್ನ ಚಂಬಿನೊಳಕ್ಕೆ ಹಾಕಿಕೊಂಡುಬಿಡುವನು. ಆಮೇಲೆ ಆ ಮೀನಿಗೆ ಬೆಸ್ತರ ಭಯವಂತು ಇಲ್ಲ. ಇನ್ನು ಅವನು ತನ್ನನ್ನು ಸಮುದ್ರದೊಳಕ್ಕೆ ಎಷ್ಟೇ ಹೊತ್ತಿಗಾದರೂ ಬಿಡಲಿ. ಅದಕ್ಕೆ ಗಾಬರಿ ಇರುವದಿಲ್ಲ. ಹಾಗೆಯೇ ಪರಮಾತ್ಮನ ಸ್ವರೂಪದ ಪರಿಚಯವಿದ್ದು ಅದರ ಕಡೆಗೆ ಹೊರಟಿರುವ ಸದ್ಗುರುಗಳ ಕೃಪಾದೃಷ್ಟಿ ಬಿತ್ತೆಂ ಅವರು ಒಡನೆ ಅವನನ್ನು ತಮ್ಮವನೆಂದು ಭಾವಿಸಿಬಿಡುವರು ;

ಇಂದಿಲ್ಲದಿದ್ದರೆ ನಾಳೆ ಅವರು ಅವನ ಉದ್ಧಾರವನ್ನು ಮಾಡಿಯೇ ಮಾಡು ವರು.

ಗುರುವಿನ ಆವಶ್ಯಕತೆಯು ವಿಷಯವಾಗಿ ಶ್ರೀಪುರಂದರದಾಸರು ಹಾಡಿರುವದೇನೆಂದರೆ—

ರಾಗ—ಲಾವಣೀಚಾಲ ತಾಳ ಆದಿತಾಳ

ಗುರುವಿನ ಗುಲಾಮನಾಗುವ ತನಕ । ದೊರೆಯದಣ್ಣ ಮುಕ್ತಿ ।
ಪರಿಪರಿ ಅನೇಕಶಾಸ್ತ್ರವನೋದಿ । ವ್ಯರ್ಥವಾಯಿತು ಭಕ್ತಿ ॥ ಪ ॥
ಆರುಶಾಸ್ತ್ರವ ಓದಿದರಿಲ್ಲ । ಮೂರುಪುರಾಣವ ಮುಗಿಸಿದರಿಲ್ಲ ॥
ಸಾರಕಥೆಗಳ ಕೇಳಿದರಿಲ್ಲ । ಧೀರನಾಗಿ ತಾ ಪೇಳಿದರಿಲ್ಲ ॥ ೧ ॥
ಕೊರಳೊಳು ಮಾಲೆ ಧರಿಸಿದರಿಲ್ಲ । ಬೆರಳೊಳು ಜಪಮಣಿಯೆಣಿಸಿದರಿಲ್ಲ ॥
ಮರುಳನಾಗಿ ತಾ ಶರೀರಕೆ ಬೂದಿ । ಒರಿಸಿಕೊಂಡು ತಾ ತಿರುಗಿದರಿಲ್ಲ ॥ ೨ ॥
ನಾರಿಯ ಭೋಗ ಅಳಿಸಿದರಿಲ್ಲ । ಶರೀರಕೆ ಸುಖವ ಬಿಡಿಸಿದರಿಲ್ಲ ॥
ನಾರದವರದ ಪುರಂದರವಿಠಲನ ॥ ಸೇರಿಕೊಂಡು ತಾ ಪಡೆಯುವ ತನಕ ॥ ೩ ॥

ಇದೇ ವಿಷಯದಲ್ಲಿ ಶ್ರೀರಾಮಕೃಷ್ಣಪರಮಹಂಸರು ಹೇಳಿರುವ ದೇನೆಂದರೆ —

(೧) ಪರದೇಶಕ್ಕೆ ಹೋಗಬೇಕಾದವನು ಆ ದಾರಿಯನ್ನು ತಿಳಿದು ಹೇಳುವವನ ಮಾತಿಗೆ ಒಳಗಾಗಬೇಕು; ಕಂಡಕಂಡವರ ಮಾತಿಗೆಲ್ಲ ಕಿವಿಗೊಟ್ಟರೆ ಕೊನೆಗೆ ಹಿಂದು ಮುಂದು ತೋರದೆ ನರಳಬೇಕಾಗುವದು. ಹಾಗೆಯೇ ದೇವರ ಬಳಿಗೆ ಹೋಗಬೇಕಾದರೂ ಆ ದಾರಿಯನ್ನು ತಿಳಿದ ಒಬ್ಬ ಸದ್ಗುರುವಿನ ಮಾತಿಗೆ ಕಟ್ಟುಬಿದ್ದು ನಡೆಯಬೇಕು.

(೨) ಒಂದು ಬಗೆಯ ಪಗಡೆಯಾಟದಲ್ಲಿ ಕಾಯಿಗಳು ಇನ್ನು ಹಿಂದಿರುಗದಂತೆ ಮಧ್ಯದ ಚೌಕಕ್ಕೆ ಒಂದು ಸೇರುವದಕ್ಕೆ ಮುಂಚೆ ಆ ಪಗಡೇ ಮನೆಯ ಚೌಕಗಳನ್ನೆಲ್ಲ ಹರಿದು ಬರಬೇಕು. ಆದರೆ ಆ ಚೌಕಕ್ಕೆ ಬರುವವರೆಗೂ ಪೇದೆಯು ಮತ್ತೆಮತ್ತೆ ಎಷ್ಟೋ ಸಲ ಹೊರಟ ಸ್ಥಲಕ್ಕೆ ಹಿಂದಿರುಗುವ ಸಂಭವವುಂಟು. ಎರಡು ಪೇದೆಗಳು ಜಂಟಿಯಾಗಿ ಹೊರಟು ಚೌಕದಿಂದ ಚೌಕಕ್ಕೆ ಹೋಗುತ್ತ ಇದ್ದರೆ ಅವುಗಳನ್ನು ಯಾರೂ ಹಿಂದಿರುಗಿಸುವದಕ್ಕಾಗುವದಿಲ್ಲ. ಹಾಗೆಯೇ ಪ್ರಪಂಚದಲ್ಲಿ

ಭಕ್ತಿಸಾಧನಗಳನ್ನು ನಡೆಸುವವರು ಮೊದಲು ಗುರುವನ್ನೂ ಮತ್ತು ಇಷ್ಟ ದೇವತೆಯನ್ನೂ ಸೇರಿಸಿಕೊಂಡು ಸಾಗಿದರೆ ಅವರಿಗೆ ಪ್ರತಿಬಂಧಕದ ಅಥವಾ ಹಿಂದಿರುಗುವ ಯಾವ ಭಯವೂ ಇಲ್ಲ. ಅವರ ಪ್ರಯತ್ನವು ವಕ್ರಗತಿಯನ್ನು ಪಡೆಯದೆ ತೊಡಕಿಲ್ಲದೆ ಸರಾಗವಾಗಿ ಮುಂದೆ ನಡೆಯುವದು.

ಸ್ವಪ್ರಯತ್ನದಿಂದಲೇ ಸಾಕ್ಷಾತ್ಕಾರವನ್ನು ಹೊಂದಿದವರೆಂದು ಪ್ರಸಿದ್ಧರಾದ ಶ್ರೀಸಮರ್ಥ ರಾಮದಾಸರು ಕೂಡ ಸದ್ಗುರುಗಳ ಆವಶ್ಯಕತೆಯನ್ನು ಕುರಿತು ತಮ್ಮ ಪವಿತ್ರವಾದ ದಾಸಬೋಧವೆಂಬ ಗ್ರಂಥದಲ್ಲಿ ಉಲ್ಲೇಖಿಸಿರುವದೇನೆಂದರೆ—

ಸದ್ಗುರುವಿಲ್ಲದೆ ಎಷ್ಟೋ ಸಾಧನಗಳನ್ನು ಮಾಡಿ ಕಷ್ಟಪಟ್ಟರೂ ಅದು ಬರೀ ಶ್ರಮವೇ ಆಗುವದು (೫—೧-೨೪). ಸದ್ಗುರುಗಳ ಕೃಪೆಯು ದೊರೆತು ಯಮಪುರಿಯ ಭೀತಿಯು ತಪ್ಪುವದಿಲ್ಲ (೫—೧—೩೪). ಕಣ್ಣಿಗೆ ಅಂಜನವನ್ನು ಹಾಕಿದರೆ ನಿಕ್ಷೇಪವು ಕಾಣುವಂತೆ ಸದ್ಗುರುವಿನ ವಚನದಿಂದ ಜ್ಞಾನವು ಬೆಳಗುವದು (೫—೧—೩೮). ಸದ್ಗುರುವಿನ ಅಭಯವು ದೊರೆತರೆ ಈಶ್ವರನು ಪ್ರಕಟನಾಗುವನು; ಅಪಾರವಾದ ಸಂಸಾರ ದುಃಖವು ಮಾಯವಾಗುವದು (೫—೧—೪೦). ಹಿಂದೆ ಆಗಿಹೋದ ಮಹಾಮಹಾಮುನೀಶ್ವರರಿಗೆಲ್ಲಾ ಜ್ಞಾನವು ಸದ್ಗುರುವಿನಿಂದಲೇ ಆಗಿರುವದು (೫—೧—೪೧). ಶ್ರೀರಾಮ, ಕೃಷ್ಣ— ಮೊದಲಾದವರು ಕೂಡ ಗುರುಭಜನೆಯಲ್ಲಿ ತತ್ಪರರಾಗಿ ಗುರುದಾಸ್ಯವನ್ನು ಮಾಡಿದ್ದಾರೆ (೫—೧—೪೨). ಸಕಲಸೃಷ್ಟಿಯ ಚಾಲಕರಾದ ಹರಿಹರಬ್ರಹ್ಮಾದಿಗಳೂ ತಮ್ಮ ಮಹತ್ತ್ವವನ್ನು ಮನಕ್ಕೆ ತರದೆ ಸದ್ಗುರುಗಳಿಗೆ ದೀನರಾಗಿ ಶರಣು ಬಂದಿದ್ದಾರೆ (೫—೧—೪೩). ಮೋಕ್ಷದ ಇಚ್ಛೆ ಯಾರಿಗಿದೆಯೋ ಅವರು ಸದ್ಗುರುಗಳನ್ನಾಶ್ರಯಿಸಬೇಕು; ಸದ್ಗುರುಗಳಿಲ್ಲದೆ ಮೋಕ್ಷವು ಕಲ್ಪಾಂತಕ್ಕೂ ಸಿಕ್ಕಲಾರದು (೫—೧—೪೪).

ಇನ್ನು ಗುರುಗಳನ್ನು ಹುಡುಕಬೇಕೆಂದರೆ ನಮ್ಮ ದಾರಿಗೊಂದು ದೊಡ್ಡ ಗುಡ್ಡವೇ ಅಡ್ಡನಿಲ್ಲುವದು. ಅದೇನೆಂದರೆ—

“ ಗುರವೋ ಬಹವಸ್ಸಂತಿ ಶಿಷ್ಯವಿತ್ತಾಪಹಾರಕಾಃ ”

ಎಂದು ಗುರು ಗೀತೆಯಲ್ಲಿ ಹೇಳಿರುವಂತೆ ಎಲ್ಲಿ ನೋಡಿದರೂ ಶಿಷ್ಯರ ವಿತ್ತವನ್ನು ಅಪಹರಿಸುವ ಗುರುಗಳು ದೊರೆಯುವರೇ ಹೊರತು ಹೃತ್ತಾಪಹರಣ ಮಾಡುವಂಥ ಗುರುಗಳು ಕಣ್ಣಿಗೆ ಬೀಳುವದೇ ಇಲ್ಲ. ದುಃಖದಿಂದ ತಪ್ತನಾದ ಶಿಷ್ಯನು ಗುರುಗಳನ್ನು ಹುಡುಕುವದು ಸಂಪ್ರದಾಯವಷ್ಟೆ. ಈ ಕಾಲದಲ್ಲಿ ಇದು ತಲೆ ಕೆಳಗಾಗಿದೆ. ಎಲ್ಲೆಲ್ಲಿ ನೋಡಿದರೂ ತಾವು ಗುರುಗಳೆಂದು ತಮ್ಮ ಡೊಳ್ಳನ್ನು ತಾವೇ ಬಾರಿಸಿಕೊಂಡು ಶಿಷ್ಯರನ್ನು ಕೂಡಿಹಾಕಿಕೊಳ್ಳುವ ಸಡಗರದಲ್ಲಿರುವ ಗುರುಗಳೇ ಕಣ್ಣಿಗೆ ಬೀಳುವರು. ಯಾರನ್ನು ನೋಡಿದರೂ ಗುರುತ್ವವನ್ನು ಮೈಮೇಲೆ ಹಾಕಿಕೊಳ್ಳುವರೇ ಹೊರತು ಶಿಷ್ಯರಾಗುವೆನೆನ್ನುವವರೇ ಕಡಿಮೆ. ಪಾಪ! ಶಿಷ್ಯರಾದರೆ ಅನೇಕ ಸಾಧನಗಳನ್ನು ಮಾಡಬೇಕು; ಗುರುಸೇವೆಯನ್ನು ಮಾಡಬೇಕು; ತನುಮನಧನಗಳನ್ನೆಲ್ಲ ಗುರುವಿಗೊಪ್ಪಿಸಿ ತಾನು ಅಪ್ಪುಗೈ ಇಟ್ಟುಕೊಂಡು ಮಿಟಿ ಮಿಟಿ ಕಣ್ಣು ಬಿಡಬೇಕು!! ಹೀಗೆ ತಾನಾಗಿ ತನ್ನ ಮೇಲೆ ದೀನಸ್ಥಿತಿಯನ್ನು ತಂದುಕೊಳ್ಳುವದಕ್ಕಿಂತ ಗುರುತ್ವವನ್ನು ಮೈಮೇಲೆ ಹಾಕಿಕೊಂಡುಬಿಟ್ಟರೆ ತಮ್ಮ ರೊಟ್ಟಿ ತುಪ್ಪದಲ್ಲಿ ಬೀಳುವದೆಂಬ ಹಂಬಲಿಕೆಯಿಂದ ಜನರು ಆ ರೀತಿಯಲ್ಲಿ ಮಾಡುತ್ತಿರುವಂತೆ ಕಾಣುತ್ತದೆ. ಆದ್ದರಿಂದ ಗುರುಗಳನ್ನು ಹುಡುಕುವವರು ಬಹು ಎಚ್ಚರಿಕೆಯಿಂದಿರಬೇಕು. ನದಿಯನ್ನು ದಾಟಬೇಕೆನ್ನುವವನಿಗೆ ತೆಪ್ಪವು ದೊರೆಯದೆ ಪ್ರಯಾಣವು ನಿಂತರೂ ಬಾಧಕವಿಲ್ಲ; ಅವನು ತೆಪ್ಪವೆಂದು ಭ್ರಾಂತಿಗೊಂಡು ಮೊಸಳೆಯ ಮೇಲೆ ಕುಳಿತು ಹೊರಟರೆ ಮಾತ್ರ ಅವನಿಗೆ ಕೇಡು ತಪ್ಪುವದಿಲ್ಲ. ಇದರಂತೆ ಪ್ರಪಂಚದ ದುಃಖವನ್ನು ಕಳದುಕೊಳ್ಳಬೇಕೆನ್ನುವವನಿಗೆ ಸದ್ಗುರು ದೊರೆಯದೆ ಅವನ ಉದ್ದೇಶವು ನೆರವೇರದೆ ಹೋದರೂ ಚಿಂತೆ ಇಲ್ಲ; ಅವನು ವೇಷಧಾರಿಗಳಾದ ಗುರುಗಳನ್ನು ಸದ್ಗುರುಗಳೆಂದು ಮೋಸಹೋಗಿ ಆಶ್ರಯಿಸಿದರೆ ಮಾತ್ರ ಅವನಿಗೆ ಕೇಡು ತಪ್ಪುವದಿಲ್ಲ.

ಈ ಸಂದರ್ಭದಲ್ಲಿ ಇನ್ನೊಂದು ಎಚ್ಚರಿಕೆಯನ್ನು ಕೊಡಬೇಕಾಗಿದೆ. ಅದೇನೆಂದರೆ– ಶಿಷ್ಯನು ಗುರುವನ್ನು ಕಂಡುಹಿಡಿಯುವದು ಅಗದ ಮಾತು. ವಿದ್ಯಾರ್ಥಿಯು ಉಪಾಧ್ಯಾಯನ ಯೋಗ್ಯತೆಗೆ ಬೆಲೆಯನ್ನು ಕಟ್ಟುವದು

ಶಕ್ಯವೇನು? ಗುರುಗಳ ಯೋಗ್ಯತೆಯು ಹೊರಗೆ ಕಾಣುವಂಥದ್ದಲ್ಲ. ಒಳ ಹೊಕ್ಕು ತಿಳಿಯುವ ಯೋಗ್ಯತೆಯು ಶಿಷ್ಯನಿಗೆ ಇರುವದಿಲ್ಲ. ಅದ್ದರಿಂದ ಶಿಷ್ಯನು ಗುರುವನ್ನು ಹುಡುಕುವದು ಅಷ್ಟೇನೂ ಫಲಕಾರಿಯಲ್ಲ. ಒಂದೊಂದು ಸಂದರ್ಭದಲ್ಲಿ ಸರಿಯಾದ ಗುರುವೇ ಸಿಕ್ಕಿದರೂ ಸಿಕ್ಕಬಹುದು. ಆದರೆ ಒಳಗೆ ತಿರುಳಿಲ್ಲದ ಗುರುಗಳು ಸಿಕ್ಕುವದೇ ಬಹಳ. ಗುರುವೇ ಶಿಷ್ಯನನ್ನು ಹುಡುಕಿಕೊಂಡು ಬಂದರೆ ಮಾತ್ರ ಚೆನ್ನಾಗುವದು. ಏಕೆಂದರೆ ಶಿಷ್ಯನ ಯೋಗ್ಯತೆಯನ್ನು ತಿಳಿಯುವ ಕೌಶಲ್ಯವು ಗುರುವಿಗಿರುವದು. ಆದರೆ ಹಾಗೆ ಸರಿಯಾದ ಗುರುವೇ ತಮ್ಮ ಬಳಿಗೆ ತಾನಾಗಿ ಬರುವದಕ್ಕೇನು ಮಾಡಬೇಕು? ಇದಕ್ಕೆ ದಾರಿಯಿದೆ.

'ಯಾವನ್ನಾನುಗ್ರಹಃ ಸಾಕ್ಷಾಜ್ಜಾಯತೇ ಪರಮೇಶ್ವರಾತ್ ।
ತಾವನ್ನ ಸದ್ಗುರುಂ ಕಶ್ಚಿತ್ಸಚ್ಛಾಸ್ತ್ರಮಪಿ ನಂದತಿ ॥"

ಎಂಬದೊಂದು ವಾಕ್ಯವಿದೆ. ಇದರ ತಾತ್ಪರ್ಯವೇನೆಂದರೆ- "ಸಾಕ್ಷಾತ್ತಾಗಿ ಪರಮೇಶ್ವರನ ಅನುಗ್ರಹವಾಗುವವರೆಗೂ ಯಾರಿಗೂ ಸದ್ಗುರುವೂ ಸಿಕ್ಕುವದಿಲ್ಲ; ಸಚ್ಛಾಸ್ತ್ರವೂ ತಿಳಿಯುವದಿಲ್ಲ." ಇದನ್ನು ವಿಚಾರಮಾಡಿದರೆ ನಮಗೆ ಸದ್ಗುರು ದೊರೆಯಬೇಕಾದರೆ ದೇವರನುಗ್ರಹವು ಬೇಕು. ಹಾಗಾದರೆ ಮಾತ್ರ ಸರಿಯಾದ ಗುರು ದೊರೆಯುತ್ತಾನೆ. ಅದ್ದರಿಂದ ನಾವು ಎಡೆಬಿಡದೆ ದೇವರಿಗೆ ಶರಣುಹೋಗುತ್ತಿರಬೇಕು. ದೇವರನ್ನು ನಾವು ಒಲಿಸಿಕೊಂಡರೆ ಗುರು ತಾನಾಗಿ ನಮಗೆ ಒಲಿದುಬರುವನು. ಆಮೇಲೆ ನಾವು ಯಾವ ಅಪಾಯವೂ ಇಲ್ಲದೆ ಪಾರಾಗುವೆವು.

## ಅನುಭವವಿಲ್ಲದವರ ಉಪದೇಶ.

ನಮಗೆ ದೊರೆಯುವ ಕಪಟಿಗಳಾದ ಗುರುಗಳು ಎರಡು ಬಗೆಯಾಗಿರುತ್ತಾರೆ. ಒಂದು ಬಗೆಯವರು ಹೆಚ್ಚು ಬಾಯಿಬಿಡದೆ ಕೇವಲ ಮಾನಸಿಕವಾದ ಅನುಗ್ರಹದಿಂದಲೇ ಶಿಷ್ಯರನ್ನು ಉದ್ಧಾರಮಾಡುತ್ತೇವೆಂಬ ಬಿರುದನ್ನು ತೊಟ್ಟು ಬಹುಮಟ್ಟಿಗೆ ಮೌನವ್ರತದಿಂದಲೇ ತಮ್ಮ ಪ್ರತಿಷ್ಠೆಯನ್ನು ರಕ್ಷಣೆ ಮಾಡಿಕೊಳ್ಳುತ್ತಾರೆ. ಮೌನದಿಂದಲೇ ಶಿಷ್ಯರ ಉದ್ಧಾರವು ಹೇಗೆ ಆದೀತೆಂದರೆ–

ಎಂದು ಗುರು ಗೀತೆಯಲ್ಲಿ ಹೇಳಿರುವಂತೆ ಎಲ್ಲಿ ನೋಡಿದರೂ ಶಿಷ್ಯರ ವಿತ್ತವನ್ನು ಅಪಹರಿಸುವ ಗುರುಗಳು ದೊರೆಯುವರೇ ಹೊರತು ಹೃತ್ತಾಪಹರಣ ಮಾಡುವಂಥ ಗುರುಗಳು ಕಣ್ಣಿಗೆ ಬೀಳುವದೇ ಇಲ್ಲ. ದುಃಖದಿಂದ ತಪ್ತನಾದ ಶಿಷ್ಯನು ಗುರುಗಳನ್ನು ಹುಡುಕುವದು ಸಂಪ್ರದಾಯವಷ್ಟೆ. ಈ ಕಾಲದಲ್ಲಿ ಇದು ತಲೆ ಕೆಳಗಾಗಿದೆ. ಎಲ್ಲೆಲ್ಲಿ ನೋಡಿದರೂ ತಾವು ಗುರುಗಳೆಂದು ತಮ್ಮ ಡೊಳ್ಳನ್ನು ತಾವೇ ಬಾರಿಸಿಕೊಂಡು ಶಿಷ್ಯರನ್ನು ಕೂಡಿಹಾಕಿಕೊಳ್ಳುವ ಸಡಗರದಲ್ಲಿರುವ ಗುರುಗಳೇ ಕಣ್ಣಿಗೆ ಬೀಳುವರು. ಯಾರನ್ನು ನೋಡಿದರೂ ಗುರುತ್ವವನ್ನು ಸ್ವಮೇಲೆ ಹಾಕಿಕೊಳ್ಳುವರೇ ಹೊರತು ಶಿಷ್ಯರಾಗುವೆನೆನ್ನುವವರೇ ಕಡಿಮೆ. ಪಾಪ! ಶಿಷ್ಯರಾದರೆ ಅನೇಕ ಸಾಧನಗಳನ್ನು ಮಾಡಬೇಕು; ಗುರುಸೇವೆಯನ್ನು ಮಾಡಬೇಕು; ತನುಮನಧನಗಳನ್ನೆಲ್ಲ ಗುರುವಿಗೊಪ್ಪಿಸಿ ತಾನು ಅಪ್ಪಣೆಗೆ ಇಟ್ಟುಕೊಂಡು ಮಿಟಿ ಮಿಟಿ ಕಣ್ಣು ಬಿಡಬೇಕು!! ಹೀಗೆ ತಾನಾಗಿ ತನ್ನ ಮೇಲೆ ದೀನಸ್ಥಿತಿಯನ್ನು ತಂದುಕೊಳ್ಳುವದಕ್ಕಿಂತ ಗುರುತ್ವವನ್ನು ಸ್ವಮೇಲೆ ಹಾಕಿಕೊಂಡುಬಿಟ್ಟರೆ ತಮ್ಮ ರೊಟ್ಟಿ ತುಪ್ಪದಲ್ಲಿ ಬೀಳುವದೆಂಬ ಹಂಬಲಿಕೆಯಿಂದ ಜನರು ಆ ರೀತಿಯಲ್ಲಿ ಮಾಡುತ್ತಿರುವಂತೆ ಕಾಣುತ್ತದೆ. ಆದ್ದರಿಂದ ಗುರುಗಳನ್ನು ಹುಡುಕುವವರು ಬಹು ಎಚ್ಚರಿಕೆಯಿಂದಿರಬೇಕು ನದಿಯನ್ನು ದಾಟಬೇಕೆನ್ನುವವನಿಗೆ ತೆಪ್ಪವು ದೊರೆಯದೆ ಪ್ರಯಾಣವು ನಿಂತರೂ ಬಾಧಕವಿಲ್ಲ; ಆವನು ತೆಪ್ಪವೆಂದು ಭ್ರಾಂತಿಗೊಂಡು ಮೊಸಳೆಯ ಮೇಲೆ ಕುಳಿತು ಹೊರಟರೆ ಮಾತ್ರ ಅವನಿಗೆ ಕೇಡು ತಪ್ಪುವದಿಲ್ಲ ಇದರಂತೆ ಪ್ರಪಂಚದ ದುಃಖವನ್ನು ಕಳೆದುಕೊಳ್ಳಬೇಕೆನ್ನುವವನಿಗೆ ಸದ್ಗುರು ದೊರೆಯದೆ ಅವನ ಉದ್ದೇಶವು ನೆರವೇರದೆ ಹೋದರೂ ಚಿಂತೆ ಇಲ್ಲ; ಅವನು ವೇಷಧಾರಿಗಳಾದ ಗುರುಗಳನ್ನು ಸದ್ಗುರುಗಳೆಂದು ಮೋಸಹೋಗಿ ಆಶ್ರಯಿಸಿದರೆ ಮಾತ್ರ ಅವನಿಗೆ ಕೇಡು ತಪ್ಪುವದಿಲ್ಲ.

ಈ ಸಂದರ್ಭದಲ್ಲಿ ಇನ್ನೊಂದು ಎಚ್ಚರಿಕೆಯನ್ನು ಕೊಡಬೇಕಾಗಿದೆ. ಅದೇನೆಂದರೆ- ಶಿಷ್ಯನು ಗುರುವನ್ನು ಕಂಡುಹಿಡಿಯುವದು ಆಗದ ಮಾತು. ವಿದ್ಯಾರ್ಥಿಯು ಉಪಾಧ್ಯಾಯನ ಯೋಗ್ಯತೆಗೆ ಬೆಲೆಯನ್ನು ಕಟ್ಟುವದು

ಶಕ್ಯವೇನು? ಗುರುಗಳ ಯೋಗ್ಯತೆಯು ಹೊರಗೆ ಕಾಣುವಂಥದ್ದಲ್ಲ. ಒಳ ಹೊಕ್ಕು ತಿಳಿಯುವ ಯೋಗ್ಯತೆಯು ಶಿಷ್ಯನಿಗೆ ಇರುವದಿಲ್ಲ. ಆದ್ದರಿಂದ ಶಿಷ್ಯನು ಗುರುವನ್ನು ಹುಡುಕುವದು ಅಷ್ಟೇನೂ ಫಲಕಾರಿಯಲ್ಲ. ಒಂದೊಂದು ಸಂದರ್ಭದಲ್ಲಿ ಸರಿಯಾದ ಗುರುವೇ ಸಿಕ್ಕಿದರೂ ಸಿಕ್ಕಬಹುದು. ಆದರೆ ಒಳಗೆ ತಿರುಳಿಲ್ಲದ ಗುರುಗಳು ಸಿಕ್ಕುವದೇ ಬಹಳ. ಗುರುವೇ ಶಿಷ್ಯನನ್ನು ಹುಡುಕಿಕೊಂಡು ಬಂದರೆ ಮಾತ್ರ ಚೆನ್ನಾಗುವದು. ಏಕೆಂದರೆ ಶಿಷ್ಯನ ಯೋಗ್ಯತೆಯನ್ನು ತಿಳಿಯುವ ಕೌಶಲ್ಯವು ಗುರುವಿಗಿರುವದು. ಆದರೆ ಹಾಗೆ ಸರಿಯಾದ ಗುರುವೇ ತಮ್ಮ ಬಳಿಗೆ ತಾನಾಗಿ ಬರುವದಕ್ಕೇನು ಮಾಡಬೇಕು? ಇದಕ್ಕೆ ದಾರಿಯಿದೆ.

"ಯಾವನ್ನಾನುಗ್ರಹಃ ಸಾಕ್ಷಾಜ್ಜಾಯತೇ ಪರಮೇಶ್ವರಾತ್ ।
ತಾವನ್ನ ಸದ್ಗುರುಂ ಕಶ್ಚಿತ್ಸಚ್ಛಾಸ್ತ್ರಮಪಿ ವಿಂದತಿ ॥"

ಎಂಬದೊಂದು ವಾಕ್ಯವಿದೆ. ಇದರ ತಾತ್ಪರ್ಯವೇನೆಂದರೆ- "ಸಾಕ್ಷಾತ್ತಾಗಿ ಪರಮೇಶ್ವರನ ಅನುಗ್ರಹವಾಗುವವರೆಗೂ ಯಾರಿಗೂ ಸದ್ಗುರುವೂ ಸಿಕ್ಕುವದಿಲ್ಲ; ಸಚ್ಛಾಸ್ತ್ರವೂ ತಿಳಿಯುವದಿಲ್ಲ." ಇದನ್ನು ವಿಚಾರಮಾಡಿದರೆ ನಮಗೆ ಸದ್ಗುರು ದೊರೆಯಬೇಕಾದರೆ ದೇವರನುಗ್ರಹವು ಬೇಕು. ಹಾಗಾದರೆ ಮಾತ್ರ ಸರಿಯಾದ ಗುರು ದೊರೆಯುತ್ತಾನೆ. ಆದ್ದರಿಂದ ನಾವು ಎಡೆಬಿಡದೆ ದೇವರಿಗೆ ಶರಣುಹೋಗುತ್ತಿರಬೇಕು. ದೇವರನ್ನು ನಾವು ಒಲಿಸಿಕೊಂಡರೆ ಗುರು ತಾನಾಗಿ ನಮಗೆ ಒಲಿದುಬರುವನು. ಆಮೇಲೆ ನಾವು ಯಾವ ಅಪಾಯವೂ ಇಲ್ಲದೆ ಪಾರಾಗುವೆವು.

## ಅನುಭವವಿಲ್ಲದವರ ಉಪದೇಶ.

ನಮಗೆ ದೊರೆಯುವ ಕಪಟಿಗಳಾದ ಗುರುಗಳು ಎರಡು ಬಗೆಯಾಗಿರುತ್ತಾರೆ. ಒಂದು ಬಗೆಯವರು ಹೆಚ್ಚು ಬಾಯಿಬಿಡದೆ ಕೇವಲ ಮಾನಸಿಕವಾದ ಅನುಗ್ರಹದಿಂದಲೇ ಶಿಷ್ಯರನ್ನು ಉದ್ಧಾರಮಾಡುತ್ತೇವೆಂಬ ಬಿರುದನ್ನು ತೊಟ್ಟು ಬಹುಮಟ್ಟಿಗೆ ಮೌನವ್ರತದಿಂದಲೇ ತಮ್ಮ ಪ್ರತಿಷ್ಠೆಯನ್ನು ರಕ್ಷಣೆ ಮಾಡಿಕೊಳ್ಳುತ್ತಾರೆ. ಮೌನದಿಂದಲೇ ಶಿಷ್ಯರ ಉದ್ಧಾರವು ಹೇಗೆ ಆದೀತೆಂದರೆ–

“ಗುರೋಸ್ತು ಮೌನಂ ವ್ಯಾಖ್ಯಾನಂ ಶಿಷ್ಯಾಸ್ತು ಛಿನ್ನಸಂಶಯಾಃ ||”

ಎಂಬ ವಾಕ್ಯವನ್ನುದಾಹರಿಸುತ್ತಾರೆ. ಗುರುವಿನ ಮೌನವೇ ವ್ಯಾಖ್ಯಾನವೆಂತಲೂ ಅದರಿಂದಲೇ ಶಿಷ್ಯರ ಸಂಶಯವೆಲ್ಲಾ ಕತ್ತರಿಸಿ ಹೋಗುತ್ತಿತ್ತೆಂತಲೂ ಮೇಲಿನ ವಾಕ್ಯದ ಅರ್ಥವು. ಇಂಥ ಪರಿಸ್ಥಿತಿಯೊಂದಿರುವದೇನೂ ಸುಳ್ಳಲ್ಲ. ಮೇಲಿನ ವಾಕ್ಯವು ಪರಮಾತ್ಮನ ದಕ್ಷಿಣಾಮೂರ್ತಿಯೆಂಬ ಗುರುಸ್ವರೂಪದ ವರ್ಣನೆಯಲ್ಲಿ ಬಂದಿದೆ. ದಕ್ಷಿಣಾಮೂರ್ತಿಗಳಿಗೆ ಇಚ್ಛಾಮಾತ್ರದಿಂದ ಶಿಷ್ಯನ ಮನಸ್ಸನ್ನೇ ತಿದ್ದುವಂಥ ಸಾಮರ್ಥ್ಯವಿತ್ತು. ಇಂಥದ್ದೊಂದು ದಾಹರಣೆಯುಂಟೆಂದು ಕಂಡಕಂಡವರೆಲ್ಲಾ ಅದನ್ನೊಂದು ವ್ರತವಾಗಿ ಸ್ವೀಕರಿಸುವದು ಸಾಹಸದ ಮಾತು. ಏಕೆಂದರೆ ಅದು ದೊಡ್ಡವರನ್ನು ಅಣಕಿಸಿದಂತೆ ಆಗುವದು. ಸ್ವಭಾವವಾಗಿ ಈ ಪರಿಸ್ಥಿತಿಯಲ್ಲಿರುವ ಸಾಧುಗಳ ಪ್ರಭಾವವು ಉಚ್ಚತರಗತಿಗೆ ಸೇರಿದ್ದು. ಏಕೆಂದರೆ ಯಾರು ಇಚ್ಛಾಮಾತ್ರದಿಂದಲೇ ಶಿಷ್ಯರ ಸಂಶಯಗಳನ್ನು ಕಳೆಯುವರೋ ಅವರ ಉಪದೇಶದಲ್ಲಿನ್ನೆಷ್ಟು ಮಹತ್ತ್ವವಿರಬಹುದೆಂಬದನ್ನು ಹೇಳಬೇಕಾದದ್ದೇ ಇಲ್ಲ. ಯಾರು ಇನ್ನೂ ಉಚ್ಚಸ್ಥಿತಿಯ ಮೆಟ್ಟಿಲನ್ನು ಏರಿಲ್ಲವೋ ಅಂಥ ಸಾಧುಗಳು ತಮ್ಮ ಶಿಷ್ಯರನ್ನು ವಾಗ್ರೂಪವಾದ ಉಪದೇಶದಿಂದ ಉದ್ಧರಿಸುತ್ತಾರೆ. ಯಾರ ಹೃದಯದಲ್ಲಿ ಮಂಜನ್ನು ಹಿಡಿದು ಹುಡುಕಿದರೂ ಭಗವತ್ತ್ವರೂಪವಿಷಯಕವಾದ ಉದಾತ್ತವಿಚಾರಗಳೊಂದಾದರೂ ಇರುವದಿಲ್ಲವೋ ಅಂಥವರು ಮೌನದಿಂದ ಶಿಷ್ಯರನ್ನುದ್ಧರಿಸುವೆವೆಂದು ಡಂಗುರವನ್ನು ಹೊಡೆಯುವದು ಅವರ ಯೋಗ್ಯತೆಗೆ ಮೀರಿದ ಮಾತು. ಇಂಥ ಗುರುಗಳಿಂದ ಉಪಯೋಗವಿಲ್ಲ. ಬುದ್ಧಿವಂತರಾದ ಯಾರೂ ಬಹು ಮಟ್ಟಿಗೆ ಇದರ ಬಲೆಗೆ ಬೀಳುವ ಸಂಭವವು ಕಡಿಮೆಯಾದರೂ ಶ್ರದ್ಧಾಳುಗಳಾದ ಸಾಮಾನ್ಯರು ಇವರ ಶಿಷ್ಯರಾಗಿರುವದಕ್ಕೆ ಒಯಸುವದುಂಟು. ಇದಕ್ಕೆ ಮೋಸಹೋಗದೆ ಇರಬೇಕಾದರೆ ಅಧ್ಯಾತ್ಮವಿಷಯಕವಾದ ವಿಚಾರದ ಜಾಗರೂಕತೆ ಇದ್ದ ಹೊರತು ಅವರಲ್ಲಿ ಗುರುತ್ವವನ್ನಿಡುವದು ಪ್ರಯೋಜನಕರವಲ್ಲವೆಂಬುದನ್ನು ಎಲ್ಲರೂ ಸೆರಗಿನಲ್ಲಿ ಗಂಟು ಹಾಕಿಕೊಂಡಿರಬೇಕು.

ಇನ್ನೊಂದು ಬಗೆಯ ಗುರುಗಳಿದ್ದಾರೆ. ಮೇಲಿನ ಬಗೆಯವರಲ್ಲಿ ಮೌನದ ಅತಿಪ್ರಮಾಣವಿರುವಂತೆ ಇವರಲ್ಲಿ ವಾಚಾಲತ್ವದ ಅತಿಪ್ರಮಾಣ

ವಿರುವದು. ವೇದಾಂತಶಾಸ್ತ್ರವೆಲ್ಲಾ ಇವರಿಗೆ ಕರತಲಾಮಲಕವಾಗಿರುವದು. ಅಂಥವರು ತಮ್ಮ ಉಪದೇಶದಿಂದ ಜನಸಮಾಜವನ್ನೆಲ್ಲಾ ಚಿತ್ರದ ಬೊಂಬೆಗಳನ್ನಾಗಿ ಮಾಡಿಬಿಡುವರು. ಬರೀ ಶಾಸ್ತ್ರದ ಅಧ್ಯಯನದಿಂದ ತನಗೇ ಶಾಂತಿಯುಂಟಾಗುವದಿಲ್ಲ; ಅಂಥವನು ತನ್ನ ಶಿಷ್ಯರಿಗೆ ಶಾಂತಿಯನ್ನು ತಂದುಕೊಡುವದಿನ್ನೇನು! ಪುಸ್ತಕದ ಓದೆಲ್ಲಾ ಬರೀ ನಾಮಮಾತ್ರ. ಅದರ ಅರ್ಥವನ್ನೆಲ್ಲ ಕೃತಿಯಲ್ಲಿ ತಂದುಕೊಳ್ಳುವ ಪ್ರಯತ್ನವನ್ನು ಮಾಡಬೇಕೆನ್ನುವವನಿಗೆ ಓದುಗಾರಿಕೆಯು ಪ್ರಯೋಜನಕರವೇ ಹೊರತು ಬರೀ ಓದುಗಾರಿಕೆಗೆ ಬೆಲೆ ಇಲ್ಲ. ಇದು ನಮ್ಮ ಕೈಗಂಟಿನ ಮಾತಲ್ಲ. ಛಾಂದೋಗ್ಯೋಪನಿಷತ್ತಿನ ಏಳನೇ ಅಧ್ಯಾಯವನ್ನು ನೋಡಿರಿ. ನಾರದರು ಸನತ್ಕುಮಾರರ ಬಳಿಗೆ ಆತ್ಮಜ್ಞಾನಾರ್ಥಿಗಳಾಗಿ ಬಂದಿದ್ದಾರೆ. ಇದುವರೆಗೆ ಆಗಿರುವ ಅಭ್ಯಾಸವೇನೆಂದು ಸನತ್ಕುಮಾರರು ಕೇಳಿದ್ದಾರೆ. ಆಗ ನಾರದರು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಇತಿಹಾಸ, ಪುರಾಣ, ವ್ಯಾಕರಣ, ಶ್ರಾದ್ಧಕಲ್ಪ, ಗಣಿತ, ಉತ್ಪಾತಜ್ಞಾನ ನಿಧಿಶಾಸ್ತ್ರ, ತರ್ಕಶಾಸ್ತ್ರ, ನೀತಿಶಾಸ್ತ್ರ, ನಿರುಕ್ತ, ಭೂತತಂತ್ರ, ಧನುರ್ವೇದ ಜ್ಯೋತಿಷ, ಗಾರುಡ, ನೃತ್ಯಗೀತವಾದ್ಯ ಶಿಲ್ಪಾದಿಗಳು— ಇವುಗಳನ್ನೆಲ್ಲಾ ತಿಳಿದಿದ್ದೇನೆಂದು ಹೇಳಿ ಇವುಗಳ ಶಬ್ದಾರ್ಥವು ಮಾತ್ರ ತನಗೆ ತಿಳಿದಿರುವದೆಂದೂ ಆತ್ಮಜ್ಞಾನವಾಗಿಲ್ಲವೆಂದೂ ಅದ್ದರಿಂದ ದುಃಖಿತನಾಗಿ ಬಂದಿರುವೆನೆಂದೂ ಹೇಳಿದ್ದಾರೆ. ಆಮೇಲೆ ಅವರಿಗೆ ಸನತ್ಕುಮಾರರು ಬ್ರಹ್ಮೋಪದೇಶವನ್ನು ಮಾಡಿದ್ದಾರೆ. ಇಷ್ಟೆಲ್ಲ ಶಾಸ್ತ್ರಗಳನ್ನು ಮಗುಚಿಹಾಕಿದ ನಾರದರಿಗೇ ಆಗ ಜ್ಞಾನವಾಗಿರಲಿಲ್ಲವೆಂದ ಮೇಲೆ ಎಲ್ಲಿಯೋ ಒಂದೆರಡು ಹಾಳೆಗಳನ್ನು ಮಗುಚಿಹಾಕಿ ಬಾಯಿಬಡಿಯುವವರಲ್ಲಿನ್ನೇನು ಹುರುಳಿದ್ದೀತು? ನಮ್ಮಲ್ಲಿ ಆತ್ಮಜ್ಞಾನವೆಂಬುವದು ಮಾತುಗಳ ಮೂಟೆಯಲ್ಲಿ. ಅದು ಅನುಭವಸ್ವರೂಪವು. ಬರೀ ಮಾತುಗಳಿಂದ ಕವೆ ಶಾಂತಿಯು ಹೇಗೆ ಇದ್ದೀತು? ಜಲಪ್ರಲಯವಾಗುವ ಮಳೆಯಾಗುವದೆಂಬ ಮಾತುಗಳಿಂದ ತುಂಬಿದ ಪಂಚಾಂಗವನ್ನು ಹಿಂಡಿದರೆ ಒಂದು ತೊಟ್ಟಾದರೂ ನೀರು ಬಂದೀತೆ? ಬ್ರಹ್ಮವಸ್ತು ಬರೀ ಓದಿಗೆ ದಕ್ಕುವಂಥದ್ದಲ್ಲ.

"ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ"

ಎಂದು ಶ್ರುತಿಯೇ ಹೇಳುತ್ತದೆ. ಬಹಳವಾದ ಹೇಳಿಕೆಯೂ ಬಹಳವಾದ ಕೇಳಿಕೆಯೂ ಬುದ್ಧಿಯೂ ಆತ್ಮಜ್ಞಾನವನ್ನು ನಿಲುಕಿಸಿಕೊಳ್ಳಲಾರವು. ಆದ್ದರಿಂದ ಬರೀ ವಕ್ತೃತ್ವಸಾಮರ್ಥ್ಯದ ಮೇಲೆ ಗುರುತ್ವವನ್ನಿಡುವದೂ ಯೋಗ್ಯವಲ್ಲ. ಈ ಬರೀ ಮಾತುಗಾರರೇ ಎಲ್ಲಾ ಕಾಲದಲ್ಲಿಯೂ ಹೆಚ್ಚು ಸಂಖ್ಯೆಯುವರಾಗಿರುವರು. ಅದರಲ್ಲಿಯೂ

"ಕಲೌ ವೇದಾಂತಿನೋ ಭಾಂತಿ ಫಾಲ್ಗುನೇ ಬಾಲಕಾ ಇವ"

ಎಂಬ ವಾಕ್ಯದಲ್ಲಿ ಹೇಳಿರುವಂತೆ ಕಲಿಯುಗದ ಪ್ರಭಾವವಾಗಿ, ಫಾಲ್ಗುನ ಮಾಸದ ಬಾಲಕರು ಹೋಳಿಯ ಹಬ್ಬದಲ್ಲಿ ತಮಗೆ ಅನುಭವವಿಲ್ಲದ ಮಾತುಗಳನ್ನೇ ಸೂರೆಮಾಡುತ್ತಿರುವ ಹಾಗೆ, ನಮ್ಮ ವೇದಾಂತಿಗಳೂ ಬೇಕಾದಷ್ಟು ವೇದಾಂತದ ಮಾತುಗಳ ಅಂಗಡಿಯನ್ನಿಡುತ್ತಾರೆ. ಈ ಬಣಮಾತಿಗೆ ಮುಕ್ತಿಯು ದಕ್ಕುವದಿಲ್ಲವೆಂದು ಶ್ರೀಸರ್ಪಭೂಷಣ ಶಿವಯೋಗಿಗಳು ಎಚ್ಚರಿಸುವದೇನೆಂದರೆ—

ರಾಗ— ಶಂಕರಾಭರಣ.

ಬಾಯ ಬ್ರಹ್ಮವ ನುಡಿದನುಭವವಿಲ್ಲದ ।
ಮಾಯಾವಾದಿಗೆ ಮೋಕ್ಷವೆಂತೆಂದಿಗಹುದೆ? ॥ಪ॥
ತಿರುಕರಂಗಡಿ ಬೀದಿಯೊಳಗೆ ಕೂಡುತೆ ರಾಜ ।
ದರಮನೆಯೊಳ ಸುದ್ದಿಗಳ ನಾಡುವಂತೆ ॥
ಅರಿಯದೆ ಪರವಸ್ತುವಿನ ಗೊತ್ತುಗುರಿಯನು ।
ಒರಿಯುರಾಡುವ ಮಾತ ಕಿವಿಯೊಳು ಕೇಳಿ ॥೧॥
ಕೊರಳುದ್ದ ನೆಲದಿ ಹೂಳಿಸಿಕೊಂಡು ಗಗನದ ।
ಪರಿಯಂತ ಹಾರುವೆನೆನುತಿಹನಂತೆ ॥
ಮರೆದಾತ್ಮನನುವ ಸಂಸ್ಕೃತಿಬಂಧದೊಳು ಸಿಲ್ಕಿ ।
ಪೊರಗೆ ಜನರ ಮೆಚ್ಚಿಸುವ ಹೆಮ್ಮೆಯಿಂದ ॥೨॥
ಕುರುಡರೆಲ್ಲರು ಗೂಂಬೆಯಾಡುವಲ್ಲಿಗೆ ಬಂದು ।
ನೆರೆದವರೊಳು ತಾವು ನಗುತಿರುವಂತೆ ॥
ಗುರುಸಿದ್ಧನಿರವು ಮಾನಸಕೆ ಗೋಚರವಿಲ್ಲ ।
ದಿರುತೆ ಸುಮ್ಮನೆ ಹೊತ್ತ ಕಳೆಯುವ ನವದಿ ॥೩॥

ಈ ಸಂಬಂಧಕ್ಕೆ ಒಪ್ಪುವ ಶ್ರೀರಾಮಕೃಷ್ಣಪರಮಹಂಸರ ಉಪದೇಶಗಳೇ ನೆಂದರೆ—

(೧) ಈಗಿನ ಕಾಲದ ಧರ್ಮೋಪದೇಶಕರ ಉಪದೇಶದ ಪದ್ಧತಿಯು ಒಬ್ಬನಿಗೆ ಮಾತ್ರ ಸಾಕಾಗುವಷ್ಟು ಆಹಿಗೆ ಇರುವಾಗ ನೂರಾರು ಜನರಿಗೆ ಔತಣವನ್ನು ಹೇಳಿದ ಹಾಗೆ ಕಾಣುತ್ತದೆ. ಧರ್ಮಸಂಬಂಧವಾದ ಅನು ಭವವು ಅತ್ಯಲ್ಪವಾಗಿದ್ದರೂ ದೊಡ್ಡ ಧರ್ಮೋಪದೇಶಕನೆಂದು ಹೇಳಿಕೊ ಳ್ಳುವದು ಒಳ್ಳೇ ನಗೆಯ.

(೨) ಮಂಜುಗಡ್ಡೆಯ ಹೆಸರನ್ನು ಕೇಳಿರುವವರು ಬಹುಜನರಿ ದ್ದರೂ ನೋಡಿರುವವರು ಅಷ್ಟಿರುವದಿಲ್ಲ. ಧರ್ಮೋಪದೇಶಕರಲ್ಲಿಯೂ ಪರಮಾತ್ಮನ ಗುಣವಿಶೇಷಗಳ ವಿಷಯದಲ್ಲಿ ಪುಸ್ತಕಪಾಠವನ್ನು ಮಾಡಿರು ವವರು ಬಹಳ ಜನರಿದ್ದರೂ ಅವರ ಜೀವಮಾನದಲ್ಲಿಂದೂ ಅವುಗಳಲ್ಲೊಂ ದನ್ನಾದರೂ ಅನುಭವಕ್ಕೆ ತೆಗೆದುಕೊಂಡವರು ವಿರಳ. ಮಂಜುಗಡ್ಡೆ ಯನ್ನು ಕಣ್ಣಿಂದ ಕಂಡವರಲ್ಲಿಯೂ ಎಷ್ಟೋ ಜನರು ಅದರ ರುಚಿಯನ್ನು ನೋಡಿರುವದಿಲ್ಲ. ಹಾಗೆಯೇ ಧರ್ಮೋಪದೇಶಕರಲ್ಲಿ ಭಗವದ್ದರ್ಶನವ ಒಂದು ಸಾರೆಯಾದರೂ ಇದ್ದವರಲ್ಲಿಯೂ ಎಷ್ಟೋ ಜನರಿಗೆ ಅದರ ರಹ ಸ್ಯವು ವ್ಯಕ್ತವಾಗಿರುವದಿಲ್ಲ. ಮಂಜುಗಡ್ಡೆಯನ್ನು ಸವಿದವನು ಮಾತ್ರ ಅದು ಹೇಗಿರುವದೆಂಬುದನ್ನು ಹೇಳಬಲ್ಲನು. ಹಾಗೆಯೇ ಯಾವನು ಪರಮಾತ್ಮನಿಗೆ ಒಮ್ಮೆ ಸೇವಕನಂತೆಯೂ ಆಮೇಲೆ ಸ್ನೇಹಿತನಂತೆಯೂ ಆಮೇಲೆ ಭಕ್ತನಂತೆಯೂ ಕೊನೆಗೆ ಅವನಲ್ಲಿ ಐಕ್ಯವಾಗಿಯೂ ಬೇರೆ ಬೇರೆ ರೀತಿಗಳಿಂದ ಅವನ ಸಹವಾಸದಲ್ಲಿರುತ್ತಾನೋ ಅವನು ಮಾತ್ರ ಪರಮಾ ತ್ಮನ ಗುಣವಿಶೇಷಗಳನ್ನು ವರ್ಣಿಸಬಲ್ಲನು.

(೩) ರಣಹದ್ದು ವಾಯುಮಂಡಲದಲ್ಲಿ ಮೇಲೆ ಮೇಲೆ ಗಗನಕ್ಕೆ ಹಾರುತ್ತದೆ; ಆದರೆ ಯಾವಾಗಲೂ ಕೊಳೆತ ಹೆಣಗಳನ್ನು ಹುಡುಕುತ್ತ ಶ್ಮಶಾನದ ಕಡೆಗೇ ಲಕ್ಷ್ಯವನ್ನಿಟ್ಟಿರುತ್ತದೆ. ಹಾಗೆಯೇ ಪುಸ್ತಕಪಾಠಗ ಳಾದ ಪಂಡಿತರು ದಿವ್ಯಜ್ಞಾನದ ವಿಷಯವಾಗಿ ವಾಗ್ವೈಖರಿಯನ್ನು ತೂರಿ ಬಿಡುವರು. ಆದರೆ ಅದೆಲ್ಲ ಬರೀ ಮಾತು. ಯಾಕೆಂದರೆ ಅವರ ಮನಸ್ಸು ಯಾವಾಗಲೂ ತಮ್ಮ ವಿದ್ವತ್ತಿಗೆ ಪ್ರತಿಫಲವಾಗಿ ಹಣವನ್ನು ಘನತೆ

ಯನ್ನೂ ಅಧಿಕಾರವನ್ನೂ ಹೇಗೆ ಪಡೆಯಬೇಕೆಂಬ ಆಲೋಚನೆಯಲ್ಲಿಯೆ ಇರುವದು.

## ಸದ್ಗುರುಗಳ ಲಕ್ಷಣ.

ಬೇಕಾದಷ್ಟು ವಿಚಾರಗಳನ್ನು ಹೇಳುವದಕ್ಕೆ ಗೊತ್ತಿರುವದು ಹೊರತು ಗುರುವಿನಲ್ಲಿ ಇನ್ನೇನು ಯೋಗ್ಯತೆ ಇರಬೇಕೆಂಬದನ್ನು ತಿಳಿದುಕೊಳ್ಳಬೇಕಾದರೆ ಭಗವಂತನ

" ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ "

ಎಂಬ ಮಾತಿನ ಕಡೆಗೆ ಲಕ್ಷ್ಯವನ್ನು ಕೊಡಬೇಕು. ಭಗವಂತನು ಸಾಮಾನ್ಯವಾಗಿ "ಜ್ಞಾನಿಗಳು ನಿನಗೆ ಉಪದೇಶವನ್ನು ಮಾಡುವ"ರೆಂದಿಷ್ಟು ಮಾತ್ರ ಹೇಳದೆ ಮೇಲಿನ ವಾಕ್ಯದಲ್ಲಿ ಜ್ಞಾನಿಗಳೆಂಬ ಮಾತಿಗೆ ತತ್ತ್ವದರ್ಶಿಗಳೆಂಬ ಒಂದು ವಿಶೇಷಣವನ್ನಿಟ್ಟಿರುವನು. ಆ ವಿಶೇಷಣದಲ್ಲಿ ಬಹಳ ಮಹತ್ತ್ವವಿದೆ. ಜ್ಞಾನಿಗಳು ಬಹಳ ಜನರಿರುತ್ತಾರೆ. ತತ್ತ್ವದರ್ಶಿಗಳಿರುವದು ಕಡಿಮೆ. ವೇದಾಂತಗ್ರಂಥಗಳ ಅಧ್ಯಯನವನ್ನು ಮಾಡಿದವರೆಲ್ಲಾ ಜ್ಞಾನಿಗಳೇ. ಅವರಿಗೆ ಪರಮಾತ್ಮನ ಸಂಬಂಧವಾದ ಪರೋಕ್ಷಜ್ಞಾನವಾಗಿಯೇ ಇರುವದು. ಪಾಪ! ಅವರು ಉಳಿದ ವ್ಯಾವಹಾರಿಕವಿಚಾರಗಳನ್ನೆಲ್ಲ ಬಿಟ್ಟು ವೇದಾಂತವನ್ನೇ ತಿಳಿದುಕೊಂಡಿರುವ ಶ್ರಮೆಗೆ ಪ್ರತಿಫಲವಾಗಿ ಅವರಿಗೆ ಜ್ಞಾನಿಗಳೆಂಬ ಬಿರುದಾದರೂ ಬೇಡವೆ? ಅವರು ಜ್ಞಾನಿಗಳು; ಆದರೆ ಅವರಿಗೆ ಶಿಷ್ಯರನ್ನುದ್ಧಾರಮಾಡುವ ಸಾಮರ್ಥ್ಯವಿಲ್ಲ. ಆ ಸಾಮರ್ಥ್ಯವು ಬರಬೇಕಾದರೆ ಅವರು ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದವರಾಗಬೇಕು. ಬರೀ ಅಧ್ಯಯನವನ್ನು ಮಾಡಿರುವವರಿಂದಲಾದರೂ ಅನೇಕವಿಚಾರಗಳನ್ನು ತಿಳಿದುಕೊಳ್ಳುವದಕ್ಕಾಗುತ್ತದೆ. ಅಷ್ಟರ ಮಟ್ಟಿಗೆ ಅವರನ್ನು ಉಪಯೋಗಮಾಡಿಕೊಳ್ಳಬಹುದು.

" ಯುಕ್ತಿಯುಕ್ತಂ ವಚೋ ಗ್ರಾಹ್ಯಂ ಬಾಲಾದಪಿ ಶುಕಾದಪಿ "

ಎಂದು ನಮ್ಮಲ್ಲಿ ನೀತಿಶಾಸ್ತ್ರವುಂಟು. ಯೋಗ್ಯವಾದ ಮಾತನ್ನು ಹುಡುಗನಿಂದಲೂ ಕೊನೆಗೆ ಗಿಣಿಯಿಂದಲೂ ಕೂಡ ಗ್ರಹಿಸತಕ್ಕದ್ದು. ಹೀಗಿರುವಾಗ ಅಧ್ಯಯನವನ್ನು ಮಾಡಿದವರಿಂದ ನಮಗೆ ಅಷ್ಟಿಷ್ಟಾದರೂ ಉಪ

ಯೋಗವಾಗದೆ ಹೇಗೆ ಹೋದೀತು! ಇದು ಬರೀ ಉಪಚಾರದ ಮಾತಲ್ಲ. ಭಾಗವತದಲ್ಲಿ ಒಬ್ಬ ಅವಧೂತರು ಭೂಮಿ, ವಾಯು, ಆಕಾಶ, ಜಲ, ಅಗ್ನಿ, ಚಂದ್ರ, ಸೂರ್ಯ, ಪಾರಿವಾಳ, ಹೆಬ್ಬಾವು, ಸಮುದ್ರ, ಪತಂಗ, ಜೇನುಹುಳು, ಆನೆ, ಬೇಡರು, ಜಿಂಕೆ, ಮೀನ, ಪಿಂಗಳೆಯೆಂಬ ವೇಶ್ಯೆ, ಕುರರಪಕ್ಷಿ, ಸಣ್ಣ ಮಗು, ಒಬ್ಬ ಕನ್ಯೆ, ಲೋಹಕಾರ, ಹಾವು, ಜೇಡರಹುಳು, ದುಂಬಿ— ಹೀಗೆ ಇಪ್ಪತ್ನಾಲ್ಕು ಗುರುಗಳನ್ನು ಮಾಡಿಕೊಂಡಿದ್ದರೆಂದು ಕಥೆಯಿದೆ. ಆ ಅವಧೂತರು ಆ ಇಪ್ಪತ್ನಾಲ್ಕು ವಸ್ತುಗಳಿಂದಲೂ ಉಪದೇಶಗ್ರಹಣವನ್ನು ಮಾಡಿದ್ದಾರೆ. ಅವುಗಳ ವಿವರವೇನೆಂದರೆ—

ಎಷ್ಟು ತುಳಿದರೂ ಭೂಮಿ ಬೇಸರಗೊಂಡು ಓರೆಯಾಗದಿರುವದರಲ್ಲಿ ಕ್ಷಮಾಗುಣವು ಕಾಣುತ್ತದೆ. ವಾಯು ಸುಗಂಧಗಳನ್ನು ಅಂಟಿಸಿಕೊಳ್ಳದಿರುವದನ್ನು ನೋಡಿದರೆ ಶೀತೋಷ್ಣಗಳನ್ನು ಸಹನಮಾಡಬೇಕೆಂಬುದು ತಿಳಿಯುತ್ತದೆ. ಆಕಾಶವು ಎಲ್ಲೆಲ್ಲಿಯೂ ವ್ಯಾಪಿಸಿದ್ದರೂ ಯಾವದಕ್ಕೂ ಅಂಟಿಕೊಳ್ಳದೆ ಇರುವದರಿಂದ ಅದರಂತೆ ಪರಮಾತ್ಮನಿರುವನೆಂದು ಸೂಚನೆಯಾಗುತ್ತದೆ. ನೀರು ಸ್ವಚ್ಛವಾಗಿಯೂ ಮಧುರವಾಗಿಯೂ ಇರುವದನ್ನು ನೋಡಿದರೆ ತಾನು ಶುಚಿಯಾಗಿಯೂ ಮಧುರಭಾಷಿಯಾಗಿಯೂ ಇರಬೇಕೆನಿಸುತ್ತದೆ. ಅಗ್ನಿಯು ಭಸ್ಮದಲ್ಲಿ ಮರೆಸಿಕೊಂಡಿದ್ದು ಹವಿಸ್ಸನ್ನು ಕೊಟ್ಟಾಗ ತನ್ನ ತೇಜಸ್ಸನ್ನು ತೋರುವದರಿಂದ ಯೋಗಿಯು ತನ್ನ ಮಹಿಮೆಯನ್ನು ಮುಚ್ಚಿಕೊಂಡಿದ್ದು ಅವಶ್ಯಸಮಯಗಳಲ್ಲಿ ಮಾತ್ರ ಹೊರಪಡಿಸಬಹುದೆಂಬದನ್ನು ಗ್ರಹಿಸಬೇಕು. ಚಂದ್ರನ ಕಳೆಗಳಿಗೆ ಸಂಭವಿಸುವ ವೃದ್ಧಿಕ್ಷಯಗಳು ಆ ಚಂದ್ರನಿಗಿಲ್ಲವೆಂಬುದನ್ನು ನೋಡಿದರೆ ವಿಕಾರಗಳೆಲ್ಲ ದೇಹಮಾತ್ರಕ್ಕಲ್ಲದೆ ಆತ್ಮನಿಗಿಲ್ಲವೆಂದು ಊಹಿಸಬಹುದು. ಸೂರ್ಯನು ಭೂಮಿಗೆ ಮಳೆಯನ್ನು ಕೊಡುವದಕ್ಕಾಗಿ ಕಿರಣಗಳಿಂದ ನೀರನ್ನು ಸೆಳೆದುಕೊಳ್ಳುವದನ್ನು ನೋಡಿದರೆ ಪರೋಪಕಾರದಲ್ಲಿ ದೃಷ್ಟಿಯುಂಟಾಗುವದು. ಬಲೆಯಲ್ಲಿ ಬಿದ್ದ ಮರಿಗಳನ್ನು ನೋಡಿ ಅತಿಸ್ನೇಹದಿಂದ ಅವುಗಳ ತಂದೆತಾಯಿಗಳಾದ ಪಾರಿವಾಳಗಳು ತಾವೂ ಬಲೆಯಲ್ಲಿ ಬಿದ್ದು ನಾಶವಾದ ಕಥೆಯನ್ನು ಕೇಳಿದರೆ ಅತಿಸ್ನೇಹವನ್ನು ಮಾಡಬಾರದೆಂಬ ಭಾವನೆ ಬರುವದು. ತನ್ನ ಬಳಿಗೆ ಬಂದದ್ದನ್ನು ಮಾತ್ರ

ತಿಸ್ನುವ ಹೆಬ್ಬಾವಿನಿಂದ ತನಗೆ ದೊರೆತಷ್ಟರಲ್ಲಿಯೇ ತೃಪ್ತನಾಗಬೇಕೆಂಬ ದನ್ನು ಕಲಿಯಬಹುದು. ಎಷ್ಟು ನದಿಗಳು ಬಂದು ಬಿದ್ದರೂ ಉಬ್ಬದೆ, ಎಂಥ ಬೇಸಿಗೆಯಲ್ಲಿಯೂ ತಗ್ಗದೆ ಇರುವ ಸಮುದ್ರದಿಂದ ಸುಖದುಃಖಗಳಲ್ಲಿ ಸಮತ್ವದಿಂದಿರುವದನ್ನರಿಯಬಹುದು. ಪತಂಗಗಳು ಬೆಳಕನ್ನು ತಮ್ಮ ಆಹಾರವೆಂದು ಭ್ರಮಿಸಿ ದೀಪಕ್ಕೆ ಮುತ್ತಿ ಸಾಯುವದನ್ನು ನೋಡಿ ಭೋಗ್ಯವಸ್ತುಗಳ ಮೆರುಗಿಗೆ ವಶರಾಗದೆ ಇರಬಹುದು. ಜೇನುನೊಣಗಳು ಕೂಡಿಟ್ಟ ಜೇನು ಇತರರ ಪಾಲಾಗುವದನ್ನು ಕಂಡರೆ ನಾವು ಆಹಾರದ್ರವ್ಯವನ್ನು ಕೂಡಿ ಹಾಕಬಾರದೆಂಬ ಬುದ್ಧಿಯು ಹುಟ್ಟಬಹುದು. ಹುಲ್ಲಿನಿಂದ ಮುಚ್ಚಿದ ಹಳ್ಳದ ಮೇಲೆ ಮರದಿಂದ ಮಾಡಿ ನಿಲ್ಲಿಸಿರುವ ಹೆಣ್ಣಾನೆಯನ್ನು ನೋಡಿ ಗಂಡಾನೆಗಳು ಅದರ ಮೇಲಿನ ಆಸೆಯಿಂದ ಹೋಗಿ ಕೊರಕಲಿಗೆ ಬೀಳುವದನ್ನು ಮನಸ್ಸಿಗೆ ತಂದುಕೊಂಡರೆ ಸ್ತ್ರೀಪುರುಷರ ಸಂಬಂಧವಾದ ಕಾಮವಿಕಾರಕ್ಕೆ ವಶನಾಗಬಾರದೆಂಬ ಎಚ್ಚರಿಕೆ ಹುಟ್ಟಬಹುದು. ಜೇನುನೊಣಗಳು ಕೂಡಿಟ್ಟ ಜೇನು ಬೇಡನಿಗೆ ಅನಾಯಾಸವಾಗಿ ಲಭಿಸುವಂತೆ ಗೃಹಸ್ಥರು ಸಂಗ್ರಹಿಸಿದ ಭೋಜನವು ಯೋಗಿಗೆ ಅನಾಯಾಸವಾಗಿ ದೊರೆಯುವದೆಂದು ತೋರಬಹುದು. ಜಿಂಕೆಯು ಬೇಟೆಗಾರರ ಗಾನಕ್ಕೆ ಮರುಳಾಗಿ ಅವರ ಕೈಗೆ ಸಿಕ್ಕಿ ಸಾಯುವದನ್ನು ನೆನೆಸಿಕೊಂಡರೆ ಗ್ರಾಮ್ಯಗೀತಗಳ ಕಡೆಗೆ ಕಣ್ಣುಹಾಕಬಾರದೆಂಬರ್ಥವು ಸ್ಫೂರ್ತಿಯಾಗಬಹುದು. ಮೀನುಗಳು ಗಾಳವನ್ನು ಕಚ್ಚಿ ಬೆಸ್ತರ ಕೈಗೆ ಸಿಕ್ಕಿ ಸಾಯುವದನ್ನು ನೋಡಿದರೆ ಯೋಗಿಯು ರಸನೇಂದ್ರಿಯವನ್ನು ಜಯಿಸದಿದ್ದರೆ ಹಾನಿಯಾಗುವದೆಂದು ಸ್ಪಷ್ಟವಾಗುವದು. ಪಿಂಗಳೆ ಎಂಬ ವೇಶ್ಯೆಯು ನಿರಾಶಳಾಗಿ ವಿರಕ್ತಳಾದ ಕಥೆಯನ್ನು ಕೇಳಿದರೆ ಆಸೆಯನ್ನು ತೊರೆಯುವದೇ ಪರಮಸುಖವೆಂದು ಎದ್ದು ಕಾಣುವದು. ಒಂದು ಕುರರವೆಂಬ ಪಕ್ಷಿ ಕೊಕ್ಕಿನಲ್ಲಿ ಮಾಂಸದ ತುಂಡನ್ನು ಕಚ್ಚಿಕೊಂಡಿರುವವರೆಗೂ ಅದರ ರಕ್ಷಣೆಯ ಚಿಂತೆಯಿಂದಲೇ ತೊದರುತ್ತಿದ್ದು ಗಿಡಗವು ಆ ಮಾಂಸವನ್ನು ಹಾರಿಸಿಕೊಂಡು ಹೋದ ಮೇಲೆ ನಿರ್ಭಯದಿಂದ ಸುಖವಾಗಿರುವದನ್ನು ನೋಡಿದರೆ ಯಾವದಾದರೊಂದು ವಸ್ತುವಿನಲ್ಲಿ ಅಭಿಮಾನವಿರುವವರೆಗೂ ಭಯವು ತಪ್ಪದೆಂದು ವ್ಯಕ್ತವಾಗುವದು.

ಮಗುವಿಗೆ ನಿಶ್ಚಿಂತೆಯಿಂದ ಸುಖಿಸಿರುವದನ್ನು ನೋಡಿ ಯೋಗಿಯು ನಿಶ್ಚಿಂತನಾಗಿರಬೇಕೆಂದು ಹೇಳಬಹುದು. ಒಬ್ಬ ಕನ್ಯೆಯು ಒಳಗೆ ಬತ್ತವನ್ನು ಕುಟ್ಟುವಾಗ ಬಳೆಗಳ ಸದ್ದಾಗುತ್ತಿದ್ದುದರಿಂದ ಅದು ಹೊರಗೆ ತನ್ನನ್ನು ಮದುವೆಮಾಡಿಕೊಳ್ಳುವದಕ್ಕೆ ಬಂದಿರುವವರಿಗೆ ಕೇಳಿಸಬಾರದೆಂದು ಹೆಚ್ಚಿನ ಬಳೆಗಳನ್ನು ಒಡೆದು ಒಂದನ್ನು ಮಾತ್ರ ಉಳಿಸಿಕೊಂಡ ಕಥೆಯಿಂದ ಯೋಗಸಿದ್ಧಿಯು ಪ್ರತಿಬಂಧಕವಿಲ್ಲದಿರಬೇಕಾದರೆ ಏಕಾಂತವಾಸವಗತ್ಯವೆಂದು ಗೊತ್ತಾಗಬಹುದು. ಕೋಹುಗಾರನು ಅಲಗಿಗೆ ಹದವನ್ನು ಕೊಡುವಾಗ ಪಕ್ಕದಲ್ಲಿ ಹೋಗುತ್ತಿರುವ ಚಕ್ರವರ್ತಿಯನ್ನಾದರೂ ತಲೆಯೆತ್ತಿ ನೋಡದಿರುವಂತೆ ಯೋಗಿಯು ಭಗವಂತನಲ್ಲಿ ನಟ್ಟ ಮನಸ್ಸುಳ್ಳವನಾಗಬೇಕೆಂದು ಜಿಜ್ಞ ಹೇಳಿದಂತಾಗುವದು. ಇರುವೆಗಳು ಕಟ್ಟಿದ ಗೂಡಿನಲ್ಲಿ ಹಾವು ಅಡಗಿಕೊಂಡಿರುವಂತೆ ಯೋಗಿಯು ಇತರರು ಕಟ್ಟಿದ ಮನೆಗಳಲ್ಲಿ ಎಲ್ಲಿಯಾದರೂ ಕಾಲವನ್ನು ಕಳೆದರಾಯಿತೆಂದು ನಿಶ್ಚಯಿಸಿಕೊಳ್ಳಬಹುದು. ಜೇಡರ ಹುಳು ಬಲೆಯನ್ನು ಹೊರಗೆಡಹಿ ಒಳಗೆ ಸೆಳೆದುಕೊಳ್ಳುವ ಪದ್ಧತಿಯಿಂದ ಪರಮಾತ್ಮನು ಹೀಗೆಯೇ ತನ್ನಿಂದಲೇ ಜಗತ್ತನ್ನು ಹೊರಗೆಡಹಿ ಆಮೇಲೆ ಅದನ್ನು ತನ್ನೊಳಗೇ ಅಡಗಿಸಿಕೊಂಡುಬಿಡುವನೆಂದು ಯೋಚಿಸಬಹುದು. ಕಣಜದ ಹುಳುವಿನಿಂದ ಕುಕ್ಕಿಸಿಕೊಳ್ಳುತ್ತಿರುವಂಥ ಒಂದು ಕೀಟವು ಮರಣಭಯದಿಂದ ಆ ಕಣಜವನ್ನೇ ಚಿಂತಿಸುತ್ತ ಕೊನೆಗೆ ತಾನೂ ಆ ಕಣಜದ ರೂಪವನ್ನೇ ಹೊಂದುವಂತೆ ಯೋಗಿಯು ಬ್ರಹ್ಮಧ್ಯಾನದಿಂದ ಬ್ರಹ್ಮಸಾರೂಪ್ಯವನ್ನೇ ಹೊಂದಬಹುದೆಂದು ನಿರ್ಣಯಿಸಬಹುದು. ಈ ಎಲ್ಲ ವಾಕ್ಯಗಳನ್ನೂ ಆ ಅವಧೂತನು ಉಪಯೋಗಮಾಡಿಕೊಂಡನು. ಹೀಗೆ ಯಾರಿಂದ ಉಪದೇಶಗ್ರಹಣಮಾಡುವದಕ್ಕೂ ಅಡ್ಡಿ ಇಲ್ಲ. ಆದರೆ ಈ ಬಗೆಯ ವಿಚಾರಗಳ ಸಹಾಯವನ್ನು ಮಾಡುವವರೆಲ್ಲಾ ಸಾಮಾನ್ಯ ಗುರುಗಳು. ಆತ್ಮಸ್ವರೂಪವನ್ನು ಕಣ್ಣಿಗೆ ಕಟ್ಟಿದ ಹಾಗೆ ತೋರಿಸಬಲ್ಲಗುರುಗಳಿಗೆ ಸದ್ಗುರುಗಳೆಂದು ಹೆಸರು. ಸದ್ಗುರುವನ್ನು ಮನುಷ್ಯಮಾತ್ರನೆಂದು ತಿಳಿಯಬಾರದು.

"ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।
ಗುರುಸ್ಸಾಕ್ಷಾತ್ಪರಬ್ರಹ್ಮ ತಸ್ಮೈ ಶ್ರೀಗುರವೇ ನಮಃ ॥"

ಎಂದು ಗುರುಗೀತೆಯಲ್ಲಿ ಹೇಳಿರುವಂತೆ ಸದ್ಗುರು, ಬ್ರಹ್ಮವಿಷ್ಣುಮಹೇಶ್ವರಸ್ವರೂಪನಾಗಿರುವನಲ್ಲದೆ ಆ ತ್ರಿಮೂರ್ತಿಗಳಿಗೂ ಅಧಿಷ್ಠಾನಸ್ವರೂಪನಾದ ಸಾಕ್ಷಾತ್ಪರಮಾತ್ಮನ ಸ್ವರೂಪನೇ ಆಗಿರುವನು. ಆದ್ದರಿಂದ ಸದ್ಗುರುವಿನ ಅನುಗ್ರಹವೇ ಪರಮಾತ್ಮನ ಅನುಗ್ರಹ. ಭಕ್ತಿಯೋಗದಲ್ಲಿ ನಾವು ನಮ್ಮ ಪ್ರೇಮಪ್ರವಾಹವನ್ನೆಲ್ಲಾ ಅವನ ಕಡೆಗೆ ಹರಿಸಿದ್ದಕ್ಕೆ ಪ್ರತಿಫಲವಾಗಿ ಪರಮಾತ್ಮನು ಸದ್ಗುರುಸ್ವರೂಪದ ಮೂಲಕ ತನ್ನ ಪ್ರೇಮಪ್ರವಾಹವನ್ನು ನಮ್ಮ ಮೇಲೆ ಹರಿಸುವನು. ಅದರಿಂದ ನಮ್ಮ ಉದ್ಧಾರವಾಗುವದು.

ಉಪನಿಷತ್ತು, ಭಾಗವತ-ಮೊದಲಾದ ಅನೇಕ ಕಡೆಗಳಲ್ಲಿ ಹೇಳಿರುವ ಸದ್ಗುರುಗಳ ಲಕ್ಷಣಗಳನ್ನೆಲ್ಲಾ ಸಮಾಲೋಚನೆ ಮಾಡಿದರೆ ಸದ್ಗುರುಗಳ ಲಕ್ಷಣವು ಶ್ರೀರಾಮಕೃಷ್ಣಪರಮಹಂಸರ ಭಾಷೆಯಂತೆ ಮುಖ್ಯವಾಗಿ ಕಾಮಿನೀಕಾಂಚನಗಳ ಅಭಿಮಾನವನ್ನು ತೊರೆದಿರುವವರಲ್ಲಿ ವ್ಯಕ್ತವಾಗುವದು. ಕಾಮಿನೀಕಾಂಚನಗಳ ಅಭಿಮಾನವಿರುವದೇ ಬಂಧವು. ಅವುಗಳ ವಿಷಯದಲ್ಲಿ ನಿರಭಿಮಾನವೇ ಮೋಕ್ಷವು. ಏಕೆಂದರೆ

"ವೇಧಾ ದ್ವೇಧಾ ಭ್ರಮಂ ಚಕ್ರೇ ಕಾಂತಾಸು ಕನಕೇಷು ಚ ।
ತಾಸು ತೇಷ್ವಪ್ಯನಾಸಕ್ತಃ ಸಾಕ್ಷಾದ್ಭರ್ಗೋ ನರಾಕೃತಿಃ ॥"

ಎಂದು ಒಬ್ಬ ಕವಿ ಹೇಳಿದ್ದಾನೆ. "ಬ್ರಹ್ಮನು ಭ್ರಾಂತಿಯನ್ನು ಕಾಮಿನೀಕಾಂಚನ-ಎಂಬೆರಡು ಬಗೆಯಾಗಿ ಮಾಡಿದ್ದಾನೆ; ಆವೆರಡರಲ್ಲಿಯೂ ಅನಾಸಕ್ತನಾದರೆ ಅವನು ಮನುಷ್ಯಾಕೃತಿಯಲ್ಲಿರುವ ಪರಮೇಶ್ವರನೇ ಸರಿ" ಎಂದು ಅದರ ತಾತ್ಪರ್ಯ. ಆದ್ದರಿಂದ ಆವೆರಡರ ವಿಷಯವಾದ ನಿರಭಿಮಾನವೇ ಮೋಕ್ಷವು. ಈಗಿನವರ ಮನಸ್ಸಿಗೆ ಬೇಗ ಹಿಡಿಯುವಂಥ ಉದಾಹರಣೆಯನ್ನು ಆರಿಸಬೇಕಾದರೆ ಶ್ರೀರಾಮಕೃಷ್ಣಪರಮಹಂಸರು ಮೊದಲು ಬರುವರು. ಇವರು ಮೊದಲು ಮದುವೆಯಾಗಿದ್ದರು. ಆಮೇಲೆ ವಿರಕ್ತರಾಗಿ ಸಂನ್ಯಾಸಿಗಳಾದರು. ಹೀಗೆ ಸಂನ್ಯಾಸಿಗಳಾದ ಮೇಲೆ ಇವರ ಪೂರ್ವಾಶ್ರಮದ ಹೆಂಡತಿಯು ತನ್ನ ಗಂಡನ ದರ್ಶನಕ್ಕೆ ಬಂದಳು.

ಆಗ ಪರಮಹಂಸರು ಆಕೆಯನ್ನು ಕಂಡೊಡನೆ ಅವರ ಮನಸ್ಸಿನಲ್ಲಿ ಭಗವತಿಯಾದ ಆದಿಶಕ್ತಿಯು ನೆನಪಾಗಿ ಅವರು ಆಕೆಗೆ ನಮಸ್ಕಾರವನ್ನು ಮಾಡಿ ಆಮೇಲೆ ತನ್ನ ಪೂರ್ವದ ಸಂಬಂಧವು ಉಳಿದಿಲ್ಲವೆಂದು ತಿಳಿಸಿ ಹೇಳಿದರು. ಆ ಸಾಧ್ವಿಯು ತಾನು ಶಿಷ್ಯಳಾಗಿರುವೆನೆಂದು ಹೇಳಿದಳು. ಹಾಗಾಗಬಹುದೆಂದು ಪರಮಹಂಸರು ಆ ಮಾತಿಗೆ ಸಂತೋಷದಿಂದ ಒಪ್ಪಿದರು. ಮುಂದೆ ಆಕೆ ಹಾಗೆಯೇ, ಶಿಷ್ಯಳಾಗಿಯೇ, ತನ್ನ ಜೀವಿತಯಾತ್ರೆಯನ್ನು ಸಾಗಿಸಿದಳು. ಈ ಸಂದರ್ಭವನ್ನು ಅನುಮೋದಿಸುವದಕ್ಕೆ ಮೊದಲು, ವಿಚಾರಮಾಡುವದು ಅವಶ್ಯಕವಾಗಿದೆ. ಏಕೆಂದರೆ ಸಂನ್ಯಾಸಿಗಳು ಪತ್ನಿಯ ಮುಖವನ್ನು ನೋಡಬಾರದೆಂದು ಲೋಕದಲ್ಲಿ ಹೇಳುತ್ತಾರೆ. ಹೀಗಿರುವಾಗ ಅವರು ಆಕೆಯನ್ನು ಶಿಷ್ಯಳನ್ನಾಗಿ ಪರಿಗ್ರಹಿಸಿದ್ದು ಹೇಗೆ ಯೋಗ್ಯವಾದೀತೆಂದು ಮನಸ್ಸಿನಲ್ಲಿ ಒಂದು ಸಂಶಯವು ಮೊಳೆದೋರುವ ಸಂಭವವುಂಟು. ಸಂಶಯವನ್ನು ಮನಸ್ಸಿನಲ್ಲಿಟ್ಟುಕೊಂಡು ಯಾವದಕ್ಕೂ ಮೆಚ್ಚಿಗೆಯನ್ನು ತೋರಿಸಬಾರದು. ಸಂನ್ಯಾಸಿಗಳು ಪತ್ನಿಯ ಮುಖವನ್ನು ನೋಡಬಾರದೆಂಬುವದು ಸಾಧಕರಾದ ಸಂನ್ಯಾಸಿಗಳಿಗೆ ಹೇಳಿದ ಮಾತು. ಸಾಧಕರಾಗಿರುವ ಸ್ಥಿತಿಯಲ್ಲಿ ಪತ್ನಿಯ ಮುಖವನ್ನು ನೋಡಿದರೆ ಪೂರ್ವಸಂಬಂಧವೆಲ್ಲಾ ನೆನಪಾಗಿ ಮತ್ತೆ ಅವನಿಗೆ ಆ ಕಡೆಗೆ ಹೊರಳುವ ಇಚ್ಛೆಯಾದೀತೆಂದು ಆ ನಿಯಮವೇರ್ಪಟ್ಟಿರುವದು. ಅದರ ಭಯವಿಲ್ಲದವರಿಗೆ ಆ ನಿಯಮದ ಅವಶ್ಯಕತೆ ಇಲ್ಲ. ಶ್ರೀರಾಮಕೃಷ್ಣಪರಮಹಂಸರು ಕೆಲವು ದಿವಸ ಸ್ತ್ರೀವೇಷಧಾರಿಗಳು ಕೂಡ ಆಗಿ ತಾವು ಗಂಡಸರೆಂಬ ಭಾವನೆಯನ್ನು ಸಂಪೂರ್ಣವಾಗಿ ಪ್ರಯತ್ನಪೂರ್ವಕವಾಗಿ ಕಳೆದುಕೊಂಡು ಸಿದ್ಧರಾದವರು. ಅವರಿಗೆ ಆಕೆಯ ಮುಖದ ದರ್ಶನದ್ದೇನು ಭಯ? ಇದರ ಮೇಲೆ ಅವರು ಆಕೆಯನ್ನು ತಮ್ಮ ಪತ್ನಿಯೆಂದು ನೋಡುತ್ತಲೇ ಇರಲಿಲ್ಲ. ಆದ್ದರಿಂದ ಅವರು ಸಂನ್ಯಾಸಾಶ್ರಮದ ನಿಯಮವನ್ನು ಮುರಿದಂತೆಯೂ ಆಗಲಿಲ್ಲ. ಆ ಸ್ತ್ರೀಯನ್ನು ನೋಡಿದ ಮಾತ್ರಕ್ಕೇ ಪತ್ನಿಯ ಮುಖವನ್ನು ನೋಡಿದಂತೆ ಆಗುವದಿಲ್ಲ. ಆ ಸ್ತ್ರೀಯ ಮುಖವು ಈಶನಿಂದ ಸೃಷ್ಟವಾದದ್ದು. ಅದರಲ್ಲಿ ಯಾವ ದೋಷವೂ ಇಲ್ಲ. ದೋಷವಿರುವದೆಲ್ಲಾ ಜೀವಸೃಷ್ಟವಾದ ವಸ್ತುವಿನಲ್ಲಿಯೇ. ಆ ಸ್ತ್ರೀಯನ್ನೆ ಒಬ್ಬನು

ಮಗಳೆಂದು ನೋಡುತ್ತಾನೆ; ಒಬ್ಬನು ಸೊಸೆಯೆಂದು ತಿಳಿಯುತ್ತಾನೆ; ಒಬ್ಬನು ಹೆಂಡತಿಯೆಂದು ಭಾವಿಸುತ್ತಾನೆ; ಒಬ್ಬನು ತಾಯಿಯೆಂದು ಗೌರವಿಸುತ್ತಾನೆ. ಆಕೆಯನ್ನು ಮಗಳೆಂದೂ ಸೊಸೆಯೆಂದೂ ಹೆಂಡತಿಯೆಂದೂ ತಾಯಿಯೆಂದೂ ಕಲ್ಪನೆ ಮಾಡಿಕೊಂಡದ್ದೆಲ್ಲ ಜೀವಸೃಷ್ಟಿ. ಇದೇ ಬಂಧಕವಾದದ್ದು. ಇದರಿಂದಲೇ ಒಬ್ಬೊಬ್ಬನ ಪ್ರೇಮಸ್ವರೂಪವು ಒಂದೊಂದು ರೂಪವನ್ನು ಪಡೆದು ಒಂದೊಂದು ರೀತಿಯಲ್ಲಿ ಒಬ್ಬನಿಗೆ ಸುಖಕಾರಕವಾಗಿಯೂ ಇನ್ನೊಬ್ಬನಿಗೆ ದುಃಖಕಾರಕವಾಗಿಯೂ ಆಗುವದು. ಜಗತ್ತಿನ ದುಃಖಕ್ಕೆಲ್ಲ ಈ ಮನೋಮಯಸ್ವರೂಪವೇ ಕಾರಣವು. ಒಬ್ಬ ಗೃಹಸ್ಥನ ಮಗನು ಪರಸ್ಥಲಕ್ಕೆ ಹೋಗಿ ಸುಖವಾಗಿದ್ದರೂ ಅಲ್ಲಿ ಸರ್ಪಮಿಥುನವನ್ನು ನೋಡಿದ್ದರಿಂದಲೋ ಏನೋ ಅದರ ಅರಿಷ್ಟವನ್ನು ಕಳೆದುಕೊಳ್ಳಲು ತನ್ನ ತಂದೆಗೆ ತನ್ನ ಮರಣವಾರ್ತೆಯನ್ನು ಕಳುಹಿಸುತ್ತಾನೆ. ಅಲ್ಲಿ ಆ ತಂದೆಯು ತನ್ನ ಎದೆಯನ್ನು ಬಡಿಬಡಿದುಕೊಂಡು ತಲೆಯನ್ನು ಚಚ್ಚಿಕೊಳ್ಳುತ್ತಿರುತ್ತಾನೆ. ಏಕೆಂದರೆ ಈಶಸೃಷ್ಟನಾದ ಮಗನು ಬದುಕಿದ್ದರೂ ಆ ಗೃಹಸ್ಥನ ಮನೋಮಯನಾದ ಮಗನು ಸತ್ತಿರುತ್ತಾನೆ. ಹೀಗೆ ಜಗತ್ತಿನ ದುಃಖಕ್ಕೆಲ್ಲ ಮನೋಮಯಸೃಷ್ಟಿಯೇ ಕಾರಣವು. ಮನೋಮಯಸೃಷ್ಟಿಯನ್ನು ಬಿಟ್ಟುಬಿಟ್ಟರೆ ಅಪಾಯದ ಭಯವಿಲ್ಲ. ನಮ್ಮ ಪರಮಹಂಸರು ಮನೋಮಯಸೃಷ್ಟಿಯನ್ನು ಬಿಟ್ಟವರು; ಆದ್ದರಿಂದ ಅವರಿಗೆ ಸ್ತ್ರೀಸಾನ್ನಿಧ್ಯವು ಅಪಾಯಕರವಲ್ಲ. ಮನಸ್ಸು ಯಾವಾಗ ಏನನ್ನು ಸೃಷ್ಟಿಮಾಡೀತೋ ಎಂಬ ದಿಗಿಲು ಇರುವವರು ಯಾರೂ ಇಂಥ ಆಳವಾದ ನೀರಿಗೆ ಇಳಿಯಬಾರದು. ಹೀಗೆ ಶ್ರೀರಾಮಕೃಷ್ಣಪರಮಹಂಸರಲ್ಲಿ ಕಾಮಿನಿಯ ವಿಷಯಕವಾದ ಭ್ರಮೆಯ ಅಭಾವವು ವ್ಯಕ್ತವಾಯಿತು.

ಕಾಂಚನದ ಭ್ರಮೆಯ ಅಭಾವವೂ ಅವರಲ್ಲಿ ಉಜ್ಜ್ವಲವಾಗಿ ಬೆಳಗುವದು. ಅವರು ಹಣಕಾಸನ್ನು ಹತ್ತಿರಕ್ಕೆ ಕೂಡ ಬರಗೊಡಿಸುತ್ತಿರಲಿಲ್ಲ. ಸ್ತ್ರೀಯನ್ನು ಹೇಗೆ ಬಿಟ್ಟಿದ್ದರೋ ಹಣಕಾಸನ್ನೂ ಹಾಗೆಯೇ ಬಿಟ್ಟಿದ್ದರು. ಆದರೆ ಒಂದು ದಿವಸ ಸಂಜೆಯಲ್ಲಿ ಉಪಾಯಾಂತರದಿಂದ ಅವರಿಗೆ ಒಂದು ನಾಣ್ಯವನ್ನು ಸಲ್ಲಿಸಬೇಕೆಂದು ಒಬ್ಬನು ಅದನ್ನು ಅವರ ಹಾಸಿಗೆಯ ಕೆಳಗೆ ಯಾರಿಗೂ ಕಾಣದಂತೆ ಇಟ್ಟುಹೋದನು. ಆ ರಾತ್ರಿಯೆಲ್ಲಾ ಅ

ರಿಗೆ ಆ ಹಾಸಿಗೆಯ ಮೇಲೆ ನಿದ್ರೆಯೇ ಹತ್ತಲಿಲ್ಲ. ಬೆಳಗಾದ ಮೇಲೆ ಹಾಸಿಗೆಯನ್ನು ತೆಗೆಸಿದಾಗ ಆ ನಾಣ್ಯವು ಕಣ್ಣಿಗೆ ಬಿತ್ತು. ರಾತ್ರಿಯೆಲ್ಲಾ ಇದೇ ಮೆಯ್ಯನ್ನು ಚುಚ್ಚಿ ನಿದ್ರೆಯನ್ನು ಕೆಡಿಸಿತೆಂದು ಆಗ ಅದನ್ನು ಹೊರಕ್ಕೆ ಹಾಕಿಸಿದರೆಂದು ಅವರ ಇತಿಹಾಸಕಾರರು ಹೇಳುತ್ತಾರೆ. ಇದರಿಂದ ಅವರ ಕಾಂಚನದ ನಿರಭಿಮಾನವನ್ನು ಗ್ರಹಿಸಬಹುದು. ಕಾಮಿನಿಯನ್ನು ಶಿಷ್ಯಳೆಂದು ಮುಟ್ಟುತ್ತಿದ್ದವರು ಕಾಂಚನಕ್ಕೆಷ್ಟೇಕೆ ಹೆದರುತ್ತಿದ್ದರೆಂದರೆ ಅದಕ್ಕೆ ಕಾರಣವುಂಟು. ಅವರ ಶಿಷ್ಯಳಾದ ಕಾಮಿನಿಯು ಶುದ್ಧ ಮನಸ್ಕಳಾಗಿದ್ದಳು. ಆದ್ದರಿಂದ ಅವಳನ್ನು ಈಶಸೃಷ್ಟಿಯ ವಸ್ತುವೆಂಬ ದೃಷ್ಟಿಯಿಂದ ಮುಟ್ಟುವುದರಿಂದ ಬಂಧಕವಿರಲಾರದು. ಈ ನಾಣ್ಯವು ಬರೀ ಈಶಸೃಷ್ಟಿಯದಾಗಿರಲಿಲ್ಲ. ಅದರ ಈಶಸೃಷ್ಟಿಯ ರೂಪದ ಜೊತೆಗೆ ಅದನ್ನು ಪರಮಹಂಸರಿಗೆ ಸಲ್ಲಿಸಬೇಕೆಂಬ ಆ ಗೃಹಸ್ಥನ ಮನೋಮಯಸೃಷ್ಟಿಯ ರೂಪವೂ ಕೂಡಿಕೊಂಡಿತ್ತು. ಆ ಮನೋಮಯ ರೂಪವು ಪರಮಹಂಸರ ಮೆಯ್ಗೆ ಚುಚ್ಚುತ್ತಿತ್ತು. ಪರಮಹಂಸರ ಮನಸ್ಸು ಮಾತ್ರವೇ ಅಲ್ಲದೆ ಶರೀರದ ಪ್ರತಿಯೊಂದು ಕಣವೂ ಅಪರಿಗ್ರಹವ್ರತದಲ್ಲಿ ನಿಷ್ಠವಾಗಿದ್ದುದರಿಂದ ಅವರ ಮಾಂಸಪೇಶಿಗಳು ಕೂಡ ಆ ನಾಣ್ಯದ ಸ್ಪರ್ಶವನ್ನು ಸಹಿಸಲಿಲ್ಲ.

ಧನದ ವಿಷಯದಲ್ಲಿ ಮನೋಮಯಸೃಷ್ಟಿಯನ್ನು ಮಾಡಿಕೊಳ್ಳದಿರುವ ವಿಚಾರವು ಕಬೀರನ ಚರಿತ್ರೆಯಲ್ಲಿ ಕಾಣುತ್ತದೆ. ಒಮ್ಮೆ ಮುಂದೆ ಕಬೀರನೂ ಹಿಂದೆ ಅವನ ಮಗನಾದ ಕಮಾಲನೂ ಹೋಗುತ್ತಿದ್ದರು. ದಾರಿಯಲ್ಲಿ ಕಬೀರನಿಗೆ ಒಂದು ಚಿನ್ನದ ನಾಣ್ಯವು ಕಾಣಿಸಿತು. ತನ್ನ ಮಗನು ಅದನ್ನು ಕಂಡು ಅದರ ಮೇಲೆ ಮನೋಮಯಸೃಷ್ಟಿಯನ್ನು ಮಾಡಿಕೊಂಡಾನೆಂದು ಕಬೀರನು ಹೋಗುತ್ತ ಹೋಗುತ್ತಲೇ ತನ್ನ ಕಾಲಿನಿಂದ ಅದರ ಮೇಲೆ ಮಣ್ಣನ್ನು ಮುಚ್ಚಿದನು. ಅದನ್ನು ನೋಡುತ್ತಿದ್ದ ಕಮಾಲನು ಆ ಸ್ಥಲಕ್ಕೆ ಬಂದೊಡನೆ ಆ ಮಣ್ಣನ್ನು ತನ್ನ ಕಾಲಿನಿಂದ ಕೆದರಿ ಇಲ್ಲಿ ಮಣ್ಣನ್ನು ಹಾಕಿದ ಕಾರಣವೇನೆಂದು ತಂದೆಯನ್ನು ಕೇಳಿದನು. ಆಗ ತಂದೆಯು ಆ ಚಿನ್ನದ ನಾಣ್ಯದ ವಿಷಯವನ್ನು ಹೇಳಬೇಕಾಗಿ ಬಂತು. ಅದನ್ನು ಕೇಳುತ್ತಲೇ ಕಮಾಲನು ಅದು ಬೆಲೆಯುಳ

ಚೆನ್ನಪ್ಪೆಂಬ ಮನೋಮಯಸೃಷ್ಟಿಯನ್ನು ಮಾಡಿಕೊಂಡಷ್ಟೇ ತಪ್ಪೆಂದು ಹೇಳುತ್ತ ಮುಂದೆ ತನ್ನ ದಾರಿಯನ್ನು ಹಿಡಿದನಂತೆ. ಸದ್ಗುರುಗಳು ಈ ರೀತಿಯಲ್ಲಿ ಕಾಮಿನೀಕಾಂಚನಗಳ ವಿಷಯದಲ್ಲಿ ಮನೋಮಯಸೃಷ್ಟಿಯನ್ನು ಮಾಡಿಕೊಳ್ಳದವರಾಗಿರತಕ್ಕದ್ದು ಬಹು ಅಗತ್ಯ.

ಸದ್ಗುರುಗಳಲ್ಲಿರಬೇಕಾದ ಇನ್ನೊಂದು ಮುಖ್ಯ ಗುಣವೇನೆಂದರೆ ಅವರು ಪೂರ್ವಸಂಪ್ರದಾಯವನ್ನು ಹಿಡಿದವರಾಗಿರಬೇಕು. ಆರ್ಯಧರ್ಮದಲ್ಲಿ ಅನೇಕ ಸಂಪ್ರದಾಯಗಳಿರುವವು ನಿಜ. ಯಾವ ಸಂಪ್ರದಾಯವನ್ನು ಹಿಡಿದರೂ ಚಿಂತೆ ಇಲ್ಲ. ಅವೆಲ್ಲ ನಿರ್ಭಯವಾದ ದಾರಿಗಳು. ಉಪನಿಷತ್ತಿನಲ್ಲಿ ಬಂದಿರುವ ಉಪದೇಶಗಳು ಕೂಡ ಪರಂಪರೆಯ ಸಂಪ್ರದಾಯಗಳನ್ನು ಹಿಡಿದೇ ಬಂದಿವೆ. ಈಶಾವಾಸ್ಯೋಪನಿಷತ್ತಿನಲ್ಲಿ ನೋಡಿರಿ—

"ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ"

ಎಂದರೆ ನಮಗೆ ಉಪದೇಶವನ್ನು ಮಾಡಿದಂಥ ಮಹಾಬುದ್ಧಿಶಾಲಿಗಳ ಮುಖದಿಂದ ನಾವು ಹೀಗೆ ಕೇಳಿರುವೆವೆಂದರ್ಥ.

ಹೀಗೇಕೆ ಸಂಪ್ರದಾಯವನ್ನು ಹಿಡಿಯಬೇಕೆಂದರೆ ಅದು ಅನೇಕರು ಹೋಗಿ ಬಂದು ಸುಗಮವಾಗಿರುವ ಹಾದಿಯಾಗಿರುವದು. ಆ ದಾರಿಯನ್ನು ಹಿಡಿದರೆ ನಾವು ಮುಟ್ಟಬೇಕಾದ ಸ್ಥಲವನ್ನು ಅನಾಯಾಸವಾಗಿ ಮುಟ್ಟುವೆವು. ಹೊಸ ದಾರಿಯಾದರೆ ನಡುನಡುವೆ ತಪ್ಪುವ ಸಂಭವವೂ ಉಂಟು. ಮತ್ತು ಅದು ಸವೆದ ಹಾದಿಯಾಗಿರುವದಿಲ್ಲವಾದ್ದರಿಂದ ಹೋಗುವವರಿಗೆ ಶ್ರಮವಾಗುವದು. ಆ ಹೊಸಹೊಸ ದಾರಿಗಳು ಹಿಂದಿನವರಿಗೆ ಗೊತ್ತಿಲ್ಲವೆಂತ ಅಲ್ಲ. ಹಿಂದಿನವರು ಅನೇಕ ಮಾರ್ಗಗಳಲ್ಲಿ ನಡೆದು ನೋಡಿ ನೋಡಿ ಅವುಗಳಲ್ಲಿ ಅನುಕೂಲವಾದ ಹಾದಿಯನ್ನು ಆರಿಸಿ ಪರಂಪರೆಯನ್ನು ಮಾಡಿದ್ದಾರೆ. ಈಗಿನವರು ತಮ್ಮ ಬುದ್ಧಿಬಲದಿಂದ ಒಂದೊಂದು ಹಾದಿಯನ್ನು ಹೊಸದೆಂದು ಕಂಡುಹಿಡಿಯಬಹುದು. ಆದರೆ ಅದು ಹೊಸದಾಗಿರುವದಿಲ್ಲ. ಹಿಂದಿನವರ ರಾಜಮಾರ್ಗದ ಸುತ್ತಮುತ್ತಣ ಕಾಲುದಾರಿಯಾಗಿರುವದು. ಭಗವದ್ವಿಚಾರದಲ್ಲಿ ಹೊಸದನ್ನು ಕಂಡುಹಿಡಿಯುವದೇನೂ ಉಳಿದಿಲ್ಲ. ಭಗವಂತನು ಸೃಷ್ಟಿಯನ್ನು ಕೂಡ "ಯಥಾಪೂರ್ವಮಕಲ್ಪಯತ್" ಎಂಬ ಶ್ರುತಿಯಂತೆ ಹಿಂದಿನಂತೆಯೇ ಮಾಡು

ತ್ತಾನೆ. ಇವರು ಹೊಸ ದಾರಿಯನ್ನು ಕಂಡು ಹಿಡಿಯುವದಿನ್ನೇನು! ಸ್ವತಂತ್ರವಿಚಾರದಿಂದ ತಾವು ಹುಡುಕಿ ತೆಗೆದ ಹಾದಿಯಲ್ಲಿ ಜನರನ್ನು ಒಯ್ಯುವೆವೆಂಬ ಈ ಮಹಾತ್ಮರು ತಮ್ಮ ಶರೀರದಲ್ಲೇನಾದರೂ ಅಸ್ವಸ್ಥತೆಯಾದಾಗ ಹೊಸ ವೈದ್ಯನ ವೈದ್ಯವೆಂದರೆ ಗಾಬರಿಗೊಂಡು ಅನುಭವಶಾಲಿಗಳಾದ ವೈದ್ಯರಿಗೇ ಯಾಕೆ ಶರಣುಹೋಗುತ್ತಾರೆ? ಇವರ ಹೊಸ ಹಾದಿಯು ನಿಜವಾಗಿ ಸ್ವತಂತ್ರವಾದ ಹಾದಿಯೇ ಅಲ್ಲ. ಅದರದೊಂದಿಷ್ಟು ಇದರದೊಂದಿಷ್ಟು ಸೇರಿಸಿ ಹೊಸದೆಂದು ಒಂದು ದಾರಿಯನ್ನು ತೆಗೆದರೆ ಅದು–

"ವಿನಾಯಕಂ ಪ್ರಕುರ್ವಾಣೋ ರಚಯಾಮಾಸ ವಾನರಮ್"

ಎಂಬಂತಾಗುತ್ತದೆ. ಒಬ್ಬ ಒಣ್ಣಗಾರನು ಗಣಪತಿಯ ಹಬ್ಬದಲ್ಲಿ ಮಾರುವದಕ್ಕಾಗಿ ಗಣಪತಿಗಳನ್ನು ಮಾಡುವದಕ್ಕುಪಕ್ರಮಿಸಿ ತನ್ನದೊಂದು ಹೊಸ ಬಗೆಯಲ್ಲಿದ್ದರೆ ಎಲ್ಲರೂ ತನ್ನ ಬಳಿಗೇ ಬರುವರೆಂದು ಸೊಂಡಿಲನ್ನು ಮುಖದಲ್ಲಿಡದೆ ಪೃಷ್ಠಭಾಗಕ್ಕೆ ಅಂಟಿಸಿ ಹೊಸ ಬಗೆಯನ್ನು ಮಾಡಿದನು. ವಿವೇಕಿಗಳಾದ ಗೃಹಸ್ಥರು ಒಂದು ನೋಡಿ ಅವುಗಳನ್ನೆಲ್ಲಾ ಮಂಗಗಳೆಂದು ತಿಳಿದು ಹಿಂತಿರುಗಿ ಹೋದರು. ಹೀಗೆ ಈಗಿನವರು ಕಂಡು ಹಿಡಿಯುವ ಹೊಸ ದಾರಿಯೂ ತ್ಯಾಜ್ಯವೇ ಆಗಿರುವದು. ಇನ್ನು ಹೊಸದೆಂಬ ಪ್ರೀತಿಯಿಂದ ಆ ಮಂಗನನ್ನೇ ಗಣಪತಿಯೆಂದು ಭಾವಿಸಹೋದರೂ ವಿಘ್ನಗಳೆಂಬ ಮರಗಳನ್ನು ಮುರಿದು ಹಾಕುವದೆಂಬರ್ಥವನ್ನು ಕೊಡುವ ಆನೆಯ ಮುಖವೇ ಇಲ್ಲದ ಮೇಲೆ ಅಲ್ಲಿ ಗಣಪತಿಯ ಕಲ್ಪನೆ ಹೇಗೆ ಕೂಡೀತು? ಅದ್ದರಿಂದ ಸದ್ಗುರುಗಳಲ್ಲಿ ಪರಂಪರೆಯ ಶುದ್ಧಸಂಪ್ರದಾಯವಿರುವದನ್ನು ನೋಡಬೇಕು.

ಸದ್ಗುರುಗಳ ಲಕ್ಷಣದ ವಿಷಯವಾಗಿ ಶ್ರೀಸಮರ್ಥ ರಾಮದಾಸರು ತಮ್ಮ ದಾಸಬೋಧಗ್ರಂಥದಲ್ಲಿ ಹೇಳಿರುವದೇನೆಂದರೆ -

" ಸಭೆಯವರು ಬೆರಗಾಗುವಂತೆ ಮಾತಿನ ಸರಿಮಳೆಯನ್ನು ಕರೆಯುವವರೂ ಅನೇಕ ಮಂತ್ರತಂತ್ರಗಳನ್ನು ಹೇಳಿ ಚಮತ್ಕಾರವನ್ನು ಮಾಡುವವರೂ ಸದ್ಗುರುಗಳಲ್ಲ (೫-೨-೨). ಔಷಧಿಗಳನ್ನು ಹೇಳುವವರೂ ಸುವರ್ಣಧಾತುವಿನ ಮಾರ್ಗವನ್ನು ಹೇಳುವವರೂ ದೃಷ್ಟಿ

ಬಂಧನ ಮೊದಲಾದವುಗಳನ್ನು ಮಾಡುವವರೂ ಸದ್ಗುರುಗಳಲ್ಲ (ಶ-೨-೩). ಶಿಷ್ಯನಿಂದ ಸಾಧನವನ್ನು ಮಾಡಿಸದೆ ಇಂದ್ರಿಯದಮನವನ್ನು ಮೈಗೂಡಿಸದೆ ಇರುವ ಗುರುಗಳು ಕಾಸಿಗೆ ಮೂರಾಗಿ ಕೊಸರಿಗೆ ಸಿಕ್ಕಿದರೂ ಬಿಡಬೇಕು(ಶ-೨-೨೧). ಬಾಯಲ್ಲಿ ವೈರಾಗ್ಯವೂ ಕೃತಿಯಲ್ಲಿ ವಿಷಯಾಸಕ್ತಿಯೂ ಇರುವ ಗುರುವಿನಿಂದ ಏನೂ ಉಪಯೋಗವಿಲ್ಲ (ಶ–೨–೩೧). ಇದರ ಮೇಲೆ ಅಧ್ಯಾತ್ಮಶ್ರವಣವೂ ಹರಿಕಥಾನಿರೂಪಣವೂ ಪರಮಾರ್ಥವಿವರಣವೂ ಅವರಲ್ಲಿ ಯಾವಾಗಲೂ ಇರಬೇಕು (ಶ-೫-೪೭). ಗುರು ಸ್ವಜಾತಿಯವನಾಗಿರಬೇಕು; ಇಲ್ಲದಿದ್ದರೆ ತಪ್ಪದೆ ಹಾನಿಯಾಗುವದು(ಶ-೨-೬೪).

ಪೂರ್ಣತೆಯನ್ನು ಪಡೆದ ಸದ್ಗುರುಗಳ ಉಪದೇಶದ ವಿಷಯದಲ್ಲಿ ಶ್ರೀರಾಮಕೃಷ್ಣಪರಮಹಂಸರು ಹೇಳಿರುವದೇನೆಂದರೆ—

(೧) ದೀಪವು ಉರಿಯುತ್ತಿರುವಾಗ ಪತಂಗದ ಹುಳುಗಳು ಬರುತ್ತವೆ. ಅವು ಎಲ್ಲಿಂದ ಬರುತ್ತವೋ ಯಾರಿಗೂ ತಿಳಿಯದು. ಅವು ಅದರಲ್ಲಿ ಬಿದ್ದು ಸಾಯುತ್ತವೆ. ಪತಂಗದ ಹುಳುಗಳಿಗೆ ಈ ಗತಿಯಾಗಲೆಂದು ದೀಪವೇನೂ ಅಕ್ಷತೆಯನ್ನು ಕೊಟ್ಟು ಕರೆದಿರುವದಿಲ್ಲ. ಪೂರ್ಣತೆಯನ್ನು ಪಡೆದವರ ಉಪದೇಶವೂ ಇದರಂತೆಯೇ. ಅವರು ಇತರರನ್ನು ಬರಮಾಡಿಕೊಳ್ಳುವ ಗೋಜಿಗೆ ಹೋಗುವದಿಲ್ಲ. ಆದರೆ ಅವರ ಉಪದೇಶವನ್ನು ಕೇಳುವದಕ್ಕೆ ಸಾವಿರಾರು ಜನರು ತಮಗೆ ತಾವೇ ನುಗ್ಗಿ ಬರುತ್ತಾರೆ. ಯಾವ ಯಾವ ಕಡೆಯಿಂದ ಬರುತ್ತಾರೋ ಯಾರಿಗೂ ತಿಳಿಯುವದಿಲ್ಲ.

(೨) ಸ್ವಾಮಿ, ಉಪದೇಶಕರೆ, ಉಪದೇಶವನ್ನು ಮಾಡುವ ಅಧಿಕಾರವನ್ನು ಸೂಚಿಸುವ ಬಿರುದಿನ ಬಿಲ್ಲೆಯು ತಮಗೆ ಇದೆಯೊ? ರಾಜನ ಒಬ್ಬನೊಬ್ಬ ದಾಸಾನುದಾಸನು ರಾಜನಿಂದ ಅಧಿಕಾರವನ್ನು ಪಡೆದು ತನ್ನ ಬಿರುದಿನ ಬಿಲ್ಲೆಯು ಬಂದ ಮೇಲೆ ಜನರು ತನಗೆ ಸತ್ಕಾರಮಾನಾದಿಗಳನ್ನು ಮಾಡಿ ತನ್ನ ಉಪದೇಶವನ್ನು ಗೌರವಿಸುವಂತೆಯೂ ಉದ್ಧತರಾಗಿ ಹೋಗುವದಕ್ಕೆ ಬಂದರೆ ತಾನು ಅವರ ದರ್ಪಭಂಗವನ್ನು ಮಾಡಬಲ್ಲವನಾಗಿರುವಂತೆಯೂ ಪರಿಣಮಿಸುವ ಹಾಗೆ ಧರ್ಮಬೋಧೆಯನ್ನು ಮಾಡುವದಕ್ಕೆ ಹೊರಡಬೇಕಾದರೆ ಮೊದಲು ಭಗವದನುಜ್ಞೆಯನ್ನೂ ಬುದ್ಧಿಯೋಗವನ್ನೂ ಪಡೆಯಬೇಕು. ದೈವಿಕಬುದ್ಧಿಯೋಗವೆಂಬ ಬಿರುದಿನ

ಜ್ಞಾನವನ್ನು ಪಡೆದ ಹೊರತು ಸಾಯುವವರೆಗೆ ಉಪದೇಶಮಾಡಿದರೂ ವ್ಯರ್ಥವೆ.

(೩) ಯಥಾರ್ಥವಾದ ಉಪದೇಶದ ಲಕ್ಷಣವೇನು? ಇತರರಿಗೆ ಉಪದೇಶವನ್ನು ಮಾಡುವದಕ್ಕೆ ಬದಲಾಗಿ ಒಬ್ಬನು ಯಾವಾಗಲೂ ಭಗವದಾರಾಧನೆಯಲ್ಲಿಯೇ ನಿರತನಾಗಿದ್ದರೆ ಆ ಉಪದೇಶವೇ ಸಾಕು. ತನ್ನ ಮುಕ್ತಿಸಾಧನೆಗಾಗಿ ತಾನು ಹೆಣಗುವವನೇ ನಿಜವಾದ ಉಪದೇಶಕನು. ಕಮಲದ ಮೊಗ್ಗು ಅರಳುತ್ತ ಬಂದರೆ ಹೇಳದೆ ಕೇಳದೆ ಭ್ರಮರಗಳು ಎಲ್ಲ ಕಡೆಯಿಂದಲೂ ಬರುವವು.

(೪) ತುಪ್ಪವು ಕಾಯುವಾಗ ಕರಿಯಬೇಕಾದ ಹಸಿಯ ಭಕ್ಷ್ಯವನ್ನು ಅದರೊಳಕ್ಕೆ ಹಾಕಿರಿ. ಅದರಿಂದ ಒಂದು ಬಗೆಯ ಕುದಿಯುವ ಸದ್ದಾಗುವದು. ಅದು ಬೇಯುತ್ತ ಬಂದ ಹಾಗೆಲ್ಲ ಸದ್ದು ಕಡಿಮೆಯಾಗುತ್ತ ಹೋಗುವದು. ಸಂಪೂರ್ಣವಾಗಿ ಬೆಂದ ಮೇಲೆ ಗುಳ್ಳೆ ಮತ್ತು ನೊರೆ ಎಲ್ಲ ಅಡಗುತ್ತವೆ. ಮನುಷ್ಯನ ಜ್ಞಾನವು ಅಲ್ಪ ಪರಿಮಾಣದಲ್ಲಿರುವವರೆಗೂ ಅವನು ವ್ಯಾಖ್ಯಾನಗಳನ್ನು ಕೊಡುತ್ತ ಉಪದೇಶಗಳನ್ನು ಮಾಡುತ್ತ ಹೋಗುತ್ತಾನೆ. ಆದರೆ ಜ್ಞಾನದ ಪೂರ್ಣತೆಯನ್ನು ಪಡೆದ ಮೇಲೆ ಬಣ ನಡಗರವೆಲ್ಲಾ ನಿಂತು ಹೋಗುತ್ತದೆ.

## ಸಚ್ಛಿಷ್ಯನ ಲಕ್ಷಣ.

ಲೋಕದಲ್ಲಿ ಪುರುಷನು ಪ್ರಾಯಪ್ರಬುದ್ಧನಾಗಿದ್ದರೂ ಸಂತತಿಯು ಬೆಳೆಯಬೇಕಾಗಿದ್ದರೆ ಸ್ತ್ರೀಯು ಕೂಡ ಹೇಗೆ ಪ್ರಾಯಪ್ರಬುದ್ಧಳಾಗಬೇಕೋ ಹಾಗೆ ಸದ್ಗುರು ತಾನೂ ಸಮರ್ಥನಾಗಿದ್ದು ತನ್ನ ಸಾಮರ್ಥ್ಯವನ್ನು ಶಿಷ್ಯರಿಗೆ ಕೊಡಬಲ್ಲವನಾಗಿದ್ದರೂ ಆ ಗುರುಪರಂಪರೆಯು ಮುಂದೆ ಸಾಗಬೇಕಾದರೆ ಶಿಷ್ಯನು ಗುರುಸಾಮರ್ಥ್ಯವನ್ನು ಹಿಡಿದುಕೊಳ್ಳಬಲ್ಲವನಾಗಬೇಕು. ಆದ್ದರಿಂದ ಶಿಷ್ಯನಲ್ಲಿಯೂ ಒಂದು ಬಗೆಯ ಯೋಗ್ಯತಾ ವಿಶೇಷವು ಬೇಕು. ಬೀಜವು ಎಷ್ಟೇ ಉತ್ತಮವಾಗಿದ್ದರೂ ಕ್ಷೇತ್ರವು ಮರುಭೂಮಿಯಾದರೆ ಬೆಳೆ ಬರಲಾರದು. ಬೆಳೆ ಬರಬೇಕಾದರೆ ಉತ್ತು ಹದಮಾಡಿದ ಭೂಮಿಯಾಗಬೇಕು. ಅದರಂತೆ ಶಿಷ್ಯನ ಮನೋಭೂ

ಮಿಯು ಹೇಗಿರಬೇಕೆಂಬ ವಿಷಯದಲ್ಲಿ ಉಪನಿಷತ್ತು ಹೇಳುವದೇನೆಂದರೆ—

" ತಸ್ಮೈ ಸ ವಿದ್ವಾನುಪಸನ್ನಾಯ ಸಮ್ಯ |
ಕ್ಪ್ರಶಾಂತಚಿತ್ತಾಯ ಶಮಾನ್ವಿತಾಯ |
ಯೇನಾಕ್ಷರಂ ಪುರುಷಂ ವೇದ ಸತ್ಯಂ |
ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್ || "

ಇದರಿಂದ ಶಿಷ್ಯನು ಶಮಾದಿಗುಣಗಳನ್ನು ಪಡೆದು ಶಾಂತಚಿತ್ತನಾಗಿರಬೇಕೆಂದೂ ಅಂಥವನಿಗೆ ವಿದ್ವಾಂಸನಾದ ಗುರು ಬ್ರಹ್ಮವಿದ್ಯೆಯ ರಹಸ್ಯವನ್ನು ತಿಳಿಸುವನೆಂದೂ ಗೊತ್ತಾಗುತ್ತದೆ. ಆದ್ದರಿಂದ ಶಿಷ್ಯನು ಮೊದಲು ತನ್ನ ಚಿತ್ತಶುದ್ಧಿಯ ಉದ್ಯೋಗವನ್ನು ನಡೆಸಬೇಕು. ಎಂದು ಅವನಿಗೆ ಭಗವಂತನನ್ನು ಕಂಡೇ ಬಿಡುವೆನೆಂಬ ದೃಢವಾದ ಇಚ್ಛೆಯುಂಟಾಗುವದೊ ಅಂದು ಗುರು ತಾನೇ ಬಂದು ಕಾಣಿಸಿಕೊಳ್ಳುವನು. ಧ್ರುವನು ದೃಢನಿಶ್ಚಯವನ್ನು ಮಾಡಿದೊಡನೆ ನಾರದರು ಮಾರ್ಗದರ್ಶಕರಾಗಿ ದೊರೆತಿದ್ದಾರೆ.

ಯೋಗ್ಯತೆ ಇಲ್ಲದ ಶಿಷ್ಯನಿಗೆ ಮಾಡಿದ ಉಪದೇಶದ ಪರಿಣಾಮವೇನಾಗುವದೆಂಬ ವಿಷಯದಲ್ಲಿ ಶ್ರೀಸರ್ಪಭೂಷಣಶಿವಯೋಗಿಗಳು ಹೇಳಿರುವದೇನೆಂದರೆ—

ರಾಗ—ರೇಗುಪ್ತಿ.

ಪರಿಪಕ್ವಹೃದಯವಲ್ಲದ ಮಂದಮನುಜರ |
ಬರಿದೆ ಬೋಧಿಪೆನೆಂಬ ಭ್ರಮೆಯೇಕೆ ಮನುಜ? ||ಪ||
ಅರರೆ ಇಂತಘಟನಘಟನೆ ನಿನ್ನೊಳಗಿರೆ |
ಮರಣಾದ್ಯನರ್ಥವಿನ್ನಳಿಯುವರ್ಗೆಹುದುಂಟೆ ||ಅ. ಪ.||

ಪರುಷವೇದಿಯು ಸೋಂಕೆ ಕಾಬೋನ್ನು ಕನಕವಾ |
ಗುರಿವಂತೆ ಕಾರ್ಗಲ್ಲು ಕನಕವಾಗುವದೆ? ||
ದುರಿತವರತ ಮುಮುಕ್ಷುಗಳಿಗಲ್ಲದೆ ಕರ್ಮ |
ಪರರಿಗನುಗ್ರಹಿಸಲು ಮುಕ್ತಿಪುದುಂಟೆ ||೧||

ನ್ನೆಲ್ಲ ದಕ್ಷತೆಯಿಂದ ಮುಗಿಸಿದವನಾಗಿರಬೇಕು. ಪ್ರಪಂಚದ ವ್ಯವಹಾರದಲ್ಲಿ ಪೂರ್ವಜನ್ಮದಲ್ಲಿ ನಿಷ್ಣಾತನಾಗಿರಲಿ ಅಥವಾ ಈ ಜನ್ಮದಲ್ಲಿ ನಿಷ್ಣಾತನಾಗಿರಲಿ ಅಂತು ಅದರ ಹಣೆಯಬರಹವಿಷ್ಟೇಂದು ತಿಳಿದು ಅದರಲ್ಲಿ ತುಚ್ಛಬುದ್ಧಿಯುಂಟಾಗಿ ಅದರಲ್ಲಿ ಶಾಂತಿಯಿಲ್ಲವೆಂದು ಮನಗಂಡು ಅದಕ್ಕಿಂತ ಮೇಲಿನ ಮೆಟ್ಟಿಲಲ್ಲಿ ಶಾಂತಿಯನ್ನು ಹುಡುಕುವವನಾಗಬೇಕು. ಇಂಥವನೊಬ್ಬನೇ ಪರಮಾರ್ಥದ ಮೆಟ್ಟಿಲ ಮೇಲೆ ಹೆಜ್ಜೆಯನ್ನಿರಬಲ್ಲನೇ ಹೊರತು ಪ್ರಪಂಚವ್ಯವಹಾರವನ್ನು ನೋಡಿ ಹೆದರಿಕೊಂಡು ಅದನ್ನು ಸಾಗಿಸಲಾರದೆ ಹೇಡಿಯಾಗಿ ಅನಾಯಾಸದಿಂದ ಪೈಬಿಳಿಸಿಕೊಳ್ಳಬೇಕೆಂದು ಪರಮಾರ್ಥದ ಕಡೆಗೆ ಕಣ್ಣುಹಾಕುವದು ಉಪಯೋಗವಿಲ್ಲ. ಅಂಥ ಅಳುಬುರುಕರಿಗೂ ಸೋಮಾರಿಗಳಿಗೂ ಪರಮಾರ್ಥವನ್ನು ಇಣಿಕಿ ನೋಡುವದಕ್ಕೆ ಕೂಡ ಅಧಿಕಾರವಿಲ್ಲ. ಸ್ವಸಾಮರ್ಥ್ಯದಿಂದ ಒಂದು ರಾಜ್ಯವನ್ನಾದರೂ ಲೀಲಾಮಾತ್ರದಿಂದ ಗಳಿಸಬಲ್ಲೆನೆಂಬ ಮನೋದಾರ್ಢ್ಯವುಳ್ಳ ಅಸಹಾಯಶೂರರೇ ಇದಕ್ಕೆ ಅಧಿಕಾರಿಗಳು. ಪರಮಾರ್ಥದ ಹಾದಿಯಲ್ಲಿ ಅಶಸ್ತ್ರಧಾರಿಯಾಗಿ ಅನೇಕಭೋಗಗಳೊಡನೆ ಹೋರಾಡಿ ಅವುಗಳನ್ನು ಹಿಮ್ಮೆಟ್ಟಿಸಿ ತಾನು ಸಾಗಬೇಕಾಗುವದು. ಇದಕ್ಕೆ ಪ್ರಪಂಚವ್ಯವಹಾರವೆಂಬ ಗರಡಿಯ ಮನೆಯಲ್ಲಿ ಚೆನ್ನಾಗಿ ಸುರಿತವರೇ ಆಗಬೇಕೇ ಹೊರತು ಪೊಳ್ಳು ಮೈಯ್ಯವರಿಗೆ ಅದು ಸಾಧ್ಯವಿಲ್ಲ. ಅಂಥವರು ಮೊದಲು ವ್ಯವಹಾರದಲ್ಲಿ ಚೆನ್ನಾಗಿ ಪೈಬೆವರಿಡುವಂತೆ ದಕ್ಷತೆಯಿಂದ ದುಡಿದು ತಮ್ಮ ತಮೋಗುಣವನ್ನು ಕಳೆದುಕೊಳ್ಳುವ ಯತ್ನವನ್ನು ಮಾಡಬೇಕು. ಆಮೇಲೆ ಪರಮಾರ್ಥದ ಮಾತು.

## ಸ್ವಬುದ್ಧಿ.

ಸದ್ಗುರುಗಳ ಮೇಲೆ ಪೂರ್ಣವಿಶ್ವಾಸವನ್ನಿಡಬೇಕೆಂಬ ಮಾತಿನಿಂದ ಶಿಷ್ಯನು ತನ್ನ ಪ್ರಯತ್ನದಲ್ಲಿ ಎಂದೂ ಕೊರತೆಯನ್ನು ಮಾಡಬಾರದು. ಮಗುವನ್ನು ತಾಯಿಯೇ ಎತ್ತಿಕೊಳ್ಳುವಳಾದರೂ ಮಗು ತಾನೂ ಮೇಲಕ್ಕೆ ಏಳಬೇಕು. ಇಲ್ಲದಿದ್ದರೆ ಆಕೆ ಸಿಟ್ಟುಗೊಂಡು ಆ ಮಗುವನ್ನು ಅಲ್ಲಿಯೇ ಬಿಟ್ಟು ಹೋಗುವಳು. ಹಾಗೆಯೇ ಶಿಷ್ಯನನ್ನು ಗುರುವೇ ಉದ್ಧಾರ

ಮಾಡುವನಾದರೆ ಆ ಶಿಷ್ಯನು ತಾನೂ ತನ್ನ ಪ್ರಯತ್ನವನ್ನು ನಡೆಸುವವನಾಗಬೇಕು. ನಾವು ನಿಶ್ಚೇಷ್ಟರಾಗಿ ಗುರುವಿಗೆ ಹೆಣಾಹೊರುವವನ ಪಟ್ಟವನ್ನು ಕಟ್ಟಬಾರದು. “ ಉದ್ಧರೇದಾತ್ಮನಾತ್ಮಾನಂ ” ಎಂದು ಗೀತೆಯು ಹೇಳುತ್ತದೆ. ತನ್ನನ್ನು ತಾನೇ ಉದ್ಧಾರಮಾಡಿಕೊಳ್ಳಬೇಕೆಂದು ಅದರ ಅರ್ಥ. “ ಶಿಷ್ಯಪ್ರಜ್ಞೈವ ಕೇವಲಂ ” ಎಂದಿನ್ನೊಂದು ವಾಕ್ಯವಿದೆ. ವಿಶೇಷವಾಗಿ ಶಿಷ್ಯನ ಬುದ್ಧಿಯೇ ಕಾರಣವೆಂದು ಅದರ ಅರ್ಥ. ಈ ಅಭಿಪ್ರಾಯವನ್ನು ಛಾಂದೋಗ್ಯೋಪನಿಷತ್ತು ಒಂದು ಕಥೆಯಿಂದ ವರ್ಣಿಸಿರುವದು. ಒಮ್ಮೆ ಗಾಂಧಾರದೇಶದಲ್ಲಿ ಕಳ್ಳರು ಒಬ್ಬ ಹಣಗಾರನನ್ನು ಕಣ್ಣುಕಟ್ಟಿ ಕಾಡಿಗೆ ಕರೆದುಕೊಂಡು ಹೋಗಿ ಹಣವನ್ನು ಸುಲಿದುಕೊಂಡು ಕೈಗಳನ್ನು ಹಿಂದಕ್ಕೆ ಬಿಗಿದು ಸಟ್ಟಡವಿಯಲ್ಲಿ ಹಾಗೆಯೇ ಬಿಟ್ಟು ತಮ್ಮ ದಾರಿಯನ್ನು ಹಿಡಿದು ಹೋದರು. ಆಗ ಆ ಹಣಗಾರನು ತನ್ನನ್ನು ಯಾರಾದರೂ ರಕ್ಷಿಸಿರೆಂದು ದೀನಸ್ವರದಿಂದ ಕೂಗಿಕೊಂಡನು. ಯಾವನೋ ಒಬ್ಬ ದಯಾಳು ಆ ಶಬ್ದವನ್ನು ಕೇಳಿ ಬಂದು ಕೈಗಳನ್ನೂ ಕಣ್ಣನ್ನೂ ಬಿಚ್ಚಿ ಗಾಂಧಾರದೇಶವು ಇಂಥ ದಿಕ್ಕಿಗೆ ಇರುವದೆಂದು ತೋರಿಸಿ ಹೋದನು. ಆಮೇಲೆ ಆ ಹಣಗಾರನು ಆ ದಿಕ್ಕನ್ನು ಹಿಡಿದು ಹೋಗುತ್ತ ದಾರಿಯಲ್ಲಿ ಕಂಡಕಂಡವರನ್ನೆಲ್ಲಾ ಮುಂದಿನ ದಾರಿಯನ್ನು ಕೇಳುತ್ತ ಕೊನೆಗೆ ತನ್ನ ದೇಶಕ್ಕೆ ಬಂದು ಮುಟ್ಟಿದನು. ಈ ಕಥೆಯು ಶಿಷ್ಯರಿಗೆಲ್ಲಾ ಅನ್ವಯಿಸುತ್ತದೆ. ನಾವೆಲ್ಲರೂ ಸರಿಯಾದ ದೃಷ್ಟಿಯನ್ನು ಕಳೆದುಕೊಂಡು ಸಂಸಾರವೆಂಬ ಕಾಡಿನಲ್ಲಿ ಸಿಕ್ಕುಬಿದ್ದಿದ್ದೇವೆ. ಒಬ್ಬ ದಯಾಳುವಾದ ಗುರು ನಮಗೆ ದಾರಿಯನ್ನು ತೋರಿಸುತ್ತಾನೆ. ಆದರೆ ನಾವು ಮುಂದಿನ ದಾರಿಯನ್ನು ಅಲ್ಲಲ್ಲಿ ವಿಚಾರಿಸಿಕೊಳ್ಳುತ್ತ ಹೋಗುವಷ್ಟು ಬುದ್ಧಿವಂತರಾಗಬೇಕು. ಇಲ್ಲದಿದ್ದರೆ ನಮ್ಮ ಸ್ಥಲಕ್ಕೆ ನಾವು ಹೋಗಲಾರೆವು. ಆದ್ದರಿಂದ ಶಿಷ್ಯರು ತಮ್ಮ ವಿಚಾರಶಕ್ತಿಯನ್ನು ಚೆನ್ನಾಗಿ ಜಾಗರೂಕವಾಗಿಟ್ಟುಕೊಂಡು ಮುಂದುವರಿಯಬೇಕು.

## ಸಾಧನಗಳು.

ವಿಚಾರಶಕ್ತಿಯಿಂದ ಮಾಡತಕ್ಕದ್ದೇನು? ವಿಚಾರಪೂರ್ವಕವಾದ ಸಾಧನ. "ಆಯುರ್ವೈ ಘೃತಂ" ಎಂದು ಶ್ರುತಿಯು ಆಯುರ್ವರ್ಧಕವಾದ ತುಪ್ಪವನ್ನೇ ಆಯುಸ್ಸೆಂದು ಕರೆದಂತೆ "ಏತಜ್ಜ್ಞಾನಮಿತಿ ಪ್ರೋಕ್ತಂ" ಎಂಬ ಮಾತಿನಿಂದ ಭಗವದ್ಗೀತೆಯು ಜ್ಞಾನಸಾಧನಗಳನ್ನೇ ಜ್ಞಾನವೆಂದು ಕರೆದಿರುತ್ತದೆ. ಸಾಧನಗಳಿಗೆ ಅಷ್ಟು ಮಹತ್ತ್ವವಿರುವದರಿಂದ ಮೋಕ್ಷಾರ್ಥಿಯಾದವನು ಸಾಧನಗಳನ್ನು ಅವಶ್ಯಕವಾಗಿ ಮಾಡಬೇಕು. ಸಾಧನಗಳನ್ನು ಮಾಡುವದು ಕಷ್ಟವಾಗಬಹುದು. ಬೇರೆ ಉಪಾಯವಿಲ್ಲ.

"ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ ।
ನ ಪಾಪಫಲಮಿಚ್ಛಂತಿ ಪಾಪಂ ಕುರ್ವಂತಿ ಯತ್ನತಃ ॥"

ಎಂಬಂತೆ ಪುಣ್ಯವನ್ನು ಮಾಡಲಿಚ್ಛಿಸದೆ ಪುಣ್ಯದ ಫಲವನ್ನು ಬಯಸಿದರೆ ಬಂದೀತೆ? ಮತ್ತು ಪಾಪವನ್ನು ಮಾಡುತ್ತ ಪಾಪದ ಫಲವನ್ನು ಬೇಡವೆಂದರೆ ಬಿಟ್ಟೀತೆ? ಗೀತೆಯಲ್ಲಿ ಹೇಳಿರುವ ಜ್ಞಾನಸಾಧನಗಳ ವಿಚಾರವೆಲ್ಲ ಹಿಂದೆ ಬೇರೆ ಬೇರೆ ಸಂದರ್ಭಗಳಲ್ಲಿ ಬಂದಿರುವದಾದರೂ ಇಲ್ಲಿ ಸಂಕ್ಷೇಪವಾಗಿ ಮತ್ತೊಮ್ಮೆ ನೆನಪುಕೊಡುತ್ತೇವೆ.

ಅಮಾನಿತ್ವ:— ತಾನೇ ದೊಡ್ಡವನೆಂಬ ಹೆಮ್ಮೆ ಇಲ್ಲದಿರುವದು. ತಮ್ಮ ಶರೀರದ ಅಥವಾ ಬುದ್ಧಿಯ ಯಾವದೋ ಗುಣವನ್ನು ಲಕ್ಷ್ಯದಲ್ಲಿಟ್ಟುಕೊಂಡವರು ಇತರರಿಗಿಂತ ತಾವು ದೊಡ್ಡವರೆಂದು ತಿಳಿಯುತ್ತಾರೆ. ಅವುಗಳನ್ನೆಲ್ಲ ಅನಾತ್ಮವೆಂದು ತಿಳಿದವರು ಹಾಗೆ ಮಾಡುವದಿಲ್ಲ. ಸಾಧಕರಂತು ಈ ಗುಣವನ್ನೆಂದೂ ಮೈಮೇಲೆ ಹಾಕಿಕೊಳ್ಳಬಾರದು. ಶ್ರೀವೇದವ್ಯಾಸರು ತಮ್ಮ ಮಕ್ಕಳಾದ ಶ್ರೀಶುಕಾಚಾರ್ಯರನ್ನು ಪರೀಕ್ಷೆಗಾಗಿ ಜನಕರಾಜನ ಕಡೆಗೆ ಕಳುಹಿಸಿದಾಗ ಅವನು ಇವರ ಅಮಾನಿತ್ವವನ್ನು ನೋಡಬೇಕೆಂದು ಇಪ್ಪತ್ತೊಂದು ದಿವಸ ಅವರನ್ನು ತನ್ನ ಹತ್ತಿರಕ್ಕೆ ಬರಮಾಡಿಕೊಳ್ಳದೆ ಇದ್ದು ಅವರ ಸಮತ್ವವನ್ನು ನೋಡಿ ತೃಪ್ತನಾದ ಮೇಲೆ ಅವರು ಬಂದ ಉದ್ದೇಶವನ್ನು ಸಾರ್ಥಕಮಾಡಿ ಕಳುಹಿಸಿದ್ದಾನೆ.

ಅದಂಭಿತ್ವ:— ಒಳಗಿರದ ಯೋಗ್ಯತೆಯನ್ನು ಹೊರಗೆ ತೋರಿಸಿಕೊಳ್ಳುವದು ಡಂಭ. ಇದರ ವಿಷಯದಲ್ಲಿ ಶ್ರೀಸರ್ಪಭೂಷಣ ಶಿವಯೋಗಿಗಳು ಹೇಳಿರುವದೇನೆಂದರೆ–

ರಾಗ– ಶಂಕರಾಭರಣ.

ಬಿಡು ಬಾಹ್ಯದೊಳು ಡಂಭವ | ಮಾನಸದೊಳ್ |
ಗೆಡೆಬಿಡದಿರು ಡಂಭವ || || ಪಲ್ಲ ||
ಒಡಲೊಳು ವಂಚಿಸಿ ಹೊರಗೆ ನೀ ಶೀಲೆಯು |
ಪಡೆವರೆ ಶಿವ ನಿನಗೊಲಿವನೆ ಮರುಳೆ || ಅ.ಪ. ||
ಜನ ಮೆಚ್ಚೆ ನಡಕೊಂಬರೇನುಂಟು ಲೋಕದಿ |
ಮನ ಮೆಚ್ಚೆ ನಡಕೊಳ್ಳುವದೆ ಚಂದವು |
ಜನರೇನು ಬಲ್ಲರು ಒಳಗಿನ ಗೂಢತ್ವವ |
ಮನವರಿಯದ ಕಳ್ಳತನವಿಲ್ಲ ಮರುಳೆ || || ೧ ||
ಜನರು ಮೆಚ್ಚಲ್ಕೆ ನಿನ್ನ ಕ್ಲೇಶ ನಶಿಯುದೆ |
ಜನ ಮೆಚ್ಚದಿರೆ ಶಿವ ಬಿಡುತಿಹನೆ ||
ಜನರಲ್ಲಿ ನಿನ್ನನು ಮೊಹ್ಹಾತನಿಸುವರೆ |
ಚಿನುಮಯ ಶಿವನೇನಲ್ಲರಿಯನೆ ಮರುಳೆ || || ೨ ||
ಮನದೊಳು ಶಿವ ತಾನೆ ಮನವಾಗಿಕೊಂಡಿರೆ |
ಮನ ಮೆಚ್ಚೆ ನಡದರೆ ಶಿವ ಮೆಚ್ಚುವ ||
ಮನಕಂಜಿ ನಡೆಯದೆ ಜನಕಂಜಿ ನಡೆದರೆ |
ಮನದಾತ್ಮ ಗುರುಸಿದ್ಧ ಮರೆಯಾಗನಲ್ಲ ! || || ೩ ||

ಅಹಿಂಸಾ:— ಶರೀರ, ವಾಕ್ಕು, ಮನಸ್ಸು ಈ ಮೂರು ಕರಣಗಳೂ ಹಿಂಸೆಯ ಕಡೆಗೆ ಹೊರಳದೆ ಇರುವದು.

ಕ್ಷಾಂತಿ:— 'ತಾಳಿದವ ಬಾಳ್ಯಾನು' ಮತ್ತು 'ಸ್ಮರಣೆ ತಪ್ಪಿದರೂ ಸೈರಣೆ ಇರಬೇಕು' ಎಂಬಂತೆ ಸಹನಗುಣವುಳ್ಳವನಾಗಿರಬೇಕು. ಚ್ಯವನ ಋಷಿಯು ಸೇವೆಯನ್ನು ಕೈಗೊಂಡಾಗ ಕುಶಿಕರಾಯನು ಇಪ್ಪತ್ತೊಂದು ದಿವಸ ಹಗಲೂ ಇರುಳೂ ಆವನನ್ನು ಉಪಚರಿಸಿದ್ದಲ್ಲದೆ ಆವನಪ್ಪಣೆಯಂತೆ ತಾನೂ ತನ್ನ ಹೆಂಡತಿಯೂ ಆವನನ್ನು ರಥದಲ್ಲಿ ಕೂಡಿಸಿ ರಾಜವೀಧಿ

ಯಲ್ಲಿ ಎಳೆದುಕೊಂಡು ಹೋಗಿ ತನ್ನ ಸಹನಗುಣವನ್ನು ಪ್ರಕಟಮಾಡಿದ್ದಾನೆ.

ಆರ್ಜವ:— ಒಳಗೂ ಹೊರಗೂ ಒಂದೇ ಆಗಿರುವ ಸರಳತನ.

"ತೇಷಾಮಸೌ ವಿರಜೋ ಬ್ರಹ್ಮಲೋಕೋ
ನ ಯೇಷು ಜಿಹ್ಮಮನೃತಂ ನ ಮಾಯಾ"

ಎಂದು ಶ್ರುತಿ ಇದೆ. ಯಾರಲ್ಲಿ ವಕ್ರಭಾವವೂ ಮತ್ತು ಇಲ್ಲದ್ದನ್ನು ತೋರಿಸಿಕೊಳ್ಳುವದೂ ಇಲ್ಲವೊ ಅವರಿಗೇ ರಜೋಗುಣರಹಿತವಾದ ಬ್ರಹ್ಮಲೋಕವೆಂದರ್ಥ. ವ್ಯವಹಾರಪ್ರಧಾನರು ಸರಳರಾಗಿರುವದಕ್ಕೆ ಬರುವದಿಲ್ಲ. ಮೋಕ್ಷಾರ್ಥಿಗಳು ವ್ಯವಹಾರಪ್ರಧಾನರಾಗದೆ ಸರಳರಾಗಿರಬೇಕು.

ಆಚಾರ್ಯೋಪಾಸನಂ:— ಸದ್ಗುರುಗಳನ್ನಾಶ್ರಯಿಸುವದು.

ಶೌಚಂ:— ಭಗವಂತನು ಹೊಲಸಾದ ಸ್ಥಲಕ್ಕೆ ಬರಲಾರನಾದ್ದರಿಂದ ಒಳಗೂ ಹೊರಗೂ ಶುಚಿಯಾಗಿರಬೇಕು.

ಸ್ಥೈರ್ಯ:— ಎಡೆಬಿಡದ ಪ್ರಯತ್ನ. ನಡುನಡುವೆ ಬಿಟ್ಟು ಬಿಟ್ಟು ಕಡೆದರೆ ಬೆಣ್ಣೆ ಕೂಡ ನೆಟ್ಟಗೆ ಬರುವದಿಲ್ಲ. ಆದ್ದರಿಂದ ಬೇಸರಿಯಾರದಂತೆ ಪ್ರಯತ್ನಿಸಬೇಕು. ಅಮೃತಕ್ಕಾಗಿ ಕಡೆದಾಗ ಮೊದಲು ವಿಷವು ಬಂದರೂ ಕೈಬಿಡದೆ ಮುಂದೆ ಸಾಗಿದಂತೆ ಜ್ಞಾನಕ್ಕಾಗಿ ಪ್ರಯತ್ನಿಸುವಾಗ ಎಷ್ಟು ವಿಘ್ನಗಳು ಬಂದರೂ ನಿಲ್ಲಬಾರದು.

ಆತ್ಮವಿನಿಗ್ರಹ:— ಮನಸ್ಸಿನ ಹರಿದಾಟವನ್ನು ನಿಲ್ಲಿಸುವದು.

ವೈರಾಗ್ಯ:— ಇಂದ್ರಿಯಗಳ ಇಚ್ಛೆಯನ್ನು ಗೌರವಿಸದಿರುವದು. ಯಾಜ್ಞವಲ್ಕ್ಯರು ತಮ್ಮ ಇಬ್ಬರು ಹೆಂಡಂದಿರಿಗೆ ತಮ್ಮ ಆಸ್ತಿಯನ್ನೆಲ್ಲಾ ಹಂಚಿಕೊಟ್ಟು ತಾವು ಸಂನ್ಯಾಸವನ್ನು ಮಾಡುತ್ತೇವೆಂದರು. ಆಗ ಮೈತ್ರೇಯಿ ಎಂಬ ಹೆಂಡತಿಯು "ಧನದಿಂದ ಮೋಕ್ಷವುಂಟೊ?" ಎಂದು ಕೇಳಿದಳು. "ಎಂದಿಗೂ ಇಲ್ಲ" ವೆಂದು ಅವರು ಹೇಳುತ್ತಲೇ ಹಾಗಾದರೆ ತನಗೆ ಹಣವು ಬೇಡವೆಂದು ಹೇಳಿ ಅವರಿಂದ ಜ್ಞಾನಮಾರ್ಗದ ಉಪದೇಶವನ್ನೇ ಪಡೆದು ತೃಪ್ತಳಾದಳು. ವೈರಾಗ್ಯವಿದ್ದ ಹೊರತು ಭಗವಂತನ ಜ್ಞಾನವಾಗುವದಿಲ್ಲ. ಎಣ್ಣೆಯ ಕಾಗದದ ಮೇಲೆ ಅಕ್ಷರವು ಮೂಡಲಾರದು. ಎಣ್ಣೆಯನ್ನು ಸುಣ್ಣದಿಂದ ಉಜ್ಜಿ ತೆಗೆಯಬೇಕು. ವೈರಾಗ್ಯ

ವಿಲ್ಲದೆ ದೇವರನ್ನು ಬಯಸುವ ಬರೀ ಕುತೂಹಲವು ಕೆಲಸಕ್ಕೆ ಬರುವದಿಲ್ಲವೆಂದು ಶ್ರೀರಾಮಕೃಷ್ಣಪರಮಹಂಸರು ಪ್ರತ್ಯಕ್ಷವಾಗಿ ತೋರಿಸಿದ್ದಾರೆ. ಒಬ್ಬ ಭಕ್ತನು ಬಂದು ತನ್ನ ತಲೆಯ ಮೇಲೆ ಕೈ ಇಟ್ಟು ತನಗೆ ಸಮಾಧಿಯನ್ನು ತಂದುಕೊಟ್ಟು ತೋರಿಸಲೇಬೇಕೆಂದು ಹಟಹಿಡಿದನು. ಪರಮಹಂಸರು ಎಷ್ಟು ಹೇಳಿದರೂ ಅವನು ಕೇಳಲಿಲ್ಲ. ಆಮೇಲೆ ಅವರು ಅವನ ತಲೆಯ ಮೇಲೆ ಕೈ ಇಟ್ಟು ಅವನಿಗೆ ತಮ್ಮ ಪ್ರಭಾವದಿಂದ ಸಮಾಧಿಯನ್ನು ಬರಿಸಿಬಿಟ್ಟರು. ಅವನು ಬಹಳ ಹೊತ್ತಿನ ಮೇಲೆ ಎಚ್ಚತ್ತು ತನ್ನ ಭಾಗಕ್ಕೆ ಅಷ್ಟು ಹೊತ್ತು ಪ್ರಪಂಚವೇ ಇಲ್ಲದೆ ಹೋಗಿದ್ದ ಸ್ಥಿತಿಯನ್ನು ನೆನೆದು ಈ ಸ್ಥಿತಿಯು ತನಗೆ ಬೇಡವೆಂದು ಹೇಳಿದನಂತೆ. ಮತ್ತೊಬ್ಬನು ಹೀಗೆಯೇ ಕೇಳುವದಕ್ಕೆ ಬಂದಾಗ ಅವರು ಅವನನ್ನು ನದಿಗೆ ಕರೆದುಕೊಂಡು ಹೋಗಿ ಗಟ್ಟಿಯಾಗಿ ನೀರಿನಲ್ಲಿ ಅದುಮಿ ಹಿಡಿದುಕೊಂಡುಬಿಟ್ಟರು. ಉಸಿರಾಡಲಾರದೆ ಅವನು ತತ್ತರಿಸಿದನು. ಆಮೇಲೆ ಕೈ ಬಿಟ್ಟು ನೀರಿನಲ್ಲೇನು ಬೇಕಾಗಿತ್ತೆಂದು ಕೇಳಿದರು. ಉಸಿರಾಡಬೇಕಾಗಿತ್ತೆಂದು ಅವನು ಹೇಳಿದನು. ಆಗ ಗಾಳಿಯ ಹೊರತು ಎರಡನೆಯದೇನೇನೂ ಹೇಗೆ ಬೇಕಾಗಿರಲಿಲ್ಲವೋ ಹಾಗೆ ಪರಮಾತ್ಮನ ಹೊರತು ಎರಡನೆಯದೇನೇನೂ ಬೇಕಾಗದೆ ಹೋದಾಗ ಮಾತ್ರ ದೇವರು ಸಿಕ್ಕುವನೆಂದು ಹೇಳಿದರು. ಲೋಕದಲ್ಲಿ ಮೂರು ಬಗೆಯ ವೈರಾಗ್ಯಗಳಿವೆ. ಪುರಾಣವನ್ನು ಕೇಳುವಾಗಿನ ವೈರಾಗ್ಯವು ಪುರಾಣವೈರಾಗ್ಯ; ಹಡೆಯುವಾಗಿನ ಸಂಕಟವನ್ನು ತಡೆಯಲಾರದೆ ಮುಂದೆ ವಿಷಯಸುಖವನ್ನು ಬಯಸುವದಿಲ್ಲವೆಂಬ ವೈರಾಗ್ಯವು ಪ್ರಸೂತಿವೈರಾಗ್ಯ; ಯಾರಾದರೂ ಸತ್ತಾಗ ದಿಕ್ಕುಗಳೆಲ್ಲಾ ಶೂನ್ಯವಾಗಿ ಕಾಣುವ ವೈರಾಗ್ಯವು ಶ್ಮಶಾನವೈರಾಗ್ಯ. ಈ ಮೂರೂ ಆಭಾಸವೈರಾಗ್ಯಗಳು. ಇವುಗಳನ್ನು ನಂಬಬಾರದು. ತನ್ನ ವಿಚಾರದಿಂದ ತನಗೆ ಬರುವ ವೈರಾಗ್ಯವೇ ನಿಜವಾದ ವೈರಾಗ್ಯ. ಆ ವಿವೇಕಪೂರ್ವಕವಾದ ವೈರಾಗ್ಯಸ್ವರೂಪವನ್ನು ಕುರಿತು ಶ್ರೀರಾಮಕೃಷ್ಣಪರಮಹಂಸರು ಹೇಳುವದೇನೆಂದರೆ—

(೧) ನಾಚಿಕೊಳ್ಳುವ ಕುಮರಿಯು ಕಣ್ಣಿಗೆ ಮುಸುಕು ಹಾಕುವವರೆಗೂ ನೆಟ್ಟಗೆ ಹೋಗುವದಿಲ್ಲ. ಹಾಗೆ ಪ್ರಾಪಂಚಿಕನಾದ ಮನುಷ್ಯನ

ಮನಸ್ಸು, ಅತ್ತಿತ್ತ ನೋಡದಂತೆ ವಿವೇಕ ಮತ್ತು ವೈರಾಗ್ಯ—ಎಂಬ ಎರಡು ಕಣ್ಣುಮುಸುಕುಗಳನ್ನು ಹೊಂದಬೇಕು. ಹಾಗಾದರೆ ಅದು ಮುಗ್ಗರಿಸುವದೂ ಇಲ್ಲ; ತಪ್ಪುದಾರಿಗೆಳೆಯುವದೂ ಇಲ್ಲ.

(೨) ಒಂದು ನೀರಿರುವ ಪಾತ್ರೆಯೊಳಕ್ಕೆ ಪಟಿಕದಂಥ ಶುದ್ಧಿಕಾರಕವಸ್ತುವನ್ನು ಹಾಕಿದರೆ ಅದರ ನೀರು ಶುದ್ಧವಾಗುತ್ತದೆ. ಮತ್ತು ಅದರ ಹೊಲಸೆಲ್ಲ ತಲದಲ್ಲಿ ಕುಳಿತುಕೊಳ್ಳುತ್ತದೆ. ವಿವೇಕ ಮತ್ತು ವೈರಾಗ್ಯ — ಇವು ಮನುಷ್ಯನ ಹೃದಯವನ್ನು ಶುದ್ಧಿಮಾಡುವ ವಸ್ತುಗಳು. ಅವುಗಳ ಸಹಾಯದಿಂದ ಪ್ರಾಪಂಚಿಕವಾದ ಮನಸ್ಸು ಕೇವಲ ಪ್ರಾಪಂಚಿಕವಾಗಿರುವದನ್ನು ಬಿಟ್ಟು ಶುದ್ಧವಾಗುತ್ತದೆ.

(೩) ಕಂಬಳೀಹುಳು ತಾನು ನೆಯ್ದ ಗೂಡಿನಲ್ಲಿ ತಾನೇ ಕಟ್ಟುಬೀಳುತ್ತದೆ. ಹಾಗೆಯೇ ಪ್ರಾಪಂಚಿಕಜೀವನು ಆಶೆಯೆಂಬ ಬಲೆಗೆ ತಾನಾಗಿ ಬೀಳುವನು. ಆದರೆ ಆ ಕಂಬಳೀಹುಳು ಒಳ್ಳೇ ಸುಂದರವಾದ ಪತಂಗದ ಹುಳುವಾಗಿ ಬೆಳೆದಾಗ ಅದು ಆ ಗೂಡನ್ನು ಭೇದಿಸಿಕೊಂಡು ಸ್ವಾತಂತ್ರ್ಯವನ್ನನುಭವಿಸುತ್ತದೆ. ಹಾಗೆ ಪ್ರಾಪಂಚಿಕಜೀವನು ವಿವೇಕವೈರಾಗ್ಯಗಳೆಂಬ ರೆಕ್ಕೆಗಳನ್ನು ಬಲಿಸಿಕೊಂಡು ಮಾಯೆಯ ಬಲೆಯಿಂದ ಬಿಡುಗಡೆಯನ್ನು ಹೊಂದಬಹುದು.

ಅನಹಂಕಾರ—ನಾನೆಂಬ ಹೆಮ್ಮೆ ಇಲ್ಲದಿರುವಿಕೆ. ಅಹಂಕಾರವೆಂಬುದು ಕಣ್ಣಿಗೊಂದು ಪರೆ. ಅವರಿಗೆ ದೇವರು ಕಾಣುವದಿಲ್ಲ. ಅಗ್ನಿಯೂ ವಾಯುವೂ ಅಹಂಕಾರಯುಕ್ತರಾಗಿದ್ದದರಿಂದ ಅವರಿಗೆ ಕಾಣದೆ ದೇವರು ಇಂದ್ರನಿಗೆ ಮಾತ್ರ ಕಂಡ ಕೇನೋಪನಿಷತ್ತಿನ ಕಥೆಯು ಹಿಂದೆಯೇ ಬಂದಿದೆ ‘ ನಾ ಸತ್ತರೆ ಸ್ವರ್ಗ, ಎಂಬದೊಂದು ಕನಕನ ಮುಂಡಿಗೆಯ ಮಾತಿದೆ. ಇಲ್ಲಿ ‘ ನಾ ಸತ್ತರೆ, ಎಂದರೆ ಅಹಂಕಾರವು ಹೋದಮೇಲೆಂದರ್ಥ. ಅಹಂಕಾರವು ಹೋದ ಮೇಲೆ ಬದುಕಿದ್ದಾಗಲೇ ದೇವರು ಕಾಣುತ್ತಾನೆ. ಪರಮಾರ್ಥಕ್ಕೆ ಅಹಂಕಾರವೇ ಬೆಲೆಯೆಂಬ ವಿಷಯಕ್ಕೆ ಶ್ರೀಸ್ವಾಮಿ ರಾಮತೀರ್ಥರೊಂದು ಕಥೆಯನ್ನು ಹೇಳಿದ್ದಾರೆ. ಒಬ್ಬ ಸಾಧು ಭಿಕ್ಷಕ್ಕಾಗಿ ಬೀದಿಯಲ್ಲಿ ತಿರುಗುತ್ತ ತನ್ನಲ್ಲೊಂದು ರತ್ನವಿರುವದೆಂದೂ ಯಾರಾದರೂ ಕೊಂಡುಕೊಳ್ಳಬಹುದೆಂದೂ ಒಂದು

ಹಾಡನ್ನು ಹೇಳಿಕೊಂಡು ಹೋದನು. ರತ್ನವ್ಯಾಪಾರವನ್ನೆ ಹಂಬಲಿಸುತ್ತಿದ್ದ ಒಬ್ಬ ವರ್ತಕನಿಗೆ ಈ ತಿರುಕನಿಂದ ಅಗ್ಗವಾಗಿ ರತ್ನವನ್ನು ಪಡೆದು ಅದನ್ನು ತುಷ್ಟಿಯಾಗಿ ಮಾರಿ ತನ್ನ ಮನೆಗೆ ಕಲಶವನ್ನಿಡಿಸಬಹುದೆಂದು ತೋರಿತು ಅವರಿವರಿಗೆ ಹೇಳಿದರೆ ಎಲ್ಲರೂ ಅದರ ಬೆಲೆಯನ್ನೇರಿಸಬಹುದೆಂದು ತಾನೊಬ್ಬನೇ ಆ ಸಾಧು ಇದ್ದ ಮನೆಗೆ ಹೋದನು. ಸಾಧು ಎಲ್ಲಿಗೋ ಹೊರಕ್ಕೆ ಹೋಗಿದ್ದನು. ಅವನ ಮಗಳಿದ್ದಳು. ವರ್ತಕನು ತಾನು ಬಂದ ಉದ್ದೇಶವನ್ನು ತಿಳಿಸಿದನು. ಆ ಹುಡುಗಿಯು ಆ ವರ್ತಕನನ್ನು ಉಪಚಾರದಿಂದ ಕೂಡಿಸಿ ಆ ರತ್ನದ ಬೆಲೆ ತನಗೆ ಗೊತ್ತಾಗಿರುವುದಾಗಿಯೂ ಬೆಲೆಯನ್ನು ಕೊಟ್ಟರೆ ಅದನ್ನು ತಾನೇ ಕೊಡಬಲ್ಲೆನೆಂಬುದಾಗಿಯೂ ಹೇಳಿದಳು. ಗಂಡನು ಬರುವುದಕ್ಕೆ ಮುಂಚೆ ಈ ಹುಡುಗಿಗೇ ಮಂಕು ಬೂದಿಯನ್ನು ಹಾಕಿ ಬಹು ಅಗ್ಗವಾಗಿ ರತ್ನವನ್ನು ಹೊತ್ತುಹಾಕಬೇಕೆಂದು ಯೋಚಿಸಿ ಆ ವರ್ತಕನು ಅದರ ಬೆಲೆಯನ್ನು ಮುಂದಾಗಿ ತೆಗೆದುಕೊಳ್ಳಬಹುದೆಂದನು. ಒಡನೆ ಆ ಹುಡುಗಿಯು ಅದನ್ನು ತೆಗೆದುಕೊಳ್ಳುವುದಕ್ಕೆ ಸಿದ್ಧವಾಗಿ ಬರುತ್ತೇನೆಂದು ಒಳಕ್ಕೆ ಹೋಗಿ ಒಂದು ಕತ್ತಿಯನ್ನು ಹಿಡಿದುಕೊಂಡು ಅದನ್ನು ಝಳಪಿಸುತ್ತ ಹೊರಕ್ಕೆ ಬಂದಳು. ಆಕೆಯ ಭಯಂಕರಾಕಾರವನ್ನು ನೋಡುತ್ತಲೇ ವರ್ತಕನು ಹೆದರಿ ಕೂಗಿಕೊಂಡನು. ನೆರೆಹೊರೆಯವರು ನೆರೆದು ಇದೇನೆಂದು ಕೇಳಿದರು. ಆಗ ಆ ಹುಡುಗಿಯು "ನನ್ನಲ್ಲಿರುವುದು ಪರಮಾತ್ಮನ ನಾಮರತ್ನ. ಅದರ ಬೆಲೆಯು ಅಹಂಕಾರರೂಪವಾದ ತಲೆ. ಈ ವರ್ತಕನು ಆ ಬೆಲೆಯನ್ನು ಕೊಡುತ್ತೇನೆಂದು ಹೇಳಿ ಈಗ ಹೀಗೆ ಹಿಂದೆಗೆದು ಓಡುತ್ತಾನೆ" ಎಂದು ಹೇಳಲು ಎಲ್ಲರೂ ಆ ಸಾಧುವಿನ ಸಾಧುತ್ವವನ್ನು ತಿಳಿದವರಾದ್ದರಿಂದ ವರ್ತಕನ ದುರಾಶೆಗೆ ನಕ್ಕು ಗದ್ದಲವನ್ನು ನಿಲ್ಲಿಸಿದರಂತೆ. ಪರಮಾತ್ಮಪ್ರಾಪ್ತಿಯಾಗಬೇಕಾದರೆ ಅಹಂಕಾರವನ್ನು ಬಿಡಬೇಕು.

ಈ ವಿಷಯದಲ್ಲಿ ಅನುಭವಾಮೃತದ ಉಪದೇಶವೇನೆಂದರೆ—

"ಪರಶುರಾಮನು ಕ್ಷತ್ರಕುಲವನು ।
ತರಿದು ನಿಃಕ್ಷತ್ರವನು ಮಾಡಿಯು ।

ಧರೆಯು ಕಪ್ಪವನಿತ್ತನೆಂಬಾ ಶೌರ್ಯಗರ್ವದಲಿ ॥
ಅರಿಯದೆಯೆ ರಘುಪತಿಯು ಜರೆಯುತ ।
ಪರಿಭವವನಿತ್ತುದಿದನು ಬಲುಮೆಯು ।
ತೆರನ ಪರಿಯಿದು ಮಗನೆ ಬಲುಮೆಯ ಕಷ್ಟ ಕೇಳೆಂದ ॥”

ಸಂಸಾರವನ್ನು ದೋಷಮಯವಾಗಿ ಕಾಣುವದು—ನಾವು ಎಷ್ಟೋ ವೇಳೆ ಹುಟ್ಟಿ ಸತ್ತು ಎಷ್ಟೋ ಸುಖದುಃಖಗಳನ್ನನುಭವಿಸಿದ್ದೇವೆ. ಆದರೂ ನಮಗೆ ಶಾಂತಿ ದೊರೆತಿಲ್ಲವೆಂದ ಮೇಲೆ ಸಂಸಾರವೆಲ್ಲ ದೋಷಮಯವೆಂಬುದಕ್ಕೆ ಅಡ್ಡಿ ಏನು? ನಮಗೆ ಅನೇಕ ಜನ್ಮಗಳಾಗಿರುವವೆಂಬುದಕ್ಕೆ ಭೀಷ್ಮರದೊಂದು ಕಥೆ ಇದೆ. ಭೀಷ್ಮರು ದೇಹತ್ಯಾಗ ಮಾಡುವಾಗ ತಮ್ಮನ್ನು ಯಾರ ದಹನವೂ ಆಗದಿರುವ ಸ್ಥಲದಲ್ಲಿಟ್ಟು ದಹಿಸಬೇಕೆಂದು ಅರ್ಜುನನಿಗೆ ಹೇಳಿದ್ದರಂತೆ. ಅರ್ಜುನನು ಆಮೇಲೆ ಅವರ ದೇಹವನ್ನು ಎಲ್ಲೆಲ್ಲಿಡುವದಕ್ಕೆ ಹೋದರೂ ಅಲ್ಲಲ್ಲಿ ಭೂಮಿಯು “ಶತಂ ಭೀಷ್ಮಾಃ” ಎಂದು ಧ್ವನಿಗೆಯ್ಯುತ್ತಿತ್ತಂತೆ. ನೂರು ಜನ ಭೀಷ್ಮರ ದಹನವು ಅಲ್ಲಿಯೇ ಆಗಿರುವದೆಂದು ಆದರ ಅರ್ಥ. ಹೀಗೆ ಸೃಷ್ಟಿ ಎಷ್ಟು ವಿಸ್ತಾರವಾಗಿದೆಯೋ ಅಷ್ಟು ಕಡೆಯಲ್ಲೆಲ್ಲ ನಮ್ಮ ಹುಟ್ಟುಸಾವುಗಳಾಗಿದೆ. ಇನ್ನು ನಮಗೆ ಬೇಸರವು ಹುಟ್ಟದೆ ಇರುವದು ಶೋಚನೀಯವಲ್ಲವೆ? ಇದರ ಕಲ್ಪನೆಯನ್ನು ಶ್ರೀಸರ್ಪಭೂಷಣಶಿವಯೋಗಿಗಳು ಎಷ್ಟು ಚೆನ್ನಾಗಿ ಮಾಡಿಕೊಟ್ಟಿದ್ದಾರೆ. ನೋಡಿರಿ—

ರಾಗ— ಪದ.

ಇನ್ನಾದರೀಭವಕೆ ಬೇಸರಬಾರದೆ ಮನುಜ ।
ನಿನ್ನ ಮನಸಿನ ಬಲುಮೆನೇನೆಂಬೆನಮಮಾ! ॥ಪ॥
ಏಳು ಜನ್ಮಗಳ ಯೋನಿಯೊಳೆಲ್ಲ ಪೊರಮಟ್ಟು ।
ಏಳ್ಪಿಯನಿತು ನೊಂದೆವಾಳಸೆಂದು ॥
ಏಳು ದ್ವೀಪವನೆಲ್ಲ ನಿನ್ನ ಸುಡುಗಾಡೆನಿಸಿ ।
ಏಳು ಕುಲಗಿರಿಗಳೆನಿತಸ್ಥಿಗಳ ಕೆಡಹಿ ॥೧॥
ಧರೆಯ ಮರಿಕಂಗಳೆಲ್ಲವನು ಕಡೆಗಂಡು ಯಮ ।
ಪುರದ ಬಾಗಿಲನೆಲ್ಲ ತೆರೆಸಿ ದಾಕಿ ॥

ಸಮಚಿತ್ತತ್ವ– ಹರ್ಷದಿಂದ ಉಬ್ಬದೆ ವಿಷಾದದಿಂದ ತಗ್ಗದೆ ಇರುವದು. ಈ ಸ್ಥಿತಿಯೊಂದುಂಟಾದರೆ

"ಇಹೈವ ತೈರ್ಜಿತಸ್ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ"

ಎಂಬ ಗೀತೋಕ್ತಿಯಂತೆ ಈ ಶರೀರದಲ್ಲಿದ್ದೇ ಪ್ರಪಂಚವನ್ನು ಜಯಿಸಿದಂತಾಯಿತು. ಇದರ ವಿಷಯದಲ್ಲಿ ಒಂದು ನೀತಿಶಾಸ್ತ್ರವು ಹೇಳುವದೇನೆಂದರೆ—

"ಪಳಿವಾವುದು ಕುಲಭಂಗಂ, ।
ತಿಳಿವಾವುದು ಸಮತೆ, ಬಂಧವಾವುದು ಮೋಹಂ ॥
ಕೀಳಾವುದನ್ಯತವೆಡರಿಂ ।
ಮುಳಿವಾವುದು ಧೃತಿ ವಿವೇಕಚೂಡಾರತ್ನ ॥"

ಭಕ್ತಿ— ಪರಮಾತ್ಮನ ಮೇಲೆ ಪ್ರೇಮ.

ವಿವಿಕ್ತದೇಶಸೇವಿತ್ವ— ಜನಸಂಚಾರವಿಲ್ಲದ ಕಡೆ ಇರುವದು. ಈ ವಿಷಯದಲ್ಲಿ ಶ್ರೀರಾಮಕೃಷ್ಣಪರಮಹಂಸರ ಉಪದೇಶಗಳೇನೆಂದರೆ-

(೧) ಮುತ್ತಿನ ಚಿಪ್ಪಿನ ಮೀನು ಸ್ವಾತಿಯ ಮಳೆಯ ನೀರನ್ನು ಹಿಡಿದುಕೊಳ್ಳಬೇಕೆಂದು ಸಮುದ್ರದ ತಲವನ್ನು ಬಿಟ್ಟು ಮೇಲಕ್ಕೆ ಬಂದು ಸ್ವಾತಿಯ ಮಳೆಯ ನೀರು ಸಿಕ್ಕುವವರೆಗೂ ತನ್ನ ಚಿಪ್ಪಿನ ಬಾಯನ್ನು ಚೆನ್ನಾಗಿ ಅಗಲಿಸಿಕೊಂಡು ನೀರಿನ ಮೇಲೆ ತೇಲುತ್ತಿರುವದಂತೆ. ಆ ಮೇಲೆ ಅದು ನೀರಿನೊಳಕ್ಕೆ ಮುಳುಗಿ ಆ ಮಳೆಯ ಹನಿಯು ಒಂದು ಸುಂದರವಾದ ಮುತ್ತಿನ ಆಕೃತಿಯಾಗಿ ಪರಿಣಮಿಸುವವರೆಗೂ ಅಲ್ಲಿಯೇ ಇರುವದಂತೆ. ಹಾಗೆಯೆ ನಿತ್ಯಸುಖದ ಮಹಾದ್ವಾರವನ್ನು ತೆಗೆಯುವ ರಹಸ್ಯವನ್ನು ತಿಳಿಯುವದಕ್ಕಾಗಿ ಭಗವತ್ಸ್ವರೂಪರಾದ ಸದ್ಗುರುಗಳನ್ನು ಹುಡುಕಿಕೊಂಡು ಒಂದು ಕಡೆಯಿಂದ ಒಂದು ಕಡೆಗೆ ನಿಜವಾದ ಆಸಕ್ತಿಯಿಂದ ಹೋಗಿ ಬರುವವರು ಕೆಲವರಿದ್ದಾರೆ. ಅವರು ಹಾಗೆ ಅತ್ಯುತ್ಸಾಹದಿಂದ ಹುಡುಕುವದರಲ್ಲಿ ಅಂಥ ಗುರು ಒಂದು ಸಲ ಸಿಕ್ಕಿಬಿಟ್ಟನೆಂದರೆ ಅವರು ತಾವು ಬಹುಕಾಲದಿಂದ ಬಯಸುತ್ತಿರುವ ಬಂಧನಿವೃತ್ತ್ಯುಪಾಯಗಳನ್ನು ತಿಳಿದು ಒಡನೆಯೇ ಜನಸಂಘವನ್ನು ಬಿಟ್ಟು ಏಕಾಂತದಲ್ಲಿ ಮನ

ಸ್ವಸ್ಥಚಿತ್ತಾಗ್ರವಾಗಿ ಮಾಡಿಕೊಂಡು ತನಗೆ ನಿತ್ಯಸುಖಸಿದ್ಧಿಯಾಗುವವರೆಗೂ ಅಲ್ಲಿಯೇ ಇರುತ್ತಾರೆ.

(೨) ಒಂದು ಸಲ ಬ್ರಹ್ಮಸಮಾಜಕ್ಕೆ ಸೇರಿದ ಕೆಲವು ಹುಡುಗರು ತಾವು ಈ ಪ್ರಪಂಚದಲ್ಲಿದ್ದು ಅದರ ಆಸಕ್ತಿಯನ್ನು ಎಳ್ಳಷ್ಟೂ ಹಚ್ಚಿಕೊಳ್ಳದೆ ಜನಕನ ಉದಾಹರಣೆಯನ್ನು ಅನುಕರಿಸುತ್ತಿರುವೆನೆಂದು ಹೇಳಿದರು. ಆಗ ನಾನು ಹಾಗೆ ಹೇಳುವದು ಮಾತ್ರ ಸುಲಭವೆಂದೂ ಜನಕನಾಗಿಯೇ ಇರುವ ಮಾತೇ ಬೇರೆಯೆಂದೂ ಅವರಿಗೆ ಉತ್ತರವನ್ನು ಕೊಟ್ಟೆನು. ಪ್ರಪಂಚವ್ಯವಹಾರದಲ್ಲಿ ಅದರ ಹೆಚ್ಚುಕುಂದುಗಳನ್ನು ಹತ್ತಿಸಿಕೊಳ್ಳದೆ ನಡೆಯುವದು ಬಹು ಕಷ್ಟ. ಮೊದಲು ಜನಕನು ಯಾವ ಉಗ್ರತಪಶ್ಚರ್ಯೆಯನ್ನು ಸಾಧಿಸಲಿಲ್ಲ! ಅಂಥ ಕಷ್ಟಕಾರ್ಯಗಳನ್ನು ನೀವು ಸಹಿಸಬೇಕೆಂದು ನಾನು ಹೇಳುವದಿಲ್ಲ. ನಾನು ನಿಮಗೆ ಹೇಳುವದೇನೆಂದರೆ- ಅವಶ್ಯ ಭಕ್ತಿಸಾಧನಗಳನ್ನು ನಡೆಸಿಕೊಂಡು ಕೆಲವುಕಾಲ ಯಾವದಾದರೊಂದು ಏಕಾಂತಸ್ಥಲದಲ್ಲಿ ವಾಸಮಾಡಬೇಕು. ಜ್ಞಾನವನ್ನೂ ಭಕ್ತಿಯನ್ನೂ ಸಾಧಿಸಿಕೊಂಡ ಮೇಲೆ ಪ್ರಪಂಚವ್ಯವಹಾರದಲ್ಲಿ ಬೀಳಬಹುದು. ಹಾಲನ್ನು ಅಲ್ಲಾಡಿಸದೆ ಹಾಗೆಯೇ ಇಟ್ಟಿದ್ದರೆ ಒಳ್ಳೇ ಮೊಸರಾಗುವದು. ಪಾತ್ರೆಯನ್ನು ಒದಲು ಮಾಟಿದರೆ ಅಥವಾ ಅಲ್ಲಾಡಿಸಿದರೆ ಅದು ಕೆಡುವದು. ಜನಕನು ಅನಾಸಕ್ತನಾಗಿದ್ದನು. ಆದ್ದರಿಂದ ಅವನಿಗೆ 'ವಿದೇಹ' ಎಂದರೆ 'ದೇಹವಿಲ್ಲದವನು' ಎಂಬ ಒಂದು ವಿಶೇಷಣವು ಒಪ್ಪಿತು. ಅವನು ಅನಾಸಕ್ತನಾಗಿ ವ್ಯವಹರಿಸಿದನು. ದೇಹಭಾನವನ್ನು ಮರೆತಿರುವ ಸ್ಥಿತಿಯನ್ನು ಸಾಧಿಸುವದು ಬಹು ಕಷ್ಟ. ನಿಜವಾಗಿ ಜನಕನು ಮಹಾಧೀರನು. ಅವನು ಜ್ಞಾನ ಮತ್ತು ಕರ್ಮ ಎಂಬ ಎರಡು ಕತ್ತಿಗಳನ್ನೂ ಏಕಕಾಲದಲ್ಲಿ ಬಳಸುತ್ತಿದ್ದನು.

(೩) ಪ್ರಪಂಚವ್ಯವಹಾರದಲ್ಲಿ ಅನಾಸಕ್ತರಾಗಿ ಬಾಳು ಮಾಡಬೇಕೆಂಬ ಮನಸ್ಸಿದ್ದರೆ ನೀವು ಮೊದಲು ಕೆಲವುಕಾಲ ಏಕಾಂತದಲ್ಲಿ ಒಂದು ವರ್ಷವಾಗಲಿ, ಆರು ತಿಂಗಳಾಗಲಿ, ಒಂದು ತಿಂಗಳಾಗಲಿ, ಕೊನೆಗೆ ಹನ್ನೆರಡು ದಿವಸಗಳಾಗಲಿ ಭಕ್ತಿಸಾಧನಗಳನ್ನು ಅಭ್ಯಾಸಮಾಡಬೇಕು. ಆ ಏಕಾಂತವಾಸದಲ್ಲಿ ನೀವು ಅಖಂಡಧ್ಯಾನನಿರತರಾಗಿ ಭಕ್ತಿಯನ್ನು

ಬಯಸಿ ಭಗವಂತನನ್ನು ಪ್ರಾರ್ಥಿಸಬೇಕು. ಈ ಪ್ರಪಂಚದಲ್ಲಿ ನನ್ನದೆಂದು ಹೇಳಬಹುದಾದುದು ಯಾವದೂ ಇಲ್ಲವೆಂದೂ ನಾವು ಈಗ ನನ್ನದೆಂದು ತಿಳಿದಿರುವದೆ ಕಣ್ಣು ಮುಚ್ಚಿಲ್ಲ ಬಿಡುವದರೊಳಗೆ ಹೋಗಿ ಬಿಡಬಹುದೆಂದೂ ಎಲ್ಲವನ್ನೂ ಮನಸ್ಸಿನಲ್ಲಿ ತೂಕಮಾಡುತ್ತಿರಬೇಕು. ನಿಜವಾಗಿ ದೇವರೊಬ್ಬನು ನಮ್ಮವನು. ಅವನೇ ನಮ್ಮ ಸರ್ವಸ್ವ. ಅವನ ಒಲುಮೆಯನ್ನು ಹೇಗೆ ಪಡೆಯಬೇಕೆಂಬುದೊಂದೇ ನಮಗೆ ವಿಚಾರಾಸ್ಪದವಾದ ವಿಷಯ.

(೪) ಭಕ್ತಿಸಾಧನಗಳನ್ನು ನಡೆಸುವಾಗ ಅವನ್ನು ಕಂಡು ನಗುವವರನ್ನೂ, ಭಕ್ತಿಯನ್ನೂ ಭಕ್ತರನ್ನೂ ನೋಡಿ ಅಪಹಾಸ್ಯಮಾಡುವವರನ್ನೂ ಬಿಟ್ಟು ದೂರವಾಗಿರಬೇಕು.

(೫) ಆಸೆಯ ಮೊಸ್ಸನ್ನು ಚೆನ್ನಾಗಿ ತೊಳೆದು ಅವ್ಯಲ್ಲ ಅದರ ಮನಸ್ಸು ಬಂದಂತೆ ಇರುವದಕ್ಕೆ ಬಿಟ್ಟರೆ ಅದು ಕ್ಷಣಮಾತ್ರದಲ್ಲಿ ಮೈಯನ್ನು ಹೊಲಸು ಮಾಡಿಕೊಳ್ಳುವದು ನಿಶ್ಚಯ. ಆದರೆ ಮೈ ತೊಳೆದಾಗುತ್ತಲೇ ಅವನ್ನು ಅದರ ಸ್ಥಲಕ್ಕೆ ಕಟ್ಟಿಹಾಕಿದರೆ ಅದರ ಶುಚಿತ್ವವು ಉಳಿದುಕೊಳ್ಳುವದು. ಹಾಗೆ ಸತ್ಪುರುಷರ ಸಹವಾಸದ ಪ್ರಭಾವದಿಂದ ನೀವು ಒಂದು ಸಲ ಮನೋನೈರ್ಮಲ್ಯವನ್ನು ಪಡೆದ ಮೇಲೆ ಪ್ರಾಪಂಚಿಕರೊಡನೆ ಎಂದಿನಂತೆ ಧಾರಾಳವಾಗಿ ಸೇರುತ್ತ ಹೋದರೆ ಆ ಮನೋನೈರ್ಮಲ್ಯವನ್ನು ನೀವು ಕಳೆದುಕೊಳ್ಳುವದೇ ಖಂಡಿತ. ಆದರೆ ಮನಸ್ಸನ್ನು ದೇವರ ಧ್ಯಾನದಲ್ಲಿ ತತ್ಪರವಾಗಿ ಮಾಡಿದರೆ ನೀವು ಎಂದೆಂದಿಗೂ ಅಪವಿತ್ರರಾಗುವ ಸಂಭವವಿಲ್ಲ.

ಜನಸಮೂಹಕ್ಕೆ ದೂರವಾಗಿರುವದು— ಈ ವಿಷಯದಲ್ಲಿ ಶ್ರೀರಾಮಕೃಷ್ಣಪರಮಹಂಸರು ಹೇಳಿರುವದೇನೆಂದರೆ—

(೧) ಹಾಲನ್ನೂ ನೀರನ್ನೂ ಬೆರೆಸಿಬಿಟ್ಟರೆ ಆಮೇಲೆ ಹಾಲನ್ನೇ ಬೇರೆ ಮಾಡುವದಕ್ಕಾಗದಂತೆ ಅವೆರಡೂ ಸೇರಿಕೊಳ್ಳುತ್ತವೆ. ಹಾಗೆಯೇ ಆತ್ಮೋನ್ನತಿಯನ್ನು ಹಾರೈಸುವ ಸಾಧಕರು ವಿವೇಕವಿಲ್ಲದೆ ಕಂಡಕಂಡ ಪ್ರಾಪಂಚಿಕರೊಡನೆ ಸೇರಿದರೆ ಅವರ ಉದ್ದೇಶವು ವ್ಯರ್ಥವಾಗುವದಲ್ಲದೆ ಅವರ ಮೊದಲಿನ ವಿಶ್ವಾಸವೂ ಪ್ರೇಮವೂ ಉತ್ಸಾಹವೂ ಕೂಡ ನಿರ್ನಾಮವಾಗುವವು.

(೨) ಮೊಸರನ್ನು ಕಡೆದು ತೆಗೆದ ಬೆಣ್ಣೆಯನ್ನು ಅದೇ ಪಾತ್ರೆಯಲ್ಲಿ ಆ ಮಜ್ಜಿಗೆಯಲ್ಲಿಯೇ ಇಡಬಾರದು. ಏಕೆಂದರೆ ಆಗ ಅದರ ಸ್ನೇಹಾಕರ್ಷಣಶಕ್ತಿಯೂ ರುಚಿಯೂ ಸ್ವಲ್ಪ ಕಡಿಮೆಯಾಗುವದು. ಅದನ್ನು ಬೇರೆ ಪಾತ್ರೆಯಲ್ಲಿ ಒಳ್ಳೇ ನೀರಿನಲ್ಲಿಡಬೇಕು. ಹಾಗೆಯೇ ಈ ಪ್ರಪಂಚದಲ್ಲಿ ಅಷ್ಟಿಷ್ಟು ಪರಮಾರ್ಥವೃತ್ತಿಯನ್ನು ಸಾಧಿಸಿದ ಮೇಲೆ ಯಾವನಾದರೂ ಇನ್ನೂ ಪ್ರಾಪಂಚಿಕರಲ್ಲಿ ಬೆರೆತು ವಿಷಯಗಳ ಸಂದಣಿಯಲ್ಲಿ ವಾಸಮಾಡಿದರೆ ಅವನು ಕೆಡುವ ಸಂಭವವುಂಟು.' ಅವನು ಅವುಗಳಿಗೆ ದೂರವಾಗಿದ್ದರೆ ಯಾವಾಗಲೂ ಶುದ್ಧನಾಗಿ ಉಳಿದುಕೊಂಡಿರುವನು.

ಅಧ್ಯಾತ್ಮಜ್ಞಾನನಿತ್ಯತ್ವ—ಜಗತ್ತು ನಾಯಿ ಬಾಲದಂತೆ ಯಾವಾಗಲೂ ವಕ್ರವಾಗಿಯೇ ತೋರುತ್ತ ಪ್ರತಿಕ್ಷಣವೂ ನಾಶವಾಗುತ್ತಿರುವ ಸ್ವಭಾವದ್ದಾಗಿರುವದೆಂದೂ ಆತ್ಮಜ್ಞಾನವು ಮಾತ್ರ ಯಾವಾಗಲೂ ಏಕರೂಪವಾಗಿರುವದೆಂದೂ ಭಾವಿಸುವದು.

ತತ್ತ್ವಜ್ಞಾನಾರ್ಥದರ್ಶನ—ತತ್ತ್ವಜ್ಞಾನದಿಂದಾಗುವ ಪರಿಣಾಮದ ವೈಭವವನ್ನು ಮನಸ್ಸಿನಲ್ಲಿ ಎಡೆಬಿಡದೆ ಆಲೋಚಿಸುತ್ತಿರುವದು.

ಹೀಗೆ ಎಷ್ಟೋ ಸಾಧನೆಗಳಿರುವವು. ಅವುಗಳಲ್ಲಿ ಮೇಲೆ ಹೇಳಿದವುಗಳು ಗೀತೆಯಲ್ಲಿ ಆರಿಸಿದವುಗಳಾಗಿರುವವು. ಇವುಗಳನ್ನೆಲ್ಲಾ ಒಟ್ಟುಗೂಡಿಸಿ ಸಂಕ್ಷೇಪವಾಗಿ ನಾಲ್ಕೇ ಮಾತಿನಲ್ಲಿಯೂ ಹೇಳಬಹುದು. ಅದು ಹೇಗೆಂದರೆ ಒಂದನೇದು ಜಗತ್ತು ಮೂರು ದಿನದ ಬಾಳಿನದೆಂದೂ ಆತ್ಮನು ಅವಿನಾಶಿಯೆಂದೂ ತಿಳಿಯುವ ವಿವೇಕ; ಎರಡನೇದು ಮೂರು ದಿನದ ಬಾಳಿನ ಲೌಕಿಕವಿಷಯಗಳನ್ನು ಬಯಸದಿರುವ ವೈರಾಗ್ಯ; ಮೂರನೇದು ಬಯಕೆಗಳನ್ನೆಲ್ಲ ಬಿಡುವದರಿಂದ ಮನಸ್ಸಿನಲ್ಲಿ ಶಮದಮಾದಿಗಳು ಮೆಯ್ಗೂಡುವದು; ನಾಲ್ಕನೇದು ಅವಿನಾಶಿಯಾದ ಆತ್ಮನ ಸಾಕ್ಷಾತ್ಕಾರದ ಬಯಕೆ. ಈ ನಾಲ್ಕನ್ನು ಶಾಸ್ತ್ರಕಾರರು ಸಾಧನಚತುಷ್ಟಯವೆಂದು ಕರೆಯುತ್ತಾರೆ.

## ದೇಹಾತ್ಮಜ್ಞಾನದ ನಾಶ.

ಈ ಎಲ್ಲಾ ಸಾಧನಗಳನ್ನೂ ಒಳಗೊಂಡಿರುವಂಥ ಒಂದು ಸಾಧನವನ್ನು ಹೇಳಬೇಕೆಂದರೆ ದೇಹಾತ್ಮಜ್ಞಾನವನ್ನು ನಾಶಮಾಡಿಕೊಳ್ಳುವದು. ಇದರ ಹೆಚ್ಚುಗಾರಿಕೆಯ ವಿಷಯದಲ್ಲಿ ಶ್ರೀಸರ್ಪಭೂಷಣ ಶಿವಯೋಗಿಗಳು ಹೇಳಿರುವದೇನೆಂದರೆ —

ರಾಗ — ಮೋಹನ ಕಲ್ಯಾಣಿ

ವೇದಾಂತವನು ತಿಳಿದೊಡೇನು ತನುಧರ್ಮಗಳ ।
ಬಾಧೆ ತನಗಿಲ್ಲವೆಂದರಿವುದತಿಶಯವು || ಪ ||
ಸುಮ್ಮನಿಹ ಸೂಜಿಗಲ್ಲಿನ ಸನ್ನಿಧಿಯ ಸೂಜಿ ।
ಸಮ್ಮ ಚೇಷ್ಟಿಸಿ ಬಿಟ್ಟು ಚಲಿಸದಿರುವಂತೆ ||
ಸಮ್ಮ ತನುವೆನ್ನನಿದು ನಟಿಸಿ ಬಿಟ್ಟಳಿಯೆ ನಾ ।
ಸುಮ್ಮನುಳಿದಿಹೆನೆಂಬ ತಿಳಿವದುದಯಿಸದೆ || ೧ ||
ಇನನಾತಪದಿ ಸಂತೆಯವರು ವ್ಯವಹರಿಸುತೆ ।
ತನಗನ್ಯವದ ತತ್ತ್ವಪಂಚಪಿಂಡಗಳ್ ||
ಅನುಕರಿಸಿ ತಮ್ಮ ಕೃತ್ಯವ ತಾವೆ ವ್ಯಥಪಡುವ ।
ಮನಗೇನು ಹಾನಿಯುಂಟರಿವೆ ನೆಲೆಗೊಳದೆ || ೨ ||
ಒಡೆ ಮರೆಯಾಗಿ ಮುಂಗಿರೋಳದಡವಾದ ದನಿಯೂ ।
ಅಡಮವೀತನುಧರ್ಮವೆಲ್ಲವೀ ಪರಿಯೋಳ್ ||
ರೂಢಿಸಿದ ಗುರುಸಿದ್ಧನಾಗಿವಕೆ ಬತ್ರಫಯು ।
ಮಾಡಿಕೊಂಡಿಹನೆಂಬ ಸುಖದುದಯಿಸದೆ || ೩ ||

ಈ ದೇಹ ಮೊದಲಾದವುಗಳೇ ಆತ್ಮನೆಂಬ ಜ್ಞಾನವು ಸೃಷ್ಟಿಯಾದಾಗಿನಿಂದಲೂ ಬಂದಿರುವದೆಂದು ತೈತ್ತಿರೀಯೋಪನಿಷತ್ತಿನ ಭೃಗುವಲ್ಲಿಯಿಂದ ತಿಳಿಯುತ್ತದೆ. ವರುಣನ ಮಗನಾದ ಭೃಗು ತಂದೆಯಾದ ವರುಣನ ಬಳಿಗೆ ಹೋಗಿ ಆತ್ಮಸ್ವರೂಪವನ್ನು ಬೋಧಿಸೆಂದು ಕೇಳಿದನು. ಜಗತ್ತಿನ ಸೃಷ್ಟಿಸ್ಥಿತಿನಾಶಗಳಿಗೆ ಕಾರಣವಾದದ್ದೇ ಆತ್ಮನೆಂದೂ ಅದನ್ನು ವಿಚಾರದಿಂದ ನಿಶ್ಚಯಿಸಿಕೊಳ್ಳೆಂದೂ ತಂದೆಯು ಹೇಳಿದನು. ಮಗನು ವಿಚಾರಮಾಡಿ ಸ್ಥೂಲಶರೀರವನ್ನೇ ಆತ್ಮನೆಂದು ತಿಳಿದನು. ಏಕೆಂದರೆ ಈ ಸ್ಥೂಲಶ

ರೀರವು ಸ್ಥೂಲವಾದ ಶರೀರದಿಂದಲೇ ಹುಟ್ಟಿ ಸ್ಥೂಲವಾದ ಅನ್ನದಿಂದಲೇ ಬೆಳೆದು ಕೊನೆಗೆ ಸ್ಥೂಲವಾದ ಅನ್ನದಲ್ಲಿಯೇ -- ಸ್ಥೂಲವಸ್ತುಗಳಲ್ಲಿಯೇ-ಸೇರಿ ನಾಶವಾಗುವದು. ಹೀಗೆ ಜ್ಞಾನವಾದರೂ ಭೃಗುವಿಗೆ ಸಮಾಧಾನವಾಗಲಿಲ್ಲ. ಆದ್ದರಿಂದ ಅವನು ಮತ್ತೆ ತಂದೆಯ ಬಳಿಗೆ ಹೋಗಿ ಕೇಳಿದನು. ಇನ್ನೂ ವಿಚಾರವಮಾಡಿ ತಿಳಿಯೆಂದು ತಂದೆ ಹೇಳಿದನು.

ವಿಚಾರಮಾಡಲಾಗಿ ನನ್ನ ಶರೀರನೆಂದು ಹೇಳುವದರಿಂದಲೇ ಶರೀರವು ಆತ್ಮಕ್ಕಿಂತ ಬೇರೆಯಾದದ್ದೆಂದು ಗೊತ್ತಾಯಿತು. ದೇಹವು ಹೋದರೂ ಆತ್ಮವು ಮತ್ತೆ ಹುಟ್ಟುವದೆಂಬ ಮಾತಿನಿಂದಲೂ ಮರಣವಾಗುವ ದೇಹವು ಆತ್ಮವಾಗಲಾರದೆಂದು ನಿಶ್ಚಯವಾಯಿತು. ಆಮೇಲೆ ಅವನು ಅದಕ್ಕಿಂತ ಒಳಗಣ ಪ್ರಾಣವನ್ನು ಆತ್ಮನೆಂದು ತಿಳಿದನು. ಏಕೆಂದರೆ ಮರಣಸಮಯದಲ್ಲಿ ಮೂರ್ಛೆ ಉಂಟಾದಾಗ ಪ್ರಾಣವಿದ್ದರೆ ಜೀವಿಸಿರುವನೆಂದೂ ಪ್ರಾಣವಿಲ್ಲದಿದ್ದರೆ ಮರಣವಾಯಿತೆಂದೂ ಹತ್ತಿರದಲ್ಲಿದ್ದವರು ನೋಡಿ ಹೇಳುತ್ತಾರೆ. ಪ್ರಾಣವು ಹೋಗುತ್ತಲೇ ದೇಹವು ಶ್ಮಶಾನದಂತೆ ಅಮಂಗಲವಾಗಿಯೂ ಭಯಂಕರವಾಗಿಯೂ ಆಗುತ್ತದೆ. ಹೀಗೆ ಜೀವನವು ಪ್ರಾಣದ ಅಧೀನವಾಗಿರುವದರಿಂದ ಅವನಿಗೆ ಪ್ರಾಣವೇ ಆತ್ಮನೆಂಬ ಜ್ಞಾನವಾಯಿತು. ಅದರಿಂ ಸಮಾಧಾನವಾಗದೆ ಹೋದದರಿಂದ ಅವನು ಮತ್ತೆ ತಂದೆಯ ಬಳಿಗೆ ಹೋದನು. ಇನ್ನೂ ವಿಚಾರಮಾಡಿ ತಿಳಿಯೆಂದು ತಂದೆ ಹೇಳಿದನು.

ಮಗನು ಇನ್ನೂ ವಿಚಾರಮಾಡಿದನು. ನನ್ನ ಪ್ರಾಣನೆಂದು ನಾವು ಹೇಳುವದರಿಂದ ಪ್ರಾಣವು ಆತ್ಮಕ್ಕಿಂತ ಬೇರೆಯಾಗಿರಬೇಕೆನಿಸಿತು. ಮತ್ತು ನಿದ್ರೆಯನ್ನು ಮಾಡುವಾಗ ಉಸಿರಾಡುತ್ತಿದ್ದರೂ ಯಾರಾದರೂ ಬಂದು ಮನೆಯ ಸಾಮಾನುಗಳನ್ನು ತೆಗೆದುಕೊಂಡು ಹೋದರೆ ಅದರ ಕಳವಾಯಿತೆಂದು ತಿಳಿಯಲರಿಯದಂಥ ಜಡವಾದ ಪ್ರಾಣವು ಆತ್ಮವಾಗಲಾರದೆಂದು ನಿಶ್ಚಯವಾಯಿತು. ಆಮೇಲೆ ಅವನು ಅದಕ್ಕಿಂತ ಒಳಗಣ ಮನಸ್ಸನ್ನು ಆತ್ಮನೆಂದು ತಿಳಿದನು. ಏಕೆಂದರೆ ಹಿಂದೆ ಹೇಳಿದಂತೆ ಬಂಧಕ್ಕೂ ಮೋಕ್ಷಕ್ಕೂ ಮನಸ್ಸೇ ಕಾರಣವಾಗಿದೆ. ಮತ್ತು ಮನಸ್ಸಿನ ಸಂಬಂಧವಿಲ್ಲದಿದ್ದರೆ ಇಂದ್ರಿಯಗಳಿಗೆ ಜ್ಞಾನವಾಗುವದೇ ಇಲ್ಲ. ಹೀಗೆ

ಮನಸ್ಸೇ ಸರ್ವವ್ಯವಹಾರಕ್ಕೂ ಹೇತುವಾಗಿರುವದರಿಂದ ಮನಸ್ಸೇ ಆತ್ಮವೆಂಬ ಜ್ಞಾನವಾಯಿತು. ಆದರೂ ಸಮಾಧಾನವಾಗಲಿಲ್ಲ. ಆದ್ದರಿಂದ ಅವನು ಮತ್ತೆ ತಂದೆಯ ಬಳಿಗೆ ಹೋದನು. ಇನ್ನೂ ವಿಚಾರ ಮಾಡಿ ತಿಳಿಯೆಂದು ತಂದೆ ಹೇಳಿದನು.

ಮಗನು ಇನ್ನೂ ವಿಚಾರಮಾಡಿದನು. ನನ್ನ ಮನಸ್ಸೆಂದು ನಾವು ಹೇಳುವದರಿಂದ ಮನಸ್ಸು ಆತ್ಮಕ್ಕಿಂತ ಬೇರೆಯಾಗಿರಬೇಕೆನಿಸಿತು. ಮನಸ್ಸಿನ ವ್ಯಾಪಾರವು ಬುದ್ಧಿಗೆ ಅಧೀನವಾಗಿರುವದರಿಂದ ಪರತಂತ್ರವಾದ ಮನಸ್ಸು ಆತ್ಮವಾಗಲಾರದೆಂದು ನಿಶ್ಚಯವಾಯಿತು. ಆಮೇಲೆ ಅವನು ಅದಕ್ಕಿಂತ ಒಳಗಿನ ಬುದ್ಧಿಯನ್ನು ಆತ್ಮವೆಂದು ತಿಳಿದನು. ಆದರೂ ಸಮಾಧಾನವಾಗಲಿಲ್ಲ. ಆದ್ದರಿಂದ ಅವನು ಮತ್ತೆ ತಂದೆಯ ಬಳಿಗೆ ಹೋದನು. ಇನ್ನೂ ವಿಚಾರಮಾಡಿ ತಿಳಿಯೆಂದು ತಂದೆ ಹೇಳಿದನು.

ಮಗನು ಇನ್ನೂ ವಿಚಾರಮಾಡಿದನು. ನನ್ನ ಬುದ್ಧಿಯೆಂದು ನಾವು ಹೇಳುವದರಿಂದ ಬುದ್ಧಿಯು ಆತ್ಮಕ್ಕಿಂತ ಬೇರೆಯಾಗಿರಬೇಕೆನಿಸಿತು. ಮತ್ತು ಬುದ್ಧಿಯು ಕೋಲುಮಿಂಚಿನಂತೆ ಕ್ಷಣಿಕವಾದುದರಿಂದ ಅಂಥ ಬುದ್ಧಿಯು ಆತ್ಮವಾಗಲಾರದೆಂದು ನಿಶ್ಚಯವಾಯಿತು. ಆಮೇಲೆ ಅವನು ಅದಕ್ಕಿಂತ ಒಳಗಿನ ಬುದ್ಧಿಸಾಕ್ಷಿಯಾದ ಆತ್ಮನನ್ನು ತಿಳಿದು ಶಾಂತನಾದನು.

ತೈತ್ತಿರೀಯೋಪನಿಷತ್ತಿನ ಬ್ರಹ್ಮಾನಂದವಲ್ಲಿಯಲ್ಲಿಯೂ ಈ ವಿಚಾರವು ಬಂದಿದೆ. ಅದರಲ್ಲಿ ಆತ್ಮನನ್ನು ಹುಡುಕುವಾಗ ಬುದ್ಧಿಯಾದ ಮೇಲೆ ಇನ್ನೊಂದು ಮೆಟ್ಟಿಲು ಕಂಡುಬಂದಿದೆ ಅದಾವುದೆಂದರೆ—ಗಾಢನಿದ್ರೆಯ ಶೂನ್ಯಸ್ಥಿತಿ. ಅದು ಕೂಡ ಆತ್ಮವೆನಿಸಿಕೊಳ್ಳುವದಕ್ಕೆ ಯೋಗ್ಯವಲ್ಲ. ಏಕೆಂದರೆ ಜಡವಾದ ವಸ್ತುಗಳಿಗೆಲ್ಲಾ ನಾಶವು ಕಣ್ಣಿಗೆ ಕಾಣುವದರಿಂದ ಆ ಜಡಸ್ಥಿತಿಯು ಆತ್ಮನಿಗೂ ನಾಶವಾಗಬೇಕಾಗುವದು. ಮತ್ತು ಆತ್ಮನಿಗೂ ನಾಶವಾಗಬೇಕಾದರೆ ಮೋಕ್ಷಕ್ಕಾಗಿ ಪಡುವ ಪ್ರಯತ್ನವೆಲ್ಲ ವ್ಯರ್ಥವಾಗುವದು. ಆದ್ದರಿಂದ ನಿದ್ರೆಯ ಅನುಭವಕ್ಕೆ ಆಧಾರವಾಗಿರುವ ಸ್ವರೂಪವು ಆತ್ಮವೆಂದು ನಿರ್ದಿಷ್ಟವಾಗುವದು.

ನಿಜವಾದ ಆತ್ಮನನ್ನು ಕಂಡುಹಿಡಿಯುವ ಪದ್ಧತಿಯು ಛಾಂದೋಗ್ಯೋಪನಿಷತ್ತಿನಲ್ಲಿ ಇನ್ನೊಂದು ಬಗೆಯಾಗಿದೆ. ಅದೇನೆಂದರೆ— ದೇವತೆ

ಗಳ ಸ್ವಾಮಿಯಾದ ಇಂದ್ರನೂ ಅಸುರರ ಸ್ವಾಮಿಯಾದ ವಿರೋಚನನೂ ಒಟ್ಟಿಗೆ ಆತ್ಮಸ್ವರೂಪವನ್ನು ತಿಳಿಯಬೇಕೆಂದು ಬ್ರಹ್ಮನ ಬಳಿಗೆ ಹೋಗಿ ಮೂವತ್ತೆರಡು ವರ್ಷ ಗುರುಕುಲವಾಸವನ್ನು ಮಾಡಿದರು. ಬ್ರಹ್ಮನು ಅಕ್ಷಿಪುರುಷನೇ ಆತ್ಮನೆಂದು ಹೇಳಿ ಅದನ್ನು ಮನಗಾಣಿಸುವದಕ್ಕೆ ಒಂದು ಪಾತ್ರೆಯ ತುಂಬ ನೀರನ್ನು ತುಂಬಿಸಿ ಅವರನ್ನು ಕರೆದು “ಅದರಲ್ಲಿ ನೋಡಿ ಆತ್ಮನ ಸ್ವರೂಪವನ್ನು ಮನಗಾಣಿರಿ” ಎಂದು ಹೇಳಿದನು. ಅವರು ನೋಡಿ ಅದರಲ್ಲಿ ತಮ್ಮ ಶರೀರದ ಪ್ರತಿಬಿಂಬವು ಕಾಣುವದೆಂದು ಹೇಳಿದರು. ಮತ್ತೆ ವಸ್ತ್ರಾಲಂಕಾರಭೂಷಿತರಾಗಿ ನೋಡಿ ಹೇಳಿರೆಂದು ಬ್ರಹ್ಮನ ಆಜ್ಞೆಯಾಯಿತು. ತಮ್ಮ ವಸ್ತ್ರಾಲಂಕಾರಗಳು ಕಾಣುವವೆಂದು ಅವರು ಹೇಳಿದರು. ಬ್ರಹ್ಮನು ಇದರಿಂದ ಆತ್ಮನನ್ನು ತಿಳಿಯಿರೆಂದು ಹೇಳಿದನು. ದೇಹಕ್ಕೆ ಸಾಕ್ಷಿಯಾಗಿ ನೋಡುವದರ ಹೆಚ್ಚುಗಾರಿಕೆಯನ್ನು ಗ್ರಹಿಸದೆ ದೇಹವೆ ಆತ್ಮವೆಂದು ತಿಳಿದು ಅವರು ಶಾಂತರಾಗಿ ಹೊರಟರು. ಅವರನ್ನು ನೋಡಿ ಬ್ರಹ್ಮನು “ನೀವು ನಿಶ್ಚಯಜ್ಞಾನವನ್ನು ಮಾಡಿಕೊಳ್ಳದೆ ಹೋಗುತ್ತೀರಿ; ಇಷ್ಟರಿಂದಲೇ ತೃಪ್ತರಾಗುವವರಿಗೆ ಪರಾಜಯವಾಗುವದು” ಎಂದು ಎಚ್ಚರಿಕೆಯನ್ನು ಕೊಟ್ಟನು. ಆದರೂ ವಿರೋಚನನು ಹಾಗೆಯೇ ಹೋಗಿ ತನ್ನವರಿಗೆಲ್ಲಾ ದೇಹವೇ ಆತ್ಮವೆಂದು ಉಪದೇಶ ಮಾಡಿದನು. ಇಂದ್ರನಿಗೆ ಮಾತ್ರ ಮನಸ್ಸಿನಲ್ಲಿ ವಿಚಾರವು ಹುಟ್ಟಿತು. ನಾಶವಾಗುವ ಶರೀರವು ಆತ್ಮವಾಗಲಾರದೆಂದು ಯೋಚಿಸಿ ಅವನು ಬ್ರಹ್ಮನ ಕಡೆಗೆ ಬಂದನು.

ಆಗ ಮತ್ತೆ ಇಂದ್ರನು ಮೂವತ್ತೆರಡು ವರ್ಷ ಗುರುಕುಲವಾಸ ಮಾಡಿದ ಮೇಲೆ ಬ್ರಹ್ಮನು “ಸ್ವಪ್ನದಲ್ಲಿ ನಾನಾವಿಧಭೋಗವನ್ನು ಭೋಗಿಸುವವನು ಆತ್ಮನು” ಎಂದು ಹೇಳಿದನು. ಮತ್ತೆ ಇಂದ್ರನಿಗೆ ವಿಚಾರವು ಹುಟ್ಟಿತು. ಎಚ್ಚರದಲ್ಲಿ ಕುರುಡನಾಗಿದ್ದರೂ ಸ್ವಪ್ನದಲ್ಲಿ ಬೇಕಾದ ವಸ್ತುಗಳನ್ನು ನೋಡಬಹುದು. ಇಂಥ ಅನೇಕ ಲಕ್ಷಣಗಳಿಂದ ಸ್ವಪ್ನದ ಆತ್ಮನು ಸ್ಥೂಲದೇಹದಂತಲ್ಲ. ಆದರೆ ಸೂಕ್ಷ್ಮದೇಹವೂ ಸಾಯುವದರಂತೆಯೂ ಓಡುವದರಂತೆಯೂ ಅಳುವದರಂತೆಯೂ ನಗುವದರಂತೆಯೂ ಇರುವದಾದದರಿಂದ ಅದೂ ಆತ್ಮವಾಗಲಾರದೆನಿಸಿತು.

ಆಗ ಅವನು ಮತ್ತೆ ಬಂದು ಬ್ರಹ್ಮನಲ್ಲಿ ಮೂವತ್ತೆರಡು ವರ್ಷ ಗುರುಕುಲವಾಸವನ್ನು ಮಾಡಿದನು.

ಆಗ ಬ್ರಹ್ಮನು "ಕನಸಿನ ಅನುಭವವು ಕೂಡ ಇಲ್ಲದೆ ಜೀವನ ಇಂದ್ರಿಯವೃತ್ತಿಗಳೆಲ್ಲಾ ಅಸ್ತವಾಗಿರುವಾಗ ಪ್ರಸನ್ನನಾಗಿರುವವನು ಆತ್ಮನು." ಎಂದು ಹೇಳಿದನು. ಮತ್ತೆ ಇಂದ್ರನಿಗೆ ವಿಚಾರವು ಹುಟ್ಟಿತು. ನಾನಿರುವೆನೆಂಬ ಮತ್ತು ಜಗತ್ತಿರುವದೆಂಬ ಯಾವ ಅರಿವೂ ಇಲ್ಲದವನು ಆತ್ಮನಾಗಿರಲಾರನೆನಿಸಿತು. ಆದ್ದರಿಂದ ಅವನು ಬಂದು ಮತ್ತೆ ಐದು ವರ್ಷ ಗುರುಕುಲವಾಸವನ್ನು ಮಾಡಿದನು.

ಹೀಗೆ ಇಂದ್ರನು ನೂರೊಂದು ವರ್ಷ ಗುರುಕುಲವಾಸವನ್ನು ಮಾಡಿದ ಮೇಲೆ "ಈ ಸ್ಥೂಲಶರೀರವನ್ನೂ ಪ್ರಾಣ, ಮನಸ್ಸು ಮತ್ತು ಬುದ್ಧಿ– ಇವುಗಳಿಂದ ಕೂಡಿದ ಸೂಕ್ಷ್ಮಶರೀರವನ್ನೂ ಗಾಢನಿದ್ರೆಯಲ್ಲಿ ಏನೂ ತಿಳಿಯದಂತಿರುವ ಕಾರಣಶರೀರವನ್ನೂ ಆತ್ಮವೆಂದು ತಿಳಿಯದೆ ಇವಕ್ಕೆಲ್ಲ ಆಧಾರಭೂತವಾದ ಚೈತನ್ಯವನ್ನು ಆತ್ಮವೆಂದು ತಿಳಿ"ಯೆಂದು ಬ್ರಹ್ಮನು ಹೇಳಿದನು. ಆಗ ಇಂದ್ರನಿಗೆ ಸಮಾಧಾನವಾಯಿತು. ಮನುಷ್ಯನ ಹುಟ್ಟುಸಾವುಗಳಿಗೆ ಕಾರಣಗಳಾದ ವಾಸನೆಗಳೆಲ್ಲ ಈ ಶರೀರಗಳನ್ನು ಆತ್ಮವೆಂದು ತಿಳಿಯುವದರಿಂದ ಉಂಟಾಗುವವು. ಈ ಶರೀರಗಳು ಆತ್ಮವಲ್ಲವೆಂದು ತಿಳಿದರೆ ಅವನಿಗೆ ಸರ್ವವಾಸನಾಕ್ಷಯವೂ ಆಗಿ ಆತ್ಮಜ್ಞಾನವಾಗುವದು. ಶರೀರವೆಂಬ ಮಾತಿನಿಂದಲೇ ಇವು ನಾಶವಾಗತಕ್ಕವುಗಳೆಂದರ್ಥವಾಗುತ್ತದೆ. ಆತ್ಮನ ಲಕ್ಷಣವು ಶರೀರಕ್ಕಿಂತ ಬಹಳ ಭಿನ್ನವಾದದ್ದು. ಗೀತೆಯಲ್ಲಿ ನೋಡಿರಿ—

"ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।
ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥"

ಎಂದರೆ– ಆತ್ಮನನ್ನು ತುಂಡುಮಾಡುವದಕ್ಕೆ ಬರುವದಿಲ್ಲ; ಸುಡುವದಕ್ಕೆ ಬರುವದಿಲ್ಲ; ನನೆಸುವದಕ್ಕೆ ಬರುವದಿಲ್ಲ; ಒಣಗಿಸುವದಕ್ಕೆ ಬರುವದಿಲ್ಲ; ಅದು ನಾಶವಿಲ್ಲದ್ದು, ಎಲ್ಲೆಲ್ಲಿಯೂ ವ್ಯಾಪಿಸಿರುವದು, ಸ್ಥಿರವಾದದ್ದು, ಅಲ್ಲಾಡದಂಥದ್ದು, ಅನಾದಿಯಾಗಿರುವಂಥದ್ದು. ಮತ್ತು

“ನ ಜಾಯತೇ ಮ್ರಿಯತೇ ವಾ ಕದಾಚಿನ್ನಾಯಂ ಭೂತ್ವಾಽಭವಿತಾ ವಾ ನ ಭೂಯಃ।
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ॥”

ಎಂದರೆ– ಆತ್ಮನು ಎಂದೂ ಹುಟ್ಟುವವನೂ ಅಲ್ಲ. ಸಾಯುವವನೂ ಅಲ್ಲ; ಆತ್ಮನು ಆಗಾಗ ಇದ್ದು ಹೋಗುವಂಥವನಲ್ಲ. ಆದ್ದರಿಂದಲೇ ಅವನಿಗೆ ಹುಟ್ಟುವಿಕೆ ಇಲ್ಲ. ಅವನಿಗೆ ಮರಣವಿಲ್ಲದ್ದರಿಂದ ಅವನು ನಿತ್ಯನಾಗಿರುವನು. ಅವನಲ್ಲಿ ದಿನದಿನಕ್ಕೆ ಕಡಿಮೆಯಾಗುವ ವಿಕಾರವೂ ಇಲ್ಲ; ದಿನದಿನಕ್ಕೆ ಹೆಚ್ಚುವ ವಿಕಾರವೂ ಇಲ್ಲ. ಶರೀರವನ್ನು ಕೊಂದರೂ ಆತ್ಮನು ಸಾಯುವದಿಲ್ಲ.

ಹೀಗೆ ಸಚ್ಚಿದಾನಂದಸ್ವರೂಪನಾದ ಪರಮಾತ್ಮನ ನಿರಾಕಾರ ಸ್ವರೂಪದ ವರ್ಣನೆಗಳೂ ಸಾಕಾರಸ್ವರೂಪದ ವರ್ಣನೆಗಳೂ ಬೇರೆ ಬೇರೆ ಪುರಾಣಗಳಲ್ಲಿ ಸಮೃದ್ಧಿಯಾಗಿವೆ. ತಮತಮಗೆ ಇಷ್ಟವಾದ ಸ್ವರೂಪದ ವರ್ಣನೆಯನ್ನು ಆಯಾಪುರಾಣಗಳಿಂದ ತಿಳಿಯಬಹುದು. ಪರಮಾತ್ಮನ ಮತ್ತು ಗುರುಗಳ ಅನುಗ್ರಹವಾದಾಗ ಆ ಸ್ವರೂಪದ ಸಾಕ್ಷಾತ್ಕಾರವಾಗುವದು.

## ಜ್ಞಾನಿಯ ಲಕ್ಷಣ.

ದೇವರ ಸಾಕ್ಷಾತ್ಕಾರವಾಗುವದಕ್ಕೆ ಮೊದಲು ದೇಹಾತ್ಮಬುದ್ಧಿಯು ತೊಲಗಬೇಕು. ಅದೊಂದು ದೂರವಾಯಿತೆಂದರೆ ಅವನ ಯೋಗ್ಯತೆಯು ಮುಗಿಲು ಮುಟ್ಟುವದು. ಶ್ರೀಶಂಕರಭಗವತ್ಪಾದರು ಒಂದು ದಿನ ಕಾಶಿಯಲ್ಲಿ ಗಂಗಾಸ್ನಾನವನ್ನು ಮಾಡಿಕೊಂಡು ಬರುತ್ತಿರುವಾಗ, ಇದಿರಾಗಿ ತಮ್ಮ ಸಮೀಪವನ್ನು ಸಮೆಯುತ್ತಿದ್ದ ಒಬ್ಬ ಚಂಡಾಲರೂಪಧಾರಿಯನ್ನು ಕಂಡು ದೂರವಾಗೆಂದು ಹೇಳಲು “ದೇಹಕ್ಕೆ ದೇಹವು ದೂರವಾಗಬೇಕೋ ಚೈತನ್ಯಕ್ಕೆ ಚೈತನ್ಯವು ದೂರವಾಗಬೇಕೋ?” ಎಂದು ಅವನು ಕೇಳಿದನು. ಒಡನೆ ಸಂತುಷ್ಟರಾದ ಆ ಜಗದ್ಗುರುಗಳು

“ಚಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿತ್ಯೇಷಾ ಮನೀಷಾ ಮಮ”

ಎಂದರೆ ಆತ್ಮನು ದೇಹಕ್ಕಿಂತ ಭಿನ್ನನೆಂಬಷ್ಟು ಜ್ಞಾನವನ್ನು ಪಡೆದಿರುವವನು ಚಂಡಾಲನಾದರೂ ಆಗಲಿ, ಬ್ರಾಹ್ಮಣನಾದರೂ ಆಗಲಿ. ಅವನು ನನಗೆ ಗುರುವೆಂದು ಅವನನ್ನು ಶ್ಲಾಘಿಸಿದರು.

ದೇಹಾತ್ಮಬುದ್ಧಿಯನ್ನು ಕಳೆದುಕೊಂಡು ಆತ್ಮಜ್ಞಾನವನ್ನು ಪಡೆದುಕೊಂಡವರ ಲಕ್ಷಣಗಳ ವಿಷಯದಲ್ಲಿ ಭಗವದ್ಗೀತೆಯು ಹೇಳುವದೇನೆಂದರೆ-

"ಮನಸ್ಸಿನ ಎಲ್ಲ ಆಶೆಗಳನ್ನೂ ತೊರೆದು ಆತ್ಮಾನುಸಂಧಾನದಲ್ಲಿಯೇ ತೃಪ್ತನಾಗಿರುವವನು ಜ್ಞಾನಿಯು (೨-೫೫). ದುಃಖದಿಂದ ತಳಮಳಗೊಳ್ಳದೆ, ಸುಖಕ್ಕೆ ಬಾಯಿನೀರು ಕರೆಯದೆ, ವಿಷಯಗಳಸಂಬಂಧವಾದ ಪ್ರೀತಿ, ಹೆದರಿಕೆ, ಕೋಪ- ಇವುಗಳನ್ನು ಬಿಟ್ಟಿರುವವನು ಜ್ಞಾನಿಯು (೨-೫೬). ಯಾವದರಲ್ಲಿಯೂ ಅತಿಪ್ರೀತಿಯನ್ನಿಡದೆ, ಒಳ್ಳೆಯದಾದಾಗ ಹಿಗ್ಗದೆ, ಕೆಟ್ಟದ್ದಾದಾಗ ತಗ್ಗದೆ, ಇರುವವನು ಜ್ಞಾನಿಯು (೨-೫೭). ಆಮೆಯು ತನ್ನ ಅವಯವಗಳನ್ನೆಲ್ಲ ಸುಕ್ಕಿಸಿಕೊಳ್ಳುವಂತೆ ವಿಷಯಗಳಿಂದರೆ ಇಂದ್ರಿಯಗಳನ್ನು ಹಿಂದಕ್ಕೆ ಸೆಳೆದುಕೊಳ್ಳುವವನು ಜ್ಞಾನಿಯು (೨-೫೮). ನಾವು ತೆಗೆದುಕೊಳ್ಳದೆ ಹೋದರೆ ವಿಷಯಗಳು ಹಿಮ್ಮೆಟ್ಟಬಹುದು; ಆದರೆ ಅವುಗಳ ಮೇಲಿನ ಪ್ರೀತಿಯು ಮಾತ್ರ ಸಾಕ್ಷಾತ್ಕಾರವಾದ ಮೇಲೆ ಹೋಗುವದು (೨-೫೯).

ಸಾಕ್ಷಾತ್ಕಾರದ ಪ್ರಭಾವದ ವಿಷಯದಲ್ಲಿ ಮುಂಡಕೋಪನಿಷತ್ತಿನಲ್ಲಿ ಹೇಳಿರುವದೇನೆಂದರೆ—

"ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ದೃಷ್ಟೇ ಪರಾವರೇ ॥"

ತಾತ್ಪರ್ಯವೇನೆಂದರೆ- ಪರಮಾತ್ಮನ ಸಾಕ್ಷಾತ್ಕಾರವಾದರೆ ಅವನ ಪಾಪಗಳೆಲ್ಲಾ ನಾಶವಾಗುವವು ಮತ್ತು ಮನಸ್ಸಿನಲ್ಲಿರುವ ಎಲ್ಲ ಸಂಶಯಗಳ ಗಂಟೂ ಬಿಚ್ಚಿಕೊಂಡು ಹೋಗುವದು. ಹೀಗೆಂದು ಪ್ರಾಪಂಚಿಕವಿಷಯಗಳ ಜ್ಞಾನದ ಸಂಬಂಧವಾಗಿ ಕೂಡ ಅವನಿಗೆ ನಿಸ್ಸಂಶಯವಾದ ಜ್ಞಾನವಿರುವದೆಂದು ತಿಳಿಯಬಾರದು. ಅವನಿಗೆ ಪರಮಾತ್ಮವಿಷಯಕಜ್ಞಾನದ ಸಂಬಂಧವಾಗಿ ಮಾತ್ರ ಯಾವ ಸಂಶಯವೂ ಉಳಿದಿರುವದಿಲ್ಲ. ಇನ್ನು ಜಗತ್ತಿನ ಸಂಬಂಧವಾದ ವಿಷಯಗಳೆಲ್ಲಾ ಕ್ಷಣಕ್ಷಣಕ್ಕೆ ಪರಿಣಾಮವನ್ನು ಪಡೆಯುತ್ತ ನಾಶವಾಗತಕ್ಕವುಗಳೆಂದು ಅವನಿಗೆ ನಿಶ್ಚಯವಾಗಿರುವದರಿಂದ ಅವರು ಅವುಗಳ ವಿಚಾರವನ್ನು ಮನಸ್ಸಿಗೆ ಹಚ್ಚಿಕೊಳ್ಳುವದೇ ಇಲ್ಲ. ಮೇಲುಸಿ

ರಟ್ಟು ನಾಯಿಯಾಗಿರುವವನ ಪರಿಚಯವನ್ನು ಚೆನ್ನಾಗಿ ಮಾಡಿಕೊಳ್ಳಬೇಕೆಂದು ವಿವೇಕಿಗಳು ಯಾರು ಅಪೇಕ್ಷಿಸುತ್ತಾರೆ?

ಅವರಿಗೆ ಪ್ರಾಪಂಚಿಕವಿಷಯಗಳಿಂದ ಆಗಬೇಕಾದ್ದೇನಿದೆ? ಜ್ಞಾನಿಯ ಆನಂದವನ್ನು ವರ್ಣಿಸುವಾಗ ತೈತ್ತಿರೀಯೋಪನಿಷತ್ತಿನ ಬ್ರಹ್ಮಾನಂದವಲ್ಲಿಯು ಹೇಳುವದೇನೆಂದರೆ– “ ಒಬ್ಬನು ತರುಣನಾಗಿಯೂ ಸಾಧುವಾಗಿಯೂ ವೇದಾಧ್ಯಯನವನ್ನು ಮಾಡಿದವನಾಗಿಯೂ ಆಶಿಷ್ಟತಮನಾಗಿಯೂ ದೃಢಸ್ವಭಾವಿಯಾಗಿಯೂ ಬಲಿಷ್ಠನಾಗಿಯೂ ಇರುವವನಿಗೆ ಸರ್ವೈಶ್ವರ್ಯಪೂರ್ಣವಾದ ಅಖಂಡಭೂಮಂಡಲದ ಆಧಿಪತ್ಯವು ದೊರೆತರೆ ಆಗುವಂಥ ಆನಂದಕ್ಕೆ ಮಾನುಷಾನಂದವೆಂದು ಹೆಸರು. ಇಂಥ ನೂರು ಮಾನುಷಾನಂದಗಳಾದರೆ ಮನುಷ್ಯನಾಗಿ ಕರ್ಮದ ಬಲದಿಂದ ಗಂಧರ್ವನಾದಂಥ ಮನುಷ್ಯಗಂಧರ್ವನ ಒಂದು ಆನಂದವಾಗುವದು. ಇಂಥ ನೂರಾನಂದಗಳು ದೇವಗಂಧರ್ವರ ಒಂದಾನಂದವು. ಇಂಥ ನೂರಾನಂದಗಳಾದರೆ ಪಿತೃಲೋಕದಲ್ಲಿ ಚಿರಕಾಲ ವಾಸಮಾಡುವವರ ಒಂದಾನಂದವು. ಇಂಥ ನೂರಾನಂದಗಳು ಕಲ್ಪಾರಂಭದಲ್ಲಿ ಹುಟ್ಟಿದ ದೇವತೆಗಳಾದ ಆಜಾನದೇವತೆಗಳ ಒಂದಾನಂದವು. ಇಂಥ ನೂರಾನಂದಗಳಾದರೆ ಇಂದ್ರನ ಒಂದಾನಂದವು. ಇಂಥ ನೂರಾನಂದಗಳಾದರೆ ಬೃಹಸ್ಪತಿಯ ಒಂದಾನಂದವು. ಇಂಥ ನೂರಾನಂದಗಳಾದರೆ ಪ್ರಜಾಪತಿಯ ಒಂದಾನಂದವು. ಇಂಥ ನೂರಾನಂದಗಳಾದರೆ ಬ್ರಹ್ಮನ ಒಂದಾನಂದವು. ನಿಷ್ಕಾಮನಾದ ಬ್ರಹ್ಮಜ್ಞಾನಿಗೆ ಈ ಆನಂದವಿರುವದು. ಆತನಿಗಿನ್ನೇನು ಬೇಕಾದೀತು!

ಇನ್ನು ಈ ಜ್ಞಾನಿಯು ಜಗತ್ತಿನಲ್ಲಿ ಏನು ಮಾಡಿಕೊಂಡಿರಬೇಕೆಂದರೆ

“ ನಿಸ್ತ್ರೈಗುಣ್ಯೇ ಪಥಿ ವಿಚರತಾಂ ಕೋ ವಿಧಿಃ ಕೋ ನಿಷೇಧಃ ”

ಎಂಬಂತೆ ತ್ರಿಗುಣಾತೀತವಾದ ದಾರಿಯಲ್ಲಿ ನಡೆಯುವವನಿಗೆ ವಿಧಿಯೂ ಇಲ್ಲ; ನಿಷೇಧವೂ ಇಲ್ಲ. ಹೀಗೆಂದು ಅವರು ಪಶುಗಳಂತೆ ವ್ಯವಹರಿಸುವರೆಂದು ತಿಳಿಯಬಾರದು. ಅವರ ಮೇಲೆ ಆಜ್ಞೆಮಾಡುವದಕ್ಕೆ ವೇದಕ್ಕೆ ಕೂಡ ಅಧಿಕಾರವಿಲ್ಲವೆಂದಿಷ್ಟೇ ಅರ್ಥ. “ ತ್ರೈಗುಣ್ಯವಿಷಯಾ ವೇದಾಃ ” ಎಂಬ ಗೀತೋಕ್ತಿಯಂತೆ ವೇದಗಳೆಲ್ಲಾ ತ್ರಿಗುಣಗಳಿಂದ ಬದ್ಧರಾದವರ ಮೇಲೆ ಅಧಿಕಾರವನ್ನು ತೋರಿಸುವವೇ ಹೊರತು

ತ್ರಿಗುಣಾತೀತರ ಮೇಲಲ್ಲ. ವೇದಗಳೇಕೆ ಅವರಿಗೆ ಹೇಳ ಹೋಗುವದಿಲ್ಲವೆಂದರೆ ಅವರು ಎಲ್ಲವನ್ನೂ ತಿಳಿದು ಯೋಗ್ಯವಾದ ದಾರಿಯಲ್ಲಿಯೇ ನಡೆಯುತ್ತಿರುವರು. ಅವರು ತಪ್ಪುದಾರಿಗೆ ಹೆಜ್ಜೆಯನ್ನಿಡುವದೇ ಇಲ್ಲ. ಶ್ರೀವಿದ್ಯಾರಣ್ಯಸ್ವಾಮಿಗಳು ಹೇಳಿರುವದೇನೆಂದರೆ—

“ ಶುನಾಂ ತತ್ತ್ವದೃಶಾಂ ಚೈವ ಕೋ ಭೇದೋಽಶುಚಿಭಕ್ಷಣೇ ”

ಜ್ಞಾನಿಗಳಾದವರು ಕೂಡ ದುಷ್ಕಾರ್ಯದಲ್ಲಿ ಪ್ರವರ್ತಿಸಿದ ಮೇಲೆ ನಾಯಿಗಳಿಗೂ ಅವರಿಗೂ ಏನು ಭೇದ?

ಅವರ ವ್ಯವಹಾರದ ವಿಷಯದಲ್ಲಿ ಶ್ರೀರಾಮಕೃಷ್ಣಪರಮಹಂಸರು ಹೇಳಿರುವದೇನೆಂದರೆ—

(೧) ಹಾವು ಬಹು ವಿಷಪ್ರಾಣಿ. ಅದನ್ನು ಹಿಡಿಯುವದಕ್ಕೆ ಯಾರಾದರೂ ಅದರ ಹತ್ತಿರಕ್ಕೆ ಹೋದರೆ ಅದು ಅವರನ್ನು ಕಡಿದುಬಿಡುತ್ತದೆ. ಹಾವಾಡಿಸುವ ವಿದ್ಯೆಯನ್ನು ಬಲ್ಲವನು ಹಾವನ್ನು ಹಿಡಿಯುವದಷ್ಟೇ ಅಲ್ಲ; ಎಷ್ಟೋ ಹಾವುಗಳನ್ನು ಕೊರಳಿಗೆ ಸುತ್ತಿಕೊಳ್ಳುವನು. ಹಾಗೆಯೇ ತತ್ತ್ವಜ್ಞಾನವನ್ನು ಪಡೆದವನು ವಿಷಯಾಸಕ್ತಿ ಮತ್ತು ಅತ್ಯಾಶೆ— ಇವುಗಳಿಂದ ಎಂದೂ ಅಪವಿತ್ರನಾಗುವದಿಲ್ಲ.

(೨) ಜೋಡುಮೆಟ್ಟಿಕೊಳ್ಳದೆ ಬರೀಕಾಲಿನಿಂದ ನಡೆದರೆ ಕಲ್ಲುಮುಳ್ಳುಗಳು ಕಾಲಿಗೆ ನೆಡುತ್ತವೆ. ತತ್ತ್ವಜ್ಞಾನವೆಂಬ ಪಾದರಕ್ಷೆ ಇದ್ದಮೇಲೆ ಪ್ರಪಂಚವ್ಯವಹಾರದ ಬಾಧೆ ಇಲ್ಲ.

(೩) ಮೊದಲು ಕೈಗೆ ಎಣ್ಣೆಯನ್ನು ಸವರಿಕೊಂಡು ಆಮೇಲೆ ಹಲಸಿನ ಹಣ್ಣನ್ನು ಬಿಚ್ಚಿದರೆ ಅದರ ಹಾಲು ಅಂಟಿಕೊಳ್ಳದಂತೆ ಆತ್ಮಜ್ಞಾನವನ್ನು ಪಡೆದ ಮೇಲೆ ವ್ಯವಹಾರದಲ್ಲಿ ಇದ್ದರೂ ಅವರಿಗೆ ಅದರ ಹೊಲಸು ಅಂಟಿಕೊಳ್ಳುವದಿಲ್ಲ.

(೪) ನೆರೆಹಕ್ಕಿ ಮೊದಲಾದ ಜಲಪಕ್ಷಿಗಳು ಆಳವಾದ ನೀರಿನಲ್ಲಿ ಮುಳುಗುತ್ತವೆ. ಆದರೆ ಅವುಗಳ ರೆಕ್ಕೆಯು ನೆನೆದಿರುವದಿಲ್ಲ. ಹಾಗೆ ಜ್ಞಾನಿಗಳು ವ್ಯವಹಾರವನ್ನು ಮಾಡುತ್ತಿರುತ್ತಾರೆ; ಆದರೆ ಪ್ರಪಂಚದ ತೊಡಕು ಅವರಿಗೆ ಬೀಳುವದಿಲ್ಲ.

ಈ ರೀತಿಯಲ್ಲಿ ಅವರು ಲೋಕದ ವ್ಯವಹಾರದಲ್ಲಿದ್ದರೂ ಜನರ ಉನ್ನತಿಗೆ ನೆರವಾಗುವರು. ಒಂದು ಪಕ್ಷದಲ್ಲಿ ಅವರು ವ್ಯವಹಾರದಿಂದ ವಿಮುಖರಾಗಿ ಕೇವಲ ತನ್ನಿಷ್ಠೆಯಲ್ಲಿಯೇ ತತ್ಪರರಾದರೂ ಅವರ ಪ್ರಭಾವದಿಂದ ಸ್ವಭಾವವಾಗಿಯೇ ಜನರ ಉನ್ನತಿಯಾಗುವದು.

## ಮನುಷ್ಯಜನ್ಮದ ಸಾಫಲ್ಯ.

ಹೀಗೆ ತನ್ನ ಉದ್ಧಾರವನ್ನು ಮಾಡಿಕೊಂಡು ಇತರರ ಉದ್ಧಾರವನ್ನು ಮಾಡಿ ಜಗತ್ತನ್ನು ಭೂವೈಕುಂಠವಾಗಿ ಮಾಡುವದೇ ಮನುಷ್ಯಜನ್ಮದ ಸಾಫಲ್ಯ. ಈ ಫಲವು ಕಾಣಬೇಕಾದರೆ ಮನುಷ್ಯನ ದೇಹೇಂದ್ರಿಯಾದಿಗಳಲ್ಲೆಲ್ಲ ಭಗವದ್ವಿಷಯಕಕಲ್ಪನೆಗಳೇ ತುಂಬಿ ತುಳುಕುತ್ತಿರಬೇಕು. ಈ ಪರಿಸ್ಥಿತಿಯನ್ನು ಪಡೆಯದ ದೇಹೇಂದ್ರಿಯಾದಿಗಳ ಜನ್ಮವು ಅನಾರ್ಥಕವೆಂದು ಈ ಗ್ರಂಥದ ಆರಂಭದಲ್ಲಿ ಮನುಷ್ಯತ್ವದ ಮುಖ್ಯಲಕ್ಷಣವನ್ನು ಹೇಳುವಾಗ ವಿವರಿಸಿದ್ದಾಗಿದೆಯಷ್ಟೆ. ಅದೇ ಅಭಿಪ್ರಾಯವನ್ನೇ ಈ ಸ್ಥಲಕ್ಕೆ ಒಪ್ಪುವಂತೆ ಶ್ರೀಸರ್ಪಭೂಷಣಶಿವಯೋಗಿಗಳು ಪ್ರಕಾರಾಂತರದಿಂದ ಹಾಡಿರುವದೇನೆಂದರೆ—

ರಾಗ--ಕಲ್ಯಾಣಿ

ಏನಿದ್ದರೇನು ನಿಜಬೋಧವೊಂದಿಲ್ಲದಿರೆ ।
ಕಾನನದ ಪೆರ್ದಿಂಗಳಂತೆ ನಿಷ್ಫಲವು ॥ ಪ ॥
ಕಾಯದೊಳು ಮನ್ಮಥನ ಪೋಲ್ವ ಸುಂದರರೂಪು ।
ಬಾಯೊಳಲ್ಲರ ಮರುಳುಗೊಳಿಪ ಜಾಣ್ನುಡಿಯು ॥
ಆಯುರಾರೋಗ್ಯ ತನ್ನಿರವ ತಾನರಿಯದಿರೆ ।
ನಾಯ ಮೊಲೆಯೊಳಗಿರ್ದ ಹಾಲಿನಂತಹುದು ॥ ೧ ॥
ಚಂಡಪ್ರತಾಪದಿಂದರಿಗಳನು ಜಯಿಸಿ ಭೂ ।
ಮಂಡಲವನೆಲ್ಲ ಓರ್ವನೆ ಆಳುತಿರ್ದು ॥
ಪಿಂಡದೊಳಗಿರ್ಪ ಜೀವಾತ್ಮನನು ಅರಿಯದಿರೆ ।
ರಂಡೆಗೊದಗಿರ್ದ ಯೌವನದಂತಿರಹುದು ॥ ೨ ॥
ಅಣಿಮಾದಿಸಕಲಸಿದ್ಧಿಗಳೊಡನೆ ತನ್ನ ಮನ ।
ದಣಿವಂತೆ ನಾಕಲೋಕದೊಳು ವಿಹರಿಸಿ ॥
ತಣಿಯದೇ ಗುರುಸಿದ್ಧನೊಡನೈಕ್ಯವಾಗದಿರೆ ।
ಹೆಣಕೆ ಮಾಡಿರ್ದ ಶೃಂಗಾರದಂತಹುದು ॥ ೩ ॥

ಆದ್ದರಿಂದ ಪ್ರತಿಯೊಬ್ಬ ಮನುಷ್ಯನೂ ಆತ್ಮಜ್ಞಾನವನ್ನು ಪಡೆಯುವದಕ್ಕೆ ಸರ್ವಸಾಹಸವನ್ನೂ ಮಾಡಬೇಕು. ಆತ್ಮಜ್ಞಾನದಿಂದಲೇ ನಿಜವಾದ ತೃಪ್ತಿ. ಬರೀ ಭೌತಿಕಜ್ಞಾನವು ಉಪ್ಪುನೀರಿನಂತೆ ಕಳ್ಳಬಾಯಾರಿಕೆಯನ್ನುಂಟುಮಾಡುವಂಥದ್ದು. ಭೌತಿಕವಿದ್ಯೆಯಿಂದ ಲೌಕಿಕಪ್ರಯೋಜನವನ್ನು ಮುಗಿಸಿಕೊಂಡು ಧರ್ಮಜ್ಞಾನದಿಂದ ಶಾಂತಿಯ ಬಾಯಾರಿಕೆಯನ್ನು ಕಳೆದುಕೊಳ್ಳಬೇಕು. ಧರ್ಮವೇ ಜಗತ್ತಿನಲ್ಲಿ ಉತ್ಕೃಷ್ಟವಾದ ವಸ್ತು ಮತ್ತು ನಮ್ಮ ದೇಶಕ್ಕಂತು ಅತಿಪ್ರಿಯವಾದ ಪದಾರ್ಥ. ಧರ್ಮಶ್ರದ್ಧೆಯು ನಮ್ಮ ಹುಟ್ಟುಗುಣವಾದ್ದರಿಂದ ಅದನ್ನು ಸಾಧಿಸುವದಕ್ಕೆ ಹೊರಟರೆ ನಮಗೆ ಇತರರಿಗಾಗುವಷ್ಟು ಕಷ್ಟವಿಲ್ಲ. ಆದಕಾರಣ ಧರ್ಮಜ್ಞಾನವನ್ನು ಮೆಯ್ಗೂಡಿಸಿಕೊಳ್ಳುವದಕ್ಕೆ ಪ್ರತಿಯೊಬ್ಬನೂ ಪ್ರಯತ್ನಿಸಿ ತಾನೂ ಶಾಶ್ವತಸುಖವನ್ನು ಪಡೆದು ಸರ್ವಲೋಕಕ್ಕೂ ಸುಖದ ಸುಗ್ಗಿಯಾಗುವಂತೆ ಮಾಡಬೇಕು. ಈ ಪರಿಸ್ಥಿತಿಯು ಭಾರತೀಯರಿಗೆ ಸುಲಭಸಾಧ್ಯವಾದ್ದರಿಂದ ಜಗತ್ತಿನ ಶಾಂತಿಯ ಭಾರವು ಭಾರತೀಯರ ಮೇಲೆಯೇ ಇರುವದು. ಭಾರತೀಯರು ಕೃತಕೃತ್ಯರಾಗಬೇಕಾದರೆ ತಾವು ಮೊದಲು ಈ ಪ್ರಭಾವವನ್ನು ಪ್ರದರ್ಶನಮಾಡಬೇಕು. ಮನುಷ್ಯದೃಷ್ಟಿಯಿಂದ ಈ ಸಿದ್ಧಿಯು ಕಷ್ಟಸಾಧ್ಯವಾಗಿ ಕಂಡರೂ ಏಕನಿಷ್ಠೆಯ ಮನಸ್ಸಿನಿಂದ ಮುಂದೆ ಹೆಜ್ಜೆಯನ್ನಿಟ್ಟರೆ ಅಂಥ ಐದು ವರ್ಷದ ಹುಡುಗನಾದ ಧ್ರುವನ ಪ್ರಯತ್ನಕ್ಕೆ ಕೂಡ ನೆರವಾಗಿ ಅವನಿಗೆ ಭೌತಿಕಪದವಿಯ ಪರಮಾವಧಿಯನ್ನೂ ಕೊಟ್ಟು ಪಾರಮಾರ್ಥಿಕಸುಖವನ್ನೂ ಪೂರೆಮಾಡಿದ ಪರಮದಯಾಳುವಾದ ಭಗವಂತನು ನಮ್ಮ ಪ್ರಯತ್ನಕ್ಕೂ ನೆರವಾಗಿ ನಮಗೂ ಭೌತಿಕಪದವಿಯ ಪರಮಾವಧಿಯನ್ನೂ ಶಾಶ್ವತಸುಖವನ್ನೂ ಕೊಟ್ಟೇ ಕೊಡುವನು. ಈ ಶಾಂತಿರೂಪವಾದ ಪರಮಾನುಗ್ರಹವನ್ನು ಪಡೆದೇ ತೀರುವೆವೆಂದು ಈ ಪ್ರಯತ್ನದ ಕಡೆಗೆ ತಿರುಗುವಂತೆ ನಮ್ಮೆಲ್ಲರ ಮನಸ್ಸನ್ನೂ ಪ್ರೇರಿಸಲು ನಾವೆಲ್ಲರೂ ಒಂದೇ ಮನಸ್ಸಿನಿಂದ ಜಗದೀಶ್ವರನನ್ನು ನೆರಗೊಡ್ಡಿ ಬೇಡಿಕೊಳ್ಳೋಣ.

— ಜಯ ಭಗವನ್. —

ಪರಿಶಿಷ್ಟ.

## ಒಂದನೇ ಭಾಗ.

### ವೈದಿಕಧರ್ಮವಿಚಾರದ ಕೆಲವು ಮುಖ್ಯಗ್ರಂಥಗಳು.

[ತರ್ಕವಿದ್ವಾನ್, ವಿದ್ಯಾಲಂಕಾರ, ಶ್ರೀ|| ನಾಗೇಶಶಾಸ್ತ್ರಿಗಳು, ಉಪ್ಪಿನ ಬೆಟಗೇರಿ, ಧಾರವಾಡದ ಶ್ರೀಶಂಕರಾಚಾರ್ಯ ಸಂಸ್ಕೃತ ಪಾಠಶಾಲೆಯ ಅಧ್ಯಕ್ಷರು— ಇವರ ಹೇಳಿಕೆಯಿಂದ ಸಂಗ್ರಹಿಸಿದ್ದು. ಸಂಗ್ರಾಹಕ— ಚಿ.]

"ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ ।
ಧರ್ಮಶಾಸ್ತ್ರಂ ಪುರಾಣಂ ಚ ವಿದ್ಯಾ ಹ್ಯೇತಾಶ್ಚತುರ್ದಶ ||"

ಸ್ಮೃತಿವಚನದಂತೆ ಆರ್ಯಸಂಪ್ರದಾಯದಲ್ಲಿ ವಿದ್ಯಾಸ್ಥಾನಗಳು ಹೀಗೆ ಹದಿನಾಲ್ಕು ಇರುತ್ತವೆ. ಅವುಗಳಲ್ಲಿರುವ ವಿಚಾರವಿಶೇಷ ವರೆ—

### ೧-೪ ವೇದಗಳು.

ಲೋಕದಲ್ಲಿ ಪ್ರತ್ಯಕ್ಷವಾಗಿಯಾಗಲಿ ಅನುಮಾನದಿಂದಾಗಲಿ ತಿಳಿಯ ...ವಾದ ಧರ್ಮಾರ್ಥಕಾಮಮೋಕ್ಷಗಳ ಸ್ವರೂಪವನ್ನೂ ಅವು ಸಾಧನವನ್ನೂ ತಿಳಿಸಿಕೊಡುವ ಗ್ರಂಥಕ್ಕೆ ವೇದವೆಂದು ಹೆಸರು. ವೇದವು ಅನಾದಿಯಾಗಿದ್ದು ಸೃಷ್ಟಿಯ ಪ್ರಾರಂಭದಲ್ಲಿ ಪರಮೇಶ್ವರನ ...ದಿಂದ ಅರ್ಥಾನುಸಂಧಾನವಿಲ್ಲದೆ ನಿಃಶ್ವಾಸರೂಪದಿಂದ ಹೊರ ... ಕೆಲವು ದಿನಗಳ ಮೇಲೆ ಬ್ರಹ್ಮನಿಷ್ಠರಾದ ಮಹರ್ಷಿಗಳಿಗೆ ಅವರ ತಪಃಪ್ರಭಾವದಿಂದ ಸ್ಫೂರ್ತಿಯಾದ ಶಬ್ದರಾಶಿಯಾಗಿರುವದು. ಇದು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ—ಎಂದು ನಾಲ್ಕು ಭಾಗಗಳಾಗಿದೆ. ಅಥರ್ವವೇದವು ಬಹುಮಟ್ಟಿಗೆ ಋಗ್ವೇದಕ್ಕೆ ಸಂಬಂಧಪಟ್ಟಿರುವದರಿಂದ ಅದನ್ನು ಬೇರೆಯಾಗಿ ಲೆಕ್ಕ ಮಾಡದೆ ಮೂರೇ ಭಾಗಗಳೆಂದು ಭಾವಿಸಿ ಈ ಕಾರಣದಿಂದಲೇ ವೇದವನ್ನು "ತ್ರಯೀ" ಎಂದು ಕರೆಯುವದೂ ಉಂಟು.

ಪ್ರತಿಯೊಂದು ವೇದಕ್ಕೂ ಅನೇಕಶಾಖೆಗಳುಂಟು. ಅವುಗಳಲ್ಲಿ ಋಗ್ವೇದಕ್ಕೆ ೨೧, ಯಜುರ್ವೇದಕ್ಕೆ ೧೦೧ (ಕೃಷ್ಣಯಜುರ್ವೇದ ೮೬ + ಶುಕ್ಲಯಜುರ್ವೇದ ೧೫), ಸಾಮವೇದಕ್ಕೆ ೧೦೦೦, ಅಥರ್ವವೇದಕ್ಕೆ ೯- ಈ ರೀತಿಯಾಗಿ ಶಾಖೆಗಳು ಲೆಕ್ಕಕ್ಕೆ ಬಂದಿವೆ. ಇವುಗಳಲ್ಲಿಯೂ ಶುಕ್ಲ ಯಜುರ್ವೇದದಲ್ಲಿ ಈಗ ಕಾಣ್ವ, ಮಾಧ್ಯಂದಿನ-ಎಂಬೆರಡೇ ಶಾಖೆಗಳು ಪ್ರಚಾರದಲ್ಲಿವೆ.

ಪ್ರತಿಯೊಂದು ಶಾಖೆಯು ವೇದದಲ್ಲಿಯೂ ಸಂಹಿತಾ, ಬ್ರಾಹ್ಮಣ, ಆರಣ್ಯಕ- ಎಂದು ಮೂರು ಭಾಗಗಳಿರುತ್ತವೆ. ಸಂಹಿತಾಭಾಗದಲ್ಲಿ ಪ್ರಾಯಶಃ ಮಂತ್ರಗಳೇ ಇರುತ್ತವೆ. ಮಂತ್ರಗಳೆಂದರೆ ಜಪ, ಪಾರಾಯಣ, ಮತ್ತು ವೈದಿಕಕ್ರಿಯೆ- ಇವುಗಳಿಗೆ ವಿನಿಯೋಗವಾಗತಕ್ಕ ವಾಕ್ಯಗಳು. ಬ್ರಾಹ್ಮಣಭಾಗದಲ್ಲಿ ಪ್ರಾಯಶಃ ವಿಧಿನಿಷೇಧಗಳನ್ನೂ ಅವುಗಳಿಗೆ ಪೋಷಕವಾದ ಅರ್ಥವಾದ ಮೊದಲಾದವುಗಳನ್ನೂ ಹೇಳುವ ವಾಕ್ಯಗಳಿರುತ್ತವೆ. ಆರಣ್ಯಕಭಾಗದಲ್ಲಿ ಪ್ರಾಯಶಃ ವೇದಾಂತತತ್ತ್ವಗಳನ್ನೂ ಚಿತ್ತಸ್ಥೈರ್ಯಾರ್ಥವಾದ ಕೆಲವು ಉಪಾಸನೆಗಳನ್ನೂ ಗಾಥಾದಿರೂಪದಿಂದ ಹೇಳುವ ವಾಕ್ಯಗಳಿರುತ್ತವೆ.

## ೫-೧೦ ವೇದಾಂಗಗಳು.

ಈ ವೇದಗಳಿಗೆ ಸಾಂಪ್ರದಾಯಿಕವಾದ ಅರ್ಥವನ್ನು ತಿಳಿದುಕೊಳ್ಳುವದಕ್ಕೆ ಸಾಧನವಾಗಿ ಆರು ಅಂಗಗಳಿರುತ್ತವೆ. ಅವುಗಳಲ್ಲಿ—

**೧ ಶಿಕ್ಷಾ**:— ಇದು ಸ್ವರ, ವರ್ಣ- ಇವುಗಳ ಉಚ್ಚಾರಣೆಯ ರೀತಿಯನ್ನು ಹೇಳುವ ಶಾಸ್ತ್ರ. ಪ್ರತಿಯೊಂದು ಶಾಖೆಗೂ ಈ ಗ್ರಂಥವು ಬೇರೆ ಬೇರೆ ಇರುವದು. ಆದ್ದರಿಂದ ಇದಕ್ಕೆ ಪ್ರಾತಿಶಾಖ್ಯವೆಂದೂ ಹೆಸರುಂಟು. ಪಾಣಿನಿ ಮೊದಲಾದವರು ಇವುಗಳ ಪ್ರವರ್ತಕರು.

**೨. ವ್ಯಾಕರಣ**:— ಇದು ಶಬ್ದಾರ್ಥವ್ಯುತ್ಪತ್ತಿಯನ್ನು ಮಾಡುವ ಶಾಸ್ತ್ರ. ಈ ವಿಷಯದಲ್ಲಿ ಇಂದ್ರಚಂದ್ರಾದಿಗಳ ಗ್ರಂಥಗಳನೇಕವಿದ್ದರೂ ಪಾಣಿನಿಯವರದೇ ಪ್ರಸಿದ್ಧವಾಗಿರುವದು.

**೩. ಛಂದಸ್ಸು**:— ಇದು ಗಾಯತ್ರಿ ಮೊದಲಾದ ಪಾದವ್ಯವಸ್ಥೆಯುಳ್ಳ ಮಂತ್ರಗಳಿಗೆ ಮಗಣಯಗಣಾದಿಭೇದಗಳಿಂದ ಲಕ್ಷಣವನ್ನು ಹೇಳುವ ಶಾಸ್ತ್ರ. ಪಿಂಗಲಾಚಾರ್ಯರು ಇದರ ಪ್ರವರ್ತಕರು.

**೪. ನಿರುಕ್ತ**:— ಇದು ವೇದಗಳೊಳಗಣ ಏಕಾರ್ಥವಾಚಕಗಳಾದ ಬೇರೆ ಬೇರೆ ಶಬ್ದಗಳನ್ನು ಕ್ರೋಡೀಕರಿಸಿ ಬರೆದ ನಿಘಂಟಿನಲ್ಲಿರುವ ಆಯಾ ಶಬ್ದಗಳಿಗೆ ವ್ಯುತ್ಪತ್ತಿಯಿಂದ ಅರ್ಥವನ್ನು ಬಿಡಿಸಿ ಹೇಳುವ ಶಾಸ್ತ್ರ. ಯಾಸ್ಕರು ಇದರ ಪ್ರವರ್ತಕರು.

**೫. ಜ್ಯೋತಿಷ**:—ಇದು ವೈದಿಕಕರ್ಮಗಳಿಗೆ ಉಪಯುಕ್ತವಾದ ಕಾಲವನ್ನು ತಿಳಿಸುವ ಶಾಸ್ತ್ರ. ಗರ್ಗಾಚಾರ್ಯರು ಇದರ ಪ್ರವರ್ತಕರು.

**೬ ಕಲ್ಪ**:—ಇದು ವೇದದಲ್ಲಿ ಹೇಳಿರುವ ಕರ್ಮಗಳನ್ನು ಹೇಗೆ ಹೇಗೆ ಮಾಡಬೇಕೆಂದು ಕ್ರಮಪೂರ್ವಕಪ್ರಯೋಗಗಳನ್ನು ತಿಳಿಸುವ ಶಾಸ್ತ್ರ. ಇದಕ್ಕೆ ಕಲ್ಪಸೂತ್ರವೆಂದೂ ವ್ಯವಹಾರವುಂಟು. ಆಶ್ವಲಾಯನ, ಆಪಸ್ತಂಬ, ಬೋಧಾಯನ- ಮೊದಲಾದ ಋಷಿಗಳು ಇವುಗಳನ್ನು ರಚಿಸಿರುವರು. ಈ ಕಲ್ಪಸೂತ್ರಗಳಲ್ಲಿ ಗೃಹ್ಯಸೂತ್ರವೆಂದೂ ಶ್ರೌತಸೂತ್ರವೆಂದೂ ಧರ್ಮಸೂತ್ರವೆಂದೂ ಮೂರು ಬಗೆಯ ವಿಭಾಗಗಳಿವೆ. ಇವುಗಳಲ್ಲಿ ಗೃಹ್ಯಸೂತ್ರವು ಗರ್ಭಾಧಾನ ಮೊದಲಾದ ಸಂಸ್ಕಾರಗಳ ಪ್ರಯೋಗಗಳನ್ನೂ ವಿವಾಹಾಗ್ನಿಯಲ್ಲಿ ಮಾಡತಕ್ಕ ಕೆಲವು ಕಾಮ್ಯನಿತ್ಯನೈಮಿತ್ತಿಕ ಪಾಕಯಜ್ಞಸಂಸ್ಕಾರಗಳ ಪ್ರಯೋಗಗಳನ್ನೂ ಹೇಳುವದು. ಶ್ರೌತಸೂತ್ರವು ಅಗ್ನ್ಯಾಧಾನ, ಅಗ್ನಿಹೋತ್ರ, ಅಗ್ನಿಷ್ಟೋಮ-ಮೊದಲಾದ ಯಜ್ಞಗಳ ಪ್ರಯೋಗಗಳನ್ನು ತಿಳಿಸುವದು. ಧರ್ಮಸೂತ್ರವು ಸದಾಚಾರ ಮೊದಲಾದ ಸಾಮಾನ್ಯಧರ್ಮಗಳ ನಿರೂಪಣವನ್ನು ಮಾಡುವದು.

## ೧೧ ಮೀಮಾಂಸಾ.

ಇದರಲ್ಲಿ ಪೂರ್ವಮೀಮಾಂಸಾ, ಉತ್ತರಮೀಮಾಂಸಾ ಎಂದು ಎರಡು ಭೇದಗಳಿವೆ. ಪೂರ್ವಮೀಮಾಂಸಾಶಾಸ್ತ್ರವು ಅಂಗಕರ್ಮಗಳನ್ನೂ ಪ್ರಧಾನಕರ್ಮಗಳನ್ನೂ ಯುಕ್ತಿಯಿಂದ ನಿರ್ದೇಶಿಸುವದಲ್ಲದೆ ಅನುಷ್ಠಾನಕ್ರಮ, ಕರ್ಮಭೇದ, ಪ್ರಸಂಗ, ತಂತ್ರ-ಮೊದಲಾದ ವಿಷಯ

ಗಳನ್ನು ಹೇಳುವದು. ಇದರ ಮೂಲಕರ್ತರು ಜೈಮಿನಿಮಹರ್ಷಿಗಳು. ಉತ್ತರಮೀಮಾಂಸಾಶಾಸ್ತ್ರವು ಉಪನಿಷತ್ತುಗಳ ಸಾರವನ್ನು ಹೇಳುವದು. ಇದರ ಮೂಲಕರ್ತರು ವ್ಯಾಸರು.

## ೧೨ ನ್ಯಾಯಶಾಸ್ತ್ರ.

ಇದು ಪದಾರ್ಥತತ್ತ್ವಜ್ಞಾನಪೂರ್ವಕವಾಗಿ ಶರೀರಾದಿಗಳಿಂದ ಭಿನ್ನವಾದ ಆತ್ಮನನ್ನು ಹೇಳುವ ಶಾಸ್ತ್ರ. ಇದರಲ್ಲಿ ನ್ಯಾಯ, ವೈಶೇಷಿಕ ಎಂಬೆರಡು ಮುಖ್ಯ ಪ್ರಭೇದಗಳಿವೆ. ಇವುಗಳ ಮೂಲಕರ್ತರು ಕ್ರಮವಾಗಿ ಗೌತಮರು ಮತ್ತು ಕಣಾದರು. ಗೌತಮರು ಷೋಡಶಪದಾರ್ಥವಾದಿಗಳು. ಕಣಾದರು ಸಪ್ತಪದಾರ್ಥವಾದಿಗಳು. ಗೌತಮರದು ನ್ಯಾಯಶಾಸ್ತ್ರವೆಂದೂ ಕಣಾದರದು ವೈಶೇಷಿಕಶಾಸ್ತ್ರವೆಂದೂ ಪ್ರಸಿದ್ಧಿಯಾಗಿರುವದು. ಕಪಿಲರ ಸಾಂಖ್ಯಶಾಸ್ತ್ರವೂ ಪತಂಜಲಿಗಳ ಯೋಗಶಾಸ್ತ್ರವೂ ಯುಕ್ತಿಪ್ರಧಾನಗಳಾದ್ದರಿಂದ ಈ ನಾಲಿನಲ್ಲಿಯೇ ಬರುವವು. ಮೇಲೆ ಬರೆದ ಸ್ಮೃತಿಯಲ್ಲಿ ನ್ಯಾಯವಿಸ್ತರ ಎಂಬ ಶಬ್ದಪ್ರಯೋಗವು ಈ ವಿಸ್ತಾರವನ್ನು ಸೂಚಿಸುವದು. ಈ ಎರಡರಲ್ಲಿ ಸಾಂಖ್ಯಶಾಸ್ತ್ರವು ೨೫ ತತ್ತ್ವಗಳನ್ನು ಹೇಳಿ ಪ್ರಕೃತಿಪುರುಷರ ವಿವೇಕದಿಂದಲೇ ಮೋಕ್ಷವೆಂದು ಬೋಧಿಸುವದು. ಯೋಗಶಾಸ್ತ್ರವು ಸಾಂಖ್ಯದಂತೆ ಎಲ್ಲವನ್ನೂ ಒಪ್ಪಿಕೊಳ್ಳುವದಲ್ಲದೆ ಈಶ್ವರನೊಬ್ಬನನ್ನು ಹೆಚ್ಚಾಗಿ ಅಂಗೀಕರಿಸಿ ಆತನ ಅನುಗ್ರಹದಿಂದಲೇ ಮೋಕ್ಷವೆಂದು ಹೇಳಿ ಚಿತ್ತವೃತ್ತಿನಿರೋಧಕ್ಕಾಗಿ ಕೆಲವು ಉಪಾಯಗಳನ್ನು ಉಪದೇಶಿಸುವದು. (ಮೀಮಾಂಸಾಶಾಸ್ತ್ರದ ೨ ಭೇದಗಳೂ ನ್ಯಾಯಶಾಸ್ತ್ರದ ಈ ೪ ಭೇದಗಳೂ ಸೇರಿ ಆರೂ ಷಡ್ದರ್ಶನಗಳೆಂದು ಹೆಸರುಗೊಂಡಿವೆ.)

## ೧೩. ಧರ್ಮಶಾಸ್ತ್ರ.

ಆಚಾರ ಮೊದಲಾದವುಗಳನ್ನು ಉಪದೇಶಮಾಡುವದಕ್ಕೆ ಮನು ಮೊದಲಾದವರು ಮಾಡಿರುವ ಸ್ಮೃತಿಗಳು ಧರ್ಮಶಾಸ್ತ್ರಗಳೆನಿಸುವವು. ಈ ಧರ್ಮಶಾಸ್ತ್ರಕಾರರಲ್ಲಿ ಮನು, ಯಾಜ್ಞವಲ್ಕ್ಯ, ಅತ್ರಿ, ವಿಷ್ಣು,

ಹಾರೀತ, ಉಶನ, ಅಂಗಿರ, ಯಮ, ಆಪಸ್ತಂಬ, ಕಾತ್ಯಾಯನ, ಬೃಹಸ್ಪತಿ, ಪರಾಶರ, ವ್ಯಾಸ, ಶಂಖ, ಲಿಖಿತ, ದಕ್ಷ, ಗೌತಮ, ಶಾತಾತಪ, ವಸಿಷ್ಠ-ಮೊದಲಾದವರು ಮುಖ್ಯರು. ಇವರು ಶ್ರುತ್ಯರ್ಥವನ್ನು ಸ್ಮರಣೆಗೆ ತಂದುಕೊಂಡು ಅದಕ್ಕೆ ಅನುಗುಣವಾಗಿ ಈ ಗ್ರಂಥಗಳನ್ನು ರಚಿಸಿದ್ದರಿಂದ ಇವುಗಳಿಗೆ ಸ್ಮೃತಿಗಳೆಂದು ಹೆಸರಾಯಿತು.

## ೧೪. ಪುರಾಣ

ಇವು ವೇದಪ್ರಸಿದ್ಧವಾದ ಸೃಷ್ಟಿಸ್ಥಿತಿಪ್ರಲಯಗಳನ್ನೂ ಸತ್ಯ ಮೊದಲಾದ ಧರ್ಮಗಳನ್ನೂ ಸಲಹರಿಶ್ಚಂದ್ರಾದಿ ಆಖ್ಯಾಯಿಕಾರೂಪದಿಂದ ಹೇಳತಕ್ಕವುಗಳು. ಇವು ಮುಖ್ಯವಾಗಿ ಹದಿನೆಂಟು ಇರುವವು. ಇವುಗಳ ಕರ್ತರು ವ್ಯಾಸರು. ಆ ಹದಿನೆಂಟು ಯಾವುವೆಂದರೆ- ಬ್ರಹ್ಮ, ಪದ್ಮ, ವಿಷ್ಣು, ಸ್ಕಂದ, ಲಿಂಗ, ಗರುಡ, ವಾಯು, ಭಾಗವತ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ಮಾರ್ಕಂಡೇಯ, ವಾಮನ, ಮತ್ಸ್ಯ, ಕೂರ್ಮ, ವರಾಹ, ಬ್ರಹ್ಮಾಂಡ, ಸೌರ. ಇವುಗಳಲ್ಲದೆ ಉಪಪುರಾಣಗಳು ಬೇರೆ ಇವೆ. ಇವುಗಳ ಜೊತೆಗೆ ಮಹಾಭಾರತರಾಮಾಯಣಾದಿ ಇತಿಹಾಸಗಳನ್ನೂ ಸೇರಿಸಬಹುದು.

ವಿದ್ಯಾಸ್ಥಾನಗಳು ಮೇಲೆ ಹೇಳಿದ ಹದಿನಾಲ್ಕು ಮಾತ್ರವೇ ಅಲ್ಲದೆ

"ಆಯುರ್ವೇದೋ ಧನುರ್ವೇದೋ ಗಾಂಧರ್ವಶ್ಚೇತ್ಯನುಕ್ರಮಾತ್ ।
ಅರ್ಥಶಾಸ್ತ್ರಂ ಪರಂ ತಸ್ಮಾದ್ವಿದ್ಯಾ ಹ್ಯಷ್ಟಾದಶಃ ಸ್ಮೃತಾಃ ॥"

ಎಂಬ ಸ್ಮೃತಿಯಂತೆ ಉಪವೇದಗಳೆನಿಸಿಕೊಂಡಿರುವ ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಮತ್ತು ಅರ್ಥಶಾಸ್ತ್ರ— ಈ ನಾಲ್ಕೂ ಸೇರಿ ಹದಿನೆಂಟೆಂದು ಒಂದು ಮತವು. ಆಯುರ್ವೇದವು ಋಗ್ವೇದಕ್ಕೆ ಉಪವೇದವು. ಚರಕ, ಸುಶ್ರುತ, ವಾಗ್ಭಟ-ಮೊದಲಾದವರು ಇದರ ಕರ್ತರು. ಧನುರ್ವೇದವು ಯಜುರ್ವೇದಕ್ಕೆ ಉಪವೇದವು. ಶುಕ್ರಾಚಾರ್ಯರೇ ಮೊದಲಾದವರು ಇದರ ಕರ್ತರು. ಗಾಂಧರ್ವವೇದವು ಸಾಮವೇದಕ್ಕೆ ಉಪವೇದವು. ಅರ್ಥಶಾಸ್ತ್ರವು ಅಥರ್ವವೇದಕ್ಕೆ ಉಪವೇದವು.

ಕಾಮಂದಕ, ಶುಕ್ರ, ವ್ಯಾಸ, ಚಾಣಕ್ಯ- ಮೊದಲಾದವರು ಇದರ ಕರ್ತರು.

ಈ ಮೇಲೆ ಹೇಳಿದ ಹದಿನೆಂಟು ಸ್ಥಾನಗಳ ಒಂದೊಂದಂಶವನ್ನು ವಿವರಿಸುವದಕ್ಕೇ ಇವುಗಳ ಮುಂದೆ ಅಪಾರವಾದ ಗ್ರಂಥರಾಶಿಯು ಬೆಳೆದಿದೆ.

# ಪರಿಶಿಷ್ಟ.

# ಎರಡನೇ ಭಾಗ.

## ಈಗ ಹಿಂದುಸ್ಥಾನದಲ್ಲಿರುವ ವಿವಿಧಧರ್ಮಪಂಥದವರಲ್ಲಿ ಕೆಲವು ಮುಖ್ಯಮತಭೇದಗಳು



### ಬೌದ್ಧಮತ.

[ಸರ್ವದರ್ಶನಸಂಗ್ರಹ ಮೊದಲಾದ ಸಂಸ್ಕೃತಗ್ರಂಥಗಳಿಂದ ಮತ್ತು "ಪ್ರಪಂಚದ ಧರ್ಮಪಂಥಗಳು" ಎಂಬರ್ಥದ ಇಂಗ್ಲೀಷಿನ ಗ್ರಂಥದಿಂದ ಆರಿಸಿ ಬರೆದ ಅನುವಾದ. ಅನುವಾದಕ—ಚಿ.]

ಬೌದ್ಧಮತದ ಪ್ರವರ್ತಕನು ಬುದ್ಧನು. ಬುದ್ಧನೆಂದರೆ ಜ್ಞಾನಿಯೆಂದರ್ಥ. ಬುದ್ಧನು ತಾನು ಸರ್ವಜ್ಞನೆಂದೂ ಈ ಸ್ಥಿತಿಯು ತನಗೆ ಮತ್ತೊಬ್ಬರಿಂದ ಬರದೆ ಸ್ವಪ್ರಯತ್ನದಿಂದಲೆ ಬಂದದ್ದೆಂದೂ ಸ್ವಕಂಠದಿಂದಲೇ ಹೇಳಿರುವನು. ಭೂಮಿಯ ಮೇಲಾಗಲಿ ಸ್ವರ್ಗದಲ್ಲಾಗಲಿ ತನಗಿಂತ ಹೆಚ್ಚಿನವರು ಯಾರೂ ಇಲ್ಲವೆಂದು ಬುದ್ಧನು ಹೇಳಿದ ಮಾತು ವಿನಯಪಿಟಕವೆಂಬ ಗ್ರಂಥದಲ್ಲಿ ಕಂಡುಬರುವದರಿಂದ ಬುದ್ಧನು ಸರ್ವೇಶ್ವರನೂ ಆಗಿರುವನು. ಬುದ್ಧನು ತನ್ನ ಉಪದೇಶಗಳನ್ನು ಗ್ರಂಥರೂಪವಾಗಿ ಬರೆದಿಡಲೂ ಇಲ್ಲ; ತನ್ನ ಉಪದೇಶಕ್ಕೆ ಯಾವ ಗ್ರಂಥದ ಆಧಾರವನ್ನೂ ಹಿಡಿಯಲೂ ಇಲ್ಲ. ಅವನು ತನ್ನಲ್ಲಿ ತಾನು ನಿರ್ಣಯ ಮಾಡಿಕೊಂಡ ವಿಚಾರಗಳನ್ನು ತಾನೇ ಸೂತ್ರರೂಪವಾಗಿ ಮಾಡಿಕೊಂಡು ಅದರ ಅರ್ಥವನ್ನು ಬೆಳೆಸಿ ಶಿಷ್ಯರಿಗೆಲ್ಲಾ ಸಂಭಾಷಣೆಯ ರೂಪದಿಂದಲೇ ಬೋಧಿಸಿದನು. ಅವನ ಆಯುರ್ದಾಯವೆಲ್ಲ ಮುಗಿದ ಎಷ್ಟೋ ಕಾಲಗಳ ಮೇಲೆ ಅವನ ಶಿಷ್ಯರು ಅವನ ಉಪದೇಶಗಳನ್ನೆಲ್ಲ ಕೂಡಿ ಹಾಕಿ ವಿನಯಪಿಟಕ, ಸೂತ್ರಪಿಟಕ, ಅಭಿಧರ್ಮಪಿಟಕ ಎಂಬ ಮೂರು ಗ್ರಂಥಗಳಲ್ಲಿ ಬರೆದಿಟ್ಟಿದ್ದಾರೆ.

ಬುದ್ಧನ ಶಿಷ್ಯರಲ್ಲಿ ನಾಲ್ಕು ಜನರು ಪ್ರಮುಖರಾಗಿದ್ದರು. ಅವರು ಬುದ್ಧನ ಬಾಯಿಂದ ಬಂದ ನಾಲ್ಕು ಮಾತುಗಳನ್ನು ಬೇರೆ ಬೇರೆಯಾಗಿ ಗ್ರಹಿಸಿ ಮುಂದೆ ತಮ್ಮ ನಾಲ್ಕು ಒಳಪಂಥಗಳನ್ನೇ ಮಾಡಿರುತ್ತಾರೆ. ಅವು ಗಳು ಯಾವನೆಂದರೆ- ಮಾಧ್ಯಮಿಕ, ಯೋಗಾಚಾರ, ಸೌತ್ರಾಂತಿಕ ಮತ್ತು ವೈಭಾಷಿಕ. ಇವರ ಭಿನ್ನಾಭಿಪ್ರಾಯಗಳೇನೆಂದರೆ–

(೧) **ಮಾಧ್ಯಮಿಕರು**— ಇವರು ಸರ್ವಶೂನ್ಯವಾದಿಗಳು— ಎಂದರೆ ವಿಜ್ಞಾನಕ್ಕಾಗಲಿ ವಿಜ್ಞಾನವ್ಯತಿರಿಕ್ತಕ್ಕಾಗಲಿ ಯಾವದಕ್ಕೂ ಅಸ್ತಿತ್ವವಿಲ್ಲವೆನ್ನುವವರು. ಇವರಲ್ಲಿ ಗುರು ಹೇಳಿದಂಥ ಆಚಾರಗಳ ಆಚರಣೆ ಮಾತ್ರ ಉಂಟು. ಯಾವ ಅಪ್ರಾಪ್ತಾರ್ಥಸಂಪಾದನೆಯ ಪ್ರಯತ್ನವನ್ನೂ ಇವರು ಕೈಗೊಳ್ಳುವದಿಲ್ಲ.

(೨) **ಯೋಗಾಚಾರರು**—ಹೊರಗೆ ಕಾಣುವ ವಸ್ತುಗಳೆಲ್ಲಾ ಶೂನ್ಯರೂಪವೆಂದೂ ಜಗತ್ತೆಲ್ಲಾ ಕ್ಷಣಿಕವಿಜ್ಞಾನದ ಸ್ವರೂಪವೆಂದೂ ಇವರ ಅಭಿಪ್ರಾಯ. ಇವರು ಗುರೂಕ್ತವಾದ ಆಚಾರವನ್ನು ನಡೆಸು ವುದಲ್ಲದೆ ಕೊನೆಯ ಸ್ಥಿತಿಯನ್ನು ಪಡೆಯುವ ಪ್ರಯತ್ನದ ರೂಪವಾದ ಯೋಗವನ್ನೂ ಸಾಧಿಸುವರು.

(೩) **ಸೌತ್ರಾಂತಿಕರು**— ಇವರು ಹೊರಗಣ ಪದಾರ್ಥಗಳನ್ನು ಒಳಗಣ ಜ್ಞಾನದಿಂದ ಅನುಮಾನಿಸತಕ್ಕವುಗಳೆಂದು ತಿಳಿಯುವರು.

೪ **ವೈಭಾಷಿಕರು**— ಇವರು ಮೇಲಿನ ಮೂರು ದಾರಿಗಳನ್ನೂ ಹಿಡಿಯದೆ ಒಳಗಣ ವಿಜ್ಞಾನವನ್ನೂ ಒಪ್ಪಿ ಹೊರಗಣ ಪದಾರ್ಥಗಳು ಪ್ರತ್ಯಕ್ಷವಾಗಿರತಕ್ಕವುಗಳೆಂದೂ ಭಾವಿಸುವರು.

ಇನ್ನು ಸಂಕ್ಷೇಪವಾಗಿ ಹೇಳಬೇಕಾದರೆ ಮಾಧ್ಯಮಿಕರನ್ನು ಸರ್ವ ನಾಸ್ತಿತ್ವವಾದಿಗಳೆಂದೂ ಸೌತ್ರಾಂತಿಕವೈಭಾಷಿಕರನ್ನು ಸರ್ವಾಸ್ತಿತ್ವವಾ ದಿಗಳೆಂದೂ ಯೋಗಾಚಾರರನ್ನು ವಿಜ್ಞಾನಾಸ್ತಿತ್ವವಾದಿಗಳೆಂದೂ ಮೂರೇ ಭೇದಗಳನ್ನು ಮಾಡಬಹುದು.

ಬೌದ್ಧರು ಸಾಮಾನ್ಯವಾಗಿ ನಾಲ್ಕು ತತ್ತ್ವಗಳನ್ನು ಪ್ರತಿಪಾದಿಸು ವರು. ಅವು ಯಾವನೆಂದರೆ–ದುಃಖ, ಆಯತನ, ಸಮುದಯ, ಮಾರ್ಗ.

ಇವುಗಳಲ್ಲಿ (೧) ದುಃಖವು ವಿಜ್ಞಾನ, ವೇದನ, ಸಂಜ್ಞೆ, ಸಂಸ್ಕಾರ, ರೂಪ-ಎಂಬ ಐದು ಸ್ಕಂಧಗಳುಳ್ಳದ್ದಾಗಿದೆ. ವಿಜ್ಞಾನವೆಂದರೆ ನಮಗೆ ಬೇರೆ ಬೇರೆಯಾಗಿ ಆಗುವ ವಿವಿಧವಿಷಯಜ್ಞಾನಗಳ ರೂಪವಾದ ಎಲ್ಲ ಪ್ರವೃತ್ತಿವಿಜ್ಞಾನಗಳಲ್ಲಿಯೂ ಅನುಗತವಾಗಿ ನಾನು ನಾನೆಂದು ಬರುತ್ತಿರುವ ಆಲಯವಿಜ್ಞಾನಧಾರೆ. (೨) ವೇದನವೆಂದರೆ ಸುಖದುಃಖಾದ್ಯನುಭವಗಳು. (೩) ಸಂಜ್ಞೆಯೆಂದರೆ "ಇದು ಆಕಳು; ಇದು ಕುದುರೆ" ಎಂಬ ಮುಂತಾದ ಪ್ರತ್ಯಯಗಳು. (೪) ಸಂಸ್ಕಾರವೆಂದರೆ ರಾಗ, ದ್ವೇಷ, ಮೋಹ, ಪುಣ್ಯ, ಪಾಪ. (೫) ರೂಪವೆಂದರೆ ಇಂದ್ರಿಯಗಳು ಮತ್ತು ವಿಷಯಗಳು. ಬೌದ್ಧಮತದ ಪ್ರಕಾರ ಇವೆಲ್ಲವೂ ದುಃಖಗಳು. ಆಯತನವೆಂದರೆ ೫ ಕರ್ಮೇಂದ್ರಿಯಗಳು, ೫ ಜ್ಞಾನೇಂದ್ರಿಯಗಳು, ಮನಸ್ಸು, ಬುದ್ಧಿ-ಈ ಹನ್ನೆರಡು. ಬೌದ್ಧರಲ್ಲಿ ಈ ದ್ವಾದಶಾಯತನದ ಪೂಜೆಯು ವಿಹಿತವಾಗಿದೆ. ಸಮುದಾಯವೆಂದರೆ ರಾಗದ್ವೇಷಾದಿಗಳು, ಆತ್ಮ, ಆತ್ಮನ ಸ್ವಭಾವ-ಇವೆಲ್ಲ. ಮಾರ್ಗವೆಂದರೆ ಸರ್ವಸಂಸ್ಕಾರಗಳೂ ಕ್ಷಣಿಕವೆಂಬ ಸ್ಥಿರವಾದ ವಾಸನೆ. ಇದು ರಾಗದ್ವೇಷಾದಿಗಳ ಸಂತತಿಯನ್ನೂ ವಿಷಯವಾಸನೆಯನ್ನೂ ನಾಶಮಾಡಿ ಮೋಕ್ಷಕ್ಕೆ ಸಾಧನವಾಗುವದು.

ಈ ನಾಲ್ಕು ತತ್ತ್ವಗಳ ಹೊರತು ಇವುಗಳ ವಿಚಾರಮಾಡುವ ನಿತ್ಯನಾದ ಆತ್ಮನನ್ನು ಬುದ್ಧನು ಒಪ್ಪುವದಿಲ್ಲ. ಬೌದ್ಧರಲ್ಲಿ ಕ್ಷಣಿಕವಿಜ್ಞಾನವೇ ಆತ್ಮ. ಜಗದ್ವ್ಯಾಪಾರವನ್ನೆಲ್ಲ ಕ್ಷಣಿಕವಿಜ್ಞಾನರೂಪವಾದ ಆತ್ಮನ ಕರ್ಮವೇ ನಿರ್ವಹಿಸುವದು. ಆ ಕರ್ಮವು ಎಲ್ಲ ಕಾಲಗಳಲ್ಲಿಯೂ ಎಲ್ಲ ಲೋಕಗಳಲ್ಲಿಯೂ ಆತ್ಮನ ಬೆನ್ನು ಹತ್ತಿದ್ದು ತನ್ನ ಫಲವನ್ನು ಕೊಟ್ಟೇ ಕೊಡುವದು. ಮಾಡಿದ ಕರ್ಮವು ಅನುಭವದಿಂದ ತೀರಬೇಕೇ ಹೊರತು. ಅದರ ವೇಗವನ್ನು ಹೆಚ್ಚು ಕಡಿಮೆ ಮಾಡುವದಕ್ಕೆ ಯಾರಿಗೂ ಅಧಿಕಾರವಿಲ್ಲ. ಆತ್ಮನು ಕ್ಷಣಿಕನಾದ್ದರಿಂದ ಹಿಂದೆ ಮಾಡಿದವನೊಬ್ಬನಾಗಿಯೂ ಮುಂದೆ ಅನುಭವಿಸುವವನೊಬ್ಬನಾಗಿಯೂ ಅವ್ಯವಸ್ಥೆಯಾಗದಂತೆ ಕ್ಷಣಿಕವಿಜ್ಞಾನರೂಪವಾದ ಆತ್ಮವು ತನ್ನ ಕ್ಷಣವು ಮುಗಿದೊಡನೆ ತಾನು ನಾಶವಾಗುವದಕ್ಕೆ ಮುಂಚೆ ತನ್ನ ಸಂಸ್ಕಾರಗಳನ್ನೆಲ್ಲ ಮುಂದೆ ಸಿದ್ಧವಾಗಿ ತಲೆ ಹಾಕುವ ಕ್ಷಣಿಕವಿಜ್ಞಾನಕ್ಕೆ ಧಾರೆಯೆರೆದಿರುವದು.

ಹೀಗೆ ಬೌದ್ಧಮತವು ಸ್ಥಾಯಿಯಾದ ಆತ್ಮನನ್ನು ಒಪ್ಪದಿದ್ದರೂ ಜನ್ಮಾಂತರವನ್ನು ಅಂಗೀಕರಿಸುವದು. ಇಂದ್ರಿಯಾರ್ಥಗಳ ಪುನರ್ದರ್ಶನದ ಇಚ್ಛೆಯೇ ಜನ್ಮವನ್ನು ಕೊಡುವದು. ವೈದಿಕಕರ್ಮವಾದ ಯಜ್ಞದಲ್ಲಿ ನಡೆಯುವ ಪ್ರಾಣಿವಧೆಯನ್ನೂ ಸೋಮಪಾನವನ್ನೂ ಬೌದ್ಧಮತವು ನಿಷೇಧಿಸುವದು. ಬೌದ್ಧಮತದಲ್ಲಿ ಜಾತಿಭೇದವಿಲ್ಲ.

ದುಃಖನಾಶವಾಗುವದಕ್ಕೆ (೧) ಐಹಿಕಸೌಕರ್ಯಕ್ಕೆ ಬಾಯಿ ನೀರು ಕರೆಯುವದು, (೨) ಇತರರಿಗೆ ಹಾನಿಯನ್ನು ಮಾಡುವ ಮನೋವೃತ್ತಿ, (೩) ಮನಸ್ಸಿನ ತಾಮಸಗುಣ, (೪) ಮುಂಗೋಪ, (೫) ಸಂಶಯಬುದ್ಧಿ– ಎಂಬ ಐದು ಪ್ರತಿಬಂಧಕಗಳಿರುವವು ಇವುಗಳು ಹೋಗುವದಕ್ಕೆ (೧) ಒಳ್ಳೇಶ್ರದ್ಧೆ, (೨) ಒಳ್ಳೇ ಸಂಕಲ್ಪ, (೩) ಒಳ್ಳೇ ವಾಣಿ, (೪) ಒಳ್ಳೇ ಕ್ರಿಯೆ, (೫) ಒಳ್ಳೇ ಬಾಳುವೆ, (೬) ಒಳ್ಳೇ ಪ್ರಯತ್ನ, (೭) ಒಳ್ಳೇ ವಿಚಾರ, (೮) ಒಳ್ಳೇ ಧ್ಯಾನ–ಎಂಬ ಎಂಟು ಮುಖ್ಯವಾದ ಸಾಧನಗಳನ್ನು ಅಭ್ಯಾಸಮಾಡಬೇಕು. ಈ ಸಾಧನಗಳಿಂದ ದುಃಖವನ್ನು ದೂರಮಾಡುತ್ತ ಬಂದರೆ ಮನಸ್ಸಿನ ಸಮಾಧಾನವು ಹೆಚ್ಚಿ ಶರೀರವೂ ಆರೋಗ್ಯವನ್ನು ಪಡೆದು ಎಲ್ಲ ವಿಧದಿಂದಲೂ ಶಾಂತಿಯುದಯಿಸುವದು. ಮುಖ್ಯವಾಗಿ ಪ್ರಪಂಚದಲ್ಲಿ ಆಸಕ್ತಿಯನ್ನಿಟ್ಟವನ್ನು ಪ್ರಪಂಚದಲ್ಲಿ ಬಾಳು ಮಾಡಬೇಕಾದದ್ದು ತಪ್ಪುವದಿಲ್ಲ. ಬಾಳೆಂಬುದೇ ದುಃಖಮಯವಾದದ್ದು. ಒಂದುಪಕ್ಷ ಈಗ ಇರುವ ದೇಹವು ಸತ್ತರೂ ಪ್ರಪಂಚಾಸಕ್ತಿಯ ಬಲದಿಂದ ಮತ್ತೊಂದು ದೇಹವು ಹುಟ್ಟಿಬಂದೇಬರುವದು. ಒಂದು ಪಕ್ಷ ಅದು ಎಷ್ಟೇ ಸತ್ಕರ್ಮದ ಫಲವಾದ ಸುಖವನ್ನು ಪಡೆದರೂ ಅದರಲ್ಲಿ ದುಃಖವು ಆಗಾಗ ಅಷ್ಟಿಷ್ಟಾದರೂ ತಲೆ ಹಾಕುತ್ತಲೇ ಇರುವದು. ಬಾಳುವೆಯಲ್ಲಿ ದುಃಖದ ಲೇಶವಾದರೂ ಇಲ್ಲದೆ ಇರುವದೇ ಇಲ್ಲ. ದುಃಖವನ್ನು ಸಂಪೂರ್ಣವಾಗಿ ತಪ್ಪಿಸಿಕೊಳ್ಳಬೇಕಾದರೆ ಮತ್ತೆ ಹುಟ್ಟದಂತೆ ಸಾಯಬೇಕು. ಈ ಉದ್ದೇಶವು ನೆರವೇರುವದಕ್ಕೆ ಪ್ರಪಂಚಾಸಕ್ತಿಯನ್ನು ಸಂಪೂರ್ಣವಾಗಿ ತೊರೆಯುವದೇ ರಾಜಮಾರ್ಗ. ಏಕೆಂದರೆ ಆಸಕ್ತಿಯು ಎಣ್ಣೆಯಂತೆ; ಪ್ರಪಂಚದ ಬಾಳುವೆಯು ದೀಪದಂತೆ. ಆದ್ದರಿಂದ ಪ್ರಪಂಚದ ಬಾಳುವೆಯೆಂಬ ದೀಪವನ್ನು ಮತ್ತೆ ಹತ್ತದಂತೆ ಆರಿಸ

ಬೇಕಾದರೆ ಪ್ರಪಂಚದ ಆಸಕ್ತಿಯೆಂಬ ಎಣ್ಣೆಯನ್ನು ಎಷ್ಟುಮಾತ್ರವೂ ಇಲ್ಲದಂತೆ ಮಾಡಬೇಕು. ಹೀಗೆ ಮಾಡಿದರೆ ಆಗ ಆರಿದ ದೀಪದ ಉರಿ ಹೋಗುವಂತೆ ಪ್ರಪಂಚಾಸಕ್ತಿಯನ್ನು ಸಂಪೂರ್ಣವಾಗಿ ತೊರೆದು ಸತ್ತ್ವನು ನಿರ್ವಾಣವನ್ನು ಪಡೆಯುವನು. ನಿರ್ವಾಣವೆಂದರೆ ಎಲ್ಲ ಆಸಕ್ತಿಗಳನ್ನೂ ಬಿಟ್ಟು ತಾನಿಲ್ಲದಂತಾಗುವದು. ಇದೇ ಮೋಕ್ಷ.

---

## ಜೈನಮತ.

[ ಲೇಖಕರು:— ಮೈಸೂರಿನ “ ವಿಶ್ವಬಂಧು ” ಎಂಬ ಪಕ್ಷಪತ್ರಿಕೆಯ ಸಂಪಾದಕರೂ ನ್ಯಾಯತೀರ್ಥಬಿರುದಾಂಕಿತರೂ ಆದ ಶ್ರೀ|| ಎ. ಶಾಂತರಾಜಶಾಸ್ತ್ರಿಗಳು ]

ಶುಭಾಶುಭಕರ್ಮಗಳು ಜೀವಾತ್ಮಪ್ರದೇಶಕ್ಕೆ ಬಂದು ಸೇರದಂತೆ ಶುದ್ಧಯೋಗದಿಂದ ತಡೆದು ಕರ್ಮಶತ್ರುಗಳನ್ನು ಜಯಿಸುವವನಾದುದರಿಂದ ಜಿನನೆಂದು ಹೆಸರು ಬಂದಿದೆ. ಅಂತಹ ಜಿನನ ಸಂಬಂಧವಾದ ಮತ (ಅಭಿಪ್ರಾಯ)ಕ್ಕೆ ಜೈನಮತವೆಂದು ಹೆಸರು. ಆ ಜಿನನು ದೇವರೆಂದು ನಂಬುವವರಿಗೆ ಜೈನರೆಂದು ಹೆಸರು. ಜಿನರಲ್ಲಿ ನಾನಾತಿಶಯಯುಕ್ತವೂ ದುರ್ಲಭವೂ ಆದ ಪುಣ್ಯಕರ್ಮವನ್ನು ಉಪಾರ್ಜಿಸಿದ ಆತ್ಮರಾಗಿ ಬಂದು ವಿಶಿಷ್ಟಾವಸ್ಥೆಯನ್ನು ಹೊಂದಿ ಹನ್ನೆರಡು ವೇದಗಳನ್ನು ಉಪದೇಶಮಾಡಿರುವವರಿಗೆ ತೀರ್ಥಂಕರರೆಂದೂ ಹೆಸರು.

ಜೈನಮತದ ಸಾರಾಂಶವೇನೆಂದರೆ—ಅನಂತವಾದ ಆಕಾಶದ ಮಧ್ಯದಲ್ಲಿ ಅನಾದ್ಯನಂತವೂ ಅಕೃತ್ರಿಮವೂ ಆದ ಒಂದು ಲೋಕವಿದೆ. ಇದರಲ್ಲಿ ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ — ಎಂಬ ಆರು ಪದಾರ್ಥಗಳು ಮಾತ್ರ ಇವೆ. ಜ್ಞಾನದರ್ಶನಸ್ವರೂಪವಾದ ಚೈತನ್ಯಗುಣವುಳ್ಳ ವಸ್ತುವಿಗೆ ಜೀವದ್ರವ್ಯವೆಂದು ಹೆಸರು. ರೂಪರಸಗಂಧಸ್ಪರ್ಶಗುಣಗಳುಳ್ಳ ಜಡವಸ್ತುವಿಗೆ ಪುದ್ಗಲದ್ರವ್ಯವೆಂದು ಹೆಸರು. ಜೀವಪುದ್ಗಲಗಳ ಚಲನೆಗೆ ಸಹಾಯಕವಾಗಿರುವ ವಸ್ತುವಿಗೆ ಧರ್ಮದ್ರವ್ಯವೆಂದು ಹೆಸರು. ಜೀವಪುದ್ಗಲಗಳ ಸ್ಥಿತಿ (ಗತಿನಿವೃತ್ತಿ)ಗೆ ಸಹಾಯಕವಾದ ವಸ್ತುವಿಗೆ ಅಧರ್ಮದ್ರವ್ಯವೆಂದು ಹೆಸರು. ಸಮಸ್ತವಸ್ತುಗಳಿಗೂ ಅವಕಾಶವನ್ನು

ಕೊಡುವ ವ್ಯಾಪಕವಸ್ತುವಿಗೆ ಆಕಾಶವೆಂದು ಹೆಸರು. ಇತರವಸ್ತುಗಳ ನೂತನಪುರಾತನರೂಪವಾದ ಅವಸ್ಥಾಂತರಗಳಿಗೆ ಕಾರಣವಾದ ವಸ್ತುವಿಗೆ ಕಾಲವೆಂದು ಹೆಸರು.

ಜೀವಗಳು ಲೋಕದಲ್ಲಿ ಅನಂತಾನಂತಗಳಿವೆ. ಅವುಗಳಲ್ಲಿ ಸಮಸ್ತ ಕರ್ಮಗಳಿಂದ ಬಿಡುಗಡೆಯನ್ನು ಹೊಂದಿ ಪರಮಾತ್ಮಾವಸ್ಥೆಯನ್ನು ಹೊಂದಿದ ಜೀವಗಳಿಗೆ ಮುಕ್ತಜೀವಗಳೆಂದೂ ಜನ್ಮಜರಾಮರಣರೂಪವಾದ ಭವದಲ್ಲಿರುವ ಜೀವಗಳಿಗೆ ಸಂಸಾರಿಜೀವಗಳೆಂದೂ ಹೆಸರು. ಈ ಸಂಸಾರಿ ಜೀವಗಳಲ್ಲಿಯೂ ಏಕೇಂದ್ರಿಯಜೀವ ಮೊದಲುಗೊಂಡು ಪಂಚೇಂದ್ರಿಯಜೀವದವರೆಗೆ ಐದು ಭೇದಗಳಿವೆ. ವೃಕ್ಷಮೊದಲಾದವು, ಕ್ರಿಮಿ, ಇರುವೆ, ಭ್ರಮರ, ಮನುಷ್ಯ— ಈ ಐದು ಜೀವಜಾತಿಗಳಲ್ಲಿ ಕ್ರಮವಾಗಿ ಒಂದೊಂದು ಇಂದ್ರಿಯವು ಹೆಚ್ಚುಹೆಚ್ಚಾಗಿದೆ. ಪಂಚೇಂದ್ರಿಯ ಜೀವಗಳು ಮಾತ್ರ ತಮ್ಮ ಪಾಪಪುಣ್ಯಾನುಸಾರವಾಗಿ ನರಕತಿರ್ಯಙ್ಮರ್ತ್ಯ ದೇವಗತಿಗಳಲ್ಲಿ ನಾಲ್ಕರಲ್ಲಿಯೂ ಹುಟ್ಟಬಹುದು. ಇತರಜೀವಗಳು ತಿರ್ಯಗ್ಗತಿಯಲ್ಲಿ ಮಾತ್ರ ಹುಟ್ಟುವ . ಆದರೆ ಕರ್ಮಭಾರವು ಲಘುವಾದ ಮೇಲೆ ಅವು ಕ್ರಮದಿಂದ ಪಂಚೇಂದ್ರಿಯಗಳಾಗಿ ಹುಟ್ಟಬಹುದು. ಜೀವಾತ್ಮನು ಮುಕ್ತನಾಗಬೇಕಾದರೆ ಶ್ರೇಷ್ಠವಾದ ಶರೀರಕ್ಷೇತ್ರ, ಕಾಲ, ಪರಿಣಾಮ, ಮನುಷ್ಯಭವ, ಉತ್ತಮಶ್ರದ್ಧಾನ, ಸುಜ್ಞಾನ, ಅಹಿಂಸಾರೂಪವಾದ ಆಚರಣೆ, ತಪಸ್ಸು, ಧ್ಯಾನ ಮೊದಲಾದವು ಅವಶ್ಯಕವಾಗಿರುತ್ತವೆ. ಇವುಗಳೆಲ್ಲಾ ದೊರೆತರೆ ಜೀವಾತ್ಮನು ಕರ್ಮಗಳನ್ನು ನಾಶಮಾಡಿ ಜಿನನಾಗಿ ಮುಕ್ತನಾಗುವನು.

ಜೈನಮತವು ಪರಲೋಕವನ್ನೂ ಪುಣ್ಯಪಾಪಗಳನ್ನೂ ದೇವರನ್ನೂ ಒಪ್ಪುವದರಿಂದ ಆಸ್ತಿಕಮತವಾಗಿದೆ. ದೇವರು ಸೃಷ್ಟಿಸ್ಥಿತಿಲಯಗಳನ್ನು ಮಾಡುತ್ತಾನೆಂಬ ಮಾತೂ ದುಷ್ಟನಿಗ್ರಹಶಿಷ್ಟಪರಿಪಾಲನೆಯನ್ನು ಮಾಡುತ್ತಾನೆಂಬ ಮಾತೂ ಮಾತ್ರ ಜೈನಮತಕ್ಕೆ ಸಮ್ಮತವಾಗಿಲ್ಲ. ಮುಖವನ್ನು ನೋಡುವದಕ್ಕೆ ಕನ್ನಡಿಯು ನಿಮಿತ್ತಕಾರಣವಾಗಿರುವಂತೆ ಜೀವಾತ್ಮನ ಪರಿಣಾಮಶುದ್ಧಿಗೆ ದೇವರು ನಿಮಿತ್ತಕಾರಣನೆಂದೂ ಜೀವಾತ್ಮರು ತಾವು ಮಾಡಿದ ಪುಣ್ಯಪಾಪಗಳಿಗನುಸಾರವಾಗಿ ಫಲಗಳನ್ನನುಭವಿಸುವದಕ್ಕೆ

ತಾವೇ ಸ್ವತಂತ್ರರಲ್ಲದೆ ಆ ಫಲಗಳನ್ನು ಕೊಡುವ ಗೋಜಿಗೆ ದೇವರು ಬರುವದಿಲ್ಲವೆಂದೂ ದೇವರು ರಾಗದ್ವೇಷರಹಿತನೂ ಪರಿಶುದ್ಧನೂ ಆನಂದಮಯನೂ ಜ್ಞಾನದರ್ಶನಾದಿವಿಶುದ್ಧಗುಣವಿಶಿಷ್ಟನೂ ಆಗಿದ್ದಾನೆಂದೂ ಜೈನಮತವು ಹೇಳುತ್ತದೆ.

ಜೈನಮತಕ್ಕೆ ಅನೇಕಾಂತಮತವೆಂದೂ ಹೆಸರಿದೆ. ಅನೇಕಾಂತಮತವೆಂದರೆ ಪ್ರತಿಯೊಂದು ವಸ್ತುವೂ ಅನೇಕ ಅಂತ (ಧರ್ಮ)ಗಳುಳ್ಳದ್ದೆಂದು ತಿಳಿಯುವ ಮತವೆಂದರ್ಥವು. ಹೇಗೆಂದರೆ ಜೀವದಲ್ಲಿ ಜ್ಞಾನ, ದರ್ಶನ, ಸುಖ, ಶಕ್ತಿ, ಅಸ್ತಿತ್ವ, ನಾಸ್ತಿತ್ವ, ನಿತ್ಯತ್ವ, ಅನಿತ್ಯತ್ವ, ವಸ್ತುತ್ವ, ಪ್ರದೇಶವತ್ವ, ಅಭಿಧೇಯತ್ವ- ಮೊದಲಾದ ಧರ್ಮಗಳಿವೆ. ಜಡವಸ್ತುವಿನಲ್ಲಿ ರೂಪ, ರಸ, ಗಂಧ, ಸ್ಪರ್ಶ, ಅಸ್ತಿತ್ವ, ನಾಸ್ತಿತ್ವ,ನಿತ್ಯತ್ವ, ಅನಿತ್ಯತ್ವ, ವಸ್ತುತ್ವ, ಪ್ರದೇಶವತ್ವ, ಅಭಿಧೇಯತ್ವ ಮೊದಲಾದ ಧರ್ಮಗಳಿವೆ. ಪ್ರತಿಯೊಂದು ವಸ್ತುವೂ ಸ್ಥೂಲರೂಪದಿಂದಾಗಲಿ ಸೂಕ್ಷ್ಮರೂಪದಿಂದಾಗಲಿ ಪೂರ್ವಪೂರ್ವಾವಸ್ಥೆಗಳನ್ನು ಬಿಟ್ಟು ಉತ್ತರೋತ್ತರಾವಸ್ಥೆಗಳನ್ನು ಹೊಂದುತ್ತಿರುವುದು. ಮೂಲವಸ್ತುವೇ ಆ ಅವಸ್ಥಾರೂಪವಾಗಿ ಪರಿಣಮಿಸುತ್ತಿರುವದರಿಂದಲೂ ಆ ಅವಸ್ಥೆಗಳು ಅನಿತ್ಯಗಳಾಗಿರುವದರಿಂದಲೂ ಆ ಅವಸ್ಥಾಪೇಕ್ಷೆಯಿಂದ ವಸ್ತುವು ಅನಿತ್ಯವು. ಆ ಮೂಲ ವಸ್ತುವು ಯಾವ ರೂಪದಿಂದಾದರೂ ಇದ್ದೇ ಇರುವುದರಿಂದ ಅದು ವಸ್ತು - ದ್ರವ್ಯಾಪೇಕ್ಷೆಯಿಂದ ನಿತ್ಯವಾಗಿದೆ. ದೃಷ್ಟಾಂತ:— ಜೀವಾತ್ಮನಲ್ಲಿ ರಾಗದ್ವೇಷಮದಮಾತ್ಸರ್ಯ ಹರ್ಷವಿಷಾದ ಮೊದಲಾದ ಪರಿಣಾಮ(ಅವಸ್ಥೆ)ಗಳು ಪ್ರತಿಸಮಯದಲ್ಲಿಯೂ ಉಂಟಾಗುತ್ತಿರುತ್ತವೆ. ಜೀವಾತ್ಮನೇ ಆ ಅವಸ್ಥಾರೂಪವಾಗಿ ಪರಿಣಮಿಸುವದರಿಂದ ಆ ಅಪೇಕ್ಷೆಯಿಂದ ಜೀವಾತ್ಮನು ಅನಿತ್ಯನು. ಅಂದರೆ ಆ ಅವಸ್ಥೆಗಳು ಅನಿತ್ಯಗಳು. ಮೂಲವಸ್ತುವಾದ ಜೀವಸ್ವರೂಪಕ್ಕೆ ನಾಶವಿಲ್ಲದಿರುವುದರಿಂದ ಅದು ನಿತ್ಯವು.

ವಸ್ತುವಿನಲ್ಲಿ ನಿತ್ಯತ್ವಾನಿತ್ಯತ್ವಧರ್ಮಗಳಿರುವಂತೆ ಅಸ್ತಿತ್ವನಾಸ್ತಿತ್ವ ಮೊದಲಾದ ವಿರುದ್ಧಧರ್ಮಗಳೂ ಇವೆ. ಪ್ರತಿಯೊಂದು ಪದಾರ್ಥವೂ ಸ್ವದ್ರವ್ಯ, ಸ್ವಕ್ಷೇತ್ರ, ಸ್ವಕಾಲ, ಸ್ವಭಾವರೂಪವಾದ ಸ್ವಚತುಷ್ಟಯಾಪೇಕ್ಷೆಯಿಂದ ಇದೆ. ಪರದ್ರವ್ಯ, ಪರಕ್ಷೇತ್ರ ಪರಕಾಲ, ಪರಭಾವರೂಪವಾದ

ಪರಚತುಷ್ಟಯಾಪೇಕ್ಷೆಯಿಂದ ಇಲ್ಲ. ಈ ಅಪೇಕ್ಷಾಭೇದವನ್ನು ಸೂಚಿಸುವದಕ್ಕೋಸ್ಕರ ಅಸ್ತಿನಾಸ್ತಿಶಬ್ದಗಳ ಹಿಂದೆ 'ಸ್ಯಾತ್' ಎಂಬ ಅವ್ಯಯ ಶಬ್ದವನ್ನು ಜೋಡಿಸುವದಾಗಿದೆ. ಈ ಅಸ್ತಿತ್ವನಾಸ್ತಿತ್ವಧರ್ಮಗಳು ಅವಕ್ತವ್ಯತ್ವಧರ್ಮದೊಡನೆ ವಿವಕ್ಷಾಭೇದದಿಂದ ನಾಲ್ಕು ಕವಲೊಡೆದು ಒಟ್ಟು ಏಳು ಭೇದಗಳಾಗುತ್ತವೆ. ಈ ಭೇದಸಮುದಾಯಕ್ಕೆ ಸಪ್ತಭಂಗೀ ನ್ಯಾಯವೆಂದು ಹೆಸರು.

ಜೈನಮತದಲ್ಲಿ ನಾಲ್ಕು ವರ್ಣಾಶ್ರಮಧರ್ಮಗಳೂ ಗರ್ಭಾಧಾನ ಮೊದಲಾದ ಸಂಸ್ಕಾರಗಳೂ ಪ್ರತಿಪಾದಿತವಾಗಿವೆ. ಅಹಿಂಸೆಯು ಜೈನ ಮತದ ಮೂಲತತ್ತ್ವವಾಗಿದೆ. ಇದನ್ನು ಪರಿಪಾಲಿಸುವದಕ್ಕಾಗಿಯೇ ಜೈನರು ರಾತ್ರಿಭೋಜನತ್ಯಾಗ, ಜಲಗಾಲನ- ಮೊದಲಾದ ಶಕ್ಯಾನುಷ್ಠಾನಗಳನ್ನು ಅನುಷ್ಠಿಸುವುದಾಗಿದೆ. ಅಹಿಂಸಾ, ಸತ್ಯ- ಮೊದಲಾದ ವ್ರತಗಳನ್ನು ಸಂಪೂರ್ಣವಾಗಿ ಪರಿಪಾಲಿಸುವ ತಪಸ್ವಿಗಳಿಗೆ ಮಹಾವ್ರತಿ (ಮುನಿ) ಗಳೆಂದೂ ಏಕದೇಶವ್ರತವನ್ನು ಪರಿಪಾಲಿಸುವ ಶ್ರಾವಕರಿಗೆ ಅಣುವ್ರತಿಗಳೆಂದೂ ಹೆಸರು. ಶ್ರಾವಕರೆಂದರೆ ಗುರುವಿನ ದೆಸೆಯಿಂದ ಧರ್ಮವನ್ನು ಶ್ರವಣಮಾಡುವವರೆಂದರ್ಥವು. ಈ ಶ್ರಾವಕರು ಮದ್ಯಮಾಂಸ ಮಧುತ್ಯಾಗ, ಅಹಿಂಸಾಣುವ್ರತ, ಸತ್ಯಾಣುವ್ರತ ಅಚೌರ್ಯಾಣುವ್ರತ, ಪರಸ್ತ್ರೀತ್ಯಾಗಾಣುವ್ರತ, ಪರಿಮಿತಪರಿಗ್ರಹಾಣುವ್ರತ- ಈಮೂಲಗುಣಗಳನ್ನು ಪರಿಪಾಲಿಸಬೇಕೆಂದು ಜೈನರ ಆಚಾರಶಾಸ್ತ್ರದಲ್ಲಿ ವಿಧಾನವಿದೆ. ದೇವಪೂಜಾ, ಗುರುಸೇವಾ, ಶಾಸ್ತ್ರಸ್ವಾಧ್ಯಾಯ, ಇಂದ್ರಿಯಜಯಪ್ರಾಣಿರಕ್ಷಣಾ, ಪರ್ವತಿಥಿಯಲ್ಲಿ ಏಕಭುಕ್ತ-ಮೊದಲಾದ ತಪಸ್ಸು, ಸತ್ಪಾತ್ರಗಳಿಗೆ ಆಹಾರಾದಿ ದಾನ- ಇವು ಆರು ಶ್ರಾವಕರ ನಿತ್ಯಕರ್ಮಗಳು. ಜೈನಮುನಿಗಳಿಗೆ ಅಹಿಂಸಾಮಹಾವ್ರತ ಮೊದಲಾದ ಇಪ್ಪತ್ತೆಂಟು ಮೂಲಗುಣಗಳೂ ಇನ್ನೂ ಅನೇಕ ಧರ್ಮಗಳೂ ಇವೆ.

---

# ಅದ್ವೈತಮತ.

[ಮದರಾಸಿನಲ್ಲಿರುವ ಸಂಸ್ಕೃತಕಲಾಶಾಲೆಯ ಅಧ್ಯಕ್ಷರೂ "ಶಾಸ್ತ್ರರತ್ನಾಕರ", "ಮೀಮಾಂಸಾರತ್ನ"-ಎಂಬ ಬಿರುದುಳ್ಳವರೂ ಆದ ಶ್ರೀ॥ ವೆಂಕಟಸುಬ್ರಹ್ಮಣ್ಯಶಾಸ್ತ್ರಿಗಳ ಸಂಸ್ಕೃತಲೇಖನದ ಅನುವಾದವು. ಅನುವಾದಕ ಚಿ.]

ಪದಾರ್ಥವು ದೃಕ್ (ನೋಡುವವನು), ದೃಶ್ಯ (ಕಾಣುವವುಗಳು) –ಎಂದು ಎರಡು ಬಗೆ. ಅದರಲ್ಲಿ ದೃಕ್ ಎಂಬುದಕ್ಕೆ ಸತ್ (ಇರುವಿಕೆ), ಜ್ಞಾನ, ಆನಂದ–ಎಂದು ವ್ಯವಹಾರವಿದೆ. ಅದರಲ್ಲಿ ಸತ್ತ್ವವೆಂದರೆ ಅಬಾಧ್ಯತ್ವವು; ಜ್ಞಾನತ್ವವೆಂದರೆ ಪ್ರಕಾಶತ್ವವು; ಆನಂದತ್ವವೆಂದರೆ ನಿರತಿಶಯಸುಖತ್ವವು. ಆ ದೃಕ್ಕಿನಲ್ಲಿ ಉಪಾಧಿಯಿಂದ ಕೂಡಿದ್ದೆಂದೂ ಉಪಾಧಿಯಿಲ್ಲದ್ದೆಂದೂ ಎರಡು ಭೇದ. ಉಪಾಧಿಯಿಂದ ಕೂಡಿದ್ದರಲ್ಲಿಯೂ ಜೀವನೆಂದೂ ಈಶ್ವರನೆಂದೂ ಎರಡು ಭೇದ.

ಅದರಲ್ಲಿ ಜೀವನೆಂದರೆ ಅಂತಃಕರಣದ ಉಪಾಧಿಯಿಂದ ಕೂಡಿದ ಚಿದ್ರೂಪವು. ಇವನಿಗೆ ಅವಸ್ಥಾತ್ರಯಗಳುಂಟು. ಅದರಲ್ಲಿ ಜಾಗ್ರದವಸ್ಥೆಯಿಂದ ಕೂಡಿದವನಿಗೆ ವಿಶ್ವನೆಂದೂ ಸ್ವಪ್ನಾವಸ್ಥೆಯಿಂದ ಕೂಡಿದವನಿಗೆ ತೈಜಸನೆಂದೂ ಸುಷುಪ್ತ್ಯವಸ್ಥೆಯಿಂದ ಕೂಡಿದವನಿಗೆ ಪ್ರಾಜ್ಞನೆಂದೂ ವ್ಯವಹಾರವಿದೆ. ಆ ಜೀವನು ಆಯಾ ಅಂತಃಕರಣಭೇದದಿಂದ ಭಿನ್ನನಾಗಿ ವ್ಯಷ್ಟಿಜೀವನೆನಿಸುವನು; ಜೀವನಿಗೆ ಉಪಾಧಿಭೂತವಾದಂಥ ಎಲ್ಲ ಅಂತಃಕರಣಗಳಲ್ಲಿ ಅನುಸ್ಯೂತವಾಗಿರುವ ಸೂತ್ರತುಲ್ಯವಾದ ಅಂತಃಕರಣಾವಚ್ಛಿನ್ನಚೈತನ್ಯವು ಸಮಷ್ಟಿಜೀವನು. ಅವನಿಗೇ ಸೂತ್ರಾತ್ಮ, ಹಿರಣ್ಯಗರ್ಭ, ವಿರಾಟ್— ಎಂಬ ಹೆಸರುಗಳುಂಟು.

ಮಾಯೆಯ ಉಪಾಧಿಯಿಂದ ಕೂಡಿದ ಚಿದ್ರೂಪವೇ ಈಶ್ವರನು. ಅವನಿಗೆ ಸರ್ವಜ್ಞತ್ವ ಮೊದಲಾದ ಗುಣವಿಶೇಷಗಳುಂಟು. ಅವನೇ ಉದ್ಭೂತಸತ್ತ್ವಗುಣರೂಪವಾದ ಮಾಯೆಯ ಉಪಾಧಿಯಿಂದ ಕೂಡಿ ಸ್ಥಿತಿಕರ್ತನಾದ ವಿಷ್ಣುವೆಂದೂ ಆವಿರ್ಭೂತರಜೋಗುಣರೂಪವಾದ ಮಾಯೆಯಿಂದ ಆಕ್ರಾಂತನಾಗಿ ಸೃಷ್ಟಿಕರ್ತನೆನಿಸಿದ ಬ್ರಹ್ಮನೆಂದೂ ಅತಿರೋಹಿತ

ತಮೋಗುಣರೂಪವಾದ ಮಾಯೆಯಿಂದ ಅವಚ್ಛಿನ್ನನಾಗಿ ರುದ್ರನೆಂದೂ ಕರೆಸಿಕೊಳ್ಳುವನು. ಈ ರೂಪವಾದ ಈಶ್ವರನು ಉಪಾಸ್ಯನು; ಮೊದಲು ಹೇಳಿದ ಜೀವನು ಉಪಾಸಕನು. ಜೀವನಿಗೂ ಈಶ್ವರನಿಗೂ ಈ ಬಗೆಯಲ್ಲಿ ಭೇದವಿರುವದು.

ಉಪಾಧಿಯಿಲ್ಲದ ಚಿತ್ತು ಮೋಕ್ಷಸ್ಥಿತಿಯಲ್ಲಿ ಕೇವಲ ತಾನೇತಾನಾಗಿರುವದು. ಬಂಧದ ನಿವೃತ್ತಿಯೇ ಮೋಕ್ಷವು. ಅವಿದ್ಯೆಯೇ ಬಂಧವು. ಅದಕ್ಕೇ ಅಜ್ಞಾನವೆಂದೂ ಮಾಯೆಯೆಂದೂ ಹೆಸರು. ಅದು ಆವರಣ ಮತ್ತು ವಿಕ್ಷೇಪ—ಎಂಬ ಎರಡು ಬಗೆಯ ಶಕ್ತಿಗಳಿಂದ ಕೂಡಿದ್ದು. ಅದರಲ್ಲಿ ಆವರಣಶಕ್ತಿಯು ಆತ್ಮಸ್ವರೂಪವನ್ನು ಮುಚ್ಚಿಹಾಕುವದು; ವಿಕ್ಷೇಪಶಕ್ತಿಯು ಅನಾತ್ಮಗಳಾದ ದೇಹ, ಇಂದ್ರಿಯ—ಮೊದಲಾದವುಗಳನ್ನು ಆತ್ಮನೆಂದು ಕಾಣಿಸುವಂತೆ ಮಾಡುವದು. ಆದ್ದರಿಂದಲೇ ಅನಾತ್ಮಗಳಾದ ದೇಹೇಂದ್ರಿಯಾದಿಗಳಲ್ಲಿ "ನಾನು ದಪ್ಪಗಿದ್ದೇನೆ, ನಾನು ಬಡಕಲಾಗಿದ್ದೇನೆ, ನಾನು ಮೂಕನು, ನಾನು ಕುರುಡನು—ಈ ಮೊದಲಾದ ರೂಪಗಳಲ್ಲಿ ಆತ್ಮಬುದ್ಧಿಯುಂಟಾಗುವದು. ಈ ಬಗೆಯ ಬುದ್ಧಿಗೇ ಅಧ್ಯಾಸವೆಂದು ಹೆಸರು; ಬಂಧನಕ್ಕೆ ಕಾರಣವಾದ್ದರಿಂದ ಬಂಧನೆಂದೂ ವ್ಯವಹಾರವಿದೆ.

ಇದೇ ಎಲ್ಲ ಅನರ್ಥಗಳಿಗೂ ಕಾರಣವು. ಹೇಗೆಂದರೆ ಅನಾತ್ಮಗಳಾದ ದೇಹಾದಿಗಳಲ್ಲಿ ಆತ್ಮಬುದ್ಧಿಯುಂಟಾದರೆ ಆಗ ದೇಹಾದಿಗಳಿಗೆ ಮಾನವಾದರೆ ರಾಗವೂ ಅವಮಾನವಾದರೆ ದ್ವೇಷವೂ ನಾಶವಾದರೆ ಭಯವೂ—ಹೀಗೆಲ್ಲ ಉಂಟಾಗುವವು. ಆ ರಾಗಾದಿಗಳಿಂದ ಧರ್ಮಾಧರ್ಮಗಳಲ್ಲಿ ಪ್ರವೃತ್ತಿಯಾಗುವದು. ಈ ಪ್ರವೃತ್ತಿಯಿಂದ ಧರ್ಮಾಧರ್ಮಗಳ ಅನುಷ್ಠಾನವಾಗುವದು. ಆಮೇಲೆ ಅದರ ಫಲವನ್ನು ಭೋಗಿಸುವದಕ್ಕೆ ಜನ್ಮ ಮೊದಲಾದವುಗಳಾಗುವವು. ಅವುಗಳಿಂದ ದುಃಖವಾಗುವದು. ಈ ಕ್ರಮದಿಂದ ಎಲ್ಲ ಅನರ್ಥಗಳಿಗೂ ಕಾರಣವಾದ್ದರಿಂದ ಅವಿದ್ಯೆಗೆ ಬಂಧರೂಪತ್ವವಿರುವದು.

ಈ ಬಗೆಯ ಅಜ್ಞಾನರೂಪವಾದ ಅವಿದ್ಯೆಯ ನಾಶವು ಆತ್ಮಜ್ಞಾನದಿಂದಲೇ ಆಗಬೇಕಾಗಿರುವದು. ಏಕೆಂದರೆ ಆತ್ಮಜ್ಞಾನವಿಲ್ಲದಿರುವದೇ

ಮೇಲೆ ಹೇಳಿದ ಎಲ್ಲ ಅನರ್ಥಗಳಿಗೂ ಕಾರಣವಾಗಿರುವದು. ಜ್ಞಾನವೂ ಅಜ್ಞಾನವೂ ಒಂದೇ ವಿಷಯಕ್ಕೇ ಆಗುವದರಿಂದಲೇ ಅವುಗಳಿಗೆ ನಿವರ್ತ್ಯನಿವರ್ತಕಭಾವವು ಲೋಕಸಿದ್ಧವಾಗಿರುವದು. ಆ ಜ್ಞಾನವಾದರೂ ಪ್ರತ್ಯಕ್ಷಾತ್ಮಕವಾದರೆ ಮಾತ್ರ ಅಜ್ಞಾನವನ್ನು ನಾಶಮಾಡಬಲ್ಲದು. ಹಿಂದೆ ಹೇಳಿರುವಂಥ ಪ್ರತ್ಯಕ್ಷಾತ್ಮಕಭ್ರಮವನ್ನು ಪರೋಕ್ಷಜ್ಞಾನವು ಹೋಗಲಾಡಿಸಲಾರದು. ಲೋಕದಲ್ಲಿಯೂ ಹೀಗೆಯೇ ಕಂಡುಬಂದಿದೆ. ಹೇಗೆಂದರೆ ಒಬ್ಬ ದಾರಿಹೋಕನು ಮಬ್ಬುಗತ್ತಲೆಯಲ್ಲಿ ದಾರಿಯಲ್ಲಿರುವ ಒಂದು ಹಗ್ಗವನ್ನು ಅದರ ಸ್ವರೂಪಜ್ಞಾನವಿಲ್ಲದ್ದರಿಂದ ಹಾವೆಂದು ತಿಳಿದು ಭಯಕಂಪಾದಿಗಳುಳ್ಳವನಾಗುತ್ತಾನೆ. ಆಗ ಇದು ಸರ್ಪವಾಗಿರಲಾರದೆಂದು ಪರೋಕ್ಷಜ್ಞಾನವಾದರೂ ಅವನು ಅನುಭವಿಸುತ್ತಿರುವ ಭಯಕಂಪಾದಿಗಳು ಹೋಗುವದಿಲ್ಲ. ಮತ್ತೇನೆಂದರೆ "ಇದು ಹಗ್ಗವು; ಹಾವಲ್ಲ." ಎಂದು ಪ್ರತ್ಯಕ್ಷಜ್ಞಾನವಾದರೆ ಮಾತ್ರ ಅವನಿಗೆ ಭಯಕಂಪಾದಿಗಳ ಬಿಡುಗಡೆಯಾಗುತ್ತದೆ ಈ ಸಂದರ್ಭದಲ್ಲಿ ಹೇಗೆ ಹಗ್ಗದ ಸ್ವರೂಪದ ಪ್ರತ್ಯಕ್ಷವು ಹಗ್ಗದ ಸ್ವರೂಪದ ಅಜ್ಞಾನವನ್ನೂ ಅದರಿಂದುಂಟಾದ ಭಯಕಂಪಾದಿಗಳನ್ನೂ ಹಿಮ್ಮೆಟ್ಟಿಸುವದೊ ಹಾಗೆ ಆತ್ಮಸ್ವರೂಪವಿಷಯಕಪ್ರತ್ಯಕ್ಷವೇ ಅಜ್ಞಾನವನ್ನೂ ಅದರಿಂದುಂಟಾದ ಎಲ್ಲ ಅನರ್ಥಗಳನ್ನೂ ಹಿಮ್ಮೆಟ್ಟಿಸುವದು.

ಈ ಬಗೆಯ ಜ್ಞಾನವು ಮುಮುಕ್ಷ್ವಾಧಿಕಾರಿಗಳಿಗೆ ಶ್ರವಣಮನನನಿಧಿಧ್ಯಾಸನಗಳಿಂದ ದೊರೆಯುವದು. ಶ್ರವಣವೆಂದರೆ ವೇದಾಂತವಾಕ್ಯಗಳ ತಾತ್ಪರ್ಯದ ಅವಧಾರಣಾತ್ಮಕವಾದ ಜ್ಞಾನರೂಪವೆಂದು ಒಂದು ಪಕ್ಷವು; ವೇದಾಂತವಾಕ್ಯಗಳ ತಾತ್ಪರ್ಯದ ಅವಧಾರಣೆಗೆ ಅನುಕೂಲವಾದ ಮಾನಸವ್ಯಾಪಾರರೂಪವೆಂದು ಇನ್ನೊಂದು ಪಕ್ಷವು. ಈ ಶ್ರವಣವನ್ನೇ ಬ್ರಹ್ಮವಿಚಾರವೆಂದು ವ್ಯವಹರಿಸುತ್ತಾರೆ. ಮನನವೆಂದರೆ ಶ್ರವಣಮಾಡಿದ ಅರ್ಥದ ವಿಷಯವಾಗಿ ಯುಕ್ತತ್ವ, ಅಯುಕ್ತತ್ವ—ಮೊದಲಾದ ಜ್ಞಾನವೆಂದು ಒಂದು ಪಕ್ಷವು; ಯುಕ್ತತ್ವ, ಅಯುಕ್ತತ್ವ—ಮೊದಲಾದ ಮಾನಸಚಿಂತನರೂಪವಾದ ವ್ಯಾಪಾರಾತ್ಮಕವೆಂದು ಇನ್ನೊಂದು ಪಕ್ಷವು. ನಿಧಿಧ್ಯಾಸನವೆಂದರೆ ಶ್ರವಣಮಾಡಿದ ಅರ್ಥವನ್ನು ಚೆನ್ನಾಗಿ

ದೃಢಗೊಳಿಸುವಂಥ ಮತ್ತು ಅನ್ಯ (ವಿಜಾತೀಯ) ಕಲ್ಪನೆಗಳನ್ನೆಲ್ಲ ಹಿಮ್ಮೆಟ್ಟಿಸುವದರ ಮೂಲಕವಾಗಿ ಆತ್ಮವಿಷಯಕವಾದ ಒಂದೇ ಕಲ್ಪನೆಯ (ಸಜಾತೀಯಪ್ರತ್ಯಯದ) ಪ್ರವಾಹವನ್ನುಂಟುಮಾಡುವಂಥ ಧ್ಯಾನವು. ಅವುಗಳಲ್ಲಿ ಶ್ರವಣವೂ ಮನನವೂ ನಿಧಿಧ್ಯಾಸನಕ್ಕೆ ಅಂಗಗಳೆಂದೂ ನಿಧಿಧ್ಯಾಸನವು ಮುಖ್ಯವೆಂದೂ ಆದರಿಂದ ಕೂಡಿದ ಮನಸ್ಸಿನೇ ನೇ ಮೊದಲು ಹೇಳಿದ ಆತ್ಮಸಾಕ್ಷಾತ್ಕಾರವೆಂದೂ ಒಂದು ಮತವು; ಮನನವೂ ನಿಧಿಧ್ಯಾಸನವೂ ಶ್ರವಣಕ್ಕೆ ಅಂಗಗಳೆಂದೂ ಶ್ರವಣವು ಮುಖ್ಯವೆಂದೂ ಸಾಕ್ಷಾತ್ಕಾರವು ಶ್ರವಣಕ್ಕೆ ವಿಷಯವಾಗಿ ಮಾಡಿದಂಥ ಮಹಾವಾಕ್ಯಕ್ಕೆ ಅಧೀನವಾಗಿಯೇ ಇರುವದೆಂದೂ ಇನ್ನೊಂದು ಮತವು. ಮಧ್ಯಮಾಧಿಕಾರಿಗಳಿಗಾದರೊ ದಹರ ಮೊದಲಾದ ಉಪಾಸನೆಗಳಿಂದ ಅರ್ಚಿರಾದಿ ಮಾರ್ಗಗಳ ಮೂಲಕವಾಗಿ ಬ್ರಹ್ಮಲೋಕದ ಪ್ರಾಪ್ತಿಯಾಗಿ ಅಲ್ಲಿಮಾಡಿದ ಶ್ರವಣಾದಿಗಳಿಂದ ಆ ಬಗೆಯ ಜ್ಞಾನವಾಗುವದೆಂದು ಜ್ಞಾನೋಪಾಯದಲ್ಲಿ ಎರಡು ಭೇದವು.

ದೃಶ್ಯವು ಕೂಡ ವ್ಯಾವಹಾರಿಕವೆಂದೂ ಪ್ರಾತಿಭಾಸಿಕವೆಂದೂ ಎರಡು ವಿಧ. ಅವುಗಳಲ್ಲಿ ಸ್ವಪ್ನದಲ್ಲಿ ಕಾಣುವ ಆನೆ ಮೊದಲಾದವೂ ಕಪ್ಪೇಚಿಪ್ಪಿನಲ್ಲಿ ಕಾಣುವ ಬೆಳ್ಳಿ ಮೊದಲಾದವೂ ಪ್ರಾತಿಭಾಸಿಕ. ಅವು ಪ್ರತಿಭಾಸ(ತೋರುವ)ಕಾಲದಲ್ಲಿ ಮಾತ್ರ ಇರುವದ್ದರಿಂದ ಪ್ರಾತಿಭಾಸಿಕ. ಆದ್ದರಿಂದಲೇ ಸ್ವಪ್ನದ ಆನೆ ಮೊದಲಾದವುಗಳು ಎಚ್ಚರದಲ್ಲಿ ಕಾಣುವದಿಲ್ಲ. ಬ್ರಹ್ಮದ ಹೊರತು ಉಳಿದ ಪ್ರಪಂಚವೆಲ್ಲ ವ್ಯಾವಹಾರಿಕವು. ಮೂಲಾವಿದ್ಯೆಯಿಂದ ಅವಚ್ಛಿನ್ನವಾದ ಚಿತ್ತ್ವವಾಗಿರುವದೇ ಅವುಗಳ ವ್ಯಾವಹಾರಿಕತ್ವ. ಮೋಕ್ಷದಶೆಯಲ್ಲಿ ಮೂಲಾವಿದ್ಯೆಯೇ ನಾಶವಾಗುವದರಿಂದ ಆ ಬಗೆಯ ವ್ಯಾವಹಾರಿಕವಾದ ಎರಡನೆಯದು ಇರುವದಿಲ್ಲ.

"ಅವಿದ್ಯೆಯ ನಿವೃತ್ತಿಯೇ ಮೋಕ್ಷಸ್ವರೂಪವಾದರೆ ಅವಿದ್ಯೆಯಲ್ಲಿ (ಬ್ರಹ್ಮ)ಸುಖದ ಅಥವಾ (ವೈಷಯಿಕ)ದುಃಖನಿವೃತ್ತಿಯ ರೀತಾವ ರೂಪವೂ ಇಲ್ಲದ್ದರಿಂದ ಅದು ಹೇಗೆ ಪುರುಷಾರ್ಥವಾದೀತು? ಏಕೆಂದರೆ (ಬ್ರಹ್ಮ)ಸುಖಪ್ರಾಪ್ತಿ ಅಥವಾ (ವೈಷಯಿಕ)ದುಃಖನಿವೃತ್ತಿ– ಇವುಗಳಲ್ಲಿ

ಯಾವದಾದರೂ ಒಂದಾಗುವದೇ ಪುರುಷಾರ್ಥವು." ಎಂದರೆ ಅವಿದ್ಯಾ ನಿವೃತ್ತಿಯು ಸ್ವರೂಪದಲ್ಲಿ ದುಃಖನಿವೃತ್ತಿರೂಪತ್ವವಿಲ್ಲದಿದ್ದರೂ ಮೊದಲು ಹೇಳಿದ ರೂಪದಿಂದ ಅವಿದ್ಯೆಯು ಎಲ್ಲ ಅನರ್ಥಗಳಿಗೂ ಕಾರಣವಾದ್ದರಿಂದ ಅದರ ನಿವೃತ್ತಿಯಿಂದ ಎಲ್ಲ ದುಃಖಗಳ ನಿವೃತ್ತಿರೂಪವಾದ ಪ್ರಯೋಜಕತ್ವವಿರುವದು. ಆದ್ದರಿಂದ ಅದು ಪುರುಷಾರ್ಥವಾಗುವದು. ಅಥವಾ ಅವಿದ್ಯೆಯಿಂದ ಉಪಲಕ್ಷಿತವಾದಂಥ ನಿರತಿಶಯಾನಂದರೂಪವಾದ ಆತ್ಮಸ್ವರೂಪದ ಪ್ರಾಪ್ತಿಯೇ ಮೋಕ್ಷವೆಂದರೂ ಬಾಧಕವಿಲ್ಲ. ಆ ಬಗೆಯ ಸ್ವರೂಪವು ನಿತ್ಯಪ್ರಾಪ್ತವಾಗಿರುವದರಿಂದ ಆದಕ್ಕೆ ಜ್ಞಾನಸಾಧ್ಯತ್ವವು ಹೇಗೆ ಒಪ್ಪುವದೆಂದೂ ಹೇಳುವ ಹಾಗಿಲ್ಲ. ಪ್ರಾಪ್ತವಾಗಿರುವದರ ಪ್ರಾಪ್ತಿಗೂ ಪ್ರಯೋಜನವು ಕಂಡುಬಂದಿದೆ. ಹೇಗೆಂದರೆ ಒಬ್ಬನು ತನ್ನ ಕೊರಳಲ್ಲಿರುವ ಮಣಿಯನ್ನು ಮರೆತು ಮಣಿಯು ಸಿಕ್ಕಲಿಲ್ಲವೆಂಬ ಭ್ರಾಂತಿಯಿಂದ ದುಃಖವನ್ನು ಅನುಭವಿಸುತ್ತಾನೆ. ಆಗ ಮಣಿಯು ನಿನ್ನ ಕೊರಳಲ್ಲಿಯೇ ಇರುವದೆಂದು ಆಪ್ತರು ಹೇಳಿದರೆ ಅದರಿಂದುಂಟಾದ ಜ್ಞಾನದಿಂದ ಅಪ್ರಾಪ್ತತ್ವರೂಪವಾದ ಭ್ರಮವು ಹೋಗುವದರ ಮೂಲಕ ಪ್ರಾಪ್ತವಾಗಿರುವದರ ಪ್ರಾಪ್ತಿಯನ್ನೆ ಪ್ರಯೋಜನವೆಂದು ತಿಳಿಯುತ್ತಾನೆ. ಅದರಂತೆ ತಾನು ನಿತ್ಯನಿರತಿಶಯಾನಂದಸ್ವರೂಪಾತ್ಮನಾಗಿಯೇ ಇರುತ್ತಿರಲಾಗಿ ತನಗೆ ತದ್ವಿಷಯಕವಾದ ಅಜ್ಞಾನದಿಂದ ತಾನು ಅದನ್ನು ಪಡೆದವನಾಗಿಲ್ಲವೆಂದು ತಿಳಿದಿರುವಾಗ ಸ್ವಸ್ವರೂಪದ ಸಾಕ್ಷಾತ್ಕಾರವಾದರೆ ತದ್ವಿಷಯಕವಾದ ಅಜ್ಞಾನದ ನಿವೃತ್ತಿಯಾಗಿ ಸ್ವಸ್ವರೂಪದಿಂದ ಇರುವ ಲಕ್ಷಣವಾದ ಮೋಕ್ಷವು ಉಪಪನ್ನವಾಗುತ್ತದೆ. ಮೋಕ್ಷಕ್ಕೆ ಸಾಧನವಾದ ಈ ಬಗೆಯ ಜ್ಞಾನವು ಶ್ರವಣಾತ್ಮಕವಾದ ವೇದಾಂತವಿಚಾರದಿಂದ ಉಂಟಾಗುವದೆಂದು ಮೇಲೆ ಹೇಳಿದೆ.

ಆ ವಿಚಾರಕ್ಕೆ ಸಾಧನಚತುಷ್ಟಯಸಂಪತ್ತಿಯು ಸಾಧನವು. ಅದರಲ್ಲಿ ನಿತ್ಯಾನಿತ್ಯವಸ್ತುವಿವೇಕವೆಂಬುದೊಂದನೆಯದು. ಐಹಿಕಾಮುಷ್ಮಿಕ ಫಲಗಳಲ್ಲಿ ವೈರಾಗ್ಯವೆಂಬುದೆರಡನೆಯದು. ಶಮ, ದಮ, ಉಪರತಿ, ತಿತಿಕ್ಷಾ, ಶ್ರದ್ಧಾ, ಸಮಾಧಾನ-ಎಂಬ ಈ ಆರು ಮೂರನೆಯವು. ಇವುಗಳಲ್ಲಿ ಶಮವೆಂದರೆ ಅಂತರಿಂದ್ರಿಯನಿಗ್ರಹವು, ದಮವೆಂದರೆ ಬಹಿರಿಂ

ಪ್ರಿಯನಿಗ್ರಹವು; ಉಪರತಿಯೆಂದರೆ ಎಲ್ಲ ವಿಷಯಗಳಿಂದಲೂ ಹಿಮ್ಮೆಟ್ಟು ವದು; ತಿತಿಕ್ಷೆಯೆಂದರೆ ಎಲ್ಲ ದುಃಖಗಳನ್ನೂ ಸಹಿಸುವದು; ಶ್ರದ್ಧೆಯೆಂದರೆ ವೇದವ ಮತ್ತು ಆಚಾರ್ಯರ ವಾಕ್ಯಗಳಲ್ಲಿ ಭಕ್ತಿ; ಸಮಾಧಾನವೆಂದರೆ ಆತ್ಮವಸ್ತುವಿನಲ್ಲಿ ಚಿತ್ತೈಕಾಗ್ರ್ಯವಾಗುವದು- ಇವೆಲ್ಲ ಮೂರನೆಯವು. ಇನ್ನು ನನ್ನ ಸಂಸಾರದ ಬಂಧವು ಯಾವಾಗ ಹೋದೀತೆನ್ನುವ ಮುಮುಕ್ಷುತ್ವವು ನಾಲ್ಕನೆಯದು, ಯಾರಿಗೆ ಈ ನಾಲ್ಕು ಸಾಧನಸಂಪತ್ತುಂಟಾಗುವದೋ ಅವನೇ ಮೇಲೆ ಹೇಳಿದ ವಿಚಾರಕ್ಕೆ ಅಧಿಕಾರಿಯು.

ಆ ಸಾಧನಚತುಷ್ಟಯಪ್ರಾಪ್ತಿಯು ತಮ್ಮ ತಮ್ಮ ವರ್ಣಾಶ್ರಮಕ್ಕೆ ವಿಹಿತವಾದ ನಿತ್ಯನೈಮಿತ್ತಿಕಕರ್ಮಗಳನ್ನು ಮಾಡುವದರಿಂದಲೇ ಆಗುವದರಿಂದ ಎಲ್ಲರೂ ತಮ್ಮ ತಮ್ಮ ಅಧಿಕಾರಕ್ಕೆ ಅನುಗುಣವಾಗಿ ಶಾಸ್ತ್ರೋಕ್ತಧರ್ಮಗಳನ್ನು ಅನುಷ್ಠಾನಮಾಡುವದರಿಂದ ಕ್ರಮಕ್ರಮವಾಗಿ ನಿಃಶ್ರೇಯಸಪ್ರಾಪ್ತಿಯುಂಟಾಗುವದು.

---

## ವಿಶಿಷ್ಟಾದ್ವೈತಮತ.

[ ರಾವಬಹದ್ದೂರ ಪ್ರಾಕ್ತನವಿಮರ್ಶವಿಚಕ್ಷಣ ಶ್ರೀ ಆರ್. ನರಸಿಂಹಾಚಾರ್ಯ- ಇವರ ಲೇಖನ ]

ವಿಶಿಷ್ಟಾದ್ವೈತಮತದಲ್ಲಿ ಚಿತ್ತು, ಅಚಿತ್ತು, ಈಶ್ವರ-ಎಂದು ತತ್ತ್ವಗಳು ಮೂರು. ಚಿತ್ತು ಎಂದರೆ ಜೀವಾತ್ಮ. ಇದು ಜ್ಞಾನಕ್ಕೆ ಆಶ್ರಯವಾಗಿಯೂ ಅಣುವಾಗಿಯೂ ಇರುವುದು; ಸ್ವರೂಪದಲ್ಲಿಯೂ ಸ್ವಭಾವದಲ್ಲಿಯೂ ವಿಕಾರವನ್ನು ಹೊಂದುವುದಿಲ್ಲ; ಪರಂತು ಸ್ವಭಾವವಾದ ಜ್ಞಾನದಲ್ಲಿ ಮಾತ್ರ ಕರ್ಮನಿಮಿತ್ತಕವಾದ ಆ ಆ ಜನ್ಮಗಳಿಗೆ ಅನುಸಾರವಾಗಿ ಸಂಕೋಚವಿಕಾಸಗಳನ್ನು ಹೊಂದುವುದುಂಟು.

ಅಚಿತ್ತು ಎಂದರೆ ಮುಖ್ಯವಾಗಿ ಪ್ರಕೃತಿ. ಇದು ಜಡಪದಾರ್ಥವು; ಪ್ರತಿಕ್ಷಣದಲ್ಲಿಯೂ ಸ್ವರೂಪಸ್ವಭಾವಗಳಲ್ಲಿ ವಿಕಾರವನ್ನು ಹೊಂದುತ್ತಿರುವುದು.

ಈಶ್ವರ ಎಂದರೆ ಪರಮಾತ್ಮನು. ಇವನು ಜ್ಞಾನಕ್ಕೆ ಆಶ್ರಯನಾಗಿಯೂ ವಿಭುವಾಗಿಯೂ ಎಂದರೆ ಸರ್ವವ್ಯಾಪಿಯಾಗಿಯೂ ಇರುವನು; ಸ್ವರೂಪದಲ್ಲಿಯೂ ಸ್ವಭಾವದಲ್ಲಿಯೂ ಯಾವ ವಿಕಾರವೂ ಇಲ್ಲದೆ ಸರ್ವಕಾಲದಲ್ಲಿಯೂ ಏಕರೂಪನಾಗಿರುವನು. ಇವನಿಗೆ ಪರಬ್ರಹ್ಮ, ವಾಸುದೇವ, ನಾರಾಯಣ ಮೊದಲಾದ ಹೆಸರುಗಳೂ ಉಂಟು.

ಈತನು ಸಕಲಜಗತ್ಕಾರಣನು, ಸೃಷ್ಟಿಸ್ಥಿತಿಸಂಹಾರಕರ್ತನು, ಕಲ್ಯಾಣಗುಣಪರಿಪೂರ್ಣನು, ಹೇಯಗುಣರಹಿತನು, ಭಕ್ತಜನಸುಲಭನು, ಸರ್ವಾಂತರ್ಯಾಮಿ, ಸರ್ವಾಧಾರನು, ಸರ್ವನಿಯಾಮಕನು, ಮೋಕ್ಷಪ್ರದನು, ಅಪ್ರಾಕೃತದಿವ್ಯಮಂಗಳವಿಗ್ರಹಯುಕ್ತನು, ಲಕ್ಷ್ಮೀಪತಿ, ಅನಂತಗರುಡಾದಿಪರಿಜನಸೇವಿತನು, ಶಂಖಚಕ್ರಾದ್ಯಾಯುಧವಿಶಿಷ್ಟನು, ಸಮಾಭ್ಯಧಿಕರಹಿತನು. ಗಡಿಗೆಗೆ ಮಣ್ಣು ಹೇಗೋ ಹಾಗೆ ಪ್ರಪಂಚಕ್ಕೆ ಇವನು ಉಪಾದಾನಕಾರಣವು.

ವಿಶಿಷ್ಟಾದ್ವೈತವೆಂಬ ಪದವು ವಿಶಿಷ್ಟ, ಅದ್ವೈತ-ಎಂಬ ಎರಡು ಮಾತುಗಳಿಂದ ಕೂಡಿದೆ. ವಿಶಿಷ್ಟ ಎಂದರೆ ವಿಶೇಷಣಗಳೊಡನೆ ಕೂಡಿದುದು-ಎಂದರೆ ಚಿದಚಿತ್ತುಗಳೊಡನೆ ಅಥವಾ ಜೀವಪ್ರಕೃತಿಗಳೊಡನೆ ಕೂಡಿರುವ ಪರಬ್ರಹ್ಮವು; ಅದರ ಅದ್ವೈತ ಎಂದರೆ ಅಭೇದ ಅಥವಾ ಏಕತ್ವ: ಜೀವಪ್ರಕೃತಿಗಳೊಡನೆ ಯಾವಾಗಲೂ ಕೂಡಿಕೊಂಡಿರುವ ಅಥವಾ ಜೀವಪ್ರಕೃತಿಗಳನ್ನು ಶರೀರವಾಗಿ ಉಳ್ಳ ಸಮಾನಾಭ್ಯಧಿಕರಹಿತನಾದ ಶ್ರೀಮನ್ನಾರಾಯಣನೊಬ್ಬನೇ ತತ್ತ್ವವು ಎಂದು ಭಾವವು. ಹೀಗೆ ಜೀವಪ್ರಕೃತಿಗಳೊಡನೆ ಕೂಡಿದ್ದರೂ ಈಶ್ವರನಿಗೆ ಅವುಗಳ ವಿಕಾರಗಳು ಸಂಬಂಧಿಸುವುದಿಲ್ಲ.

ಜೀವರು ನಿತ್ಯ, ಮುಕ್ತ, ಬದ್ಧ,-ಎಂದು ಮೂರು ತೆರನಾಗಿರುವರು. ಅನಾದಿಯಾಗಿ ವೈಕುಂಠದಲ್ಲಿ ಅಥವಾ ಪರಮಪದದಲ್ಲಿ ಇದ್ದುಕೊಂಡು ಶ್ರೀಮನ್ನಾರಾಯಣನ ಪರಿಚರ್ಯೆಯನ್ನು ಮಾಡುವವರು ನಿತ್ಯರು; ಸಂಸಾರಬಂಧದಿಂದ ಬಿಡುಗಡೆಯನ್ನು ಹೊಂದಿದವರು ಮುಕ್ತರು; ಸಂಸಾರದಲ್ಲಿದ್ದುಕೊಂಡು ಜನ್ಮಮರಣಾದಿದುಃಖಗಳನ್ನು ಅನುಭವಿಸುವವರು ಬದ್ಧರು.

ಅಚಿತ್ತು ಮುಖ್ಯವಾಗಿ ಪ್ರಕೃತಿ ಎಂದು ಹಿಂದೆ ಹೇಳಿದೆ. ಸಾಧಾರಣವಾಗಿ ಇದು ಶುದ್ಧಸತ್ವ, ಮಿಶ್ರಸತ್ವ, ಸತ್ವಶೂನ್ಯ—ಎಂಬ ಮೂರು ವಿಭಾಗಗಳನ್ನು ಒಳಕೊಂಡಿದೆ. ಶುದ್ಧಸತ್ವವೆಂಬುದು ಪರಮಪದವು ಅಥವಾ ನಿತ್ಯವಿಭೂತಿ. ಮಿಶ್ರಸತ್ವವೆಂಬುದು ಪ್ರಕೃತಿ-ಎಂದರೆ ಈ ಪ್ರಪಂಚವು ಅಥವಾ ಲೀಲಾವಿಭೂತಿ; ಇದು-ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ—ಎಂಬ ಪಂಚಭೂತಗಳು; ಶಬ್ದ, ಸ್ಪರ್ಶ, ರೂಪ, ರಸ, ಗಂಧ-ಎಂಬ ಪಂಚತನ್ಮಾತ್ರೆಗಳು; ತ್ವಕ್ಕು, ಚಕ್ಷುಸ್ಸು, ಶ್ರೋತ್ರ, ಜಿಹ್ವೆ, ಘ್ರಾಣ—ಎಂಬ ಪಂಚಜ್ಞಾನೇಂದ್ರಿಯಗಳು; ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥ—ಎಂಬ ಪಂಚಕರ್ಮೇಂದ್ರಿಯಗಳು; ಮನಸ್ಸು, ಅಹಂಕಾರ, ಮಹತ್ತು, ಪ್ರಕೃತಿ-ಎಂಬ ೨೪ ಬಗೆಯಾದ ಪರಿಣಾಮಗಳನ್ನು ಹೊಂದುವುದು. ಇದಕ್ಕೆ ಅವ್ಯಕ್ತ, ಪ್ರಧಾನ, ಮೂಲಪ್ರಕೃತಿ, ಅಕ್ಷರ ಮುಂತಾದ ಹೆಸರುಗಳೂ ಉಂಟು. ಇದರಲ್ಲಿ ಸತ್ವ, ರಜಸ್ಸು, ತಮಸ್ಸು ಎಂಬ ಮೂರುಗುಣಗಳೂ ಉಂಟು. ಸತ್ವಶೂನ್ಯವೆಂಬುದು ಕಾಲವು; ಇದರಲ್ಲಿ ಆ ಗುಣತ್ರಯವಿಲ್ಲ.

ಈಶ್ವರನಿಗೆ ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚೆ ಎಂಬ ಐದುರೂಪಗಳುಂಟು. ಇವುಗಳಲ್ಲಿ ಪರ ಎಂದರೆ ಪರಮಪದದಲ್ಲಿ ಇರುವ ಸ್ವಾಮಿ; ವ್ಯೂಹ ಎಂದರೆ ಕ್ಷೀರಾಬ್ಧಿಯಲ್ಲಿ ಶೇಷಶಾಯಿಯಾಗಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ರೂಪಗಳಿಂದ ಇರುವುದು; ವಿಭವ ಎಂದರೆ ರಾಮಕೃಷ್ಣಾದ್ಯವತಾರಗಳು; ಅಂತರ್ಯಾಮಿ ಎಂದರೆ ಯೋಗಿಧ್ಯೇಯನಾಗಿ ಹೃದಯಕಮಲದಲ್ಲಿ ನೆಲಸಿರುವ ರೂಪವು; ಅರ್ಚೆ ಎಂದರೆ ಶಿಲಾಲೋಹಾದಿವಿಗ್ರಹಗಳಲ್ಲಿ ಇರುವ ರೂಪವು.

ಜೀವನಿಗೆ ಮೋಕ್ಷವುಂಟಾಗಬೇಕಾದರೆ ಮೊದಲು ಅರ್ಥಪಂಚಕ ಜ್ಞಾನವು ಹುಟ್ಟಬೇಕು. ಅರ್ಥಪಂಚಕವೆಂದರೆ ಸ್ವಸ್ವರೂಪ, ಪರಸ್ವರೂಪ, ಉಪಾಯಸ್ವರೂಪ, ಪುರುಷಾರ್ಥಸ್ವರೂಪ, ವಿರೋಧಿಸ್ವರೂಪ. ಇವುಗಳ ಜ್ಞಾನವೆಂದರೆ—ಜೀವಾತ್ಮನು ಇಂಥವನು, ಪರಮಾತ್ಮನು ಇಂಥವನು, ಪರಮಾತ್ಮನನ್ನು ಹೊಂದಲು ಸಾಧನವಿಂಥದು, ಪಡೆಯಬೇ

ಕಾದ ಫಲವಿಂಥದು, ಫಲಪ್ರಾಪ್ತಿಗೆ ಪ್ರತಿಬಂಧಕವಿಂಥದು-ಎಂದು ಚೆನ್ನಾಗಿ ತಿಳಿದುಕೊಳ್ಳುವುದು.

ಸ್ವರೂಪಜ್ಞಾನವಿಲ್ಲದೆ ಜೀವನು ಅನಾದಿಕಾಲದಿಂದಲೂ ಪ್ರಕೃತಿ ಸಂಬಂಧದಲ್ಲಿ ಸಿಲುಕಿ ನರಳುತ್ತಿರುವನು. ಈ ದುಃಖದಿಂದ ಬಿಡುಗಡೆಯನ್ನು ಹೊಂದಿ ಶಾಶ್ವತವಾದ ಮೋಕ್ಷಸುಖವನ್ನು ಪಡೆಯಬೇಕಾದರೆ ಜೀವನಿಗೆ ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿ ಎಂಬ ಮಾರ್ಗಗಳು ಶಾಸ್ತ್ರಗಳಲ್ಲಿ ಹೇಳಿವೆ. ಇವುಗಳೊಳಗೆ ಭಕ್ತಿಪ್ರಪತ್ತಿಗಳು ಮುಖ್ಯವಾದುವು. ತೈಲಧಾರೆಯಂತೆ ಅವಿಚ್ಛಿನ್ನವಾದ ಧ್ಯಾನವು ಭಕ್ತಿಯೆನಿಸುವುದು. ಇದು ಅತ್ಯಂತ ಪ್ರೀತಿರೂಪವಾಗಿ ಪರಿಣಮಿಸಿ ಪ್ರತ್ಯಕ್ಷಸಮಾನಾಕಾರವಾಗಿ ಸದ್ವಿದ್ಯೆ, ದಹರವಿದ್ಯೆ ಮೊದಲಾದ ೩೨ ವಿದ್ಯೆಗಳೆಂದು ವ್ಯವಹರಿಸಲ್ಪಟ್ಟು ೩೨ ವಿಧವಾಗಿರುವುದು. ಇದಕ್ಕೆ ವರ್ಣಾಶ್ರಮಧರ್ಮಗಳೂ ಅಷ್ಟಾಂಗಯೋಗವೂ ಸಹಕಾರಿಗಳಾಗಿ ಅವಶ್ಯಕವಾಗಿರುವುವು. ಈ ಭಕ್ತಿಯಲ್ಲಿ ತ್ರೈವರ್ಣಿಕರಿಗೆ ಮಾತ್ರ ಅಧಿಕಾರವುಂಟು. ಹೀಗೆ ಮರಣಪರ್ಯಂತವೂ ಪ್ರತಿನಿತ್ಯವೂ ಅವಶ್ಯವಾಗಿ ಅನುಷ್ಠಿಸಬೇಕಾದ ಭಕ್ತಿಮಾರ್ಗದ ಆಚರಣೆಯು ಸರ್ವರಿಗೂ ಸುಲಭಸಾಧ್ಯವಲ್ಲ. ಪ್ರಪತ್ತಿಯಾದರೋ ಸರ್ವರಿಗೂ ಸುಲಭವಾದುದು; ಇದರಲ್ಲಿ ಸರ್ವರಿಗೂ ಅಧಿಕಾರವುಂಟು. ಪ್ರಪತ್ತಿಯೆಂದರೆ—ತನಗೆ ಅಭಿಮತವಾದ ಫಲವು, ಅರ್ಥಾತ್ ಮೋಕ್ಷವು, ಬೇರೆ ಉಪಾಯಗಳಿಂದ ಸಾಧ್ಯವಲ್ಲವೆಂದು ತಿಳಿದು ಉಪಾಯಾಂತರಗಳನ್ನು ಬಿಟ್ಟು ಮಹಾವಿಶ್ವಾಸದಿಂದ ಶ್ರಿಯಃಪತಿಯಾದ ಈಶ್ವರನನ್ನೇ ಉಪಾಯವಾಗಿ ವರಿಸುವುದು. ಈ ಪ್ರಪತ್ತಿಯನ್ನು ಒಂದಾವೃತ್ತಿ ಅನುಷ್ಠಿಸಿದರೆ ಸಾಕು; ಶರೀರಾವಸಾನದಲ್ಲಿ ಫಲಪ್ರಾಪ್ತಿ ನಿಶ್ಚಿತವು.

ಆಚಾರ್ಯಾಭಿಮಾನ—ಎಂದರೆ ಗುರುವಿನಲ್ಲಿ ಪೂರ್ಣವಾದ ನಂಬಿಕೆ; ಇದೂ ಮೋಕ್ಷಪ್ರಾಪ್ತಿಗೆ ಒಂದು ಮಾರ್ಗವೆಂದು ಹೇಳುತ್ತಾರೆ.

---

# ವೀ ರ ಶೈ ವ ಮ ತ.

[ಬಾದಾಮಿಯ ಶಿವಯೋಗಮಂದಿರದ ಶ್ರೀಬಸವಲಿಂಗದೇಶಿಕರು
ಹಾನಗಲ್ಲ ಶ್ರೀ ಕುಮಾರಸ್ವಾಮಿಗಳು—ಇವರ ಲೇಖನ ]

ವೀರಶೈವಮತವು ಆರ್ಯಧರ್ಮಗಳಲ್ಲಿ ಒಂದಾಗಿರುವದು. ವೀರಶೈವ ಎಂಬ ಸಮಾಸಪದದಲ್ಲಿರುವ ಶೈವ ಎಂಬ ಪದಕ್ಕೆ ಶಿವಭಕ್ತಿಯುಳ್ಳವರೆಂದೂ ಆ ದೇವರ ಭಕ್ತಿಯನ್ನೇ ದೃಢವಾಗಿ ನಡೆಯಿಸುವರಾದ್ದರಿಂದ ವೀರರೆಂದೂ ಅರ್ಥವು. ಈ ಮತಕ್ಕೆ ಶಕ್ತಿವಿಶಿಷ್ಟಾದ್ವೈತವೆಂತಲೂ ಶಿವಾದ್ವೈತವೆಂತಲೂ ಬೇರೆ ಪರ್ಯಾಯನಾಮಗಳಿರುವವು. ಇದಕ್ಕೆ ವೇದಾಗಮಗಳೆರಡೂ ಪ್ರಮಾಣವಾಗಿರುವವು. ಅದರಲ್ಲಿ ವೇದಗಳಿಗಿಂತಲೂ ಆಗಮಗಳಲ್ಲಿ ಈ ಮತವಿಷಯವು ವಿಸ್ತಾರದಿಂದ ವಿವರಿಸಲ್ಪಟ್ಟಿರುವದರಿಂದ ಇದು ತಾಂತ್ರಿಕವೈದಿಕಮತವೆನಿಸುವದು. ಈ ಮತವು ಜೀವನಿಗೂ ಶಿವನಿಗೂ ಕೇವಲ ಭೇದವನ್ನಾಗಲಿ ಕೇವಲ ಅಭೇದವನ್ನಾಗಲಿ ಹೇಳದೆ ಸುವರ್ಣಾಲಂಕಾರಗಳಿಗೆ ಹೇಗೆ ಭೇದಾಭೇದಗಳೆರಡು ಉಂಟೋ ಹಾಗೆ ಭೇದಾಭೇದಗಳೆರಡನ್ನೂ ಪ್ರತಿಪಾದಿಸಿರುವದು. ಇದು ದ್ವೈತಾದ್ವೈತಶ್ರುತಿವಾಕ್ಯಗಳಿಗೆ ಸಮನ್ವಯವಾಗುವದರಿಂದ ಸರ್ವಶ್ರುತಿಸಮನ್ವಯವೆಂದು ಈ ಮತದ ಭಾಷ್ಯಕಾರರು ಹೇಳಿರುವರು. ಈ ಮತಸಿದ್ಧಾಂತದ ಸಾರಾಂಶವೇನಂದರೆ—

ನೆಸಹಿಲ್ಲದ ಘನವಸ್ತು ಒಂದೇ. ಅದು ತನ್ನ ನೆನಹುಮಾತ್ರದಿಂದ ಸಚ್ಚಿದಾನಂದನಿತ್ಯಪರಿಪೂರ್ಣನೆನಿಸಿ ಇವೇ ಪಂಚಲಕ್ಷಣಗಳಿಂದ ಲಕ್ಷಿತವಾದ ತನ್ನ ಚಿಚ್ಛಕ್ತಿಯೊಡನೆ ಜ್ಯೋತಿಪ್ರಕಾಶಗಳಂತೆ ಅವಿನಾಭಾವರೂಪದಿಂದೊಡಗೂಡಿದ್ದು ಈ ಚೇತನಾಚೇತನಾತ್ಮಕವಾದ ಜಗತ್ಸೃಷ್ಟಿಗೆ ಕಾರಣವಾಗಿರುವದು. ಈ ಶಕ್ತಿವಿಶಿಷ್ಟಾದ್ವಯವಸ್ತುವೇ ಬ್ರಹ್ಮ, ಶಿವ, ಲಿಂಗಗಳೆಂಬ ಪರ್ಯಾಯನಾಮಗಳುಳ್ಳದ್ದಾಗಿರುವದು. ಇನ್ನು ಈ ಪರಶಿವನಲ್ಲಿ ಜಗತ್ ಸೃಷ್ಟಿಯ ಇಚ್ಛೆಯುಂಟಾಗಲು ಅವನ ಶಕ್ತಿಯಲ್ಲಿದ್ದ ಸತ್ವರಜಸ್ತಮೋಗುಣಗಳು ವ್ಯಕ್ತಸ್ಥಿತಿಯನ್ನು ಹೊಂದಿದವು. ಬಳಿಕಾ ಶಕ್ತಿಯ ಗುಣಗಳಲ್ಲಿ ಸತ್ವಗುಣದಿಂ ವೈರಾಗ್ಯಮಯವಾದ ಶಾಂತವೃತ್ತಿ, ರಜೋಗುಣದಿಂ ರಾಗಮಯವಾದ ಘೋರವೃತ್ತಿ, ತಮೋಗುಣದಿಂ

ಅಜ್ಞಾನಮಯವಾದ ಮೂಢವೃತ್ತಿಗಳೆಂಬ ಶಕ್ತಿಯ ವೃತ್ತಿತ್ರಯಗಳುಂಟಾದವು. ಈ ವೃತ್ತಿತ್ರಯಗಳಿಂ ಆ ಶಕ್ತಿಯೇ ಕ್ರಮದಿಂ ಮಾಯೆ, ಅವಿದ್ಯೆ, ಪ್ರಕೃತಿಗಳೆನಿಸಿತು. ಬಳಿಕಾ ಮಾಯಾವೃತ್ತಿಯಲ್ಲಿ ಪ್ರತಿಫಲಿಸಿದ ಬ್ರಹ್ಮಚೈತನ್ಯವೇ ಈಶ ಅಂದರೆ ಪತಿಪದಾರ್ಥವೆಂದೂ ಅವಿದ್ಯಾವೃತ್ತಿಯಲ್ಲಿ ಪ್ರತಿಫಲಿಸಿದ ಅದೇ ಬ್ರಹ್ಮಚೈತನ್ಯವೇ ಜೀವ ಅಂದರೆ ಪಶುಪದಾರ್ಥವೆಂದೂ ಪ್ರಕೃತಿವೃತ್ತಿಯಲ್ಲಿ ಪ್ರತಿಫಲಿಸಿದಾ ಚೈತನ್ಯವೇ ಜಗತ್ತು ಅಂದರೆ ಪಾಶಪದಾರ್ಥವೆಂದೂ ಎನಿಸಿತು. ಇವುಗಳಲ್ಲಿ ಸಾತ್ವಿಕೋಪಾಧಿಯುಳ್ಳ ಈಶನು ಪ್ರೇರಕನಾದನು; ರಾಜಸೋಪಾಧಿಯುಳ್ಳ ಜೀವರು ಪ್ರೇರ್ಯರಾದರು; ಈ ಜೀವರಿಗೆ ತಾಮಸೋಪಾಧಿಯುಳ್ಳ ಜಗತ್ತು ಭೋಗ್ಯವಾಯಿತು. ಆ ಭೋಗ್ಯವಸ್ತುವಿನ ಭೋಗಾಸಕ್ತಿಯುಳ್ಳ ಜೀವನು ಬದ್ಧರಾದರು.

ಆ ಬದ್ಧಜೀವಿಗಳ ಭವನಿವೃತ್ತಿಗಾಗಿ ಆ ಪರಶಿವನಲ್ಲಿ ಮನಃಸೃಷ್ಟಿಯ ಇಚ್ಛೆಯುಂಟಾಗಲು ಆ ಪರಶಿವನಲ್ಲಿದ್ದ ಚಿಚ್ಛಕ್ತಿಯ ಯೋಗದಿಂದ ಒಂದು ಶಕ್ತಿಯೂ ಒಂದು ಭಕ್ತಿಯೂ ಉದಿಸಿದವು. ಈ ಶಕ್ತಿಯು ಲಿಂಗಕ್ಕೆ ಭಕ್ತಿಯು ಅಂಗಕ್ಕೆ ಕಾರಣವೆನಿಸಿರುವವು. ಅದು ಹೇಗಂದರೆ ಶಿವಧರ್ಮಾಚರಣೆಯಿಂದ ಪಾಪಕ್ಷಯವಾಗಲಾಗಿ ನಿರ್ಮಲಾಂತಃಕರಣನಾದ ಜೀವನು ಭಕ್ತಿಯನ್ನಾಶ್ರಯಿಸಿ ಅಂಗನೆನಿಸುವನು. ಶಿವಸ್ವರೂಪಿಯಾದ ಗುರುವು ಈ ಅಂಗನಾದ ಮುಮುಕ್ಷುವಿನ ದೃಷ್ಟಿಯಲ್ಲಿ ದೃಷ್ಟಿಯನ್ನೂ ಮನದಲ್ಲಿ ಮನವನ್ನೂ ಭಾವದಲ್ಲಿ ಭಾವವನ್ನೂ ಇರಿಸಿ ಆತನ ಶಿಖಾಚಕ್ರದಲ್ಲಿದ್ದ ಶಿವಕಲೆಯನ್ನೇ ತನ್ನ ಶಕ್ತಿಪ್ರಭಾವದಿಂದ ಬಹಿಷ್ಕರಿಸಿ ಶಿಷ್ಯನ ಉದ್ಧಾರಾರ್ಥವಾಗಿ ಆತನ ಕರಕಮಲದಲ್ಲಿ ಕೊಡಲು ಆ ಅಂಗನು (ಶುದ್ಧಜೀವಿಯಾದ ಭಕ್ತನು) ಗುರುವಿನ ಶಕ್ತಿಪ್ರಭಾವದಿಂದುಂಟಾದ ಆ ಲಿಂಗವನ್ನು ಪಡೆದು ಭಸ್ಮ, ರುದ್ರಾಕ್ಷ, ಮಂತ್ರ, ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದಗಳೆಂಬ ಅಷ್ಟಾವರಣಗಳೇ ಶರೀರವಾಗಿ ಲಿಂಗಾಚಾರ, ಸದಾಚಾರ, ಭೃತ್ಯಾಚಾರ, ಶಿವಾಚಾರ, ಗಣಾಚಾರಗಳೆಂಬ ಪಂಚಾಚಾರಗಳೇ ಪ್ರಾಣವಾಗಿ ಮುಕ್ತಿಸೋಪಾನಗಳೆನಿಸುವ ಷಟ್ಸ್ಥಲಮಾರ್ಗಗಳಿಂದ ಆಚರಿಸಿ ತನ್ನಿಷ್ಟಲಿಂಗದಲ್ಲಿ ಅವ್ಯಕ್ತವಾಗಿದ್ದ ಮಹಾಲಿಂಗವನ್ನು ವ್ಯಕ್ತಮಾಡಿಕೊಳ್ಳುವನು. ಆ ಕ್ರಮವೆಂತೆಂದರೆ-

ಭಕ್ತಸ್ಥಲದಲ್ಲಿ ಶ್ರದ್ಧಾಭಕ್ತಿಯಿಂದ ಕ್ರಿಯಾಶಕ್ತಿಸಮೇತವಾದ ಆಚಾರಲಿಂಗವನ್ನು ಅರ್ಚಿಸಿ ಸದ್ಭಕ್ತಿಫಲವನ್ನೂ ಮಾಹೇಶ್ವರಸ್ಥಲದಲ್ಲಿ ನಿಷ್ಠಾಭಕ್ತಿಯಿಂದ ಜ್ಞಾನಶಕ್ತಿಸಮವೇತವಾದ ಗುರುಲಿಂಗವನ್ನು ಪೂಜಿಸಿ ಕರ್ಮಕ್ಷಯವನ್ನೂ ಪ್ರಸಾದಿಸ್ಥಲದಲ್ಲಿ ಅವಧಾನಭಕ್ತಿಯಿಂದ ಇಚ್ಛಾಶಕ್ತಿಸಮವೇತಶಿವಲಿಂಗವನ್ನು ಯಜಿಸಿ ನಿರ್ಮಲಮತಿಯನ್ನೂ ಪ್ರಾಣಲಿಂಗಿಸ್ಥಲದಲ್ಲಿ ಅನುಭವಭಕ್ತಿಯಿಂದ ಆದಿಶಕ್ತಿಸಮವೇತಜಂಗಮಲಿಂಗವನ್ನಾರಾಧಿಸಿ ಸುವಿಚಾರವನ್ನೂ ಶರಣಸ್ಥಲದಲ್ಲಿ ಆನಂದಭಕ್ತಿಯಿಂದ ಪರಾಶಕ್ತಿಸಮವೇತಪ್ರಸಾದಲಿಂಗವನ್ನು ಸೇವಿಸಿ ದರ್ಪಸಂಕ್ಷಯವನ್ನೂ (ಅಹಂಕಾರನಿರಸನವನ್ನೂ) ಐಕ್ಯಸ್ಥಲದಲ್ಲಿ ಸಮರಸಭಕ್ತಿಯಿಂದ ಚಿತ್ಶಕ್ತಿಸಮವೇತಮಹಾಲಿಂಗವನ್ನು ಭಜಿಸಿ ಸಮ್ಯಗ್ಜ್ಞಾನವನ್ನೂ ಪಡೆದು ಅವಿರಳಶಿವೈಕ್ಯನಾಗುವನು. ಇದೇ ಲಿಂಗಾಂಗಸಾಮರಸ್ಯವು; ಇದೇ ತತ್ತ್ವಮಸಿಮಹಾವಾಕ್ಯದರ್ಥವು; ಇದಕ್ಕೇ ಷಟ್ಸ್ಥಲಸಿದ್ಧಾಂತವೆನ್ನುವರು.

ಈ ಷಟ್‌ಸ್ಥಲಾಚರಣೆಯನ್ನು ಯೋಗದ ಯಮಾದಿ ಅಷ್ಟಾಂಗಗಳಲ್ಲಿ ಉತ್ತರಭಾಗವೆನಿಸಿದ ಧಾರಣ, ಧ್ಯಾನ, ಸಮಾಧಿಗಳೆಂಬ ಮೂರು ಅಂಗಗಳಲ್ಲಿಯೇ ಮುಖ್ಯವಾಗಿ ಸಂಬಂಧಿಸಿ ಶಿವಭಕ್ತಿಪೂರ್ವಕವಾಗಿ ಆಚರಿಸುವದರಿಂದ ಇದು ಶಾಂಭವಯೋಗವೆನಿಸುವದು.

ವೀರಶೈವನು ಜ್ಞಾನ, ಜ್ಞೇಯ, ಅನುಷ್ಠೇಯ, ಅಧಿಕಾರ, ಸಾಧನ, ಸಾಧ್ಯಗಳೆಂಬ ಷಡರ್ಥಗಳನ್ನು ಸಂಗ್ರಹಿಸತಕ್ಕದ್ದು. ಗುರುವಿನಿಂದ ಪ್ರಾಪ್ತವಾದ ಲಿಂಗಾಂಗಸಾಮರಸ್ಯದ ಅರಿವೇ ಜ್ಞಾನ; ಪತಿ, ಪಶು, ಪಾಶಗಳೆಂಬ ತ್ರಿಪದಾರ್ಥಗಳೇ ಜ್ಞೇಯ; ಈ ಮತಕ್ಕೆ ಅಧಿದೈವತಗಳಾದ ಗುರು, ಲಿಂಗ, ಜಂಗಮರನ್ನು ಅನನ್ಯಭಾವದಿಂದ ಅರ್ಚಿಸುವದೇ ಅನುಷ್ಠೇಯ; ಭಸ್ಮ ರುದ್ರಾಕ್ಷಾದಿಗಳಿಂದ ಅಧಿಕೃತನಾಗಿರುವದೇ ಅಧಿಕಾರ; ಶಿವಮಂತ್ರವೇ ಸಾಧನ; ಶಿವಸ್ವರೂಪವೇ ಸಾಧ್ಯ; ಷಟ್‌ಸ್ಥಲಾಚರಣೆಗೆ ಈ ಆರು ಅರ್ಥಗಳ ಸಂಗ್ರಹವಾದರೂ ಅತ್ಯವಶ್ಯವಾಗಿರುವದು.

ಪೃಥ್ವಿ, ಅಪ್, ತೇಜ, ವಾಯು, ಆಕಾಶ, ಆತ್ಮಾ, ಈ ಆರು ತತ್ತ್ವಗಳನ್ನುದ್ದೇಶಿಸಿ ಆರು ಸ್ಥಲಗಳೂ ಈ ಆರು ತತ್ತ್ವಗಳ ವಿಭಜನೆಯಿಂದ

ಪೃಥಿವ್ಯಾದಿಶಿವಾಂತವಾದ ಮೂವತ್ತಾರು ತತ್ವಗಳೂ ಈ ಮತದಲ್ಲಿ ಹೇಳಲ್ಪಟ್ಟಿವೆ. ವೇದಗಳಲ್ಲಿ ಕರ್ಮ, ಜ್ಞಾನ, ಭಕ್ತಿಗಳೆಂಬ ಮೂರು ಕಾಂಡಗಳಿರುವವು. ಅವುಗಳಲ್ಲಿ ಶ್ರೇಷ್ಠವೆನಿಸಿರುವ ಕ್ರಿಯಾಜ್ಞಾನಸಮುಚ್ಚಯವಾದ ಭಕ್ತಿಕಾಂಡವನ್ನೇ ಮುಖ್ಯವಾಗಿ ವೀರಶೈವರು ಆಚರಿಸುವರು. ಆಕಸ್ಮಾತ್ತಾಗಿ ಆವರಿಸಿದ ಬೆಂಕಿಯಿಂದ ಪಾರಾಗಬೇಕಾದ ಪುರುಷನಿಗೆ ಕಣ್ಣು ಕಾಲುಗಳೆಡರ ಅವಶ್ಯವಿದ್ದಂತೆ ಮೋಕ್ಷಪ್ರಾಪ್ತಿಗೆ ಕರ್ಮಜ್ಞಾನಗಳೆರಡರಸಮು ಸಮುಚ್ಚಯವು ಅವಶ್ಯವಿರುತ್ತದೆ. ವೀರಶೈವನು ಜನ್ಮಾರಭ್ಯ ಐಕ್ಯದ ವರೆಗೂ ಪ್ರಾಣಸದೃಶವಾಗಿ ಸ್ವಸ್ವರೂಪವಾದಿಷ್ಟಲಿಂಗವನ್ನು ಎಡೆಬಿಡದೆ ಧರಿಸಿರುವನು. ಈ ಶರಣನು ತನ್ನ ಸತ್ಕಾರ್ಯದಿಂದ ಬಂದ ಅರ್ಪಣಯೋಗ್ಯಪದಾರ್ಥಗಳನ್ನು ಅಂಗಕ್ಕೆ ಅರ್ಪಿಸಿ ಆ ಪದಾರ್ಥವನ್ನು ತಾನು ಭುಂಜಿಸುವದೇ ಲಿಂಗಭೋಗೋಪಭೋಗವೆನಿಸುವದು. ಮಂತ್ರ, ಹಠ, ಲಯ, ರಾಜಗಳೆಂಬ ನಾಲ್ಕು ಯೋಗಗಳನೊಳಕೊಂಡ ಮತ್ತು ಅರಿವು, ಅನುಸಂಧಾನ, ಅರ್ಚನೆ, ಭಕ್ತಿ, ವ್ರತಗಳೆನಿಸ ಐದು ಅಂಗಗಳಿಂದ ಕೂಡಿದ ಶಿವಯೋಗದಲ್ಲಿ ನಿರತನಾದ ವೀರಶೈವನು ಚತುರ್ವಿಧಮುಕ್ತಿಯನ್ನು ಮೀರಿ ಸ್ವಸ್ವರೂಪಾವಿರ್ಭಾವಶಿವಾನಂದಸಮರಸವೆಂಬ ಪಂಚಮಪದವೆನಿಸಿದ ಕೈವಲ್ಯಮುಕ್ತಿಯನ್ನು ಒಂದೇ ಜನ್ಮದಲ್ಲಿ ಹೊಂದುವನು.

---

## ದ್ವೈತಮತ.

[ರಾಜಸಭಾಭೂಷಣ ಶ್ರೀ॥ ಕರ್ಪೂರ ಶ್ರೀನಿವಾಸರಾವ್, ವಿದ್ಯಾಭೂಷಣ ಇವರ ಲೇಖನ.]

ದ್ವೈತಮತದ ಮುಖ್ಯ ತತ್ವಗಳನ್ನು ಸ್ವಲ್ಪ ಅವಕಾಶದಲ್ಲಿಯೇ ವರ್ಣಿಸಬೇಕಾದರೆ ಇಲ್ಲಿ ಒಂದು ಪ್ರಸಿದ್ಧವಾದ ಶ್ಲೋಕವನ್ನು ವರ್ಣಿಸಿದರೆ ಸಾಕಾಗಿರುತ್ತದೆ:—

"ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ತ್ವತೋ ।
ಭೇದೋ ಜೀವಗಣಾ ಹರೇರನುಚರಾ ನೀಚೋಚ್ಚಭಾವಂ ಗತಾಃ ॥

ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ ।
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥ ”

ಈ ಶ್ಲೋಕದಲ್ಲಿ (೧) ಹರಿ: ಪರತರ: (೨) ಸತ್ಯಂ ಜಗತ್ (೩) ತತ್ವತೋ ಭೇದ: (೪) ಜೀವಗಣಾ: ಹರೇ: ಅನುಚರಾಃ (೫) ನೀಚೋಚ್ಚಭಾವಂ ಗತಾ: (೬) ಮುಕ್ತಿ: ನೈಜಸುಖಾನುಭೂತಿಃ (೭) ಅಮಲಾ ಭಕ್ತಿಶ್ಚ ತತ್ಸಾಧನಂ (೮) ಅಕ್ಷಾದಿತ್ರಿತಯಂ ಪ್ರಮಾಣಂ (೯) ಆಮ್ನಾಯೈಕವೇದ್ಯೋಹರಿ:, ಎಂಬ ಒಂಬತ್ತು ತತ್ವಗಳು ನಿರ್ದಿಷ್ಟವಾಗಿರುತ್ತವೆ.

ಇವುಗಳಲ್ಲಿ (೧) ಮತ್ತು (೯)ನೇ ತತ್ವಗಳು ಪರಮಾತ್ಮನನ್ನು ನಿರೂಪಿಸುವವು; (೨), (೩), ಮತ್ತು (೪)ನೇ ತತ್ವಗಳು ಜೀವಜಗತ್ತುಗಳಿಗೂ ಪರಮಾತ್ಮನಿಗೂ ಇರುವ ಸಂಬಂಧವನ್ನೂ ಭೇದವನ್ನೂ ನಿರೂಪಿಸುವವು. (೪), (೫), (೬), (೭)ನೇ ತತ್ವಗಳು ಪ್ರಪಂಚಾವಸ್ಥೆಯಲ್ಲಿಯೂ ಮುಕ್ತಾವಸ್ಥೆಯಲ್ಲಿಯೂ, ಜೀವನ ಸ್ವರೂಪಸ್ಥಿತಿಯನ್ನು ವರ್ಣಿಸುವದು. ಮತ್ತು (೮) ನೇಯ ತತ್ವವು ಇತರತತ್ವಗಳನ್ನು ಸ್ಥಾಪಿಸುವದಕ್ಕೆ ಬೇಕಾದ ನಿರ್ದುಷ್ಟವಾದ ಸಾಧನೆ ಅಥವಾ ಪ್ರಮಾಣಗಳನ್ನು ನಿರೂಪಿಸುವದು. ಇಲ್ಲಿ ಮೊದಲು (೮)ನೆಯ ತತ್ವವಾದ ಪ್ರಮಾಣಗಳ ವಿಷಯವಾಗಿಯೂ ನಂತರ ಜೀವನ ಸ್ವರೂಪಾದಿಗಳ ವಿಷಯವಾಗಿಯೂ ಕಡೆಗೆ ಪರಮಾತ್ಮನ ವಿಷಯವಾಗಿಯೂ ನಿರೂಪಿಸುವದು ಸುಕರವಾಗುವದು.

‘ಸ್ವತಂತ್ರಮಸ್ವತಂತ್ರಂ ಚ ದ್ವಿವಿಧಂ ತತ್ವಮಿಷ್ಯತೆ’ ಎಂಬುವ ಶ್ರೀಮಧ್ವಾಚಾರ್ಯರ ವಚನಕ್ಕನುಗುಣವಾಗಿ ಈ ಅನಂತಕೋಟಿಬ್ರಹ್ಮಾಂಡದಲ್ಲಿ ಪರಮಾತ್ಮನು ಒಬ್ಬನೇ ಸ್ವತಂತ್ರವಾದ ವಸ್ತುವು. ಇಂತಹ ಪರಮಾತ್ಮನು ವೇದಗಳಿಂದ ಮತ್ತು ತದನುಗುಣವಾದ ಪುರಾಣದರ್ಶನಶಾಸ್ತ್ರಗಳಿಂದ ಮಾತ್ರವೇ ಗೋಚರನಾಗುವನು. “ಸರ್ವೇ ವೇದಾ ಯತ್ಪದಮಾಮನಸ್ತಿ” ಎಂಬ ವಾಕ್ಯಕ್ಕನುಗುಣವಾಗಿ ಸಮನ್ವಯಾಧಿಕರಣದಲ್ಲಿ ಸೂಚಿಸಿರುವಂತೆ, ವೇದದಲ್ಲಿ ಪ್ರತಿಅಕ್ಷರವೂ, ಪ್ರತಿಶಬ್ದವೂ, ಪ್ರತಿವಾಕ್ಯವೂ, ಪ್ರತಿಪ್ರಕರಣವೂ, ಪ್ರತಿಭಾಗವೂ ಆ ಪರಮಾತ್ಮನಲ್ಲಿಯೇ ಸಮನ್ವಿತವಾಗಿ ಒಂದೊಂದು ಅಕ್ಷರವೂ, ಒಂದೊಂದು ಶಬ್ದವೂ, ಒಂದೊಂದು ಪರಮಾತ್ಮನ ಗುಣವನ್ನು ಅಥವಾ ಧರ್ಮವನ್ನು ವರ್ಣಿಸುತ್ತ ಅನಂ

ತಶಬ್ದಗಳಿಂದ ಯುಕ್ತವಾದ ಅನಂತವೇದಗಳು ಆ ಪರಮಾತ್ಮನ ಅನಂತ ಶಕ್ತಿಯನ್ನೂ, ಅನಂತಗುಣಗಳನ್ನೂ ಉದ್ಘೋಷಿಸುತ್ತವೆ. ಇದರಿಂದ ಕೇವಲ ನಿಯಮಿತಶಬ್ದಗಳಿಂದ ವರ್ಣಿಸಲ್ಪಡುವ ಜೀವನು ಮತ್ತು ಜಗತ್ತು ಸಹ ಪರಮಾತ್ಮನಿಂದ ಅತ್ಯಂತಭಿನ್ನವಾಗಿರಬೇಕೆಂದು ವ್ಯಕ್ತವಾಗುತ್ತದೆ. ಯದ್ಯಪಿ ಪ್ರತ್ಯಕ್ಷದಿಂದಲೇ ಅದ್ಭುತವಾದ ಪ್ರಪಂಚದ ಸೃಷ್ಟಿಯ ಮೂಲಕ ಆ ಪರಮಾತ್ಮನ ಮಹಿಮೆಯು ಕಂಡುಬಂದಾಗ್ಯೂ, ಅನುಮಾನದಿಂದ ಇಂತಹ ಪರಮಾತ್ಮನ ಶಕ್ತಿಯನ್ನು ಊಹಿಸುವದಕ್ಕೆ ಸಾಧ್ಯವಾದಾಗ್ಯೂ, ಇಂತಹ ಪ್ರಮಾಣಗಳಿಗೆ ಪ್ರತಿಪ್ರಮಾಣಗಳನ್ನೂ ಉದಹರಿಸಿ ಆಪಾತತಃ ಪರಮಾತ್ಮನಲ್ಲಿ ದೋಷವನ್ನು ತೋರಿಸುವದಕ್ಕೆ ಸಾಧ್ಯವಾಗಬಹುದು. ಆದುದರಿಂದ ನಿಸ್ಸಂದೇಹವಾಗಿ ಆ ಪರಮಾತ್ಮನ ಸ್ವರೂಪವನ್ನು ಆಮ್ನಾಯ ಅಥವಾ ನಿಗಮಾಗಮರೂಪವಾದ ವೇದಾಂತ ಶಾಸ್ತ್ರದಿಂದಲೇ ತಿಳಿಸುವದಕ್ಕೆ ಸಾಧ್ಯವೆಂದು ಅನೇಕನಿದರ್ಶನಗಳಿಂದ ಗೊತ್ತುಮಾಡಲ್ಪಟ್ಟಿದೆ.

ಸಾಮಾನ್ಯದೃಷ್ಟಿಯಿಂದ ಜಗತ್ತನ್ನು ನೋಡಿದಲ್ಲಿ ಕ್ಷಣಿಕವಾಗಿಯೂ ನಶ್ವರವಾಗಿಯೂ ಕಂಡುಬಂದಾಗ್ಯೂ ಅದು ಸತ್ಯವೇ ಎಂದು ಹೇಳಬಹುದು. ಮೂಲಪ್ರಕೃತಿಯಾದ ಜಡಪದಾರ್ಥವೇ ಪ್ರತಿಕ್ಷಣವೂ ಬೇರೆ ಬೇರೆವಿಧವಾಗಿ ಪರಿಣಾಮವನ್ನು ಹೊಂದಿ ಪ್ರತಿಕ್ಷಣದಲ್ಲಿಯೂ ಬೇರೆ ಬೇರೆ ವಿಕಾರವುಳ್ಳದ್ದೆಂದು ತಿಳಿಯಬಹುದು. ಹೀಗೆ ನಾಶರಹಿತವಾದ ಮೂಲಪ್ರಕೃತಿಯನ್ನೇ ಅವಲಂಬಿಸಿ ಅದರಿಂದಲೇ ಉದ್ಭವಿಸಿರುವ ಈ ಜಗತ್ತು ಎಂದಿಗೂ ನಾಶಹೊಂದಲಾರದು. ಹೀಗೆಯೇ ಜಗದಂತರ್ಭೂತನಾದ ಜೀವನು ಬೇರೆಬೇರೆ ದೇಹಸಂಬಂಧಗಳುಳ್ಳವನಾದಾಗ್ಯೂ ಪ್ರಕೃತಿಸಂಬಂಧವಿಲ್ಲದ ಮುಕ್ತಾವಸ್ಥೆಯಲ್ಲಿ ಸ್ಥಿರವಾಗಿರುತ್ತಾನೆ. ಮತ್ತು ಪರಮಾತ್ಮನ ಸೃಷ್ಟಿಶಕ್ತಿಯಿಂದಲೇ ಜೀವನು ಅನಾದಿಪ್ರಕೃತಿವಿಕಾರಗಳಿಂದ ಬದ್ಧನಾಗುತ್ತಾನೆ. ಆತನ ಅನುಗ್ರಹದಿಂದಲೇ ಇಂತಹ ಪ್ರಕೃತಿಸಂಬಂಧದಿಂದ ಮುಕ್ತನಾಗಿ ನಿಜಸ್ವರೂಪವನ್ನು ಹೊಂದುತ್ತಾನೆ.

ಪ್ರತಿಯೊಂದು ಜಡಪದಾರ್ಥವೂ ಇತರ ಜಡಪದಾರ್ಥಗಳ ಸಾದೃಶ್ಯವುಳ್ಳದ್ದಾದಾಗ್ಯೂ ಪ್ರತಿಯೊಂದು ಪದಾರ್ಥದಲ್ಲಿಯೂ ಒಂದೊಂದು ವೈಲಕ್ಷ

ಣ್ಯವು ಇದ್ದೇಇರುತ್ತದೆ. ಹೀಗೆಯೇ ಸ್ವರೂಪತಃ ಪ್ರತಿಯೊಬ್ಬ ಜೀವನೂ ಇತರ ಜೀವರಿಂದ ಭಿನ್ನನಾಗಿರುವನು. ಆದುದರಿಂದಲೇ (೧) ಜಡಜಡಕ್ಕೆ ಭೇದ, (೨) ಜೀವಜೀವಕ್ಕೆ ಭೇದ, (೩) ಜೀವಜಡಕ್ಕೆ ಭೇದ, (೪) ಜಡ ಪರಮಾತ್ಮರಿಗೆ ಭೇದ, (೫) ಜೀವಪರಮಾತ್ಮರಿಗೆ ಭೇದ ಎಂಬುವ ಪಂಚ ಭೇದಗಳು ದ್ವೈತಸಿದ್ಧಾಂತದಲ್ಲಿ ನಿರೂಪಿಸಲ್ಪಟ್ಟಿವೆ. ಈ ರೀತಿಯಾಗಿ ಜೀವಜೀವರಿಗೆ ಭೇದವೇರ್ಪಟ್ಟ ಮೇಲೆ ಅವುಗಳ ನೀಚೋಚ್ಚಭಾವಗಳು, ಅಥವಾ ಸ್ವರೂಪತಃ ತರತಮಭಾವಗಳು ಸಿದ್ಧವಾಗುತ್ತವೆ. ಆದುದರಿಂದ ಪಂಚಭೇದತಾರತಮ್ಯಗಳು ದ್ವೈತಸಿದ್ಧಾಂತಕ್ಕೆ ಮೂಲತತ್ವಗಳಾಗಿವೆ. ಪರಮಾತ್ಮನು ಮಾತ್ರವೇ ಯಾವ ವಿಧವಾದ ಸ್ವಗತಭೇದಗಳೂ ಇಲ್ಲದೆ ಯಾವಪ್ರಪಂಚದ ಬಾಧಕ್ಕೂ ಒಳಪಡದೆ ನಿರ್ಲಿಪ್ತನಾಗಿ ಸಕಲಚರಾಚರ ಪ್ರಪಂಚದಲ್ಲಿ ವ್ಯಾಪಕನಾಗಿ "ಜನ್ಮಾದ್ಯಸ್ಯ ಯತಃ" ಎಂಬುವ ಸೂತ್ರಕ್ಕ ನುಗುಣವಾಗಿ ಜೀವಜಡಾತ್ಮಕವಾದ ಜಗತ್ತಿಗೆ ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನಾಜ್ಞಾನ, ಬಂಧ, ಮೋಕ್ಷಗಳಿಗೆ ನಿಯಾಮಕನಾಗಿರುವನು. ಇವೇ ಮುಂತಾದ ವಿಷಯಗಳನ್ನೆಲ್ಲಾ ವೇದಾಂತ ಶಾಸ್ತ್ರಗಳಿಂದಲೇ ತಿಳಿಯಬಹುದೆಂದು ದ್ವೈತಸಿದ್ಧಾಂತವು ಸ್ಥಾಪಿಸುತ್ತದೆ.

ಜೀವನು ಈ ಪ್ರಸ್ತುತದ ಸಂಸಾರಾವಸ್ಥೆಯಿಂದ ಮುಕ್ತನಾಗಿ ತನ್ನ ನೈಜವಾದ ಆನಂದಸ್ವರೂಪವನ್ನು ಪಡೆಯಬೇಕಾದರೆ ಶಾಸ್ತ್ರೋದ್ದಿಷ್ಟವಾದ ಪರಮಭಕ್ತಿಯನ್ನು ಪರಮಾತ್ಮನಲ್ಲಿ ಮಾಡಬೇಕು. ಹೀಗೆ ಭಕ್ತಿ ಮಾರ್ಗವನ್ನವಲಂಬಿಸದೆ ಪರಮಾತ್ಮನಲ್ಲಿ ದ್ವೇಷಮಾಡಿದ್ದೇ ಆದರೆ ಅಂತಹ ದುಷ್ಟಜೀವನಿಗೆ ಅಂಧಂತಮಸ್ಸು ಪ್ರಾಪ್ತಿಯಾಗುತ್ತದೆ. ಜೀವನು ತನ್ನ ಹೃದಯದಲ್ಲಿ ಅಂತರ್ಯಾಮಿರೂಪಿಯಾಗಿ ಪರಮಾತ್ಮನು ನೆಲೆಗೊಂಡಿರುವನೆಂದು ಭಾವಿಸಿ, ಯಾವಾಗಲೂ ಶಾಸ್ತ್ರಸಮ್ಮತಗಳಾದ ವಿಧಿನಿಷೇಧಗಳಿಗೆ ಬದ್ಧನಾಗಿ ನಿರ್ಮಲವಾದ ಭಕ್ತಿಯಿಂದ ಆ ಪರಮಾತ್ಮನನ್ನು ಭಜಿಸಿದರೆ, ಆ ಸ್ವಾಮಿಯು ಇಹದಲ್ಲಿ ಸಕಲ ಪುರುಷಾರ್ಥವನ್ನೂ ಪರದಲ್ಲಿ ನೈಜಸುಖಾವಿರ್ಭಾವರೂಪವಾದ ಮುಕ್ತಿಯನ್ನೂ ಕೊಡುತ್ತಾನೆಂದು ದ್ವೈತಸಿದ್ಧಾಂತವು ಉದ್ಘೋಷಿಸುತ್ತದೆ.

ವೇದಶಾಸ್ತ್ರಗಳಿಂದಲೇ ಇಂತಹ ನಿಷ್ಕೃಷ್ಟಾರ್ಥವನ್ನು ಸ್ಥಾಪಿಸುವದಕ್ಕೆ ಪ್ರತ್ಯಕ್ಷ, ಅನುಮಾನ, ಆಗಮಗಳೆಂಬ ಪ್ರಮಾಣಗಳ ಸಹಾಯವು ಬೇಕಾಗುವದೆಂದು ಅಕ್ಷಾದಿತ್ರಿತಯಂ ಎಂಬುವ ತತ್ತ್ವದಿಂದ ಗೊತ್ತಾಗುತ್ತದೆ. ಈ ಮೂರು ಪ್ರಮಾಣಗಳಲ್ಲಿ ಪರಸ್ಪರವಿರೋಧಭಾವದಂತೆ ಸಮಂಜಸವಾದ ಅರ್ಥಗಳನ್ನೂ, ಶಾಸ್ತ್ರಸಮ್ಮತವಾದ ಮೀಮಾಂಸಾನಿಯಮಗಳಿಗನುಗುಣವಾಗಿ ವಿಷಯಗಳನ್ನೂ, ನಿರೂಪಿಸಿರುವದು ಶ್ರೀಮಧ್ವಾಚಾರ್ಯರು ಸ್ಥಾಪಿಸಿದ ದ್ವೈತಸಿದ್ಧಾಂತದ ಮುಖ್ಯವಾದ ಮತ್ತು ಅನಿತರಸಾಧಾರಣವಾದ ಲಕ್ಷಣವಾಗಿರುತ್ತದೆ. ಹೆಚ್ಚು ವಿಷಯಗಳನ್ನು ಆ ಮಹಾಸಿದ್ಧಾಂತದ ಗ್ರಂಥಗಳಿಂದಲೇ ತಿಳಿಯತಕ್ಕದ್ದು.

---

## ಸೀ ಖ ಮ ತ

[ ಅಮೃತಸರದಲ್ಲಿರುವ ಶಿರೋಮಣಿ ಗುರುದ್ವಾರ ಪ್ರಬಂಧಕ ಕಮಿಟಿಯ ಕಾರ್ಯದರ್ಶಿಗಳಾದ ಶ್ರೀ|| ಮೆಹತಾಬಸಿಂಗರವರ ಇಂಗ್ಲೀಷು ಲೇಖನದ ಅನುವಾದ. ಅನುವಾದಕ— ಸು. ]

ಸೀಖಮತವು ಗುರುನಾನಕನಿಂದ ಸ್ಥಾಪಿಸಲ್ಪಟ್ಟಿತು. ಅವನು ೧೪೬೯ನೇ ಇಸ್ವಿಯಲ್ಲಿ ಪಂಜಾಬದಲ್ಲಿ ಹುಟ್ಟಿದನು. ಈ ಮತವು ಅವನ ಶಿಷ್ಯಪರಂಪರೆಯಿಂದ ವೃದ್ಧಿಂಗತವಾಯಿತು. ಕಡೆಯ ಗುರುವಾದ ಗುರುಗೋವಿಂದಸಿಂಗಜೀಯು ಇಸವಿ ೧೭೦೮ರಲ್ಲಿ ಈ ಲೋಕವನ್ನು ಬಿಟ್ಟು ತೆರಳಿದನು.

ಪ್ರತಿಯೊಂದು ಮತದಲ್ಲಿ ಅದರ ಸ್ಥಾಪಕನ ಜೀವನಕ್ರಮಕ್ಕನುಸರಿಸಿ ಒಂದು ವಿಶಿಷ್ಟತರಹದ ಜೀವನಕ್ರಮವು ಕಂಡುಬರುತ್ತದೆ. ಎಷ್ಟೋ ಮತಗಳು ಒಬ್ಬೊಬ್ಬ ವ್ಯಕ್ತಿಯಿಂದ ಸ್ಥಾಪಿಸಲ್ಪಟ್ಟಿವೆ. ಆದರೆ ಸೀಖಮತದಲ್ಲಿ ಇಂಥ ಹತ್ತು ಜನ ಆದರ್ಶಭೂತವಿಭೂತಿಗಳು ಇರುವರು. ಅವರಿಗೆ ಗುರುಗಳೆಂದು ಹೆಸರು. ಅವರ ಅನುಯಾಯಿಗಳಿಗೆ ಸೀಖರೆಂದು ಕರೆಯುತ್ತಾರೆ. ಅವರ ತತ್ತ್ವೋಪದೇಶವು ಬಹಳ ಸುಲಭ. ಸೃಷ್ಟಿ

ಕರ್ತನೂ ಲೋಕದ ತಂದೆಯೂ ಆದ ದೇವರು ಒಬ್ಬನೇ. ಅವನಿಗೆ ಯಾರೂ ಸರಿಯಿಲ್ಲ. “ಜನ್ಮಮರಣಕ್ಕೊಳಗಾದ ಉಳಿದವರನ್ನು ಯಾಕೆ ಪೂಜಿಸಬೇಕು? ಸಮುದ್ರದಲ್ಲಿಯೂ ನೆಲದಲ್ಲಿಯೂ ನೆಲೆಗೊಂಡ ನಾನಕನೆಂಬ ಒಬ್ಬನೇ ದೇವರನ್ನು ಸ್ಮರಿಸಿರಿ” ಎಂದು ಗುರುನಾನಕರು ಹೇಳುತ್ತಾರೆ. ಎಲ್ಲ ಜನರೂ ಬಂಧುಗಳು; ಆದ್ದರಿಂದ ದೇವರ ದೃಷ್ಟಿಯಿಂದಲೂ ಮನುಷ್ಯರ ದೃಷ್ಟಿಯಿಂದಲೂ ಸಮಾನರು. “ದೇವಾಲಯಗಳೂ ಮಸೂದಿಗಳೂ ಒಂದೇ; ಪೂಜೆಯೂ ನಮಾಜೂ ಒಂದೇ. ಭಿನ್ನ ಭಿನ್ನ ಪರಿಸ್ಥಿತಿಗೆ ಒಳಗಾಗಿದ್ದರೂ ಎಲ್ಲ ಜನರೂ ಸರಿಸಮಾನರು.” ಎಂದು ಗುರುಗೋವಿಂದ ಸಿಂಗರು ಹೇಳುತ್ತಾರೆ.

ಹೆಂಗಸರ ವಿಷಯವಾಗಿ ಸಹ ಗುರುನಾನಕರು “ದೊಡ್ಡ ದೊಡ್ಡ ವಿಭೂತಿಗಳಿಗೆ ಜನ್ಮಕೊಟ್ಟಂಥ ಸ್ತ್ರೀಯು ಕೀಳೆಂದು ಯಾಕೆ ಭಾವಿಸುತ್ತೀರಿ?” ಎಂದು ಹೇಳುತ್ತಾರೆ. ದೇವರ ಇಚ್ಛೆಗೆ ಹೊಂದುವಂತೆ (ತಾಳಗೂಡುವಂತೆ) ನಮ್ಮ ಆತ್ಮಗಳನ್ನು ಸರಿಪಡಿಸಿಕೊಳ್ಳುವದರಿಂದ ದೇವರ ಸಾಕ್ಷಾತ್ಕಾರವಾಗುವದು. ದೇವರ ಇಚ್ಛೆಯು ಗುರುವಿನ ತತ್ತ್ವೋಪದೇಶದಲ್ಲಿಯೂ ಆಚರಣೆಯಲ್ಲಿಯೂ ಪ್ರಕಟವಾಗಿರುತ್ತದೆ. ಸೀಖಜನರ ಜೀವನಕ್ರಮದಲ್ಲಿ ಈ ತತ್ತ್ವೋಪದೇಶಗಳಿಗೆ ಮತ್ತು ಆಚರಣೆಗಳಿಗೆ ಬೆಲೆ ಹೆಚ್ಚು. ಸೀಖಮತದಲ್ಲಿ ದೇವರ ಪೂಜೆಯು ಕೂಡ ಪ್ರಾರ್ಥನೆ ಮಾಡುವದೂ ಗುರುವಿನ ಹಾಡುಗಳನ್ನು ಭಕ್ತಿಸ್ಫೂರ್ತಿಗಳಿಂದ ತುಂಬಿದವರಾಗಿ ಓದುವದೂ ಹಾಡುವದೂ ಇವುಗಳಿಂದ ಆಗಿ ಹೋಗುವದು. ಸೀಖರಲ್ಲಿ ಮೂರ್ತಿಪೂಜೆಯಿಲ್ಲ, ಜಾತಿಭೇದವಿಲ್ಲ, ಚೌಕಾ ಪದ್ಧತಿಯಿಲ್ಲ, ಅಸ್ಪೃಶ್ಯತೆಯೂ ಇಲ್ಲ.

ಹತ್ತು ಗುರುಗಳ ಚೈತನ್ಯವೂ ಒಂದೇ ಆಗಿತ್ತೆಂದು ನಂಬಿಗೆಯುಂಟು. ಪಂಥ ಎಂಬ ಹೆಸರಿನ ಇಡೀ ಸಮಾಜದಲ್ಲಿ ಆ ಚೈತನ್ಯವು ವಾಸಮಾಡಿಕೊಂಡಿದೆಯೆಂದು ನಂಬಿಗೆ. ಈ ಪಂಥವು ಗುರುಗ್ರಂಥಸಾಹೇಬ ಎಂಬ ಗುರುಗಳ ಪವಿತ್ರೋಪದೇಶವುಳ್ಳ ಗ್ರಂಥವನ್ನವಲಂಬಿಸಿದಾರಿಯನ್ನು ಕಂಡು ಹಿಡಿದುಕೊಳ್ಳಬೇಕು. ಪಂಥದಲ್ಲಿ ಯಾವಾಗಲೂ ಗುರುವಿನ ಸಾನ್ನಿಧ್ಯವಿರುವದೆಂದು ನಂಬಿಗೆ ಇದ್ದುದರಿಂದಲೆ ಅದು ಗುರುವಿನ

ರ್ತನಸ್ವರೂಪವೆಂದೂ ಆದ್ದರಿಂದ ಪವಿತ್ರವಾದದ್ದೆಂದೂ ತಿಳಿಯಲ್ಪಡು

ಈ ಕಾರಣದಿಂದಲೇ ಸಂಘಟನಾತತ್ತ್ವವು (ಜಾಥೇಬಂದಿ) ಮತದ ಮುಖ್ಯಾಂಶವಾಗಿದೆ. ಸೇವಕರು ಸಂಘಟಿತರೆಂಬ ಗುಂಪಾಗಿ ು ಪೂಜೆಮಾಡುತ್ತಾರೆ. ಪ್ರತಿಸತ್ಯವೂ ಪ್ರಾರ್ಥನೆಮಾಡುವಾಗ ಅವರು ಗುರುಗಳನ್ನೂ ಎಲ್ಲೆಲ್ಲಿಯೋ ಅನೇಕ ಕಡೆಗೆ ಚದರಿ ಹೋದ ಸಂಘ ಂದೊಡಗೂಡಿದ ತಮ್ಮ ಪಂಥವನ್ನೂ ಗುಡಿಗಳನ್ನೂ ತಮ್ಮ ವೀರ ಷರನ್ನೂ ಮತ್ತು ಧರ್ಮಕ್ಕಾಗಿ ದೇಹತ್ಯಾಗ ಮಾಡಿದವರನ್ನೂ ಮನ ನೆನೆಯುತ್ತಾರೆ. ನೆರೆದಿದ್ದ ಪ್ರತಿಯೊಬ್ಬ ಸೇವಕನೂ ಹೀಗೆ ತನ್ನನ್ನು ದ ಒಂದು ಅಂಶವೆಂದು ಭಾವಿಸಿಕೊಳ್ಳುತ್ತಾನೆ. ಎಲ್ಲ ಜನರಿಗೂ ಣವನ್ನು ಬಯಸುವ ನಿತ್ಯಪ್ರಾರ್ಥನೆಯ ಕಡೆಯ ಶಬ್ದಗಳು ಸ್ಮರ ಯವಾಗಿವೆ.

ಈ ಪಂಥವು ಗುರುಪರಂಪರೆಯಿಂದ ಕ್ರಮೇಣ ಬೆಳೆಯಿಸಲ್ಪ . ಕಡೆಗೆ ಇಡೀ ಸಮಾಜವೆಲ್ಲ ಜನತಾರೂಪೀ ಜನಾರ್ದನನ ಸೇವೆ ಲು ಜಾಥಾರೂಪದಿಂದ ಹೊರಬೀಳಲು ಸಿದ್ಧವಾಯಿತು. ಈ ೆ ಅಂದರೆ ಸನ್ ೧೬೯೯ರಲ್ಲಿ ಧರ್ಮವೀರನಾದ ಗುರುಗೋವಿಂದ ನು ಈ ಸಮಾಜದವರಿಗೆ ದೀಕ್ಷಾಕೊಟ್ಟು ಖಾಲಸಾ ಅಥವಾ ಪುನೀ ನವರು ಎಂಬ ಹೆಸರನ್ನಿತ್ತನು. ಇದಕ್ಕೆ ಮುಂಚಿತವಾಗಿ ಹಿಂದುಸ್ಥಾ ಸಾಧುವರ್ತನಕ್ಕೂ ಶೌರ್ಯಕ್ಕೂ ಹೊಂದುವದಿಲ್ಲೆಂದು ತಿಳಿಯ ಪ್ಪದ್ದು ದುರ್ದೈವದ ಮಾತಾಗಿದೆ. ಆದರೆ ಗುರುಗೋವಿಂದಸಿಂಗ ಇವೆರಡೂ ಕೂಡಿಕೊಂಡಿದ್ದವು. ಆವನು ತನ್ನ ಸೇವಕರನ್ನು ವೃತ್ತಿಯವರನ್ನೂ ದೇವಭೀರುಗಳನ್ನೂ ಮಾಡಿದ್ದಲ್ಲದೆ ಶೂರವೀರ ಮಾಡಿದನು. ಆವನು ಅವರಿಗೆ ಬಂಟನ ಧ್ಯೇಯವನ್ನೂ ಪೂರ್ವ ುಷಿಗಳ ರೂಪಶೀಲಗಳನ್ನೂ ತಂದುಕೊಟ್ಟನು. ಅವರು ಒಂದು ಾಗಿ ಸುವ್ಯವಸ್ಥೆಯಿಂದ ಕಾರ್ಯಮಾಡಬೇಕಾದ್ದರಿಂದ ತಾವೆಲ್ಲ ನಿಸುವಂತೆ ಸಮಾನಪೋಷಾಕನ್ನು ಕೊಟ್ಟನು. ಪ್ರತಿಯೊಬ್ಬ ನು ಉದ್ದವಾಗಿ ಕೂದಲುಗಳನ್ನೂ, ಕೇಶಕಂಘಿ ಸಣ್ಣಕತ್ತಿಯನ್ನೂ ಕಬ್ಬಿಣದ ಕಂಕಣವನ್ನೂ ಕಚ್ಛಾ ಎಂಬ ಸಣ್ಣ ಇಜಾರಗಳನ್ನೂ

ಕೂದಲದ ಸಲುವಾಗಿ ಒಂದು ಹಣಿಗೆಯನ್ನೂ ಇಡಬೇಕು. ಎಲ್ಲ ಮಹತ್ವವಾದ ಧಾರ್ಮಿಕವಿಷಯುಗಳನ್ನೂ ಸಭೆಗೂಡಿಸಿ ನಿರ್ಣಯಿಸುವರು. ವಾದಗ್ರಸ್ತವಾದ ವಿಷಯುವನ್ನು ಪಾಂಜಪಿಯಾರರು ಅಂದರೆ ಸಮಾಜನಿಯುಕ್ತಪಂಚರು ನಿರ್ಣಯಿಸುವರು.

ಸೀಖರು ತಮಗೆ ಅತ್ಯಂತಪ್ರಿಯುವಾದಂಥ ಗುರುದ್ವಾರವೆಂಬ ಗುಡಿಗಳಲ್ಲಿ ನೆರೆಯುತ್ತಾರೆ. ತಮ್ಮ ಗುರುಗಳೂ ಸಾಧುಗಳೂ ಧರ್ಮಕ್ಕಾಗಿ ದೇಹತ್ಯಾಗಮಾಡಿದ ಧೀರರೂ ಇವರ ಸ್ಮರಣಾರ್ಥವಾಗಿ ಕಟ್ಟಿದ ಈ ಗುರುದ್ವಾರಗಳು ಅವರ ಪೂಜಾಸ್ಥಾನಗಳಾಗಿರುವವಲ್ಲದೆ ಲೋಕಸೇವೆಯ ಸಾಧನಭೂಮಿಗಳೂ ಆಗಿರುತ್ತವೆ. ಈ ಪ್ರೇಮಸೇವಾಬುದ್ಧಿಯ ಬಾಹ್ಯಚಿಹ್ನವೆಂದು ಗುರೂಕಾಲಂಗಾರವೆಂಬ ಪಾಕಗೃಹವನ್ನು ಏರ್ಪಡಿಸಿ ಜಾತಿವರ್ಣಸಮಾಜಸ್ಥಿತಿಗಳ ಭೇದವಿಲ್ಲದೆ ಎಲ್ಲರೂ ಅಣ್ಣತಮ್ಮಂದಿರಂತೆ ಒಂದೇ ಸಾಲಾಗಿ ಕುಳಿತು ಒಂದೇ ಆಹಾರವನ್ನು ಸೇವಿಸುತ್ತಾರೆ. ದೊಡ್ಡದೊಡ್ಡ ಸೀಖರೂ ಕೂಡ ಗುರುದ್ವಾರಕ್ಕೆ ಬಂದ ಅತಿಥಿಗಳ ಜೋಡಿನ ಧೂಳನ್ನು ಒರೆಸುವದು ಬಹುಮಾನವೆಂದು ತಿಳಿಯುತ್ತಾರೆ.

ಸೀಖಧರ್ಮವು ಪ್ರಜಾರಾತ್ಮಕವಾದದ್ದು. ಯಾರಾದರೂ ಹೆಂಗಸಾಗಲಿ, ಗಂಡಸಾಗಲಿ, ಯಾವದೇ ಪಂಥದವರಾಗಲಿ, ದೇಶದವರಾಗಲಿ, ಈ ಧರ್ಮವನ್ನು ಸ್ವೀಕರಿಸಿ ಉಳಿದವರ ಕೂಡ ಸಮಾನಸ್ಕಂದರಾಗಿರಬಹುದು. ಸೀಖರು ಪರಸ್ಪರ ಭೆಟ್ಟಿಯಾದಾಗ "ವಾಹೀ ಗುರುಜೀಕಾ ಖಾಲಸಾ, ವಾಹಿ ಗುರೂಜೀಕಿ ಫತೇ" "ಖಾಲಸಿಯು ದೇವರದು, ಜಯುವೂ ದೇವರದು," ಎಂದು ಕೂಗಿ ಸಂಬೋಧಿಸುವರು. ಸುಪ್ರಸಿದ್ಧವಾದಂಥ "ಸತ್ ಶ್ರೀ ಅಕಾಲ" ಅಂದರೆ ದೇವರು ಸತ್ಯನೂ, ಮಹಾಮಹಿಮನೂ ಮರಣಾತೀತನೂ ಎಂಬ ಸೀಖರಿಗೆ ಪ್ರಿಯುವಾದಂಥ ಜಯಘೋಷದಲ್ಲಿ ಸಮಾಜದ ಎಲ್ಲ ಚೈತನ್ಯವೂ ಚರಿತ್ರವೂ ಅಡಕವಾಗಿವೆ.

---

## ಆರ್ಯ ಸಮಾಜ.

[ಕೊಲ್ಹಾಪುರದ ರಾಜಾರಾಮ ಕಾಲೇಜಿನ ಪ್ರಿನ್ಸಿಪಾಲರಾದ
ಡಾ. ಬಾಲಕೃಷ್ಣ, ಎಂ. ಎ., ಪಿ. ಎಚ್. ಡಿ.– ಇವರ
ಲೇಖನದ ಅನುವಾದ. ಅನುವಾದಕ–ಸು.]

ಪ್ರಾಚೀನ ಆರ್ಯಧರ್ಮವನ್ನು ಅಥವಾ ವೇದಧರ್ಮವನ್ನು ಅದರ ಅತ್ಯಾವಶ್ಯಕಗಳಾದ ಅಂಶಗಳು ಸಹಿತ ಪುನರುಜ್ಜೀವನಗೊಳಿಸುವದೂ ಅರ್ವಾಚೀನ ಹಿಂದೂಧರ್ಮದಲ್ಲಿ ಸೇರಿದ ಸಾಮಾಜಿಕದೋಷಗಳನ್ನೂ ಧರ್ಮವಿಷಯಕಮೂಢಬುದ್ಧಿಯನ್ನೂ ಅನಾಚಾರಗಳನ್ನೂ ಕಿತ್ತುಹಾಕುವದೂ, ಜಗತ್ತಿನ ರಾಷ್ಟ್ರಗಳಲ್ಲೆಲ್ಲ ವೈದಿಕಭಾಷೆಯನ್ನೂ ವೈದಿಕಧರ್ಮವನ್ನೂ ರಾಜನೀತಿಯನ್ನೂ ಪ್ರಸಾರಮಾಡುವದೂ, ಅರ್ವಾಚೀನ ಹಿಂದೂಧರ್ಮವನ್ನು ಸ್ವಮತಪರಿತ್ಯಾಗ ಮತ್ತು ಜಾಣಗೇಡಿತನಗಳೆಂಬ ದೋಷಗಳು ತಗಲದಂತೆ ಕಾಪಾಡಿ ಸುಸ್ಥಿತಿಯಲ್ಲಿಟ್ಟುಕೊಳ್ಳುವದೂ, ಹಾದಿತಪ್ಪಿದವರನ್ನೂ ದುರ್ಮಾರ್ಗವನ್ನು ಸ್ವೀಕರಿಸಿದವರನ್ನೂ ಶುದ್ಧ ಮಾಡಿ ತಿರುಗಿ ಸ್ವಧರ್ಮಕ್ಕೆ ಸೇರಿಸಿಕೊಳ್ಳುವದೂ, ಇತರ ಸಂಘದ ಜನರನ್ನು ತನ್ನ ವಾತಾವರಣದಲ್ಲಿ ಎಳೆದುಕೊಳ್ಳುವದೂ ಇವೇ ಈ ಸಮಾಜದ ಮುಖ್ಯ ಕಾರ್ಯಭಾಗಗಳು.

ಆರ್ಯಸಮಾಜದ ಮೂಲತತ್ವಗಳು—

(೧) ದೇವರು ಎಲ್ಲ ನಿಜಜ್ಞಾನದ ಆದಿಕಾರಣನೂ ಆ ನಿಜಜ್ಞಾನದಿಂದ ಗೊತ್ತಾಗುವ ಎಲ್ಲ ವಸ್ತುಗಳ ಆದಿಕಾರಣನೂ ಆಗಿರುವನು.

(೨) ದೇವರು ಪೂರ್ಣಸತ್ಯನೂ ಪೂರ್ಣಜ್ಞನನೂ ಪೂರ್ಣಾನಂದನೂ ಅಶರೀರಿಯೂ ಸರ್ವಶಕ್ತಿವಂತನೂ ನ್ಯಾಯಿಯೂ ದಯಾಸಾಗರನೂ ಅಜಾತನೂ ಅನಾದ್ಯನಂತನೂ ಅವಿಕಾರಿಯೂ ಅಪ್ರತಿಮನೂ ಸೃಷ್ಟಿಸ್ಥಿತಿಲಯಕರ್ತನೂ ಸರ್ವವ್ಯಾಪಿಯೂ ಸರ್ವಜ್ಞನೂ ನಾಶರಹಿತನೂ ಅಜರಾಮರನೂ ಭಯಾತೀತನೂ ಶಾಶ್ವತನೂ ಪವಿತ್ರನೂ ವಿಶ್ವದ ಆದಿಕಾರಣನೂ ಆಗಿರುವನು. ಅವನಿಗೇ ಪೂಜೆಯು ಸಲ್ಲತಕ್ಕದ್ದು.

(೩) ವೇದಗಳು ನಿಜಜ್ಞಾನದ ಗ್ರಂಥಗಳು. ಅವುಗಳ ಅಧ್ಯಯನ, ಶ್ರವಣ, ಅಧ್ಯಾಪನ, ಕೀರ್ತನಗಳನ್ನು ಮಾಡುವದು ಪ್ರತಿಯೊಬ್ಬ ಆರ್ಯನ ಆದ್ಯಕರ್ತವ್ಯವಾಗಿದೆ.

(೪) ಸತ್ಯವನ್ನು ಸ್ವೀಕರಿಸಲಿಕ್ಕೂ ಅಸತ್ಯವನ್ನು ತ್ಯಜಿಸಲಿಕ್ಕೂ ಆರ್ಯನು ಯಾವಾಗಲೂ ಸಿದ್ಧನಾಗಿರಬೇಕು.

(೫) ಎಲ್ಲ ಕ್ರಿಯೆಗಳೂ ಪುಣ್ಯಕಾರಕವಾಗಿರಬೇಕು; ಅಂದರೆ ಚನ್ನಾಗಿ ಸತ್ಯಾಸತ್ಯವಿವೇಕಪೂರ್ವಕವಾಗಿ ಮಾಡಲ್ಪಡಬೇಕು.

(೬) ಮನುಷ್ಯಪ್ರಾಣಿಯ ಶಾರೀರಕ, ಆಧ್ಯಾತ್ಮಿಕ ಮತ್ತು ಸಾಮಾಜಿಕಸ್ಥಿತಿಗಳನ್ನು ಸುಧಾರಿಸಿ ಲೋಕೋಪಕಾರವನ್ನು ಮಾಡುವದು ಈ ಸಮಾಜದ ಮುಖ್ಯ ಉದ್ದೇಶ.

(೭) ಎಲ್ಲರನ್ನೂ ಪ್ರೀತಿಯಿಂದಲೂ ನ್ಯಾಯವಾಗಿಯೂ ಅವರವರ ಗುಣಗಳಿಗನುಸರಿಸಿಯೂ ನಡೆಯಿಸಿಕೊಳ್ಳಬೇಕು.

(೮) ಅಜ್ಞಾನವನ್ನು ನಾಶಮಾಡಿ ಜ್ಞಾನವನ್ನು ಪ್ರಸಾರ ಮಾಡತಕ್ಕದ್ದು.

(೯) ಪ್ರತಿಯೊಬ್ಬನೂ ಕೇವಲ ತನ್ನ ಕಲ್ಯಾಣವನ್ನು ಮಾಡಿಕೊಳ್ಳುವದರಿಂದಲೇ ತೃಪ್ತನಾಗದೆ ಪರರಿಗೆ ಕಲ್ಯಾಣ ಮಾಡುವದರಿಂದಲೇ ತನ್ನ ಕಲ್ಯಾಣವಾಗುವದೆಂದು ತಿಳಿದುಕೊಳ್ಳಬೇಕು.

(೧೦) ನಮ್ಮ ಜನಾಂಗದ ಸರ್ವಸಾಮಾನ್ಯ ಸಾಮಾಜಿಕ ಸುವ್ಯವಸ್ಥೆಯನ್ನು ಕಾಯ್ದುಕೊಳ್ಳುವಾಗ ಯಾರೂ ತಮ್ಮ ವ್ಯಕ್ತಿವೈಶಿಷ್ಟ್ಯಗಳನ್ನು ಸಮಾಜದ ಕಲ್ಯಾಣಕ್ಕೆ ವಿರುದ್ಧವಾಗಿ ಮುಂದೆ ತರಬಾರದು. ಸ್ವಂತ ವೈಯಕ್ತಿಕ ಕೆಲಸಗಳಲ್ಲಿ ಮಾತ್ರ ಪ್ರತಿಯೊಬ್ಬನೂ ತನ್ನ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳಬೇಕು.

ಆರ್ಯಸಮಾಜವು ಸುಧಾರಿಸಿದ್ದೂ, ಧರ್ಮದ ಪುನರುಜ್ಜೀವನವನ್ನುಗೊಳಿಸುವದೂ ಪ್ರಜಾಸತ್ತಾತ್ಮಕವೂ ಧರ್ಮಶುದ್ಧಾಭಿಮಾನಿಯೂ ಆಸ್ತಿಕವೂ ಶುದ್ಧವಾಗಿ ಏಕದೇವ ತತ್ವಕ್ಕೆ ಚನ್ನಾಗಿ ಒಲಿದಂಥಾದ್ದೂ ಆಗಿ ಪ್ರತಿಭಟಿಸುವ ಸ್ವಭಾವದ ಧಾರ್ಮಿಕಸಂಸ್ಥೆಯಾಗಿದೆ. ಅನೇಕ ದೇವತ್ವ, ಜಗದೀಶ್ವರಮತ, ಪುರಾಣಕಥೆ, ಮೂರ್ತಿಪೂಜೆ, ಅವತಾರ

ಮತ್ತು ಮೂಢಾಚಾರ ಇವುಗಳನ್ನು ಜೋರಾಗಿ ವಿರೋಧಿಸುತ್ತದೆ; ಅಷ್ಟೇ ಜೋರಿನಿಂದ ಮಂತ್ರ, ತಂತ್ರ, ಮಾಟ, ಪುರೋಹಿತರ ತಂತ್ರೋಪಾಯಗಳು- ಮೊದಲಾದವುಗಳನ್ನೂ ವಿರೋಧಿಸುತ್ತದೆ. ಸರ್ವಜ್ಞನೂ ಸರ್ವಶಕ್ತಿವಂತನೂ ಸರ್ವವ್ಯಾಪಿಯೂ ಸ್ವಯಂಭುವೂ ಅಮರನೂ ಆದ ಶಾಶ್ವತ ತಂದೆಯು ಕೂಡ ಸ್ವತಂತ್ರವಾಗಿ ಬಳಕೆಯನ್ನು ಬೆಳೆಸಬಹುದೆಂದು ಈ ಸಮಾಜವು ಬೋಧಿಸುತ್ತದೆ. ಕಾಲಜ್ಞಾನ, ಧರ್ಮಗುರು, ಆಚಾರ್ಯ, ಪುರೋಹಿತ, ಮೂರ್ತಿ, ಅವತಾರ, ದೇವತಾಪುರುಷ ಮುಂತಾದವರ ಮಧ್ಯಸ್ಥಗಾರಿಕೆಯೂ ಪಾಪಮುಕ್ತನಾಗುವದೂ ಪರಲೋಕದಲ್ಲಿ ಕೈವಲ್ಯವನ್ನು ಪಡೆಯುವದೂ ಬೇಕಾಗಿಲ್ಲ. ನಿರಕ್ಷರಕುಕ್ಷಿಗಳಾಗಿದ್ದರೂ ಆಧ್ಯಾತ್ಮಿಕ ಮತ್ತು ಸಾಮಾಜಿಕ ವಿಷಯಗಳಲ್ಲಿ ಸರ್ವಾಧಿಕಾರಿಗಳೆಂದು ಇದುವರೆಗೆ ಪೂಜಿಸಲ್ಪಡುತ್ತ ಬಂದಂಥ ಭೂದೇವತೆಗಳೆಂದು ಹೇಳಿಸಿಕೊಳ್ಳುವ ಬ್ರಾಹ್ಮಣರ ನಿರಂಕುಶಪ್ರಭುತ್ವದ ಬಂಧನಗಳನ್ನು ಈ ಸಮಾಜವು ಕಡಿದು ಹಾಕಿರುತ್ತದೆ. ಆದ್ದರಿಂದ ಮುಸಲ್ಮಾನರ ಮತ್ತು ಕ್ರಿಶ್ಚನ್ನರ ಶಾಶ್ವತ ನರಕವಾಸದ ತತ್ವವನ್ನೂ ಜೀಸಸ ಕ್ರಿಸ್ತ, ಮಹಮ್ಮದ, ಧರ್ಮಗುರು ಮೊದಲಾದವರು ದೇವರ ಅವತಾರಗಳೆಂಬ ತತ್ವಗಳನ್ನೂ ನಂಬುವದಿಲ್ಲ.

ದೇವರೂ ಸೃಷ್ಟಿಯ ಆದಿಯಲ್ಲಿ ಪ್ರಕಟವಾದ ದೇವರ ವಾಕ್ಯವೂ ಇವೇ ಧರ್ಮಕ್ಕೆ ಶಾಶ್ವತವಾದಂಥ ಸತ್ಯವಾದಂಥ ಪ್ರಮಾಣವು. ಸಕಲ ಸತ್ಯವೂ ಶುದ್ಧತೆಯೂ ಸೌಜನ್ಯವೂ ದೇವರಿಂದ ಹೊರಹೊರಟಿರುವವು. ದೇವಪುರುಷರ ನಡುವೆ ಮಧ್ಯಸ್ಥರಾಗಿ ನಿಲ್ಲುವ ಅಧಿಕಾರವು ಯಾರಿಗೂ ಇಲ್ಲ. ಪ್ರತ್ಯಕ್ಷ ದೇವರಿಂದಲೇ ಸ್ಫೂರ್ತಿಯನ್ನೂ ಜ್ಞಾನವನ್ನೂ ಸಂಪಾದಿಸುವದೂ ದೇವರ ಸಂಗಡ ಪ್ರತ್ಯಕ್ಷ ಸಂಬಂಧವನ್ನು ಬೆಳೆಸುವದೂ ಪ್ರತಿಯೊಬ್ಬ ಮಾನವನ ಅಧಿಕಾರವೂ ಕರ್ತವ್ಯವೂ ಆಗಿರುವದು. ಚತುರ್ವೇದಗಳು ಸತ್ಯಜ್ಞಾನಗಳ ಶಾಶ್ವತವಾದ ಭಾಂಡಾರವು. ಅವು ಶುದ್ಧವಾದವುಗಳು; ಅವುಗಳಲ್ಲಿ ತಪ್ಪೇನಿಲ್ಲ. ಪ್ರತಿಯೊಂದು ಕಾರ್ಯದಲ್ಲಿಯೂ ಶ್ರೇಷ್ಠವೂ ಸ್ವತಂತ್ರವೂ ಆದ ಪ್ರಮಾಣವು ವೇದಗಳೇ. ಮನುಷ್ಯಸೃಷ್ಟಿಯಾದಾಗಲೇ ಹುಟ್ಟಿದ ಅತಿಶಯ ಪುರಾಣ ಗ್ರಂಥಗಳಾದಂಥ ವೇದಗಳೇ ದೇವರ ಪ್ರೇರಣೆಯಿಂದ ಪ್ರಕಟವಾದಂಥ ದೇವವಾಕ್ಯವನ್ನೊಳಗೊಂ

ಡಂಥ ಪ್ರಾಸಾದಿಕ ಗ್ರಂಥಗಳು. ಅವೆಸ್ಟಾ, ಬುದ್ಧಗ್ರಂಥಗಳು, ಬಾಯಿಬಲ, ಕುರಾಣ, ಪುರಾಣ ಮೊದಲಾದವುಗಳು ಅತಿಪ್ರಾಚೀನಗ್ರಂಥಗಳಾದ ವೇದಗಳಿಗಿಂತ ಬಹಳ ಅರ್ವಾಚೀನ ಗ್ರಂಥಗಳಿರುತ್ತವೆ.

ಎಲ್ಲ ಸಾಮಾಜಿಕವಿಷಯಗಳಲ್ಲಿ ಪ್ರಜಾಸತ್ತಾತ್ಮಕತ್ವವನ್ನು ಈ ಸಮಾಜವು ಬೋಧಿಸುತ್ತದೆ. ಎಲ್ಲ ಸ್ತ್ರೀಪುರುಷರಿಗೂ ಸಮಾನತ್ವವನ್ನೂ ಬಂಧುತ್ವವನ್ನೂ ಹೇಳುತ್ತದೆ. ದೇವರ ದೃಷ್ಟಿಗೆ ಅಸ್ಪೃಶ್ಯತೆಯು ತೋರದು. ಆದ್ದರಿಂದ ಈ ಜಗತ್ತಿನೊಳಗಿನ ಯಾವ ಮನುಷ್ಯನಿಗೂ ತನ್ನ ಬಾಂಧವರನ್ನು ನೀಚಸ್ಥಿತಿಯಲ್ಲಿಟ್ಟು ಉದ್ಧಾರಹೊಂದಗೊಡದಿಗಲು ಅಧಿಕಾರವಿಲ್ಲ. ಹಿಂದೂಧರ್ಮವನ್ನು ಬಿಟ್ಟು ಕ್ರಿಶ್ಚನ ಮುಸಲಮಾನ ಧರ್ಮಗಳನ್ನು ಸ್ವೀಕರಿಸಿದಂಥವರನ್ನು ಮರಳಿ ಹಿಂದಕ್ಕೆ ತೆಗೆದಕೊಳ್ಳುವದೂ ಪರಧರ್ಮಸ್ವೀಕಾರವನ್ನು ಪ್ರತೀಕರಿಸುವದೂ ಈ ಸಮಾಜದ ಮುಖ್ಯಕಾರ್ಯಗಳಲ್ಲೊಂದೊಂದಾಗಿವೆ.

---

## ಯಹೋದೀಯ ಧರ್ಮ.

[ ಎಲ್. ಎಲ್. ಡಿ. ಬಿರುದಾಂಕಿತರಾದ ಶ್ರೀಯುತ ಜಾನ್ ಮುರಡಾಕ್‌ರವರು ಇಂಗ್ಲೀಷಿನಲ್ಲಿ ಬರೆದಿರುವ “ ಪ್ರಪಂಚದ ಧರ್ಮಪಂಥಗಳು ” ಎಂಬರ್ಥದ ಗ್ರಂಥದಿಂದ ಆರಿಸಿಕೊಂಡು ಬರೆದ ಅನುವಾದ. ]

ಅನುವಾದಕ— ಸು.

ಜ್ಯೂ ಜನರು ಸಣ್ಣ ಜನಾಂಗವಾದರೂ ಧರ್ಮದ ಮೇಲೆ ಬಹು ದೊಡ್ಡ ಪರಿಣಾಮವನ್ನುಂಟು ಮಾಡಿರುವರು. ಅಬ್ರಾಹಮನು ಇದರ ಸ್ಥಾಪಕನು. ಅವನು ಮೂರ್ತಿಪೂಜಕನು. ಅಬ್ರಾಹಮನ ವಂಶಸ್ಥರು ತಮ್ಮ ಬೇರೆ ಬೇರೆ ದೇವತೆಗಳನ್ನು ಪೂಜಿಸುತ್ತಿದ್ದರು; ಆದರೆ ಮೋಜಿಸ ಎಂಬುವನು ಜಿಹೋವಾಹ ಎಂಬ ದೇವರನ್ನು ತಮ್ಮ ಮುಖ್ಯಾಧಿಪತಿಯೆಂದು ಡಂಗುರ ಹೊಯ್ಸಿದನು; ಮತ್ತು ಸಿನಾಯಿ ಪರ್ವತದಲ್ಲಿ ಗುಡುಗು ಬಿರುಗಾಳಿಗಳ ಮಧ್ಯದಲ್ಲಿ ದೇವರ ಶಬ್ದವು ಪ್ರಕಟವಾಯಿತೆಂದೂ

ಅವನು ತನ್ನ ಜನರನ್ನು ಸುಮಾರ್ಗಕ್ಕೆ ಹಚ್ಚಿ ರಕ್ಷಣೆಮಾಡುವನೆಂದೂ ಹೇಳಿದನು; ಆದರೂ ಕೆಲವು ಜ್ಯೂಜನರು ತಮ್ಮ ದೇವರನ್ನಲ್ಲದೆ ಇತರರ ದೇವತೆಗಳನ್ನೂ ಪೂಜಿಸುತ್ತಿದ್ದರು. ಕ್ರಮೇಣ ಇವರು ಏಕದೇವತತ್ತ್ವವನ್ನು ಅಂಗೀಕರಿಸಿದರು. ಜಗತ್ತಿನೊಳಗಿನ ಎಲ್ಲ ದೇವರಿಗಿಂತಲೂ ಜೆಹೊವಾಹನೇ ದೊಡ್ಡವನೆಂದು ಹೇಳಿ ತೃಪ್ತರಾಗದೆ ಅವನೊಬ್ಬನೇ ದೇವರೆಂದೂ ಉಳಿದ ಜನರ ದೇವತೆಗಳೆಲ್ಲ ಸುಳ್ಳೆಂದೂ ಅವನೇ ಸೃಷ್ಟಿಸ್ಥಿತಿಲಯಕರ್ತನೆಂದೂ ಹೇಳುತ್ತಾರೆ. "ಕಣ್ಣೆತ್ತಿ ಮೇಲಕ್ಕೆ ನೋಡಿರಿ; ಈ ಜಗತ್ತನ್ನೆಲ್ಲ ಸೃಷ್ಟಿಸಿದವರಾರೆಂಬುದನ್ನು ತಿಳಿಯಿರಿ" "ಅನ್ಯದೇವರಿಲ್ಲ; ನಾನೇ ಮೊದಲಿನವನು, ನಾನೇ ಕಡೆಯವನು. ನನ್ನ ಹೊರತು ಅನ್ಯದೇವರಿಲ್ಲ." ಇದು ದೇವರ ಮಾತು. ಕ್ರಮೇಣ ದೇವರ ನೀತಿಯ ವಿಷಯವಾಗಿ ಉಚ್ಚ ವಿಚಾರಗಳು ಪ್ರಸಾರ ಹೊಂದಿದವು. "ಸತ್ಯಪ್ರಿಯನೂ ಅನ್ಯಾಯರಹಿತನೂ ಸರಳಸ್ವಭಾವದವನೂ ಪವಿತ್ರನೂ ಗುಣಾಧಿಪನೂ ಕ್ಷಮಾಶೀಲನೂ ದಯಾಳುವೂ ಕ್ರೋಧರಹಿತನೂ ಪರೋಪಕರುಣಾಶಾಲಿಯೂ ಎಂಬ ವಿಶೇಷಣಗಳನ್ನು ದೇವರಿಗೆ ಹಚ್ಚಲಾಯಿತು. ಮುಂದೆ ಎಝ್ರಾ ಎಂಬವನು ಹೊಸ ಧರ್ಮಗ್ರಂಥವನ್ನು ರಚಿಸಿದನು. ಇದಕ್ಕೆ ಹಳೇ ಒಡಂಬಡಿಕೆಯೆಂದೆನ್ನುತ್ತಾರೆ. ನಿತ್ಯಪ್ರಾರ್ಥನೆಯನ್ನೂ ಹೋಮಹವನಾದಿಗಳನ್ನೂ ಮಾಡಲಿಕ್ಕೆ ಆಚಾರ್ಯರು ನೇಮಿಸಲ್ಪಟ್ಟರು. ಜ್ಯೂ ಜನರು ಪವಿತ್ರರಾಗಿರಲಿಕ್ಕೂ ಉಳಿದ ಜನರಿಂದ ದೂರದಲ್ಲಿರಲಿಕ್ಕೂ ಅಶುದ್ಧವಾದ ವಸ್ತುಗಳನ್ನು ಮುಟ್ಟದಿರಲಿಕ್ಕೂ ಉಪದೇಶವಾಯಿತು. ಅಶುದ್ಧಪ್ರಾಣಿಗಳನ್ನು ತಿನ್ನಬಾರದೆಂದಾಯಿತು. ವಿವಿಧವಾದ ಸ್ನಾನಗಳು ಹೇಳಲ್ಪಟ್ಟವು. ಇತರಜಾತಿಯ ಜನರ ಕೂಡ ಊಟಮಾಡುವದು ಪಾಪವೆಂದು ತಿಳಿಯಲ್ಪಟ್ಟಿತು. ಜೆಹೋವಾಹನ ಅದ್ಭುತಕಾರ್ಯಕ್ಕಾಗಿಯೂ ಅವನ ದಯಾಳುತನಕ್ಕಾಗಿಯೂ ಪ್ರಾರ್ಥನೆಗಳನ್ನು ವ್ರತೋಪವಾಸಗಳನ್ನೂ ಹೇಳಿರುತ್ತಾರೆ. ಹೋಮಹವನಗಳು ಗುಡಿಯಲ್ಲಿ ಪುರೋಹಿತರಿಂದಲೇ ಆಗಬೇಕೆಂದೂ ಕ್ರೈಸ್ತರ ಚರ್ಚ ಬಂಧು ಪೂಜಾಸ್ಥಾನಗಳನ್ನು ದೇವಪಟ್ಟಣದಲ್ಲಿ [illegible] ರನ್ನು ಭಜಿಸುವದಕ್ಕಾಗಿ ರವಿವಾರಕ್ಕೊಮ್ಮೆ ನೆರೆಯಬೇಕೆಂದೂ ಗೊತ್ತಾ

ಯಿತು. ಜೇರೂಸಲೆಮ್ಮವು ಜಗತ್ತಿನ ಧಾರ್ಮಿಕ ರಾಜಧಾನಿಯಾಗಿ ಜ್ಯೂಜನರು ಉಳಿದ ಜನಾಂಗಗಳಿಗೆಲ್ಲಾ ಮೇಲಾಗುವ ಕಾಲವು ಬರುವದೆಂದು ಅವರ ಕಾಲಜ್ಞಾನಿಗಳು ಹೇಳಿದ್ದರು. ಯೋಹೂದೀಯಧರ್ಮವು ಏಕದೇವತ್ವವನ್ನು ಉಪದೇಶಿಸುವದರಿಂದಲೂ ಕ್ರಿಶ್ಚನಧರ್ಮದ ಮಾತೃಸಾನವಾದ್ದರಿಂದಲೂ ಅದಕ್ಕೆ ಮಹತ್ವವು ಬಂದಿದೆ.

---

## ಝೋರೋ ಅಸ್ತರ ಧರ್ಮ ಅಥವಾ ಪಾರ್ಸಿ ಧರ್ಮ.

[ಶ್ರೀ. ಸೋಹರಾಬ ಜೇಮಶೇಡಜಿ ಬುಲ್ಸಾರಾ, ಅಂಧೇರಿ, ಮುಂಬಯಿ -ಇವರ ಇಂಗ್ಲೀಷು ಲೇಖನದ ಅನುವಾದ. ಅನುವಾದಕ—ಸು.]

ಹಿಂದೆ ಒಂದು ಕಾಲಕ್ಕೆ ಪಾರ್ಸಿ ಮತ್ತು ಹಿಂದೂ ಜನರು ಒಂದೇ ಜನಾಂಗವಾಗಿದ್ದರು; ಒಂದೇ ಮನೆಯಲ್ಲಿದ್ದರು; ಒಂದೇ ಭಾಷೆಯನ್ನು ಮಾತಾಡುತ್ತಿದ್ದರು; ಪದ್ಧತಿ, ಆಚಾರ, ವಿಧಿನಿಯಮಗಳು- ಇವುಗಳಲ್ಲಿಯೂ ಒಂದನ್ನೇ ಅನುಸರಿಸುತ್ತಿದ್ದರು; ಒಂದೇ ಧ್ಯೇಯಗಳನ್ನು ಮನ್ನಿಸುತ್ತಿದ್ದರು. ಕೆಲವು ಕಾರಣಕ್ಕಾಗಿ ಈ ಪ್ರಾಚೀನಜನಾಂಗವು ತನ್ನ ಪೂರ್ವದ ಮನೆಯನ್ನು ಬಿಟ್ಟು ಎರಡು ಪಂಗಡಗಳಾಗಿ ಒಂದು ಪಂಗಡವು ಇರಾಣದಲ್ಲಿ ನೆಲೆಗೊಂಡು ಪಾರ್ಸೀ ಜನರ ಮೂಲವಾಯಿತು ಮತ್ತೊಂದು ಪಂಗಡವು ಹಿಂದುಸ್ಥಾನದಲ್ಲಿ ನೆಲೆಗೊಂಡು ಹಿಂದೂ ಜನರಮೂಲವಾಯಿತು. ಹೀಗೆ ಬೇರೆ ಬೇರೆ ಹೊಸ ದೇಶಗಳಲ್ಲಿ ನೆಲೆಗೊಂಡ ಕಾರಣದಿಂದ ಸ್ವಾಭಾವಿಕವಾಗಿ ಈರ್ವರ ಧರ್ಮ ಪದ್ಧತಿಯಲ್ಲಿ ಭೇದಗಳುಂಟಾದವು. ಆದಾಗ್ಯೂ ಅನೇಕ ಸಮಾನಧರ್ಮಗಳೂ ತತ್ವಗಳೂ ಧ್ಯೇಯಗಳೂ ಕಂಡ ಬರುತ್ತವೆ.

ಪಾರ್ಸೀ ಧರ್ಮವು ಮಹಾತ್ಮನೂ ಪವಿತ್ರನೂ ಆದ ಸ್ಪಿತಾಮಾಝೂರಾಥುಷ್ಟ್ರ ಅಥವಾ ಝೋರೋ ಅಸ್ತರನೆಂಬವನಲ್ಲಿ ಉದಯಹೊಂದಿತು. ಅದ್ದರಿಂದ ಪಾರ್ಸಿ ಧರ್ಮದ ನಿಜವಾದ ಹೆಸರು ಝೂರಾಥುಷ್ಟ್ರೀ ಧರ್ಮ ಅಥವಾ ಝೋರೋ ಅಸ್ತರ ಧರ್ಮ. ಈ ಧರ್ಮವು

ಮ ಶ್ರೇಷ್ಠವಸ್ತುವಾದಂಥ ದೇವರನ್ನು ನಂಬುತ್ತದೆ. ಅವನಿಗೆ ಅನೇಕ ಸರುಗಳು. ಈ ಹೆಸರುಗಳೆಲ್ಲ ಅವನ ವೈಯಕ್ತಿಕ ಶಕ್ತಿಸಾಮರ್ಥ್ಯ ನ್ನೂ ಸದ್ಗುಣಗಳನ್ನೂ ಸೂಚಿಸುತ್ತವೆ. ಆದ್ದರಿಂದ ಅವಕ್ಕೆಲ್ಲ ನಿಜ ವೂ ಭಕ್ತನ ದೃಷ್ಟಿಯಿಂದ ಒಂದು ತರಹದ ಮನೋಹರತೆಯೂ ಒಂದಿರು ವೆ. ನಿತ್ಯವೂ ಉಪಯೋಗಿಸುವ ಮುಖ್ಯ ಹೆಸರು 'ಅಹುರಾ ಮಝ್ದಾ ನಾ ಶ್ರೇಷ್ಠಜ್ಞಾನಿ'' ಕಲ್ಯಾಣಕರ್ತಾ, ಪ್ರೇಮಮಯ ಸಾಧುತ್ವ, ಬ್ಬದ್ಧಿ, ಸರ್ವೋತ್ತಮ ಪುಣ್ಯಶಾಲಿತ್ವ, ಮುಂತಾದ ಅರ್ಥವುಳ್ಳ ಇತರ ಸರುಗಳೂ ಉಂಟು. ಆದ್ದರಿಂದ ಝುರೋಸ್ಟರ ಧರ್ಮದವನು ವರನ್ನು ಪೂಜಿಸುವಾಗ ಈ ಧ್ಯೇಯಗಳನ್ನೇ ಪೂಜಿಸಿದಂತಾಗುತ್ತದೆ. ದ್ದರಿಂದ ಮನಃಪೂರ್ವಕವಾಗಿ ಪೂಜಿಸಿ ಸನ್ಮಾರ್ಗವನ್ನವಲಂಬಿಸಿದರೆ ಪ್ಪುವ ಸಂಭವವೇ ಇಲ್ಲ. ಈ ಧ್ಯೇಯಗಳನ್ನು ಮುಂದಿಟ್ಟುಕೊಂಡು ನುಯಾಯಿಯು ಅವುಗಳನ್ನು ಪಡೆಯಲಿಕ್ಕೆ ಯಾತ್ರೆ ಹೊರೆಯುತ್ತಾನೆ; ತನ್ನ ಕ್ಕದ ಯೋಗ್ಯಪರಿಪೂರ್ಣತೆಯನ್ನು ಹೊಂದಲಿಕ್ಕೆ ಯತ್ನಿಸುತ್ತಾನೆ. ಈ ಧನಸಿದ್ಧಿಗಾಗಿ ಅವನು ಕಾಯಾವಾಚಾಮನಸಾ ಶುದ್ಧನಾಗಿರ ಕು.

ಅನುಯಾಯಿಯು ಸತ್ಯಸರಳತೆಗಳಿಂದೊಡಗೂಡಿದ ಜೀವನಕ್ರಮ ದ ಸ್ವಂತ ಆತ್ಮೋನ್ನತಿಯನ್ನು ಮಾಡಿಕೊಳ್ಳುವದಲ್ಲದೆ ಸಕಲಪ್ರಾಣಿ ಮತ್ತು ಸಕಲವಸ್ತುಗಳ ವಿಷಯಕ್ಕೂ ಪರೋಪಕಾರ ಸತ್ಯ ಸದ್ಬು ಪೂರಿತವಾದ ಆಚರಣೆ ಇವುಗಳಿಂದ ಕೂಡ ತನ್ನ ಆತ್ಮೋನ್ನತಿಯನ್ನು ಡಿಕೊಳ್ಳಬೇಕು. ಸಕಲರಿಗೂ ಹಿತವನ್ನು ಬಯಸುವದೂ ಸರ್ವ ೂ ಸರ್ವರ ವಿಷಯವಾಗಿಯೂ ಅಂತಃಕರಣದಿಂದ ಮಾತಾಡುವದೂ ತಿಕ್ಷಣಕ್ಕೂ ಎಲ್ಲೆಲ್ಲಿಯೂ ಎಲ್ಲ ಪರಿಸ್ಥಿತಿಯಲ್ಲಿಯೂ ಸತತೋದ್ಯೋಗ ಶ್ರಮವನ್ನು ಮಾಡಿ ಹಿತವನ್ನು ಮಾಡುವದೂ ಇದೇ ಅನುಯಾ ಯ ಜೀವನಕ್ರಮವು, ಆದ್ದರಿಂದ ಸ್ವಾಭಾವಿಕವಾಗಿ ಅವನು ಎಲ್ಲರಿಗೂ ಹಾಯಕನೂ ದಯಾಳುವೂ ಆಗಿರುವನು

ದೇವರ ವಿಷಯವಾಗಿಯೂ ಜೀವನಕ್ರಮದ ವಿಷಯವಾಗಿಯೂ ಷ್ಟು ಉಚ್ಚಧ್ಯೇಯಗಳಿದ್ದದರಿಂದ ಅನುಯಾಯಿಯು ದೇವರಿಗೆ ಯಾವ

ಕ್ರಮೇಣ ಸಮೀಪಿಸಿದಂತೆ ಅನಂತವಾಗಿ ನಮ್ಮ ಜೀವನವು ಪ್ರಗತಿಯನ್ನು ಹೊಂದುತ್ತಿರಲಿಕ್ಕೆಬೇಕು. ಇದರಿಂದ ಹೆಚ್ಚು ಹೆಚ್ಚು ಉನ್ನತಸ್ಥಿತಿಗೆ ಮುಟ್ಟಲಿಕ್ಕೆ ಸತತಪ್ರಯತ್ನವನ್ನು ಮಾಡಬೇಕೆಂದು ವ್ಯಕ್ತವಾಗುತ್ತದೆ; ಏಕೆಂದರೆ ಆತ್ಮನ ಉತ್ಕೃಷ್ಟತೆಯು ನಿಸ್ಸೀಮವಾಗಿದೆ. ಆದರ ಪ್ರಗತಿಗೂ ಸೀಮೆಯಿಲ್ಲ.

---

## ಇಸ್ಲಾಮೀ ಮತ.

[ಮುಂಬಯಿಯಲ್ಲಿಯ "ಬಾಂಬೆ ಕ್ರಾನಿಕಲ್" ಎಂಬ ಇಂಗ್ಲೀಷು ದೈನಿಕ ಪತ್ರದ ಪೂರ್ವಸಂಪಾದಕರಾದ ಶ್ರೀ. ಮಹಮ್ಮದ ಮಾರ್ಮಡ್ಯೂಕ್ ಪಿಕ್ಥಾಲ್- ಇವರ ಇಂಗ್ಲೀಷು ಲೇಖನದ ಅನುವಾದ ಅನುವಾದಕ-ಸು.]

ಕಲ್ಯಾಣನಿಧಿಯೂ ದಯಾಳುವೂ ಆದ ಅಲ್ಲಾ ಎಂಬ ಒಬ್ಬನೇ ಒಬ್ಬ ದೇವನಿದ್ದಾನೆ. ಬೇಕಾಗಿಯಾಗಲಿ, ಬೇಡಾಗಿಯಾಗಲಿ, ಎಲ್ಲ ಪದಾರ್ಥಗಳೂ ಅವನಿಗೆ ಅಧೀನವಾಗಿರುತ್ತವೆ. ನಂಬುಗೆಯಿಲ್ಲದವರೇ ನಾಸ್ತಿಕರು; ಅವರು ತಮ್ಮ ಆತ್ಮನಾಶವನ್ನು ಮಾಡಿಕೊಂಡು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ದಂಡನೆಗೆ ಪಾತ್ರರಾಗುವರು. ನಂಬುಗೆ ಇದ್ದಂಥವರು ತಮ್ಮ ಮನೋಬುದ್ಧಿಗಳನ್ನು ದೇವರ ಮನೋಬುದ್ಧಿಗಳ ಸ್ವಾಧೀನಕ್ಕೊಪ್ಪಿಸುತ್ತಾರೆ. ಇವರೇ ಮುಸಲ್ಮಾನರು. ಈ ಆತ್ಮನಿವೇದನವೇ ಇಸ್ಲಾಮೀಧರ್ಮದ ಮುಖ್ಯತತ್ತ್ವವು. ದೇವರ ವಿಶ್ವಾಧಿಪತ್ಯವೆಂಬ ತತ್ತ್ವದಿಂದ ಮನುಷ್ಯಪ್ರಾಣಿಯ ಬಂಧುತ್ವವು (ಏಕಕುಟುಂಬತ್ವವು) ಸೂಚಿತವಾಗುತ್ತದೆ. ಬೇರೆ ಬೇರೆ ಕಾಲಗಳಲ್ಲಿ ಪ್ರತಿಯೊಂದು ಜನಾಂಗಕ್ಕೆ ಸತ್ಯಾಸತ್ಯವಿವೇಕವನ್ನು ಕಲಿಸುವದಕ್ಕಾಗಿ ದೇವರು (ಅಲ್ಲಾನು) ದೇವತಾಪುರುಷರನ್ನು ಕಳುಹಿಸುತ್ತಾನೆ. ಈ ಎಲ್ಲ ದೇವತಾಪುರುಷರೂ ಒಂದೇ ತತ್ತ್ವವನ್ನು ಆ ಆ ಕಾಲದ ಜನರ ಬುದ್ಧಿಗೆ ಹಿಡಿಯುವಂಥ ರೂಪದಲ್ಲಿ ಉಪದೇಶಿಸಿದ್ದಾರೆ. ಆದರೆ ಮುಂದೆ ಅನುಯಾಯಿಗಳು ತಮ್ಮ ಸ್ವಾರ್ಥಕ್ಕಾಗಿ ಅದನ್ನು ಕೆಡಿಸಿ ಮೋಸಗಾರಿಕೆಯ

ಮುಸುಕಿನೊಳಗೆ ಅದನ್ನು ಮುಚ್ಚಿಬಿಟ್ಟರು. ಈ ದೇವತಾಪುರುಷರಲ್ಲಿ ಕಡೆಯವನು ಮಹಮ್ಮದನು. (ದೇವರು ಅವನಿಗೆ ಕಲ್ಯಾಣಮಾಡಿ ಸಂರಕ್ಷಿಸಲಿ!) ಇವನೇ ಆ ತತ್ತ್ವವನ್ನು ಪೂರ್ಣಸಿದ್ಧರೂಪದಲ್ಲಿ ಹೇಳಿದನು. ಪೋಸಗಾರಿಕೆಯು (Priestcraft) ನಿಜವಾದ ಧರ್ಮಕ್ಕೆ ತೀರ ವಿರುದ್ಧವಾದದ್ದೆಂದು ಸ್ಪಷ್ಟವಾಗಿ ಜನರಿಗೆ ಎಚ್ಚರಿಕೆ ಕೊಟ್ಟವನು ಇವನೇ.

ಇಸ್ಲಾಮೀಧರ್ಮವು ದೇವರಿಗೂ ಮನುಷ್ಯನಿಗೂ ಇದ್ದ ಪ್ರತ್ಯಕ್ಷ ಸಂಬಂಧವನ್ನು ಬೋಧಿಸುತ್ತದೆ. ಮುಸಲ್ಮಾನನಿಗೆ ಲೌಕಿಕಪೂಜಾರಿ ಅಥವಾ ಪುರೋಹಿತನ ಅವಶ್ಯಕತೆಯಿಲ್ಲ. ಪೌರೋಹಿತ್ಯವೂ ವಿಧಿಹೋಮಗಳೂ ಎಲ್ಲ ತರಹದ ದೇವತಾರಾಧನವಿಧಿಗಳು ಮೋಕ್ಷಕ್ಕೆ ತೀರ ಅನುಪಯುಕ್ತವಾದವುಗಳೆಂದು ಕಿತ್ತುಹಾಕಲ್ಪಟ್ಟವೆ. ಅಲ್ಲಾನಿಗೆ ಆತ್ಮನಿವೇದನಮಾಡುವದರಿಂದಲೇ ಮನುಷ್ಯನು ಮುಕ್ತಿಯನ್ನು ಪಡೆಯುತ್ತಾನೆ. ಈ ಆತ್ಮನಿವೇದನದ ಒರೆಗಲ್ಲು ಅವನ ನಡತೆಯೇ ಹೀಗೆ ನೀತಿಯೇ ನಿಜವಾದ ಧರ್ಮದ ಪ್ರತ್ಯಕ್ಷಪ್ರಮಾಣವು ಸದ್ವರ್ತನವಿಲ್ಲದೆ ಕೇವಲ ಯಾವದಾದರೊಂದು ಮತಾಭಿಪ್ರಾಯವನ್ನು ಸ್ವೀಕರಿಸುವದೂ ಅಥವಾ ಕೆಲವು ವಿಧಿನಿಯಮಗಳನ್ನು ಪಾಲಿಸುವದೂ ದೇವರ ದೃಷ್ಟಿಯಿಂದ ಬೆಲೆಯಿಲ್ಲದವುಗಳು. ತನಗೆ ಕೊಟ್ಟ ಈ ವಚನವು ತನ್ನ ವಂಶಜರಿಗೆಲ್ಲ ಅನ್ವಯಿಸುವದೇನೆಂದು ಸಾಧು ಅಬ್ರಾಹಮನು ಕೇಳಿದಾಗ "ನನ್ನ ವಚನವು ಪಾಪೀಜನರಿಗೆ ಅನ್ವಯಿಸುವದಿಲ್ಲೆಂ"ದು ಅಲ್ಲಾನು ಉತ್ತರವನ್ನಿತ್ತನು (ಕುರಾನಷರೀಫ). ಲೋಕಸೇವೆಯನ್ನು ಮಾಡುವದೂ ದೇವರು ನಮಗೆ ದಯಪಾಲಿಸಿದ ಸಾಧನೆಯ ಶಕ್ತಿವಿಶೇಷಗಳನ್ನು ಪೂರ್ಣಾವಸ್ಥೆಗೆ ತರುವದೂ, ಪಾಪದಿಂದಲೂ ಅಶೌಚದಿಂದಲೂ ದೂರವಾಗಿರುವದೂ, ಅಲ್ಲಾನ ಸಲುವಾಗಿ ಎಂದರೆ ದುರ್ಬಲರೂ ದುಃಖಪೀಡಿತರೂ ಇದ್ದಂಥವರನ್ನು ರಕ್ಷಿಸುವದಕ್ಕಾಗಿ ಯುದ್ಧಮಾಡಲು ಯಾವಾಗಲೂ ಸಿದ್ಧನಾಗಿರುವದೂ ಅನ್ಯಾಯವನ್ನು ನಿವಾರಿಸುವದೂ ಇವೇ ಈಶ್ವರನ ನಿಜವಾದ ಸೇವೆಯ ಸಾಧನೆಗಳು. ಮುಹಮ್ಮದೀಯರು ಪಾಲಿಸತಕ್ಕ ನಿಯಮಗಳೆಲ್ಲ ಜನರ ಕಲ್ಯಾಣಕ್ಕಾಗಿರುತ್ತವೆ. ಅವು ಅಲ್ಲಾನಿಗೇನೂ ಬೇಕಿಲ್ಲ.

"ಸಾಧಕನು ತನ್ನ ಆತ್ಮಕಲ್ಯಾಣಕ್ಕಾಗಿ ಪ್ರಯತ್ನಮಾಡುತ್ತಾನೆ; ಅಲ್ಲಾನಿಗೆ ಈ ಪ್ರಾಣಿಗಳ ಅವಶ್ಯಕತೆಯಿಲ್ಲ"– (ಕುರಾನಷರೀಫ). ಎಲ್ಲ ಇಸ್ಲಾಮಿ ವಿಧಿನಿಯಮಗಳ ಉದ್ದೇಶವು ಈ ಲೋಕದಲ್ಲಿ ದೇವರ ಸಾಮ್ರಾಜ್ಯವನ್ನು ನೆಲೆಗೊಳಿಸುವದಾಗಿರುತ್ತದೆ; ಅನ್ಯಶಬ್ದಗಳಲ್ಲಿ ಅದನ್ನೇ ಹೇಳಬೇಕಾದರೆ, ಯಾವನು ಎಲ್ಲರಿಗೂ ಒಬ್ಬನೇ ದೇವರೊ ಯಾರಲ್ಲಿ ನಾವೆಲ್ಲರೂ ತಿರುಗಿಹೋಗಿ ಕೂಡಿಕೊಳ್ಳುವೆವೋ ಅಂಥ ಅಲ್ಲಾನಿಗೆ ಅಧೀನರಾಗಿ ವಿಶ್ವಬಂಧುತ್ವವನ್ನು ಸ್ಥಾಪಿಸುವದೇ ಮುಖ್ಯ ಉದ್ದೇಶ.

ಆದ್ದರಿಂದ ಮುಸಲ್ಮಾನನಿಗೆ ಜಾತಿಭೇದ, ವಂಶಭೇದ, ವರ್ಣಭೇದ ಇವುಗಳ ತೊಡಕುಗಳಿಲ್ಲ. ಮನುಷ್ಯರೆಲ್ಲರೂ ಅಲ್ಲಾನ ವಿಶ್ವಾಧಿಪತ್ಯವನ್ನು ಒಪ್ಪಿಕೊಂಡಾಗ್ಯೆ ಯಾವ ಮತಭೇದವೂ ಉಳಿಯುವದಿಲ್ಲ. ಮಾದಕ ಪದಾರ್ಥಸೇವನೆಯು ಆತ್ಮನನ್ನು ಅಂದರೆ ಶೀಲವನ್ನು ಕೆಡಿಸುತ್ತದಾದ್ದರಿಂದ ನಿಷೇಧವಾದದ್ದು. ಸಾಹುಕಾರಿಕೆಯೂ (ಬಡ್ಡೀವ್ಯವಹಾರವೂ) ನಿಷೇಧವಾದದ್ದು; ಯಾಕಂದರೆ ಬಾಂಧವನ ಪ್ರತಿಕೂಲಪರಿಸ್ಥಿತಿಯಿಂದ ನಮ್ಮ ಲಾಭವನ್ನು ಪಡೆದುಕೊಳ್ಳುವದು ಪಾಪವು. ಮನುಷ್ಯಸಮಾಜವು ಅಲ್ಲಾನ ಭೂಮಿಯ ಮೇಲಿನ ಜಯಚಿಹ್ನವು. ಎಲ್ಲರೂ ಸರಿಯಾಗಿ ಅವನ ಪ್ರಜೆಗಳು. ಆದ್ದರಿಂದ ಅನ್ಯರಿಗೆ ಅನ್ಯಾಯವನ್ನು ಮಾಡಿದಂಥ ಮನುಷ್ಯರೂ ಅನ್ಯರಾಷ್ಟ್ರಕ್ಕೆ ಕೇಡುಬಗೆದಂಥ ರಾಷ್ಟ್ರವೂ ಅಲ್ಲಾನಿರ್ಮಿತ ಬುದ್ಧಿವಿಹೀನಪ್ರಾಣಿಗಳನ್ನು ಹಿಂಸಿಸುವವನೂ ಭೂಮಿಯಲ್ಲಿ ಬೆಳೆದ ಫಲಗಳನ್ನು ಕಿಡಿಗೇಡಿತನದಿಂದ ನಾಶಿಸುವವನೂ ಈಶ್ವರದ್ರೋಹಿಯಾಗುವನು; ಮತ್ತು ಕಡೆಯ ತೀರ್ಪಿನ ವೇಳೆಯಲ್ಲಿ ಅಲ್ಲಾನಿಂದ ಶಿಕ್ಷೆಯನ್ನು ಹೊಂದುವನು; ಆ ವೇಳೆಗೆ ಎಲ್ಲರೂ ತಾವು ಸ್ವಂತ ಕೈಯಿಂದ ಮಾಡಿದ ಕರ್ಮಗಳ ಫಲವನ್ನು ಭೋಗಿಸುವದಕ್ಕೆ–ಅದು ಚಲೋದಿರಲಿ ಅಥವಾ ಕೆಟ್ಟದೇ ಇರಲಿ–ದೇವರೆದುರಿಗೆ ನೆರೆಯಬೇಕು.

---

# ಕ್ರೈಸ್ತ ಮತ.

[ರೆವರೆಂಡ್ ಸಿ. ಎಫ್. ಆಂಡ್ರೂಜ—ಇವರ ಲೇಖನದ ಅನುವಾದ.
ಅನುವಾದಕ— ಶ್ರೀ ಚನ್ನಪ್ಪ ಉತ್ತಂಗಿ, ಕೆ. ಇ. ಮಿಶನ್ ಧಾರವಾಡ.]

ಕ್ರೈಸ್ತಧರ್ಮವು ಕ್ರೀಸ್ತನು ಅತಿಸುಲಭವಾದ ರೀತಿಯಲ್ಲಿ ಮಾನವರಿಗೆ ಎರೆದುಕೊಟ್ಟ ಎರಡು ಮೂಲತತ್ತ್ವಗಳ ಮೇಲೆ ಆಧಾರಗೊಂಡಿದೆ. ಈ ತತ್ತ್ವದ್ವಯಗಳ ಪೂರ್ಣ ಅವತಾರವೇ ಕ್ರೀಸ್ತನ ಮೂರ್ತಿ ಎಂದು ಹೇಳತಕ್ಕದ್ದು. ಅವು ಯಾವವೆಂದರೆ—

(೧) (ಪ್ರೇಮಸ್ವರೂಪನಾದ) ಪರಮಾತ್ಮನ ಪಿತೃತ್ವ.

(೨) ಮಾನವಭ್ರಾತೃತ್ವ.

ಜಗತ್ತಿನಲ್ಲಿರುವ ಸ್ತ್ರೀಪುರುಷರೆಲ್ಲರೂ ಈ ಉಭಯ ತತ್ತ್ವಗಳಲ್ಲಿ ನಿರ್ದಿಷ್ಟವಾದ ಸತ್ಯಾಂಶಗಳನ್ನಂಪಿ ಅವುಗಳನ್ನು ತಮ್ಮ ಜೀವಿಕೆಯಲ್ಲಿ ಕಾರ್ಯಾರ್ಥವಾಗಿ ಪೂರ್ಣಸಿದ್ಧಿಗೆ ತಂದರೆ ದೇವರ ರಾಜ್ಯವು ಪರಲೋಕದಲ್ಲಿದ್ದಂತೆ ಇಹಲೋಕದಲ್ಲಿಯೂ ಸಾಕ್ಷಾತ್ಕಾರವಾಗುವದೆಂದು ಕ್ರೀಸ್ತನು ಕಂಠೋಕ್ತವಾಗಿ ನುಡಿದನು. ಪರಲೋಕರಾಜ್ಯವು ಭೂಲೋಕದಲ್ಲಿ ಸ್ಥಾಪಿಸಲ್ಪಡುವಂತೆ ಕ್ರೀಸ್ತನು ತನ್ನ ಶಿಷ್ಯಮಂಡಲಿಗೆ ದಿನಾಲು ಪ್ರಾರ್ಥಿಸಬೇಕೆಂದು ಅಜ್ಞಾಪಿಸಿದ್ದಲ್ಲದೆ ಈ ಬಗ್ಗೆ ಆದರ್ಶರೂಪವಾದ ಒಂದು ಬಿನ್ನಹವನ್ನು ಕಳಿಸಿಕೊಟ್ಟನು. ಇದಕ್ಕೆ ಕ್ರೈಸ್ತರು ಕರ್ತನ ಪ್ರಾರ್ಥನೆಯೆಂದು ಕರೆಯುವರು. ಇದರ ಆರಂಭದ ಮಾತುಗಳು ಹೀಗಿವೆ.—

ನಮ್ಮ ತಂದೆಯೇ, ನೀನು ಪರಲೋಕದಲ್ಲಿದ್ದೀ. ನಿನ್ನ ನಾಮವು ನಮ್ಮಲ್ಲಿ ಪರಮಪೂಜ್ಯವಾಗಲಿ. ನಿನ್ನ ರಾಜ್ಯವು ಭೂಲೋಕದ ಮೇಲೆಯೂ ಸ್ಥಾಪಿಸಲ್ಪಡಲಿ, ನಿನ್ನ ಸಂಕಲ್ಪವು ಪರಲೋಕದಲ್ಲಿಯೂ ಸಿದ್ಧಿಗೆ ಬರಲಿ. ಇತ್ಯಾದಿ.

ಇಂಥ ದೇವರ ರಾಜ್ಯವು ಅತಿ ಶೀಘ್ರವಾಗಿ ಬರಲೆಂದು ಪ್ರಾರ್ಥಿಸುವದು ತನ್ನ ಅನುಯಾಯಿಗಳ ಆದ್ಯಕರ್ತವ್ಯವಾಗಿರುತ್ತದೆಂದು ಕ್ರೀಸ್ತನು ಉಪದೇಶ ಮಾಡಿದನು. ಇದಾದ ಬಳಿಕ ಅವರು ತಮ್ಮ ಸ್ವಂತ ಅವಶ್ಯ

ಕತೆಗಳ ದೆಸೆಯಿಂದ ಬೇಡಿಕೊಳ್ಳಬಹುದಾಗಿ “ಇಂದಿನ ಆಹಾರವನ್ನು ಇಂದು ನಮಗೆ ಕೊಡು. ನಮ್ಮ ಪಾಪಕರ್ಮಗಳನ್ನು ಮನ್ನಿಸು. ನಾವೂ ನಮಗೆ ತಪ್ಪುತಡೆ ಮಾಡಿದವರಿಗೆ ಮನ್ನಿಸುತ್ತೇವೆ.” ಎಂಬದಾಗಿ ಸ್ವಾರ್ಥಪರವಿಷಯಗಳನ್ನು ಕುರಿತು ತರುವಾಯ ವಿಜ್ಞಾಪಿಸಲು ಬೋಧಿಸಿದ್ದಾನೆ.

ಈ ಎರಡು ಮೂಲಸೂತ್ರಗಳನ್ನನುಸರಿಸಿ ಇವುಗಳಿಗೆ ಅನುರೂಪವಾದ ಎರಡು ಆಜ್ಞೆಗಳನ್ನು ಕೊಟ್ಟನು.

(೧) ದೇವರನ್ನು ನಿನ್ನ ಪೂರ್ಣಹೃದಯದಿಂದಲೂ, ಮನಸ್ಸಿನಿಂದಲೂ, ಆತ್ಮದಿಂದಲೂ, ಶಕ್ತಿಯಿಂದಲೂ ಪ್ರೀತಿಸತಕ್ಕದ್ದು (ಎಂದರೆ ಪರಮಾತ್ಮನನ್ನು ತನ್ನ ಆತ್ಮಕ್ಕಿಂತಲೂ ಅಧಿಕನೆಂದು ತಿಳಿದು ಅವನನ್ನು ಅತ್ಯಂತವಾಗಿ ಪ್ರೀತಿಸಿ ಅವನಲ್ಲಿಯೇ ತಲ್ಲೀನನಾಗಿರಬೇಕೆಂದರ್ಥ).

(೨) ನಿನ್ನ ನೆರೆಯುವನನ್ನು ನಿನ್ನಂತೆಯೇ ಪ್ರೀತಿಸತಕ್ಕದ್ದು. (ಎಂದರೆ ಯಾವ ಮಾನವಪ್ರಾಣಿಯನ್ನೂ ತನಗಿಂತ ಕಡಿಮೆ ಪ್ರೀತಿಸಲಾಗದೆಂದರ್ಥ).

ನನ್ನ ನೆರೆಯುವನಾರೆಂದು ಕ್ರೀಸ್ತನನ್ನು ಕೇಳಿದ ಪ್ರಶ್ನೆಗೆ “ನಿನ್ನ ಸಹಾಯವು ಅವಶ್ಯವಾಗಿದ್ದ ಪ್ರತಿಯೊಬ್ಬನೂ ನಿನ್ನ ನೆರೆಯುವನೇ” ಎಂದು ಆತನು ಉತ್ತರಕೊಟ್ಟನು. ಇದನ್ನು ಮಾನವಜೀವನದ ಮುಖ್ಯ ಕರ್ತವ್ಯಾಂಶವಾಗಿ ಮುಂದಿನ ಸೂತ್ರದಲ್ಲಿ ಬಹು ಅಂದವಾಗಿ ಅಡಕಗೊಳಿಸಿದ್ದಾನೆ. ಜನರು ನಿಮಗೆ ಹೇಗ ಹೇಗೆ ಮಾಡಬೇಕೆಂದು ಹಾರೈಸುತ್ತೀರೋ ಹಾಗೆಯೇ ನೀವು ಅವರಿಗೆ ಮಾಡುವವರಾಗಿರಿ” ಕ್ರೀಸ್ತನು ಕೊಟ್ಟ ಈ ಅಪ್ಪಣೆಗೆ ಕ್ರೈಸ್ತರು ಸುವರ್ಣಸೂತ್ರವೆಂದೆನ್ನುತ್ತಾರೆ.

ಇದಲ್ಲದೆ ಕ್ರೀಸ್ತನು ಈ ಬಗ್ಗೆ ತನ್ನ ಶಿಷ್ಯರಿಗೆ ಬೋಧಿಸುವದು— ಮಾನವರಲ್ಲಿ ಅತಿ ಕ್ಷುಲ್ಲಕನಾದವನಿಗೆ ಮಾಡಿದ ಸಹಾಯವು ತನಗೆ ಮಾಡಿದಂತಾಯಿತೆಂದು ಹೇಳುವಲ್ಲಿ ಬಡವರೂ ತಿರಸ್ಕರಿಸಲ್ಪಟ್ಟವರೂ ಕೀಳರೂ ಅತಿ ದುಃಖಿಜೀವಿಗಳೂ ತನ್ನ ಸಹೋದರಸಹೋದರಿಗಳೆಂದು ಕ್ರೀಸ್ತನು ಹೇಳಿದಂತಾಯಿತು. ಹೀಗಾಗಿ ಅವನ ಅನುಯಾಯಿಗಳಲ್ಲಿ ಯಾರಾದರೂ ಅವನನ್ನು ಯಥಾರ್ಥವಾಗಿ ಸೇವಿಸಲಪೇಕ್ಷಿಸಿದರೆ ಕ್ರೀಸ್ತನ ಇಂಥ ಸಹೋದರಸಹೋದರಿಗಳಿಗೆ ಕಾರ್ಯರೂಪದಿಂದ

ಕಲ್ಯಾಣವನ್ನು ಮಾಡತಕ್ಕದ್ದು. ಕಡೆಯಲ್ಲಿ ಕ್ರೀಸ್ತನು ಸ್ಪಷ್ಟವಾಗಿಯೂ ಮೇಲಿಂದ ಮೇಲೆಯೂ ಹೇಳಿದ ಮಾತುಗಳೇನೆಂದರೆ– ದೇವರ ಚಿತ್ತವನ್ನನುಸರಿಸಿ ನಡೆಯುವವನು ತನ್ನ ಸ್ನೇಹಿತನೂ ಸಹೋದರನೂ ಎಂದು ಹೇಳುತ್ತಾನೆ. "ಪರಲೋಕದಲ್ಲಿರುವ ನನ್ನ ತಂದೆಯ ಚಿತ್ತವನ್ನು ಮಾಡುವವನೇ ನನ್ನ ಸಹೋದರನೂ ನನ್ನ ತಾಯಿಯೂ ನನ್ನ ಸಹೋದರಿಯೂ ಎಂಬದಾಗಿ ಆತನ ಯಥೋಕ್ತ."

ಮೇಲೆ ಹೇಳಿದ ಈ ಜೀವೋನ್ನತಿಯ ಮೂಲಸೂತ್ರಗಳನ್ನು ಸಂಪೂರ್ಣವಾಗಿ ಸಿದ್ಧಿಗೆ ತರುವದರಲ್ಲಿ ಕ್ರೀಸ್ತನು ತನ್ನ ಜೀವವನ್ನು ಕ್ರೂಜೆಯಲ್ಲಿ (ಪಾಶಿಕಂಬ) ಅರ್ಪಿಸಬೇಕಾಯಿತು. ಆತನ ಮರಣವು ಮಾನವಜಾತಿಯ ಪಾಪಗಳಿಂದಲೇ ಸಂಭವಿಸಿದ್ದು. ಅದು ಪ್ರಾಯಶ್ಚಿತ್ತಾರ್ಥಕವಾದ ಜಗದ್ಯಜ್ಞವೆಂದು ಕ್ರೈಸ್ತರು ನಂಬುತ್ತಾರೆ. ಆತನನ್ನು ಪೂರ್ಣಹೃದಯದಿಂದ ಪ್ರೀತಿಸಿ ಆತನಲ್ಲಿ ಯಥಾರ್ಥ ವಿಶ್ವಾಸವಿಟ್ಟು ನಿಜ ನಂಬಿಕೆಯಿಂದ ಆತನನ್ನು ಅನುಕರಿಸುವ ಪ್ರತಿಯೊಬ್ಬ ಯಥಾರ್ಥ ಶಿಷ್ಯನು ತನ್ನ ಪಾಪಗಳು ಪರಿಹರಿಸಲ್ಪಟ್ಟಂತೆಯೂ ಕ್ರೀಸ್ತನಲ್ಲಿರುವ ಆತ್ಮವು ತನ್ನ ಸ್ವಂತಜೀವಿಕೆಯಲ್ಲಿ ಸಾಕ್ಷಾತ್ಕಾರವಾದಂತೆಯೂ ಅನುಭವಕ್ಕೆ ತಂದುಕೊಡುವನು. ಇದರಿಂದ ಅವನಲ್ಲಿ ಹೊಸ ಜೀವನವೂ ಹೊಸ ಬಲವೂ ಹೊಸ ಶಕ್ತಿಯೂ ಪ್ರಾಪ್ತವಾಗಿ ಲೋಕಸಂಗ್ರಹಾರ್ಥವಾಗಿ ಕಲ್ಯಾಣಕಾರಕವಾದದ್ದನ್ನೇ ಮಾಡಲಿಕ್ಕೆ ಸಮರ್ಥನಾಗುವನು. ಇದಲ್ಲದೆ ಕ್ರೈಸ್ತರು ಕ್ರೀಸ್ತನು ಮರಣಸ್ಥರಾದ ಮಾನವರೊಳಗಿಂದ ಪುನರುತ್ಥಾನವಾಗಿ ಬಂದನೆಂದೂ ಆತ್ಮರೂಪಿಯಾಗಿ ಈ ವರೆಗೂ ಜೀವಿಸುತ್ತಿದ್ದಾನೆಂದೂ ನಂಬುತ್ತಾರೆ. ಇದಲ್ಲದೆ ಆತನು ತನ್ನ ಭಕ್ತರಿಗೆ ಸ್ವತಃ ಸಹಾಯ ಮಾಡುತ್ತ ಇಹಲೋಕದಲ್ಲಿ ಅವರು ಪರಿಪೂರ್ಣಸ್ಥಿತಿಗೆ ಮುಟ್ಟುವದಕ್ಕೆ ಬೇಕಾದ ಬಲವನ್ನೂ ಕೊಡುವನೆಂದು ಅವರ ನಂಬಿಕೆ. ಕ್ರೀಸ್ತನಿಗೂ ಅವನ ಶಿಷ್ಯರಿಗೂ ಇರುವ ವಿಶೇಷತರದ ವ್ಯಕ್ತಿಸಂಬಂಧವೇ ಕ್ರೈಸ್ತಧರ್ಮದ ಮುಖ್ಯ ಸತ್ಯಾಂಶವೆಂದು ಹೇಳಬೇಕು. ಈ ತರದ ಸಂಬಂಧವು ಹಿಂದೂಧರ್ಮದಲ್ಲಿ ಹೇಳಲ್ಪಡುವ ಭಕ್ತಿಮಾರ್ಗಕ್ಕೆ ಸ್ವಲ್ಪ ಹೆಚ್ಚುಕಡಿಮೆಯಾಗಿ ಹೋಲುತ್ತದೆ. ನಿಜ ಕ್ರೈಸ್ತನೊಬ್ಬನು ಕ್ರೀಸ್ತನ ವಿಷಯದಲ್ಲಿ ಮಾಡಬಹು

ದಾದ ಅನುಭವವನ್ನು ಹಿಂದೂಮನುಷ್ಯನಿಗೆ ಸ್ಪಷ್ಟವಾಗಿ ತಿಳಿಸುವದಕ್ಕೆ ಭಕ್ತಿಸಂಬಂಧವಾದ ಕಲ್ಪನೆಯೇ ಹೆಚ್ಚು ಸಹಾಯಕರ ಎಂದು ಹೇಳಬಹುದು.

ಹೀಗಾಗಿ ಕ್ರಿಸ್ತನು ದೇವರ ಪೂರ್ಣ ಅವತಾರವೆಂದೂ ಆತನಲ್ಲಿರುವ ಯಥಾರ್ಥಶ್ರದ್ಧೆಯಿಂದ ದೇವರ ಶಾಶ್ವತ ಜೀವನದ ಹಾಗೂ ಆತನ ಸ್ವರೂಪದ ಜ್ಞಾನಾನುಭವವುಂಟಾಗುವದೆಂದೂ ಕ್ರೈಸ್ತರ ನಂಬಿಗೆ.



